ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-106

ಚೌಂಡರಾಜ ವಿರಚಿತ

# ಅಭಿನವ ದಶಕುಮಾರ ಚರಿತೆ

ಗದ್ಯಾನುವಾದ :
ವಿದ್ವಾನ್ ಜಿ. ಆರ್. ಶ್ರೀನಿವಾಸ ಅಯ್ಯಂಗಾರ್





ಕ ನ್ನ ಡ ಸಾ ಹಿ ತ್ಯ ಪ ರಿ ಷ ತ್ತು
ಚಾಮರಾಜಪೇಟೆ : : ಬೆಂಗಳೂರು-18.
1977

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-106

ಚೌಂಡರಾಜ ವಿರಚಿತ

# ಅಭಿನವ ದಶಕುಮಾರ ಚರಿತೆ

ಗದ್ಯಾನುವಾದ :

ವಿದ್ವಾನ್ ಜಿ. ಆರ್. ಶ್ರೀನಿವಾಸ ಅಯ್ಯಂಗಾರ್







ಕ ನ್ನ ಡ ಸಾ ಹಿ ತ್ಯ ಪ ರಿ ಷ ತ್ತು

ಚಾಮರಾಜಪೇಟೆ : : ಬೆಂಗಳೂರು-18.

1977




# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತೂ ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ, ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಈ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸಗನ್ನಡ ಗದ್ಯಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು; ಆ ಪಟ್ಟಿಯಲ್ಲಿ ಸುಮಾರು ಅರವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23-9-73ನೆಯ ಭಾನುವಾರ ಬೆಳಿಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದಕಾರ್ಯದ ವಿಷಯವನ್ನು

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯ ದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ** : ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿ ನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾದನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಳಾಸ, ಹರಿಹರನ ರಗಳೆ ಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿ ನಾಥಪುರಾಣ, ರಾಜಶೇಖರವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿ ಚರಿತೆ.

**ನಡುಗನ್ನಡ** : ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವ ಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿ ನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರ ವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯವಾಙ್ಮಯದಲ್ಲಿ ಉತ್ತಮವಾದ ಪರಿಣತಿ

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು-ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು, ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದಂ ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕಥೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು, ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿಯ ಅಧ್ಯಕ್ಷರು ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣ ಸಮಿತಿ ಪ್ರಧಾನ್ನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದ ಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನೂ, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನೂ ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅವಕ್ಕೆ

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರಾದ ಡಾ॥ ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಸೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯು ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗು

ತ್ತದೆ. ಅನುವಾದ ಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯಸರ್ಕಾರದ ಮುಂದಿಡಲಾಯಿತು. ರಾಜ್ಯಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು, ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು
ದಿನಾಂಕ : 2–10–76
ಗಾಂಧಿ ಜಯಂತಿ

**ದೇಶಹಳ್ಳಿ ಜಿ. ನಾರಾಯಣ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಬಿನ್ನಹ

ಹಳೆಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದಕ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಬೆಂಗಳೂರಿನ ಅನುವಾದಕ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಟ್ಟಿದ್ದಾರೆ.

ತಾ. 2-12-73 ರಂದು ಬೆಂಗಳೂರು ಅನುವಾದಕ ಮಂಡಲಿಯು ಸಾಹಿತ್ಯ ಪರಿಷತ್ತಿನಲ್ಲಿ ಸಭೆ ಸೇರಿ, ಅನುವಾದದ ವಿಧಾನವನ್ನು ಚರ್ಚಿಸಿತು. ಕೆಲವು ನಿರ್ಣಯಗಳು ಸರ್ವಾನುಮತದಿಂದ ಅಂಗೀಕೃತವಾದವು. ಮಾರ್ಗದರ್ಶಕವಾದ ಈ ನಿರ್ಣಯಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಿದೆ.

1) ಹಲವಾರು ವಿಶೇಷಣಗಳಿರುವ ದೀರ್ಘವಾಕ್ಯವನ್ನು ಒಡೆದು ಚಿಕ್ಕ ವಾಕ್ಯಗಳನ್ನಾಗಿ ಪರಿವರ್ತಿಸಬೇಕು. ಮೊದಲು ವಿಶೇಷ್ಯವಾಕ್ಯವನ್ನು ಬರೆದು ಅನಂತರ ವಿಶೇಷಣ ವಾಕ್ಯಗಳನ್ನು ಬರೆಯುವುದು ಉತ್ತಮ.

2) ಮೂಲ ಗ್ರಂಥದಲ್ಲಿಲ್ಲದ ಯಾವ ವಿಷಯವನ್ನೂ ಹೊಸದಾಗಿ ಸೇರಿಸಬಾರದು. ಅಭಿಪ್ರಾಯದ ಸ್ಪಷ್ಟತೆಯು ಅವಶ್ಯಕವೆನಿಸಿದರೆ ಕಂಸದಲ್ಲಿ ನಿರೂಪಿಸಬೇಕು. ಹೆಚ್ಚಿನ ವಿಷಯವಿದ್ದರೆ ಅಡಿಟಿಪ್ಪಣಿಯಲ್ಲಿ ಬರೆಯಬೇಕು.

3) ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು.

4) ವಿರೋಧಾಭಾಸ, ಪರಿಸಂಖ್ಯಾ ಮುಂತಾದ ಅಲಂಕಾರಗಳಿರುವ ಸಂದರ್ಭದಲ್ಲಿ ಅರ್ಥದ್ವಯವನ್ನು ಅನುವಾದದಲ್ಲಿಯೇ ಬರೆಯಬೇಕು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನುವಾದ ಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದವು. ಹೀಗೆ ಹಂತ ಹಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅವನ್ನು ಪರಿಶೀಲಿಸಿ ಯಥಾಮತಿಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು.

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರಂ) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪ್ರತಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯ ಸಾಧ್ಯವಲ್ಲ ; ಅಪೇಕ್ಷಣೆಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆನೋಡುವುದು ಕಠಿಣವೇ, ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನ ಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತೇನೆ.

ಚೌಂಡರಸನ ಈ ಅಭಿನವದಶಕುಮಾರ ಚರಿತೆ ಅಪೂರ್ಣವಾಗಿದೆ. ೧೪ ನೆಯ ಆಶ್ವಾಸದ ೨೯ ನೆಯ ಪದ್ಯದವರೆಗೆ ಮಾತ್ರ ಉಪಲಬ್ಧವಾಗಿದೆ. ಮುಂದಿನ ಗ್ರಂಥಭಾಗ ದೊರಕಿಲ್ಲ. ಓದುಗರ ಸೌಕರ್ಯಕ್ಕಾಗಿ ಉಳಿದ ಕಥಾಂಶವನ್ನು ಸಂಸ್ಕೃತ ದಶಕುಮಾರ ಚರಿತದಿಂದ ಸಂಗ್ರಹಿಸಿ, ಗ್ರಂಥದ ಕಡೆಯಲ್ಲಿ ಬರೆದಿದ್ದೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನದಿಂದ ಪ್ರೋತ್ಸಾಹಿಸಿದ್ದಾರೆ. ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸ ಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ, ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರಿವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಬೆಂಗಳೂರು
ತಾ|| 8-3-77

ಎನ್. ರಂಗನಾಥಶರ್ಮಾ
ಅಧ್ಯಕ್ಷ
ಬೆಂಗಳೂರು ಅನುವಾದಕ ಮಂಡಲಿ
ಕನ್ನಡ ಸಾಹಿತ್ಯ ಪರಿಷತ್ತು.

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಳನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ' ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ'ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು. ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ, ಅವರಿಂದ ಈ ಅನುವಾದ ಕಾರ್ಯಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ಅಭಿನವ ದಶಕುಮಾರ ಚರಿತೆಯನ್ನು ಉಭಯ ಭಾಷಾ ಪಂಡಿತರಾದ ಶ್ರೀ ಜಿ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಅನುವಾದ ಮಾಡಿಕೊಟ್ಟಿದ್ದಾರೆ. ಇವರು ಬೆಂಗಳೂರಿನ ದೇಶೀಯ ವಿದ್ಯಾಶಾಲೆಯಲ್ಲಿ ಸಂಸ್ಕೃತ ಪಂಡಿತರಾಗಿ ಬಹುಕಾಲ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. 'ಅಪ್ರತಿಮ ವೀರಚರಿತ' ಮೊದಲಾದ ಅಲಂಕಾರ ಶಾಸ್ತ್ರ ಗ್ರಂಥಗಳನ್ನು ಪ್ರಕಟಿಸುವುದರಲ್ಲಿ ತಮ್ಮ ಅಪೂರ್ವ ವಿದ್ವತ್ತನ್ನು ತೋರ್ಪಡಿಸಿದ್ದಾರೆ. ಈ ಕಾವ್ಯವನ್ನು ವಿಶಿಷ್ಟವಾಗಿ ಸಂಸ್ಕೃತದ ಕಾವ್ಯದೊಡನೆ ಅಧ್ಯಯನ ಮಾಡಿ ಕನ್ನಡ ಅನುವಾದ ಮಾಡಿಕೊಟ್ಟಿದ್ದಾರೆ.

ವಿದ್ವಾಂಸರಿಂದ ಆದ ಕಾವ್ಯಾನುವಾದವನ್ನು ನಿಷ್ಣಾತ ಪಂಡಿತರಾದ ಶ್ರೀ ರಂಗನಾಥಶರ್ಮರು ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದಕಾರವನ್ನು ನೆರವೇರಿಸಿಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ', 'ರಾಜಶೇಖರ ವಿಳಾಸ', 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳುವುದು ಕಷ್ಟಕರವಾದುದೇ.

ಇವರ ಅನುವಾದಶೈಲಿಯು ಸರಳವಾಗಿದ್ದು ಜನಸಾಮಾನ್ಯಕ್ಕೆ ಚೌಂಡರಸನ್ನ ದಶಕುಮಾರ ಚರಿತೆಯ ರಸವನ್ನು ಸವಿಯಲು ಸಹಾಯಕವಾಗಿದೆಯೆಂದೂ ನಂಬಿದ್ದೇನೆ.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮಾ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ಬೆಂಗಳೂರು
2–10–76

**ರಂ. ಶ್ರೀ. ಮುಗಳಿ**
ಪ್ರಧಾನ ಸಂಪಾದಕ

# ವಿಷಯ ಸೂಚಿ

# ಉಪೋದ್ಘಾತ

ಪಳಗನ್ನಡ ಸಾಹಿತ್ಯವು ಸು ಕ್ರಿ. ಶ. ಒಂಭತ್ತನೆಯ ಶತಮಾನದಿಂದ ವಿಸ್ತಾರವಾಗಿ ಬೆಳೆದುಬಂದಿದೆ. ಪಂಪ, ರನ್ನ, ಪೊನ್ನ, ಜನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಷಡಕ್ಷರಿ, ತಿರುಮಲಾರ್ಯ, ಚಿಕ್ಕುಪಾಧ್ಯಾಯ ಮತ್ತು ಆಧುನಿಕನಾದ ಮುದ್ದಣನವರೆಗೆ ಹಲವಾರು ಮಹಾಕವಿಗಳು ಕನ್ನಡ ಸಾರಸ್ವತದೇವಿಯನ್ನು ತಮ್ಮ ಉಜ್ಜ್ವಲವಾದ ಕಾವ್ಯಾಭರಣಗಳಿಂದ ಅಲಂಕರಿಸಿ ಬೆಳಗಿದ್ದಾರೆ. ಈ ಕವಿ ಪರಂಪರೆಯಲ್ಲಿ ಚೌಂಡರಸನೂ ಒಬ್ಬ ಮಹಾಕವಿ. ಇವನು :

> ಮೊದಲೊಳ್ ದಂಡಿಕವೀಶ್ವರಂ ದಶಕುಮಾರಾಖ್ಯಾತ ಚಾರಿತ್ರಮಂ ।
> ಪದೆಪಿಂ ಸಂಸ್ಕೃತ ಭಾಷೆಯಿಂ ರಚಿಸಿದಂ ಧಾತ್ರೀಜನ ಸ್ತೋತ್ರ ಸ ॥
> ಮ್ಮದವಪ್ಪಂತದನಾಂ ಪ್ರಸಿದ್ಧಿಯುವತಾರಾಕಾರಮಂ ತಾಳ್ದಿ ಸ ।
> ದ್ವಿದಿತಂ ರಂಗದೊಳಾಡಿ ತೋರ್ಪ ತೆಱದಿಂ ಪೇೞ್ವೆಂ ಸುಕರ್ಣಾಟದಿಂ॥ ೧-೧೭

ಎಂದು ದಂಡಿಕವೀಶ್ವರನನ್ನು ಶ್ರದ್ಧೆಯಿಂದ ಸ್ಮರಿಸಿದ್ದಾನೆ. ಹೀಗೆ ಕವಿಯ ಪರಮಾದರಕ್ಕೆ ಪಾತ್ರನಾದ ದಂಡಿಕವಿಯು ಸಂಸ್ಕೃತ ಸಾಹಿತ್ಯದಲ್ಲಿ ಒಂದು ಪ್ರಮುಖವಾದ ಸ್ಥಾನವನ್ನು ಪಡೆದಿದ್ದಾನೆ. ಸಂಸ್ಕೃತದಲ್ಲಿ ಗದ್ಯ ಸಾಹಿತ್ಯವು ವಿಸ್ತಾರವಾಗಿ ಬೆಳೆದಿಲ್ಲ. ಗ್ರಂಥಗಳನ್ನೂ ಕವಿಗಳನ್ನೂ ಬೆರಳಲ್ಲಿ ಎಣಿಸಬಹುದು. ದಂಡಿ, ಬಾಣ, ಸುಬಂಧು, ಇವರೆಲ್ಲರೂ ಸುಪ್ರಸಿದ್ಧರೇ. ಇವರಲ್ಲಿ ದಂಡಿಯೇ ಮೊದಲಿನವನು. ಒಂದು ಸಲ ಶ್ರೇಷ್ಠಕವಿ ಯಾರೆಂದು, ಜಿಜ್ಞಾಸೆಯುಂಟಾಗಲು ಸರಸ್ವತಿಯು 'ಕವಿರ್ದಂಡಿಃ ಕವಿರ್ದಂಡಿಃ ಕವಿರ್ದಂಡಿಃ ನ ಸಂಶಯಃ' ಎಂದು ಘೋಷಿಸಿದಳು ಎಂದು ಒಂದು ಕಥೆಯಿದೆ. ಅದೇನೂ ಸುಳ್ಳಲ್ಲ. ಇವನು ಲಲಿತವಾದ ಪದಗಳಿಂದ ಕಾವ್ಯವನ್ನು ಬರೆಯುವುದರಲ್ಲಿ ಜಾಣನು. 'ದಂಡಿನಃ ಪದಲಾಲಿತ್ಯಂ' ಎಂದೇ ಪ್ರಸಿದ್ಧಿಯಿದೆ. ಈ ಕವಿಯು ಕ್ರಿ. ಶ. ೬ನೆಯ ಶತಮಾನದಲ್ಲಿದ್ದನೆಂದು ವಿಮರ್ಶಕರ ಅಭಿಪ್ರಾಯ. ಇವನು ಕಾವ್ಯಾದರ್ಶ, ದಶಕುಮಾರ ಚರಿತೆ, ಅವಂತಿ ಸುಂದರೀ ಕಥಾ ಎಂಬ ಮೂರು ಗ್ರಂಥಗಳನ್ನು ಬರೆದಿದ್ದಾನೆ. ಪ್ರಕೃತ ಚೌಂಡರಾಜನು ದಂಡಿಯ ಸಂಸ್ಕೃತ ದಶಕುಮಾರ ಚರಿತೆಯನ್ನು ಕನ್ನಡದಲ್ಲಿ ಅನುವದಿಸಿದ್ದಾನೆ. ಕನ್ನಡ ಗ್ರಂಥವು ಸಂಸ್ಕೃತ ಗ್ರಂಥದಷ್ಟೇ ಪ್ರೌಢವೂ ಸುಂದರವೂ ಆಗಿದೆ.

ಚೌಂಡರಾಜ : ಇವನನ್ನು ಚೌಂಡರಸನೆಂದೂ ಕರೆಯುವುದುಂಟು. ಗ್ರಂಥದ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿಯೂ 'ಚೌಂಡರಾಜ ವಿರಚಿತಮಪ್ಪ' ಎಂದು ಹೇಳಿದೆ. ರಾಜ ಅರಸ ಎರಡೂ ಸಮಾನಾರ್ಥಕಗಳಾಗಿರುವುದರಿಂದ ಚೌಂಡರಸನೆಂದೂ

ಬಳಕೆಗೆ ಬಂದಿರಬಹುದು. ಈತನು ಭಾರದ್ವಾಜ ಗೋತ್ರದ ಬ್ರಾಹ್ಮಣ. ತಂದೆ ಮಧುಸೂದನ. ತಾಯಿ ಮಲ್ಲವ್ವೆ. ಹೆಂಡತಿ ಲಕ್ಷ್ಮಿ. ಅಣ್ಣ ಸರಸಕವೀಶ್ವರ. ಈ ಹೆಸರು ಇಟ್ಟ ಹೆಸರೋ ಕವಿಯಾಗಿದ್ದು ಬಂದ ಹೆಸರೋ ತಿಳಿಯಲು ಸಾಧ್ಯವಿಲ್ಲ. 'ಉದ್ದಂಡ ಮನೋಹರ ಪ್ರಚುರ ಶಿಷ್ಯಂ' ಎಂದು ಹೇಳಿಕೊಂಡಿರುವುದರಿಂದ ಇವನ ಗುರು ಮನೋಹರ. ಉದ್ದಂಡ ಶಬ್ದವು ಶ್ರೇಷ್ಠ ವಾಚಕವಾದ ವಿಶೇಷಣವಾಗಿರಬಹುದು. ಅಥವಾ ಗುರುವಿನ ಹೆಸರೇ ಉದ್ದಂಡ ಮನೋಹರ ಎಂದಿದ್ದರೂ ಇರಬಹುದು.

**ಸಕಲಾಂತರ್ಯಾಮಿ ಜೀವಪ್ರಕರ ವಿವಿಧ ಚೈತನ್ಯ ರೂಪಂ ಜಗದ್ವ್ಯಾ**
**ಪಕಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವ ಸಂಬಂಧದಿಂ ಕೌ**
**ತುಕದಿಂದಾವಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ**
**ತ್ರಕಥಾವಿಸ್ತಾರಮಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್** ೧-೧೬

ಎಂಬ ಪದ್ಯದಲ್ಲಿ ಕವಿಯು ತನ್ನ ವಿಷ್ಣು ಭಕ್ತಿಯನ್ನು ಸಂಶಯಕ್ಕೆಡೆಯಿಲ್ಲದಂತೆ ಹೇಳಿದ್ದಾನೆ. ಪ್ರಥಮಾಶ್ವಾಸದ ಪದಿನಾಲ್ಕನೆಯ ಪದ್ಯದಲ್ಲಿ 'ಹರಿಪಾದ ಶೋಣ ಪಂಕರುಹ ಮಧುವ್ರತಂ' ಎಂದು ಹೇಳಿ ತನ್ನ ಹರಿಭಕ್ತಿಯನ್ನು ಪ್ರದರ್ಶಿಸಿದ್ದಾನೆ. ಇದರಿಂದ ಇವನು ವಿಷ್ಣುಭಕ್ತನೆಂಬುವುದರಲ್ಲಿ ಸಂಶಯವಿಲ್ಲ. ಆದರೆ ಗ್ರಂಥಾರಂಭದಲ್ಲಿ ಸರಸ್ವತಿ, ಲಕ್ಷ್ಮಿ, ಶಿವ, ಗಣೇಶ, ಚಂಡಿ ಈ ಎಲ್ಲ ದೇವತೆಗಳಿಗೂ ಕವಿಯು ಗೌರವವನ್ನು ಸಲ್ಲಿಸಿದ್ದಾನೆ. ಎಲ್ಲಕ್ಕಿಂತ ಹೆಚ್ಚಾಗಿ ಇವನು ವಿಟ್ಠಲನ ಭಕ್ತ. ಗ್ರಂಥಾರಂಭದ ಮಂಗಳವೇ ವಿಟ್ಠಲನ ಸ್ತುತಿ. 'ಪಂಡರೀರಾಯನಭಂಗ ವಿಟ್ಠಲನಲಂಪಿನೊಳೀಗೆಮಗಿಷ್ಟಸಿದ್ಧಿಯಂ' ಎಂದು ಪ್ರಾರ್ಥಿಸುತ್ತಾನೆ. ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿಯೂ, 'ಶ್ರೀಮದಭಂಗ ವಿಟ್ಠಲ ಪದಾಂಭೋಜ ಮತ್ತ ಮಧುಕರ' ಎಂದು ತನ್ನ ಹೆಸರಿನ ಹಿಂದೆ ಒಂದು ವಿಶೇಷಣವನ್ನು ಜೋಡಿಸಿದ್ದಾನೆ. ಆಶ್ವಾಸಗಳ ಆದ್ಯಂತಗಳಲ್ಲಿ ವಿಟ್ಠಲನ ನಾಮವನ್ನು ಸೇರಿಸಿದ್ದಾನೆ. ಹದಿನಾಲ್ಕನೆಯ ಆಶ್ವಾಸದಲ್ಲಿ ಕಥಾನಾಯಕನಾದ ವಿಶ್ರುತನನ್ನು ಪ್ರಸಕ್ತಿಯಿಲ್ಲದಿದ್ದರೂ ಪಂಡರಿಪುರಕ್ಕೆ ಕರೆತರುತ್ತಾನೆ. ಅವನನ್ನು ನಿಮಿತ್ತ ಮಾಡಿಕೊಂಡು ತನ್ನ ಇಷ್ಟ ದೇವತೆಯಾದ ವಿಟ್ಠಲನನ್ನು ಒಂದು ಪದ್ಧತಿಯಲ್ಲಿಯೂ ಅಷ್ಟಕದಲ್ಲಿಯೂ ಭಕ್ತಿ ವಿಹ್ವಲನಾಗಿ ರೋಮಾಂಚಿತನಾಗಿ ಮನಸಾರೆ ಹಾಡಿ ಹೊಗಳಿದ್ದಾನೆ. ಇದರಿಂದ ಇವನು ಪಂಡರಿ ವಿಟ್ಠಲನ ಪರಮ ಭಕ್ತನೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಪ್ರಾಯಶಃ ಕವಿಯು ಪಂಡರೀಪುರದವನಾಗಿರಬಹುದು ಅಥವಾ ಅಲ್ಲಿ ಕೆಲವು ಕಾಲ ನೆಲಸಿದ್ದಿರಬೇಕೆಂದು ಊಹಿಸಬಹುದು.

ಇವನ ಕಾಲವನ್ನು ನಿರ್ಧರಿಸಲು ಸಾಕಷ್ಟು ಹೊರಗಿನ ಆಧಾರಗಳಿಲ್ಲ. ಆದರೆ ಗ್ರಂಥದಲ್ಲಿನ ಕೆಲವು ಆಧಾರಗಳನ್ನು ಬಳಸಬಹುದು. ಪೂರ್ವ ಕವಿಗಳಾದ ಪಂಪ, ಪೊನ್ನ, ಚಂದ್ರ, ರುದ್ರಭಟ್ಟ ಇವರನ್ನು ಸ್ತುತಿಸಿದ್ದಾನೆ. ಆದುದರಿಂದ ಇವರಲ್ಲಿ

ಅತ್ಯಾಧುನಿಕನಾದ ರುದ್ರಭಟ್ಟನಿಗಿಂತ ಈಚಿನವನು ಅಂದರೆ ಕ್ರಿ. ಶ. ಹನ್ನೆರಡನೆಯ ಶತಮಾನದ ನಂತರದವನು ಅಂದರೆ ಹದಿಮೂರನೆಯ ಶತಮಾನದವನು. ಇದು ಕವಿ ಚರಿತೆಕಾರರ ಮತ.

'ಪಂಡರೀರಾಯನಭಂಗವಿಟ್ಠಲಂ' ಇಲ್ಲಿ ಅಭಂಗವೆಂಬ ಪದ ಮರಾಠಿಯಲ್ಲಿ ಪದ್ಯದ ಒಂದು ಧಾಟಿಗೆ ಹೆಸರು. 'ಅಭಂಗಗಳಿಂದ ಸ್ತುತನಾದ ವಿಟ್ಠಲ' ಎಂದು ಅರ್ಥ ಮಾಡಿದರೆ ಆ ಧಾಟಿಯು ಪ್ರಚಾರಕ್ಕೆ ಬಂದ ಹದಿಮೂರನೆಯ ಶತಮಾನದಲ್ಲಿಯೇ ಚೌಂಡರಾಜನಿದ್ದಿರಬೇಕು. ಎಂಟನೆಯ ಆಶ್ವಾಸದ ೫೫ನೇ ಪದ್ಯದಲ್ಲಿ ಸಿಂಹಣ ದೊರೆಯ ಉಲ್ಲೇಖವೂ ಇದಕ್ಕೇ ಪೋಷಕವಾಗಿದೆ ಎಂದು ಶ್ರೀ ಮುಗಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಇಬ್ಬರ ಮತಗಳಲ್ಲಿ ಅಂಥ ವ್ಯತ್ಯಾಸವೇನೂ ಇಲ್ಲ. ಅಭಂಗ ಶಬ್ದಕ್ಕೆ ಶೂರನೆಂದೂ, ಭಕ್ತ ರಕ್ಷಣೆಯಲ್ಲಿ ತಪ್ಪದವನೆಂದೂ ಅರ್ಥ ಮಾಡಬಹುದು.

ರುದ್ರಭಟ್ಟನು ವಿಷ್ಣುಪುರಾಣವನ್ನು ಕನ್ನಡಿಸಿದನು. ಇದು ಧಾರ್ಮಿಕ ವಿಷಯ. ನಾಗವರ್ಮನು ಕಾದಂಬರಿಯನ್ನು ಕನ್ನಡದಲ್ಲಿ ಬರೆದನು. ಇದು ಕಾಲ್ಪನಿಕ ಕಥೆ. ದುರ್ಗಸಿಂಹನು ಪಂಚತಂತ್ರವನ್ನು ಬರೆದನು. ಇದು ನೀತಿಶಾಸ್ತ್ರ. ಹಾಗೆಯೇ ಚೌಂಡರಾಜನು ದಶಕುಮಾರ ಚರಿತೆಯ ಲೌಕಿಕಚಿತ್ರಕಥಾವಿಸ್ತಾರವನ್ನು ಮೇಲಿನ ಕವಿಗಳಂತೆ ಚಂಪೂ ಶೈಲಿಯಲ್ಲಿ ಬರೆದನು. ವಿಟ್ಠಲ ಭಕ್ತನಾದ ಇವನಿಗೆ ಇದರಲ್ಲಿ ಬರುವ ಜಾರ ಚೋರರ ಸಾಹಸ ವೃತ್ತಾಂತಗಳನ್ನು ಬರೆಯಲು ಹೇಗೆ ಮನಸ್ಸುಬಂದಿತು ? ಇದಕ್ಕೆ 'ಸಕಲಾಂತರ್ಯಾಮಿ . . . . . . . . . ಕೌತುಕದಿಂದಾವುದಂ ಬಣ್ಣಿಸಿದೊಡದು ಹರಿ ಸ್ತೋತ್ರಮೆಂದೀಗಳೀ ಚಿತ್ರಕಥಾವಿಸ್ತಾರಮಂ ಬಣ್ಣಿಸಲೊಡರಿಸಿದೆಂ' ಎಂದು ಕವಿಯೇ ಉತ್ತರ ಕೊಟ್ಟಿದ್ದಾನೆ. ಕಾವ್ಯವು ನವರಸಗಳಿಂದ ತುಂಬಿದೆ. ಪ್ರೌಢವಾಗಿದ್ದರೂ ಸರಳವಾಗಿದೆ. ವರ್ಣನೆಗಳು ಮನೋಹರವಾಗಿವೆ. ಇದಲ್ಲದೆ ಇವನು ನಳಚರಿತ್ರೆ, ಬಾಣಾಸುರವಿಜಯ ಎಂಬ ಮತ್ತೆರಡು ಗ್ರಂಥಗಳನ್ನು ಬರೆದಿದ್ದಾನೆ. 'ಬಾಣಾಸುರವಿಜಯಂ ಕ। ಲ್ಯಾಣನಳಖ್ಯಾತಿದಶಕುಮಾರಚರಿತ್ರಂ । ಕ್ಷೋಣೀಜನ ಕರ್ಣಮನಃ । ಪ್ರೀಣನಮಿವು ಚೌಂಡರಾಜ ವಿರಚಿತ ಕೃತಿಗಳ್' ಎಂದು ಇವನ ನಳಚರಿತ್ರೆಯಲ್ಲಿ ಹೇಳಿದೆ.

ಅಭಿನವ ದಶಕುಮಾರ ಚರಿತೆಯಲ್ಲಿ ೧೪ ಆಶ್ವಾಸಗಳಿವೆ. ಹದಿನಾಲ್ಕನೆಯದು ಅಪೂರ್ಣ. ಹದಿಮೂರನೆಯ ಆಶ್ವಾಸವನ್ನು ಮೂಲದಲ್ಲಿರುವಂತೆಯೇ ಸಂಕ್ಷೇಪವಾಗಿ ಬರೆದಿದ್ದಾನೆ. ಇದು ಇವನ ಸಾಮರ್ಥ್ಯವನ್ನು ಸೂಚಿಸುತ್ತದೆ. ಏಳನೆಯ ಆಶ್ವಾಸದವರೆಗೂ ಮೂಲ ಗ್ರಂಥದ ಪೂರ್ವ ಪೀಠಿಕೆಯ ಕಥೆ ಬಂದಿದೆ. ಮುಂದಿನ ಕಥೆಯು ಏಳರಿಂದಲೇ ಪ್ರಾರಂಭವಾಗಿದೆ. ಪೂರ್ವಭಾಗದಲ್ಲಿ ದಶಕುಮಾರರ ಜನನ, ಸಮಾಗಮ ವೃತ್ತಾಂತಗಳು ಬಂದಿವೆ. ಉತ್ತರ ಭಾಗದಲ್ಲಿ ಆ ಹತ್ತುಜನ ಕುಮಾರರ ಕೌತುಕಸಾಹಸ ವೃತ್ತಾಂತಗಳು ವರ್ಣಿತವಾಗಿವೆ. ಎಲ್ಲವೂ ಸ್ವಾರಸ್ಯವಾದ ಕಲ್ಪಿತಕತೆಗಳು,

ಇದು ಮೂಲದ ತದ್ರೂಪಭಾಷಾಂತರವಲ್ಲ. ಕಥೆಯನ್ನು ಮಾತ್ರ ಅನುಸರಿಸಲಾಗಿದೆ. ಉಳಿದ ಭಾಗವೆಲ್ಲ ಸ್ವತಂತ್ರ ಕಲ್ಪನೆಗಳು. ಅಲ್ಲಲ್ಲಿ ಇಷ್ಟಬಂದಂತೆ ಬದಲಾವಣೆಯನ್ನು ಮಾಡಿದ್ದಾನೆ. ಓದುವವರಿಗೆ ಅನುವಾದವೆಂಬ ಭಾವನೆಬರುವುದಿಲ್ಲ.

ಹದಿನಾಲ್ಕನೆಯ ಆಶ್ವಾಸದ ಪಂಡರಪುರದ ವರ್ಣನೆ, ವಿಟ್ಠಲನಸ್ತೋತ್ರ ಇವು ಕವಿಯ ಸ್ವತಂತ್ರ ಕಲ್ಪನೆ, ಸಂಸ್ಕೃತ ಮೂಲದಲ್ಲಿಲ್ಲ. ಅಲ್ಲಿಯೇ ಕತೆಯಲ್ಲಿ ಒಂದು ಸಣ್ಣ ಬದಲಾವಣೆಯನ್ನು ಮಾಡಿದ್ದಾನೆ. ಅನಂತವರ್ಮನು ದುರ್ವ್ಯಸನಿಯಾಗಿದ್ದನು. ಅವನಿಗೆ ಸುರಕ್ಷಿತನು ಬುದ್ಧಿ ಹೇಳಿದನು ಎಂದು ಬರೆದಿದ್ದಾನೆ. ಮೂಲ ಸಂಸ್ಕೃತದಲ್ಲಿ 'ಅನಂತವರ್ಮನು ಸರ್ವಸದ್ಗುಣಗಳಿಂದ ತುಂಬಿದ್ದನು. ಆದರೆ ಅವನಿಗೆ ರಾಜ ನೀತಿಯಲ್ಲಿ ಆಸಕ್ತಿಯಿರಲಿಲ್ಲ. ಕಲೆಗಳಲ್ಲಿ ಅನುರಕ್ತನಾಗಿದ್ದನು. ಆಗ ವೃದ್ಧನಾದ ವಸುರಕ್ಷಿತನು ಅವನಿಗೆ ರಾಜನೀತಿಯನ್ನು ಉಪದೇಶಮಾಡಿದನು ಎಂದಿದೆ. ಆ ಆಶ್ವಾಸವೆಲ್ಲವೂ ಕೇವಲ ರಾಜನೀತಿಯಿಂದಲೇ ತುಂಬಿದೆ. ಆದುದರಿಂದಲೇ ಕತೆಗೆ ಸ್ವಾರಸ್ಯವಾಗಿಲ್ಲವೆಂದು ಚೌಂಡರಾಜನು ಅದನ್ನು ಪ್ರಾರಂಭದಲ್ಲಿಯೇ ನಿಲ್ಲಿಸಿ ಬಿಟ್ಟಿರಬಹುದೆಂದೂ ತೋರುತ್ತದೆ.

ದ್ವಿತೀಯಾಶ್ವಾಸದ ಅಪಹಾರವರ್ಮ ಪ್ರಾಪ್ತಿ ಕಥೆಯಲ್ಲಿ 'ಮುದುಕಿಯು ಹುಲಿಗೆ ಹೆದರಿ ಚೂಪಾದ ಕಲ್ಲಿಗೆ ಎಡವಿಬಿದ್ದಳು. ಆಗ ಮಗು ಅವಳ ಕೈಯ್ಯಿಂದ ಜಾರಿಬಿದ್ದು ಒಂದು ಕಪಿಲಾ ಶವದೊಳಕ್ಕೆ ನುಸುಳಿತು' ಎಂದು ಮೂಲದಲ್ಲಿದೆ. ಇಲ್ಲಿ ಮುದುಕಿಯು ಹುಲಿಗೆ ಹೆದರಿ ಮಗುವನ್ನು ಎಸೆದು ಓಡಿದಳೆಂದು ಬರೆದಿದೆ. ಇದೊಂದು ಸಣ್ಣ ಬದಲಾವಣೆಯಾದರೂ ಕವಿಯು ಮೂಲವನ್ನು ಅಲ್ಲಿದ್ದಂತೆಯೇ ಅನುಕರಿಸುವುದಿಲ್ಲ ಎಂಬುದಕ್ಕೆ ನಿದರ್ಶನವಾಗಿದೆ.

ಸಂಸ್ಕೃತ ದಶಕುಮಾರಚರಿತೆಯ ಪೂರ್ವಪೀಠಿಕೆಯಲ್ಲಿ ಐದು ಉಚ್ಛ್ವಾಸಗಳಿವೆ. ಅನಂತರ ಎಂಟು ಉಚ್ಛ್ವಾಸಗಳಿವೆ. ಕೊನೆಯಲ್ಲಿ ಉತ್ತರಪೀಠಿಕೆಯೊಂದಿದೆ. ಇಲ್ಲಿ ಕನ್ನಡದಲ್ಲಿ ಒಟ್ಟು ಹದಿನಾಲ್ಕು ಆಶ್ವಾಸಗಳಿವೆ. ಮೊದಲನೆಯ ಆಶ್ವಾಸದಲ್ಲಿ ಪೀಠಿಕಾ ಪ್ರಕರಣ, ಮಂಗಳಾಚರಣೆ ಕವಿವಿಚಾರ ಕಾವ್ಯವಿಚಾರವನ್ನು ಬರೆದು ಹದಿನೆಂಟನೆಯ ಪದ್ಯದಿಂದ ಕಥೆಯನ್ನು ಪ್ರಾರಂಭಿಸಿದ್ದಾನೆ. ಏಳನೆಯ ಆಶ್ವಾಸದ ಪ್ರಾರಂಭದಲ್ಲಿ ಬಂದಿರುವ ಭುವನಕೋಶ ವಿಸ್ತಾರವರ್ಣನೆಯು ಮೂಲ ಸಂಸ್ಕೃತದಲ್ಲಿಲ್ಲ. ಅಲ್ಲಿ ಐನೆಯ ಆಶ್ವಾಸದ ಕೊನೆಯಲ್ಲಿ 'ಚತುರ್ದಶಭುವನ ವೃತ್ತಾಂತಂ ಶ್ರಾವಯಾಮಾಸ' ಎಂದು ಹೇಳಿ ಪುತ್ತೆ ಮುಂದಿನ ಪ್ರಥಮಾಶ್ವಾಸದ ಮೊದಲಲ್ಲಿ 'ಶ್ರುತ್ವಾತು ಭುವನ ವೃತ್ತಾಂತ ಮುತ್ತಮಾಂಗನಾ' ಎಂದು ಮುಂದುವರಿಸಿದ್ದಾನೆ. ಆದರೆ ಚೌಂಡರಾಜನು ಅದನ್ನೇಕೆ ಬಿಡಬೇಕೆಂದು ಯೋಚಿಸಿ ಅದನ್ನು ೨೮ ಪದ್ಯಗಳಿಂದ ವರ್ಣಿಸಿದ್ದಾನೆ. ಮುಂದಿನ ಪ್ರಥಮಾಶ್ವಾಸದ ರಾಜವಾಹನನ ಕತೆಯನ್ನು ಈ ಏಳನೆಯ ಆಶ್ವಾಸದಿಂದಲೇ ಪ್ರಾರಂಭಿಸಿದ್ದಾನೆ. ಅಂದರೆ ಪೂರ್ವ ಪೀಠಿಕೆ, ದಶಕುಮಾರ ಚರಿತೆ, ಉತ್ತರ ಪೀಠಿಕೆ ಎಂಬ ಮೂಲ ವ್ಯವಸ್ಥೆ

ಯನ್ನು ಅನುಸರಿಸದೆ ಚೌಂಡರಾಜನು ಸುಮ್ಮನೆ ಉದ್ದಕ್ಕೆ ಕತೆ ಹೇಳುತ್ತಾನೆ. ವರ್ಣನೆಗಳಲ್ಲಿಯೂ ಸ್ವತಂತ್ರ ಪ್ರವೃತ್ತಿಯನ್ನು ತೋರಿಸಿದ್ದಾನೆ. ಸಣ್ಣ ಪ್ರಸಂಗವನ್ನು ವಿಸ್ತರಿಸುತ್ತಾನೆ. ಶೃಂಗಾರರಸ ನಿರೂಪಣೆಯಲ್ಲಿ ಹೆಚ್ಚಿನ ಕುತೂಹಲ ತೋರಿಸಿದ್ದಾನೆ. ಇವನ್ನೆಲ್ಲ ಸಂಸ್ಕೃತ ಕನ್ನಡ ದಶಕುಮಾರ ಚರಿತೆಗಳೆರಡನ್ನೂ ಜೊತೆಯಾಗಿ ಓದುವಾಗ ಅರಿಯಬಹುದು.

ಕವಿ ಪ್ರತಿಭೆಯ ದಿಗ್ದರ್ಶನಕ್ಕಾಗಿ ಕೆಲವು ಪದ್ಯಗಳನ್ನಿಲ್ಲಿ ಆರಿಸಿಕೊಡಲಾಗಿದೆ. ರಸಾನುಭವಕ್ಕೆ ಅವು ಸಹಾಯಕಗಳಾಗಿವೆ—

೧. ಚೌಂಡರಸನ ಸೂರ್ಯೋದಯದ ವರ್ಣನೆಯ ರೀತಿಯನ್ನಿಲ್ಲಿ ಕಾಣಬಹುದು

'ನೈದಿಲೆಯು ದುಃಖದಿಂದ ತಲೆತಗ್ಗಿಸಿದೆ. ಅಮೃತಕಿರಣನ ಸಂಗಮಾಡಿದ ನಾನೀಗ ಈ ಉಷ್ಣಕಿರಣನ ಸಂಗಮವನ್ನು ಸಹಿಸುವುದು ಹೇಗೆ ಎಂಬ ದುಃಖವೇ ಅದಕ್ಕೆ ಕಾರಣ. ಎಷ್ಟು ಸಹಜವಾಗಿದೆ ಕಲ್ಪನೆ! ತಂಪನ್ನನುಭವಿಸಿದವರು ತಾಪದ ಬೇಗೆಯನ್ನು ಬಯಸುವರೇ? ಸೂರ್ಯನುದಯಿಸಿದಾಗ ಸಹಜವಾಗಿ ಬಾಡಿ ಬಗ್ಗಿದ ನೈದಿಲೆಗೆ ಒಂದು ಸುಂದರ ಕಾರಣವನ್ನು ಕಲ್ಪಿಸಿ ತನ್ನ ಪ್ರತಿಭಾತಿಶಯವನ್ನು ತೋರಿಸಿದ್ದಾನೆ ಕವಿ.

೨. ಕವಿ ಈ ಪದ್ಯದಲ್ಲಿ ಮಹಾಶೂರನೊಬ್ಬನ ಶೌರ್ಯವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿರುತ್ತಾನೆ. ೭–೧೧೬

'ವೀರನೊಬ್ಬನು ಕಠಾರಿಯನ್ನು ಒರಿದು ಕೈಯಲ್ಲಿ ಹಿಡಿದುಕೊಂಡು ಧೈರ್ಯವಾಗಿ ದಾರಿಯಲ್ಲಿ ನುಗ್ಗಿ ಬರುತ್ತಾ ಎರಡು ಬದಿಯಲ್ಲೂ ಸಿಕ್ಕಿದ ಶತ್ರುಗಳನ್ನು ಕೊಲ್ಲುತ್ತಾ ಶಬ್ದದಿಂದ ಗುರುತು ಹಿಡಿದು ರಾಜನ ಎದುರಿಗೆ ಬರುತ್ತಿದ್ದನು.' ಇವನ ಧೈರ್ಯ, ಶೌರ್ಯ, ಪರಾಕ್ರಮಗಳು ಅಸಮ.

೩. ಪ್ರಹಾರವರ್ಮನ ಮಗ ಉಪಹಾರವರ್ಮ. ಇಬ್ಬರೂ ಬಹುಕಾಲ ಅಗಲಿ ಹೋಗಿದ್ದರು. ಪರಸ್ಪರ ಸೇರುವ ಆಸೆಯೇ ಇರಲಿಲ್ಲ. ಆದರೆ ದೈವಲೀಲೆಯಿಂದ ಮತ್ತೆ ಸೇರಿದರು. ಆಗ ಉಪಹಾರವರ್ಮನ ಸಮಾಗಮದಿಂದ ಅವನ ತಾಯಿತಂದೆಗಳಿಗಾದ ಅಮಿತಾನಂದವನ್ನು ಈ ಪದ್ಯದಲ್ಲಿ ಕವಿ ಸೊಗಸಾದ ರೀತಿಯಲ್ಲಿ ವರ್ಣಿಸಿರುತ್ತಾನೆ.

'ಮಹಾರಾಜನೆ! ನನ್ನ ತಂದೆಯೂ ನನ್ನ ತಾಯಿಯೂ, ನನ್ನನ್ನು ತಮ್ಮ ಮಗನೆಂದು ತಿಳಿದರು. ಕೂಡಲೆ ಅವರ ಶರೀರದಲ್ಲಿ ರೋಮಾಂಚವುಂಟಾಯಿತು. ಮನಸ್ಸಿನಲ್ಲಿ ಹರ್ಷವುಕ್ಕಿತು. ಎವೆಯಿಕ್ಕದೆ ಒಂದೇಸಮನಾಗಿ ನನ್ನ ಮುಖನೋಡುತ್ತಾ ನಿಂತರು. ಬಳಿಕ ಗಟ್ಟಿಯಾಗಿ ಸೆಳೆದು ತಬ್ಬಿಕೊಂಡರು. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯವು ಫಲಿಸಿತೆಂದು ಆನಂದವನ್ನು ಹೊಂದಿದರು.' ಇದು ಅಕಸ್ಮಾತ್ ಆದ ಪಿತಾಪುತ್ರಸಂಯೋಗ. ಅದರಲ್ಲಿ ಅನುಭವಕ್ಕೆ ಬರುವ ಆಶ್ಚರ್ಯ, ಆನಂದ, ರೋಮಾಂಚ, ಹರ್ಷ ಮೊದಲಾದ ಭಾವಗಳನ್ನು ಮನಮುಟ್ಟುವಂತೆ ವರ್ಣಿಸಿದ್ದಾನೆ ಕವಿ.'

ಅಮೃತಕರ ಸಂಗಮಂ ಮಾ ।
ಡಿ ಮುಗುಟಿಪ್ಪಿಂತುಪ್ಪಕರಕೆಮೊಯ್ಯೊಡ್ಡುವೆನೆಂ ॥
ಬಮಳಿನ ಸುಕುಮಾರತೆಯಿಂ ।
ಕುಮುದಿನಿ ತಲೆವಾಗಿ ದುಗುಡಮಂ ತಳೆದಿರ್ದಳ್ ॥ ೮-೧೨೯

ಕರದೊಳ್ ಕಿಟ್ಟಿಕಠಾರಂ ।
ಬೆರಸದಟಿಂ ಬೀದಿವರಿಯುತಿರ್ಕೆಲನಂ ಸಂ॥
ಹರಿಸುತ್ತಾದನಿವಟೀಯಿಂ ।
ದರಸನಿದಿರ್ಗೊರ್ವ ವೀರನೆಯ್ದಿದನಾಗಳ್ ॥ ೭-೧೧೬

ತನು ಪುಳಕಂಗಳುಣ್ಮೆ ಮನದುತ್ಸವಮುರ್ಬೆ ನಿರಂತರಂ ತದಾ
ನನವನಲಂಪಿನಿಂದಡರೆ ನೋಡಿ ಬಟಿಕ್ಕಮರ್ದಪ್ಪಿ ಪೂರ್ವಕ
ಲ್ಪನ ಕೃತಪುಣ್ಯವೃಕ್ಷಮೆನಸುಂ ಫಲಮಾಯ್ತೆಮಗೆಂದೆನುತ್ತೆ ಮ ।
ಜ್ಜನಕನುಮಂತೆ ಮಜ್ಜನನಿಯುಂ ಪೊರೆಯೇರಿದರುರ್ವರಾಧಿಪಾ ॥ ೧೦-೧೨೯

೪, ಈ ಕಾವ್ಯದಲ್ಲಿ ಜಾರ ಚೋರರ ಸಾಹಸವಿಹಾರಗಳೇ ಬಹುಭಾಗವಾಗಿದೆ. ಶೃಂಗಾರರಸವು ನಿರರ್ಗಳವಾಗಿ ಉಕ್ಕಿಹರಿದಿದೆ. ಒಂದೊಂದು ಸಲ ಹೆಚ್ಚೇನೋ ಅಶ್ಲೀಲವೋ ಎಂದು ತೋರಲೂಬಹುದು. ಆದರೆ ಶೃಂಗಾರ ರಸವನ್ನು ಕವಿಗಳು ರಸರಾಜನೆಂದು ಮಹತ್ವನೀಡಿ ತಪ್ಪದೆ ಅದನ್ನು ವರ್ಣಿಸುತ್ತಾರೆ. ಕಾರಣ ಇದು ಎಲ್ಲ ವರ್ಗದ ಪ್ರಾಣಿಗಳಿಗೂ ಮಾನವರಿಗೂ ಅನುಭವಕ್ಕೆ ಬರುವ ರಸ. ಜೀವನದಲ್ಲಿ ಹುರುಪನ್ನೂ ಆನಂದವನ್ನೂ ಉಕ್ಕಿಸುವ ರಸ. ಆದುದರಿಂದ ಕವಿಯು ಇದನ್ನು ವಿಶೇಷವಾಗಿ ವರ್ಣಿಸುತ್ತಾನೆ. ಒಂದು ಸಾಮಾನ್ಯವಾದ ಗಂಭೀರವಾದ ಶೃಂಗಾರದ ವರ್ಣನೆಯನ್ನಿಲ್ಲಿ ಕೊಡಲಾಗಿದೆ.

'ಅವಂತಿ ಸುಂದರಿಯು, ಹಬ್ಬುತ್ತಿರುವ ಕಲ್ಪಲತೆಯು ಕಲ್ಪವೃಕ್ಷದ ತುದಿಯನ್ನು ಸುತ್ತಿಕೊಳ್ಳುವಂತೆ, ನಾಚಿಕೆಯು ಸಡಿಲವಾಗಿ ತನ್ನೆರಡು ಭುಜಲತೆಗಳಿಂದ ರಾಜವಾಹನನನ್ನು ಬಿಗಿಯಾಗಿ ಅಪ್ಪಿಕೊಂಡಳು. ಹರ್ಷದಿಂದ ಅಧರವನ್ನು ಹಿಡಿದು ಚುಂಬಿಸಿದಳು. ರತಿಸುಖದ ಬಯಕೆಯೂಾಯಿತು. ಆದರೆ ನಾಚಿಕೆ. ಅದನ್ನರಿತ ರಾಜವಾಹನನು ಮತ್ತೆ ಕಾಂತೆಯನ್ನು ಬಿಗಿಯಾಗಿ ತಬ್ಬಿಕೊಂಡನು,' (೭-೩೨) ಇಲ್ಲಿ ನವವಧುವಿನ ಪ್ರಥಮ ಸಂಗಮದಲ್ಲಾಗುವ ಆವೇಗ, ಔತ್ಸುಕ್ಯ ಲಜ್ಜೆ ಹರ್ಷ ಮೊದಲಾದ ಭಾವಗಳನ್ನು ಕವಿಯು ಪ್ರೌಢಿಮೆಯಿಂದ ವರ್ಣಿಸಿದ್ದಾನೆ.

ಕುಡಿಯಿಡುತಿರ್ಪ ಕಲ್ಪಲತೆ ಕಲ್ಪಕುಜಾಗ್ರಮನಪ್ಪುವಂತೆ ಸಾಸ್
ಸಡಿಲೆ ಕುಮಾರನಂ ಭುಜಲತಾದ್ವಯದಿಂ ಬಿಗಿಯಪ್ಪಿ ಪೆಂಪಿನಿಂ
ಪಿಡಿದಧರಾಗ್ರಮಂ ಸವಿದು ಮತ್ತೆ ರತೋತ್ಸವದಿಚ್ಛೆಯಾಗೆ ನಾ
ಣ್ಬಿಡುಕುವ ಕಾಂತೆಯಂ ಮಗುಳ್ದು ತಾನಮರ್ದಪ್ಪಿದನಂರ್ಪರಾಧಿಪಾ॥

೭-೩೨

೫. ಕವಿಗಳು ನಾರೀ ಸೌಂದರ್ಯ ಸೌಕುಮಾರ್ಯಗಳನ್ನು ಪತ್ತಾರು ಬಗೆಗಳಿಂದ ವರ್ಣಿಸಿದ್ದಾರೆ. ಚೌಂಡರಸನ ರೀತಿಯೋ ಒಂದು ಹೊಸಬಗೆ. ಅದನ್ನೀ ಪದ್ಯದಲ್ಲಿ ಕಾಣಬಹುದು.

'ಮಲಯ ಸಮೀರನು ಈ ಅವಂತಿ ಸುಂದರಿಯನ್ನು ಪಡೆದನು. ಮದನನು ಸಾಕಿ ಬೆಳೆಯಿಸಿದನು. ಚಂದ್ರನು ಮರಗಳ ಚಿಗುರುಗಳ ತಳದಲ್ಲಿ ಸೊಗಸಾಗಿ ನಡೆಯಿಸಿದನು. ರತಿಯು ತನ್ನ ವಿಶೇಷವಾದ ವಿಲಾಸವನ್ನಿವಳಿಗಿತ್ತಳು. ವಸಂತನು ನಲ್ನುಡಿಯನ್ನು ಕಲಿಸಿದನು. ಅಲ್ಲದಿದ್ದರೆ ಈ ಕುಮಾರಿಯಲ್ಲಿ ಈ ಸೌಕುಮಾರ್ಯವು ಸಾಧ್ಯವೇ ?' ಎಂಥ ಸ್ವಾರಸ್ಯವಾದ ಕಲ್ಪನೆಯಿದು. ಅವಂತಿ ಸುಂದರಿಯು ಮಂದ ಗಮನೆ. ಕಾಮನ ಆಕರ್ಷಣೆಯುಳ್ಳವಳು. ಚಂದ್ರವದನೆ, ರತಿವಿಲಾಸೆ, ಮಧುರವಾಣಿ, ಎಂಬಂಶಗಳು ವ್ಯಂಜಿತವಾಗುವಂತೆ ಕವಿ ವಿನೂತನ ರೀತಿಯಿಂದ ವರ್ಣಿಸಿರುತ್ತಾನೆ.

'ಮಲಯಸಮೀರನೊಲ್ದು ಪಡೆದಂ ಮದನಂ ಪೊರೆದಂ ಸುಧಾಕರಂ
ತಳಿರಡಿರಂಜಿಸಲ್ ನಡೆಪಿದಂ ರತಿ ತನ್ನ ವಿಳಾಸದೇಟ್ಗೆಯಂ
ನಲವಿನೊಳಿತ್ತಳೊಲ್ದು ಮಧು ಮೆಲ್ನುಡಿಯಂ ಕಲಿಸಿಟ್ಟನಲ್ಲದಂ
ದೆಳೆಯಳ ಸೌಕುಮಾರ್ಯಮಿನಿತಪ್ಪುದೆ ಭೂಮಿಯೊಳೆಂದನಾನೃಪಂ'

೬. ಇದೊಂದು ಬಾಲಲೀಲೆಯ ಮಧುರವರ್ಣನೆ. ಬಾಲನೇ ಕಣ್ಮುಂದೆ ಕುಣಿಯು ತ್ತಿರುವಂತೆ ಅನುಭವವಾಗುತ್ತದೆ. ಅಪ್ಪ ಅಪ್ಪ, ಎನ್ನುತ್ತಾ ಓಡಿಬಂದು ತಬ್ಬಿಕೊಳ್ಳು ತ್ತಾನೆ. ಹಣೆಗೆ ಹಣೆ ತಗಲಿಸುತ್ತಾನೆ. ಕೈಚಪ್ಪಾಳೆ ತಟ್ಟುತ್ತಾ ಕುಣಿ ಕುಣಿದು ಅಪ್ಪಿ ಕೊಳ್ಳುತ್ತಾನೆ. ಇಂಥ ಬಾಲನನ್ನು ತೊರೆದು ಬದುಕುವುದು ಸಾಧ್ಯವೇ ? ಇದನ್ನು ಓದಿದರೆ ಮನದಲ್ಲಿ ಮಕ್ಕಳಾಸೆ ಬಲಿಯುತ್ತದೆ. (೫-೭೪)

೭. ಕವಿಯ ಸೂರ್ಯಾಸ್ತದ ಕಲ್ಪನೆ ನೂತನವೂ ಸುಂದರವೂ ಆಗಿದೆ. ಕವಿ ಪ್ರತಿಭೆಯ ಕನ್ನಡಿಯಿದು. 'ಆಕಾಶ ಗಂಗೆಯ ದಡದಲ್ಲಿ ಆನಂದದಿಂದ ನಲಿಯುತ್ತಿದ್ದ ಹಂಸವು ಪಶ್ಚಿಮ ದಿಕ್ಕು ಎಂಬ ಸಮುದ್ರಕ್ಕೆ ಹಾರಿ ಹೋಯಿತೋ ಎಂಬಂತೆ ಸೂರ್ಯನು ಪಶ್ಚಿಮ ಜಲನಿಧಿಗೆ ಹೋದನು'. ಇಲ್ಲಿ ಹಂಸಶಬ್ದಕ್ಕೆ ಸೂರ್ಯನೆಂದೂ ಅರ್ಥ. ಚಮ ತ್ಕಾರವಾಗಿ ಎರಡರ್ಥಗಳೂ ಬರುವಂಥ ಪದವನ್ನು ಪ್ರಯೋಗಿಸಿ ಸೊಗಸಾಗಿ ವರ್ಣಿಸಿ ದ್ದಾನೆ. ಈ ಕಲ್ಪನೆ ಹೊಸದು. (೫-೩೩)

ಅಪ್ಪಪ್ಪೆನೆ ಮಿಗೆ ಪರಿತಂದಪ್ಪುವ ಚೈಮೊಂಡೆನಲ್ ನೊಸಲ್ಗೆ
ಳಸುವ ಕೈ ತಪ್ಪಳೆಗುಟ್ಟಲ್‌ಕುಣಿ । ದಪ್ಪುವ ಬಾಲಕನ
ನುಳಿದು ಜೀವಿಪರೊಳರೇ ?  ೫–೬೪

ಅಂಬರ ಗಂಗಾ ತೀರದೊಳಿಂಬಿಂದೋಲಾಡುತಿರ್ಪ ಹಂಸಂ ವರುಣಾ
ಶಾಂಬುಧಿಗೆ ಪಾಱಿಪೋದ । ತ್ತೆಂಬಂತಿನನಪರಜಲನಿಧಿಗೆಯ್ದಿದನಾಗಳ್ ೫–೩೩

೮. ಕಾಡು ಕೋಣಗಳ ಸೊಗಸಾದ ವರ್ಣನೆಯನ್ನಿಲ್ಲಿ ನೋಡಬಹುದು. ಕೆಂಗಣ್ಣು. ಭಯಂಕರವಾದ ಆಕಾರ, ಬಾಯಿಂದ ಘುರಘುರು ಎಂದು ಶಬ್ದಮಾಡುತ್ತಿವೆ, ಕೊಂಬುಗಳು ಮುರಿದಿವೆ, ಕಲ್ಲಿನಂತೆ ಗಟ್ಟಿಯಾದ ಶರೀರ, ಉದ್ದವಾದ ಬಾಲ, ಕಠಿಣವಾದ ಗೊರಸು, ಹಣೆಯ ಮೇಲೆ ಧೂಳುಕೂತಿದೆ. ದುಂಡಾದ ಕೊರಳು, ಮೆಲುಕು ಹಾಕುತ್ತಾ ಹೊರ ಬಂದ ನೊರೆಯು ಹೂವಿನಂತೆ ಬೆಳ್ಳಗಿದೆ. ಕಾಡಿನಲ್ಲಿ ಹೀಗೆ ಭೀಕರವಾದ ರೂಪವುಳ್ಳ ಆನೆಗಳಂತಿರುವ ಕಾಡು ಕೋಣಗಳ ಗುಂಪು ಒಪ್ಪುತ್ತದೆ ೪–೨೯

೯. ಬೆಳುದಿಂಗಳನ್ನು ವರ್ಣಿಸಿರುವ ರೀತಿ ಮನೋಹಾರಿಯಾಗಿದೆ. 'ಕೆಂಪಾದ ಸಂಜೆ ಹಿಡಿದಿರುವ ತೆರೆಯಾಗಿದೆ. ಆಗಸದಲ್ಲಿ ಮಿನುಗುವ ತಾರೆಗಳು ಸುತ್ತ ಚೆಲ್ಲಿದ ಪುಷ್ಪಾಂಜಲಿ. ಆಗಸವೇ ನರ್ತಿಸುವ ರಂಗಭೂಮಿ. ಅಲ್ಲಿ ಚಂದ್ರಕಾಂತಿಯು ನರ್ತಿಸುತ್ತಿದೆ' ಕಣ್ಮುಂದೆ ನಾಟ್ಯವೇ ನಿಜವಾಗಿ ನಡೆಯುತ್ತಿರುವಂತೆ ಭಾಸವಾಗುತ್ತದೆ. ಹಿಂದಿನ ಪದ್ಯದಲ್ಲಿ ಕಾಡು ಕೋಣಗಳ ಗುಂಪು ಕೆಂಗಣ್ಣಿನಿಂದ ನಮ್ಮನ್ನು ನೋಡುತ್ತಿರುವಂತೆ ತೋರುತ್ತದೆ. ಕವಿಯು ಹೀಗೆ ಬೇರೆ ಬೇರೆ ರಸಗಳನ್ನು ಹೊಸಹೊಸ ರೀತಿಯಿಂದ ವರ್ಣಿಸಿದ್ದಾನೆ.

ಅರುಣಾಕ್ಷಂ ರೌದ್ರರೂಪಂ ಘುರುಘುರಿತಮುಖಂ ಶೀರ್ಣಶೃಂಗಂ ಶಿಲಾನಿ
ಷ್ಠುರದೇಹಂ ದೀರ್ಘವಾಳಂಕಠಿಣ ಖುರಪುಟಂ ರೇಣುಭಾಳ ಸ್ಥಳಂಘ
ರ್ಘರನಾದಂ ವೃತ್ತಕಂಠಂ ಕುಸುಮಧವಳ ರೋಮಂಥ ಫೇನಂ ಕರಂಭೀ
ಕರಮಾಗಲ್ಕೊಪ್ಪುಗುಂ ಕಾನನದೊಳಿಭಸಮಾನಂ ಲುಲಾಯ ಪ್ರತಾನಂ ೪–೨೯

ಕಿಸುಸಂಜೆ ಪಿಡಿದಜವನಿಕೆ । ಮಿಸುಗುವ ತಾರಾಳಿ ಪರೆದ
ಪುಷ್ಪಾಂಜಲಿಯಾ ॥ ಗಸಮೆಸೆವರಂಗಮಾಗಲ್ ।
ಶಶಿಪ್ರಭಾನಾಟ್ಯಮೇಂ ಮನಂಗೊಳಿಸಿದುದೋ  ೯–೧೦೫

೧೦. ಕವಿಯು ಭಕ್ತಿಭಾವವನ್ನು ಭಕ್ತಿಯನ್ನು ಪ್ರಚೋದಿಸುವಂತೆ ವರ್ಣಿಸಿದ್ದಾನೆ. ಪಂಡರಿನಾಥನ ಸ್ತುತಿಯಲ್ಲಿ ಕಾಣಬಹುದು. 'ವಿಟ್ಠಲ ! ಬಾಳಿದಷ್ಟು ದಿನಗಳು ಈ ಶರೀರದ ಭೋಗಗಳ ಚಿಂತೆಯಲ್ಲಿಯೇ ಕಾಲ ಕಳೆಯುವಂತೆ ಮಾಡಿದೆ. ಆದರೂ ಅವಸಾನ ಕಾಲದಲ್ಲಿ ಸಾಂಸಾರಿಕ ಸುಖ ಮೋಹದ ಕಡೆ ಹೋಗದಂತೆ ತಡೆದು ನಿನ್ನ ಪಾದ

ಗಳಲ್ಲಿ ನನ್ನ ಮನಸ್ಸು ಸ್ಥಿರವಾಗಿ ನೆಲಸುವಂತೆ ಮಾಡು,' ಕವಿಯ ಭಕ್ತ್ಯತಿಶಯ ವನ್ನಿಲ್ಲಿ ಕಾಣಬಹುದು.

ಈ ಗ್ರಂಥದಲ್ಲಿ ಇವಿಷ್ಟೇ ಉತ್ತಮ ಪದ್ಯಗಳೆಂದು ಭಾವಿಸಬಾರದು. ಮೃಗಯಾ ವಿಹಾರ, ಜಲವಿಹಾರ, ಯುದ್ಧ, ಸಾಹಸ, ಸ್ತ್ರೀ ಗುಣಗಳಿಗೆ ಸಂಬಂಧಿಸಿದ ನೀತಿಕತೆಗಳು, ನಗರ ಗ್ರಾಮ ವಿಷಯಾದಿವರ್ಣನೆ, ಸೂರ್ಯೋದಯಾಸ್ತ, ಚಂದ್ರೋದಯಾಸ್ತ, ಮದ್ಯ ಪಾನ, ರಾಜನೀತಿ, ದೈವಭಕ್ತಿ ಹೀಗೆ. ಉತ್ತಮ ಕಾವ್ಯಗಳಲ್ಲಿರಬೇಕಾದ ಎಲ್ಲ ವಿಷಯ ಗಳೂ ವರ್ಣಿತವಾಗಿವೆ. ಇದು ಸಂಸ್ಕೃತ ಗ್ರಂಥದಷ್ಟೇ ಸುಂದರವೂ ಸ್ವತಂತ್ರವೂ ಆಗಿದೆ. ಕನ್ನಡದಲ್ಲಿ ಇದೊಂದು ಉದ್ಗ್ರಂಥ. ಶುಭಮಸ್ತು

**ಎನಿತುದಿನಂ ಬರ್ದುಂಕುವನಿತುಂ ದಿನಮೆನ್ನಶರೀರಭೋಗ ಚಿಂ**
**ತನೆಯುನತೀವ ಪೂಜ್ಯಮೆನೆಮಾಡಿ ಬೞಿಕ್ಕವಸಾನ ಕಾಲದೊಳ್**
**ನವರತಿಮೋಹದಿಂ ಚಲಿಸದಂತು ನಿಜಾಂಘ್ರಿನಿವಾಸದಲ್ಲಿ ನೆ**
**ಟ್ಟನೆ ನೆಲಸಿರ್ಪಬಲ್ಪುಗೆಯನೀವುದು ಬೇೞ್ಪೆನಭಂಗವಿಟ್ಠಲಾ** ೧೪-೮

# ಪ್ರಥಮಾಶ್ವಾಸಂ

ಉ॥ ಶ್ರೀಯುಮುದಾರದಿಂದುರದೊಳೊಪ್ಪಿರೆ ತಾಳ್ದ ದಶಾವತಾರ ಸಂ
ಧಾಯಕದಿಂ ವಿರೋಧಿಬಲಮಂ ತವೆ ಗೆಲ್ದಮರುನ್ನಿಕಾಯಮಂ
ಸ್ವಾಯತಸತ್ವದಿಂ ಪೊರೆದ ಲೋಕಜನಸ್ತುತಿವೆತ್ತ ಪಂಡರೀ
ರಾಯನಭಂಗ ವಿಟ್ಠಲನಲಂಪಿನೊಳೀಗೆಮಗಿಷ್ಟಸಿದ್ಧಿಯಂ ೧

ಚಂ॥ ತರಳಕಟಾಕ್ಷಮಾತ್ರಗತಿಯಿಂ ದಿವಿಜಾಸುರಮರ್ತ್ಯಪನ್ನಗೋ
ತ್ಕರಪರಿಖೇದಮಂ ಕಳೆದು ನಾಡೆ ಕೃತಾರ್ಥರೆನಲ್ಕೆ ಮಾಳ್ಪ ಭಾ
ಸುರ ಸಿತ ಪದ್ಮಹಸ್ತೆ ಕಮಲಾಸನೆ ನೀರಜನೇತ್ರೆ ದುಗ್ಧಸಾ
ಗರಸುತೆ ಸಿದ್ಧಲಕ್ಷ್ಮಿ ನಮಗೀಗೆ ವಚೋವಿಭವಪ್ರಸಿದ್ಧಿಯಂ ೨

ಉ॥ ಪಂಚಮುಖ ಪ್ರಸಿದ್ಧಿವಡೆದುಂ ಗಜವಕ್ತ್ರಸುಖಾವಹಂ ವಿಷೋ
ದಂಚಿತಕಂಠನಾಗಿಯುಮಣಂ ಖಗರಾಜವಿಲೋಚನಂ ಯಶ
ಸ್ಸಂಚಿತ ತಾರಕಾರಿಪದಮಂ ತಳೆದುಂ ಮಿಗೆ ತಾರಕಾಪ್ರಿಯ
ವ್ಯಂಜಿತ ಜೂಟನಾದಭವನೀಗೆಮಗುದ್ಧಮತಿಪ್ರಕಾಶಮಂ ೩

೧. ಪಂಡರೀಪುರದೊಡೆಯನಾದ ಅಭಂಗ ವಿಟ್ಠಲನು ಸಂತಸದಿಂದ ನಮಗೆ ಇಷ್ಟಾರ್ಥಗಳನ್ನು ಸಾಧಿಸಿಕೊಡಲಿ. ಅವನು ಲಕ್ಷ್ಮಿಯನ್ನು ತನ್ನ ಹೃದಯದಲ್ಲಿ ಪ್ರಕಾಶಿಸುವಂತೆ ಧರಿಸಿದ್ದಾನೆ. ಹತ್ತು ಅವತಾರಗಳನ್ನು ಎತ್ತಿ ಶತ್ರು ಸೇನೆಯನ್ನು ಪೂರ್ತಿಯಾಗಿ ಗೆದ್ದು ದೇವತೆಗಳ ಸಮೂಹವನ್ನು ತನ್ನ ಶಕ್ತಿಯಿಂದ ಕಾಪಾಡಿದ್ದಾನೆ. ಲೋಕದ ಜನರಿಂದ ಸ್ತುತಿಸಲ್ಪಟ್ಟಿದ್ದಾನೆ. ೨. ಸಿದ್ಧಲಕ್ಷ್ಮಿಯು ನಮಗೆ ವಾಗ್ವೈಭವದ ಸಿದ್ಧಿಯನ್ನು ಅನುಗ್ರಹಿಸಲಿ. ಅವಳು ತನ್ನ ಚಂಚಲವಾದ ಕಡೆಗಣ್ಣ ನೋಟದಿಂದಲೇ ದೇವತೆಗಳು, ರಾಕ್ಷಸರು, ಮನುಷ್ಯರು, ಸರ್ಪಗಳು, ಇವರೆಲ್ಲರ ಕಷ್ಟವನ್ನು ಹೋಗಲಾಡಿಸಿ, ವಿಶೇಷವಾಗಿ ಧನ್ಯರನ್ನಾಗಿ ಮಾಡುತ್ತಾಳೆ. ಹೊಳೆಯುವ ಬೆಳ್ದಾವರೆಯನ್ನು ಕೈಯಲ್ಲಿ ಹಿಡಿದಿದ್ದಾಳೆ. ಕಮಲದ ಮೇಲೆ ಕುಳಿತಿದ್ದಾಳೆ. ಅವಳ ಕಂಗಳು ತಾವರೆಯ ಎಸಳಿನಂತೆ ಸುಂದರವಾಗಿವೆ. ಅವಳು ಕ್ಷೀರಸಾಗರದಲ್ಲಿ ಹುಟ್ಟಿದವಳು. ೩. ಶಿವನು ನಮಗೆ ಶ್ರೇಷ್ಠವಾದ ಮತಿ ಪ್ರಕಾಶವನ್ನು ಅನುಗ್ರಹಿಸಲಿ. ಇವನು ಪಂಚಮುಖನೆಂದು ಹೆಸರುವಾಸಿಯಾಗಿದ್ದರೂ ಗಜಮುಖನಿಗೆ ಸುಖಕರನಾಗಿದ್ದಾನೆ. ವಿಷಕಂಠನಾಗಿದ್ದರೂ ಖಗರಾಜವಿಲೋಚನನಾಗಿದ್ದಾನೆ. ಕೀರ್ತಿಶಾಲಿಯಾದ ತಾರಕಾರಿಗೆ ಆಶ್ರಯನಾದ್ದರೂ ತಾರಕಾಪ್ರಿಯನಿಂದ ಪ್ರಕಾಶಿಸುವ ಜಟೆಯುಳ್ಳವನಾಗಿದ್ದಾನೆ.—ಕವಿಯು ವಿರೋಧಾಭಾಸಾಲಂಕಾರದಿಂದ ಈ ಪದ್ಯದಲ್ಲಿ ಶಿವನನ್ನು ಚಮತ್ಕಾರಕರವಾಗಿ ವರ್ಣಿಸಿದ್ದಾನೆ. ಪಂಚಮುಖ= ಶಿವ. ಸಿಂಹ, ಗಜವಕ್ತ್ರ=ಆನೆ, ಗಣೇಶ, ಸಿಂಹದಿಂದ ಆನೆಗೆ ಸುಖ

ಚಂ॥ ಸಿತಗಳನಂ ದಿಗಂಬರನನಸ್ಥಿ ವಿಭೂಷಣನಂ ಪಿಶಾಚ ಸಂ
ತತಿಕೃತಸಂಗನಂ ಧವಳದೇಹನನುಗ್ರನನೊಲ್ದು ತನ್ನ ಸಂ
ಗತಿಯೊಳತೀವಪೂಜ್ಯನನೆ ಮಾಡಿ ಜಗದ್ಗುರುವಾದ ದೇವಿಪಾ
ರ್ವತಿ ದಯೆಗೆಯ್ಗೆನಮ್ಮೊಳನುರಾಗದಿನೊಪ್ಪುವ ವಾಗ್ವಿಳಾಸಮಂ ೪

ಶಾ॥ ಸೀಮಾತೀತ ಜಗನ್ನಿಕಾಯ ವಿಲಸನ್ನಿರ್ಮಾಣಕಂ ಋಗ್ಯಜು
ಸ್ಸಾಮಾದಿ ಪ್ರಚುರಾಗಮಪ್ರಭವವಕ್ತ್ರಂ ದೇವತಾ ವಂದಿತಂ
ಹೇಮಾಂಭೋಜಸುತಂ ಮರಾಳಸುರಥಂ ವಿಖ್ಯಾತವಾಣೀಮನಃ
ಪ್ರೇಮಂ ಪದ್ಮಜನೆಮ್ಮೊಳೀಗೆ ಮುದದಿಂ ವಾಕ್ಶ್ರೀಸಮುತ್ಪತ್ತಿಯಂ ೫

ವೆಂದರೆ ವಿರೋಧ. ಶಿವನಿಂದ ಗಣೇಶನಿಗೆ ಸುಖವೆಂದರೆ ವಿರೋಧ ಪರಿಹಾರ. ವಿಷೋದಂಚಿತಕಂಠ= ಶಿವ, ಸರ್ಪ. ಖಗರಾಜ= ಗರುಡ, ಸೂರ್ಯಚಂದ್ರರು. ಸರ್ಪವಾಗಿದ್ದರೂ ಗರುಡ ದೃಷ್ಟಿಯುಳ್ಳವನೆಂದರೆ ವಿರೋಧ. ಶಿವನು ಸೂರ್ಯಚಂದ್ರರನ್ನು ಕಣ್ಣಾಗಿ ಉಳ್ಳವನೆಂದರೆ ವಿರೋಧ ಪರಿಹಾರ. ತಾರಕಾರಿ= ಕುಮಾರಸ್ವಾಮಿ, ತಾರಕಾಪ್ರಿಯ= ಚಂದ್ರ. ಅರಿಗೂ ಪ್ರಿಯನಿಗೂ ಆಶ್ರಯವೆಂದರೆ ವಿರೋಧ. ಕುಮಾರಸ್ವಾಮಿಗೂ ಚಂದ್ರನಿಗೂ ಆಶ್ರಯನೆಂದರೆ ವಿರೋಧಪರಿಹಾರ. ೪. ಶಿವನು ನೀಲಕಂಠ, ದಿಗಂಬರ, ಅಸ್ಥಿಮಾಲೆಯನ್ನು (ರುಂಡ ಮಾಲೆಯನ್ನು) ಧರಿಸಿದವನು, ಪಿಶಾಚಿಗಳ ಸಂಗವುಳ್ಳವನು. ಬಿಳುಪಾದ ಶರೀರವುಳ್ಳವನು ಉಗ್ರರೂಪಿ. ಹೀಗಿದ್ದರೂ ಪಾರ್ವತಿಯು ಪ್ರೀತಿಸಿ ಮದುವೆಯಾಗಿ ತನ್ನ ಸಂಬಂಧದಿಂದ ಶಿವನನ್ನು ಜಗದ್ಗುರುವನ್ನಾಗಿ ಪರಮಪೂಜ್ಯನನ್ನಾಗಿ ಮಾಡಿದಳು, ಇಂಥ ಪಾರ್ವತಿಯು ಅನುರಾಗದಿಂದ ನಮಗೆ ಸುಂದರವಾದ ವಾಗ್ವಿಲಾಸವನ್ನು ದಯೆಗೈಯಲಿ (ಇಲ್ಲಿ ಶಿವನಲ್ಲಿರುವ ದೋಷಗಳೆಲ್ಲ ಗುಣಗಳೇ ಎಂದು ತಿಳಿಯಬೇಕು– ಅರ್ಥಬೇಧಗಳನ್ನು ಗಮನಿಸಬೇಕು. ಸಿತಗಳ= 1) ಕರೆಗೊರಳ–ವಿಷಕಂಠ, 2) ದಿಗಂಬರ= ಬತ್ತಲೆ–ದಿಕ್ಕುಗಳೇ ಅಂಬರವನ್ನಾಗಿಯುಳ್ಳವನು, 3) ಅಸ್ಥಿ ವಿಭೂಷಣ= ಮೂಳೆಗಳ ಒಡವೆಗಳುಳ್ಳವನು–ರುಂಡಮಾಲಾಧಾರಿ. 4) ಪಿಶಾಚ ಸಂತತಿ ಕೃತ ಸಂಗ= ಪಿಶಾಚಿಗಳ ಸಂಗ–ಪ್ರಮಥಾದಿ ಗಣಗಳ ಸಂಗವುಳ್ಳವನು. 5) ಧವಳದೇಹನಂ=ಶ್ವೇತರೋಗಿ–ಸಹಜವಾಗಿಯೇ ಬೆಳ್ಳಗಿರುವ ದೇಹವುಳ್ಳವನು, 6) ಉಗ್ರ=ಉಗ್ರರೂಪಿ – ಭಯಂಕರವಾದ ರೂಪವುಳ್ಳವನು – ಪ್ರಳಯಕಾಲದಲ್ಲಿ ಉಗ್ರಸ್ವರೂಪಿ, ಅಮಂಗಳ ಸ್ವರೂಪನಾದ ಶಿವನನ್ನು ಮಂಗಳ ಸ್ವರೂಪನ್ನಾಗಿ ಮಾಡಿದವಳು ಸರ್ವಮಂಗಳೆ ಪಾರ್ವತಿ ಎಂದರ್ಥ. ೫. ಬ್ರಹ್ಮನು ನಮಗೆ ಮುದದಿಂದ ಮಾತಿನ ಸಿರಿಯನ್ನು ನೀಡಲಿ. ಅವನು ಅನಂತ ಲೋಕಗಳನ್ನು ಸುಂದರವಾಗಿ ಸೃಷ್ಟಿಸಿದ್ದಾನೆ. ಅವನ ಮುಖಗಳು ಋಗ್ವೇದ ಯಜುರ್ವೇದ ಸಾಮವೇದ ಮೊದಲಾದ ಅನೇಕ ಶಾಸ್ತ್ರಗಳಿಗೆ ಉತ್ಪತ್ತಿಸ್ಥಾನವಾಗಿವೆ. ದೇವತೆಗಳಿಂದ ವಂದಿತನಾಗಿದ್ದಾನೆ. ಚಿನ್ನದ ಕಮಲದಲ್ಲಿ ಹುಟ್ಟಿದ್ದಾನೆ. ಹಂಸವು ಅವನ ವಾಹನವಾಗಿದೆ. ಪ್ರಸಿದ್ಧಳಾದ ಸರಸ್ವತಿಯು

ಚಂ॥ ಜಲರುಹತಂತು ಸುಂದರ ವಿಲೋಚನಮಧ್ಯೆ ಗಜಾಳಿಯಾನ ಕುಂ
ತಳೆ ಮಣಿದರ್ಪಣಾಧರಕಪೋಲೆ ಸುಧಾಕಳಶೋಪಮಾಂಗಮಂ
ಜುಳ ಕುಚಯುಗ್ಮೆ ಶಂಖಲತಿಕಾ ಸಮಕಂಠಭುಜಪ್ರಸಿದ್ಧೆ ರು
ಗ್ಮಿಳಿತಮರಾಳವಾಹಿನಿ ಸರಸ್ವತಿಮಾಳ್ಕೆಮಗಿಷ್ಟಸಿದ್ಧಿಯಂ ೬

ಮ ಸ್ರ॥ ಕರುಣಂ ಕೈಮಿಕ್ಕು ಮಾಳ್ಕೆಮ್ಮಯಮತಿಗೆ ಮಹಾತೇಜಮಂ ದಿವ್ಯಗಂಗಾ
ಧರಪುತ್ರಂ ತುಂಗಗಂಡಸ್ಥಳಗಳಿತ ಮದಾಂಬುಪ್ರವಾಹಪ್ರಕಾಮೋ
ದ್ಧುರ ಗಂಧಾಯಾತ ಭೃಂಗಾವಳಿ ಮೃದುಮಧುರಧ್ವಾನ ಸಂತೋಷಿತೋದ್ಯ
ತ್ಕರಿವಕ್ತ್ರಂ ಸಂತತಾರಾಧಕಜನ ಬಹು ವಿಘ್ನೌಘನಾಶಂ ಗಣೇಶಂ ೭

ಚಂ॥ ಮಣಿಮಕುಟಂ ತ್ರಿಶೂಲಡಮರೂದ್ಧತ ಖಡ್ಗ ಕಪಾಲಪಾಣಿ ಭೀ
ಷಣ ವದನಂ ಕರೋಟಿವನಮಾಲೆ ಭಯಂಕರ ಭಾಳಲೋಚನಂ
ಫಣಿಕಟಕಂ ಕರಂ ತನಗೆ ರಂಜಿಪ ಭೈರವ ಮೂರ್ತಿ ದೇವತಾ
ಗಣಪತಿಸೇವ್ಯೆ ಚಂಡಿಕೆ ಮನೋಮುದಮಂ ನಮಗೀಗೆ ಸಂತತಂ ೮

ಪ್ರೇಮಕ್ಕೆ ಪಾತ್ರನಾಗಿದ್ದಾನೆ. ೬. ಶಾರದೆಯು ನನ್ನ ಬಯಕೆಯನ್ನು ಈಡೇರಿಸಲಿ. ಅವಳ ಕಂಗಳು ತಾವರೆಯಂತೆ ಅಂದವಾಗಿವೆ. ಸೊಂಟವು ನೂಲಿನಂತೆ ಸೂಕ್ಷ್ಮವಾಗಿದೆ. ಆನೆಯಂತೆ ಮಂದಗಮನೆ, ದುಂಬಿಗಳಂತೆ ಕಪ್ಪಾದ ಕೂದಲುಳ್ಳವಳು. ಕೆಳದುಟಿಯು ರತ್ನದಂತಿದೆ. ಕೆನ್ನೆಯು ಕನ್ನಡಿಯಂತೆ ಥಳಥಳಿಸುತ್ತದೆ. ಅಮೃತ ಕಲಶಗಳಂತಿರುವ ಸ್ತನಗಳುಳ್ಳವಳು. ಕೊರಳು ಶಂಖದಂತಿದೆ. ತೋಳುಗಳು ಬಳ್ಳಿಯಂತಿವೆ. ಕಾಂತಿಯುಳ್ಳ ಹಂಸದ ಮೇಲೆ ಕುಳಿತು ಸಂಚರಿಸುತ್ತಾಳೆ, ೭. ಗಣೇಶನು ಅಪಾರ ದಯೆಯಿಂದ ನಮ್ಮ ಬುದ್ಧಿಗೆ ಹೆಚ್ಚಾದ ತೇಜಸ್ಸನ್ನುಂಟು ಮಾಡಲಿ. ಅವನು ದೇವಗಂಗೆಯನ್ನು ಧರಿಸಿದ ಶಿವನ ಮಗನು, ಎತ್ತರವಾದ ಕೆನ್ನೆಗಳಿಂದ ಹರಿಯುವ ಮದೋದಕದ ಪ್ರವಾಹದಿಂದ ವಿಶೇಷವಾಗಿ ಹೊರಹೊಮ್ಮಿದ ಸೊಗಡಿಗೆ ಬಂದು ಮುಸುರಿದ ದುಂಬಿಗಳ ಮೃದುವಾದ ಇಂಚರದಿಂದ ಸಂತಸಗೊಂಡು ತನ್ನ ಆನೆಯ ತಲೆಯನ್ನು ಮೇಲಕ್ಕೆ ಎತ್ತುವವನು. ಎಡೆಬಿಡದೆ ಪೂಜಿಸುವ ಭಕ್ತರ ವಿಘ್ನಸಮೂಹವನ್ನು ನಾಶಮಾಡತಕ್ಕವನು. ೮. ರತ್ನಖಚಿತವಾದ ಕಿರೀಟ, ತ್ರಿಶೂಲ, ಡಮರು, ಕತ್ತಿಕಪಾಲಗಳನ್ನು ಎತ್ತಿಹಿಡಿದ ಕೈಗಳು, ಭಯಂಕರವಾದ ಮುಖ, ತಲೆಬುರುಡೆಗಳ ದೊಡ್ಡಹಾರ, ಭಯಂಕರವಾದ ಹಣೆಗಣ್ಣು, ಹಾವಿನ ಕಡಗ. ಇವುಗಳಿಂದ ಪ್ರಕಾಶಿಸುವ, ಭೈರವ ಮೂರ್ತಿಯಾದ, ದೇವಗಣಗಳಿಗೆ ಒಡೆಯನಾದ ಇಂದ್ರನಿಂದ ಸೇವಿತಳಾದ ಚಂಡಿಕೆಯು ಯಾವಾಗಲೂ ನಮಗೆ ಆನಂದವನ್ನುಂಟುಮಾಡಲಿ.

ಮ॥ ಬಿರುದಂ ಲೋಕವಿರುದ್ಧಮಂ ಕೃತಿಯೊಳುಂತೇಕಾರಣಂ ಪೇಟ್ದು ಕೊ
ಳ್ವರೊ ಸಲ್ಲಕ್ಷಣಮಾಗಿ ಪೇಟ್ದ ಕೃತಿಯಂ ಕೇಳ್ದರ್ ಮನಂಗೊಂಡಿದ
ಚ್ಚರಿಯಾಯ್ತೆಂಬರಗಲ್ಕೆ ಮಾಡುವರುದಾಸೀನರ್ ರಸಾಸ್ತಂ[1] ರಸೇ
ತರಮೆಂದಂದಿವುತಾವೆಪೇಟವೆ ವೃಥಾ ಸಂರಂಭಮೇಗೆಯ್ವುದೋ ೯

ಕುಕವಿಯ ಕಾವ್ಯಮಂ ಸುಕವಿಕೇಳ್ದು ಕರಂ ತಲೆದೂಗಿಮೆಚ್ಚಿ ಭಾ
ವಕನೆನಿಸಿರ್ಪುದಲ್ಲದೆ ರಸಾದ್ಭುತಮೊಪ್ಪುವ ಶಬ್ದವೃತ್ತಿ ಲೌ
ಕಿಕಪರಮಾರ್ಥಮೆಂಬ ಕವಿತಾಗುಣಮಂ ಬೆದಕಲ್ಕೆ ರತ್ನ ಶು
ಕ್ತಿಕೆಯನೊಜಿಲ್ದು ಪಾಲ್ಗೆಱೆಯೊಳೀಕ್ಷಿಸುವಂಗೆಣೆಯಾಗದಿರ್ಕುಮೇ ೧೦

ಚಂ॥ ಅವಗುಣ ಕೋಟಿಯಂ ಮಱೆದು ಸದ್ಗುಣಮೆಳ್ಳನಿತುಳ್ಳೊಡಂತದಂ
ಭುವನದೊಳ್ಪಿದೆ ಬಿಚ್ಚಳಿಸಿ ನಲ್ಮೆಮಿಗಲ್ ತಲೆದೂಗಿ ಮೆಚ್ಚಿಪೆ
ರ್ಚುವ ನಿರಸೂಯರಂ ವಿಗತಮತ್ಸರರಂ ಸುಚರಿತ್ರರಂ ಬುಧ
ಪ್ರವರರನರ್ಚಿಪೆಂ ವಿಮಲವಾಕ್ಕುಸುಮಾವಳಿಯಿಂದಮಾವಗಂ ೧೧

೯. ಕಾವ್ಯದಲ್ಲಿ ಲೋಕವಿರುದ್ಧವಾದ ರೀತಿಯಿಂದ ಬಿರುದನ್ನು ಯಾವ ಕಾರಣದಿಂದ ತಮ್ಮಲ್ಲಿ ಆರೋಪಿಸಿಕೊಂಡು ಕವಿಗಳು ಹೇಳಿಕೊಳ್ಳುತ್ತಾರೆಯೋ ? ಒಳ್ಳೆಯ ಕಾವ್ಯ ಲಕ್ಷಣಗಳಿಂದ ಕೂಡಿದಂತೆ ಹೇಳಿದ ಕಾವ್ಯವನ್ನು ಕೇಳಿದವರು ತಮ್ಮ ಮನಸ್ಸಿನಲ್ಲಿ ಮೆಚ್ಚಿಕೊಂಡು ಆಶ್ಚರ್ಯಕರವಾದುದೆಂದು ಹೇಳುತ್ತಾರೆ. ಉದಾಸೀನರು ಉಪೇಕ್ಷಿಸುತ್ತಾರೆ. ರಸಭರಿತವಾದುದು ಅಥವಾ ರಸರಹಿತವಾದುವು ಎಂಬುದನ್ನು ಕಾವ್ಯಗಳು ತಾವೇ ಹೇಳಲಾರವೇ ! ವ್ಯರ್ಥವಾದ ಗಡಿಬಿಡಿಯೇಕೆ? ೧೦, ಕುಕವಿಯ ಕಾವ್ಯವನ್ನು ಕೇಳಿ ಸುಕವಿಯು ಚೆನ್ನಾಗಿದೆಯೆಂದು ತಲೆಯನ್ನಾಡಿಸಿ ಸಹೃದಯನೆಂದು ಕರೆಯಿಸಿಕೋಡು ಸುಮ್ಮನಿರಬೇಕು. ಹಾಗಲ್ಲದೆ ಅದರಲ್ಲಿ ಅದ್ಭುತವಾದ ರಸಗಳು, ಸುಂದರವಾದ ಶಬ್ದಗಳು, ವೃತ್ತಿಗಳು, ಲೋಕಪ್ರಸಿದ್ಧವಾದ ಶ್ರೇಷ್ಠಕವಿತಾಗುಣಗಳು, ಇವನ್ನು ಬೆದಕಿ ನೋಡುವವನು, ಹಾಳುಕೆರೆಯಲ್ಲಿ ಆಸಕ್ತಿಯಿಂದ ಮುತ್ತಿನ ಚಿಪ್ಪನ್ನು ಹುಡುಕುವವನಿಗೆ ಸಮನಾಗುವುದಿಲ್ಲವೇ?–ಹಾಳುಕೆರೆಯಲ್ಲಿ ಮುತ್ತಿನಚಿಪ್ಪು ಹುಡುಕಿದರೂ ಸಿಗದು. ಹಾಗೆಯೇ ಕುಕವಿಕಾವ್ಯದಲ್ಲಿ ಕಾವ್ಯರಸಗಳೂ ಗುಣಗಳೂ ಹುಡುಕಿದರೂ ಸಿಗುವುದಿಲ್ಲ ೧೧. ಶ್ರೇಷ್ಠರಾದ ವಿದ್ವಾಂಸರನ್ನು ಯಾವಾಗಲೂ ಶುದ್ಧವಾದ ಮಾತುಗಳೆಂಬ ಹೂರಾಶಿಯಿಂದ ಪೂಜಿಸುತ್ತೇನೆ, ಏಕೆಂದರೆ, ಅವರು ಕೋಟಿಗಟ್ಟಲೆ ಅವಗುಣಗಳಿದ್ದರೂ ಅವನ್ನು ಮರೆತು ಸದ್ಗುಣಗಳು ಎಳ್ಳಷ್ಟಿದ್ದರೂ ಅವನ್ನು ಲೋಕದಲ್ಲಿ ಹೆಚ್ಚಿಸಿ ವಿವರಿಸುತ್ತಾರೆ. ಅಮಿತವಾದ ಪ್ರೀತಿಯಿಂದ ತಲೆದೂಗಿ ಮೆಚ್ಚಿಕೊಂಡು, ಹೆಚ್ಚಾಗಿ ಸಂತೋಷಿಸುತ್ತಾರೆ. ಅವರಿಗೆ ಅಸೂಯೆಯಿರುವುದಿಲ್ಲ. ಅವರು

[1] ರಸೋಕ್ತಂ (ರಸಾತ್ತಂ?)

ಮ॥ ಪೊಗಟ್ವೆಂ ಲಕ್ಷಣಲಕ್ಷಿತಾದ್ಭುತವಚೋನಿಷ್ಕಂಪನಂ ಪಂಪನಂ
ಜಗತೀಪ್ರೀತಿಕರಪ್ರಸಿದ್ಧ ಕವಿತಾ ಸಂಪನ್ನನಂ ಪೊನ್ನನಂ
ಸುಗಮಾರ್ಥಸ್ಫುಟಶಬ್ದ ಸುಂದರತರದ್ವಾಕ್ಸಾಂದ್ರನಂ ಚಂದ್ರನಂ
ಭಗವದ್ವಿಷ್ಣುಕಥಾವತಾರ ರಚಿತ ಶ್ರೀ ಭದ್ರನಂ ರುದ್ರನಂ ೧೨

ದ್ವಿಜವಂಶಾಂಬುಧಿ ಪೂರ್ಣಚಂದ್ರನಸಮುಖ್ಯಾತಂ ಭರದ್ವಾಜ ಗೋ
ತ್ರಜನುದ್ದಂಡ ಮನೋಹರ ಪ್ರಚುರಶಿಷ್ಯಂ ದಾನಕಲ್ಪದ್ರುಮಂ
ತ್ರಿಜಗನ್ಮಂಗಳ ಮೂರ್ತಿವಿಟ್ಠಲ ಪದಾಂಭೋಜಾತಭೃಂಗಂ ಗುಣ
ವ್ರಜಯುಕ್ತಂ ಕವಿತಾವಿಳಾಸನೆನಿಪಂ[1] ಚೌಂಡಂ ದಯಾಮಂಡನಂ ೧೩

ವರಮಧುಸೂದನಂ ಜನಕನೊಪ್ಪುವ ಮಲ್ಲವೆಮಾತೆಯಗ್ರಜಂ
ಸರಸಕವೀಶ್ವರಂ ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪಪೆಂಪು ಬಿ
ತ್ತರಿಸುವೊಡಗ್ಗಳಂ ನಿಜಮೆನಲ್ ಮೆಱೆವಂ ಹರಿಪಾದಶೋಣ ಪಂ
ಕರುಹಮಧುವ್ರತಂ ಸುಕವಿ ಚೌಂಡರಸಂ ಕವಿರಾಜಶೇಖರಂ ೧೪

ಹೊಟ್ಟೆಯುರಿಯಿಲ್ಲದವರು ಮತ್ತು ಸದಾಚಾರಿಗಳು. ೧೨. ಕಾವ್ಯಲಕ್ಷಣಗಳಿಂದ ಕೂಡಿದ ಅದ್ಭುತವಾದ ಮಾತುಗಳಿಂದ ಬೆರಗುಗೊಳಿಸುವ ಪಂಪನನ್ನು ಹೊಗಳುತ್ತೇನೆ. ಜಗತ್ತಿಗೇ ಪ್ರೀತಿಯನ್ನುಂಟುಮಾಡುವ ಪ್ರಸಿದ್ಧವಾದ ಕವಿತೆಗಳನ್ನು ರಚಿಸಿರುವ ಪೊನ್ನನನ್ನೂ ಸುಲಭವಾಗಿ ಸ್ಪಷ್ಟವಾಗಿ ಅರ್ಥವಾಗುವ ಸುಂದರವಾದ ತಡೆಯಿಲ್ಲದೆ ಹೊರಸೂಸುವ ಮಾತುಗಳಿಂದ ಭರಿತನಾದ ಚಂದ್ರಕವಿಯನ್ನೂ ಭಗವಾನ್ ವಿಷ್ಣುವಿನ ಅವತಾರದ ಕಥೆಗಳನ್ನು ಬರೆದ ಮಂಗಳಕರನಾದ ರುದ್ರಭಟ್ಟನನ್ನೂ ಹೊಗಳುತ್ತೇನೆ. ೧೩. ಚೌಂಡರಾಜನು ದ್ವಿಜವಂಶವೆಂಬ ಸಮುದ್ರದಲ್ಲಿ ಹುಟ್ಟಿದ ಪೂರ್ಣಚಂದ್ರನು. ಭರದ್ವಾಜಗೋತ್ರದಲ್ಲಿ ಜನಿಸಿದವನು. ಶ್ರೇಷ್ಠನಾದ ಮನೋಹರನ ಪ್ರಸಿದ್ಧನಾದ ಶಿಷ್ಯನು. ದಾನಮಾಡುವುದರಲ್ಲಿ ಕಲ್ಪವೃಕ್ಷ. ಮೂರುಲೋಕಗಳಿಗೆ ಮಂಗಳಕರನಾದ ಶ್ರೀವಿಟ್ಠಲನ ಪಾದ ಕಮಲಗಳಲ್ಲಿ ದುಂಬಿ. ಅನೇಕ ಗುಣಗಳುಳ್ಳವನು. ಕವಿತಾವಿಲಾಸನು. ಕರುಣೆ ತುಂಬಿದವನು, ೧೪. ಶ್ರೇಷ್ಠನಾದ ಮಧುಸೂದನನು ತಂದೆ. ಸದ್ಗುಣಗಳಿಂದ ಒಪ್ಪುವ ಮಲ್ಲವೆಯು ತಾಯಿ. ಸರಸಕವೀಶ್ವರನು ಅಣ್ಣ, ಹೆಂಡತಿಯು ಲಕ್ಷ್ಮಿ. ಈ ಒಂದು ಹಿರಿಮೆಯುವನದು. ವರ್ಣಿಸಲು ಹಿರಿದು, ಇದು ನಿಜ ಎನ್ನುವಂತೆ. ಹರಿಯ ಪಾದಗಳೆಂಬ ಕೆಂದಾವರೆಯ

---

[1] ವಲಂ (ಪಾ)

ಚಂ॥ ದೊರಕಿದ ಶಬ್ದದಿಂ ನೆಗೞ್ದ ಕಾವ್ಯಮನೆನ್ನಱಿವಂತು ಪೇೞ್ದೆನಾ
ದರಿಸಿ ಸಮಂತು ತಿರ್ದುಗೆ ಬುಧರ್ ನವವರ್ಧಕಿ ಗೇಹ ಮಾತ್ರಮಂ
ನಿರವಿಸಲಂತದರ್ಕೆ ಪರಿಶೋಭೆಯನಗ್ಗಳಮಪ್ಪಿನಂ ನಿರಂ
ತರಮೆಸಗಲ್ಕೆ ಕರ್ತೃ ಪರಿಭಾವಿಸೆ ಕೇಳ್ ಯಜಮಾನನಲ್ಲವೇ ೧೫

ಸಕಲಾಂತರ್ಯಾಮಿ ಜೀವಪ್ರಕರವಿವಿಧ ಚೈತನ್ಯರೂಪಂ ಜಗದ್ವ್ಯಾ
ಪಕಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವ ಸಂಬಂಧದಿಂ ಕೌ
ತುಕದಿಂದಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ
ತ್ರಕಥಾವಿಸ್ತಾರಮಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್ ೧೬

ಮ॥ ಮೊದಲೊಳ್ ದಂಡಿ ಕವೀಶ್ವರಂ ದಶಕುಮಾರಾಖ್ಯಾತ ಚಾರಿತ್ರಮಂ
ಪದೆಪಿಂ ಸಂಸ್ಕೃತಭಾಷೆಯಿಂ ರಚಿಸಿದಂ ಧಾತ್ರೀಜನಸ್ತೋತ್ರ ಸ
ಮ್ಮದವಪ್ಪಂತದನಾಂ ಪ್ರಸಿದ್ಧಿಯುವತಾರಾಕಾರಮಂ ತಾಳ್ದಿಸ
ದ್ವಿದಿತಂ ರಂಗದೊಳಾಡಿ ತೋರ್ಪ ತೆಱದಿಂ ಪೇೞ್ವೆಂ ಸುಕರ್ಣಾಟದಿಂ ೧೭

ದುಂಬಿಯಾದ, ಕವಿರಾಜಶೇಖರನಾದ ಸುಕವಿ ಚೌಂಡರಸನು ಮೆರೆಯುತ್ತಾನೆ. ೧೫. ದೊರೆತ ಶಬ್ದಗಳಿಂದ ಪ್ರಸಿದ್ಧವಾದ ಕಾವ್ಯವನ್ನು ನನಗೆ ತಿಳಿದ ಹಾಗೆ ಹೇಳಿದ್ದೇನೆ. ವಿದ್ವಾಂಸರು ಅದನ್ನು ಗೌರವಿಸಿ ಚೆನ್ನಾಗಿ ತಿದ್ದಲಿ. ಹೊಸಬಡಗಿಯು ಮನೆಯನ್ನು ಮಾತ್ರ ಕಟ್ಟುತ್ತಾನೆ. ಆದರೆ ಅದನ್ನು ಅಲಂಕರಿಸಿ ಅತಿ ಸುಂದರವನ್ನಾಗಿ ಯಾವಾಗಲೂ ಮಾಡುವವನು ಯಜಮಾನನು ತಾನೇ ! ೧೬. ವಿಷ್ಣುವು ಸಕಲವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿದ್ದಾನೆ. ಜೀವ ಸಮೂಹದಲ್ಲಿ ವಿಧವಿಧವಾಗಿ ಚೈತನ್ಯ ಸ್ವರೂಪಿಯಾಗಿದ್ದಾನೆ. ಜಗತ್ತಿನಲ್ಲಿ ವ್ಯಾಪಕನಾಗಿದ್ದಾನೆ-ಎಂದು ವೇದಶಾಸ್ತ್ರಗಳು ಎಡೆಬಿಡದೆ ಸಾರುತ್ತಿವೆ. ಈ ಒಂದು ಸಂಬಂಧದಿಂದಲೂ, ಕುತೂಹಲದಿಂದಲೂ ಯಾವುದನ್ನು ವರ್ಣಿಸಿದರೂ ಅದು ಹರಿಯಸ್ತುತಿಯೆಂದೇ ತಿಳಿದು ಈ ವಿಸ್ತಾರವಾದ ಮತ್ತು ಆಶ್ಚರ್ಯಕರವಾದ ಕಥೆಯನ್ನು ಸತ್ಕವಿಗಳು ಮೆಚ್ಚುವಂತೆ ವರ್ಣಿಸಲು ಯತ್ನಿಸಿದ್ದೇನೆ. ೧೭. ಮೊದಲು ದಂಡಿಯೆಂಬ ಕವೀಶ್ವರನು ದಶಕುಮಾರರ ಪ್ರಸಿದ್ಧವಾದ ಚರಿತೆಯನ್ನು ಭೂಲೋಕದ ಜನರು ಸಂತೋಷದಿಂದ ಹೊಗಳುವಂತೆ ಅಂದವಾಗಿ ಸಂಸ್ಕೃತ ಭಾಷೆಯಲ್ಲಿ ಬರೆದಿದ್ದಾನೆ. ಅದನ್ನೆ ನಾನು, ಬೇರೆ ಬೇರೆ ವೇಷಗಳನ್ನು ಧರಿಸಿ ರಂಗಭೂಮಿಯಲ್ಲಿ ನಟನು ಅಭಿನಯಿಸಿ ತೋರಿಸುವಂತೆ ಸುಂದರವಾದ ಕರ್ಣಾಟಕ

ಮ॥ ವನಮಾಲಾ ಪರಿಶೋಭಿಯಿಂದನಿಮಿಷೋದ್ಯತ್ಪ್ರೀತಿಯಿಂ ಶಂಖಚ
ಕ್ರನವೀನೋಜ್ಜ್ವಲದಿಂದನಂತಮಹಿಮಾಧಾರತ್ವದಿಂ ಶ್ರೀನಿವೇ
ಶನದಿಂ ಗೋತ್ರಸುಖಾಧಿವಾಸದೊದವಿಂ ಮುಕ್ತಾದಿಜನ್ಮ ಪ್ರಕೀ
ರ್ತನದಿಂ ವಾರಿಧಿವಾರಿಜಾಕ್ಷನವೊಲೇಂ ಚೆಲ್ವಾಯ್ತೊ ಭೂಭಾಗದೊಳ್ ೧೮

ವ॥ ಆ ವಾರ್ಧಿಮೇಖಲೆಯಾದ ಭೂಮಧ್ಯದಲ್ಲಿ

ಮ॥ ವಿವಿಧೋದ್ಯತ್ಸುರಗಂಗೆ ಪೂರ್ಣಸಲಿಲಂ ಚನ್ದ್ರಾರ್ಕಬಿಂಬಂ ತಳಿರ್
ನವತಾರಾನಿಕರಂ ಸಿತಾಕ್ಷತಚಯಂ ಸಪ್ತಾಬ್ಧಿ ಸುತ್ತಿರ್ಪ ಸೂ
ತ್ರ ವಿಶೇಷಂ ತನಗಾಗೆ ಲೋಕಜನನಪ್ರಾರಂಭದೊಳ್ ಪದ್ಮ ಸಂ
ಭವನೊಲ್ದರ್ಚಿಪ ಹೇಮಕುಂಭಮೆನಿಸಲ್ ಸಾಲ್ದತ್ತು ಹೇಮಾಚಲಂ ೧೯

ಆ ಮೇರುಗಿರಿಯ ದಕ್ಷಿಣದಿಗ್ಭಾಗದೊಳ್

ಭಾಷೆಯಲ್ಲಿ ಹೇಳುವೆನು. ೧೮. ದಡದ ವನಗಳ ಸಾಲಿನಿಂದ ವಿಶೇಷವಾದ ಕಾಂತಿಯನ್ನು ಪಡೆದು, ಮೀನುಗಳಿಗೆ ಹೆಚ್ಚಾದ ಆನಂದವನ್ನುಂಟುಮಾಡಿ, ಶಂಖಚಕ್ರಗಳ[1] ಹೊಸಬಗೆಯ ಹೊಳಪಿನಿಂದ ಕೂಡಿ, ಆದಿಶೇಷನ ಮಹಿಮೆಗೆ ಆಶ್ರಯನಾಗಿ, ಲಕ್ಷ್ಮಿಗೆ ಜನ್ಮ ಸ್ಥಾನನಾಗಿ, ಪರ್ವತಗಳಿಗೆ ಸುಖಕರವಾದ ವಾಸಸ್ಥಾನವಾಗಿ, ಮುತ್ತು ಮೊದಲಾದ ರತ್ನಗಳಿಗೆ ಜನ್ಮವಿತ್ತು ಹೆಸರುವಾಸಿಯಾದ ಸಮುದ್ರವು ನಾರಾಯಣನಂತೆ ಭೂಭಾಗದಲ್ಲಿ ಎಷ್ಟು ಸುಂದರವಾಗಿ ಕಾಣಿಸುತ್ತದೆ ! ವನಮಾಲೆಯಿಂದ ಶೋಭಿಸುವ, ದೇವತೆಗಳಿಗೆ ಸಂತೋಷವನ್ನುಂಟುಮಾಡುವ, ಶಂಖಚಕ್ರಗಳಿಂದ ಉಜ್ವಲವಾಗಿ ಪ್ರಕಾಶಿಸುವ, ಎಲ್ಲೆಯಿಲ್ಲದ ಮಹಿಮೆಗೆ ಆಧಾರನಾದ, ಲಕ್ಷ್ಮಿಯನ್ನು ಧರಿಸಿದ; ಗೋವುಗಳ ಹಿಂಡಿನಲ್ಲಿ ಸುಖವಾಗಿ ವಾಸಿಸುವ, ಜನ್ಮರಹಿತನಾದ, ತಾವರೆಯಂತೆ ಕಂಗಳುಳ್ಳ, ನಾರಾಯಣನಂತೆ ಎಂದು ನಾರಾಯಣ ಪರವಾದ ಅರ್ಥ ಆ ಸಮುದ್ರವನ್ನೇ ಒಡ್ಯಾಣವಾಗಿಯುಳ್ಳ (ಸಮುದ್ರದಿಂದ ಸುತ್ತುವರಿಯಲ್ಪಟ್ಟ) ಭೂಮಿಯ ನಡುವೆ, ೧೯. ಬ್ರಹ್ಮನು ಲೋಕಗಳನ್ನು ಸೃಷ್ಟಿಸಲು ಪ್ರಾರಂಭಿಸಿದಾಗ, ಆತನು ಪೂಜಿಸುವ ಚಿನ್ನದ ಕಳಶವೋ ಎಂಬಂತೆ ಮೇರುಗಿರಿ ಕಂಗೊಳಿಸಿತು. ವಿಧವಿಧವಾಗಿ ಉಕ್ಕುವ ಗಂಗೆಯೇ ಕಲಶದಲ್ಲಿ ತುಂಬಿದ ನೀರು, ಚಂದ್ರಸೂರ್ಯರ ಬಿಂಬಗಳೇ ಕಲಶದ ಮೇಲಿಟ್ಟ ಚಿಗುರು, ನಕ್ಷತ್ರಗಳ ಸಮೂಹವೇ ಪೂಜಿಸುವ ಬಿಳಿಯ ಅಕ್ಷತೆಯ ಕಾಳು. ಏಳು ಸಮುದ್ರಗಳೇ ಆ ಕಲಶಕ್ಕೆ ಸುತ್ತಿದ ವಿಶೇಷವಾದ ದಾರ,

[1] ಚಕ್ರ = ಒಂದು ಬಗೆಯ ಮಳುವಿನ ಗೂಡು ಅಥವಾ ಸುಳಿ.

ಕಂ॥ ಕ್ಷೋಣಿಗೆ ವಿಶೇಷಪುಣ್ಯ
ಶ್ರೇಣಿಯೆನಲ್ ಗ್ರಾಮ ನಗರ ಖರ್ವಟ ಖೇಟ
ದ್ರೋಣಾಮುಖಂಗಳಿಂದ
ಕ್ಷೀಣಮೆನಲ್ ಮೆಱೆವುದಲ್ತೆ ಜಂಬೂದ್ವೀಪಂ ೨೦

ವ॥ ಆ ಜಂಬೂದ್ವೀಪದಲ್ಲಿ

ಕಂ॥ ಸಕಲಾವನಿಗಿದೆ ಮಣಿಮಯ
ಮುಕುರಮೆನಲ್ ಸಾನುರಾಗದಿಂ ಸುಕ್ಷೇತ್ರ
ಪ್ರಕರತೆಯಿಂದೆಸೆದಿರ್ಕುಂ
ಸುಕವಿಸ್ತುತ ಮಗಧದೇಶಮಬ್ಧಿ ನಿವಾಸಂ ೨೧

ಮ ಸ್ರ॥ ಸತತಂ ಮಾಂಗಲ್ಯದಿಂದಚ್ಯುತಸುಖಭರದಿಂ ಸಂತತಂ ಪದ್ಮಪೀಠಾ
ನ್ವಿತದಿಂ ಸೌಂದರ್ಯದಿಂ ಕೋಮಲಮೃದುತರದಿಂ ವಾರ್ಧಿಸಂಭೂತಸೀಮಾ
ಯುತದಿಂ ಸದ್ವೃಕ್ಷದಿವ್ಯಾಮೃತರಸ ಸಹಜಾತತ್ವದಿಂ ಕಾಮಜನ್ಮ
ಸ್ಥಿತಿಯಿಂ ಚೆಲ್ವಾದ ದೇಶಂ ಪರಿಕಿಪೊಡೆ ಮಹಾಲಕ್ಷ್ಮಿಯಂತೊಪ್ಪಿ ತೋರ್ಕುಂ ೨೨

ಆ ಮೇರು ಪರ್ವತದ ದಕ್ಷಿಣ ದಿಕ್ಕಿನ ಪ್ರದೇಶದಲ್ಲಿ, ೨೦. ಭೂಮಿಯಲ್ಲಿ ವಿಶೇಷವಾದ ಪುಣ್ಯದ ಕೇರಿಯೋ ಎಂಬಂತೆ ಕಾಣಿಸುವ ಗ್ರಾಮ ನಗರ ಖರ್ವಟ (ಬೆಟ್ಟದ ತಪ್ಪಲ ಹಳ್ಳಿ) ಖೇಟ (ಸಣ್ಣಹಳ್ಳಿ) ದ್ರೋಣಾಮುಖ (೪೦೦ಹಳ್ಳಿಗಳ ಕೇಂದ್ರನಗರ) ಇವುಗಳಿಂದ ಜಂಬೂ ದ್ವೀಪವು ಪ್ರಶಸ್ತವಾಗಿ ಮೆರೆಯುತ್ತದೆ. ಆ ಜಂಬೂದ್ವೀಪದಲ್ಲಿ– ೨೧. ಸುಕವಿಗಳಿಂದ ಹೊಗಳಲ್ಪಟ್ಟ ಸಮುದ್ರಮಧ್ಯದಲ್ಲಿರುವ, ಭೂಮಂಡಲಕ್ಕೆ ಅನುರಾಗದಿಂದ ತೋರಿಸುವ ರನ್ನಗನ್ನಡಿಯೋ ಎಂಬಂತೆ ಸುಂದರವಾದ ಮಗಧವೆಂಬ ದೇಶವು ಹೊಲಗದ್ದೆಗಳಿಂದ ಕೂಡಿ ಪ್ರಕಾಶಿಸುತ್ತದೆ, ೨೨. ಈ ಚೆಲುವಾದ ನಾಡು ಆಲೋಚಿಸಿದರೆ ಮಹಾಲಕ್ಷ್ಮಿಯಂತೆ ಪ್ರಕಾಶಿಸುತ್ತದೆ. ಅದು ಸದಾ ಮಂಗಳಕರವಾದುದು. ಶಾಶ್ವತವಾದ ಸುಖವನ್ನು ನೀಡತಕ್ಕುದು. ನಿಧಿಗೆ ಆಶ್ರಯವಾದುದು ಸೌಂದರ್ಯವುಳ್ಳದ್ದು. ಕೋಮಲವಾದುದು, ಸಮತಲವಾದ್ದು. ಸಮುದ್ರವೇ ಎಲ್ಲೆಯಾಗಿರುವುದು. ಉತ್ತಮವಾದ ಮರಗಳಿಂದಲೂ, ದಿವ್ಯವಾದ ಅಮೃತದಂಥ ನೀರಿನಿಂದಲೂ ಕೂಡಿದುದು. ಕಾಮವನ್ನು ಹೆಚ್ಚಿಸುವ ಪರಿಸರವುಳ್ಳದ್ದು–ಮಹಾಲಕ್ಷ್ಮಿಯ ಪರವಾದ ಅರ್ಥ–ಸದಾಮಂಗಳ ಸ್ವರೂಪಳು, ನಾರಾಯಣನ ಸಂಗದಿಂದ ಹೆಚ್ಚು ಸುಖವುಳ್ಳವಳು. ತಾವರೆಯ ಪೀಠದಲ್ಲಿ ಕುಳಿತವಳು. ಸೌಂದರ್ಯ, ಕೋಮಲತೆ ಮತ್ತು ಮಾರ್ದವದಿಂದ ಕೂಡಿದವಳು. ಸಮುದ್ರದಲ್ಲಿ ಕಲ್ಪವೃಕ್ಷ ಮತ್ತು ಅಮೃತದೊಡನೆ ಹುಟ್ಟಿದವಳು. ಮನ್ಮಥನಿಗೆ ಜನ್ಮವಿತ್ತವಳು. (ಶ್ಲೇಷಾರ್ಥದಿಂದ ದೇಶಕ್ಕೆ ಮಹಾ

ವ॥ ಮತ್ತಮುದ್ವೃತ್ತ[1]ಮಾರ್ಗಂ ಕವಿತೆಯೊಳ್ ಕಾಯ್ದುರಿ[2]ಯೆಂಬುದು ವೃಕ್ಷದೊಳ್ ಪೊಡೆ[3]ಯೆಂಬುದು ಕುಕ್ಷಿಯೊಳ್ ಬಯ್ಪು[4]ದು ನಿಕ್ಷೇಪ ಭಾಷೆಯೊಳ್ ಕಟ್ಟೆ[5]ಂಬುದು ರಸವಿಶೇಷದೊಳ್ ರಾಗ[6]ದ್ವೇಷಂ ವಿರಹಿಗಳೊಳ್ ಬಲ[7]ಪ್ರವರ್ತನಂ ತೆಲ್ಲಿಗರೊಳ್ ತಮಃಸ್ತ[8]ಂಕುಳಂ ಬಹುಳ ಪಕ್ಷದೊಳ್ ಮಿತ್ರ[9]ದ್ವೇಷಂ ಗೂಗೆಗಳೊಳ್ ವಿಶ್ವಾಸ[10]ಭಂಗಂ ತಿದಿಗಳೊಳ್ ನಿಂದಿ[11]ಸುವುದು ಯುದ್ಧದೊಳ್ ಭೋಗ[12]ಭಂಗ ಹಾವಡಿಗರೊಳ್ ಹಿರಣ್ಯಾಕ್ಷ[13]ದಂಡಂ ವರಾಹಾವತಾರದೊಳ್ ಆಕ್ಷೇ[14]ಪಮಲಂಕಾರದೊಳ್ ಅರ್ಥ[15]ವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು ಅಂತುಮಲ್ಲದೆಯುಂ

ಲಕ್ಷ್ಮಿಯ ಹೋಲಿಕೆ) ವ॥ ಮತ್ತು ನಡತೆ ಮೀರಿ ನಡೆಯುವುದು ಆ ನಾಡಿನಲ್ಲಿರಲಿಲ್ಲ ಕವಿತೆಯಲ್ಲಿ ಮಾತ್ರ ನೆಲಸಿದ್ದಿತು. ಹೀಗೆಯೇ ಕೋಪಿಸಿಕೊಂಡು ಇರಿ ಎಂಬ ಮಾತು ಕೇವಲ ಮರದಲ್ಲಿ ವ್ಯವಹರಿಸಲಾಗುತ್ತಿತ್ತು. ಹೊಡೆ ಎಂಬುದು ಹೊಟ್ಟೆಯೆಂಬರ್ಥದಲ್ಲಿ ಮಾತ್ರ, ಬಯ್ಯುವುದು ಎಂಬುದು ಹಣವನ್ನು ಬಚ್ಚಿಡುವುದು ಎಂಬರ್ಥದಲ್ಲಿ ಮಾತ್ರ. ಕಟ್ಟು ಎಂಬ ಪದವು ಬೇಳೆ ಮೊದಲಾದುವನ್ನು ಬೇಯಿಸಿದ ತಿಳಿಯಾದ ರಸದಲ್ಲಿ ಮಾತ್ರ. ರಾಗ ದ್ವೇಷಗಳು ಪರಸ್ಪರ ಅಗಲಿದ ಪ್ರಣಯಿಗಳ ವಿಷಯದಲ್ಲಿ ಮಾತ್ರ, ದುಷ್ಟತನವನ್ನು ತೋರಿಸುವುದು ಎಣ್ಣೆಮಾರುವವರಲ್ಲಿ ಮಾತ್ರ, ತಮಸ್ಸಿನ (ಅಜ್ಞಾನ) ಸಮೂಹವು ಕೃಷ್ಣಪಕ್ಷದಲ್ಲಿ ಮಾತ್ರ, ಮಿತ್ರದ್ವೇಷವು ಗೂಬೆಗಳಲ್ಲಿ ಮಾತ್ರ. ವಿಶ್ವಾಸ ಭಂಗವು ಚರ್ಮದ ತಿದಿಗಳಲ್ಲಿ ಮಾತ್ರ. ನಿಂದಿಸುವುದು ಯುದ್ಧದಲ್ಲಿ ಮಾತ್ರ. ಸುಖಕ್ಕೆ ಅಡ್ಡಿಯು ಹಾವಾಡಿಗರ ವಿಷಯದಲ್ಲಿ ಮಾತ್ರ. ಹಿರಣ್ಯಾಕ್ಷ ಚಿನ್ನದ ನಾಣ್ಯಗಳ ದಂಡವು ವರಾಹಾವತಾರದಲ್ಲಿ ಮಾತ್ರ, ಆಕ್ಷೇಪಿಸುವುದು ಅಲಂಕಾರದಲ್ಲಿ ಮಾತ್ರ ಹೊಗಳಿಕೆಯ ಮಾತು ಸ್ತೋತ್ರಗಳಲ್ಲಿ ಮಾತ್ರ ಇತ್ತಲ್ಲದೆ ಈ ನಾಡಿನಲ್ಲಿರಲಿಲ್ಲ ಎಂದು ಈ ನಾಡು ಪ್ರಸಿದ್ಧವಾಗಿದೆ. ಅಷ್ಟೇ ಅಲ್ಲದೆ— ವಿರೋಧವನ್ನು ಪರಿಹರಿಸುವ ಬಗೆ—ಕ್ರಮವಾಗಿ ಉತ್ತಮವಾದ ಗೌಡೀ[1] ರೀತಿ, ಕಾಯ್ಗ[2]ಳನ್ನು ಬಿಡಿಸುವುದು, ಹೊಟ್ಟೆ[3], ಬಚ್ಚಿಡು[4]ವುದು, [5]ಸಾರ ಆಸಕ್ತಿ [6]ನಿರಾಸಕ್ತಿಗಳು, ಗಾಣ[7] ತಿರುಗಿಸುವುದು, ಕತ್ತಲೆಯ[8] ಸಮೂಹ, ಸೂರ್ಯ[9] ದ್ವೇಷ, ತಿದಿಯು[10]ನ್ನು ಒತ್ತುವಾಗ ಗಾಳಿ ನಿಂತು ನಿಂತು ಹೆಚ್ಚು ಕಡಿಮೆಯಾಗುವುದು. ನಿಂದಿ[11]ಸುವುದು, ಹಾವಿನ[12] ದೇಹವು ಬಗ್ಗುವುದು ಹಿರಣ್ಯಾಕ್ಷ[13]ನ ವಧ ಆಕ್ಷೇ[14]ಪವೆಂಬ ಅಲಂಕಾರ, ಪೋಷಕವಾದ[15] ಹೊಗಳಿಕೆಯ ಮಾತು. ಎಂದು ಅರ್ಥಮಾಡಿಕೊಳ್ಳಬೇಕು. ಈ ನಾಡಿನಲ್ಲಿ ಯಾವ ದೋಷವೂ ಇರಲಿಲ್ಲವೆಂದರ್ಥ,

ಮ॥ ರತಿಲೀಲಾಭವನಂ ವನಂ ಸತತಸಂಖ್ಯೋಜ್ಜೀವನಂ ಜೀವನಂ
ಶ್ರುತಿಚಿನ್ತಾ ಮತಿಭಾಜನಂ ಜನಮನಂಗಾಸ್ತ್ರಾಕುಲಂ ಸ್ತ್ರೀಕುಲಂ
ನುತಸಸ್ಯಾದಿ ಸಮುದ್ಗತಂ ಧರಣಿಲಕ್ಷ್ಮೀಬಂಧುರಂ ಬಂಧು ರಂ
ಜಿತ ರಾಜನ್ಯಕಮೆಂದೊಡಾ ವಿಷಯದೊಳ್ಪಂ ಬಣ್ಣಿಸಲ್ ಬರ್ಕುಮೇ ೨೩

ವ॥ ಅಂತಾ ಮಗಧದೇಶಕ್ಕೆ ಭೂಷಣವೆನಿಸಿ

ಕಂ॥ ನಯನಾನಂದಕರಂ ಸುಖ
ಚಯಸಹಿತಂ ನಿಖಿಲದೇವತಾಯತನ ಸುಖ
ಪ್ರಯುತಂ ಸಜ್ಜನಚಿತ್ತ
ಪ್ರಿಯಮೆನಲೆಸೆದಿರ್ಪುದಧಿಕಮೆನೆ ಕುಸುಮಪುರಂ ೨೪

ಮ॥ ಪ್ರಕಟಂಬೆತ್ತಿರ್ಪ ಪೊಂಗೋಂಟೆಯ ತೆನೆಯೆಸಳ್ಗಳ್ ಕೇಸರಂ ಸೌಧಶಾಲಾ
ನಿಕರಂ ರಾಜಾಲಯಂ ಕರ್ಣಿಕೆ ವಿವಿಧಪುರಂಧ್ರೀಲಸತ್ಸೌಕುಮಾರ್ಯಂ
ಮಕರಂದಂ ಮಂದಿವೃಂದಂ ಮಧುಕರಪಟಲಂ ತಾನೆನಲ್ಕೊಪ್ಪುಗುಂ ಸಾ
ರ್ಥಕನಾಮಂ ರಂಜಿಸಲ್ ತತ್ಕುಸುಮಪುರಿ ಜಗತ್‌ಖ್ಯಾತಿಯಿಂದಂ ನಿತಾಂತಂ ೨೫

೨೩. ಆ ನಾಡಿನ ಸೊಬಗನ್ನು ವರ್ಣಿಸಲು ಸಾಧ್ಯವೇ ? ಆ ನಾಡಿನ ವನವು ರತಿಯ ಲೀಲಾಭವನವಾಗಿದ್ದಿತು. ಅಲ್ಲಿಯ ಜೀವನವು ಸತತವಾದ ಜ್ಞಾನಕ್ಕೆ ಪೋಷಕವಾಗಿತ್ತು. ಜನರು ವೇದ ವಿಚಾರಗಳಲ್ಲಿ ತೊಡಗಿದ ಸೂಕ್ಷ್ಮಬುದ್ಧಿಯುಳ್ಳವರು. ಹೆಂಗಸರು ಕಾಮನ ಅಸ್ತ್ರಗಳಿಂದ ಕಳವಳವುಳ್ಳವರಾಗಿದ್ದರು. ನೆಲವು ಉತ್ತಮವಾಗಿ ಬೆಳೆದ ಸಸ್ಯಗಳಿಂದ ಕೂಡಿತ್ತು. ಬಂಧುಗಳಿಂದ ಸಂತೋಷದಿಂದಿರುವ ಕ್ಷತ್ರಿಯರು ಶ್ರೀಮಂತರಾಗಿದ್ದರು, ಹಾಗೆ ಆ ಮಗಧ ದೇಶಕ್ಕೆ ಅಲಂಕಾರವೆನಿಸಿ ೨೪. ಆ ಶ್ರೇಷ್ಠವಾದ ಕುಸುಮಪುರವು ಕಂಗಳಿಗೆ ಆನಂದವನ್ನು ಕೊಡುತ್ತಾ ಸುಖ ಸಮೂಹದಿಂದ ಕೂಡಿತ್ತು. ಅನೇಕ ದೇವಾಲಯಗಳಿಂದ ಸುಖಕರವಾಗಿತ್ತು. ಸಜ್ಜನರ ಮನಸ್ಸಿಗೆ ಪ್ರಿಯವಾಗಿತ್ತು. ಹೀಗೆ ಆ ಕುಸುಮಪುರವು ಪ್ರಕಾಶಿಸುತ್ತಿತ್ತು. ೨೫. ಆ ಕುಸುಮಪುರವು ಸಾರ್ಥಕವಾದ ಹೆಸರಿನಿಂದ ಜಗತ್ತಿನಲ್ಲಿ ಖ್ಯಾತಿಯನ್ನು ಪಡೆದು ಪ್ರಕಾಶಿಸುತ್ತಿದ್ದಿತು, ಸ್ಪಷ್ಟವಾಗಿ ಎದ್ದು ತೋರುವ ಕೋಟೆಯ ತೆನೆಗಳು (ಪ್ರಾಕಾರದ ತುದಿ) ಹೂವಿನ ಎಸಳುಗಳು ಉಪ್ಪರಿಗೆಗಳ ಗುಂಪು ಕೇಸರಗಳು. ಅರಮನೆಯು ಹೂವಿನ ನಡುವೆ ಇರುವ ಬೀಜ ಕೋಶ. ವಿವಿಧ ಸುಮಂಗಲಿಯರ ಪ್ರಕಾಶಮಾನವಾದ ಸೌಕುಮಾರ್ಯವು ಮಕರಂದ ರಸ. ಸ್ತುತಿಪಾಠಕರು ದುಂಬಿಗಳು. ಹೀಗೆ ಕುಸುಮಪುರವು ನಿಜವಾಗಿ ಕುಸುಮ

ಚಂ॥ ತಳಿರ ತೊಡಂಬೆಯಿಂ ತಳೆದ ಮಾಮರನಳ್ಕೆಗೊಂಬಿನೊಳ್
ಕಳರವದಿಂ ಕುಕಿಲ್ವ ಮಱಿಗೋಗಿಲೆ ಪೂಗುಡಿಭಾರದಿಂ ಪೊರ
ಳ್ವೆಳಲತೆಯಾ ಲತಾವಳಿಯಿಡುಂಕುೞೊಳಾವಗಮಾಡಿಪಾಡುತಿ
ರ್ಪಳಿಗಳಪಿಂಡು ರಂಜಿಸುವಿನಂ ಮೆಱೆಗುಂ ಪುರದಾ ಬಹಿರ್ವಣಂ ೧೬

ವ॥ ಅದಲ್ಲದೆಯುಂ

ದೆಸೆಗೆ ಕವಿಲ್ತು ಗಂಟಡಿದು ನುಣ್ಬಸಿಱಿಂ ಪೊರೆಯೇಱಿ ಕೊರ್ಬಿಯು
ರ್ಬಿಸಿ ಪೊಡೆದುಂಬಿಪಾಲ್ದೆನೆಗಳುರ್ಬೆ ಕರಂ ತಲೆವಾಗಿ ಬಿಣ್ಪಿನಿಂ
ದೆಸೆವುವು ನೀಳ್ದ ತಮ್ಮ ಮುಖದೊಪ್ಪಮನೊಪ್ಪಿರೆ ನೀರ್ಗಳೊಳ್ ನಿರೀ
ಕ್ಷಿಸುವವೊಲಾವಗಂ ಕಣಿಶಸಂತತಿಗಳ್ ಕಳಮಪ್ರದೇಶದೊಳ್ ೧೭

ಉ॥ ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ ಕುಂ
ದೊಂದದ ಸೋಮಶಾಖೆ ತವಿಲಾಗದ ಕೆಂಗೊನೆವಾೞ್ ಸರ್ವಸಾ
ಧ್ಯಂದಲೆನಿಪ್ಪಕೇಸರಿ ನಿರಂತರಮೊಪ್ಪುವ ದಮ್ಮಗುತ್ತಿಯೆಂ
ಬಂದದನೇಕ ನಾಮದೆಸೆಗುಂ ಮೃದುಬಂಧುರ ಗಂಧಶಾಲಿಗಳ್ ೧೮

ಪುರವೇ ಆಗಿತ್ತು. ೧೬. ಆ ಪುರದ ಹೊರಗಿನ ಉದ್ಯಾನವು ಮನೋಹರವಾಗಿದೆ, ಅಲ್ಲಿ ಮಾವಿನ ಮರಗಳೆಲ್ಲ ಚಿಗುರಿನ ಗೊಂಚಲುಗಳಿಂದ ತುಂಬಿವೆ. ಆ ಮರಗಳ ಕೊಂಬೆಗಳಲ್ಲಿ ಕುಳಿತು ಕೋಗಿಲೆಯ ಮರಿಗಳು ಇಂಪಾಗಿ ಸದ್ದು ಮಾಡುತ್ತಿರುತ್ತವೆ. ಎಳಬಳ್ಳಿಗಳು ಹೂವಿನ ಗೊಂಚಲುಗಳ ಭಾರದಿಂದ ಜಗ್ಗಿರುತ್ತವೆ. ಆ ಬಳ್ಳಿಗಳ ಇರುಕಲಿನಲ್ಲಿ ಯಾವಾಗಲೂ ದುಂಬಿಗಳು ಹಾಡುತ್ತಿರುತ್ತವೆ. ವ॥ ಅದೂ ಅಲ್ಲದೆ— ೧೭. ಭತ್ತದ ಗದ್ದೆಗಳಲ್ಲಿ ತೆನೆಗಳ ಗುಂಪು ದಿಕ್ಕುಗಳಲ್ಲಿ ಹೊಂಬಣ್ಣವನ್ನು ಹರಡುತ್ತಿದೆ. ಪರಸ್ಪರ ಹೆಣೆದುಕೊಂಡು ನಯವಾದ ಫಲದಿಂದ ಭಾರವಾಗಿ ಕೊಬ್ಬಿ ಬೆಳೆದ ಹೊಡೆಗಳಲ್ಲಿ ಹಾಲ್ದೆನೆಗಳು ತುಂಬಿವೆ. ಅವುಗಳ ಭಾರದಿಂದ ತಗ್ಗಿಸಿದ ಆ ತೆನೆಗಳು ತಮ್ಮ ನೀಳವಾದ ಮುಖಗಳ ಅಂದವನ್ನು ಯಾವಾಗಲೂ ನೀರಿನಲ್ಲಿ ನೋಡಿಕೊಳ್ಳುತ್ತಿರುವಂತೆ ಪ್ರಕಾಶಿಸುತ್ತವೆ. ೧೮. ದೋಷವಿಲ್ಲದ ಚಂದ್ರಲೇಖೆ, ಸ್ವಲ್ಪವೂ ಕಾಂತಿಗುಂದದೆ ಪ್ರಕಾಶಿಸುವ ಪುಷ್ಪಮಾಲೆ, ಶ್ರೇಷ್ಠವಾದ ಸೋಮಶಾಖೆ, ಕೆಡದ ಕೆಂಗೊನೆವಾಳಿ, ಎಲ್ಲರಿಗೂ ಪಡೆಯಲು ಸಾಧ್ಯವಾದುದೆಂದು ಹೆಸರುವಾಸಿಯಾದ ಕೇಸರಿ, ಎಡೆಬಿಡದೆ ಒಪ್ಪುವ ದಮ್ಮಗುತ್ತಿ ಹೀಗೆ ಅನೇಕ ಬಗೆಯ ಹೆಸರುಗಳಿಂದ ಮೃದುವೂ ಸುಂದರವೂ ಸುವಾಸನೆಯುಳ್ಳದ್ದೂ ಆದ ಭತ್ತಗಳು ಪ್ರಕಾಶಿಸುತ್ತವೆ.

ಚಂ॥ ಸೆಳೆನಡು ಬಳ್ಕೆ ತೋಳ್ಮೊದಲ ನುಣ್ಬೊಗರೊಪ್ಪೆ ಘನಸ್ತನಂಗಳ
ವ್ವಳಿಸೆ ನಿಮಿರ್ದ್ದವೇಣಿ ಕದಪಂ ಪುಗೆ ಮುಂದೆಡವಜ್ಜೆಯೀಱ ಕೈ
ಗಳಬಳೆ ಮೆಲ್ಪಿನಿಂದುಲಿಯೆ ಸಂಭ್ರಮದಿಂ ನಸುಬಾಗಿ ಬೀಸುಗ
ಲ್ಗಳನಿಡುತಿರ್ಪ ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ ೨೯

ಮ॥ ಕಡುಚೆಲ್ವಿಂ ಮೆಱೆದಿರ್ಪ ಶಾಲಿವನಮಂ ಪಾಯಲ್ಕೆ ಕೀರಂ ಮೃಗಂ
ಗಡಣಂಗೊಂಡು ಬರಲ್ಕೆ ಸೋವಬಗೆಯಂ ಮಾಣ್ದಿರ್ಪರೇಕೆಂದೆನಲ್
ನುಡಿಯಂ ನೋಟಮನೆಮ್ಮೊಳೊಲ್ದು ಪದಪಿಂ ಮುಂ ಕಲ್ತಲಂಪಿಂಗೆ ಬಂ
ದೊಡೆ ಬಿರ್ದೂಟಮಿದೆಂಬ ನೇಹದೊಲವಿಂ ತತ್ಪಾಮರೀ ಸಂಕುಳಂ ೩೦

ಕಂ॥ ಜಡಿದು ಗಿಳಿಸೋವ ಹರಯದ
ಮಡದಿಯರ ಶರೀರ ವರ್ಣ ರೂಪಂ ಗಂಧಂ
ನಡುವಿನ ಸಣ್ಣಂ ತಮ್ಮೊಳ
ಮೆಡೆಗೊಂಡವೊಲಿರ್ಪ ನೆಲ್ಗಳೇನೊಪ್ಪಿದುವೋ ೩೧

೨೯. ಭತ್ತದ ಗದ್ದೆಗಳಲ್ಲಿ ಎಡ ಹೆಜ್ಜೆಯನ್ನು ಮುಂದಿಟ್ಟುಕೊಂಡು, ಸಂಭ್ರಮದಿಂದ ತುಸ ಬಗ್ಗಿ ಕಲ್ಲುಗಳನ್ನು ಬೀಸಿ ಎಸೆಯುತ್ತಿದ್ದ ಮುಗ್ಧೆಯರು ಎಲ್ಲರನ್ನೂ ತಮ್ಮ ಕಡೆ ಆಕರ್ಷಿಸುತ್ತಿದ್ದರು. ಆಗ ಅವರ ತೆಳುವಾದ ಸೊಂಟ ಬಳುಕುತ್ತಿತ್ತು. ಕಂಕುಳ ನಯವಾದ ಕಾಂತಿಯು ಹೊಳೆಯುತ್ತಿದ್ದಿತು. ಪೀನಸ್ತನಗಳು ಒಂದಕ್ಕೊಂದು ತಾಗುತ್ತಿದ್ದವು. ಮೇಲಕ್ಕಿದ್ದ ಜಡೆಯು ಕೆನ್ನೆಗೆ ತಗಲುತ್ತಿತ್ತು. ಕೈಬಳೆಗಳು ಮೃದು ಮಧುರವಾಗಿ ದನಿಗೊಡುತ್ತಿದ್ದುವು, ೩೦. ಬಹು ಸುಂದರವಾಗಿ ಪ್ರಕಾಶಿಸುತ್ತಿದ್ದ ಬತ್ತದ ಗದ್ದೆಗೆ ನುಗ್ಗಲು ಗಿಳಿಗಳೂ ಜಿಂಕೆಗಳೂ ಗುಂಪುಗೂಡಿಬಂದರೆ ಆ ಮುಗ್ಧೆಯರು ಅವನ್ನು ಓಡಿಸುವ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ. ನುಡಿಯನ್ನೂ ನೋಟವನ್ನೂ ಮೊದಲು ತಮ್ಮಿಂದ ಕಲಿತು ಆ ಸಂತೋಷವನ್ನು ತೋರಲು ಬಂದಿರುವುದರಿಂದ ಇದು ಒಂದು ಔತಣ ಎಂದು ತಿಳಿದ ಆ ಪಾಮರಿಯರಲ್ಲಿದ್ದ ಸ್ನೇಹಪೂರ್ಣವಾದ ಪ್ರೀತಿಯೇ ಅದಕ್ಕೆ ಕಾರಣವೆನ್ನಬಹುದು. ೩೧. ವೇಗವಾಗಿ ತಿರುಗುತ್ತಾ ಗಿಳಿಗಳನ್ನು ಓಡಿಸುವ ಹರೆಯದ ಹೆಣ್ಣುಗಳ ಶರೀರದ ಬಣ್ಣ ರೂಪ ಗಂಧ ಸೊಂಟದ ತೆಳುವು ಇವು ತಮ್ಮಲ್ಲಿಯೂ ಸೇರಿಕೊಂಡಂತೆ ಕಾಣಿಸುವ ಭತ್ತಗಳದೇನು ಸೊಗಸಾಗಿ ಕಾಣುತ್ತವೆ

ವ॥ ಅಲ್ಲಿಂ ಬಟಿಯಿಂ

ಕಂ॥ ಇದಪೂರ್ವಂ ಪುರರಿಪುವೆಂ
ಬುದನೀಶನೊಳೀಯದಧಿಕ ಸಂಪದವಂ ಮಾ
ಟ್ಪುದೆನುತ್ತೆ ಗಂಗೆ ಪುರದಂ
ಪ್ರದಕ್ಷಿಣಂಗೆಯ್ಯುತಿರ್ಪಳೆನಲಗಟಿಸೆಗುಂ ೩೨

ಪುರದೊಳ್ ಭೋಗಿಗಳೆನಿತುಂ
ನೆರೆದಿರ್ದಪರಾನವರ್ಗೆ ರಕ್ಷಕನಪ್ಪೆಂ
ತೆರಳದೆನುತ್ತುಂ ಶೇಷಂ
ಪರಿವೇಷ್ಟಿಸಿದಂತೆ ರಂಜಿಕುಂ ಪ್ರಾಕಾರಂ ೩೩

ಗಗನೇಚರಿಯರ್ ಶ್ರಮಮಂ
ಮಿಗೆ ನೂಂಕಲ್ ನಿಲ್ವುದರ್ಕಿವೆಮ್ಮೆಮ್ಮಯ ಠಾ
ವುಗಳೆಂದು ಕುಱುಪುಗೊಂಡಾ
ಬಗೆಗಿಟ್ಟಂತೆಸೆವುವಿದಱ ಕೋಂಟೆಯ ತೆನೆಗಳ್ ೩೪

ಪಗೆಗಳ ಶೃಂಗಲವಂ ದೊಣೆ
ಗೆಗೆತ್ತಿ ತತ್ಪುರವರೇಶನಾನಂದಲತಾ
ಳಿಗೆಗಳ ಪರ್ಚಪುದೆಂತುಂ
ಬಗೆಗೆನಿತುಂ ಬಿಂಕದಿಂದೆನಿಡುಡೆಂಕಣಿಗಳ್ ೩೫

ವ॥ ಅಲ್ಲಿಂದ ಮುಂದೆ— ೩೨. ಪುರರಿಪುವೆಂಬ ಶಬ್ದವನ್ನು ಶಿವನಿಗೆ ಈಯದೆ ಈ ಪುರವೇ ಅಧಿಕವಾದ ಸಂಪತ್ತನ್ನು ಕೊಡಬಲ್ಲದು ಎಂದು ಪುರವನ್ನು ಗಂಗೆಯು ಪ್ರದಕ್ಷಿಣೆ ಮಾಡುತ್ತಿರುವಳೋ ಎಂಬಂತೆ ಕಂದಕವು ಪ್ರಕಾಶಿಸುತ್ತದೆ. ಇದು ಅಪೂರ್ವವಾಗಿದೆ, ಸಕಲ ಸಂಪದ್ಭರಿತವಾದ ಈ ಪುರವಿರುವಾಗ ಶಿವನು ಪುರರಿಪುವಾಗುವುದು ಹೇಗೆ ? ಎಂದು ಆಶಯ, ೩೩. ಆ ಕುಸುಮಪುರದ ಸುತ್ತ ಬಳಸಿರುವ ಕೋಟೆಯು 'ಈ ಪುರದಲ್ಲಿ ಭೋಗಿಗಳೆಲ್ಲರೂ (1ಹಾವುಗಳು 2 ಸುಖಿಗಳು) ನೆರೆದಿದ್ದಾರೆ. ನಾನು ಅವರಿಗೆ ಸ್ಥಿರವಾಗಿ ರಕ್ಷಕನಾಗಿರುತ್ತೇನೆ' ಎಂದು ಯೋಚಿಸಿ ಆದಿಶೇಷನೇ ಬಳಸಿಕೊಂಡಿರುವಂತೆ ಕಾಣುತ್ತದೆ. ೩೪. ಆಕಾಶದಲ್ಲಿ ಸಂಚರಿಸುವ ಅಪ್ಸರ ಸ್ತ್ರೀಯರು ಆಯಾಸವನ್ನು ಕಳೆದುಕೊಳ್ಳಲು ನಿಲ್ಲುವುದಕ್ಕೆ ಇವೇ ನಮ್ಮ ನಮ್ಮ ಸ್ಥಾನಗಳು ಎಂದು ಗುರುತು ಹಿಡಿಯುವುದಕ್ಕಾಗಿ ಇಟ್ಟಿರುವರೋ ಎಂಬಂತೆ ಆ ಪುರದ ಕೋಟೆಯ ಶಿಖರಗಳು ಪ್ರಕಾಶಿಸುತ್ತವೆ. ೩೫. ಶತ್ರುಗಳ ಕುತ್ತಿಗೆಗಳ ಸಾಲನ್ನು ಕುಂಡವಾಗಿ ಮಾಡಿಕೊಂಡು ಬೆಳೆಯುವ, ಆ ರಾಜನ ಆನಂದಲತೆಗಳನ್ನು ಹಬ್ಬಿಸಲು ನಿಲ್ಲಿಸಿರುವ ಕಂಬಗಳೋ ಎಂಬಂತೆ ಧ್ವಜಸ್ತಂಭಗಳು ಶೋಭಿಸುತ್ತಿದ್ದವು.

ವ॥ ಅಂತೆಸೆವ ಪುರದೊಳ್

ಉ॥ ಬೆಟ್ಟವನೇಱಿ ನೀರೊಳಗೆ ಪೊಕ್ಕು ತೃಣಂಬಿಡಿದೆಂಜಲಾಗಿ ನಾ
ಣ್ಗೆಟ್ಟನಿತಲ್ಲದೀ ಪುರಚತುಷ್ಪಥಮಧ್ಯದ ರತ್ನಶಾಲೆಯೊಳ್
ಕಟ್ಟಿಯದೇಕೆ ತೂಗುವರೊ ಮಾಣಿಕವಂ ಪೊಸಮುತ್ತನೊಳ್ಪನೇ
ರ್ಪಟ್ಟುರು ನೀಲಮುಂ ತೊಳಪ ಪಚ್ಚೆಗಳಂ ಮಣಿಗಾಱರಾವಗಂ ೩೬

ವ॥ ಅಂತು ನಿಂದೆಯುನಾಂತು ಸ್ತುತಿವೆತ್ತ ಮಣಿಗಾಱರ ಪಸರದಿಂ ಮುಂದೆ

ಕಂ॥ ಸಲ್ಲಲಿತ ರಾಜಹಂಸ
ರ್ಗಲ್ಲದೆ ಸುತ್ತಲ್ಕಮರಿದೆನಿಪ್ಪಂಬರಮಂ
ನಿಲ್ಲೆಂದು ನಿಲಿಸಿ ಪುರದವ
ರೆಲ್ಲರ್ ಕೊಳಲೆಸೆವುವಂಬರಂಗಳ ಪಸರಂ ೩೭

ಅತಿಶಯವೆನಲುತ್ಪತ್ತಿ
ಸ್ಥಿತಿಲಯಮಂ ತೋರ್ಪವೀಗಳೆಂಬಂತೆ ಜನ
ಪ್ರತಿಬಿಂಬಮನಾಂತದಧಿಕ
ದ್ಯುತಿಯಿಂದೊಪ್ಪಿದುದು ಕಂಚ(ಚು)ಗಾಱರ ಪಸರಂ ೩೮

೩೬. ಬೆಟ್ಟವನ್ನು ಹತ್ತಿ, ನೀರಿನಲ್ಲಿ ಮುಳುಗಿ, ಹುಲ್ಲನ್ನು ಹಿಡಿದು ಎಂಜಲಾಗಿ ನಾಚಿಕೆಯನ್ನು ಕಳೆದುಕೊಂಡು ಅವಮಾನಪಡುತ್ತಿರುವುದು ಸಾಲದೆಂಬಂತೆ ಈ ನಗರದ ಚೌಕದ ನಡುವೆ ಇರುವ ರತ್ನದಂಗಡಿಗಳಲ್ಲಿ ರತ್ನ ವ್ಯಾಪಾರಿಗಳು ಮಾಣಿಕ್ಯಗಳನ್ನೂ ಹೊಸ ಮುತ್ತುಗಳನ್ನೂ ಸೊಗಸಾದ ನೀಲರತ್ನಗಳನ್ನೂ ಹೊಳೆಯುವ ಪಚ್ಚೆ ರತ್ನಗಳನ್ನೂ ಯಾವಾಗಲೂ ಎಲ್ಲರಿಗೂ ಕಾಣಿಸುವಂತೆ ಅದೇಕೆ ಕಟ್ಟಿ ತೂಗುಹಾಕುತ್ತಾರೆಯೋ ? 1. ರತ್ನಗಳು ಬೆಟ್ಟದಲ್ಲಿ ಸಿಕ್ಕುತ್ತವೆ. ಮುತ್ತು ನೀರಿನಲ್ಲಿ ಸಿಗುತ್ತದೆ. ಹವಳ ಬಳ್ಳಿಗಳಲ್ಲಿ ಬಿಡುತ್ತದೆ. 2. ಮಣಿಕಾರರು ದಡ್ಡರೆಂದು ನಿಂದೆ. 3. ರತ್ನಗಳು ರತ್ನವ್ಯಾಪಾರಿಗಳಲ್ಲಿ ಸಮೃದ್ಧವಾಗಿದ್ದುವೆಂದು ಪ್ರಶಂಸೆ. ವ॥ ಹಾಗೆ ನಿಂದೆಯನ್ನು ಹೊಂದಿ ಹೊಗಳಿಕೆಯನ್ನೂ ಪಡೆದ ರತ್ನ ವ್ಯಾಪಾರಿಗಳ ಅಂಗಡಿಗಳ ಸಾಲಿನಿಂದ ಮುಂದೆ. ೩೭. 1. ಮನೋಹರವಾದ ಚಂದ್ರಸೂರ್ಯರಲ್ಲದೆ ಉಳಿದವರಿಗೆ ಸುತ್ತಲು ಆಗದು ಎಂದೆನಿಸುವ ಅಂಬರ (ಆಕಾಶ)ವನ್ನು ಪುರದ ಜನರೆಲ್ಲರೂ ಕೊಳ್ಳಲಿ ಎಂದು, ಪಡೆದು ನಿಲ್ಲಿಸಿದಂತೆ ಅಂಬರಗಳ (ವಸ್ತ್ರಗಳ) ಅಂಗಡಿಗಳು ಪ್ರಕಾಶಿಸುತ್ತವೆ. 2. ಶ್ರೇಷ್ಠರಾದ ರಾಜರಲ್ಲದೆ ಉಳಿದವರಿಗೆ ಉಡಲು ಸಾಧ್ಯವಾಗದ ಶ್ರೇಷ್ಠವಾದ ವಸ್ತ್ರಗಳನ್ನು ಪುರಜನರೆಲ್ಲರಿಗೂ ಕೊಂಡು ಕೊಳ್ಳಲು ಅನುಕೂಲವಾಗುವಂತೆ ತಡೆದು ನಿಲ್ಲಿಸಿರುವಂತೆ ಬಟ್ಟೆಯ ಅಂಗಡಿಗಳು ಪ್ರಕಾಶಿಸುತ್ತವೆ ಎಂದರ್ಥಮಾಡಿ ವಿರೋಧವನ್ನು ಪರಿಹರಿಸಬೇಕು. ೩೮. ಅತಿಶಯವಾದ ರೀತಿಯಲ್ಲಿ ಸೃಷ್ಟಿ ಸ್ಥಿತಿಲಯಗಳನ್ನು ಈಗಲೇ ತೋರಿಸುವೆವು ಎಂದು ಹೇಳುವಂತೆ ಜನರ ಪ್ರತಿಬಿಂಬಗಳನ್ನೊಳಗೊಂಡ ಕಂಚುಗಾರರ ಅಂಗಡಿಗಳ ಸಾಲು ಅಧಿಕ

ಮ॥ ಬದಿಯುತ್ಪತ್ತಿಯಬೀಜಮಂ ಹರಿಜಗತ್ಸಂಪಾಲನಾ ರತ್ನಮಂ
ಮದನಾರಾತಿ ದಿಗಂಬರತ್ವಮಟಿಯಲ್ ಸದ್ವಸ್ತ್ರಮಂ ಭಾಸ್ಕರಂ
ಮೃದು ಶೈತ್ಯಾಪಧಿಯಂ ಶಶಾಂಕನೊಲದಿಂದಂ ರಾಜಯಕ್ಷ್ಮಕ್ಕೆ ಮಾ
ಡಿದ ಮರ್ದಂ ಪಡೆವುಜ್ಜುಗಂದಳೆವರಂತಾ ಸೆಟ್ಟಿಗುರ್ತರ್ಗಳೊಳ್ ೩೯

ವ॥ ಅಲ್ಲಿಂ ಮುಂದೆ

ಉ॥ ಪೂಗೊಳಲೆಂದು ಬಂದ ವಿಟಸಂತತಿಯುಳ್ಳೆರ್ದೆ ಡಿಳ್ಳವಪ್ಪಿನಂ
ಪೂಗಣೆಯುರ್ಚೆ ಮೂರ್ಛೆಗೊಳಗಾಗಲೊಡಂ ಕಡುಪಿಂ ಸಹಾಯಿಗರ್
ಪೊಗೊಳದತ್ತಲುಯ್ದು ಮದನಾಗ್ನಿಯನಾಱಿಸುವಂತು ಮಾಡಿದಾ
ಪೂಗಳನೊಪ್ಪೆಕಟ್ಟಿ ಪೊಸಮಾಲೆಯನೆತ್ತುವ ಮಾಲಗಾರ್ತಿಯರ್ ೪೦

ಚಂ॥ ತರತರದಿಂದೆ ಬಾಹುಲತೆ ಪುಷ್ಪಿತಮಾದುವೊ ಕಾಮಮಾರ್ಗಣಂ
ತರುಣಿಯರಿಂದೆ ಕಟ್ಟುವಡೆದಿರ್ದುವೊವೋಣ್ ನಱುಸುಯ್ಗೆಸೋಲ್ತು ಬಂ
ದುರುತರ ಭೃಂಗಮಾಲಿಕೆಯೊ ಪೇಟಿನೆ ದಿವ್ಯಸುಗಂಧದಿಂ ಮನೋ
ಹರಮೆನಿಸಿರ್ಪಪೊಚ್ಚಪೊಸಮಾಲೆಯನೆತ್ತುವರತ್ತ ಬಾಲೆಯರ್ ೪೧

ಕಾಂತಿಯಿಂದ ಒಪ್ಪಿತು. ಕಂಚಿನ ಪಾತ್ರೆಗಳಲ್ಲಿ ಪ್ರತಿಫಲಿಸಿದ ಪ್ರತಿಬಿಂಬಗಳು ಸೃಷ್ಟಿ ಸ್ಥಿತಿ ಲಯಗಳನ್ನು ಪ್ರತಿ ನಿಧಿಸುತ್ತವೆ, ೩೯. ಬ್ರಹ್ಮನು ಸೃಷ್ಟಿಗೆ ಕಾರಣವಾದ ಬೀಜವನ್ನೂ, ಹರಿಯು ಜಗತ್ತನ್ನು ಪಾಲಿಸಲು ಸಾಧಕವಾದ ರತ್ನವನ್ನೂ, ಹರನು ತನ್ನ ಬೆತ್ತಲೆತನವನ್ನು ಕಳೆದುಕೊಳ್ಳಲು ಉತ್ತಮವಸ್ತ್ರವನ್ನೂ, ಸೂರ್ಯನು ಶೈತ್ಯ ನಿವಾರಕವಾದ ಔಷಧಿಯನ್ನೂ ಚಂದ್ರನು ಕ್ಷಯ ನಿವಾರಕವಾದ ಮದ್ದನ್ನೂ ಪಡೆಯಲು ಆ ಊರಿನ ಶ್ರೇಷ್ಠರಾದ ವರ್ತಕರ ಬಳಿಗೆ ಬರಲು ಯತ್ನಿಸುತ್ತಾರೆ. ವ॥ ಅಲ್ಲಿಂದ ಮುಂದೆ. ೪೦. ಹೂಗಳನ್ನು ಕೊಳ್ಳಲು ಬಂದ ವಿಟ ಪುರುಷರ ದುರ್ಬಲವಾದ ಹೃದಯಕ್ಕೆ ದಿಗಿಲು ಹುಟ್ಟಿಸಿ ಹೂ ಬಾಣಗಳು ಚುಚ್ಚಿಕೊಳ್ಳಲು ಅವರು ಮೈಮರೆತರು. ಆಗ ಅವರ ಸಹಾಯಕರು ಬೇಗ ಅವರನ್ನು ಹೂಗೊಳದ ಕಡೆ ಕರೆದುಕೊಂಡು ಹೋಗಿ ಮದನಾಗ್ನಿಯನ್ನು ಆರಿಸಲು ಯತ್ನಿಸಿದರು. ಹೂಗಳನ್ನು ಒಪ್ಪವಾಗಿ ಕಟ್ಟಿ ಹೊಸ ಹೂ ಮಾಲೆಗಳನ್ನು ಎತ್ತಿಹಿಡಿದ ಮಾಲೆಗಾರ್ತಿಯರು ಅದಕ್ಕೆ ಕಾರಣರಾಗಿದ್ದರು, ೪೧. ತೋಳುಗಳೆಂಬ ಬಳ್ಳಿಗಳು ವಿಧವಿಧವಾದ ಹೂಗಳನ್ನು ಬಿಟ್ಟುವೋ ? ಕಾಮನಬಾಣಗಳು ಯುವತಿಯರಿಂದ ಸೆರೆ ಹಿಡಿಯಲ್ಪಟ್ಟಿರುವುವೋ ? ಅಥವಾ ಸುವಾಸನೆಯುಳ್ಳ ಉಸಿರಿಗೆ ಸೋತು ಬಂದ ಶ್ರೇಷ್ಠವಾದ ದುಂಬಿಗಳ ಮಾಲಿಕೆಯೋ ? ಹೇಳು ! ಎಂಬಂತೆ ದಿವ್ಯವಾದ ಸುಗಂಧದಿಂದ ಮನೋಹರವಾದ ಹೊಚ್ಚ ಹೊಸ ಹೂವಿನ ಮಾಲೆಗಳನ್ನು ಬಾಲೆ

ಉ ॥ ಸಾರಸುಗಂಧದಿಂದೆಸೆವ ಪೂವಿನಮಾಲೆಯನೀವೆನಿತ್ತ ಬಾ
ಬಾರೆಲೆ ಧೂರ್ತಯೆಂಬವರ ತೋಳವೊದಲ್ಗಳನುನ್ನತಸ್ತನಾ
ಕಾರಮನೆಯ್ದೆಕಂಡು ನಡೆಗೆಟ್ಟರೆ ದೂರದೊಳಿರ್ಪರೇಕೆನಲ್
ದೂರಿತರಲ್ತೆ ಪುಷ್ಪವತಿಯರ್ ಪರಿಭಾವಿಸೆ ನೀತಿವಂತರೊಳ್ ೪೨

ವ॥ ಎಂಬ ವಿಟರ ಚತುರೋಕ್ತಿ ಪರಿವೃತವಾದ ಮಾಲೆಗಾಱವಸರದಿಂ ಮುಂದೆ

ಮ ಸ್ರ॥ ರತಿರೂಪಾಂಚದ್ಧ್ವಜಂ ಮನ್ಮಥನಿಚಿತಪತಾಕಾಳಿ ಸೌಭಾಗ್ಯಘಂಟಾ
ಯುತಬದ್ಧದ್ವಾರಮಂಗೋದ್ಭವಚರಿತಕಥಾಲೇಖ್ಯ ಸಚ್ಚಿತ್ರಿಪಾರಾ
ವತಕೀರ ಶ್ರೇಣಿ ವಿಭ್ರಾಜಿತ ಮಣಿಮಯಕೂಟಂ.... ವಿಟಾ
ನ್ವಿತ ಶೋಭಾವೇದಿಕಾ ವಿಸ್ಮಯವೆನಿಸುವುದಲ್ಲಲ್ಲಿ ವೇಶ್ಯಾಲಯಂಗಳ್ ೪೩

ಹದಿಱಿನಗೊಟ್ಟಿ ಹಂಗಿಸುವನಾಣ್ನುಡಿ ಱಚ್ಚೆಯಮಾತು ಕಿಲ್ಲೆ ನೋ
ಡದ ಬೆಲೆ ಟಕ್ಕಿನೊಲ್ಮೆ ಹೆರೆಹಚ್ಚದಮೋಹಮಸತ್ಯದಾಣೆ ನಿ
ಲ್ಲದ ಪುಸಿತೋಟಿಯಲ್ಲದುಪತಾಪಮೆನಿಪ್ಪ ಸಮಸ್ತ ವೈಶಿಕಂ
ಸುದತಿಯರಾದವೊಲ್ ಸುಟಿವುದಾ ಪುರದೊಳ್ಗಣಿಕಾ ಕದಂಬಕಂ ೪೪

ಯರು ಅಲ್ಲಿ ಎತ್ತಿಹಿಡಿಯುತ್ತಾರೆ. ೪೨. 'ಎಲೆ, ಧೂರ್ತನೆ ಇತ್ತ ಬಾ ಬಾ, ಸಾರವಾದ ಸುಗಂಧದಿಂದ ಮನೋಹರವಾದ ಹೂಮಾಲೆಯನ್ನು ಕೊಡುವೆನು' ಎಂದು ಕೂಗಿ ಕರೆಯುತ್ತಿರುವ ಮಾಲಗಾರ್ತಿಯರ ಕಂಕುಳ ಮೂಲವನ್ನೂ ಉನ್ನತವಾದ ಮೊಲೆಗಳ ಗಾತ್ರವನ್ನೂ ನೋಡಿ ವಿಟರು ಬೆರಗಾಗಿ ಚಲಿಸದೆ ನಿಂತು ಬಿಟ್ಟರು. ಆಗ ಅವರು 'ಏಕೆ ದೂರದಲ್ಲಿಯೇ ನಿಂತಿರಿ' ? ಎಂದು ಕೇಳಿದರು. ನೀತಿವಂತರು ಪುಷ್ಪವತಿಯರ (1. ಮಾಲೆಗಾರ್ತಿ 2. ಮುಟ್ಟಾದವಳು). ಹತ್ತಿರ ಬರಬಾರದು' ಎಂದು ವಿಟರು ಚಾತುರ್ಯದಿಂದ ಉತ್ತರಿಸಿದರು. ವ॥ ಹೀಗೆ ವಿಟ ಪುರುಷರ ಚತುರೋಕ್ತಿಗಳಿಂದ ತುಂಬಿದ ಹೂವಾಡಿಗರ ಕೇರಿಯಿಂದ ಮುಂದೆ. ೪೩. ವೇಶ್ಯೆಯರ ಮನೆಗಳು ವಿಸ್ಮಯಕರಗಳಾಗಿ ಕಂಗೊಳಿಸುತ್ತವೆ. ಆ ಮನೆಗಳ ಮೇಲೆ ರತಿಯ ಚಿತ್ರವುಳ್ಳ ಬಾವುಟಗಳಿವೆ, ಸುತ್ತ ಮದನನ ಚಿತ್ರಗಳುಳ್ಳ ಪತಾಕೆಗಳ ಸಾಲು ಕಂಗೊಳಿಸುತ್ತದೆ. ಸೌಭಾಗ್ಯ ಸೂಚಕವಾದ ಗಂಟೆಗಳನ್ನು ಬಾಗಿಲಲ್ಲಿ ಕಟ್ಟಿದೆ. ಗೋಡೆಗಳ ಮೇಲೆ ಮನ್ಮಥನ ಕತೆಯ ಚಿತ್ರಗಳನ್ನು ಬರೆದಿದೆ. ಮನೆಗಳ ಗೋಡೆಗಳ ಚಾಚುಗಲ್ಲುಗಳ ಮೇಲೆ ಗಿಳಿ ಪಾರಿವಾಳಗಳು ಸಾಲಾಗಿ ಕುಳಿತು ಶೋಭಿಸುತ್ತವೆ. ಅಲ್ಲಲ್ಲಿ ಸುಂದರವಾದ ಜಗಲಿಗಳ ಮೇಲೆ ವಿಟರು ಕುಳಿತಿದ್ದಾರೆ. ಇವುಗಳಿಂದ ಸೂಳೆಯರ ಮನೆಗಳು ಮನೋಹರವಾಗಿದ್ದುವು. ೪೪. ಅಣಕದ ಮಾತುಗಳು ಹಂಗಿಸಿ ಆಡುವ ರೂಢಿಯ ಮಾತುಗಳು, ಗುಟ್ಟನ್ನು ರಟ್ಟು ಮಾಡುವ ಮುನಿಸಿನ ಮಾತುಗಳು, ಹಿಂದೆ ಮುಂದೆ ನೋಡದೆ ಹೇಳುವ ದುಬಾರಿ ಬೆಲೆ. ನಟನೆಯ ಪ್ರೀತಿ, ಸ್ವಲ್ಪವೂ ಕಡಿಮೆಯಾಗದ ಮೋಹ, ಸುಳ್ಳು ಸುಳ್ಳಾಗಿ ಆಣೆಯಿಡುವುದು. ಎಡೆಬಿಡದೆ

ವ॥ ಆ ವೇಶ್ಯಾವಾಟಕ್ಕೆ ಸಮೀಪವಾಗಿ

ಮ ಸ್ರ॥ ಸತತಂ ಸಂಗೀತಚಿತ್ರಂ ಸಕಲವಿವಿಧವಾದ್ಯೋತ್ಸವಂ ನೃತ್ಯ ವಿಭ್ರಾ
ಜಿತಮುದ್ಯದ್ಧೂಪಧೂಮಕ್ಷುಭಿತಮಖಿಲ ಪೌರಾಣಮಂತ್ರಾನುವಾದಂ
ಚಿತ ರಮ್ಯಾಪ್ಯಾಪಹಂ ಮಂಜುಳಮಣಿಕಲಶಂ ಪೆಂಪುವೆತ್ತಿರ್ಪದೇವಾ
ಯತನಂ ಕಣ್ಗೊಪ್ಪುಗುಂ ತತ್ಪುರವರದೊಳನೂನ ಪ್ರಸಾದಂಗಳಿಂದಂ ೪೫

ವ॥ ಅನಂತರಂ

ವಿಮಲಪ್ರಾಸಾದ ಭಿತ್ತಿಪ್ರಕಟಘನಸುಧಾಕಾಂತಿಗಳ್ ಚಂದ್ರಿಕಾ ವಿ
ಭ್ರಮಮೆಂಬಂತೊಪ್ಪೆ ನಾನಾಮಣಿಮಯ ಕಳಶಶ್ರೇಣಿಗಳ್ ತಾರಕಾಚಿ
ತ್ರಮನೆತ್ತಂ ಬೀಱೆ ಭಾಸ್ವತ್ಕುಮುದಮನೊಲವಿಂ ಪೆರ್ಚಿಸುತ್ತಾವಗಂ ಸಂ
ಭ್ರಮದಿಂ ಚೆಲ್ವಾದರಾಜಾಲಯಮಭಿನವಪೂರ್ವಾದ್ರಿಯಂತೊಪ್ಪಿತೋರ್ಕಿಂ
೪೬

ವ॥ ಅಂತು ಪೊಗೞ್ಕೆಗಳುಂಬವಾಗಿರೆ

ಕಂ॥ ತತ್ಪುರಪತಿ ನೃಪಮೌಳಿ ಲ
ಸತ್ಪಾದಪಯೋಜನಖಿಳ ಜನತಾ ನಿಜ ಸಂ
ಪತ್ಪೂರಕನಭಿಜನಹಿತ
ಸತ್ಪದನುಱೆ ರಾಜಹಂಸನೆಂಬ ನರೇಂದ್ರಂ ೪೭

ನಡೆಯುವ ಹುಸಿಜಗಳ, ಅಲ್ಲದೆ ಉಪದ್ರವಕರಗಳಾದ ಎಲ್ಲ ಬಗೆಯ ಮೋಸಗಳು, ಇವೆಲ್ಲವೂ ಹೆಂಗಸರ ರೂಪವನ್ನು ಧರಿಸಿವೆಯೋ ಎಂಬಂತೆ ಕಾಣುವ ಸೂಳೆಯರು. ಆ ಪುರದಲ್ಲಿ ಗುಂಪು ಗುಂಪಾಗಿ ಸಂಚರಿಸುತ್ತಾರೆ. ವ॥ ಆ ಸೂಳೆ ಗೇರಿಯ ಹತ್ತಿರ ೪೫. ಆ ಪುರವರದಲ್ಲಿ ಪ್ರಸಿದ್ಧವಾದ ದೇವಾಲಯವು ಎಲ್ಲರನ್ನೂ ಅನುಗ್ರಹಿಸುತ್ತಾ ಕಂಗೊಳಿಸುತ್ತದೆ. ಅದು ಯಾವಾಗಲೂ ಸಂಗೀತದಿಂದ ಸುಂದರವಾಗಿದೆ. ಸಕಲ ವಿಧ ವಾದ್ಯ ಧ್ವನಿಗಳಿಂದಲೂ ನರ್ತನಗಳಿಂದಲೂ ಪ್ರಕಾಶಿಸುತ್ತದೆ. ಅಲ್ಲಿ ಮೇಲೇಳುವ ಧೂಪದ ಹೊಗೆ ಹರಡಿರುತ್ತದೆ. ಪುರಾಣಗಳ ಪ್ರವಚನಗಳೂ ಮಂತ್ರಗಳ ಪಠನವೂ ನಡೆಯುತ್ತಿರುತ್ತದೆ. ದೇವಾಲಯದ ಮೇಲೆ ಸುಂದರವೂ ಸುವರ್ಣಮಯವೂ ಆದ ರತ್ನ ಕಲಶವಿದೆ. ವ॥ ಅನಂತರ– ೪೬. ಯಾವಾಗಲೂ ಸಂಭ್ರಮದಿಂದ ಸುಂದರವಾದ ರಾಜಾಲಯವು ನೂತನವಾದ ಪೂರ್ವಾದ್ರಿಯಂತೆ ಪ್ರಕಾಶಿಸಿತು. ನಿರ್ಮಲವಾದ ಪ್ರಾಸಾದದ ಗೋಡೆಗಳಿಗೆ ಹಚ್ಚಿರುವ ಸುಣ್ಣದ ಹೊಳಪು ಬೆಳದಿಂಗಳ ವಿಲಾಸದಂತೆ ಒಪ್ಪಿತು. ಬಗೆ ಬಗೆಯ ರತ್ನಕಲಶಗಳು ಎಲ್ಲ ಕಡೆ ಹರಡಿದ ನಕ್ಷತ್ರಗಳಂತೆ ಕಂಡುವು. ಹೊಳೆಯುವ ಕುಮುದವನ್ನು ಹೆಚ್ಚಿಸುತ್ತಾ ಇದ್ದಿತು. ಟಿ॥ ರಾಜಾಲಯ = ಅರಮನೆ ಮತ್ತು ಉದಯ ಗಿರಿ ಕುಮುದ = ಭೂಮಿಗೆ ಆನಂದ ಮತ್ತು ನೈದಿಲೆ. ವ॥ ಹಾಗೆ ಹೊಗಳಿಕೆಗೆ ಮೀರಿರಲು. ೪೭. ರಾಜಹಂಸನೆಂಬ ನರೇಂದ್ರನು ಆ ನಗರದ ರಾಜನು. (ನಮಸ್ಕರಿಸುವಾಗ) ಪಲವು ರಾಜರ ಕಿರೀಟಗಳ ರತ್ನಕಾಂತಿಯಿಂದ ಅವನ ಪಾದಕಮಲಗಳು ಹೊಳೆಯುತ್ತಿ

ಕಂ॥ ಆತಂಗೆ ಸಚಿವರಾದರ್
ನೀತಿವಿದರ್ ಸದ್ಗುಣಪ್ರಸಿದ್ಧರ್ ವಿಶ್ವ
ಖ್ಯಾತರೆನಿಪೇಟ್ವರುಂ ಧಾ
ತ್ರೀ ತಿಲಕರ್ ಬುದ್ಧಿವಿದರತೀವ ಸಮರ್ಥರ್ ೪೮

ವ॥ ಅವರಾರೆಂದೊಡೆ ರತ್ನೋದ್ಭವ ಪ್ರೇಮದತ್ತ ಕಾಮಪಾಲ ಸುಮಿತ್ರ ಸುಮತಿ ಸುಶ್ರುತ ಸತ್ಯವರ್ಮನೆಂಬೇಟ್ವರ್ ಅವರೊಳ್ ರತ್ನೋದ್ಭವಂ ವ್ಯವಹಾರಕ್ಕೆ ಪ್ರೇಮದತ್ತಂ ತೀರ್ಥಯಾತ್ರೆಗೆ ಕಾಮಪಾಲಂ ದೇಶಾಂತರಕ್ಕೆ ಪೋಗೆ ಮಿಕ್ಕನಾಲ್ವರ್ ಪ್ರಧಾನರುಂ ತಾನುಂ

ಮ॥ ಜನಪಂ ತನ್ನಭುಜಪ್ರತಾಪದಿನಮಾತ್ಯ ಶ್ರೇಷ್ಠರಿಂ ರಾಜ್ಯವ
ರ್ಧನರಿಂ ಮಿತ್ರರಿನೊಪ್ಪುವಾತ್ತಬಲದಿಂ ಭಂಡಾರದಿಂ ದುರ್ಗದಿಂ
ಘನಸಪ್ತಾಂಗವಿಳಾಸಮುಂ ಪಡೆದುಮಂತೇಕಾಂಗವೀರಂ ದಲೆಂ
ಬಿನವೊಪ್ಪಂಬಡೆ[1]ವಂ ನೃಪಾಲತಿಲಕಂ ಭೂಪಾಲವಿದ್ಯಾಧರಂ ೪೯

ಕಂ॥ ಆತನ ಸತಿ ಗುಣವತಿ ಧೈ
ರ್ಯಾತಿವಿಳಾಸ[ದರಿಮ(?)ಸೆವ]ಗಳ?ಮೆಸೆವ ರತಿ ವರ ಹಂಸ
ವ್ರಾತಗತಿ ಲೋಕನುತ ವಿ
ಖ್ಯಾತೆಯೆ ವಸುಮತಿಯೆನಿಪ್ಪವನಿತಾರತ್ನಂ ೫೦

ದ್ದುವು. ಅವನು ಎಲ್ಲ ಜನರ ಸಂಪತ್ತನ್ನೂ ಹೆಚ್ಚಿಸುತ್ತಿದ್ದನು. ಸಜ್ಜನರಿಗೆ ಆಶ್ರಯ ನಾಗಿದ್ದನು. ೪೮. ಆತನಿಗೆ ಏಳು ಜನ ಮಂತ್ರಿಗಳಿದ್ದರು. ಅವರೆಲ್ಲರೂ ನೀತಿ ಶಾಸ್ತ್ರ ವನ್ನರಿತವರು. ಸದ್ಗುಣಗಳಿಂದ ಪ್ರಸಿದ್ಧರು. ಪ್ರಪಂಚದಲ್ಲೆಲ್ಲಾ ಹೆಸರು ಗಳಿಸಿದವರು, ಭೂಮಿಯಲ್ಲಿ ಶ್ರೇಷ್ಠರು. ತುಂಬ ಬುದ್ಧಿವಂತರು ಮತ್ತು ದಕ್ಷರು. ವ॥ ಅವರು ಯಾರೆಂದರೆ, ರತ್ನೋದ್ಭವ, ಪ್ರೇಮದತ್ತ, ಕಾಮಪಾಲ, ಸುಮಿತ್ರ, ಸುಮತಿ, ಸುಶ್ರುತ, ಸತ್ಯವರ್ಮ ಎಂಬ ಹೆಸರಿನ ಏಳು ಜನರು. ಅವರಲ್ಲಿ ರತ್ನೋದ್ಭವನು ವ್ಯಾಪಾರಕ್ಕಾಗಿ, ಪ್ರೇಮದತ್ತನು ತೀರ್ಥಯಾತ್ರೆಗಾಗಿ, ಕಾಮಪಾಲನು ದೇಶಾಂತರ ಸಂಚಾರಕ್ಕಾಗಿ ಹೋಗಲು ಉಳಿದ ನಾಲ್ವರು ಮಂತ್ರಿಗಳೂ ತಾನೂ– ೪೯. ಭೂಪಾಲರಲ್ಲಿ ವಿದ್ಯಾ ಧರನೆನಿಸಿದ ಆ ರಾಜನು ತನ್ನ ತೋಳ್ಬಲದಿಂದಲೂ, ಶ್ರೇಷ್ಠರಾದ ಮಂತ್ರಿಗಳಿಂದಲೂ, ರಾಜ್ಯವನ್ನು ವೃದ್ಧಿಗೊಳಿಸುವ ಗೆಳೆಯರಿಂದಲೂ, ವಿಶ್ವಾಸ ಪಾತ್ರವಾದ ಸೈನ್ಯದಿಂದಲೂ, ಖಜಾನೆಯಿಂದಲೂ, ದುರ್ಗದಿಂದಲೂ, ಹೀಗೆ ಘನವಾದ ಸಪ್ತಾಂಗಗಳ ವಿಲಾಸ ದಿಂದಲೂ ಕೂಡಿ ರಾಜರಲ್ಲಿ ಶ್ರೇಷ್ಠನಾಗಿ ಏಕಾಂಗ ವೀರನೆಂದು ಹೆಸರು ಪಡೆದಿದ್ದನು. [ಟಿ॥ ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಸೈನ್ಯ ಇವು ಸಪ್ತಾಂಗ ಗಳು.] ೫೦. ವಸುಮತಿಯೆಂಬ ಸ್ತ್ರೀರತ್ನವು ಆ ರಾಜನ ಹೆಂಡತಿಯಾಗಿದ್ದಳು. ಅವಳು ಗುಣವತಿ. ಧೈರ್ಯ ಮತ್ತು ಬೆಡಗಿನಿಂದ ರತಿ. ಅವಳು ಹಂಸಗಮನೆ. ಲೋಕದ

---

1. ಮೋಘಂ ಬಗೆವಂ

ವ॥ ಆ ಕಾಂತೆ ಒಂದು ದಿನಂ ನಿಜಕಾಂತ ಸಹಿತಂ

ಮ ಸ್ರ॥ ಎಳೆಮಾವಿಂ ಕೌಂಗಿನಿಂ ಸತ್ಕದಳಿಯಿನರಸೇಱಿಲ್ಗಳಿಂ ದಾಡಿಮೀ ಸಂ
ಕುಳದಿಂ ಚೆಂದೆಂಗಿನಿಂ ಸಂಪಗೆಯಿನಸುಗೆ(ಕೆ)ಯಿಂ ಬಕ್ಕೆಯಿಂ ಮಾತುಳುಂಗಂ
ಗಳಿನುದ್ಯದ್ದ್ರಾಕ್ಷೆಯಿಂ ಪೂದುಱುಗಲ ಲತೆಯಿಂ ಕೋಕಿಲಧ್ವಾನದಿಂ ಕಂ
ಗೊಳಿಪೊಂದುದ್ಯಾನಮಂ ಭೋಂಕನೆ ಮನದೊಲವಿಂ ಕಾಂತೆ ಪೊಕ್ಕಳ್ ನಿತಾಂತಂ
೫೧

ವ॥ ಅಲ್ಲಿ

ಚಂ॥ ಮೃದುತರಮಾರ್ಗದಿಂ ಜಗವನಂಡಲೆವುದ್ಧತ ಸತ್ವವೃತ್ತಿಯಿಂ
ಮದನಶಿಲೀಮುಖಂಗಳೆನಿಸಿರ್ದು ಮೊಱಲ್ದ ಶಿಲೀಮುಖಪ್ರಘಾ
ತದಕಡುಪಿಂಗೆ ಸಿಲ್ಕುವುದಿದಾವ ವಿಳಾಸಮೆನುತ್ತೆ ತುಂಬಿಗ
ಳ್ಕದ ನಱುಗಂಪು ಪೊಂಪುಳಿಸೆಪೆಂಪೆಸೆದಿರ್ದುದು ಚಂಪಕವ್ರಜಂ ೫೨

ನಿರವಧಿಯಿಂ ಕುಳಿರ್ವುದಕಮಂ ನಡುನೆತ್ತಿಯೊಳಾಂತು ತನ್ನ ಕ
ಣ್ಣುರಿಗುಪಶಾಂತಿಯಂ ಪಡೆದನಿಲ್ಲಭವಂ ಬಿಸಿಲೊಳ್ಪೊದಟ್ಟು ಬಿ
ತ್ತರಿಪೆಳನೀರ್ಗಳಂ ತಳೆದು ಶೈತ್ಯಮನೆಲ್ಲರೊಳೀವಪೆರ್ಮೆಗಾ
ರ್ದೊರೆಯೆಮಗೆಂಬವೋಲ್ ವನದೊಳಗ್ಗದ ತೆಂಗಿನ ಸಾಲ್ಗಳೊಪ್ಪುಗುಂ ೫೩

ಹೊಗಳಿಕೆಯಿಂದ ವಿಖ್ಯಾತಳಾಗಿದ್ದಾಳೆ. ವ॥ ಆ ಕಾಂತೆಯು ಒಂದು ದಿನ ತನ್ನ ಕಾಂತ ನೊಡನೆ—೫೧. ಎಳೆಮಾವು, ಅಡಿಕೆ, ಬಾಳೆ, ಶ್ರೇಷ್ಠವಾದ ನೇರಿಳೆ, ದಾಳಿಂಬೆ, ಕೆಂದೆಂಗು. ಸಂಪಗೆ, ಅಸುಗೆ, ಸೀಹಲಸು, ಮಾದಳ–ಈ ಮೊದಲಾದ ಮರಗಳಿಂದಲೂ, ಹಬ್ಬಿದ ದ್ರಾಕ್ಷಿಯ ಬಳ್ಳಿಗಳಿಂದಲೂ, ಹೂಗೊಂಚಲುಗಳುಳ್ಳ ಬಳ್ಳಿಗಳಿಂದಲೂ. ಕೋಗಿಲೆಯ ಇನಿದನಿಯಿಂದಲೂ ಕಂಗೊಳಿಸುವ ಉದ್ಯಾನವನ್ನು ಮನದೊಲವಿನಿಂದ ಪ್ರವೇಶಿಸಿದಳು. ಅಲ್ಲಿ ೫೨. ಸಂಪಿಗೆ ಹೂಗಳು ಅತಿ ಮೃದುವಾದ ಮಾರ್ಗದಿಂದ ಜಗತ್ತನ್ನು ಕಾಡುವ ತನ್ನ ಅತಿಶಯವಾದ ಪರಾಕ್ರಮದಿಂದ ಮನ್ಮಥನ ಬಾಣಗಳು–ಶಿಲೀಮುಖಗಳು ಎಂದು ಪ್ರಸಿದ್ಧಿಯನ್ನು ಪಡೆದಿದ್ದುವು. ಆದರೂ ಝೇಂಕರಿಸುತ್ತಿರುವ ಶಿಲೀಮುಖಗಳ (ದುಂಬಿ) ಪಿಟಿಗೆಸಿಕ್ಕುವುದೂ ಒಂದು ವಿನೋದವೇ! ಎಂದು ಯೋಚಿಸಿ ದುಂಬಿಗಳಿಗೆ ಹೆದರದೆ ತನ್ನ ಮಧುರವಾದ ಸುವಾಸನೆಯಿಂದ ರೋಮಾಂಚವನ್ನುಂಟುಮಾಡುತ್ತಾ ಶೋಭಿಸು ತ್ತಿದ್ದವು* ೫೩. "ನಿರಂತರವಾಗಿ ನೆತ್ತಿಯಮೇಲೆ ತಂಪಾದ ಗಂಗೆಯ ನೀರನ್ನು ತಳೆದಿದ್ದರೂ, ಶಿವನು ತನ್ನ ಹಣೆಗಣ್ಣಿನ ಬೆಂಕಿಯುರಿಗೆ ಉಪಶಾಂತಿಯನ್ನು ಪಡೆಯಲಿಲ್ಲ. ಆದರೆ ಬಿಸಿಲಿನಲ್ಲಿ ಕಾಯುವ ಎಳನೀರುಗಳನ್ನು ತಲೆಯಮೇಲೆ ಹೊತ್ತು ಎಲ್ಲರಿಗೂ ತಂಪನ್ನು ನೀಡುವ ಹಿರಿಮೆ ನಮ್ಮದು. ನಮಗೆ ಸಮರಾದವರು ಮತ್ತೆ ಯಾರಿದ್ದಾರೆ?" ಎಂದು ಹೇಳುತ್ತಿರುವಂತೆ ಶ್ರೇಷ್ಠವಾದ ತೆಂಗಿನ ಮರಗಳ ಸಾಲುಗಳು ವನದಲ್ಲಿ ಪ್ರಕಾಶಿ

---

*ಟಿ॥ ಶಿಲೀಮುಖವು ಶಿಲೀಮುಖಕ್ಕೆ ಹೆದರಬೇಕೆ ? ಸಂಪಗೆಯು ದುಂಬಿಗಳಿಗೆ ಹೆದರ ಲಿಲ್ಲ. ಎಂದು ಚಮತ್ಕಾರವಾಗಿ ವರ್ಣಿಸಲಾಗಿದೆ. ದುಂಬಿಗಳು ಸಂಪಿಗೆಗೆ ಎರಗುವುದೇ ಇಲ್ಲ, ಇದೇ ಅದರ ಹಿರಿಮೆ.

ವ॥ ಅಂತೆಸೆವ ಉಪವನದ ಮಧ್ಯದಲ್ಲಿ

ಮ ಸ್ರ॥ ಇದೆ ಮೀಂಗಳ್ ಮೀಂಗಳುದ್ಯದ್ಭ್ರಮರವನೊಳಕೊಂಡಬ್ಜಮಬ್ಜಂ ವಳರ್ಕ್ಷ
ಚ್ಛದಹಂಸಂ ಹಂಸಮತ್ಯದ್ಭುತ ಲಲಿತ ಲಸತ್ಪುಷ್ಕರಂ ಪುಷ್ಕರಂ ಬೇ
ಗದಿನ್ನೆಳಾಭಾಗಕ್ಕೆ ನೈರ್ಮಲ್ಯಮನೆಸಗೆ ಶರತ್ಕಾಲದಾಕಾಶಮೇೞ್ತಂ
ದುದೆನಲ್ ಚೆಲ್ವಾದ ಪದ್ಮಾಕರಮನೊಲವಿನಿಂ ಕಂಡು ಕೊಂಡಾಡುತಿರ್ದಳ್ ೫೪

ಕಂ॥ ಶತಪತ್ರನೇತ್ರಹಸ್ತ
ಸ್ಥಿತಿಯಂತಿರೆ ಚಕ್ರಸಂಯುತಂ ಮಾಸದವೊಲ್
ಸಿತಪಕ್ಷಬಹುಳಪಕ್ಷಾ
ಗತಿಯಿಂ ರಂಜಿಪುದಖಂಡಮಂಬುಜಷಂಡಂ ೫೫

ವ॥ ಅಂತೆಸೆವ ಪುಂಡರೀಕಷಂಡಮಂ ವಸುಮತೀದೇವಿಯೆವೆಯಿಕ್ಕದೆ ನೋೞ್ಪಿನಮಲ್ಲಿ

ಚಂ॥ ತಿಳಿಗೊಳದಿಂಬಿನಿಂ ಮಱಿಯನಿಟ್ಟು ಸರೋಜದಬೀಜರಾಜಿಯಂ
ಫಳಿಲನೆತಂದು ಚಂಚುಪುಟದೊಳ್ ನಿಜಚಂಚುವನಿಟ್ಟುಕೊಟ್ಟು ಕೋ
ಮಳಸಿತಪಕ್ಷಮಂ ಪೊದಿಸಿಲಾಲಿಪ ಹಂಸೆಯಪುತ್ರಮೋಹಮಂ
ಲಳನೆ ಸಮಂತುಕಂಡು ಮಿಗೆ ಚಿಂತಿಸಿದಳ್ ಸುಕುಮಾರಲಾಭಮಂ ೫೬

ಸುತ್ತಿದ್ದವು. ಹಾಗೆ ಶೋಭಿಸುವ ಉಪವನದ ನಡುವೆ ೫೪. ಮೀನುಗಳೇ ನಕ್ಷತ್ರಗಳು ಮೇಲೆರಗುವ ದುಂಬಿಯುಳ್ಳ ತಾವರೆಯೇ ಚಂದ್ರ, ಬಿಳುಪಾದ ಗರಿಗಳುಳ್ಳ ಹಂಸವೇ ಸೂರ್ಯ. ಅದ್ಭುತವಾಗಿ ಸುಂದರವಾಗಿ ಹೊಳೆಯುವ ನೀರೇ ಆಕಾಶ. ಇವುಗಳಿಂದ ಶರದೃತುವಿನ ಆಕಾಶವೇ ನಿರ್ಮಲತೆಯನ್ನುಂಟುಮಾಡಲು ಭೂಭಾಗಕ್ಕೆ ಇಳಿದು ಬಂದಿದೆಯೋ ಎಂಬಂತೆ ಕಾಣಿಸುವ ಕಮಲಾಕರವನ್ನು ನೋಡಿದ ಸುಮತಿಯು ತುಂಬ ಕೊಂಡಾಡುತ್ತಿದ್ದಳು, ಟಿ॥ ಇಲ್ಲಿ ತಾವರೆಯಲ್ಲಿ ದುಂಬಿಯ ಸಂಬಂಧವು ಚಂದ್ರನಲ್ಲಿರುವ ಕಳಂಕದ ಅಂದವನ್ನು ತೋರಿಸುತ್ತದೆ. ೫೫. ಅಖಂಡವಾದ ಕಮಲಗಳ ಗುಂಪು ತಾವರೆಯ ಎಸಳಿನಂತೆ ಕಣ್ಣುಳ್ಳ ನಾರಾಯಣನ ಹಸ್ತದಂತೆ ಚಕ್ರದಿಂದ ಕೂಡಿದೆ. ತಿಂಗಳಿನ ಹಾಗೆ ಶುಕ್ಲಪಕ್ಷ ಕೃಷ್ಣಪಕ್ಷಗಳ ಸಂಚಾರದಿಂದ ಮನೋಹರವಾಗಿದೆ. ಚಕ್ರ= ಚಕ್ರಾಯುಧ ಮತ್ತು ಚಕ್ರವಾಕ ಪಕ್ಷಿ, ಸಿತಪಕ್ಷ=ಶುಕ್ಲ ಪಕ್ಷ ಮತ್ತು ಹಂಸ, ಬಹುಳ ಪಕ್ಷ=ಕೃಷ್ಣ ಪಕ್ಷ ಮತ್ತು ಕಪ್ಪುರೆಕ್ಕೆಯ ಹಕ್ಕಿಗಳು. ವ॥ ಹಾಗೆ ಪ್ರಕಾಶಿಸುವ ಕಮಲಗಳ ಗುಂಪನ್ನು ವಸುಮತೀದೇವಿಯು ರೆಪ್ಪೆಹಾಕದೆ ನೋಡುತ್ತಿರುವಾಗ ಅಲ್ಲಿ— ೫೬. ತಿಳಿನೀರಿನ ಕೊಳದ ದಡದಲ್ಲಿ ಹಂಸಿ ತನ್ನ ಮರಿಯನ್ನಿಟ್ಟಿತು. ತಾವರೆಯ ಬೀಜಗಳನ್ನು ತಂದು ಅದರ ಕೊಕ್ಕಿನೊಳಗೆ ತನ್ನ ಕೊಕ್ಕನ್ನಿಟ್ಟು ಅದನ್ನು ತಿನ್ನಿಸಿತು. ಅನಂತರ ತನ್ನ ಮೃದುವಾದ ಬಿಳುಪಾದ ರೆಕ್ಕೆಯನ್ನು ಹೊದಿಸಿ ಲಾಲಿಸುತ್ತಿದ್ದಿತು. ಈ ತೆರನಾದ ಹಂಸಿಯ ಪುತ್ರ ಪ್ರೇಮವನ್ನು ಕಂಡು ವಸುಮತಿಯು ತನಗೂ ಮಕ್ಕಳಾಗಬೇಕೆಂದು

ಚಂ॥ ಚಿಲಿಪಿಲಿಗುಟ್ಟಿ ನುಣ್ದೊದಳ್ಗಳಿಂ ಕಿವಿಗಿಂಪನೊಡರ್ಚಿ ಗೆಜ್ಜೆಗಳ್
ಘಲಿಕೆನಿಪಂತಿರೆಯ್ದಿ ಬಿಗಿಯಪ್ಪಿ ಕುಚಂಗಳನುಂಡು ಸೋಂಕಿಲೊಳ್
ಮಲಗಿ ಮನಕ್ಕೆ ಸಮ್ಮದಮನೀವ ಕುಮಾರಕನಂ ಮದೀಯ ಸ
ತ್ಕುಲ ಗೃಹದೀಪನಂ ಪಡೆವ ಸೈಪಿನ ಸುಗ್ಗಿಯದೆಂದು ಸಾರ್ಗುಮೋ ೫೭

ಕಂ॥ ಪಕ್ಷಿಮೊದಲಾಗಿ ಭವ ದುಃ
ಖ ಕ್ಷಯಕಾರಣಮಿದೆಂದು ತನ್ನಯ ಶಿಶುವಂ
ರಕ್ಷಿಸುತಿರ್ದಪುದದಱಿಂ ನ
ತಿಕ್ಷೀಣಮ(ದಾ)ಯ್ತು ಭಾವಿಸಲ್ ಮಜ್ಜನ್ಮಂ ೫೮

ವ॥ ಎಂದು ಮತ್ತಂ

ಇಷ್ಟ ಸುಖಕಾಮಭೋಗಮ
ನಿಷ್ಟಂ ಸುತರಿಲ್ಲದರ್ಗೆನುತ್ತತಿ ಚಿಂತಾ
ದಷ್ಟಾಂಗಿ ಸುಯ್ದು ಹಾ! ಹಾ!
ಕಷ್ಟವಿಧಾತ್ರಾ! ಯೆನುತ್ತೆ ಮೂರ್ಛೆಗೆ ಸಂದಳ್ ೫೯

ಹಂಬಲಿಸಿದಳು. ೫೭. ಚಿಲಿಪಿಲಿ ಚಿಲಿಪಿಲಿಯೆಂದು ಗದ್ದಲಮಾಡುತ್ತಾ, ತಡವರಿಸುವ ತೊದಲುನುಡಿಗಳಿಂದ ಕಿವಿಗಳಿಗೆ ಆನಂದವನ್ನುಂಟುಮಾಡುತ್ತಾ, ಕಾಲಿನ ಕಿರುಗೆಜ್ಜೆಗಳನ್ನು ಘಲಿರ್‌ಘಲಿರ್ ಎಂದು ಸದ್ದುಮಾಡುತ್ತಾ, ಹತ್ತಿರ ಬಂದು ಬಿಗಿಯಾಗಿ ತಬ್ಬಿಕೊಂಡು ಮೊಲೆಹಾಲನ್ನು ಕುಡಿಯುತ್ತಾ, ತಗುಲಿದಂತೆ ಪಕ್ಕದಲ್ಲಿ ಮಲಗಿ ಮನಸ್ಸಿಗೆ ಸಂತೋಷವನ್ನುಂಟುಮಾಡುವ, ನನ್ನ ಸತ್ಕುಲವನ್ನೂ ಮನೆಯನ್ನೂ ಬೆಳಗುವ ದೀಪವಾದ ಕುಮಾರನನ್ನು ಪಡೆಯುವ.ಪುಣ್ಯದ ಸುಗ್ಗಿಯ ಕಾಲವು ಯಾವಾಗ ಬರುವುದೋ?" ಎಂದು ವಸುಮತಿಯು ಚಿಂತಿಸಿದಳು. ೫೮. 'ಸಂಸಾರದ ದುಃಖವನ್ನು ಹೋಗಲಾಡಿಸಲು ಇದು ಕಾರಣ' ಎಂದು ತಿಳಿದು ಪಕ್ಷಿಮೊದಲಾದ ತಿರ್ಯಗ್ಜಂತುಗಳೂ ಕೂಡ ತನ್ನ ತನ್ನ ಶಿಶುವನ್ನು ಸಾಕುತ್ತಿವೆ. ಆದುದರಿಂದ ವಿಚಾರಮಾಡಿದರೆ ಮಕ್ಕಳಿಲ್ಲದ ನನ್ನ ಜನ್ಮವು ವ್ಯರ್ಥವಾಯಿತು. ವ॥ ಎಂದು ಹೇಳಿ ಮತ್ತು— ೫೯. 'ಮಕ್ಕಳಿಲ್ಲದವರಿಗೆ ಸುಖಕಾಮ ಭೋಗಗಳೆಲ್ಲವೂ ಅರ್ಥವಿಲ್ಲದುವು' ಎಂದು ಚಿಂತಾಕ್ರಾಂತಳಾಗಿ ನಿಟ್ಟುಸಿರುಬಿಟ್ಟಳು. 'ಹಾ! ಹಾ! ಸೃಷ್ಟಿಕರ್ತನೆ! ಇದು ಕಷ್ಟ' ಎಂದು ಹೇಳುತ್ತಾ ಮೈಮರೆತಳು.

ವ॥ ಅಂತು ಮೂರ್ಛೆವೋದರಸಿಯನರಸನೆಂತಾನುಮೆಚ್ಚರಿಸಿ ನಿಜ ನಿವಾಸಮಂ ಪುಗಿಸೆ ತನ್ನ ಮನದನ್ನಳಪ್ಪ ಕಮಳಿನಿಯೆಂಬ ತಾಂಬೂಲಕರಂಕವಾಹಿನಿ ತತ್ಕಾಂತೆಯುಂ ಸಂತೈಸುತ್ತು ಮಿರೆಯಿರೆ

ತರುಣಿಯ ಮಾಸಿದಂಗಲತೆ ಸೂಸಿದ ಕುಂತಳವೊಯ್ಯನೊಯ್ಯನೋ
ಸರಿಸುವ ಭಂಗಿ ಕೈಯುಸೆಳೆ ಬಾಡಿದಪೂಮುಡಿ ಶೂನ್ಯಹಾರಮ
ಚ್ಚರಿಯಿನಿಪ್ಪಂಗದಾ ಸೊವಡು ಜಾಡ್ಯದ ಮೈ ಕಡುಲಜ್ಜೆ ಕಜ್ಜಳಂ
ಪರೆದಲರ್ಗಣ್ಗಳೆಂಬಿನಿತು ಪೇಟವೆ ಮಾಣಿಕವಾಂತಭಾವಮಂ ೬೦

ವ॥ ಅಂತು ವಸುಮತೀದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ

ಇಂದುಕಳಾಧಿದೇವತೆ ಮನೋಹರ ನಿರ್ಮಲ ಪೂರ್ಣಚಂದ್ರಿಕಾ
ಚಂದನದಣ್ಪನುತ್ಪವನ ತಾರಕಸಂಕುಳ ಪುಷ್ಪಮಾಲಿಕಾ
ವೃಂದಮನಬ್ಧಿಫೇನಧವಳಾಂಬರಮಂ ಮನವೊಲ್ದು ತಾಳ್ದಳೆಂ
ಬಂದಮೆನಲ್ಕೆ ಬೆಳ್ಪಸದನಂ ಮೆಱೆದಿರ್ದುದು ತಲ್ಲತಾಂಗಿಯಾ ೬೧

ವ॥ ಅಂತು ಬೆಳ್ಪಸದನಂಗೊಂಡು ನಯನಕಾಂತಿಕಾಮುದಿಯಿಂ ಪ್ರಿಯನಯನ ಕುಮುದಮಂ ವಿಕಾಸಮನೆಯ್ದಿಸುತ್ತುಂ ದಂತಮರೀಚಿದರ್ಪಣದಿಂ ಕಾಂತನಕಮನೀಯತೆಯುಂ ಕವಲ್ವರಿ

ವ॥ ಹಾಗೆ ಮೈಮರೆತ ಅರಸಿಯನ್ನು ಅರಸನು ಶೈತ್ಯೋಪಚಾರದಿಂದ ಹೇಗೋ ಎಚ್ಚರಿಸಿ ತನ್ನ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಅವಳಿಗೆ ತುಂಬ ಪ್ರಿಯಳಾದ ಕಮಳಿನಿಯೆಂಬ ತಾಂಬೂಲದ ಭರಣಿಯನ್ನು ಹೊರುವ ದಾಸಿಯು ಅವಳನ್ನು ಸಮಾಧಾನಮಾಡುತ್ತಾ ಇರಲು (ರಾಣಿಯು ಋತು ಮತಿಯಾದಳು). ೬೦. ತರುಣಿಯ ಮಾಸಿದ ಬಳ್ಳಿಯಂಥ ಶರೀರ, ಅತ್ತಲಿತ್ತ ಕೆದರಿದ ತಲೆಗೂದಲು, ಮೆಲ್ಲಗೆ ಪಕ್ಕಕ್ಕೆ ಸರಿಯುವರೀತಿ, ಕೈಸೆಳೆತ, ಬಾಡಿದ ಹೂಮುಡಿದ ತಲೆಗೂದಲ ಗಂಟು, ಹಾರ ಧರಿಸದೇ ಇರುವುದು, ಆಶ್ಚರ್ಯಕರವಾದ ಶರೀರದ ಉಗ್ರಗಂಧ, ಅಲಸಿಕೆಯುಳ್ಳ ಶರೀರ, ಹೆಚ್ಚಾದ ನಾಚಿಕೆ, ಕಾಡಿಗೆಯಿಲ್ಲದ ಹೂವಿನಹಾಗಿರುವ ಕಂಗಳು. ಈ ಎಲ್ಲ ಲಕ್ಷಣಗಳು ರಾಣಿಯು ಋತುಮತಿಯಾಗಿರುವಳೆಂಬುದನ್ನು ತಿಳಿಸುವುದಿಲ್ಲವೆ?' ವ॥ ಹೀಗೆ ವಸುಮತೀದೇವಿಯು ಋತುಮತಿಯಾಗಿ ನಾಲ್ಕುನೆದಿನದ ಸ್ನಾನವಾದ ಮೇಲೆ ೬೧. ಚಂದ್ರಕಲೆಯ ಅಧಿದೇವತೆಯು ಮನೋಹರವಾದ ನಿರ್ಮಲವಾದ ಪೂರ್ಣಚಂದ್ರನ ಬೆಳದಿಂಗಳೆಂಬ ಗಂಧವನ್ನೂ, ಗಾಳಿಯಲ್ಲಿ ಒಲಿಯುತ್ತಿರುವ ನಕ್ಷತ್ರಗಳ ಸಮೂಹವೆಂಬ ಹೂಮಾಲೆಯನ್ನೂ, ಸಮುದ್ರದ ನೊರೆಯಂತೆ ಬಿಳುಪಾದ ಸೀರೆಯನ್ನೂ, ಪ್ರೀತಿಯಿಂದ ಧರಿಸಿದ್ದಾಳೆಯೋ ಎಂಬಂತೆ ಆಲತಾಂಗಿಯ ಬಿಳುಪಾದ ಅಲಂಕಾರವು ಮೆರೆಯಿತು. ವ॥ ಹೀಗೆ ಬೆಳ್ಳಗಿರುವಂತೆ ಅಲಂಕಾರ ಮಾಡಿಕೊಂಡು. ಕಂಗಳಕಾಂತಿಯೆಂಬ ಬೆಳುದಿಂಗಳಿ

ಸುತ್ತುಂ ತನುಪ್ರಭೆಯಿಂ ಮನೋವಲ್ಲಭನ ಮುದಮನೊದವಿಸುತ್ತುಂ ಮಂಗಳಪ್ರಚ್ಛದಾಚ್ಛಾದಿತ ಸಕಲ ಧೂಪಧೂಮಗಂಧಾಧಿವಾಸಿತಮಪ್ಪ ನಿಜವಲ್ಲಭನ ಶಯ್ಯಾತಳಕ್ಕೊಯ್ಯನೆ ಬರ್ಪುದುಂ

ಕಂ॥ ಇಂದಿನ ನಡೆಯಿಂದಿನ ನುಡಿ
ಯಿಂದಿನ ನಿಜಮುಖ ವಿಕಾಸಮಿಂದಿನ ನಗೆಗ
ಣ್ಣಿಂದಿನ ಮನದನುರಾಗ ಮಿ
ದೆಂದಿನ ಪರಿಯಲ್ತೆನುತ್ತೆ ನೃಪನೀಕ್ಷಿಸಿದಂ ೬೨

ವ॥ ಅಂತರಸುಕಾಂತೆಯ ಮುಖಾರವಿಂದಮಂ ನೋಡಿ ಹರ್ಷವಾರ್ಧಿಪರಿಕಾಲ್ವಸಗೆ

ಕಂ॥ ಮಿಸುನಿಯ ಕಡಗದಕೀಲಂ
ಸಸಿನಂಗೆಯ್ವಂತೆ ಪೊರೆದಲಕ್ತಕರಾಗಂ
ಪಸರಿಸುವ ಹಸ್ತಮಂ ಪಿಡಿ
ದು ಸಮೀಪಕ್ಕೊಲ್ದು ಕರೆದನಬಲೆಯನರಸಂ ೬೩

ವ॥ ಅಂತು ಕರೆದು ಪರ್ಯಂಕದೊಳ್ ಕುಳ್ಳಿರಿಸಿ

ಚಂ॥ ಸೊಗಸಿನಲಲ್ಲೆ ಕೋಮಲಕಚಗ್ರಹಣಂ ಪುಳಕಂಗಳುಣ್ಮುವ
ಪ್ಪುಗೆ ಮೃದುಚುಂಬನಂ ಸರಸತುಂಗರದಚ್ಛದಪೀಡನಂ ರುಚಿ
ದ್ವಿಗುಣಿತ ಕಾಮಕೇಳಿಯೆನಿಪಿಂತಿವು ಚಿತ್ತಸುಖಾನುರಾಗಮಂ
ಬಗೆಗೊಳಿಸಲ್ಕೆ ಕೂಡುತತಿ ಸೌಖ್ಯಸುಧಾಂಬುಧಿಯೊಳ್ ಮುಳುಂಗಿದರ್ ೬೪

ನಿಂದ ಕಾಂತನ ಕಂಗಳೆಂಬ ನೈದಿಲೆಯನ್ನರಳಿಸುತ್ತಾ, ಹಲ್ಲಿನ ಕಿರಣಗಳೆಂಬ ಕನ್ನಡಿಯಿಂದ ಪತಿಯ ಸೌಂದರ್ಯವನ್ನು ಸುತ್ತ ಹರಡುತ್ತಾ, ಮೈಹೊಳಪಿನಿಂದ ಪ್ರಿಯನ ಮನಸ್ಸಿನ ಆನಂದವನ್ನು ಹೆಚ್ಚಿಸುತ್ತಾ, ಮಂಗಳಕರಗಳಿಂದ ದುಪಟಿಗಳನ್ನು ಹೊದಿಸಿದ ಅನೇಕ ವಿಧವಾದ ಧೂಪಗಳ ಹೊಗೆಯಿಂದಲೂ ಗಂಧಾದಿಗಳಿಂದ ಸುವಾಸಿತವಾದ ತನ್ನ ಪ್ರಿಯನ ಹಾಸಿಗೆಯ ಮೇಲಕ್ಕೆ ಮೆಲ್ಲನೆ ಬಂದಳು. ೬೨. ಅವಳ ಇಂದಿನ ನಡೆ, ನುಡಿ, ಮುಖ ವಿಕಾಸ, ನಗೆಗಣ್ಣು ಮನಸ್ಸಿನ ಅನುರಾಗ ಇವು ಎಂದಿನಂತೆ ಇಲ್ಲ. ಹೊಸ ಪರಿಯಾಗಿದೆ ಎಂದು ತಿಳಿದು ರಾಜನು ಕಾಂತೆಯನ್ನು ನೋಡಿದನು. ಅವಳ ನಡೆ ನುಡಿ, ನೋಟಗಳಲ್ಲಿ ಹೊಸ ಆಕರ್ಷಣೆಯಿದ್ದಿತು. ಅದನ್ನು ರಾಜು ಗಮನಿಸಿ ಹರ್ಷಿತನಾದನು. ವ॥ ಹಾಗೆ ರಾಜನು ಪ್ರಿಯೆಯ ಮುಖವನ್ನು ನೋಡಿದಾಗ ಅವನ ಹರ್ಷಸಾಗರವು ಉಕ್ಕಿ ಕಾಲುವೆ ಯಾಗಿ ಹರಿಯಿತು. ೬೩. ಚಿನ್ನದ ಕಡಗದ ಕೀಲನ್ನು ಸರಿಪಡಿಸುವನೋ ಎಂಬಂತೆ ಅರ ಗಿನ ಬಣ್ಣ ಹಚ್ಚಿದ ಅವಳ ಕೈಯನ್ನು ಹಿಡಿದು ರಾಜನು ಆ ಅಬಲೆಯನ್ನು ಪ್ರೀತಿಸಿ ತನ್ನ ಹತ್ತಿರಕ್ಕೆ ಕರೆದನು. ವ॥ ಹಾಗೆ ಕರೆದು ಮಂಚದ ಮೇಲೆ ಕುಳ್ಳಿರಿಸಿಕೊಂಡು. ೬೪. ಸೊಗಸಾಗಿ ಪ್ರೀತಿಯ ಮಾತುಗಳನ್ನಾಡುತ್ತಾ, ಕೋಮಲವಾದ ರೀತಿಯಲ್ಲಿ ತಲೆ ಗೂದಲನ್ನು ಹಿಡಿದುಕೊಳ್ಳುತ್ತಾ, ರೋಮಾಂಚವಾಗುವಂತೆ ತಬ್ಬಿಕೊಳ್ಳುತ್ತಾ, ಮೃದು ವಾಗಿ ಮುತ್ತಿಡುತ್ತಾ. ಸರಸವಾದ ತುಟಿಗಳನ್ನು ಕಚ್ಚಿ ಪೀಡಿಸುತ್ತಾ ಇವುಗಳಿಂದ

ವ॥ ಅಂತು ಸುಸಿಲೆಸಕದಿಂ ವಸುಮತೀವಲ್ಲಭೆಯುಂ ವಸುಧಾಧಿಪತಿಯುಂ ಬಟಲ್ದು

ವಿಳಸದಮರಾಪಗಾ ಸ
ತ್ಪುಳಿನ ಸ್ಥಳದಲ್ಲಿ ಹಂಸಿಹಂಸರ್ ನಿದ್ರಾ
ವಿಳರಾಗಿರ್ಪಂತೆಸೆದರ್
ಸುಳಳಿತಮೃದುತಳ್ಪದಲ್ಲಿ ತದ್ದಂಪತಿಗಳ್ ೬೫

ವ॥ ಅಂತು ನಿದ್ರಾಸಕ್ತರಾಗಿರ್ದಾಗಳ್ ಬೆಳಗಪ್ಪಜಾವದೊಳ್ ವಸುಮತೀದೇವಿ

ಕಂ॥ ಸುರಕರಿಯುನಿಂದುವಂ ಕೇ
ಸರಿಯಂ ದುಗ್ಧಾಬ್ಧಿಯುಂ ದಿವಾಕರನಂ ಬಂ
ಧುರ ಪುಷ್ಪಮಾಲೆಯಂ ವಾ
ರಿರುಹಾನನೆ ಕನಸಿನೊಳ್ ಮಿಗೆ ಕಂಡಳ್ ೬೬

ವ॥ ಅಂತು ಸುಸ್ವಪ್ನಮಂ ಕಂಡು ಸುಖನಿದ್ರೆದಿಳಿದು ಕುಳ್ಳಿರ್ದರಸಂಗೆ ತದ್ವಿಶೇಷಮಂ ಪೇಟಲರಸಂ ಬೆಳಗಾಗಲೊಡಂ ಪುರೋಹಿತರಂ ಕರೆಯಿಸಿ ತದ್ವೃತ್ತಾಂತಮಂ ಪೇಟಲೊಡಂ

ಕಂ॥ ಕರಿಯಿಂ ಶಶಿಯಿಂ ಹರಿಯಿಂ
ಶರನಿಧಿಯಿಂ ರವಿಯಿನೆಸೆವ ಪುಷ್ಪದಿನಧಿಕಂ
ಕರುಣಿ ಪರಾಕ್ರಮಿ ಪೂಜ್ಯಂ
ಸ್ಥಿರತೇಜಂ ನೃಪತಿ ಪುಟ್ಟುಗುಂ ಸುಕುಮಾರಂ ೬೭

ಇಮ್ಮಡಿಸಿದ ರುಚಿಯುಳ್ಳ ಕಾಮಕೇಳಿಯನ್ನು ನಡೆಯಿಸುತ್ತಾ, ಮನಸ್ಸಿಗೆ ಹೆಚ್ಚಾದ ಸಂಭ್ರಮಾನುರಾಗವನ್ನುಂಟುಮಾಡುವಂತೆ ಪರಸ್ಪರ ಕೂಡುತ್ತಾ ಅತಿ ಸೌಖ್ಯವೆಂಬ ಅಮೃತ ಸಾಗರದಲ್ಲಿ ಮುಳುಗಿದರು. ವ॥ ಹಾಗೆ ರತಿಕ್ರೀಡೆಯನ್ನು ನಡೆಯಿಸಿ ವಸುಮತೀ ದೇವಿಯೂ ರಾಜನೂ ಬಳಲಿ— ೬೫. ಮನೋಹರವಾದ ಮೃದುವಾದ ಹಾಸಿಗೆಯ ಮೇಲೆ ಮಲಗಿದ್ದ ಆ ದಂಪತಿಗಳು ಉಜ್ಜ್ವಲವಾದ ಗಂಗಾನದಿಯ ಮರಳು ರಾಶಿಯ ಮೇಲೆ ನಿದ್ದೆ ಮಾಡುತ್ತಿದ್ದ ಹಂಸಿ ಹಂಸಗಳ ಜೋಡಿಯಂತೆ ಎಸೆದರು. ಹಾಗೆ ನಿದ್ರಿಸು ತ್ತಿರುವಾಗ ಬೆಳಗಿನ ಜಾವದಲ್ಲಿ ವಸುಮತೀದೇವಿಯು ೬೬. ಐರಾವತ, ಚಂದ್ರ, ಸಿಂಹ, ಕ್ಷೀರಸಮುದ್ರ, ಸೂರ್ಯ, ಸುಂದರವಾದ ಹೂವಿನ ಹಾರ, ಇವುಗಳನ್ನು ಕನಸಿನಲ್ಲಿ ಕಂಡಳು. ವ॥ ಹಾಗೆ ಸುಸ್ವಪ್ನವನ್ನು ಕಂಡು ಸುಖನಿದ್ರೆ ತಿಳಿದು, ಎದ್ದು ಕುಳಿತಿದ್ದ ಅರಸನಿಗೆ ಆ ಸ್ವಪ್ನ ವೃತ್ತಾಂತವನ್ನು ಹೇಳಿದಳು. ಅರಸನು ಬೆಳಗಾದ ಕೂಡಲೆ ಪುರೋಹಿತರನ್ನು ಕರೆಯಿಸಿ ಆ ವಿಷಯವನ್ನು ತಿಳಿಸಿದನು. ೬೭. ಆನೆ, ಚಂದ್ರ, ಸಿಂಹ, ಸಮುದ್ರ, ಸೂರ್ಯ, ಹೂವು ಇವುಗಳನ್ನು ಕಂಡುದರಿಂದ, ಕರುಣೆಯೂ, ಪರಾಕ್ರಮಿಯೂ, ಪೂಜ್ಯನೂ ಸ್ಥಿರವಾದ ತೇಜಸ್ಸುಳ್ಳವನೂ ಆದ ರಾಜಕುಮಾರನು ಹುಟ್ಟುವನು.

ವ॥ ಎಂದು ಸ್ವಪ್ನಫಲಮಂ ಪೇೞ್ದು ಪುರೋಹಿತಂಗೆ ಕರ್ಪೂರತಾಂಬೂಲಾದಿ ದಾನದಿಂ ಕಳಿಪಿ ಬೞಿಕಾದಿನಂ ಮೊದಲಾಗಿ ವಸುಮತೀದೇವಿ ನಾನಾವ್ರತನಿಯಮದಿಂದಿರ್ಪಿನಂ ಪಲವುಂದಿನಂ ಕಳೆಯೆ

ಕಂ॥ ನಡೆಯೊಳಡಿಯಿಟ್ಟು ಪೆಂಪಿನ
ನಡುವಿನೊಳೆಡೆಗೆಯ್ದು ನುಡಿಯೊಳೆಡೆ ಸಂದಲರ್ಗ
ಣ್ಗಡೆವಿಡಿದು ನೆಲಸಿ ಚೆಲ್ವಂ
ಪಡೆದೆಸೆದತ್ತಲಸವೃತ್ತಿ ತತ್ಕೋಮಲೆಯಾ ೬೮

ವ॥ ಅದಂ ಕಮಳಿನಿ ಕಂಡಿಳಾಪತಿಯ ಸಮಯಂಬಡೆದೇಕಾಂತಕ್ಕೆ ಬಂದು

ಚಂ॥ ವನಿತೆಯ ಗರ್ಭಚಿಹ್ನಮತಿ ಕೌತುಕಮೆಂತೆನೆ ರತ್ನನೂಪುರ
ಧ್ವನಿಗಲಸಿತ್ತು ಮಂದಗತಿಯೊಳ್ನಡು ಕಾಂಚಿಗೆ ತಿಣ್ಣಮಾದುದಾ
ನನರುಚಿಚಂದ್ರನಂಬುಪಮೆಗೊಪ್ಪಿದುದುಚ್ಚಕುಚಾಗ್ರಮಕ್ಕಿಕ
ರ್ಪನುನಯಮಾದುದಂಗಲತೆಕಾಂತಿಯನಾಂತುದಿಳಾಧಿನಾಯಕಾ ೬೯

ವ॥ ಎಂಬುದಾಗಿ ಕನಸಿನ ಫಲವನ್ನು ಹೇಳಿದ ಪುರೋಹಿತನನ್ನು ಪಚ್ಚ ಕರ್ಪೂರ ಮಿಶ್ರವಾದ ತಾಂಬೂಲವೇ ಮುಂತಾದ ಅನೇಕ ದಾನ ಸನ್ಮಾನಗಳಿಂದ ಗೌರವಿಸಿ ಕಳುಹಿಸಿದನು. ಬಳಿಕ ಆ ದಿನ ಮೊದಲುಗೊಂಡು ವಸುಮತಿದೇವಿಯು ಅನೇಕ ವ್ರತಗಳನ್ನು ನಿಯಮದಿಂದ ಮಾಡಿದಳು. ಹಲವು ದಿನಗಳು ಹೀಗೆ ಕಳೆಯಲು ೬೮. ಮೊದಲು ಅಲಸಿಕೆಯು ಅವಳ ನಡಗೆಯಲ್ಲಿ ಅಡಿಯಿಟ್ಟಿತು. ಅನಂತರ ಸೊಂಟದಲ್ಲಿ ಅವಕಾಶ ಮಾಡಿಕೊಂಡಿತು. ಆಮೇಲೆ ನುಡಿಯಲ್ಲಿ ಸೇರಿಕೊಂಡಿತು. ತರುವಾಯ ತಾವರೆಯ ಎಸಳಿನಂಥ ಕಂಗಳ ಕಡೆನೋಟವನ್ನು ಆಶ್ರಯಿಸಿತು. ಹೀಗೆ ಆ ಕೋಮಲಾಂಗಿಯ ಅಲಸ ವೃತ್ತಿಯು ಸುಂದರವಾಗಿ ಕಾಣಿಸಿತು. ಗರ್ಭಭಾರದಿಂದ ಅವಳು ಮೆಲ್ಲಗೆ ನಡೆದಳು. ಸೊಂಟವು ದಪ್ಪವಾಗಿ ಚಲಿಸಲು ಕಷ್ಟವಾಯಿತು. ನುಡಿಯೂ ನೋಟವೂ ನಿದಾನವಾಯಿತು. ವ॥ ಅದನ್ನು ಕಮಳಿನಿಯು ಕಂಡು ಸಮಯ ನೋಡಿ ರಾಜನೊಬ್ಬನೇ ಇರುವಾಗ ಹತ್ತಿರಕ್ಕೆ ಬಂದು ಹೇಳಿದಳು. ೬೯. "ರಾಣಿಯ ಗರ್ಭ ಚಿಹ್ನೆಗಳು ಆಶ್ಚರ್ಯಕರಗಳಾಗಿವೆ. ಹೇಗೆಂದರೆ—ಅವಳ ಮೆಲು ನಡೆಯು ರತ್ನದ ಕಾಲಂದಿಗೆಯ ಸದ್ದಿಗೆ ಬೇಸರಿಸಿತ್ತು. ಕೋಮಲವಾದ ಸೊಂಟಕ್ಕೆ ಒಡ್ಯಾಣವು ಭಾರವಾಯಿತು. ಮುಖದ ಕಾಂತಿಯು ಚಂದ್ರನ ಹೋಲಿಕೆಗೆ ಸರಿ ಹೋದಿತು. ಎತ್ತರವಾದ ಮೊಲೆಗಳ ತುದಿಗೆ ಕಪ್ಪು ಬಣ್ಣವು ಒಪ್ಪವಾಗಿದ್ದಿತು. ರಾಜನೆ ಅವಳ ಅಂಗಲತೆಯು ಕಾಂತಿಯುಕ್ತವಾಗಿದೆ." ಟಿ. ಗರ್ಭಭಾರದಿಂದ ಒಡವೆಗಳನ್ನೂ ಧರಿಸಲು ಅವಳು ಇಷ್ಟಪಡಲಿಲ್ಲ. ಮುಖವು ಚಂದ್ರನಂತೆ ಕಾಂತಿಯುಕ್ತವಾಯಿತು. ಚೂಚುಕಗಳು ಕಪ್ಪಾದುವು. ಶರೀರವೇ ಕಾಂತಿಯಿಂದ ಹೊಳೆಯಿತು ಎಂದು

ವ॥ ಎಂದು ನಿರ್ಭರ ಗರ್ಭವಾರ್ತೆಯಂ ಪೇೞ್ದು ಸೀಮಂತಸಮಯಮೆಂಬುದುಮರಸನ ವೆಗ್ಗಿ ಪಸಾಯುನಂಗೊಟ್ಟು ಪರಮಾನಂದಮಂ ತಳೆದು

ಮನೋಜ್ಞ॥ ಮಹೀತಳಾಧೀಶ್ವರಂ ನಿಜಮನೋರಮಾಗರ್ಭದಿಂ
ಮಹೋತ್ಸವಾನಂದಮಂ ತಳೆದು ಗರ್ಭಸೀಮಂತದಿಂ
ಸುಹೃದ್ವಿಧಾನ ಪ್ರಿಯಾಸ್ಪದಮಿದಕ್ಕೆನುತ್ತಾ ಕ್ಷಣಂ
ಪ್ರಹಾರವರ್ಮಾಖ್ಯನಂ ಕರೆಯಲಟ್ಟಿದಂ ಭೂಭುಜಂ ೨೦

ವ॥ ಅಂತು ತನಗೆ ಪ್ರಾಣಮಿತ್ರನಪ್ಪ ಮಿಥಿಲಾಪತಿ ಪ್ರಹಾರವರ್ಮನಂ ನಿಜಕಾಂತೆ ಪ್ರಿಯಂವದೆ ಸಹಿತಂ ಬರ್ಪುದೆಂದು ಕರೆಯೆಂಕಳಿಪಿ

ಚಂ॥ ಸಕಲಸುವಸ್ತ್ರಮಂ ಸಕಲ ನಿರ್ಮಲಸನ್ನುತರತ್ನಕೋಟಿಯಂ
ಸಕಲಸುವಸ್ತುವಂ ತಳೆದು ತನ್ನ ಮನೋರಮೆಯುಂ ಸುತರ್ಕಳುಂ
ಪ್ರಕಟಿತ ಸೇನೆಯುಂ ಬೆರಸು ಬಂದನನೇಕವಿಭೂತಿಯಿಂದೆ ಕೌ
ತುಕಮೆನಿಸಲ್ ನೆಗೞ್ದ ಮಿಥಿಲಾಪತಿ ಪುಷ್ಪಪುರಕ್ಕೆ ರಾಗದಿಂ ೨೧

ವ॥ ಅಂತು ಬಂದ ಪ್ರಹಾರವರ್ಮನಂ ರಾಜಹಂಸಂ ಪುರಪ್ರವೇಶಂ ಮಾಡಿಸಿ ವಸುಮತೀ ದೇವಿಯ ಸೀಮಂತ ಸಂಭ್ರಮದಿನಿರಲೊಡಂ

ಭಾವ. ವ॥ ಎಂದು ತುಂಬು ಬಸುರಿನ ವಿಷಯವನ್ನು ಸೂಚಿಸಿ ಸೀಮಂತ ಸಮಯವೆಂದು ಹೇಳಿದಳು. ಅರಸನು ಸಂತಸದಿಂದ ಉಡುಗೊರೆಯನ್ನಿತ್ತು ಅವಳನ್ನು ಕಳುಹಿಸಿದನು. ಮತ್ತು ಪರಮಾನಂದಭರಿತನಾದನು. ೨೦. ರಾಜನು ತನ್ನ ಪ್ರಿಯೆಯ ಗರ್ಭಧಾರಣ ದಿಂದ ಸಂತುಷ್ಟನಾಗಿ "ಗರ್ಭ ಸಂಬಂಧವಾದ ಸೀಮಂತ ಮಹೋತ್ಸವವು ಮಿತ್ರರನ್ನು ಸಂಗ್ರಹಿಸುವ ಪ್ರಿಯಕರವಾದ ಉತ್ಸವವಾಗಲಿ" ಎಂದು ಯೋಚಿಸಿ ಕೂಡಲೆ ಪ್ರಹಾರ ವರ್ಮನೆಂಬುವನನ್ನು ಕರೆತರಲು ದೂತರನ್ನಟ್ಟಿದನು. ವ॥ ಹಾಗೆ ತನಗೆ ಜೀವದ ಗೆಳೆಯನೂ ಮಿಥಿಲೆಯ ಅರಸನೂ ಆದ ಪ್ರಹಾರವರ್ಮನು ತನ್ನ ಕಾಂತೆ ಪ್ರಿಯಂವದೆ ಯೊಡನೆ ಬರಬೇಕೆಂದು ಆತನನ್ನು ಕರೆಯಲು ದೂತರಿಗೆ ಹೇಳಿ ಕಳುಹಿಸಿದನು. ೨೧. ಹೆಸರುವಾಸಿಯಾದ ಮಿಥಿಲಾ ರಾಜನಾದ ಪ್ರಹಾರವರ್ಮನು ತನ್ನ ಜೊತೆಯಲ್ಲಿ ಅನೇಕ ವಿಧವಾದ ಉತ್ತಮ ವಸ್ತ್ರಗಳನ್ನೂ, ನಿರ್ಮಲವಾದ ಬೆಲೆಬಾಳುವ ರತ್ನ ಕೋಟಿಯನ್ನೂ ಅನೇಕ ಒಳ್ಳೆಯ ವಸ್ತುಗಳನ್ನೂ ತೆಗೆದುಕೊಂಡು ತನ್ನ ಹೆಂಡತಿ ಮಕ್ಕಳೊಡನೆ ಮತ್ತು ದೊಡ್ಡ ಸೈನ್ಯದೊಡನೆ ಅಚ್ಚರಿಯನ್ನುಂಟುಮಾಡುವ ಐಶ್ವರ್ಯದಿಂದ, ಪ್ರೀತಿಯಿಂದ ಪುಷ್ಪಪುರಕ್ಕೆ ಬಂದನು. ವ॥ ಹಾಗೆ ಬಂದ ಪ್ರಹಾರವರ್ಮನನ್ನು ರಾಜಹಂಸನು ಪುರ ದೊಳಕ್ಕೆ ಕರೆದೊಯ್ದನು. ಅನಂತರ ವಸುಮತಿಯು ಸೀಮಂತ ಮಹೋತ್ಸವದ ಸಡಗರ

ಮ॥ ಪದಸಂಘಟ್ಟನೆಯಿಂ ಶಿಲೋಚ್ಚಯಕುಲಂ ನುರ್ಗಾಗೆ ಸೇನಾ ಪ್ರಭಾ
ರದಿನುರ್ವೀತಳಮಾೞ್ಗೆ ದುರ್ದಮ ಧನುರ್ಜ್ಯಾರಾವದಿಂ ಸಿಂಧುಗಳ್
ಕದಡಲ್ ತುಂಗಪತಾಕೆಯಿಂ ಗಗನವಾದಂತೀವೆ ಮೇಲೆತ್ತಿ ಮು
ತ್ತಿದನೊತ್ತಂಬದೆ ರಾಜಹಂಸಪುರಮಂ ಶ್ರೀಮಾಳವಕ್ಷೋಣಿಪಂ ೭೨

ವ॥ ಅಂತು ಪೂರ್ವವಿರೋಧಿ ಮಾಳವದೇಶಾಧೀಶ್ವರನಪ್ಪ ಮಾನಸಾರಂ ಕುಸುಮಪುರಮಂ ಮುತ್ತಿ

ಕವಿಕವಿ ನೂಂಕು ನೂಂಕಗೞಂ ಲಂಘಿಸಿ ಕೋಟೆಯನೇಱಿಯಾಳ್ಗಳಂ
ತಿವಿತಿವಿಯೆಂದು ಲಗ್ಗೆವಱೆಯಂ ಪೊಡೆದಬ್ಬರಮುರ್ವಿಯುರ್ವಿಯಂ
ಕಿವಿಗಿಡಿಸುತ್ತಿರಲ್ ದನಿಯದೇನೆನುತುಂ ಕಲಿರಾಜಹಂಸನ
ಶ್ವವನೊಸೆದೇಱಿಯೆಕ್ಕತುಳದಿಂ ಪೊಱಮಟ್ಟರಿಯೊಳ್ ಪೊಣರ್ಚಿದಂ ೭೩

ವ॥ ಆ ವ್ಯತಿಕರದೊಳ್ ತನ್ನಾಪ್ತಬಲವೆಲ್ಲಮುಂ ಪೊಱಮಟ್ಟಸುವುದುಂ ಮೀಱಿದ ಮುಕ್ತಕರ ಮುಕ್ತಯಂತ್ರ ಮುಕ್ತ ಮುಕ್ತಾಮುಕ್ತಮೆಂಬ ಶಸ್ತ್ರಾಸ್ತ್ರಪ್ರಯೋಗದಿಂ ಕೇಶಾಕೇಶಿ ನಖಾನಖಿ ದಂತಾದಂತಿ ಕಚಾಕಚಿ ಮುಷ್ಟಾಮುಷ್ಟಿಯೆಂಬ ಸಂಕುಳಯುದ್ಧದಿಂ ನಿರ್ವಿಚಾರಜೀವಿತ

ದಿಂದ ಕಾಲ ಕಳೆಯುತ್ತಿದ್ದನು. ೭೨. ಆಗ ಸೇನೆಯ ಕಾಲುಗಳ ತುಳಿತದಿಂದ ಗುಡ್ಡಗಳೆಲ್ಲ ನೆಗ್ಗಿ ಪುಡಿಯಾದುವು. ಸೇನೆಯ ಬಹು ಭಾರದಿಂದ ಭೂಮಿಯು ಕೆಳಕ್ಕೆ ತಗ್ಗಿತು. ಅಡಗಿಸಲಾಗದ ಬಿಲ್ಲುಗಳ ಹೆದೆಗಳ ಶಬ್ದದಿಂದ ನದಿಗಳು ಕದಡಿ ತುಳುಕಿದುವು. ಎತ್ತರವಾದ ಪತಾಕೆಗಳಿಂದ ಆಕಾಶವೆಲ್ಲ ತುಂಬಿ ಹೋಯಿತು. ಇಂಥ ಸೇನೆಯೊಡನೆ ರಭಸದಿಂದ ನುಗ್ಗಿ ಮಾಳವ ರಾಜನು ರಾಜಹಂಸನ ಕುಸುಮಪುರಕ್ಕೆ ಮುತ್ತಿಗೆ ಹಾಕಿದನು. ವ॥ ಹೀಗೆ ಹಿಂದಿನ ಹಗೆಯಾದ ಮಾಳವ ರಾಜ ಮಾನಸಾರನು ಕುಸುಮಪುರವನ್ನು ಮುತ್ತಿದನು. ೭೩. ಮುತ್ತು ಮುತ್ತು, ತಳ್ಳು ತಳ್ಳು, ಕಂದಕವನ್ನು ದಾಟಿ ಕೋಟೆಯ ಮೇಲೆ ಬತ್ತೇರಿಯಲ್ಲಿ ನಿಂತಿರುವ ಸೈನಿಕರನ್ನು ತಿವಿ ತಿವಿ, ಎಂದು ಹೇಳುತ್ತಾ ದಾಳಿ ಮಾಡಲು ತಮಟೆಗಳನ್ನು ಹೊಡೆದರು. ಅದರ ಬಿದುರು ದನಿಯು ಉಬ್ಬಿ ಹರಡಿ ಭೂಮಿಯನ್ನೇ ಕಿವುಡುಗೊಳಿಸಿತು. ಆಗ 'ಇದೇನು ದನಿ' ಎಂದು ಕೇಳುತ್ತಾ ಕಲಿಯಾದ ರಾಜಹಂಸನು ಉತ್ಸಾಹದಿಂದ ಕುದುರೆಯನ್ನೇರಿ ಶೌರ್ಯದಿಂದ ಹಗೆಗಳನ್ನು ಎದುರಿಸಿದನು. ವ॥ ಆ ಕಾಳಗದಲ್ಲಿ ತನ್ನ ಆಪ್ತ ಬಲವನ್ನೆಲ್ಲ ಕೋಟೆಯಿಂದ ಹೊರಕ್ಕೆ ಹೊರಡಿಸಿದನು. ಅವರು ಶಕ್ತಿ ಮೀರಿ ಮುಕ್ತ ಕರಮುಕ್ತ ಯಂತ್ರಮುಕ್ತ ಮುಕ್ತಾಮುಕ್ತ ಮೊದಲಾದ ರೀತಿಯಿಂದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಕೇಶಾಕೇಶಿ, ನಖಾನಖಿ, ದಂತಾದಂತಿ, ಕಚಾಕಚಿ, ಮುಷ್ಟಾಮುಷ್ಟಿ ಮೊದಲಾದ ಬಗೆ ಬಗೆಯ ದ್ವಂದ್ವ ಯುದ್ಧವನ್ನು ಮಾಡಿದರು. ತಮ್ಮ ಜೀವವನ್ನು ಲೆಕ್ಕಿಸದೆ ಕಾದಿದರು. ಆಗ ಮಗಧ ರಾಜನು ಮಾನಸಾರನ

ರಾಗಿ ಕಾದುವಾಗಳ್ ಮಾಗಧೇಶ್ವರಂ ಮಾನಸಾರನನಭಿಮಾನ ಹೀನನಪ್ಪಂತು ವಿರಥನಂ ಮಾಡಿ ಮುಂದುಗಾಣದೆ ಬೆಂಗೊಟ್ಟೋಡುವಂತೆ ಭಂಗಂಬಡಿಸಿ ಪಗೆಯೆಲ್ಲಮಂ ಪುಡಿಗುಟ್ಟಿ ಮುಂದುಗೆಡಿಸಿ ಬಂದಬಟ್ಟೆಯಂ ಪತ್ತಿಸಲವಂ ಕೈಪಱಿದಕರಿಯಂತೆ ಸತ್ವಗುಂದಿ ಪೋಗುತ್ತುಂ

ಮ॥ ಬಲಮೆಲ್ಲಂ ಕಡಿಖಂಡಮಾಯ್ತುಪಜಯಂ ಮೈವೆರ್ಚಿರಲ್ ದುರ್ಯಶಂ
ತಲೆದೋಱಿತ್ತಭಿಮಾನಮೊರ್ಗುಡಿಸಿತಿನ್ನೇನೆಂದು ಮದ್ರಾಜ್ಯದೊಳ್
ನೆಲಸಿರ್ಪೆಂ ಸುಡು ಜೀವದಾಸೆಯನೆನುತ್ತುಂ ಮಾನಸಾರಂ ವನ
ಸ್ಥಲಮಂ ಪೊಕ್ಕತಿರೋಷದಿಂದೆ ಸತತಂ ತಾಳ್ದಂ ತಪೋನಿಷ್ಠೆಯಂ ೭೪

ಕಂ॥ ದುರ್ಗಮವೈರಿಜಯಕ್ಕಿದು
ಮಾರ್ಗಂ ನಿಜಮೊಂದು ಮಾನಸಾರನೃಪಾಲಂ
ದುರ್ಗಿಯನುಪಾಸ್ತಿಗೈಯ್ಯು
ತ್ತಾರ್ಗಮಗೋಚರಮೆನಿಪ್ಪರಣ್ಯದೊಳಿರ್ದಂ ೭೫

ವ॥ ಅಂತು ಮಾನಸಾರಂ ಕಾನನಮಂ ಪೊಕ್ಕಂ ಇತ್ತಲಾ ರಾಜಹಂಸಂ ನಿಧಿಪುರುಷಂ ನೀತಿಯಂ ಪಡೆದಂತೆ ಮುನ್ನಮೆ ಉನ್ನತ ಪ್ರಭಾವದಿಂ ಸನ್ನುತಿವಡೆದಿರ್ದಂಗೆ ಜಯಪ್ರಮೋದಂ ಸಮನಿಸುವುದುಂ

ಅಭಿಮಾನವನ್ನು ಮುರಿದು, ರಥವನ್ನು ನಾಶಮಾಡಿ, ಮುಂದೇನು ಮಾಡಲೂ ತೋರದೆ ಬೆನ್ನಿತ್ತು ಓಡುವಂತೆ ಆತನನ್ನು ಅವಮಾನಕ್ಕೆ ಗುರಿಪಡಿಸಿದನು. ಸೈನ್ಯವನ್ನೆಲ್ಲ ಪುಡಿಪುಡಿ ಮಾಡಿ ಮುಂದೆ ನುಗ್ಗದಂತೆ ತಡೆದು ಬಂದ ದಾರಿಯಿಂದಲೇ ಓಡಿಸಿದನು. ಆಗ ಅವನು ಸೊಂಡಲು ಕತ್ತರಿಸಿದ ಆನೆಯಂತೆ ಶಕ್ತಿಗುಂದಿ ಹಿಂದಿರುಗಿದನು ಟಿ. ಮುಕ್ತ = ಬಾಣಬಿಡುವುದು, ಕರಮುಕ್ತ = ಕೈಯಿಂದ ಬಿಡುವುದು, ಯಂತ್ರಮುಕ್ತ = ಯಂತ್ರದಿಂದ ಬಿಡುವುದು, ಮುಕ್ತಾಮುಕ್ತ = ಬಿಟ್ಟೂ ಬಿಡದಂತೆ ಬಾಣ ಪ್ರಯೋಗ, ಕೇಶಾಕೇಶಿ = ತಲೆಗೂದಲನ್ನು ಹಿಡಿದು ಹೊಡೆದಾಡುವುದು, ನಖಾನಖಿ = ಉಗುರುಗಳಿಂದ—ದಂತಾದಂತಿ = ಹಲ್ಲುಗಳಿಂದ ಕಚ್ಚಿ—ಕಚಾಕಚಿ = ಕೂದಲನ್ನು ಹಿಡಿದೆಳೆಯುವುದು, ಮುಷ್ಟಾಮುಷ್ಟಿ = ಮುಷ್ಟಿಗಳಿಂದ ಹೊಡೆದಾಡುವುದು. ೭೪. ಸೇನೆಯೆಲ್ಲ ಕತ್ತರಿಸಲ್ಪಟ್ಟು ತುಂಡು ತುಂಡಾಯಿತು. ಪ್ರಬಲವಾದ ಸೋಲುಂಟಾಯಿತು. ಕೆಟ್ಟ ಹೆಸರು ಹಬ್ಬಿತು. ಅಭಿಮಾನವು ನಾಶವಾಯಿತು. ಇನ್ನು ಏನೆಂದು ಮುಖ ತೆಗೆದುಕೊಂಡು ರಾಜ್ಯದಲ್ಲಿ ವಾಸಮಾಡಲಿ ಬದುಕುವ ಆಸೆಯನ್ನು ಸುಟ್ಟು ಹಾಕು' ಎಂದು ಯೋಚಿಸಿ ರೋಷದಿಂದ ಮಾನಸಾರನು ಕಾಡಿಗೆ ಹೋಗಿ ನಿಷ್ಠೆಯಿಂದ ತಪಸ್ಸನ್ನಾಚರಿಸಿದನು. ೭೫. ಸೋಲಿಸಲು ಕಷ್ಟವಾದ ಶತ್ರುವನ್ನು ಗೆಲ್ಲಲು ಇದೇ ತಕ್ಕ ದಾರಿ ಎಂದು ಚಿಂತಿಸಿ ಮಾನಸಾರನು ಯಾರಿಗೂ ತಿಳಿಯದಂತೆ ಕಾಡಿನಲ್ಲಿ ವಾಸಿಸುತ್ತಾ ದುರ್ಗಿಯ ಉಪಾಸನೆಯನ್ನು ಮಾಡಿದನು. ವ॥ ಹಾಗೆ ಅತ್ತ ಮಾನಸಾರನು ಕಾಡನ್ನು ಹೊಕ್ಕನು. ಇತ್ತ ಆ ರಾಜಹಂಸನು ನಿಧಿ ಪಡೆದವನು ರಾಜನೀತಿ ಪ್ರಯೋಗದಲ್ಲಿ ಸಾಮರ್ಥ್ಯವನ್ನೂ ಪಡೆದಂತೆ, ಮೊದಲೆ

ಚಂ॥ ಸುರಕರಿಬಂದು ಪರ್ಬಿದ ಸರೋವರಮಂ ಮನಮುರ್ಕೆ ಪೊಕ್ಕು ಪು
ಷ್ಕರದಿನೊಱಲ್ದು ಪುಷ್ಕರಮನೀಂಟಿ ಸರೋಜಮನೆತ್ತಿಕಿಱ್ತು ನಿ
ರ್ಭರ ನಿಜಲೀಲೆಯಂ ಮೆಱೆವವೊಲ್ ಪ್ರತಿಪಕ್ಷಬಲಾಬ್ಧಿಯಂ ನೆಲಂ
ಬಿರಿಯೆ ಕಲಂಕಿ ಸತ್ವದೊದವಂ ತಳೆದಂ ಕಲಿಮಾಗಧೇಶ್ವರಂ ೭೬

ತನ್ನೆಸವಿಂಗೆ ತನ್ನವಿಭವಕ್ಕೆ ನೆಗೞ್ತೆಯ ತನ್ನ ಚೆನ್ನ ಸಂ
ಪನ್ನತೆಗೆಂದು ತನ್ನಕುಲದಾಯತಿಗೊಪ್ಪುವಮಾೞ್ಕೆಯಿಂ ಕಳಾ
ಸನ್ನತಮಾಪ್ತಬಂಧುಜನಮಚ್ಚರಿಯೆಂದೆನಲುತ್ಸವಂ ಮಿಗಲ್
ತನ್ನಯಚಿತ್ತವಲ್ಲಭೆಗೆ ಗೆಂಟಿಗೆ ಕಟ್ಟಿದನುರ್ವರಾಧಿಪಂ ೭೭

ವ॥ ಅಂತು ರಮಣೀಯಮಪ್ಪಂತು ನಿಜರಮಣಿಗೆ ಸೀಮಂತಮನೆಸಗಿ

ಸಕಲದಿಗಂತರಕ್ಕಖಿಳ ಗೂಢಚರರ್ಗಳನಟ್ಟಿ ಶಾತ್ರವ
ಪ್ರಕರದ ಸದ್ಬಲಾಬಲತೆಯಂ ತಿಳಿಯುತ್ತನುರಾಗ ಲಕ್ಷ್ಮಿಯಂ
ಸುಕರಮೆನಲ್ ಮುಖಾಂಬುಜದೊಳಾಂತು ನೆಗೞ್ದ ನಿಜಾತ್ಮಮಿತ್ರನಂ
ತಿಕದೊಳಿರಲ್ ಸುಖಂಬಡೆದು ರಂಜಿಸುತಿರ್ದನಭಂಗವಿಕ್ರಮಂ ೭೮

ಉನ್ನತವಾದ ಪ್ರಭುಶಕ್ತಿಯಿಂದ ಯಶಸ್ಸನ್ನು ಪಡೆದಿದ್ದು ಈಗ ವಿಜಯದಿಂದ ಪ್ರಮೋದವನ್ನು ಪಡೆದನು. ೭೬. ಐರಾವತವು ವಿಸ್ತಾರವಾದ ಸರೋವರವೊಂದನ್ನು ಹೊಕ್ಕು ತನ್ನ ಸೊಂಡಲಿನಿಂದ, ಘೀಳಿಡುತ್ತಾ ನೀರನ್ನು ಕುಡಿದು ತಾವರೆ ಹೂಗಳನ್ನು ಮೇಲಕ್ಕೆ ಸೆಳೆದು ಕಿತ್ತು ಹಾಕಿ ತನ್ನ ಲೀಲೆಯನ್ನು ಅತಿಶಯವಾಗಿ ಮೆರೆಯುತ್ತದೆ. ಹಾಗೆಯೇ ಕಲಿಯಾದ ಮಗಧ ರಾಜನಾದ ರಾಜಹಂಸನು ಪಕ್ಷದ ಸೇನೆಯೆಂಬ ಸಮುದ್ರವನ್ನು ಹೊಕ್ಕು ನೆಲವು ಬಿರಿಯುವಂತೆ ಕಲಕಿ (ಚದುರಿಸಿ) ಅಸಾಧಾರಣವಾದ ಪರಾಕ್ರಮದಿಂದ ಕೀರ್ತಿಯನ್ನು ಪಡೆದನು. ೭೭. ತನ್ನ ಅಂತಸ್ತು, ಐಶ್ವರ್ಯ, ಹೆಸರುವಾಸಿಯಾದ ಆಕರ್ಷಕವಾದ ಸೌಜನ್ಯ, ಕುಲದ ಕೀರ್ತಿ, ಇವಕ್ಕೆ ಒಪ್ಪುವ ರೀತಿಯಿಂದ ಆ ಕಲಾಪ್ರಿಯನಾದ ರಾಜನು ಆಪ್ತರೂ ಬಂಧುಗಳೂ ಅಚ್ಚರಿಪಡುವಂತೆ ಉತ್ಸವವನ್ನು ಮಾಡಿ ತನ್ನ ಪ್ರಿಯೆಗೆ ಸೀಮಂತವನ್ನು ಮಾಡಿದನು. ನೆತ್ತಿಯ ಕೂದಲನ್ನು ಇಬ್ಬಗೆಯಾಗಿ ಬಾಚಿ ಬೈತಲೆಬೆಗೆದನು. ವ॥ ಹೀಗೆ ರಮಣೀಯವಾದ ರೀತಿಯಲ್ಲಿ ತನ್ನ ಕಾಂತೆಗೆ ಸೀಮಂತವನ್ನು ಎಸಗಿದನು. ೭೮. ಎಲ್ಲ ದಿಗಂತರಗಳಿಗೂ ಗೂಢಚಾರರನ್ನು ಕಳುಹಿಸಿ ಶತ್ರುಗಳ ಬಲಾ ಬಲಗಳನ್ನು ತಿಳಿಯುತ್ತಿದ್ದನು. ತನ್ನ ಮುಖ ಕಮಲದಲ್ಲಿ ಅನುರಾಗ ಲಕ್ಷ್ಮಿಯನ್ನು ಲೀಲೆಯಿಂದ ಧರಿಸಿ (ಯಾವಾಗಲೂ ಪ್ರೀತಿಯಿಂದ ಮಾತನಾಡುತ್ತಾ) ಆಪ್ತ ಮಿತ್ರನು ಹತ್ತಿರದಲ್ಲಿಯೇ ಇರಲು ಆ ಮಹಾ ಪರಾಕ್ರಮಿಯು ಸುಖವನ್ನು

**ಇದು ನಿಖಿಲ ಬುಧಜನ ಮನೋವನಜವನ ದಿವಾಕರ ಕಿರಣ ಪ್ರತಿಮ ಪ್ರಸನ್ನ ಶ್ರೀಮದ ಭಂಗ ವಿಟ್ಠಲಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಪೀಠಿಕಾಪ್ರಕರಣಂ**

## ಪ್ರಥಮಾಶ್ವಾಸಂ

ಪಡೆದು ರಂಜಿಸುತ್ತಿದ್ದನು. ಎಲ್ಲ ವಿದ್ವಾಂಸರ ಮನಸ್ಸೆಂಬ ಕಮಲವನ್ನರಳಿಸುವ ಸೂರ್ಯನ ಕಿರಣಕ್ಕೆ ಸಮನಾದ, ಪ್ರಸನ್ನನಾದ, ಅಭಂಗ ವಿಟ್ಠಲನ ಪಾದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನಿಂದ ವಿರಚಿತವಾದ ಈ ಅಭಿನವದಶಕುಮಾರ ಚರಿತೆಯಲ್ಲಿ ಪೀಠಿಕಾ ಪ್ರಕರಣವೆಂಬ ಮೊದಲನೆಯ ಆಶ್ವಾಸವು ಮುಗಿಯಿತು.

# ದ್ವಿತೀಯಾಶ್ವಾಸಂ

ಕಂ॥ ಶ್ರೀ ವಸುಮತೀವರಂ ಸಕ
ಲಾವನಿಯಂ ಪಾಲಿಸುತ್ತನೂನವಿಲಾಸಂ
ಭೂವಿನುತಿವೆತ್ತನರ್ಥಿಜ
ನಾವಾಸಂ ಪದೆದಭಂಗವಿಟ್ಮಲಭೃತ್ಯಂ ೧

ವ॥ ಅದಲ್ಲದೆಯುಂ

ಉ॥ ಪೌರವಿಲಾಸಿನೀನಯನಕಾಂತಿ ಕವಲ್ವರಿದೊಪ್ಪುತಿರ್ಪ ಶೃಂ
ಗಾರರಸಪ್ರವಾಹದೊಳನಂತ ನೃಪಾಲಕ ಸತ್ಕಿರೀಟ ನೀ
ರೇರುಹಜಾಳದೊಳ್ ವಿವಿಧ ಸತ್ಕವಿ ಸಂಕುಲಮಧ್ಯದೊಳ್ ಮಹೋ
ದಾರದೆ ರಾಜಹಂಸ ನೃಪನೇನೆಸೆದಿರ್ದನೋ ಸತ್ಸಭಾಗ್ರದೊಳ್ ೨

ವ॥ ಅಂತು ಮನೋನುರಾಗದಿಂ ಮ್ಮೆಮೆವಡೆದು ಸಕಲರಾಜಪುತ್ರನೇತ್ರ ಪುತ್ರಿಕೆಗಳಂ ಕೃತಾರ್ಥಂ ಮಾಡುತ್ತುಂ ಸುಖಸಂಕಥಾ ವಿನೋದದಿಂ ಸಭಾಭವನದೊಳ್ ಸಿಂಹಾಸನಾಸೀನನಾಗಿ ಕುಳ್ಳಿರ್ದುದಮಾಸಮಯದೊಳೊರ್ವ ದೌವಾರಿಕಂ ಬಂದು ನಿಟಿಲತಟಘಟಿತಹಸ್ತ ಸಂಪುಟನಾಗಿ

೧. ಶ್ರೀ ವಸುಮತಿಯ ಪತಿಯೂ, ಶ್ರೇಷ್ಠವಾದ ವಿಲಾಸವುಳ್ಳವನೂ, ಯಾಚಕರಿಗೆ ಆಶ್ರಯನೂ, ಅಭಂಗ ವಿಟ್ಮಲನ ಮೆಚ್ಚಿನ ಸೇವಕನೂ ಆದ ರಾಜಹಂಸನು ಸಕಲ ಭೂಮಿಯನ್ನೂ ಪಾಲಿಸುತ್ತಾ ಭೂಮಿಯಲ್ಲಿ ಎಲ್ಲರ ಹೊಗಳಿಕೆಗೆ ಪಾತ್ರನಾದನು. ವ॥ ಅದೂ ಅಲ್ಲದೆ, ೨. ಪೌರನಾರಿಯರ ನಯನಗಳ ಕಾಂತಿಯು ಕವಲು ಕವಲಾಗಿ ಹರಿದು ಶೃಂಗಾರರಸ ಪ್ರವಾಹವಾಗಿ ಹೊಳೆಯಿತು. ಅದರಲ್ಲಿ ಅನೇಕ ರಾಜರ ಸುಂದರವಾದ ಕಿರೀಟಗಳೆಂಬ ಕಮಲಗಳ ಸಮೂಹವು ಪ್ರಕಾಶಿಸಿತು. ವಿವಿಧ ಸತ್ಕವಿಗಳ ನಡುವೆ ರಾಜಹಂಸ ಮಹಾರಾಜನು ಅತ್ಯೌದಾರ್ಯದಿಂದ ಕುಳಿತು ವಿಶೇಷವಾಗಿ ಪ್ರಕಾಶಿಸಿದನು. ರಾಜಹಂಸವು ಪ್ರವಾಹದಲ್ಲಿದ್ದ ತಾವರೆಗಳ ನಡುವೆ ಪ್ರಕಾಶಿಸುವಂತೆ ರಾಜಹಂಸರಾಜನು ಶೃಂಗಾರರಸ ಪ್ರವಾಹದಲ್ಲಿ ಕಿರೀಟಗಳೆಂಬ ಕಮಲವನದಲ್ಲಿ ಸತ್ಕವಿಗಳ ನಡುವೆ ಸಭೆಯಲ್ಲಿ ಪ್ರಕಾಶಿಸಿದನು. ವ॥ ಹಾಗೆ ಮನೋನುರಾಗದಿಂದ ಮಹಿಮೆಯನ್ನು ಪಡೆದು ಸಕಲ ರಾಜಕುಮಾರರ ನೇತ್ರಪುತ್ರಿಕೆಗಳನ್ನು (ಕಣ್ಣಿನ ಗೊಂಬೆ) ಸಫಲವನ್ನಾಗಿ ಮಾಡುತ್ತಾ ಸುಸಂಭಾಷಣೆಯಿಂದ ವಿನೋದವನ್ನು ಹೊಂದಿ ಸಭಾಭವನದಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದನು. ಆ ಸಮಯದಲ್ಲಿ ದ್ವಾರಪಾಲಕನೊಬ್ಬನು ಬಂದು ಹಣೆಯ ಮೇಲೆ ಕೈ

ಚಂ॥ ಪೊಸಜಡೆ ಮಿಂಚುವೋಲ್ ಕುಣಿವ ಕುಂಡಲವಿಟ್ಟ ವಿಭೂತಿ ಸೆಳ್ಳುಗುರ್
ಕುಸಿದೊಡಲಾಂತಲಾಕುಳ ಕಮಂಡಲುವುಟ್ಟಮಲಾಂಬರಂ ಶ್ರಮ
ಪ್ರಸವಮುಖಂ ಮನೋಹರ ವಿಲಾಸಮನಾಂತಿರೆ ಚೆಲ್ವ ಮುಗ್ಧ ತಾ
ಪಸನತಿಸಂಭ್ರಮಂಬೆರಸು ಬಾಗಿಲೊಳಿರ್ದಪನುರ್ವರಾಧಿಪಾ ೩

ವ॥ ಎಂದು ದೌವಾರಿಕಂ ಬಿನ್ನಪಂಗೆಯ್ಯಲರಸನಾತನಂ ಬರಿಸೆಂಬುದುಂ

ಕಂ॥ ಮೆಲ್ಲನಡಿಯಿಡುತೆ ತನ್ನಂ
ಬಲ್ಲವರಱಿದಪ್ಪರೆಂದು ಶಂಕಿಸುತೆ ಮುದಂ
ಪಲ್ಲವಿಸೆ ನಡೆದು ಬರೆ ಭೂ
ವಲ್ಲಭನಾಕ್ಷಣದೊಳಱಿದನಾತನ ಕುಱುಪಂ ೪

ವ॥ ಅಂತಱಿದುಮಱಿಯದಂತೆ

ಕಂ॥ ನಸುನಗುತೆ ಕೈಗಳಂ ಮುಗಿ
ದೊಸೆದಿಲ್ಲಿಗೆ ಬನ್ನಿಮೆಂದು ಕುಳ್ಳಿರಿಸಿ ಸಭಾ
ವಸಥದೊಳ್ನುಡಿಯಿಂ ಮ
ನ್ನಿಸಿದಂ ಕುಟಿಲೋಪಚಾರದಿಂ ಭೂಪಾಲಂ ೫

ಜೋಡಿಸಿ ಹೀಗೆಂದನು. ೩, "ಮಹಾರಾಜ ! ಹೊಸದಾದ ಜಡೆ, ಮಿಂಚಿನಂತೆ ಕುಣಿಯುವ ಕುಂಡಲಗಳು, ಹಚ್ಚಿಕೊಂಡ ವಿಭೂತಿ, ಚೂಪಾದ ಉಗುರು, ಕುಸಿದ ಶರೀರ. ಹಿಡಿದ ಯೋಗದಂಡ, ಮತ್ತು ಕಮಂಡಲ, ಉಟ್ಟ ನಿರ್ಮಲವಾದ ಬಟ್ಟೆ, ಆಯಾಸವು ತೋರುವ ಮುಖ, ಮನೋಹರವಾದ ವಿಲಾಸ, ಇವುಗಳಿಂದ ಅತಿ ಸುಂದರನಾದ ಮುಗ್ಧ ತಪಸ್ವಿಯೊಬ್ಬನು ಬಾಗಿಲಿನಲ್ಲಿ ಬಂದು ನಿಂತಿದ್ದಾನೆ." ವ॥ ಹೀಗೆ ದ್ವಾರಪಾಲಕನು ವಿಜ್ಞಾಪಿಸಲು ಅರಸನು "ಅವನನ್ನು ಒಳಕ್ಕೆ ಕರೆತಾ" ಎಂದು ಹೇಳಿದನು. ೪. ಆ ತಪಸ್ವಿಯು ತನ್ನನ್ನು ಯಾರಾದರೂ ತಿಳಿದವರು ಗುರುತಿಸಬಹುದೆಂದು ಹೆದರಿ ಮೆಲ್ಲಗೆ ಹೆಜ್ಜೆಗಳನ್ನಿಡುತ್ತಾ ಸಂತೋಷದಿಂದ ಬಂದನು. ಕೂಡಲೆ ರಾಜನು ಅವನ ಗುರುತನ್ನು ಕಂಡುಹಿಡಿದನು. ವ॥ ಹಾಗೆ ಕಂಡು ಹಿಡಿದರೂ ತಿಳಿಯದಂತೆ ೫. ರಾಜನು ನಸು ನಗುತ್ತಾ ಕೈಮುಗಿದು ಸ್ವಾಗತಿಸಿದನು. "ಇಲ್ಲಿಗೆ ಬನ್ನಿರಿ" ಎಂದು ಕರೆದು ಸಭಾಗೃಹದಲ್ಲಿ ಕುಳ್ಳಿರಿಸಿದನು. ಒಳ್ಳೆಯ ಮಾತುಗಳನ್ನಾಡಿ ನಟನೆಯ ಉಪಚಾರದಿಂದ ಗೌರವಿಸಿದನು.

ವ॥ ಅಂತು ಕಿಱಿದು ಬೇಗಮಿರ್ದು ರಾಜಲೋಕಮಂ ಬೀೞ್ಕೊಟ್ಟು ಓಲಗದಿಂದೆೞ್ದೇಕಾಂತಕ್ಕೆ ಕುಟಿಲತಾಪಸನಂ ಕರೆದಿದೇಂ ಚಟುಲಚರಣಾ ! ಈ ಪರಿಯೊಳ್ ಬರ್ಪುದರ್ಕೆ ಕಾರಣಮೇನೆಂದು ಕೇಳ್ವುದುಮವನಿಂತೆಂದಂ

ಚಂ॥ ಅವನಿಪ ಬಿನ್ನಪಂ ನಿಜವಿರೋಧಿ ನೃಪಾಲಕ ರಾಜ್ಯದೊಳ್ ವಿಶೇ
ಷವನಱಿದಾಗಳಾಗಳಱಿದರ್ಥವನೊಪ್ಪಿಸಲೆನ್ನನಟ್ಟಲಾಂ
ವಿವಿಧವಿಳಾಸದಿಂದೆಸೆವ ಮಾಳವದೇಶಮನೆಯ್ದಲಲ್ಲಿ ಮಾ
ಳವ ನೃಪನೊಂದು ಕಾರ್ಯಮನೊಡರ್ಚಿದೊಡಾನಱಿದಲ್ಲಿಗೆಯ್ದಿದೆಂ ೬

ವ॥ ಅದಾವುದೆನೆ

ಉ॥ ನಿನ್ನೊಡನಂದು ಕಾದಿ ಮುಱಿದೋಡಿದ ಬನ್ನದ ಬೇಗೆಯಿಂದವಂ
ತನ್ನ ಪುರಕ್ಕೆ ಪೋಗದೆ ಮಹಾವನಮಂ ತವೆ ಪೊಕ್ಕು ದುರ್ಗೆಯಂ
ಕೆನ್ನಮುಪಾಸ್ತಿಗೆಯ್ದು ಪಡೆದಂ ಗದೆಯಂ ಪಡೆಪಿಂ ರಿಪುಕ್ಷಯಾ
ರ್ಥನ್ನಿಜಸೇನೆಯಂ ನೆರಪಿ ಬಂದಪನಿಲ್ಲಿಗಿಳಾಧಿನಾಯಕಾ ೭

ವ॥ ಎಂದೀ ವಿಶೇಷಮಂ ಪೇೞಲೆಂದೀ ವೇಷದಿಂ ಬಂದೆನೆಂಬುದುಮಾತನಂ ಪ್ರೀತಿಯಿಂ ಮನ್ನಿಸಿಯರಸಂ ಮಗುೞ್ದಿಂತೆಂದಂ

ವ॥ ಹಾಗೆಯೇ ರಾಜನು ಸ್ವಲ್ಪಹೊತ್ತು ಕಾಲವನ್ನು ಕಳೆದು ಸಭೆಯಲ್ಲಿದ್ದ ರಾಜರನ್ನೆಲ್ಲ ಹೊರಕ್ಕೆ ಕಳುಹಿಸಿದನು. ತಾನೂ ಓಲಗದಿಂದೆದ್ದು ಆ ಕುಟಿಲ ತಾಪಸನನ್ನು ಏಕಾಂತ ಸ್ಥಳಕ್ಕೆ ಕರೆದು ಕೊಂಡು ಹೋದನು. ಅಲ್ಲಿ 'ಇದೇನು ಚಟುಲ ಚರಣ ! ಈ ರೀತಿಯಲ್ಲಿ ಬರಲು ಕಾರಣವೇನು ?' ಎಂದು ಅವನನ್ನು ಕೇಳಿದನು. ಅದಕ್ಕೆ ಅವನು ಹೀಗೆ ಉತ್ತರಿಸಿದನು. ೬. "ರಾಜ ! ವಿಜ್ಞಾಪಿಸುತ್ತೇನೆ. 'ಶತ್ರುರಾಜರ ರಾಜ್ಯಗಳಿಗೆ ಹೋಗಿ ಅಲ್ಲಿನ ವಿಶೇಷಗಳನ್ನು ತಿಳಿದುಬಂದು ಹೇಳು' ಎಂದು ಹೇಳಿ ನನ್ನನ್ನು ಕಳುಹಿಸಿದಿರಿ. ನಾನು ಅದರಂತೆ ವಿವಿಧ ವಿಳಾಸಗಳಿಂದ ಪ್ರಕಾಶಿಸುವ ಮಾಳವ ದೇಶಕ್ಕೆ ಹೋದೆನು. ಅಲ್ಲಿ ಮಾಳವ ರಾಜನು ಒಂದು ಕೆಲಸವನ್ನು ಮಾಡಿದ್ದಾನೆ. ಅದನ್ನು ತಿಳಿದು ನಿಮಗೆ ತಿಳಿಸಲು ನಾನಿಲ್ಲಿಗೆ ಬಂದಿದ್ದೇನೆ." ವ॥ ಅದು ಯಾವುದೆಂದರೆ—೭. 'ರಾಜ ! ಮಾಳವರಾಜನು ಅಂದು ನಿನ್ನೊಡನೆ ಕಾದಿಸೋತ ಅಪಮಾನದ ಬೇಗೆಯಿಂದ ತನ್ನ ಪುರಕ್ಕೆ ಹಿಂದಿರುಗದೆ ಮಹಾವನವನ್ನು ಹೊಕ್ಕನು. ಅಲ್ಲಿ ದುರ್ಗೆಯ ಉಪಾಸನೆಯನ್ನು ಮಾಡಿ ಅವಳಿಂದ ಶತ್ರುನಾಶಕವಾದ ಒಂದು ಗದೆಯನ್ನು ಪಡೆದನು. ಈಗ ತನ್ನ ಸೇನೆಯನ್ನು ಕೂಡಿಸಿ ಕೊಂಡು ಇತ್ತ ಬರುತ್ತಿದ್ದಾನೆ' ಇದೇ ವಿಷಯವನ್ನು ಹೇಳಲು ಈ ವೇಷದಿಂದ ಬಂದಿದ್ದೇನೆ.' ಎಂದು ಹೇಳಿದನು. ಆಗ ಅವನನ್ನು ಪ್ರೀತಿಯಿಂದ ಗೌರವಿಸಿ ಅರಸನು ಹೀಗೆ

ಅಕ್ಕಟ ಮಾಳವಂ ಮಗುಟ್ದು ಚೇಷ್ಟಿಸಿ ಬರ್ಪೊಡೆ ಕೊಂದು ಬಾರದಿಂ
ತುಕ್ಕಿವದಿಂದೆ ನೀಂ ಬರಲಿದೇಕವರುಂ ಮುಳಿದಿಲ್ಲಿಗೈಯ್ತರಲ್
ಸೊಕ್ಕಿದಿಭಂ ಮೃಗಾಧಿಪತಿಯಿರ್ಕೆಗೆ ಬಂದವೊಲಾಂತು ಸೀಟ್ದು ಪೋ
ಟ್ದಿಕ್ಕದೆಮಾಣ್ಬೆನೇ ಎನುತೆ ಗರ್ಜಿಸಿದಂ ಮಗಧ ಕ್ಷಿತೀಶ್ವರಂ ೮

ವ॥ ಅಂತು ಕೋಪಮಂ ತಳೆದಾತನಂ ಕಳುಪಿಯನಂತರಂ ತನ್ನ ನಾಲ್ವರ್ ಸಚಿವರಂ ಕರೆಯಿಸಿ ತದ್ವೃತ್ತಾಂತಮಂ ಪೇಟ್ದಿದರ್ಕೇನಂ ಮಾಟ್ಪೆಂದು ಸುಮಿತ್ರನ ಮೊಗಮಂ ನೋಡಲಾತನಿಂತೆಂದಂ

ಹಿಂದಣ ಸೋಲವೊಂದು ವನವಾಸದ ಸೇದೆಯದೊಂದು ಪೆಂಡಿರಂ
ನಂದನರಿಂದಗಲ್ದಟಲದೊಂದು ಮನೋಗತ ವೈರವೊಂದಿದೊಂ
ದೊಂದತಿದುಃಖಕಾರಣಮಿವೆಲ್ಲವಱಿಂ ಕಡುನೊಂದು ದೈವದಿಂ
ದೊಂದು ಗಧಾಯುಧಂ ಬಡೆದನಿಂತಡೆದಿರ್ಪನೆ ಮಾಗಧೇಶ್ವರಂ ೯

ವ॥ ಎಂದ ಮಾತಂ ಕೇಳ್ವಾತಂಗಾತಂ ಮಿಗಿಲಾದಟಲುಮುಬ್ಬೆಗಮುಂ ಪುಟ್ಟುಪುದೆಂದು ನಸುನಗುತ್ತುಂ ಸುಮತಿಯ ಮುಖಮಂ ನೋಡಲಾತನಿಂತೆಂದಂ

ಹೇಳಿದನು ; ೮. "ಅಕಟ ! ಮಾಳವರಾಜನು ಮತ್ತೆ ಯತ್ನಿಸಿಬರುವ ಹಾಗಿದ್ದರೆ ನೀನು ಅವನನ್ನು ಅಲ್ಲಿಯೇ ಕೊಂದು ಬರದೆ ಹೀಗೆ ಉತ್ಸವದಿಂದ ಏಕೆಬಂದೆ ? ಮದ್ದಾನೆಯು ಸಿಂಹದ ವಾಸಸ್ಥಾನಕ್ಕೆ ಬರುವಂತೆ ಅವರು ಕೋಪಿಸಿಕೊಂಡು ಇಲ್ಲಿಗೆ ಬಂದರೆ ಅವರನ್ನೆದುರಿಸಿ ಸೀಳಿ ಹೋಳು ಮಾಡಿಹಾಕದೆ ಇರುತ್ತೇನೆಯೇ?" ಎಂದು ಹೇಳಿ ಗರ್ಜಿಸಿದನು. ಮತ್ತು ವ॥ ಹೀಗೆ ಕೋಪವನ್ನು ತೋರಿಸಿ ಅವನನ್ನು ಕಳುಹಿಸಿದನು. ಅನಂತರ ತನ್ನ ನಾಲ್ವರು ಮಂತ್ರಿಗಳನ್ನು ಕರೆಯಿಸಿ ಅವರಿಗೆ ಆ ಸುದ್ದಿಯನ್ನು ತಿಳಿಸಿದನು-'ಇದಕ್ಕೀಗ ಏನುಮಾಡೋಣ' ಎಂದು ಕೇಳುತ್ತಾ ಸುಮಿತ್ರನ ಮುಖವನ್ನು ನೋಡಿದನು. ಅದಕ್ಕೆ ಆವನು ಹೀಗೆ ಹೇಳಿದನು. ೯. "ಹಿಂದೆ ಸೋತದ್ದು ಅಡವಿಯಲ್ಲಿ ವಾಸ ಮಾಡಿದ ಆಯಾಸ, ಹೆಂಡತಿ ಮಕ್ಕಳ ಅಗಲಿಕೆಯಿಂದುಂಟಾದ ದುಃಖ ಮನೋಗತವಾದ ದ್ವೇಷ ಇವು ಒಂದೊಂದೂ ದುಃಖಕ್ಕೆ ಕಾರಣ. ಇವೆಲ್ಲವುಗಳಿಂದ ತುಂಬ ನೊಂದ ಮಗಧ ರಾಜನು ಸುದೈವದಿಂದ ಗದೆಯನ್ನು ಪಡೆದಿದ್ದಾನೆ, ಹೀಗಿರುವಾಗ ಇನ್ನು ಸುಮ್ಮನೆ ಇರುತ್ತಾನೆಯೇ ? ವ॥ 'ಈ ಮಾತುಗಳನ್ನು ಕೇಳುವವನಿಗೆ ಮಿಗಿಲಾದ ದುಃಖವೂ ಉದ್ವೇಗವೂ ಹುಟ್ಟುವುದು' ಎಂದು ನಸುನಗುತ್ತಾ ರಾಜಹಂಸನು ಹೇಳಿ ಸುಮತಿಯ

ಕಂ॥ ಸುತ ಸಾಮಭೇದದಾನೋ
ದ್ಧತ ದಂಡಮೆನಿಪ್ಪ ನಾಲ್ಕು ಮತದೊಳ್ ಕಾಲೋ
ಚಿತಮಾವುದಂತದಂ ನಿ
ಶ್ಚಿತಮಪ್ಪಂತೆಸಗು ದೇವ ನೀನಱಿಯದುದೇ ೧೦

ವ॥ ಎಂದ ಮಾತಂ ಮನದೆಗೊಂಡು ಸತ್ಯಧರ್ಮನ ಮೊಗಮಂ ನೋಡಲಾತ ನಿಂತೆಂದಂ

ಚಂ॥ ಅಪಜಯಮಕ್ಕೆ ಮೇಣ್ವಿಜಯಮಕ್ಕೆ ವಿರೋಧಿ ನೃಪಾಲರೆತ್ತಿ ಬಂ
ದಪರೆನೆ ಕೇಳ್ದು ತನ್ನ ಪುರಮಂ ಪೊಱಮಟ್ಟದಟಂ ನಿಜಾರಿ ಭೂ
ಮಿಪರೆರ್ದೆಯಳ್ಕೆ ತಳ್ತಿಱಿದನೇಕಯುಗಂ ಹರಹಾಸ ಚಂದ್ರಮಾ
ತಪಸಮ ಕೀರ್ತಿಯಂ ಪಡೆದು ಬಾಳ್ವುದೆ ದಲ್ ನೃಪನೀತಿ ಭೂಪತೀ ೧೧

ವ॥ ಆ ಮಾತಂ ಕೇಳ್ದರಸಂ ಸಂತಸಂಬಟ್ಟು ಸುಶ್ರುತನ ಮುಖಮಂ ನೋಡಲಾತ ನಿಂತೆಂದಂ

ಕಂ॥ ಎನಿತು ರಿಪು ವಿಜಯಮಾಗಿ
ರ್ದ ನರೇಂದ್ರಂ ದುರ್ಗವರ್ಗಮಂ ಪಾಲಿಪುದೇ
ಕೆನೆ ಸಿಂಹಗಜವಿದಳನ
ನೆನಿಸಿರ್ದುಂ ಬಹಳ ಗುಹೆಯನಾಶ್ರಯಿಸುವವೋಲ್ ೧೨

ಮುಖವನ್ನು ನೋಡಿದನು. ಆಗ ಅವನು ಹೇಳಿದನು. ೧೦ "ದೇವ ! ಸಾಮದಾನ ಭೇದ ದಂಡಗಳೆಂಬ ನಾಲ್ಕು ಉಪಾಯಗಳಿವೆ. ಅವುಗಳಲ್ಲಿ ಒಂದನ್ನು ಕಾಲಕ್ಕೆ ಉಚಿತವಾದುದಾವುದೆಂದು ನಿಶ್ಚಯಿಸಿ ಅದರಂತೆ ನಡೆ ನಿನಗೆ ತಿಳಿಯದೇ ಇರುವುದು ಯಾವುದಿದೆ !". ವ॥ ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಸತ್ಯಧರ್ಮದ ಮುಖವನ್ನು ನೋಡಿದನು. ಆಗ ಅವನು ಹೀಗೆ ಹೇಳಿದನು. ೧೧. 'ಸೋಲಾಗಲಿ ಗೆಲುವಾಗಲಿ ಶತ್ರುರಾಜರು ದಂಡೆತ್ತಿಬಂದ ಸುದ್ದಿಯನ್ನು ಕೇಳಿ ತನ್ನ ನಗರದಿಂದ ಹೊರಕ್ಕೆಬರಬೇಕು. ಪರಾಕ್ರಮದಿಂದ ಶತ್ರುರಾಜರನ್ನು ತುಂಬ ಹೆದರಿಸಿ ಬಲವಾಗಿ ಇರಿಯಬೇಕು. ರಾಯ ! ಹೀಗೆ ಇರಿದು ಅನೇಕ ವರ್ಷಗಳಕಾಲ ಹರನ ಹಾಸ, ಚಂದ್ರನ ಬೆಳದಿಂಗಳು–ಇವುಗಳಿಗೆ ಸಮನಾದ ಕೀರ್ತಿಯನ್ನು ಹೊಂದಿ ಬಾಳುವುದೇ ರಾಜನೀತಿಯಷ್ಟೆ !" ವ॥ ಈ ಮಾತನ್ನು ಕೇಳಿ ರಾಜನು ಸಂತೋಷಿಸಿ ಸುಶ್ರುತನ ಮುಖವನ್ನು ನೋಡಿದನು. ಆಗ ಅವನು ಹೀಗೆ ಹೇಳಿದನು. ೧೨. "ಸಿಂಹವು ಆನೆಯನ್ನು ಸೀಳಲು ಸಮರ್ಥನೆನಿಸಿಕೊಂಡಿದ್ದರೂ ಗುಹೆಯಲ್ಲಿ ಸೇರಿಕೊಳ್ಳುತ್ತದೆ. ಹಾಗೆಯೇ ಎಷ್ಟು ಸಲ ಶತ್ರುಗಳನ್ನು

ವ॥ ಎಂದು ಪೇೞ್ದವರ ಮಾತೆಲ್ಲಮಂ ಕೇಳ್ದು ಅವರವರಿಚ್ಛೆಯುಂ ಮಾೞ್ಪೆನೆಂದು ರತ್ನಶಿಖರಿಯೆಂಬ ದುರ್ಗಕ್ಕೆ ಸ್ತ್ರೀಸಮೂಹಮಂ ಕಳುಪಿ ತಾಂ ಶುಭದಿನ ಶುಭಮುಹೂರ್ತದಿಂ ಪೊಱಮಟ್ಟು

ಚಂ॥ ದೆಸೆಬೆಸಲಾದುದೋ ಧರಣಿಯೀಂದುದೋ ಪನ್ನಗವಲ್ಲಭಂಗೆ ಲೆ
ಕ್ಕಿಸಲರಿದೆಂಬಿನಂ ಮದಗಜಾಳಿ ಹಯಾಳಿ ರಥಂ ಪದಾತಿ ಘೂ
ರ್ಣಿಸೆ ಪಗೆಯುಂ ಪಡಲ್ವಡಿಸಲೆಂದು ಮಹಾದ್ಭುತದೇೞ್ಗೆಯಿಂ ನೆಲಂ
ಕುಸಿಯೆ ಚತುರ್ಬಲಂಬೆರಸು ತನ್ನಯ ರಾಜ್ಯದ ಸೀಮೆಗೆಯ್ದಿದಂ ೧೩

ವ॥ ಅಂದು ರಾಜಹಂಸನಿದಿರಾಗಿ ಬಿಟ್ಟುದಂ ಮಾನಸಾರಂ ಕೇಳ್ದು

ಉ॥ ಪೂರ್ವವಿರೋಧದಿಂ ನಿಜಪರಾಕ್ರಮದಿಂ ಪರರಾಜ್ಯಕಾಂಕ್ಷೆಯಿಂ
ದೋರ್ವಲದುರ್ಕಿನಿಂ ವಿಭವ ಮತ್ಸರದಿಂ ಜಸದೇೞ್ಗೆಯಿಂ ಗದಾ
ಗರ್ವದೊಳುರ್ಬಿ ದಿಗ್ವಿತತಿ ಕಂಪಿಸೆ ಮಾಳವಭೂಮಿಪಾಲಕಂ
ಸರ್ವಬಲಾನ್ವಿತಂ ನಡೆದುಮಾಗಧನೊಳ್ ಮುಳಿದೊಡ್ಡನೊಡ್ಡಿದಂ ೧೪

ವ॥ ಅಂತು ಭುಜಬಲಪ್ರಭೂತ ಪ್ರಭವದಿಂದಭಿಮುಖಮಪ್ಪುದುಂ

ಗೆದ್ದಿದ್ದರೂ ರಾಜನು ದುರ್ಗದಲ್ಲಿ ಸೇರಿಕೊಂಡು ಯುದ್ಧಮಾಡಬೇಕು." ವ॥ ಹೀಗೆ ಎಲ್ಲರ ಮಾತುಗಳನ್ನು ಕೇಳಿ ಅವರವರ ಇಷ್ಟದಂತೆಯೇ ಮಾಡುವುದಾಗಿ ಹೇಳಿದನು ಮತ್ತು ಹೆಂಗಸರನ್ನೆಲ್ಲ ರತ್ನ ಶಿಖರಿಯೆಂಬ ದುರ್ಗಕ್ಕೆ ಕೂಡಲೆ ಕಳುಹಿಸಿದನು. ಅನಂತರ ತಾನು ಒಂದು ಶುಭದಿನ ಶುಭ ಮುಹೂರ್ತದಲ್ಲಿ ನಗರದಿಂದ ಹೊರಕ್ಕೆ ಹೊರಟು— ೧೩. ದಿಕ್ಕುಗಳು ಹಡೆದವೋ ! ಭೂಮಿಯೇ ಹೆತ್ತಿತೋ ! ಆದಿಶೇಷನಿಗೂ ಎಣಿಸಲು ಸಾಧ್ಯವಿಲ್ಲ—ಎಂಬಂತೆ ಕಾಣುವ ಮದ್ದಾನೆಗಳ ಗುಂಪು, ಕುದುರೆಗಳ ಸಾಲು, ತೇರು ಕಾಳಾಳುಗಳು ಕೋಲಾಹಲಮಾಡಿದವು. ಇವುಗಳ ಭಾರಕ್ಕೆ ನೆಲವು ಕುಸಿಯಿತು. ಇಂಥ ಅದ್ಭುತವಾದ ಚತುರಂಗ ಸೇನೆಯೊಡನೆ ಅರಸನು ಶತ್ರುವನ್ನು ಪೀಡಿಸುವುದಕ್ಕಾಗಿ ತನ್ನ ರಾಜ್ಯದ ಗಡಿಪ್ರದೇಶಕ್ಕೆ ಬಂದನು. ವ॥ ಹೀಗೆ ರಾಜಹಂಸನು ತನಗೆ ಇದಿರಾಗಿ ಸೈನ್ಯವನ್ನು ತಂದು ನಿಲ್ಲಿಸಿದುದನ್ನು ಕೇಳಿ ೧೪. ಹಿಂದಿನ ದ್ವೇಷದಿಂದಲೂ, ತನ್ನ ಪರಾಕ್ರಮದಿಂದಲೂ ಶತ್ರುರಾಜ್ಯವನ್ನು ಹಿಡಿಯಬೇಕೆಂಬ ಆಶೆಯಿಂದಲೂ, ತೋಳ ಬಲದ ಕೊಬ್ಬಿನಿಂದಲೂ, ಶತ್ರುವಿನ ಐಶ್ವರ್ಯದ ಮೇಲಿನ ಮಾತ್ಸರ್ಯದಿಂದಲೂ, ಹೆಚ್ಚಾದ ಕೀರ್ತಿಯಿಂದಲೂ ಗದೆ ಸಿಕ್ಕಿದೆಯೆಂಬ ಗರ್ವದಿಂದಲೂ ಉಬ್ಬಿ ಮಾಳವರಾಜನು ದಿಕ್ಕುಗಳನ್ನು ನಡುಗಿಸುತ್ತಾ ಎಲ್ಲ ಸೈನ್ಯಗಳಿಂದ ಕೂಡಿಬಂದು ಮಗಧರಾಜನಿಗೆದುರಾಗಿ ತನ್ನ ಸೈನ್ಯವನ್ನೊಡ್ಡಿದನು. ವ॥ ಹೀಗೆ ಎರಡು ಸೈನ್ಯಗಳೂ ಹೆಚ್ಚು ಸಂಖ್ಯೆಯಿಂದ ಎದುರು

ಕಂ॥ ಕರಿಗೆಕರಿ ತುರಗದೋಳಿಗೆ
ತುರಂಗತತಿ ತೇರ್ಗೆತೇರ್ ಪದಾತಿಗೆ ಸುಭಟೋ
ತ್ಕರಮಣಿಯನೊಡ್ಡಿ ಕಾದ
ಲ್ಕುರವಣಿಸಿತ್ತಮಗೆ ತಮಗೆನುತ್ತುಭಯಬಲಂ ೧೫

ವ॥ ಅಂತುರವಣಿಪುದಂ ಕಂಡು

ಕಂ॥ ಬಾವುಲಿಯಕಾಲತೊಡರ ಮ
ಹಾವೀರರ್ ಚೂಣಿ ಬವರಮಂ ಕೆಣಕಲ್ ಕೋ
ಪಾವಿಷ್ಟರಾಗಿಯುಗ್ಗಡ
ರಾವುತರುರವಣಿಸೆ ಕುದುರೆಯಂ ಪೊಳೆಯಿಸಿದರ್ ೧೬

ಗಱಿಸನ್ನೆಯಿಂದೆ ಕರೆಕರೆ
ದುಱುವಾಳ್ಗಳನುಭಯಬಲದ ಬಿರುದರ್ ಬಿಲ್ಲುಂ
ಬೆಱಗಾಗಿ ನೋಡೆ ಕಣ್ಗಳ
ಬಱನಂ ಕಳೆದೆಚ್ಚು ಮೆಚ್ಚಿಪರ್ ಬಿಲ್ಲಾಳ್ಗಳ್ ೧೭

ಕಿಱುಪುವ ಕಿವಿ ಕಡುವೊಗರಂ
ಪೆಱುವಮೊಗಂ ಸುರ್ಬಡರ್ದವಾಲಾಗ್ರಂ ಮುಂ
ದುಱುವಾಯ್ದು ತವಕವೊಪ್ಪುವ
ಕುಱುಪಿನ ಕುದುರೆಗಳನಾರ್ದುಬಿಟ್ಟರ್ ಸುಭಟರ್ ೧೮

ಬದುರಾಗಿ ನಿಲ್ಲಲು ೧೫. ಆನೆಗೆ ಎದುರಾಗಿ ಆನೆ, ಕುದುರೆಗಳಿಗೆ ಎದುರಾಗಿ ಕುದುರೆಗಳು, ರಥಗಳಿಗೆ ಎದುರಾಗಿ ರಥಗಳು, ಕಾಲಾಳುಗಳಿಗೆದುರಾಗಿ ಕಾಲಾಳುಗಳು ಹೀಗೆ ಎದುರು ಬದುರಾಗಿ ಸಿದ್ಧವಾಗಿ ನಿಂತ ಎರಡು ಸೇನೆಗಳು ನಾಮೊದಲು ತಾನು ಮೊದಲೆಂದು ಯುದ್ಧಕ್ಕೆ ಆತುರಪಡುತ್ತಿದ್ದುವು. ವ॥ ಹಾಗೆ ತವಕಿಸುತ್ತಿರುವುದನ್ನು ನೋಡಿ. ೧೬. ಬಹುಮಾನ ಸೂಚಕವಾದ ಬಾವುಲಿಯನ್ನೂ ಕಾಲಿನ ಒಡವೆಯನ್ನೂ ಧರಿಸಿದ ಮಹಾವೀರರಾದ ಕುದುರೆ ಸವಾರರು ಸೈನ್ಯದ ಮುಂಭಾಗದಲ್ಲಿ ಯುದ್ಧವನ್ನು ಕೆಣಕಲು ರಭಸದಿಂದ ಕುದುರೆಯನ್ನು ಈಚೆಗೂ ಆಚೆಗೂ ಓಡಿಯಾಡಿಸಿದರು. [ಟಿ. ಬಾವುಲಿ= ಕಿವಿಯ ಒಂದು ಒಡವೆ (ರಂ).] ೧೭. ಬಿಲ್ಲುಗಾರರು ಬಾಣಗಳ ಗರಿಗಳಿಂದ ಸನ್ನೆಮಾಡಿ ಶೂರರಾದ ಭಟರನ್ನು ಯುದ್ಧಕ್ಕೆ ಕರೆದು ಕರೆದು ಮೂದಲಿಸುತ್ತಿದ್ದರು. ನೋಟಕರ ಕಂಗಳಿಗೆ ಹಬ್ಬವಾಗುವಂತೆ ಬಾಣಗಳನ್ನು ಬಿಡುತ್ತಿದ್ದರು. ಎರಡು ಕಡೆಯ ಸೇನೆಗಳ ಶೂರರೂ ಬೆರಗಾಗಿ ಮೆಚ್ಚಿ ನೋಡುತ್ತಿದ್ದರು. ೧೮. ಸಿಮಿರಿದ ಕಿವಿ, ಅತಿಶಯವಾದ ಕಾಂತಿಯನ್ನು ಹೊರಸೂಸುವ ಮುಖ, ಸುಕ್ಕಿಲ್ಲದ ಬಾಲದತುದಿ, ರಭಸದಿಂದ ಮುಂದೆ ನುಗ್ಗುವ ತವಕ, ಇವುಗಳುಳ್ಳ ಅಚ್ಚು ಪ್ರಸಿದ್ಧವಾದ ಕುದುರೆಗಳನ್ನು ಸುಭಟರು

ಕಂ|| ಪುಷ್ಕರರಂಧ್ರದ ಫೂತ್ಕೃತಿ
ಪುಷ್ಕರಭಾಗಕ್ಕೆ ಪಾಱೆ ಸದ್ಭಟತತಿಯಂ
ನಿಷ್ಕರುಣದಂತಹತಿಯಿಂ
ನಿಷ್ಕಂಟಕಮಾಗಿ ಮಾಡಿದತ್ತಿಭಯೂಥಂ ೧೯

ರಣವಾರ್ಧಿಯೊಳರಿಯ ಶಿರೋ
ಮಣಿಯಂ ತವೆಮಾಱುಗೊಳ್ವ ಪೆರ್ಬಂಡೆಗೆಂಬಂ
ತಣೆಯೊಡ್ಡಿದಾಳ್ಗಳೆಲ್ಲಂ
ಪೆಣನೊಡ್ಡಾಗಲ್ಕೆ ಪರಿದುವಗ್ಗದ ತೇರ್ಗಳ್ ೨೦

ಕಲಿಗಳನಮರಿಯರೊಡನಿರೆ
ಕಳುಪುವ ತೆಱದಿಂದೆ ಕೊಂತದಿಂ ಕೋದು ನಭ
ಸ್ಥಳಕೆತ್ತಿ ತಮ್ಮ ಬಾಹಾ
ಬಳಮಂ ರಣದಲ್ಲಿ ಕೊಂತಕಾಱರ್ ಮೆಱೆದರ್ ೨೧

ಝಳಪಿಸಿ ಪೊಯ್ವ ಖಡ್ಗಲತೆ ಮಿಂಚು ಭಟರ್ಕಳ ಬೊಬ್ಬೆಯಬ್ಬರಂ
ಮೊಳಗು ಪೊನಲ್ವಸಂಗಿ ಸುರಿತರ್ಪರುಣಾಂಬುಸುವೃಷ್ಟಿ (ಯ?) ಬಲ್ಪುಪೆ
ರ್ಚಿಳಸೆನೆ ಸಂಗರಾಂಗಣದೊಳಾಂತರ ಪಂದಲೆರಾಶಿಯಂ ಮರು
ಳ್ಗಳ ಬಳಗಕ್ಕೆ ಬೀಱುತೆ ಪಳಂಚಿದರಿರ್ವಲದುರ್ವರಾಧಿಪರ್ ೨೨

ಅಬ್ಬರಿಸುತ್ತಾ ಮುಂದೆ ನುಗ್ಗಿಸಿದರು. ೧೯. ಆನೆಗಳ ಹಿಂಡು ಶೂರರಾದ ಸೈನಿಕರ ಸಮೂಹವನ್ನು ದಯೆಯನ್ನು ತೋರಿಸದೆ ತನ್ನ ದಂತಗಳಿಂದ ಹೊಡೆದು ಕೊಂದು ಶತ್ರುಗಳನ್ನು ನಾಶಪಡಿಸಿತು. ಆಗ ಅವುಗಳ ಸೊಂಡಲಿನ ರಂಧ್ರಗಳಿಂದ ಫೀತ್ಕಾರ ಧ್ವನಿಗಳು ಹೊರಟು ಆಗಸದಲ್ಲಿ ಹರಡಿದುವು. ೨೦. ಯುದ್ಧವೆಂಬ ಸಮುದ್ರದಲ್ಲಿ ಶತ್ರುವಿನ ಶಿರೋರತ್ನಗಳನ್ನು ಕೊಂಡುಕೊಳ್ಳುವ ದೊಡ್ಡ ಹಡಗೋ ಎಂಬಂತೆ ಕಾಣಿಸಿದ ಉತ್ತಮವಾದ ತೇರುಗಳು ಎದುರಾಗಿ ಬಂದ ಸೈನಿಕರ ಗುಂಪನ್ನು ಹೆಣದ ರಾಶಿಯನ್ನಾಗಿ ಪರಿವರ್ತಿಸುತ್ತಾ ವೇಗದಿಂದ ಹರಿದಾಡಿದವು. ೨೧. ರಣರಂಗದಲ್ಲಿ ಕುಂತಕಾರರು ಶೂರರನ್ನು ಈಟಿಗಳಿಂದ ತಿವಿದು ಮೇಲಕ್ಕೆ ಎತ್ತಿಹಿಡಿದು ತಮ್ಮ ತೋಳ ಬಲವನ್ನು ಪ್ರದರ್ಶಿಸಿದರು. ಅವರನ್ನು ಅಮರಾಂಗನೆಯರೊಡನೆ ವಾಸಮಾಡಲು ಮೇಲಕ್ಕೆ ಕಳುಹಿಸುತ್ತಿದ್ದಾರೆಯೋ ಎಂಬಂತೆ ಕಾಣಿಸಿತು. ೨೨. ಝಳಪಿಸಿ ಹೊಡೆಯುವ ಹರಿತವಾದ ಕತ್ತಿಗಳು ಮಿಂಚು, ಸೈನಿಕರ ಕೂಗಾಟದ ಅಬ್ಬರದ ದನಿಯು ಗುಡುಗು, ಪ್ರವಾಹವಾಗಿ ಉಕ್ಕಿಹರಿಯುವ ರಕ್ತವು ದಟ್ಟವಾದ ಮಳೆ, ಹೀಗಿರಲು ಕಾಳಗದ ನೆಲದಲ್ಲಿ ಎದುರಿಸಿದವರ ರಕ್ತ ಸೋರುವ ತಲೆಗಳ ರಾಶಿಯನ್ನು ಪರಾಕ್ರಮದಿಂದ ಬೆಳೆದ ಹುಲುಸಾದ ಬೆಳೆಯೆಂಬಂತೆ ಪಿಶಾಚಿಗಳ ಬಳಗಕ್ಕೆ ಹಂಚುತ್ತಾ ಎರಡು ಕಡೆಯ ರಾಜರೂ ಕಡಿದಾಗಿ

ವ|| ಅಂತು ಮಾಳವಮಾಗಧರ್ ಪಾಳಿಯುೞಿದಾಳ ಕಾಳಗಮಂ ನಿಲಿಸಿ

ಕಂ|| ಮಾಲವನರಥವನುರ್ವೀ
ಪಾಲಂ ಮಾಗಧೇಶ್ವರಂ ನಿಜಾಸ್ತ್ರಾಳಿಗಳಿಂ
ಕೀಲಿ ಕೆ ಮುಟ್ಟೆವಂದರ್
ಕಾ ಡುಮುಳಿದು ಬರ್ಪ ತೆಱದಿಂದಾಗಳ್ ೨೩

ವ|| ಅಂತ ಬರ್ಪುದುಂ ಕಂಡು ಮಾಳವಂ ತನಗೆ ಸೋಲಂ ಬರ್ಪುದೆಂದಾಳ ಮುಖಮಂ ನೋಡಿ ಳಿಂದು ಕವಿಯೆ ಮಾಗಧನಾಳ್ ಕಂಡು

ಕಂ|| ಮಾಳವನಂಬವನಲೆ ನ
ಮ್ಮಾಳವನೆಂದಾರ್ದು ಸುಭಟರೆಚ್ಚರ್ ಘಟೆಯಂ
ಗಾಳಿಮುಸಗಲ್ಕೆ ಮಗಧನ
ಧಾಟಿ ಮಹಾಮೇಘದಂತೆ ಪರೆದತ್ತಾಗಳ್ ೨೪

ವ|| ಅಂತು ತೆರಳ್ದುದಂ ಕಂಡು ಮತ್ತೆ

ಉ|| ಪಿಂದಣ ಸೋಲಮಂ ಮಱೆದು ಲಜ್ಜೆಯನೊಲ್ಲದೆ ಮತ್ತೆ ಬಂದನೇ
ಪಂದೆಗಳೋಜನೆಂದು ಮಿಡುಕುಳ್ಳದಟರ್ ಕಡುಕೆಯ್ದು ಬಾಣದಿಂ
ಸ್ಯಂದನಮಂ ತುರಂಗಚಯಮಂ ನಿಜದೇಹಮನೆಚ್ಚೊಡಾನೃಪಂ
ನೊಂದು ರಥಾಗ್ರದಿಂ ನೆಗೆದು ದಿವ್ಯಗದಾಯುಧಮಂ ತುಡುಂಕಿದಂ ೨೫

ಕಾದಾಡಿದರು. ವ|| ಅನಂತರ ಮಾಳವರಾಜನೂ ಮಗಧರಾಜನೂ ಕ್ರಮವಾಗಿ ಸೈನಿಕರ ಯುದ್ಧವನ್ನು ನಿಲ್ಲಿಸಿ, ೨೩. ಮಾಲವರಾಜನೂ ಮಗಧರಾಜನೂ ತಮ್ಮ ತಮ್ಮ ಅಸ್ತ್ರಗಳಿಂದ ಪರಸ್ಪರವಾಗಿ ಹೊಡೆಯುತ್ತ ಎದುರುಬದುರಾಗಿ ತೀರ ಹತ್ತಿರಕ್ಕೆ ಬಂದರು. ಆಗ ಅವರು ಯಮುನೇ ತುಂಬ ರೇಗಿಕೊಂಡು ಬರುತ್ತಿರುವಂತೆ ಕಂಡರು. ವ|| ಹಾಗೆ ಬರುತ್ತಿರುವುದನ್ನು ನೋಡಿ ಮಾಳವ ರಾಜನು ತನಗೆ ಸೋಲು ಬರುವುದೆಂದು ಸೈನಿಕರ ಮುಖವನ್ನು ನೋಡಿ ಕೂಗುತ್ತಾ ನುಗ್ಗಲು ಮಾಗಧನ ಸೈನಿಕರು ಕಂಡು. ೨೪. ಮಾಳವನೆಂಬುವವನು ಆಳು ಎಂದು ಅಬ್ಬರಿಸುತ್ತಾ ಆನೆಗಳನ್ನು ಬಾಣಗಳಿಂದ ಹೊಡೆದರು. ಗಾಳಿಯ ರಭಸಕ್ಕೆ ಮಹಾಮೇಘವು ಚದುರುವಂತೆ ಮಗಧನ ದಾಳಿಯು ಚದುರಿಹೋಯಿತು. ವ|| ಹಾಗೆ ಓಡಿದುದನ್ನು ಕಂಡು ಮತ್ತೆ ೨೫. 'ಹಿಂದೆ ಆದ ಸೋಲನ್ನು ಮರೆತು, ನಾಚಿಕೆಯನ್ನು ತೊರೆದು ಮತ್ತೆ ಹೇಡಿಗಳ ಗುರುವಾದ ಇವನು ಯುದ್ಧಕ್ಕೆ ಬಂದಿದ್ದಾನೆಯೇ !" ಎಂದು ಹೇಳುತ್ತಾ ವೀರಭಟರು ಪರಾಕ್ರಮವನ್ನು ತೋರಿಸಿ ರಥಕ್ಕೂ ಕುದುರೆಗಳಿಗೂ ಮಾಳವರಾಜನ ಶರೀರಕ್ಕೂ ಬಾಣಗಳನ್ನು ಹೊಡೆದರು, ಆಗ ಆ ರಾಜನು ತೇರಿನಿಂದ ಕೆಳಕ್ಕೆ ಧುಮುಕಿ ದಿವ್ಯವಾದ ಗದಾಯುಧ

ವ॥ ಅಂತು ದೇವತೆಕೊಟ್ಟ ಗದಾದಂಡಮನುರ್ಚಿದಮರಿಯುಂ ನಿಮಿರ್ಚಿ ಪುಲ್ಲಿಯುಂ ತೆಲ್ಲೈಸಿ ಗೊಂಡೆಯುಮಂ ದಂಡೆಗೊಳಿಸಿ ಚಾರಣಾಕೃತಿಯುಂ ಪಿಡಿದಾಗಳ್

ಮ ಸ್ರ॥ ಕುಡಿಮಿಂಚಂ ಸೂಸುತಂ ಬಲ್ಸಿಡಿಲಬಳಗಮಂ ಕಾಱುತುಂಕೆಂಡಮಂ ಸಾಲಿ
ಡುತುಂ ಸಂಹಾರಕಾಲಾಗ್ನಿಯನುಗುೞ್ತುಮೆಂಟುಂ ದಿಶಾಭಿತ್ತಿಯುಂ ಘೀ
ಳಿಡಿಸುತ್ತುಂ ಕೋಟಿಸೂರ್ಯದ್ಯುತಿಯನೊಡೆಯುತುಂ ಭೈರವಾಟೋಪಮಂ ಕೀ
ಳ್ಪಡಿಸುತ್ತುಂ ರೌದ್ರಮಾದತ್ತಧಿಕತರ ಗದಾದಂಡ ಮುದ್ಯತ್ಪ್ರಚಂಡಂ ೨೬

ವ॥ ಅಂತಿರ್ದ ಗದಾದಂಡಮಂ ಬೀಸಿ

ಮ ಸ್ರ॥ ಕುದಿದುರ್ಕಲ್ವೇಡ ಮುನ್ನೆಮ್ಮನುವಱಿಯದುದಾಸೀನದಿಂ ಕಾದಿಯಾಂ ಸೋ
ಲ್ತುದು ಮೋಘಂ ಪೋಗುಪೋಗೆಂದೆನುತೆ ಗಜಱಿ ಬೊಬ್ಬಿಟ್ಟು ಧೀಂಕಿಟ್ಟು ದುಷ್ಟಂ
ಗದೆಯುಂ ಬೀಸಿಟ್ಟೊಡಾ ಮಾಗಧನೃಪನ ರಥಂ ನುರ್ಗೆ ಜಾತ್ಯಶ್ವಜಾಳಂ
ಮದಮಾತಂಗವ್ರಜಂ ಬೆಟ್ಕೆಱೆ ಮಱೆದೊಱಗಲ್ ಬಿಟ್ಟು ಪತ್ತಿಪ್ರತಾನಂ ೨೭

ವ॥ ಅಂತು ಚಾತುರ್ಬಲಮಂ ವಿಲಯಾಗ್ನಿ ಪರ್ವಿದಂತೆ ಸರ್ವಸಂಹಾರಂ ಮಾಡರಸಂ ಶಿರೋಭಾಗದೊಳ್ ಗಾಯುಂಬಡೆದು ಮೂರ್ಛೆವೋಗೆ

ವನ್ನು ಎತ್ತಿ ಹಿಡಿದನು. ವ॥ ಹಾಗೆ ದೇವತೆಯು ಕೊಟ್ಟ ಗದಾ ದಂಡವನ್ನು ಎತ್ತಿ ಹಿಡಿದು (ದ) ಅಮರಿ ? ಯನ್ನು ಮೇಲಕ್ಕೆತ್ತಿ, ಪುಲ್ಲಿಯನ್ನು ? ಗಟ್ಟಿಮಾಡಿ ಗೊಂಡೆಯನ್ನು ದಂಡೆಮಾಡಿ ? ಚಾರಣರ ಆಕಾರವನ್ನು ಹೊಂದಿದಾಗ. ? ೨೬. ಆ ಗದೆಯು ಕುಡಿಮಿಂಚುಗಳನ್ನು ಎಲ್ಲೆಡೆ ಹರಡಿತು. ಸಿಡಿಲುಗಳ ಗುಂಪನ್ನೇ ಕಾರಿತು. ಸಾಲು ಸಾಲಾಗಿ ಕೆಂಡಗಳನ್ನು ಸುರಿಸಿತು. ಪ್ರಳಯಕಾಲದ ಬೆಂಕಿಯನ್ನೆರಚಿತು. ಎಂಟು ದಿಶಾಭಿತ್ತಿಗಳನ್ನೂ ಘೀಳಿಡುವಂತೆ ಮಾಡಿತು. ಕೋಟಿ ಸೂರ್ಯರ ಪ್ರಕಾಶವನ್ನೂ ಭೇದಿಸಿತು. ಭೈರವನ ಆಟೋಪವನ್ನು ತಗ್ಗಿಸಿತು. ಹೀಗೆ ಎತ್ತಿಹಿಡಿದ ಪ್ರಚಂಡವಾದ ಗದಾದಂಡವು ರೌದ್ರಾಕಾರವನ್ನು ತಳೆಯಿತು. ವ॥ ಹೀಗಿದ್ದ ಗದಾದಂಡವನ್ನು ಬೀಸಿದನು. ೨೭. 'ಕೋಪಿಸಿಕೊಂಡು ಗರ್ವಪಡಬೇಡ. ಮೊದಲು ನಮ್ಮ ಶಕ್ತಿಯನ್ನರಿಯದೆ ಉದಾಸೀನತೆಯಿಂದ ಯುದ್ಧಮಾಡಿ ವ್ಯರ್ಥವಾಗಿ ಸೋತೆವು. ಹೋಗು ಹೋಗು' ಎಂದು ಹೇಳುತ್ತಾ ಗದರುತ್ತಾ ಬೊಬ್ಬೆಹಾಕುತ್ತಾ ಧೀಂಕಿಡುತ್ತಾ ಆ ದುಷ್ಟನು ಗದೆಯನ್ನು ಬೀಸಿ ಹೊಡೆದನು. ಕೂಡಲೆ ಅದರಿಂದ ಆ ಮಗಧರಾಜನ ತೇರು ನುಗ್ಗಾಯಿತು. ಒಳ್ಳೆಯ ಜಾತಿಯ ಕುದುರೆಗಳ ಗುಂಪೂ, ಮದಿಸಿದ ಆನೆಗಳ ಹಿಂಡೂ ಹೆದರಿ ಹೋದವು. ಪದಾತಿಗಳು ಮೈಮರೆತುಬಿದ್ದರು. ವ॥ ಚತುರಂಗ ಸೈನ್ಯವನ್ನೂ ಪ್ರಳಯಾಗ್ನಿಯು ಹರಡಿದಂತೆ ಪೂರ್ತಿಯಾಗಿ ಸುಟ್ಟು ಸಂಹರಿಸಲು ಮಾಗಧನು ತಲೆ

ಕಂ॥ ರಥದೊಳೊಱಗಿರ್ದನರಸಂ
ಮಿಥಿಳಾಪತಿ ಸಿಲ್ಕಿದಂ ಪ್ರಧಾನರ್ ನಾಲ್ವರ್
ಪ್ರಥನದ ದೆಸೆಯಿಂದುೞಿದರ್
ಶಿಥಿಲವೆನಲ್ ಸೇನೆ ಪರೆದುದೆಣ್ದೆಸೆಗಾಗಳ್ ೨೮

ಚಂ॥ ಕಿಸಲಯರಾಜಿಯಿಂ ತಳೆದ ಕಲ್ಪಜಂ ನವಸಾಂಧ್ಯರಾಗದಿಂ
ಮಿಸುವುದಯಾಚಲಂ ವಿವಿಧವಿದ್ರುಮವಲ್ಲರಿಯಿಂ ಕರಂ ವಿರಾ
ಜಿಸುವ ಮಹಾರ್ಣವಂ ಮೆಱೆವವೊಲ್ ಮೆಱೆದತ್ತು ಗದಾಭಿಘಾತದಿಂ
ಬಸವೞಿದಿರ್ದ ಭೂಪತಿಯನಾಂತ ರಥಂ ರಣಮಧ್ಯಭೂಮಿಯೊಳ್ ೨೯

ಕಂ॥ ಪಟುಭಟರೞಿದರರಸಂ
ನಿಟಿಲದಗಾಯಕ್ಕೆ ತೇಂಕಿ ಮೈಮಱೆದಂ ದು
ರ್ಘಟಮುೞಿವುದೆಂಬವೋಲ್ ಸಂ
ಕಟದಿಂ ರತ್ನಾಚಲಕ್ಕೆ ಸರಿದರ್ ಸಚಿವರ್ ೩೦

ವ॥ ಇತ್ತಲ್

ಉ॥ ಇಂದು ತಪಃಫಲಂ ಸಫಲಮಾದುದು ಮದ್ಗದೆಯಿಂ ವಿರೋಧಿ ತೀ
ರ್ದಂ ದಳಮೆಯ್ದೆ ಮುಗ್ಗಿತು ಜಯಂನಮಗಾಯ್ತೆನುತುರ್ಬಿ ಗರ್ಬದಿಂ
ದುಂದುಭಿಶಂಖ ಕಾಹಳೆಯ ಗಾವರದಿಂ ನಿಜಪತ್ತನಕ್ಕೆ ಸಾ
ನಂದದಿನೆಯ್ದಿದಂ ಪುರಜನಂಗಳಿದಿರ್ವರೆ ಮಾಳವೇಶ್ವರಂ ೩೧

ಯಲ್ಲಿ ಗಾಯವಾಗಿ ಮೈಮರೆತನು. ೨೮. ರಾಜನು ರಥದಲ್ಲಿ ಮೈಮರೆತು ಮಲಗಿದನು. ಮಿಥಿಲೆಯರಾಜನು ಸೆರೆ ಸಿಕ್ಕಿದನು. ನಾಲ್ವರು ಮಂತ್ರಿಗಳು ಮಾತ್ರ ಯುದ್ಧದಲ್ಲಿ ಸಾಯದೆ ಉಳಿದರು. ಅಂಕೆಯಿಲ್ಲದ ಸೇನೆಯು ಎಂಟು ದಿಕ್ಕುಗಳಿಗೂ ಓಡಿತು. ೨೯. ರಣರಂಗದ ನಡುವೆ ಮೈಮರೆತ ರಾಜನು ಮಲಗಿದ್ದ ರಥವು (ರಾಜನ ದೇಹದಿಂದ ಹರಿದ ರಕ್ತದಿಂದಲೂ ಸೈನಿಕರ ರಕ್ತದಿಂದಲೂ ನೆನೆದು ಹೋಗಿದ್ದುದರಿಂದ) ಸುತ್ತ ಚಿಗುರಿದ ಕಲ್ಪವೃಕ್ಷದಂತೆಯೂ, ನೂತನವಾದ ಸಂಧ್ಯಾಕಾಲದ ರಕ್ತವರ್ಣದಿಂದ ಹೊಳೆಯುವ ಉದಯ ಪರ್ವತದಂತೆಯೂ, ವಿಧವಿಧವಾದ ಹವಳದ ಬಳ್ಳಿಗಳಿಂದ ಪ್ರಕಾಶಿಸುವ ದೊಡ್ಡ ಸಮುದ್ರದಂತೆಯೂ, ಮೆರೆಯಿತು. ೩೦. ಶೂರರಾದ ಭಟರು ಸತ್ತು ಹೋದರು. ಅರಸನು ಹಣೆಯ ಗಾಯದಿಂದ ನೊಂದು ಮೂರ್ಛಿತನಾದನು. ಬದುಕುವುದು ಸಾಧ್ಯವಿಲ್ಲ ಎಂದು ಯೋಚಿಸಿ ಮಂತ್ರಿಗಳೆಲ್ಲರೂ ದುಃಖದಿಂದ ರತ್ನಾಚಲಕ್ಕೆ ಹೋಗಿ ಸೇರಿದರು. ವ॥ ಇತ್ತ— ೩೧. ಇಂದು ತಪಸ್ಸಿನ ಗುರಿಯು ಫಲಿಸಿತು. ನನ್ನ ಗದೆಯಿಂದ ಶತ್ರುವು ನಾಶವಾದನು. ಶತ್ರುಸೇನೆಯು ಪೂರ್ತಿಯಾಗಿ ನಾಶವಾಯಿತು. ನಮಗೆ ಜಯವಾಯಿತು, ಎಂದು ಸಂತಸದಿಂದ ಉಬ್ಬಿ ಗರ್ವದಿಂದ ಮಾಳವರಾಜನು ತನ್ನ ಪಟ್ಟಣಕ್ಕೆ ಆನಂದದಿಂದ ಹೋದನು. ಆಗ ದುಂದುಭಿ ಶಂಖ ಕಹಳೆ ಮೊದಲಾದ

ವ॥ ಅಂತು ಮಾಳವೇಶ್ವರಂ ತನ್ನ ಪತ್ತನಮುಂ ಪೊಕ್ಕು

ಕಂ॥ ಅನುವರದೊಳ್ ಸಿಲ್ಕಿದನಂ
ಜನಪತಿಗಳ್ ಭಂಗವಡಿಸಲಾಗದೆನುತ್ತುಂ
ಘನತರ ನೀತಿವಿದಂ ಭೋಂ
ಕನೆ ಬಿಟ್ಟಂ ಬೇಟ್ಟುದಿತ್ತು ಮಿಥಿಳೇಶ್ವರನಂ ೩೨

ವ॥ ಅಂತಾ ಮಾಳವೇಶ್ವರಂ ತನಗೆ ಸಿಕ್ಕಿದ ಪ್ರಹಾರವರ್ಮನಂ ಬಿಟ್ಟುಕಳುಪಿ ಜಯ ಪ್ರಮೋದದಿಂದಿರಲಿತ್ತಲ್

ಕಂ॥ ಮಾಗಧನ ಸಚಿವರಿತ್ತಲ್
ಬೇಗದೆ ರತ್ನಾಚಲಕ್ಕೆ ಪೋಗಿ ನೃಪಂ ದೇ
ವಾಗಾರಮನೆಯ್ದಿದನೆಂ
ದಾಗಳ್ ವಸುಮತಿಗೆ ಪೇಟ್ದರುಬ್ಬೆಗದಿಂ ೩೩

ವ॥ ಅಂತು ಪೊಡವಿಪತಿ ಮಡಿದನೆಂದು ಪೇಟ್ದುದುಂ ವಸುಮತಿ ಸುಮತಿಯಪ್ಪುದ ರಿಂದಾ ಸಚಿವರ್ಗೆ ಇಂತೆಂದಳ್

ಉ॥ ಭಂಡಣದೊಳ್ ಜಯಾಪಜಯಮೆಂಬುದು ಸಿದ್ಧಮದೊಂದು ಕುಂದೆ ಪೇಟಿಮ್
ಗಂಡಗುಣಂಗಳುಳ್ಳವರ್ಗದಂತಿರಲೊಪ್ಪುವ ಕೊಯ್ಯಲಾದೊಡೊ
ಲ್ದಂಡುಜಿ ಪುಯ್ಯಲಾದೊಡೆ ಪಲಾಯನಪಂಡಿತರಾದ ಗಾದೆಯುಂ
ಕಂಡೆಪೆವೀಗಳೆಂದಬಲೆ ಕೋಪಿಸಿದಳ್ ಸಚಿವ ಪ್ರಧಾನರಂ ೩೪

ವಾದ್ಯಗಳು ಮೊಳಗಿದುವು. ಪುರಜನರು ಇದಿರಾಗಿ ಬಂದು ಸ್ವಾಗತಿಸಿದರು. ವ॥ ಹೀಗೆ ಮಾಳವರಾಜನು ತನ್ನ ಪಟ್ಟಣವನ್ನು ಪ್ರವೇಶಿಸಿದನು- ೩೨. ರಾಜನೀತಿಯನ್ನು ಚೆನ್ನಾಗಿ ಬಲ್ಲ ಮಾಳವರಾಜನು ಯುದ್ಧದಲ್ಲಿ ಸೆರೆಸಿಕ್ಕಿದ ರಾಜನನ್ನು ಅವಮಾನಕ್ಕೆ ಗುರಿಗೊಳಿಸಬಾರದು ಎಂದು ನಿಶ್ಚಯಿಸಿ ಕೂಡಲೆ ಮಿಥಿಲೆಯ ರಾಜನಾದ ಪ್ರಹಾರವರ್ಮನನ್ನು ಬೇಕಾದುದನ್ನೆಲ್ಲ ಕೊಟ್ಟು ಬಿಡುಗಡೆ ಮಾಡಿದನು. ವ॥ ಹೀಗೆ ಮಾಳವರಾಜನು ಸೆರೆಸಿಕ್ಕಿದ್ದ ಪ್ರಹಾರವರ್ಮನನ್ನು ಬಿಡುಗಡೆ ಮಾಡಿ ವಿಜಯದ ಹರ್ಷದಲ್ಲಿ ಮುಳುಗಿದ್ದನು. ಆಗ ಇತ್ತ ೩೩. ಮಗಧರಾಜನ ಮಂತ್ರಿಗಳು ಬೇಗ ರತ್ನಾಚಲಕ್ಕೆ ಹೋಗಿ ಅರಸನು ಸ್ವರ್ಗಸ್ಥನಾದನೆಂದು ಉದ್ವೇಗದಿಂದ ವಸುಮತಿಗೆ ಹೇಳಿದರು. ವ॥ ರಾಜನು ಮಡಿದ ಸಮಾಚಾರವನ್ನು ಕೇಳಿ ವಸುಮತಿಯು ಬುದ್ಧಿಮತಿಯಾಗಿದ್ದುದರಿಂದ ಮಂತ್ರಿಗಳಿಗೆ ಹೀಗೆ ಹೇಳಿದಳು. ೩೪. "ಯುದ್ಧದಲ್ಲಿ ಗೆಲುವು ಸೋಲುಗಳೆಂಬುದು ಸಿದ್ಧವಾದುದು. ಶೂರರಿಗೆ ಅದೇನು ದೋಷವೇ ? ಹೇಳಿರಿ. ಅದು ಹಾಗಿರಲಿ. 'ಒಳ್ಳೆಯಬೆಳೆ ಬಂದರೆ ಚೆನ್ನಾಗಿ ತಿಂದು ತೇಗುತ್ತಾರೆ. ಯುದ್ಧ ಬಂದರೆ ಪಲಾಯನದಲ್ಲಿ ಪಂಡಿತರೆನಿಸುತ್ತಾರೆ' ಎಂಬ ಗಾದೆಯನ್ನೀಗ ನಿಮ್ಮಲ್ಲಿ ಕಂಡಂತಾಯಿತು. ಎಂದು

ವ|| ಎಂದು ಮತ್ತಮದಂತಿರಲರಸನೊಡನೆ ಪೋಗಲ್ವೇಟ್ಕೆನಗಿಂಧನಸಂದೋಹಮಂ ಸಮಕಟ್ಟಿಮೆಂಬುದುಂ ಸಚಿವರ್ ಸನ್ಮಾನಿಸಿ ದೇವಿಯರ ಗರ್ಭದರ್ಭಕಂ ನಿರ್ಭರರಾಜ್ಯಮನಾಳ್ವನೆಂದಾಗಾಮಿ ಕಾರ್ಯಮಂ ಪೇಟ್ದು ನಿಲಿಸಿದೊಡಂ ನಿಲ್ಲದೆ ಜೀವದಾಸೆಯುನೊಲ್ಲೆನೆಂಬುದುಮವರ್ ಚರಣಕಮಲದೊಳ್ ಶಿರೋಭಾಗಮಂ ಸಾರ್ಚುವುದುಮಾಕೆ ತನ್ನೊಳಿಂತೆಂದಳ್

ಕಂ|| ಏಕೆ ದುರಾತ್ಮರ ಮಾತಂ
ನೂಕುವೆನಾಂ ಕಂಡ ಬುದ್ಧಿಯುಂ ಕಾಣ್ಬೆಂ ನಿ
ರ್ವ್ಯಾಕುಲದಿನಿಂದಿರುಳೆಂ
ದಾ ಕಾಂತೆಯುಮಾತ್ಯವಚನಮಂ ಮನ್ನಿಸಿದಳ್ ೩೫

ವ|| ಅಂತುಮನ್ನಿಸಿ ನೀಂ ಪೇಟ್ದುದಂ ಮಾಟ್ಪೆನೆಂದವರನತ್ತಲ್ ಕಳುಪಿದಳ್ ಇತ್ತಲ್

ಕಂ|| ಮಡುಗಟ್ಟಿಸುರಿವನೆತ್ತರ
ಕಡಲೊಳ್ ತೇಂಕಾಡುತಿರ್ಪ ರಥದೊಳ್ ಗಾಯುಂ
ಬಡೆದೆನಸುಂಬಟಿಳುತಿರ್ದಂ
ಪಡುನೇಸಱತೆಱದೆ ರಾಜಹಂಸನರೇಂದ್ರಂ ೩೬

ವ|| ಅಂತಿರ್ದರಸನ ವರೂಥಮಂ ತುರಗಂಗಳ್ ತರುಗಳಿಂ ದುರಂತರಮಪ್ಪರಣ್ಯಮಾರ್ಗದೊಳ್ ತಮ್ಮಿಚ್ಛೆಯಿಂ ಕೊಂಡೋಡಿ ಪೋಗೆ ಮುಂದೆ

ಹೇಳಿ ಸಚಿವರ ಮೇಲೆ ಕೋಪಿಸಿಕೊಂಡಳು. ವ|| ಮತ್ತೆ, 'ಅದು ಹಾಗಿರಲಿ, ರಾಜನೊಡನೆ ಸಹಗಮನ ಮಾಡುವ ನನಗೆ ಚಿತೆಯನ್ನು ಸಿದ್ಧಗೊಳಿಸಿರಿ' ಎಂದಳು. ಆಗ ಸಚಿವರು ಸಮಾಧಾನಮಾಡಿ 'ದೇವಿಯರ ಗರ್ಭದಲ್ಲಿರುವ ಮಗುವು ಮುಂದೆ ರಾಜ್ಯವನ್ನಾಳುವನು.' ಎಂದು ಮುಂದಿನ ಕಾರ್ಯವನ್ನು ಹೇಳಿ ಸಹಗಮನ ಮಾಡದಂತೆ ತಡೆದರು. ಆದರೂ ರಾಣಿಯು 'ನನಗೆ ಬದುಕುವ ಆಸೆಯಿಲ್ಲ'ವೆಂದು ಉತ್ತರಿಸಿದಳು. ಅದಕ್ಕೆ ಅವರು ಅವಳ ಚರಣಕಮಲದಲ್ಲಿ ತಲೆಯಿಟ್ಟು ಬೇಡಿಕೊಳ್ಳಲು ಅವಳು ತನ್ನಲ್ಲಿ ಹೀಗೆ ಹೇಳಿಕೊಂಡಳು ; ೩೫, 'ಈ ದುರಾತ್ಮರಾದ ಮಂತ್ರಿಗಳ ಮಾತನ್ನು ಏಕೆ ತಳ್ಳಿ ಹಾಕಬೇಕು. ಇಂದಿನ ರಾತ್ರಿ ಯಾವ ತಡೆಯೂ ಇಲ್ಲದೆ ನನಗೆ ತೋರಿದಂತೆ ಮಾಡುವೆನು,' ಎಂದು ಆಲೋಚಿಸಿಕೊಂಡು ಆ ವಸುಮತಿಯು ಅವರ ಮಾತಿಗೆ ಒಪ್ಪಿದಳು. ಅವರ ಮಾತಿಗೆ ಮನ್ನಣೆಯನ್ನಿತ್ತು 'ನೀವು ಹೇಳಿದ ಹಾಗೆ ಮಾಡುವೆನು' ಎಂದು ಹೇಳಿ ಅವರನ್ನತ್ತ ಕಳುಹಿಸಿದಳು. ವ|| ಇತ್ತ ೩೬. ಮಡು ಗಟ್ಟಿ ಹರಿಯುತ್ತಿದ್ದ ರಕ್ತದ ಕಡಲಿನಲ್ಲಿ ಮುಳುಗಿದ್ದ ರಥದಲ್ಲಿ ಗಾಯಗೊಂಡು ಮಲಗಿದ್ದ ರಾಜಹಂಸನು ಪಶ್ಚಿಮದಲ್ಲಿ ಮುಳುಗುತ್ತಿದ್ದ ಸೂರ್ಯನಂತೆ ಬಳಲುತ್ತಿದ್ದನು. ವ|| ಹಾಗಿದ್ದ ರಾಜನ ರಥವನ್ನು ಕುದುರೆಗಳು ಮರಗಳಿಂದ ದಟ್ಟವಾದ ಕಾಡಿನ ದಾರಿಯಲ್ಲಿ ತಮಗೆ ಇಷ್ಟ

ಕಂ|| ಭೂಮಿಗೆ ಶರನಿಧಿಸೆಱಗೆಂ
ಬಾ ಮಾತಂತಿರ್ಕೆ ಪೆರ್ಚಿದೀ ವಟ ವೃಕ್ಷಂ
ಸೀಮಾಸ್ಥಾನಮಿದೆನಲಟ
ವೀ ಮಧ್ಯದೊಳಿರ್ದುದಭ್ರಮಂ ಚುಂಬಿಸುತುಂ ೩೭

ರವಿರಥಮಪರಾಚಲಮಂ
ದಿವಸಾಂತ್ಯದೊಳೋಡಿ ಸಾರ್ದವೋಲ್ ವಟಕುಜಮೊ
ಪ್ಪುವ ಬೀಳಲೊಗ್ಗಿನೋಳ್ ನೃಪ
ನ ವರೂಥಂ ಸಿಲ್ಕಿ ಪೋಗದಿರ್ದತ್ತಾಗಳ್ ೩೮

ವ|| ಅಂತು ಸಿಲ್ಕಿದ ಸಮಯದೊಳ್

ಚಂ|| ಕಡೆವಗಲೊಳ್ ನಿಜಾಂಗಮತಿ ರಕ್ತದೊಳೊಪ್ಪಿರೆ ಬಲ್ಪುಗೆಟ್ಟು ತೇರ್
ಪೊಡೆಗೆಡೆಯಲ್ ತುರಂಗತತಿಮುಗ್ಗೆ ಸರೋಜಮುಖಂ ನಿರೋಧಮಂ
ಪಡೆದಿರೆ ಮಂಡಲಾಗ್ರ ಕರದುಗ್ರತೆ ಕುಂದಿರೆ ರಾಜಹಂಸನಂ
ಗೆಡೆಗೊಳಲಾರ್ಪೆನೆಂಬ ಬಗೆಯಿಂದಿನನೆಯ್ದಿದನಸ್ತಶೈಲಮಂ ೩೯

ಬಂದಂತೆ ಎಳೆದುಕೊಂಡು ಓಡಿ ಹೋದವು. ಮುಂದೆ.... ೩೭. ಭೂಮಿಗೆ ಸಮುದ್ರವು ಕೊನೆಯ ಗಡಿ ಎಂಬ ಮಾತು ಹಾಗಿರಲಿ, ಎತ್ತರವಾದ ಈ ಆಲದ ಮರವು ಭೂಮಿಗೆ ಸೀಮಾಸ್ಥಾನ ಎನ್ನುವಂತೆ ಕಾಡಿನ ಮಧ್ಯದಲ್ಲಿ ಆಗಸವನ್ನು ಚುಂಬಿಸುತ್ತಾ ಬೆಳೆದು ನಿಂತಿದ್ದಿತು. ೩೮. ಸೂರ್ಯನ ರಥವು ಓಡಿ ಓಡಿ ಸಾಯಂಕಾಲದಲ್ಲಿ ಅಸ್ತಾಚಲವನ್ನು ಸೇರುತ್ತದೆ. ಹಾಗೆಯೇ ರಾಜನ ರಥವು ಓಡಿಬಂದು ಆ ಆಲದ ಮರದ ಬೀಳಲುಗಳ ಪೊದರಿನಲ್ಲಿ ಸಿಕ್ಕಿಹಾಕಿಕೊಂಡಿತು. ಮುಂದೆ ಹೋಗಲಾರದೆ ಅಲ್ಲಿಯೇ ನಿಂತಿತು, ವ|| ಹಾಗೆ ಸಿಕ್ಕಿಕೊಂಡ ಸಮಯದಲ್ಲಿ— ೩೯. ಸಾಯಂಕಾಲದಲ್ಲಿ ತನ್ನ ಶರೀರವು (ಸೂರ್ಯಮಂಡಲವು) ತುಂಬ ಕೆಂಪಾಗಿ ಪ್ರಕಾಶಿಸುತ್ತಿದೆ. ರಥವು ಬಲಗುಂದಿ ಕೆಳಕ್ಕೆ ಬಿದ್ದಿದೆ. 1 ಕುದುರೆಗಳು ಮಗ್ಗರಿಸಿದುವು-ಕಮಲಗಳ ಮುಖಗಳು ಕಂದತೊಡಗಿವೆ- 2 ಮಂಡಲದ ತುದಿಯ ಕಿರಣಗಳ ಉಗ್ರತೆಯು ಕುಂದಿದೆ. ಈ ಸ್ಥಿತಿಯಲ್ಲಿ ಸೂರ್ಯನು ತಾನು ರಾಜಹಂಸನಿಗೆ ಜೊತೆಯಾಗಬಲ್ಲೆನೆಂದು ಯೋಚಿಸುತ್ತಾ ಅಸ್ತಗಿರಿಯನ್ನು ಸೇರಿದನು. (ರಾಜನ ಪರವಾಗಿ 1 ಸರೋಜದಂಥ ಮುಖ 2 ಖಡ್ಗವನ್ನು ಹಿಡಿದ

ವ|| ಅಂತಿನನಸ್ತಮಾಗಲೊಡಂ

ಉ|| ಏಕೆಲೆದೇವ ನಿನ್ನೊಳೆಡಗಣ್ ಬಲಗಣ್ ಸರಿಯೆನ್ನದಿಂತು ದೋ
ಷಾಕರನಂ ಸಮಂತು ತಲೆಗೇಱಿಸಿಕೊಂಡು ಮದೀಯಕಾಂತನಂ
ಪ್ರಾಕೃತನಂತಿರಸ್ತಗಿರಿಗೆಯ್ದಿಪೆಯೆಂದಭವಂಗೆ ವಾಸರ
ಶ್ರೀ ಕರಕಂಜಮಂ ಮುಗಿದವೋಲ್ ಮುಗಿದಿರ್ದುವು ಪದ್ಮಸಂಕುಳಂ ೪೦

ಮ|| ಕುಜಮೆಲ್ಲಂ ಬಗೆಯಲ್ ತಮಾಲಮಗಮೆಲ್ಲಂ ನೀಲಶೈಲಂ ನದೀ
ವ್ರಜಮೆಲ್ಲಂ ಯಮುನಾಜಲಂ ಕಮಲಮೆಲ್ಲಂ ಕೋಮಲೇಂದೀವರಂ
ಪ್ರಜೆಯೆಲ್ಲರ್ ಪುರುಷೋತ್ತಮರ್ ದೆಸೆಗಳೆಲ್ಲಂ ಕೃಷ್ಣವರ್ತ್ಮಾಶೆಯೆಂ
ದು ಜಗಂ ಬಣ್ಣಿಸಲುರ್ವಿ ಮರ್ಬು ಪದಪಿಂ ಪರ್ವಿತ್ತು ಸರ್ವೋರ್ವಿಯಂ ೪೧

ಕಂ|| ಬಗಿದು ಪುಗಲಿರಿದುನೋಡ
ಲ್ಬಗೆಯಲ್ ಕಣ್ ಸಲ್ಲದೊಯ್ಯನಡಿಯಿಡೆ ಚಿತ್ತ
ಕ್ಕೊಗೆಗುಮತಿಭೀತಿಯೆನಲು
ರ್ವಿಗೆ ದಟ್ಟೈಸಿರ್ದುದಂಧಕಾರಾಕಾರಂ ೪೨

ಕೈ) ವ|| ಹೀಗೆ ಸೂರ್ಯನು ಮುಳುಗಲು— ೪೦. ಸ್ವಾಮಿ ! ನಿನ್ನ ಎಡಬಲಗಣ್ಣುಗಳೆರಡನ್ನೂ ಒಂದೇ ಸಮನಾಗಿ ತಿಳಿಯದೆ ಹೀಗೆ ದೋಷಾಕರನಾದ ಚಂದ್ರನನ್ನು ತಲೆಯ ಮೇಲೇರಿಸಿಕೊಂಡು ನನ್ನ ಕಾಂತನಾದ ಸೂರ್ಯನನ್ನು ಸಾಮಾನ್ಯನೆಂಬಂತೆ ಅಸ್ತಗಿರಿಗೆ ಸೇರಿಸುತ್ತಿರುವೆಯೇಕೆ?' ಎಂದು ಹೇಳುತ್ತಾ ದಿವಸಲಕ್ಷ್ಮಿಯು ಶಿವನಿಗೆ ತನ್ನ ಕರಕಮಲಗಳನ್ನು ಜೋಡಿಸಿದಳೋ ಎಂಬಂತೆ ಕಮಲಗಳ ಗುಂಪು ಮುಚ್ಚಿಕೊಂಡುವು. (ಚಂದ್ರನೂ ಸೂರ್ಯನೂ ಶಿವನ ಎರಡು ಕಣ್ಣುಗಳು, ಇಬ್ಬರನ್ನೂ ಒಂದೇ ಸಮನಾಗಿ ಕಾಣಬೇಕಾದುದು ಧರ್ಮ. ಹಾಗೆ ಮಾಡದೆ ಚಂದ್ರನನ್ನು ಮಾತ್ರ ತಲೆಯ ಮೇಲೇರಿಸಿಕೊಂಡು ಸೂರ್ಯನನ್ನು ಮುಳುಗಲು ಬಿಟ್ಟುದು ಪಕ್ಷಪಾತ ಎಂಬುದು ದಿವಸಲಕ್ಷ್ಮಿಯ ಭಾವ.) ೪೧. ಕತ್ತಲೆಯು ಭೂಮಿಯನ್ನೆಲ್ಲ ಒತ್ತಾಗಿ ಹರಡಿತು. ಅದರಿಂದ ಮರಗಳೆಲ್ಲ ಹೊಂಗೆಯ ಮರಗಳಾದವು, ಬೆಟ್ಟಗಳೆಲ್ಲ ನೀಲಗಿರಿಗಳಾದುವು, ನದಿಗಳ ನೀರೆಲ್ಲ ಯಮುನಾ ನದಿಯ ಜಲವಾಯಿತು. ಕಮಲಗಳೆಲ್ಲ ಕೋಮಲವಾದ ಕನ್ನೈದಿಲೆಗಳಾದುವು, ಪ್ರಜೆಗಳೆಲ್ಲ ಕೃಷ್ಣರಾದರು. (ಕಪ್ಪಾಗಿ ಕಾಣಿಸಿದರು). ದಿಕ್ಕುಗಳೆಲ್ಲ ಕಪ್ಪಾದಂತೆ ಕಾಣಸಿದುವು. (ದಿಗಂಗನೆಯರು ಕೃಷ್ಣನ ಆಗಮನಾಭಿಲಾಷೆಯುಳ್ಳವರಾದರು. ಕೃಷ್ಣ ಗೋಪೀವೃತ್ತಾಂತ ಧ್ವನಿ?) ಎಂದು ಜಗತ್ತಿನ ಜನರು ಒತ್ತಾದ ಕತ್ತಲೆಯ ಪ್ರಭಾವವನ್ನು ವರ್ಣಿಸಿದರು. ೪೨. ಸೀಳಿಕೊಂಡು ಮುಂದೆನಡೆಯಲು ಸಾಧ್ಯವಿಲ್ಲ. ಕಂಗಳು ಯಾವುದನ್ನೂ ಸ್ಪಷ್ಟವಾಗಿ ಕಾಣಲಾರವು, ಮುಂದೆ ಅಡಿಯಿಡಲು ಮನಸ್ಸಿನಲ್ಲಿ

ಕಂ|| ಭುವನಕ್ಕೆ ಲೋಚನೇಂದ್ರಿಯ
ವಿವಿಧ ವ್ಯಾಪಾರಮಿನ್ನದೇಕೆನಲಾಕಾ
ಶಮನವನಿಯುಮನೆಣ್ದೆಸೆಯುಂ
ಕವಿದೆಸೆದತ್ತಂಧಕಾರಮದ್ಭುತಘೋರಂ ೪೩

ನೋಡುವೊಡಂಜನಗಿರಿಯೀ
ಸಾಡುವೊಡದು ಲವಣವಾರ್ಧಿ ಸಕಲಜನಂ ಕೊಂ
ಡಾಡುವೊಡೆ ರವಿಶಶಾಂಕರ
ನೋಡಿಸಿ ಪೆಸರ್ವಡೆದ ತಿಮಿರಮೇನೊಪ್ಪಿದುದೋ ೪೪

ಸೋಂಕಿಂ ಸ್ಥಾವರಮಂ ಮಾ
ತಂ ಕೇಳ್ವುದಱಿಂದೆ ಜಂಗಮಂಗಳನಱಿವರ್
ತಾಂ ಕಾಣ್ಕೆಗರಿದೆನಲ್ ಬಗೆ
ಗೇಂ ಕಡುಮಂದೈಸಿ ನಿಂದುದೋ ಘನತಿಮಿರಂ ೪೫

ವ|| ಅಂತು ದುಸ್ತರಮಪ್ಪ ಕೞ್ತಲೆ ಪರ್ಬಿರಲಿತ್ತಲ್ ವಸುಮತೀ ದೇವಿ ಮರಣಾರ್ಥಮರಮನೆಯಿಂ ಪೊರಮಟ್ಟು

ಕಂ|| ವನದೇವತೆ ವನದೊಪ್ಪಮ
ನನುನಯದಿಂ ನೋೞ್ಪೆನೆಂದು ಬಂದಳೋ ಪೇೞಿಂ
ದೆನೆ ರಾತ್ರಿಯೊಳೊರ್ಬಳೆ ಕಾಂ
ತನ ಸಹಗಮನಕ್ಕೆ ಠಾವನಱಸುತೆ ಬಂದಳ್ ೪೬

ಭಯವುಂಟಾಗುತ್ತದೆ. ಹೀಗೆ ಕತ್ತಲೆಯು ಸುತ್ತ ದಟ್ಟವಾಗಿ ಹರಡಿದ್ದಿತು. ೪೩. ಭುವನಕ್ಕೆ ನಯನೇಂದ್ರಿಯದ ವ್ಯಾಪಾರವಿನ್ನು ಏತಕ್ಕೆ ಬೇಕು ಎನ್ನುವಂತೆ ಅದ್ಭುತವಾದ ಘೋರವಾದ ಕತ್ತಲೆಯು ಆಗಸವನ್ನೂ ನೆಲವನ್ನೂ ಎಂಟು ದಿಕ್ಕುಗಳನ್ನೂ ಕವಿದಿದ್ದಿತು. ೪೪. ನೋಡುವುದಕ್ಕೆ ಅಂಜನಗಿರಿ, ಈಸಾಡಲು ಸಮುದ್ರ ಎಂದು ಸಕಲ ಜನರೂ ಕೊಂಡಾಡಲು ಸೂರ್ಯಚಂದ್ರರನ್ನೋಡಿಸಿ ಹೆಸರುವಾಸಿಯಾದ ಕತ್ತಲೆಯದೆಷ್ಟು ಸೊಗಸಾಗಿ ಕಾಣಿಸಿತೋ! ೪೫. ಜನರು ಜಡವಸ್ತುಗಳನ್ನು ಮುಟ್ಟಿತಿಳಿಯುತ್ತಿದ್ದರು. ಸಂಚರಿಸುವ ಚೇತನರನ್ನು ಮಾತಿನಿಂದ ಗುರುತಿಸುತ್ತಿದ್ದರು, ಹೀಗೆ ದಟ್ಟವಾದ ಕತ್ತಲೆಯು ಯಾವುದನ್ನೂ ನೋಡಲು ಸಾಧ್ಯವಾಗದಂತೆ ಹರಡಿದ್ದಿತು. ವ|| ದುಸ್ತರವಾದ ಕತ್ತಲೆಯು ಹೀಗೆ ಹರಡಿರಲು ವಸುಮತೀ ದೇವಿಯು ಕಾಂತನ ಸಹಗಮನಕ್ಕಾಗಿ ಅರಮನೆಯಿಂದ ಹೊರಟು— ೪೬. ವನದೇವತೆಯು ವನದ ಅಂದವನ್ನು ಒಲವಿನಿಂದ ನೋಡಲು ಬಂದಳೋ ಎಂಬಂತೆ ರಾತ್ರಿಯಲ್ಲಿ ಒಬ್ಬಳೇ ಸಹಗಮನಕ್ಕಾಗಿ ಸ್ಥಳವನ್ನು

ವ॥ ಅಂತಱಸುತ್ತುಂ ಗಹನಗಹ್ವರದೊಳ್ ವಿಹ್ವಲೆಯಾಗಿ ಬರುತ್ತುಂ

ಮ॥ ದೆಸೆಯೆಂಟುಂ ಪಿಟಿಗ್ಗಿಸುತ್ತಗ್ಗಳಮೆನೆ ಪರೆದಿರ್ಪಳ್ಳಿಗೊಂಬೇಟಿಗ್ಗಿಯಿಂದಾ
ಗಸಮಂ ಪೊತ್ತಿರ್ಪ ಮೇಲ್ಗೊಂಬಿನ ಶಶಿಕಿರಣಂ ಬಾರಿಸಲ್ ಬಾರದೆಂಬಂ
ತೆಸೆವಚ್ಛಾಯಾವಿಲಾಸಂ ತುಱುಗಿದ ತನಿವಣ್ ಸೈತು ಪಾತಾಳಮಂ ಭೇ
ದಿಸೆ ಕಾಲೂಱಿರ್ಪಬೇರ್ಗಳ್ ನಟಿಸುವ ವಟ ಭೂಜಾತಮಂ ಕಾಂತೆ ಸಾರ್ದಳ್
೪೭

ವ॥ ಅಂತು ಸಾರ್ದಿದನ್ನ ಬಗೆಗೆ ತಕ್ಕ ಠಾವೆಂದು ವಟವಿಟಪಿಯ ಕೆಲದ ಕಿಱುಗೊಂಬಿನೊಳ್ ಸೆಱಗಂ ಕಟ್ಟಿಯುಱುಳನಿಕ್ಕಿಕೊಳಲುಜ್ಜುಗಿಸುತ್ತುಮಿರಲಿತ್ತಲರಸಂ

ಕಂ॥ ತಂಗಾಳಿ ಬೀಸಲಾಕ್ಷಣ
ಮಂಗದೊಳಸುಪಸರಿಸಲ್ಕೆ ನೃಪನೆಚ್ಚತ್ತಾ
ವಂಗೆ ಪುಗಲರಿದೆನಿಪ್ಪ ವ
ನಾಂಗಣದತ್ತೇಕೆ ಬಂದೆನೆಂಬವಸರದೊಳ್ ೪೮

ಉ॥ ಆಂ ತನುವಂ ನಿವೇದಿಪೆನೆಲೇ ವನದೇವತೆಯೆನ್ನ ಜನ್ಮ ಜ
ನ್ಮಾಂತರದಲ್ಲಿ ಕೂರ್ತನಗೆ ನಚ್ಚಿನ ಮೆಚ್ಚಿನ ಮಾಗಧೇಶ್ವರಂ
ಕಾಂತನೆ ಅಪ್ಪನಕ್ಕೆನುತೆ ಗೋಣ್ಗುಱಿಲಿಕ್ಕಿಕೊಳುತ್ತುಮಿರ್ಪತ
ತ್ಕಾಂತೆಯ ಮಾತುಗೇಳಲಿನಿಸಾದುದು ಭೂಪತಿಗಾ ವನಾಂತದೊಳ್ ೪೯

ಹುಡುಕುತ್ತಾ ಬಂದಳು. ದಟ್ಟವಾದ ಕಾಡಿನಲ್ಲಿ ಹುಡುಕುತ್ತಾ ಕಳವಳಗೊಂಡು ಬರುತ್ತಾ ೪೭. ಆಕಾಂತೆಯು ಒಂದು ದೊಡ್ಡ ಆಲದ ಮರವನ್ನು ಕಂಡು ಅದರ ಹತ್ತಿರಕ್ಕೆ ಬಂದಳು. ಆ ಮರವು ಎಂಟು ದಿಕ್ಕುಗಳನ್ನೂ ಹಿಗ್ಗಿಸುವಂತೆ ಸುತ್ತ ಉದ್ದವಾದ ತನ್ನ ಕೊಂಬೆಗಳನ್ನು ಚಾಚಿದ್ದಿತು. ಸಣ್ಣಸಣ್ಣ ಕೊಂಬೆಗಳು ತುಂಬ ಎತ್ತರಕ್ಕೆ ಬೆಳೆದಿದ್ದರಿಂದ ಮೇಲ್ಕೊಂಬೆಗಳ ಮೂಲಕ ಚಂದ್ರನ ಕಿರಣಗಳಿಗೆ ಆಗಸದಿಂದ ತೂರಿಬರಲು ಅವಕಾಶವೇ ಇರಲಿಲ್ಲ. ಮರದ ತುಂಬ ಸೊಗಸಾದ ಹಣ್ಣುಗಳು. ಅದರ ಬಿಳಲುಗಳು ಪಾತಾಳವನ್ನೇ ಸೀಳುವಂತೆ ನೆಲದಲ್ಲಿ ಆಳವಾಗಿ ಊರಿದ್ದುವು. ಅದರ ಕಾಂತಿ ವಿಲಾಸವು ಅಸದೃಶವಾಗಿದ್ದಿತು, ವ|| ಹತ್ತಿರ ಹೋಗಿ ಈ ಸ್ಥಳವು ತನ್ನ ಮನಸ್ಸಿಗೆ ಮೆಚ್ಚಿಗೆಯಾದ ಸ್ಥಳವೆಂದು ನಿಶ್ಚಯಿಸಿ ಆ ಆಲದ ಮರದ ಪಕ್ಕದಲ್ಲಿದ್ದ ಒಂದು ಸಣ್ಣ ಕೊಂಬೆಗೆ ಸೀರೆಯ ಸೆರಗನ್ನು ಕಟ್ಟಿ ಉರುಳು ಹಾಕಿಕೊಳ್ಳಲು ಯತ್ನಿಸುತ್ತಿರುವಾಗ ಇತ್ತ ೪೮. ತಂಗಾಳಿ ಬೀಸಿದ ಕೂಡಲೆ ರಾಜನ ಅಂಗದಲ್ಲಿ ಪ್ರಾಣ ಸಂಚಾರವಾಯಿತು. ಅರಸನು ಎಚ್ಚೆತ್ತನು. 'ಯಾರಿಗೂ ಪ್ರವೇಶಿಸಲು ಕಷ್ಟವಾದ ಈ ಕಾಡಿಗೆ ನಾನು ಏಕೆ ಬಂದೆನು ಎಂದು ಯೋಚಿಸತೊಡಗಿದನು, ಆಗ ೪೯. ವನದೇವತೆಯೆ! ನಾನು ಈ ನನ್ನ ಶರೀರವನ್ನು ಅರ್ಪಿಸುತ್ತಿದ್ದೇನೆ. ಜನ್ಮಜನ್ಮಾಂತರದಲ್ಲಿಯೂ ಪ್ರಿಯನಾದ ಮತ್ತು ನನ್ನ ಮೆಚ್ಚಿಗೆಗೆ ಪಾತ್ರನಾದ ಮಗಧ ರಾಜನೇ ನನಗೆ ಗಂಡನಾಗಲಿ' ಎಂದು ಹೇಳುತ್ತಾ ತನ್ನ

ವ॥ ಅದಂ ಕೇಳ್ದು

ಕಂ॥ ಈ ರಾತ್ರಿಯೊಳಂಜದೆ ಕಾಂ
ತಾರಕ್ಕೆಯ್ತಂದಳಿವಳೆಂಬರಸನ ಗಂ
ಭೀರರವಮುಣ್ಮೆ ವಸುಮತಿ
ನಾರಿಯುದಂ ಕೇಳ್ದು ನೋಡಿದಳ್ ನಾಲ್ದೆಸೆಯಂ ೫೦

ವ॥ ಅಂತು ಪೂರ್ವ ಪರಿಚಯುಮಪ್ಪ ಗಂಭೀರ ಧ್ವನಿಯಂ ವಸುಮತಿ ಕೇಳ್ದಾ ದೆಸೆಯಂ ನೋಡಿ

ಕಂ॥ ಈರವಮೆನ್ನರಸನ ಗಂ
ಭೀರಧ್ವನಿಯಂತೆ ತೋರ್ಪುದಲ್ಲದೊಡೇಂ ಘೋ
ರಾರಣ್ಯದೊಳಗೆ....
....ಧ್ವನಿಯಾದೊಡಂ ಪರೀಕ್ಷಿಪೆನೆಂದಳ್ ೫೧

ಏತೆಱದಿಂದೀ ತಾಣದೊ
ಳೀ ತನುವಂ ಬಿಡುವೆನಂಜಲೇಕೆನಗಂತಾ
ಭೂತಪ್ರೇತಂಗಳೆನು
ತ್ತಾತರುಣಿ ತದೀಯರವದ ದೆಸೆಗೈತಂದಳ್ ೫೨

ಕೊರಳಿಗೆ ಉರುಳನ್ನು ಹಾಕಿಕೊಳ್ಳಲು ರಾಣಿಯು ಪ್ರಯತ್ನಿಸುತ್ತಿದ್ದಳು. ಆ ಕಾಡಿನ ನಡುವೆ ಆಕೆಯ ಮಾತನ್ನು ಕೇಳಿ ಅರಸನಿಗೆ ಆಶ್ಚರ್ಯವಾಯಿತು. ಅವಳ ಮಾತುಗಳು ಕೇಳಲು ಹಿತವೆನಿಸಿತು. ವ। ಅದನ್ನು ಕೇಳಿ ೫೦. 'ಈ ರಾತ್ರಿಯಲ್ಲಿ ಹೆದರದೆ ಕಾಡಿಗೆ ಬಂದಿರುವ ಹೆಂಗಸು ಯಾರು?' ಎಂದು ಅರಸನು ಕೂಗಿದನು. ಅವನ ಗಂಭೀರವಾದ ಧ್ವನಿಯನ್ನು ಕೇಳಿ ಕಾಂತೆಯು ನಾಲ್ಕು ದಿಕ್ಕುಗಳನ್ನೂ ತಿರುಗಿ ನೋಡಿದಳು. ಮೊದಲೇ ಪರಿಚಿತವಾಗಿದ್ದ ಗಂಭೀರವಾದ ಧ್ವನಿಯನ್ನು ಕೇಳಿ, ಆ ಧ್ವನಿ ಬಂದ ದಿಕ್ಕಿನತ್ತ ನೋಡಿ. ೫೦. 'ಈ ಧ್ವನಿಯು ನನ್ನ ಪತಿಯ ಗಂಭೀರವಾದ ಧ್ವನಿಯಂತೆ ತೋರುತ್ತಿದೆ. ಹೇಗಾದರೂ ಇರಲಿ, ಈ ಘೋರವಾದ ಅರಣ್ಯದಲ್ಲಿ (ಭೂತ ಪ್ರೇತಗಳ) ಧ್ವನಿಯಾಗಿದ್ದರೂ ಆಗಲಿ, ಪರೀಕ್ಷಿಸುವೆನು' ಎಂದು ಹೇಳಿಕೊಂಡಳು. ೫೨. 'ಹೇಗಿದ್ದರೂ ಈ ಜಾಗದಲ್ಲಿ ನಾನು ಸಾಯಲು ಸಿದ್ಧವಾಗಿ ಬಂದಿರುವವಳು. ಭೂತ ಪ್ರೇತಗಳಿಗೇಕೆ ಹೆದರಬೇಕು ?'

ವ॥ ಅಂದು ಬಂದುನೋೞ್ಪಸಂ

ಕಂ॥ ನೀರ್ಗೆಳಸಿ ತೇಂಕುವಶ್ವಂ
ಬೇರ್ಗಳ್ ಪರಿದಿರ್ಪ ಬೀೞಲೊಳ್ ಸಿಲ್ಕಿದ ಬ
ಲ್ದೇರ್ಗದೆಯ ಘಾತಿಯಿಂ ನಸು
ನುರ್ಗಿದ ತನುವೆಸುವ ನೃಪನನವಳೀಕ್ಷಿಸಿದಳ್ ೫೩

ವ॥ ಅಂತು ಮಗುಳ್ದು ಮೂರ್ಛೆಯನೆಯ್ದಿದ ನೃಪನ ವರೂಥಮನಾಕೆಯೆಯ್ದಲೊಡಂ

ಕಂ॥ ತಲೆದೋಱೆ ಪುಳಕಮಲರ್ಗ
ಣ್ಗಳೊಳಾನಂದಾಶ್ರು ಪೊಣ್ಮೆ ದಟ್ಟೈಸಿದ ಕ
ೞ್ತಲೆಯಾದೊಡಮೇಂ ಚಿತ್ತೋ
ಜ್ಜ್ವಳ ಪ್ರೇಮರಸಾತಿರೇಕಮಱೆಪಿತ್ತಾಗಳ್ ೫೪

ವ॥ ಅಂತು ಶಂಕಿಸುವುದುಂಟಾದೊಡಂ ಸಾತ್ವಿಕಭಾವಂ ಶಂಕಿಸದೆ ಮುಂದುವರಿದು ಪತಿಯೆಂಬುದನಱೆಪುತ್ತಿರೆ ಬಂದು ಕೋಮಲಕರದಿಂ ಭೂಮೀಶನ ಸಕಲಾವಯವಂಗಳನಂಟಿ ನೋಡಿ

ಕಂ॥ ಎನ್ನಂತೆ ಧನ್ಯಳಾವವ
ಳೆನ್ನಧಿಪತಿ ತಪ್ಪದೆನ್ನ ನೋಂಪಿಯ ಫಲಮೇ
ಸನ್ನಿದಮಾಯ್ತೆನುತಂಗನೆ
ತನ್ನರಸನನೊಲ್ದು ಕಂಡು ಹರ್ಷಮನಾಂತಳ್ ೫೫

ಎನ್ನುತ್ತಾ ತರುಣಿಯು ಆ ಧ್ವನಿ ಬಂದಕಡೆ ನಡೆದುಹೋದಳು. ವ॥ ಹಾಗೆ ಬಂದು ನೋಡಲು, ೫೩. ನೀರಿಗೆ ಆಶಿಸಿ ಬಿಕ್ಕಳಿಸುತ್ತಿರುವ ಕುದುರೆಗಳು, ಬೇರು ಕತ್ತರಿಸಿದ ಬಿಳಿಲುಗಳಲ್ಲಿ ಸಿಕ್ಕಿಹಾಕಿಕೊಂಡಿದ್ದ ದೊಡ್ಡತೇರು, ಅದರಲ್ಲಿದ್ದ ಗದಾ ಘಾತದಿಂದ ತುಸು ಜಜ್ಜಿದ ಶರೀರವುಳ್ಳ ರಾಜ ಇವೆಲ್ಲವನ್ನೂ ಅವಳು ಕಂಡಳು. ವ॥ ಆಗ ಮೂರ್ಛಿತನಾದ ರಾಜನಿದ್ದ ತೇರಿನ ಹತ್ತಿರಕ್ಕೆ ಬರಲು, ೫೪. ಕೂಡಲೆ ಅವಳ ಶರೀರದಲ್ಲಿ ರೋಮಾಂಚವುಂಟಾಯಿತು. ಅವಳ ಅಲರ್ಗಣ್ಗಳಲ್ಲಿ ಆನಂದಬಾಷ್ಪವು ಉಕ್ಕಿ ಹರಿಯಿತು. ದಟ್ಟವಾಗಿ ಕತ್ತಲೆ ಹರಡಿದ್ದರೂ ಮನಸ್ಸಿನಲ್ಲುಂಟಾದ ಉಜ್ವಲವಾದ ಪ್ರೇಮ ರಸಾಧಿಕ್ಯವು ರಾಜನನ್ನು ತೋರಿಸಿಕೊಟ್ಟಿತು. ವ॥ ಶಂಕಿಸಬಹುದಾಗಿದ್ದರೂ ಪುಳಕಾಶ್ರುರೂಪವಾದ ಸಾತ್ವಿಕಭಾವದಿಂದ ಶಂಕಿಸದೆ ನಡೆದುಬಂದು ನೋಡಿ ಪತಿಯೆಂದು ತಿಳಿದು ತನ್ನ ಮೃದು ಕರಗಳಿಂದ ರಾಜನ ಸಕಲಾವಯವಗಳನ್ನೂ ಮುಟ್ಟಿನೋಡಿ, ೫೫. "ನನ್ನ ಹಾಗೆ ಪುಣ್ಯವತಿಯು ಯಾರಿದ್ದಾರೆ ? ಇವನು ನನ್ನ ಪತಿಯೇ ! ಬೇರೆ ಯಾರೂ ಅಲ್ಲ. ನಾನು ಮಾಡಿದ ವ್ರತದ ಫಲವೀಗ ನನಗೆ ದೊರ

ವ॥ ಅಂತು ಹರ್ಷವಾರ್ಧಿಯೊಳ್ ಮುೞುಂಗಿ ಇಲ್ಲಿರ್ದೊಡೇನಪ್ಪುದು ಅರಸನಂ ನಮ್ಮ ಪುರಕ್ಕೆ ಕೊಂಡು ಪೋಪಂತೆ ಮಾಡಲ್ವೇೞ್ಪುದೆಂದು

ಕಂ॥ ಅಡಿಗೊರ್ಮೆಬೆರ್ಚುತಂ ಕ
ಣ್ಗಡಿವೆಳಗಿಂ ಮರ್ಬನೋಡಿಸುತ್ತುಂ ಮನದೊಳ್
ಗುಡಿಗಟ್ಟುತ್ತಿರುಳೊರ್ಬಳೆ
ನಡೆತಂದಳ್ ಕಾಂತೆ ರತ್ನಶೈಲಕ್ಕಾಗಲ್ ೫೬

ಶೋಕಾವೇಶಂ ಹರ್ಷೋ
ದ್ರೇಕಂ ಭಯರಸಮನೊತ್ತಲಪ್ಪುದಱಿಂ ಮ
ತ್ತಾ ಕಾನನಮಂ ಕಳೆದವ
ಳೇಕಾಕಿನಿಯಾಗಿ ರತ್ನಗಿರಿಗೈತಂದಳ್ ೫೭

ವ॥ ಅಂತು ಬಂದು ರತ್ನಗಿರಿಯಂ ಪೊಕ್ಕು ಎಲ್ಲರಂ ಕರೆಯಿಸಿ

ಕಂ॥ ಇಂದು ಕಳೆಯಾಂತರಣ್ಯದೊ
ಳೊಂದಾಲದಮರದ ಬೀೞಲೊಗ್ಗಿನೊಳರಸಂ
ಸ್ಯಂದನಯುತನಲ್ಲಿರ್ದಪ
ನೆಂದೆಲ್ಲರ್ಗುಸಿರ್ದಳಬಲೆ ಸಂಭ್ರಮದಿಂದಂ ೫೮

ವ॥ ಅಂತುಸಿರ್ದುದಂ ಸಚಿವರ್ ಸಂತಸಂಬಟ್ಟು ಪುರಜನ ಪರಿಜನಂಬೆರಸು

ಕಂ॥ ಜ್ಯೋತಿರ್ಮಯಮಾಯ್ತೆನಲವ
ನೀತಳಮೊಂಬಂತೆ ಮೆಱೆಯೆ ಕರದೀಪಮಸಂ
ಖ್ಯಾತಂ ಜನಮೈತಂದ
ತ್ತಾ ತರುವಿನೊಳಿರ್ದ ನೃಪನನಿದಿರ್ಗೊಳಲೊಲವಿಂ ೫೯

ಕಿತು" ಎಂದು ಹೇಳುತ್ತಾ ಅರಸಿಯು ಅರಸನನ್ನು ಕಂಡು ಹರ್ಷಿಸಿದಳು. ವ॥ ಹೀಗೆ ಹರ್ಷಸಮುದ್ರದಲ್ಲಿ ಮುಳುಗಿ 'ಇಲ್ಲಿದ್ದರೆ ಏನು ಲಾಭ ? ಅರಸನನ್ನು ನಮ್ಮ ಊರಿಗೆ ಕರೆದುಕೊಂಡು ಹೋಗುವಂತೆ ಮಾಡಬೇಕು' ಎಂದು ಚಿಂತಿಸಿ, ೫೬. ಹೆಜ್ಜೆಹೆಜ್ಜೆಗೂ ಹೆದರುತ್ತಾ ಕಂಗಳ ಕಾಂತಿಯಿಂದ ಕತ್ತಲೆಯನ್ನೋಡಿಸುತ್ತಾ ಮನಸ್ಸಿನಲ್ಲಿ ಹರ್ಷಿಸುತ್ತಾ ಕತ್ತಲೆಯಲ್ಲಿ ಒಬ್ಬಳೇ ರತ್ನಗಿರಿಗೆ ಬಂದಳು. ೫೭. ಶೋಕಾವೇಶವೂ ಹರ್ಷೋದ್ರೇಕವೂ ಭಯವನ್ನು ಅಡಗಿಸಿದುದರಿಂದ ಅವಳು ಆ ಕಾಡನ್ನು ಕಳೆದು ಒಬ್ಬಳೇ ರತ್ನಗಿರಿಗೆ ಬಂದಳು. ವ॥ ರತ್ನಗಿರಿಯನ್ನು ಪ್ರವೇಶಿಸಿ ಎಲ್ಲರನ್ನೂ ಕರೆಯಿಸಿ. ೫೮. ಬೆಳದಿಂಗಳು ಹರಡಿದ ಕಾಡಿನಲ್ಲಿ ಒಂದು ಆಲದಮರದ ಬುಡದ ಬಿಳಿಲುಗಳ ಪೊದರಿನಲ್ಲಿ ರಥದೊಡನೆ ಅರಸನಿದ್ದಾನೆ ಎಂದು ಕಾಂತೆಯು ಸಂಭ್ರಮದಿಂದ ಎಲ್ಲರಿಗೂ ಹೇಳಿದಳು. ವ॥ ಹಾಗೆ ಹೇಳಲು ಮಂತ್ರಿಗಳು ಸಂತೋಷವನ್ನು ಹೊಂದಿ, ಪುರಜನಪರಿಜನರೊಡನೆ ೫೯. ನೆಲವೆಲ್ಲ ಬೆಳಗುವಂತೆ ಕರದೀಪಗಳನ್ನು ಹಿಡಿದು ಅಸಂಖ್ಯಾತರಾದ ಜನರು ಆ ಮರದ ಬಳಿಯಿದ್ದ ರಾಜನನ್ನು ಎದುರುಗೊಳ್ಳುವ ಸಲುವಾಗಿ ಒಲವಿನಿಂದ ಬಂದು

ವ॥ ಅಂತು ಪೊಱಮಟ್ಟು

ಕಂ॥ ಶ್ರುತಿನಿಕರದಂತೆ ಶಾಖಾ
ನ್ವಿತದಿಂ ಸೇನಾಗ್ರದಂತೆ ನಾನಾ ಪತ್ರೋ
ನ್ನತಿಯಿಂ ನರರಂತೆ ವಯ
ಸ್ಥಿತಿಯಿಂ ಮೆಱೆದಿರ್ಪ ವಟಕುಜಕ್ಕೆಯ್ತಂದರ್ ೬೦

ಬಿಂಜದಡವಿಯೊಳಿಳಾಪತಿ
ಸಂಜೆ ಮುಗಿಲ್ದುಱುಗಲಂತೆ ರುಧಿರಾರುಣದಿಂ
ರಂಜಿಸುತಿರ್ಪಿನಮೆಯ್ದೆ
ತ್ತಂಜಲಿ ಹಸ್ತಂಗಳಿಂದಮಭಿಜನಮನಿತಂ ೬೧

ವ॥ ಅಂತು ಸಚಿವರ್ ಬೆರಸು ಸರ್ವಜನಂ ಬಂದು

ಕಂ॥ ಗದ್ಗದಕಂಠಂ ನವರೋ
ಮೋದ್ಗಮತನು ಬಾಷ್ಪಲುಳಿತ ಲೋಚನಮನಿತಂ
ತರ್ಗತಚಿಂತಂ ರಂಜಿಸೆ
ಸದ್ಗುಣಿಯೆನಿಪರಸನಂ ನಮಸ್ಕರಿಸಿರ್ದರ್ ೬೨

ವ॥ ಅಂತು ನಮಸ್ಕರಿಸಿ ರಾಜಹಂಸ ರಾಜನಂ ಪರಿವೇಷ್ಟಿಸಿದ ತರಳ ತಾರಾನಿಕಾಯದಂತೆ ಪುರಜನಂ ಪರಿಜನಂ ಬಂದಾಲದ ಬೀಟಲೊಳ್ ಸೆಕ್ಕಿದ ಗಾಲಿಯುಂ ತೆಗೆದರಸನಂ ರತ್ನಾಚಲಕ್ಕೆ ಕೊಂಡುಬಂದು ಸಕಲೌಷಧಿಗಳಿಂ ಶಸ್ತ್ರವ್ರಣಮುಂ ಮಾಣಿಸಲ್ ಬಳಿಕಂ

ಸೇರಿದರು. ವ॥ ಹಾಗೆ ಹೊರಟು, ೬೦. ವೇದಗಳಂತೆ ಶಾಖೆಗಳಿಂದ (ವೇದವಿಭಾಗ ಮತ್ತು ಕೊಂಬೆ) ಸೇನೆಯ ಮುಂಭಾಗದಂತೆ ಅನೇಕ ಪತ್ರಗಳಿಂದ (ವಾಹನ ಮತ್ತು ಎಲೆ) ಮನುಷ್ಯರಂತೆ ವಯಸ್ಥಿತಿಯಿಂದ (ವಯಸ್ಸಿನ ಸ್ಥಿತಿ ಮತ್ತು ಪಕ್ಷಿಗಳ ವಾಸ) ಪ್ರಕಾಶಿಸುವ ಆಲದಮರದ ಹತ್ತಿರಕ್ಕೆ ಬಂದರು. ೬೧. ವಿಂಧ್ಯ ಪರ್ವತದ ಕಾಡಿನಲ್ಲಿ ರಕ್ತದಿಂದ ನೆನೆದು ಕೆಂಪಾದ ರಾಜನು ಸಂಜೆಯಲ್ಲಿ ಕೆಂಪಾದ ಮೋಡಗಳ ಗುಂಪಿನಂತೆ ಪ್ರಕಾಶಿಸುತ್ತಿದ್ದನು. ಆಗ ಪುರಜನ ಪರಿಜನರೆಲ್ಲರೂ ಕೈಮುಗಿದುಕೊಂಡು ಅಲ್ಲಿಗೆ ಬಂದರು. ಹೀಗೆ ಮಂತ್ರಿಗಳೊಡನೆ ಎಲ್ಲ ಜನರೂ ಅಲ್ಲಿಗೆ ಬಂದು—೬೨. ಕೊರಳು ಬಿಗಿದ, ರೋಮಾಂಚಿತನಾದ, ಕಂಗಳಲ್ಲಿ ಕಣ್ಣೀರನ್ನು ತುಂಬಿಕೊಂಡ, ಮನಸ್ಸಿನಲ್ಲೇ ಚಿಂತಿಸುತ್ತಿದ್ದ ಸದ್ಗುಣಿಯಾದ ರಾಜನಿಗೆ ನಮಸ್ಕರಿಸಿದರು. ವ॥ ಹಾಗೆ ನಮಸ್ಕರಿಸಿ ಹೊಳೆಯುವ ತಾರೆಗಳು ಚಂದ್ರನನ್ನು ಬಳಸುವಂತೆ ಪುರಜನ ಪರಿಜನರು ರಾಜಹಂಸ ರಾಜನನ್ನು ಬಳಸಿ ನಿಂತರು. ಅನಂತರ ಆಲದ ಬೀಳಲಿನಲ್ಲಿ ಸಿಕ್ಕಿಕೊಂಡಿದ್ದ ಚಕ್ರವನ್ನು ಹೊರಕ್ಕೆ ತೆಗೆದು ರಾಜನನ್ನು ರತ್ನಗಿರಿಗೆ ಕರೆತಂದರು. ಅಲ್ಲಿ ಔಷಧಿಗಳಿಂದ ಶಸ್ತ್ರಗಳಿಂದಾದ ಗಾಯಗಳನ್ನು ವಾಸಿ

ಕಂ॥ ಅಪಜಯುದಚಿಂತೆ ಚಿತ್ತ
ಕ್ಕುಪತಾಪಮನೆಸಗೆ ಪೋಗಿ ಗುರುಸನ್ನಿಧಿಯೋಳ್
ತಪಮುಂ ಚರಿಸುವೆನೆಂದಾ
ನೃಪನೆಯ್ದಿದನೊರ್ಮೆ ವಾಮದೇವರ ಗಿರಿಯಂ ೬೩

ವ॥ ಅಂತು ರಾಜಹಂಸಂ ತನ್ನ ಕುಲಗುರುವಪ್ಪ ವಾಮದೇವರಿರ್ಪ ಶಾಂತಾಚಲಕ್ಕೆ ಬಂದು ತದಾಶ್ರಮಮಂ ಪೊಕ್ಕು

ನಸು ಮುಗಿದಕ್ಷಿನಾಸಿಕದೊಳೊಂದಿರೆ ನಿಶ್ಚಲಚಿತ್ತವೃತ್ತಿ ನೀ
ಳ್ದಸಿತ ಜಟಾಳಿ ನುರ್ಗಿದ ಬಹಿರ್ವಿಷಯಸ್ಥಿತಿ ನೂತ್ನಮೂರ್ತಿ ನೇ
ರ್ಪೆಸೆದಿರೆ ನೈಷ್ಠಿಕವ್ರತಮನೋವಿ ಜನೌಘದಕಣ್ಗನಂಗ ತಾ
ಪಸನವೊಲಿರ್ದ ತನ್ಮುನಿಗೆ ವಂದಿಸಿದಂ ಮಗಧಕ್ಷಿತೀಶ್ವರಂ ೬೪

ವ॥ ಅಂತು ವಂದಿಸಿ ಕೈಗಳಂ ಮುಗಿದು ನಿಂದಿರ್ಪುದಂ ವಾಮದೇವರ್ ಕಾರುಣ್ಯ ಕಟಾಕ್ಷದಿಂ ನಿರೀಕ್ಷಿಸಿ ಪರಸಿಯರಸಂ ಬಂದಕಾರ್ಯಮೇನೆಂದು ಬೆಸಗೊಳ್ವುದುಮಾತಂ ತನಗಾದಪಜಯ ವೃತ್ತಾಂತಮಂ ಪೇೞ್ದು ತಪಕ್ಕುಪದೇಶಂ ಕೊಡಿಮೆಂಬುದುಮಾಮುನಿ ತನ್ನೊಳಿಂತೆಂದಂ

ಮಾಡಿದರು. ಬಳಿಕ ೬೩. ಸೋಲಿನ ಚಿಂತೆಯು ಮನಸ್ಸಿನಲ್ಲಿ ಸಂತಾಪವನ್ನುಂಟು ಮಾಡಿತು. ಅದರಿಂದ ಗುರುಗಳ ಹತ್ತಿರ ಹೋಗಿ ತಪಸ್ಸನ್ನಾಚರಿಸುವೆನೆಂದು ಯೋಚಿಸಿ ರಾಜನು ಒಂದು ದಿನ ವಾಮದೇವರ ಬೆಟ್ಟಕ್ಕೆ ಹೋದನು. ವ|| ಹೀಗೆ ರಾಜಹಂಸನು ತನ್ನ ಕುಲ ಗುರುವಾದ ವಾಮದೇವರಿರುವ ಶಾಂತಾಚಲಕ್ಕೆ ಬಂದು ಅವರ ಆಶ್ರಮವನ್ನು ಪ್ರವೇಶಿಸಿ ೬೪. ಆ ವಾಮದೇವ ಮುನಿಗಳಿಗೆ ಮಗಧ ರಾಜನು ವಂದಿಸಿದನು. ಆ ಮುನಿಗಳು ಅರೆಮುಚ್ಚಿದ ಕಣ್ಣನ್ನು ಮೂಗಿನ ತುದಿಯಲ್ಲಿ ನಿಲ್ಲಿಸಿ, ನಿಶ್ಚಲವಾದ ಚಿತ್ತ ವ್ಯಾಪಾರವುಳ್ಳವರಾಗಿ, ಉದ್ದವಾದ ಕಪ್ಪಾದ ಜಡೆಗಳಿಂದ ಕೂಡಿ, ಹೊರಗಿನ ವಿಷಯುಗಳಲ್ಲಿ ಆಸಕ್ತಿಯನ್ನು ತೊರೆದು, ಹೊಸ ಬಗೆಯ ಸಮರಸವಾದ ಆಕಾರವುಳ್ಳವರಾಗಿ ಸ್ಥಿರವಾದ ವ್ರತವನ್ನು ಕೈಗೊಂಡ ತಪಸ್ವಿಯಾದ ಮನ್ಮಥನಂತೆ ಜನರ ಕಂಗಳಿಗೆ ಕಂಡರು. ವ|| ರಾಜನು ವಂದಿಸಿ ಕೈಗಳನ್ನು ಜೋಡಿಸಿಕೊಂಡು ನಿಂತನು. ವಾಮದೇವರು ಕರುಣೆಯಿಂದ ನೋಡಿ ಹರಸಿ, ಬಂದ ಕೆಲಸವೇನೆಂದು ಕೇಳಿದರು. ಆಗ ಅರಸನು ತನಗಾದ ಸೋಲಿನ ವೃತ್ತಾಂತವನ್ನು ವಿವರಿಸಿ 'ತಪಸ್ಸಿಗೆ ಉಪದೇಶ ನೀಡಿರಿ' ಎಂದು ಪ್ರಾರ್ಥಿಸಿದನು. ಆಗ ಮುನಿಗಳು ತಮ್ಮ ಮನಸ್ಸಿನಲ್ಲಿ ಹೀಗೆ ಹೇಳಿಕೊಂಡರು.

ಕಂ॥ ಪೂಜಾಭಂಗಂ ತಪಸಿಗೆ
ತೇಜೋಭಂಗಂ ಬುಧರ್ಗೆ ಸಂಗರಭಂಗಂ
ರಾಜರ್ಗೆ ಮರಣದಿಂ ಮಿಗಿ
ಲೀ ಜನ್ಮದೊಳೆಂದು ಮುನಿಮುಗುಳ್ದಿಂತೆಂದಂ ೬೫

ವ॥ ಎಲೆಯರಸ ತಪದಿಂ ಕ್ಷಪಿಸಿರಿ ಪುವಂ ಸಾಧಿಸುವುಪದೇಶಮುಪದೇಶದಂ ಅದಂ ಬಿಟ್ಟು

ಕಂ॥ ಎಲ್ಲಾ ತಪವಿಂದಧಿಕಂ
ಬಲ್ಲರ್ಗೆ ಗೃಹಸ್ಥಮಾರ್ಗಮದಱಿಂದೆಲೆ ಭೂ
ವಲ್ಲಭ ನಿನ್ನಯ ಪುರದೊಳ್
ಸಲ್ಲೀಲೆಯೊಳಿರ್ಪುದೆಂದು ಮುನಿಪತಿ ಪೇಳ್ದಂ ೬೬

ವ॥ ಎಂದು ಪೇಳ್ವುದುಂ ದುರ್ಮ್ಮನಂ ತೀರ್ದೊ(ರ್ಪೊ)ಡೆನಗೆ ರಿಪುಜಯೋಪಾಯ ಮಾವುದೆಂದರಸಂ ವಾಮದೇವನಂ ಬೆಸಗೊಳೆ

ಕಂ॥ ಸುಮತಿ ವಸುಮತಿಯಾ ಗರ್ಭದ
ಕುಮಾರಕಂ ಸಕಲ ವೈರಿಯುಂ ತನ್ನ ಪರಾ
ಕ್ರಮದಿಂದೆ ಗೆಲ್ದು ಮತ್ತಂ
ಸಮಸ್ತದೇಶಕ್ಕೆ ಮುಖ್ಯನಪ್ಪನಮೋಘಂ ೬೭

೬೫. ತಪಸ್ವಿಗೆ ಪೂಜಾಭಂಗ, ವಿದ್ವಾಂಸರಿಗೆ ತೇಜೋಭಂಗ, ರಾಜರಿಗೆ ಯುದ್ಧದಲ್ಲಿ ಭಂಗ, ಇವು ಈ ಜನ್ಮದಲ್ಲಿ ಸಾವಿಗಿಂತ ಹೆಚ್ಚು ಎಂದು ಯೋಚಿಸಿ ವಾಮದೇವ ಮುನಿಗಳು ಹೇಳಿದರು. ವ।। "ಎಲೆಯರಸನೆ, ತಪಸ್ಸಿನಿಂದ ಶತ್ರುಗಳನ್ನು ನಾಶಗೊಳಿಸಲು ಉಪದೇಶವು ಬರೀ ಸೋಗುಗಾರಿಕೆ. ನೀನದನ್ನು ತೊರೆದು—೬೬. 'ತಿಳಿದವರಿಗೆ ಎಲ್ಲ ರೀತಿಯಿಂದಲೂ ಗೃಹಸ್ಥ ಮಾರ್ಗವು ಶ್ರೇಷ್ಠವಾದುದು. ಅದರಿಂದ ರಾಜನೆ ! ನೀನು ನಿನ್ನ ಪುರದಲ್ಲಿ ಗೃಹಸ್ಥರಿಗೆ ಉಚಿತವಾದ ನಡೆವಳಿಕೆಯಲ್ಲಿಯೇ ಇರು' ಎಂದು ಆ ಮುನಿಪತಿಗಳು ಹೇಳಿದರು. ವ।। ಅದನ್ನು ಕೇಳಿ ಚಿಂತೆಯನ್ನು ತೊರೆದು ರಾಜನು '(ಮನೋವ್ಯಥೆಯು ಹೋಗಬೇಕಾದರೆ ?) ನನಗೆ ಶತ್ರುಗಳನ್ನು ಗೆಲ್ಲುವ ಉಪಾಯವು ಯಾವುದು ?' ಎಂದು ವಾಮದೇವರನ್ನು ಮತ್ತೆ ಪ್ರಶ್ನಿಸಿದನು. ೬೭. ಆಗ ಮುನಿಗಳು "ಸುಮತಿಯಾದ ವಸುಮತಿಯ ಗರ್ಭದಿಂದ ಹುಟ್ಟುವ ಕುಮಾರನು ಎಲ್ಲ ಶತ್ರುಗಳನ್ನೂ ತನ್ನ ಪರಾಕ್ರಮದಿಂದ ಗೆದ್ದು ಸಮಸ್ತ ದೇಶಗಳಿಗೂ ಶ್ರೇಷ್ಠನಾದ

ವ॥ ಎಂದಃಗಾಮಿನಿ ಕಾರ್ಯಮಂ ಪೇೞ್ದು ಮುನಿಪಂ ಜನಪನಂ ಬೀೞ್ಕೊಟ್ಟೊಡೆ ಆತಂ ಮುನಿವಾಕ್ಯಂ ತಪ್ಪದೆಂದು ಪ್ರೀತಿಯಿಂ ತನ್ನ ರತ್ನಾಚಲದೊಳಿರ್ದ ಜನಲೋಕಮಂ ಪುಷ್ಪ ಪುರಕ್ಕೆತಂದು ಪ್ರಹಾರವರ್ಮನಂ ಮನ್ನಿಸಿ ನಿಜರಾಜ್ಯಕ್ಕೆ ಕಳುಪಿ ಸುಖಸಂಕಥಾವಿನೋದ ದಿಂದಿರಲ್

ವ॥ ಇತ್ತ

ಉ॥ ಚಾದಗೆ ಕಾರ್ಮುಗಿಲ್ವನಿ ಯನುಜ್ಜ್ವಲವರ್ಣ ಚಕೋರನೊಲ್ದು ಚಂ
ದ್ರೋದಯಮಂ ರಥಾಂಗಮನಿಶಂ ಪಗಲಂ ಪಿಕರಾಜಿ ಚೈತ್ರಮಾ
ಸಾದಿಯನೆಯ್ದೆ ಪಾರ್ವ ತೆಱದಿಂ ನಿಜಕಾಂತೆ ಸುಖಪ್ರಸೂತೆಯು
ಪ್ಪಾದಿನಮಂ ಕರಂಪದೆದು ಪಾರ್ದೆಸೆದಂ ನೃಪರೂಪಮನ್ಮಥಂ ೬೮

ವ॥ ಅಂತಿರ್ಪುದುಂ ವಸುಮತೀದೇವಿಗೆ ನವಮಾಸಂ ತುಂಬಿ

ಇಂದುವನಾ ಸುಧಾಂಬುಧಿ ತಣ್ಗದಿರಂ ಶಶಿಲೇಖೆ ಚೈತ್ರನಂ
ನಂದನಲಕ್ಷ್ಮಿ ಕಾಮಶರಮಂ ಲತೆ ಪೂರ್ಣಸರಂ ಮರಾಳನಂ
ಮಂದ ಸಮೀರನಂ ಮಳಯಮೇಖಲೆ ಪೆತ್ತವೊಲಾಕೆ ಪೆತ್ತಳಾ
ನಂದನನಂ ಕುಮಾರಹರಿಚಂದನನಂ ಸುಚರಿತ್ರವೃಂದನಂ ೬೯

ಮಹಾರಾಜನಾಗುವನು" ಎಂದರು. ವ।। ಹೀಗೆ ಮುಂದೆ ನಡೆಯುವ ಕೆಲಸವನ್ನು ಹೇಳಿ ಮುನಿಗಳು ರಾಜನನ್ನು ಬೀಳ್ಕೊಟ್ಟರು. ಆತನು ಮುನಿಗಳ ಮಾತು ಸುಳ್ಳಾಗುವು ದಿಲ್ಲವೆಂದು ಸಂತೋಷದಿಂದ ರತ್ನಗಿರಿಯಲ್ಲಿದ್ದ ಜನ ಸಮೂಹವನ್ನು ಕುಸುಮಪುರಕ್ಕೆ ಕರೆತಂದನು. ಪ್ರಹಾರವರ್ಮನನ್ನು ಸನ್ಮಾನಿಸಿ ಅವನ ರಾಜ್ಯಕ್ಕೆ ಕಳುಹಿಸಿದನು. ಅನಂತರ ಸುಖಕರವಾದ ಸಂಭಾಷಣೆ ಮೊದಲಾದ ವಿನೋದದಿಂದ ಕಾಲ ಕಳೆಯು ತ್ತಿದ್ದನು. ವ।। ಇತ್ತ—೬೮. ಚಾತಕವು ಮಳೆಗಾಲದ ಮೋಡದ ಮಳೆ ಹನಿಗಾಗಿ ಕಾಯುತ್ತದೆ. ಹೊಳೆಯುವ ಬಣ್ಣವುಳ್ಳ ಚಕೋರಪಕ್ಷಿಯು ಚಂದ್ರೋದಯಕ್ಕಾಗಿ ಕಾಯುತ್ತದೆ. ಚಕ್ರವಾಕಗಳು ಯಾವಾಗಲೂ ಹಗಲಿನ ನಿರೀಕ್ಷಣೆಯಲ್ಲಿರುತ್ತವೆ. ಕೋಗಿಲೆ ಗಳು ಚೈತ್ರ ಮಾಸದ ಪ್ರಾರಂಭಕ್ಕಾಗಿ ಕಾಯುತ್ತವೆ. ಇದೇ ರೀತಿಯಲ್ಲಿ ಆ ರಾಜ ಮನ್ಮಥನು ತನ್ನ ಕಾಂತೆಯು ಸುಖವಾಗಿ ಪ್ರಸವಿಸುವ ದಿನಕ್ಕಾಗಿ ಆಸೆಯಿಂದ ಕಾಯು ತ್ತಿದ್ದನು ವ।। ಹೀಗಿರಲು ವಸುಮತೀದೇವಿಗೆ ಒಂಭತ್ತು ತಿಂಗಳುಗಳು ತುಂಬಿದುವು— ೬೯. ಕ್ಷೀರ ಸಾಗರವು ಚಂದ್ರನನ್ನೂ, ಚಂದ್ರನು ಚಂದ್ರಲೇಖೆಯನ್ನೂ, ನಂದನ ಲಕ್ಷ್ಮಿಯು ಚೈತ್ರ ಮಾಸವನ್ನೂ, ಬಳ್ಳಿಯು ಕಾಮನ ಬಾಣವನ್ನೂ, ನೀರಿನಿಂದ ತುಂಬಿದ ಸರೋವರವು ಹಂಸವನ್ನೂ, ಮಲಯ ಪರ್ವತದ ಮಧ್ಯಪ್ರದೇಶವು ಮಂದಮಾರುತ ವನ್ನೂ ಪಡೆದ ಹಾಗೆ ಆ ವಸುಮತಿಯು ಸುಚರಿತ್ರಗಳಿಂದ ತುಂಬಿದ ಹರಿಚಂದನವೆಂಬ

ಮ॥ ಜನಮಿತ್ರಂ ಪೂರ್ವರಾಜಂ ಭುಜಶಿಖರಲಸತ್ಸಾರ್ವಭೌಮಂ ಜಗನ್ಮೋ
ಹನಸೌಮ್ಯಂ ಲೋಕಜೀವಂ ಕವಿಕುಲವಿಭವಂ ರಾಜ ಹಂಸಾತ್ಮಜಂ ನ
ಮ್ಮನಿಬರ್ಗಿತಂ ಪ್ರಿಯಂ ಮತ್ಸಮಮೆನುತೆ ಸಮಸ್ತಗ್ರಹಂ ತತ್ಕುಮಾರಂ
ಗೆ ನಿ...ಂತಪ್ರೀತಿಯಂಸೈತೆಸಗುವೆವೆನಲಿನ್ನಾತನಿಂ ಖ್ಯಾತನಾವೊಂ ೭೦

ವ॥ ಅಂತು ಸಮಸ್ತ ಗ್ರಹಾನುಗ್ರಹ ವಿಗ್ರಹಂ ಪುಟ್ಟಿರ್ಪುದುಂ ಪುರೋಹಿತರ್ ಬಂದು

ಕಂ॥ ಅರಸಾ! ನಿನ್ನ ಮನೋರಥ
ಮರಿಗಳ ಹೃಚ್ಛಲ್ಯಮುಭಜನಂಗಳಭೀಪ್ಸಂ
ಗುರುಜನರ ಕಾಮ್ಯಫಲಮಂ
ಕುರಿಪಂದದಿನುದಯುನಾದನಾತ್ಮ ತನೂಜಂ ೭೧

ವ॥ ಎಂದು ಪುರೋಹಿತರ್ ಪೇಟ್ದುದುಂ

ಮ॥ ಗುಡಿಯಂಕಟ್ಟರೊ ಭೇರಿಯಂ ಪೊಯಿಸಿರೋ ಕಾರಾಗೃಹಾಂತಸ್ಥರಂ
ಬಿಡಿರೋ ಮೋಣ್ ಗಣಕಾಳಿಯಂ ಕರೆಯಿರೋ ಬೇಟ್ಪರ್ಗೆ ಬೇಟ್ಪಿಪ್ಪಮಂ
ಕುಡಿರೋ ಕುಂಕುಮಗಂಧದೋಕುಳಿಗಳಂ ಪೊಯ್ಯೊಯ್ಯೆನುತ್ತುತ್ಸವಂ
ಬಡೆಯುತ್ತಾ ಕ್ಷಣಮೆಯ್ದಿದಂ ನೃಪವರಂ ತತ್ಸೂತಿಕಾಗೇಹಮಂ ೭೨

ದೇವತರುವಿನಂಥ ಮಗನನ್ನು ಹಡೆದಳು. ೭೦. ಜನರಿಗೆ ಮಿತ್ರ (ಸೂರ್ಯ) ಪೂರ್ವ ರಾಜ್ಯಕ್ಕೆ ರಾಜ (ಚಂದ್ರ) ಹೆಗಲ ಮೇಲೆ ಹೊಳೆಯುವ ಸರ್ವಭೂಮಿಯ ಅಧಿಕಾರ ವುಳ್ಳ (ಮಂಗಳ) ಜಗತ್ತನ್ನು ಮೋಹಿಸುವ ಸೌಮ್ಯ ಗುಣವುಳ್ಳ (ಬುಧ) ಲೋಕಕ್ಕೆ ಜೀವನನಾದ (ಗುರು) ಕವಿಕುಲದ ಐಶ್ವರ್ಯವಾದ (ಶುಕ್ರ) ರಾಜಹಂಸನ ಮಗನು (ಶನಿ) ನಮಗೆಲ್ಲರಿಗೂ ಪ್ರಿಯನು ಮತ್ತು ನಮಗೆ ಸಮನು ಎಂದು ತಿಳಿದು ಎಲ್ಲ ಗ್ರಹ ಗಳೂ ಆ ಕುಮಾರನಿಗೆ ಹೆಚ್ಚಾದ ಪ್ರೀತಿಯನ್ನು ಜನ್ಮಕಾಲದಲ್ಲಿ ಪ್ರಕಟಿಸಿದುವು. ಇನ್ನು ಆತನಿಗಿಂತ ಖ್ಯಾತನಾವನಿದ್ದಾನೆ ? (ಜನ್ಮಕಾಲದಲ್ಲಿ ಸಮಸ್ತ ಗ್ರಹಗಳೂ ಅನುಕೂಲ ಗಳಾಗಿದ್ದುವು. ಇದನ್ನು ಶ್ಲೇಷಾರ್ಥವುಳ್ಳ ಪದಗಳಿಂದ ವ್ಯಕ್ತಪಡಿಸಲಾಗಿದೆ.) ವ|| ಹೀಗೆ ಸಮಸ್ತ ಗ್ರಹಗಳ ಅನುಗ್ರಹವನ್ನು ಪಡೆದು ಬಾಲಕನು ಹುಟ್ಟಲಾಗಿ ಪುರೋಹಿತರು ಬಂದು ೭೧. ರಾಜನೆ ! ನಿನ್ನ ಮನೋರಥವೂ, ಶತ್ರುಗಳ ಹೃದಯಕ್ಕೆ ಶಲ್ಯವೂ ಸಜ್ಜನರ ಇಷ್ಟಾರ್ಥವೂ, ಗುರುಹಿರಿಯರು ಬಯಸಿದ ಫಲವೂ ಆದ ಮಗನು ನಿನಗೆ ಹುಟ್ಟಿದ್ದಾನೆ. ಎಂದು ಹೇಳಲು. ೭೨. "ಬಾವುಟಗಳನ್ನೆತ್ತಿ ಕಟ್ಟಿರಿ ನಗಾರಿಗಳನ್ನು ಬಾರಿಸಿರಿ. ಕಾರಾಗೃಹಗಳಲ್ಲಿರುವ ಸೆರೆಯಾಳುಗಳನ್ನು ಬಿಡಿರಿ, ಜೋಯಿಸರನ್ನು ಕರೆಯಿರಿ, ಬೇಡುವವರಿಗೆ ಬೇಡಿದ ವಸ್ತುಗಳನ್ನು ಕೊಡಿರಿ, ಕೇಸರಿ ಬೆರೆತ ಸುಗಂಧವುಳ್ಳ ಓಕುಳಿಯ ನೀರನ್ನು ಸುರಿಯಿರಿ ಸುರಿಯಿರಿ' ಎಂದು ಹೇಳುತ್ತಾ ಉತ್ಸವದಿಂದ ಆ

ಉ॥ ಬಾಗಿಲೊಳೆಲ್ಲರಂ ನಿಲಿಸಿಬಂದು ನಿಜಾನ್ವಯರತ್ನನಂ ಮಹಾ
ಭಾಗನನಾತ್ಮಸಂಭವನನೊಪ್ಪಿರೆ ಕಂಡನುರಾಗದಿಂ ಸುಧಾ
ಸಾಗರದೊಳ್ ಮುೞುಂಗಿ ಪೊಸತೆಂದು ವಿಲಾಸಿನಿಯರ್ ಪಸಾಯಮಂ
ಬೇಗದೊಳೀಟ್ಟುಕೊಳ್ವೊಡವರ್ಗೇಂ ನಗುತೊಪ್ಪಿದನೋ ನೃಪಾಲಕಂ ೭೩

ವ॥ ಅಂತು ಸಂತೋಷಂಮುಖದೊಳ್ ತುಱುಂಕಲರಸಂ ತತ್ಕಾಲೋಚಿತ ಕರ್ಮಮಂ ಕೂರ್ಮೆಯಿನೆಸಗಿ ಸಕಲದಾನದಿಂ ಸರ್ವರಂ ಸನ್ಮಾನಂಗೆಯ್ದು ದ್ವಾದಶದಿನದೊಳ್ ರಾಜವಾಹನನೆಂದು ನಾಮಕರಣಮಂ ಮಾಡಲ್ ಬೞಿಯಂ

ಕಂ॥ ಎಳವೆಱೆ ದಿವಸಕ್ರಮದಿಂ
ಬಳೆವಂತಿರೆ ಮಾತೃಪಿತರ ಹೃದಯಾಂತರದೊಳ್
ಬಳೆಯುತ್ತಿರೆ ಸಂತೋಷಂ
ಬಳೆಯುತ್ತಿರ್ದಂ ನೃಪಾತ್ಮಜಂ ಚೆಲ್ವೆಸೆಯಲ್ ೭೪

ಬೆಂಡೋಲೆ ಮುೞುಹು ಮಾಂಗಾಯ್
ಪೆಂಡೆಯುಮರಳೆಲೆಯೆಟಲ್ವ ಕಿಱುಪುಲಿಯುಗುರ್ಗಳ್
ಗೊಂಡೆಯುಮುಡಿದಾರಂ ಭೂ
ಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ ೭೫

ರಾಜನು ಹೆರಿಗೆ ಮನೆಗೆ ಬಂದನು. ೭೩. ರಾಜನು ಎಲ್ಲರನ್ನೂ ಬಾಗಿಲಲ್ಲಿಯೇ ನಿಲ್ಲಿಸಿ ಒಳಹೊಕ್ಕನು. ತನ್ನ ವಂಶಕ್ಕೆ ರತ್ನವಾದ ಮಹಾ ಭಾಗ್ಯಶಾಲಿಯಾದ ಮಗನನ್ನು ಪ್ರೀತಿಯಿಂದ ನೋಡಿದನು. ಆನಂದಾಮೃತ ಸಾಗರದಲ್ಲಿ ಮುಳುಗಿದನು. ಅಲ್ಲಿದ್ದ ವಿಲಾಸಿನಿಯರು ಕೂಡಲೇ ಉಡುಗೊರೆಗಳನ್ನು ಬೇಗ ಬೇಗ ಸೆಳೆದುಕೊಂಡರು. ಅದನ್ನು ನೋಡಿ ರಾಜನು ನಗುತ್ತಾ ನಿಂತನು. ಅವನ ರೀತಿ ನೂತನವೂ ಆಕರ್ಷಕವೂ ಆಗಿದ್ದಿತು. ವ।। ಹೀಗೆ ಅರಸನ ಮುಖದಲ್ಲಿ ಸಂತೋಷವು ಉಕ್ಕಿ ತುಳುಕಿತು. ಕೂಡಲೆ ಅವನು ಆ ಸಮಯದಲ್ಲಿ ಮಾಡಬೇಕಾದ ವಿಧಿಗಳನ್ನು ಪ್ರೀತಿಯಿಂದ ಮಾಡಿಸಿದನು. ಅನೇಕ ವಿಧ ದಾನಗಳಿಂದ ಎಲ್ಲರನ್ನೂ ಗೌರವಿಸಿದನು. ಹನ್ನೆರಡನೆಯ ದಿವಸ ರಾಜವಾಹನನೆಂದು ನಾಮಕರಣವನ್ನು ಮಾಡಿಸಿದನು. ಬಳಿಕ ೭೪. ಬಾಲಚಂದ್ರನು ದಿನ ದಿನವೂ ಕ್ರಮವಾಗಿ ಬೆಳೆಯುವಂತೆ ರಾಜಕುಮಾರನು ಸುಂದರವಾಗಿ ಬೆಳೆದನು. ಅವನೊಡನೆ ತಾಯಿ ತಂದೆಗಳ ಹೃದಯದಲ್ಲಿ ಸಂತೋಷವೂ ಬೆಳೆಯುತ್ತಾ ಬಂದಿತು. ೭೫. ಬೆಂಡೋಲೆ, ಮುರುಹು, ಮಾವಿನಕಾಯಿ, ಕಾಲಂದುಗೆ, ಅರಳೆಲೆ, ಜೋಲಾಡುವ ಚಿಕ್ಕ ಹುಲಿಯ ಉಗುರುಗಳು, ಗೊಂಡೆಗಳ ಉಡಿದಾರ ಮೊದಲಾದ ಒಡವೆಗಳು ರಾಜಕುಮಾರನ

ಉತ್ಸಾಹ ವೃತ್ತಂ||

ಚಿನ್ನದಿಂದೆ ಚೆನ್ನಪೊನ್ನಗೆಜ್ಜೆಗಟ್ಟಿರಂಜಿಪೊಂ
ದೊಂದು ಕಾಲನಾಡಿ ಸೈಕುಮಾರ ಎಂದು ಕಾಂತೆಯರ್
ಮುಂದೆನಿಂದು ತಪ್ಪಳಿಕ್ಕಿಯಾಡಿಸಲ್ ವಿಲಾಸದಿಂ
ಮಂದಹಾಸಮುಣ್ಮೆ ಪೊಣ್ಮಲಾಡಿದಂ ಕುಮಾರಕಂ ೭೬

ವ|| ಅಂತೊಪ್ಪುವ ಕುಮಾರನ ಬಾಲಲೀಲೆಯಿಂದರಸಂ ಸುಖಂಬಡೆಯುತಿರ್ಪುದುಂ

ಕಂ|| ಪತಿಹಿತವರೆನಿಪ ಸಚಿವರ
ಸತಿಯರ್ ನಾಲ್ವರ್ ಮಹೋತ್ಸವಂ ಮಿಗೆ ದೈವ
ಸ್ಥಿತಿಯಿಂ ಪುತ್ರರನೆರಡೆರ
ಡು ತಿಂಗಳಿಂ ಹಿಂಚಿ ಪಡೆದರನುನಯಮೆಸೆಯಲ್ ೭೭

ವ|| ಅಂತು ನಾಲ್ವರ್ ಸಚಿವರ್ ತಂತಮ್ಮ ಪುತ್ರರ್ಗೆ ಜಾತಕರ್ಮಮಂ ಮಾಡಿ ದ್ವಾದಶದಿನದೊಳ್ ಪ್ರಮತಿ ಮಿತ್ರಗುಪ್ತ ಮಂತ್ರಗುಪ್ತ ವಿಶ್ರುತನೆಂದು ನಾಮಕರಣಮಂ ಮಾಡಿ

ಕಂ|| ಹಿಂದಣಪರಾಧಮದು ತ
ಮ್ಮಿಂದಂ ಪರಿಹರಿಸಲೆಂದು ಮಗಧೇಶಂಗಾ
ನಂದದಿನಿತ್ತರ್ ತಮ್ಮಯ
ನಂದನರಂ ನಾಲ್ವರಂ ಮನಂಮಿಗೆ ಸಚಿವರ್ ೭೮

ಮೈಯಲ್ಲಿ ಪ್ರಕಾಶಿಸುತ್ತಿದ್ದುವು. ೭೬. 'ಕುಮಾರ ! ಅಂದವಾಗಿ ಚಿನ್ನದ ಗೆಜ್ಜೆಗಳನ್ನು ಕಟ್ಟಿದ ಸುಂದರವಾದ ಒಂದೊಂದು ಕಾಲನ್ನು ಆಡಿಸು' ಎಂದು ಕಾಂತೆಯರು ಮುಂದೆ ನಿಂತುಕೊಂಡು ಆ ಬಾಲಕನನ್ನು ವಿಲಾಸದಿಂದ ಕುಣಿಸುತ್ತಿದ್ದರು. ಕುಮಾರನು ಮಂದಹಾಸವನ್ನು ಸೂಸುತ್ತಾ ತಪ್ಪು ತಪ್ಪಾಗಿ ಹೆಜ್ಜೆ ಹಾಕುತ್ತಾ ಕುಣಿದಾಡುತ್ತಿದ್ದನು. ವ|| ಹೀಗೆ ಅರಸನು ಮನೋಹರವಾದ ಬಾಲಲೀಲೆಯಿಂದ ಸುಖವನ್ನು ಪಡೆಯುತ್ತಿರಲು— ೭೭. ರಾಜಭಕ್ತರಾದ ನಾಲ್ವರು ಮಂತ್ರಿಗಳ ಪತ್ನಿಯರೂ ದೈವ ಯೋಗದಿಂದ ಎರಡೆರಡು ತಿಂಗಳ ವ್ಯತ್ಯಾಸದಿಂದ ಮಕ್ಕಳನ್ನು ಹಡೆದರು. ವ|| ಅನಂತರ ನಾಲ್ವರು ಮಂತ್ರಿಗಳೂ ತಮ್ಮ ತಮ್ಮ ಮಕ್ಕಳಿಗೆ ಜಾತಕರ್ಮ ನಾಮಕರಣಗಳನ್ನು ಮಾಡಿ ಹನ್ನೆರಡನೆಯ ದಿವಸ ಪ್ರಮತಿ, ಮಿತ್ರಗುಪ್ತ, ಮಂತ್ರಗುಪ್ತ, ವಿಶ್ರುತ ಎಂದು ಹೆಸರಿಟ್ಟರು. ೭೮. ಹಿಂದೆ ತಾವು ಮಾಡಿದ ಅಪರಾಧವನ್ನು ಪರಿಹರಿಸಿಕೊಳ್ಳಬೇಕೆಂದು ಯೋಚಿಸಿ ಮಗಧ ರಾಜನಿಗೆ ತಮ್ಮ ನಾಲ್ವರು ಮಕ್ಕಳನ್ನೂ ಆನಂದದಿಂದ ಆ ಮಂತ್ರಿ

ವ॥ ಅಂತಿತ್ತಕುಮಾರರ್ವೆರಸು ಕುಸುಮಾಸ್ತ್ರಂ ಕುಸುಮಬಾಣಂಗಳಂ ಪೊರೆವಂತೆ ಪೊರೆಯುತಿರ್ದರ್

ಮ ಸ್ರ॥ ಧನಿಕಂ ಸೌಜನ್ಯಮಂ ಯೌವನಸುಭಗಲಸನ್ಮೂರ್ತಿ ಸದ್ವಿದ್ಯೆಯಂ ಭೋ
ಗಿ ನಿತಾಂತಾರೋಗ್ಯಮಂ ಭೂತಳಪತಿ ವಿವಿಧೌದಾರ್ಯಮಂ ತ್ಯಾಗಿ ಸತ್ಪಾ
ತ್ರ ನಿಧಾನಪ್ರೌಢಿಯಂ ತಾಮೆಸೆವತಿಶಯದಿಂ ಪೆತ್ತವೋಲ್ ಪೆತ್ತನಾನಂ
ದನಿವಾಸೋಲ್ಲಾಸದಿಂ ನಂದನರಧಿಕರಂ ರಾಜಹಂಸಕ್ಷಿತೀಶಂ ೭೯

ವ॥ ಅಂತಾನಂದ ಸಂದೋಹಂ ಸಂಪೂರ್ಣಮಾಗಿರ್ಪಿನಮಿತ್ತಲ್ ವಾಮದೇವರ ಶಿಷ್ಯಂ ವಿದ್ಯಾನಿಧಿಯೆಂಬನೊಂದು ದಿವಸಂ

ಕಂ॥ ನಿರ್ಭೇದ್ಯ ಚಿತ್ತನಿಂದ್ರಹ
ವಿರ್ಭಾಗಪ್ರದನಮೋಘವಾಙ್ಮುನಿಶಿಷ್ಯಂ
ದರ್ಭೇಂಧನಕ್ಕೆ ಪೋಗು
ತ್ತರ್ಭಕನಂ ತಳೆದ ವೃದ್ಧಸತಿಯಂ ಕಂಡಂ ೮೦

ಎಲೆವೃದ್ಧೆ ಘೋರ ಕಾನನ
ದೊಳೊರ್ಬಳೇಂ ತೊಟಲುತಿರ್ಪೆ ನೀನಾರ್ಗೆ ಕರ
ಸ್ಥಳದ ಶಿಶುವಾವನೆಂದೊಡೆ
ತಳವೆಳಗಾಗುತ್ತೆ ಪೇಟಲುದ್ಯತೆಯಾದಳ್ ೮೧

ಗಳು ಕೊಟ್ಟರು. ವ।। ಹಾಗೆ ಕೊಟ್ಟ ಕುಮಾರರ ಜೊತೆಯಲ್ಲಿ ರಾಜವಾಹನನನ್ನು ಅರಸನು ಕಾಮನು ಹೂಬಾಣಗಳನ್ನು ಕಾಪಾಡುವಂತೆ ಪೊರೆಯುತ್ತಿದ್ದನು. ೭೯. ಹಣಗಾರನು ಸೌಜನ್ಯವನ್ನು ಪಡೆದಂತೆ, ಯೌವನದಿಂದ ಸುಂದರವಾದ ಶರೀರವುಳ್ಳವನು ಸದ್ವಿದ್ಯೆಯನ್ನು ಪಡೆದಂತೆ, ಭೋಗಿಯು ಸಂಪೂರ್ಣ ಆರೋಗ್ಯವನ್ನು ಪಡೆದಂತೆ, ರಾಜನು ವಿವಿಧವಾದ ಔದಾರ್ಯವನ್ನು ಪಡೆದಂತೆ, ತ್ಯಾಗಿಯು ಸತ್ಪಾತ್ರದಲ್ಲಿ ದಾನ ಮಾಡುವ ಚಾತುರ್ಯವನ್ನು ಪಡೆದಂತೆ, ರಾಜಹಂಸನು ಹೆಚ್ಚಿನ ಮಕ್ಕಳನ್ನು ಪಡೆದು ಅತ್ಯಾನಂದಭರಿತನಾದನು. ವ।। ಹೀಗೆ ಆನಂದ ಸಮೂಹವು ಸಂಪೂರ್ಣವಾಗಿರುವಾಗ ಇತ್ತ ವಾಮದೇವರ ಶಿಷ್ಯ ವಿದ್ಯಾನಿಧಿಯೆಂಬುವನು ಒಂದು ದಿವಸ (ಆಶ್ಚರ್ಯವೊಂದನ್ನು ಕಂಡನು. ಏನೆಂದರೆ—) ೮೦. ಸ್ಥಿರವಾದ ಮನಸ್ಸುಳ್ಳ ಇಂದ್ರನಿಗೆ (ಯಾಗ ಮಾಡಿ) ಹವಿರ್ಭಾಗವನ್ನು ಕೊಡುವ, ಅಮೋಘ ವಾಕ್ಯನೂ ವಾಮದೇವರ ಶಿಷ್ಯನೂ ಆದ ವಿದ್ಯಾನಿಧಿಯೆಂಬವನು ದರ್ಭೆ ಸಮಿತ್ತುಗಳನ್ನು ತರಲು ಹೋಗುತ್ತಿರುವಾಗ ಮಗುವನ್ನೆತ್ತಿಕೊಂಡಿದ್ದ ಮುದುಕಿಯೊಬ್ಬಳನ್ನು ಕಂಡನು. ೮೧. 'ಎಲೆ ಮುದುಕಿ ! ಈ ಘೋರವಾದ ಕಾಡಿನಲ್ಲಿ ನೀನೊಬ್ಬಳೇ ಏಕೆ ಸಂಚರಿಸುತ್ತಿರುವೆ ? ನೀನಾರ ಕಡೆಯವಳು? ಕೈಯ್ಯಲ್ಲಿರುವ ಮಗುವು ಯಾವುದು ?' ಎಂದು ಪ್ರಶ್ನಿಸಲು ಆ ಮುದುಕಿಯು ತಳಮಳದಿಂದ ಉತ್ತರಿಸಿ

ವ॥ ಅದೆಂತೆಂದೊಡೆ

ಮ ಸ್ರ॥ ರಿಪುರಾಜವ್ರಾತ ನಾನಾಮಣಿಮಕುಟರುಚಿಭ್ರಾಜಿತಾಂಘ್ರಿದ್ವಯಂ ದಿ
ಗ್ದ್ವಿಪಸತ್ವಂ ಮೇರುಶೈಲೋಪಮಭುಜಶಿಖರಂ ಗೋತ್ರಭೃತ್ಸಾಮ್ಯ ಕಲ್ಯಾ
ಣಪರಂ ಸರ್ವಾವನೀ ಮಂಡಲಪತಿ ಸಮರಾರಂಭಕಾಮಾರಿ ಸತ್ಪು
ಷ್ಪಪುರೇಶಂ ರಾಜಹಂಸಂ ಮಗಧ ವಿಷಯಕಾಂತಾಮನೋಜೀವಿತೇಶಂ ೮೨

ಕಂ॥ ಆತಂಗೆಸೆವಂ ಸಚಿವಂ
ನೀತಿವಿದಂ ದೀರ್ಘದರ್ಶಿ ರತ್ನೋದ್ಭವನೆಂ
ಬಾತಂ ವ್ಯವಹಾರ ಪರ
ಪ್ರೀತಿಯಿನಂಬೋಧಿ ಪರಿಸರಕ್ಕೈತಂದಂ ೮೩

ವ॥ ಅಂತು ಸಮುದ್ರಮಧ್ಯದ ಸುವರ್ಣಮನೆಯ್ದಿ ರತ್ನದತ್ತನೆಂಬ ವ್ಯವಹಾರಿಯು ಸಖ್ಯಂ ಮಾಡಿರ್ಪುದುಮಾತಂ ರತ್ನೋದ್ಭವನ ಸೌಜನ್ಯಸನ್ಮಾರ್ಗಕ್ಕೆ ಸಂತಸಂಬಟ್ಟು ತನ್ನಮಗಳ್ ಹೇಮಪ್ರಭೆಯುಂ ಕರೆಸಿ

ಕಂ॥ ಶುಭದಿನಮುಹೂರ್ತದೊಳ್ ನಿಜ
ವಿಭವಂ ಕೈಗಣ್ಮೆ ಸಚಿವರತ್ನೋದ್ಭವನೆಂ
ಬಭಿನವ ಮೂರ್ತಿಗೆ ಹೇಮ
ಪ್ರಭೆಯುಂ ಗುಣಿ ರತ್ನದತ್ತನಿತ್ತನಲಂಪಿಂ ೮೪

ದಳು. ವ॥ ಅದು ಹೇಗೆಂದರೆ—೮೨. "ರಾಜಹಂಸನು ಮಗಧ ದೇಶದ ರಾಜ. ಅವನ ಚರಣಗಳು ಶತ್ರು ರಾಜರ ಕಿರೀಟಗಳ ರತ್ನಕಾಂತಿಯಿಂದ ಬೆಳಗುತ್ತವೆ. ಅವನು ದಿಗ್ಗಜಗಳ ಶಕ್ತಿಯುಳ್ಳವನು ಅವನ ಹೆಗಲು ಮೇರು ಪರ್ವತದಂತೆ ಉನ್ನತವು ಬಲವಾದುದೂ ಆಗಿದೆ. ಕೃಷ್ಣನಂತೆ ಲೋಕ ಕಲ್ಯಾಣಕಾರಕನು. ಭೂಮಂಡಲಕ್ಕೆಲ್ಲ ಒಡೆಯನು, ಯುದ್ಧದಲ್ಲಿ ಹರನು. ಸುಂದರ ಕುಸುಮಪುರದೊಡೆಯನು. ೮೩. ರತ್ನೋದ್ಭವನೆಂಬನೊಬ್ಬನು ಅವನ ಮಂತ್ರಿ. ಅವನು ನೀತಿಗಳನ್ನು ಬಲ್ಲವನು. ಮುಂದಾಲೋಚನೆಯುಳ್ಳವನು. ಆತನು ವ್ಯಾಪಾರಕ್ಕಾಗಿ ಸಮುದ್ರದ ಪ್ರದೇಶಕ್ಕೆ ಬಂದನು. ವ॥ ಸಮುದ್ರದ ಮಧ್ಯದಲ್ಲಿದ್ದ ಸುವರ್ಣದ್ವೀಪಕ್ಕೆ ಹೋಗಿ ರತ್ನದತ್ತನೆಂಬ ವ್ಯಾಪಾರಿಯ ಸ್ನೇಹವನ್ನು ಮಾಡಿದನು. ಅವನು ರತ್ನೋದ್ಭವನ ಸೌಜನ್ಯಕ್ಕೂ ಸನ್ಮಾರ್ಗಕ್ಕೂ ಸಂತೋಷಪಟ್ಟು ತನ್ನ ಮಗಳು ಹೇಮಪ್ರಭೆಯನ್ನು ಕರೆಸಿ, ೮೪. ಶುಭದಿನ ಶುಭಮುಹೂರ್ತದಲ್ಲಿ ತನ್ನ ವೈಭವವನ್ನೂ ಮೀರಿಸಿ ರತ್ನ ದತ್ತನು ಸಚಿವರತ್ನೋದ್ಭವನಿಗೆ ಹೇಮಪ್ರಭೆಯನ್ನು ಕೊಟ್ಟು ಮದುವೆ ಮಾಡಿದನು. ಹೀಗೆ ರತ್ನದತ್ತನು ತನ್ನ ಮಗಳನ್ನು ಕೊಡಲು ಅವನ ಮನೆಯಲ್ಲಿಯೇ ರತ್ನೋದ್ಭವನು ಕೆಲದಿನಗಳಿದ್ದನು. ಕ್ರಮೇಣ ಹೇಮ ಪ್ರಭೆಯು

ವ॥ ಅಂತು ರತ್ನದತ್ತಂ ತನ್ನ ಮಗಳಂ ಕುಡುವುದುಮಾತನಲ್ಲಿ ಕಿಱಿದುದಿನಮಿರ್ಪು ದುಂ ಹೇಮಪ್ರಭೆಯುಂತರ್ವತ್ನಿಯಾಗೆ ರತ್ನೋದ್ಭವಂ ರತ್ನದತ್ತಂಗಿಂತೆಂದಂ

ಕಂ॥ ಪಿರಿದುದಿನಮಾಯ್ತು ಬಂದೆ
ಮ್ಮರಸನ ಸಾರಣ್ಗೆ ಪೋಗವೇಳ್ವುದುವದಱಿಂ
ದಿರದೆನ್ನಂ ಕಳಿಪುವುದೆಂ
ದುರು ಮುದದಿಂ ಪೇೞ್ದನಲ್ತೆ ಮುನಿಕುಲತಿಲಕಾ ೮೫

ವ॥ ಅಂತು ಪೇೞ್ವುದುಂ ರತ್ನದತ್ತಂ ರತ್ನೋದ್ಭವಂಗೆ ರತ್ನಖಚಿತಾಭರಣ ದಿವ್ಯವಸ್ತ್ರ ಮಂ ಕೊಟ್ಟು ಹೇಮಪ್ರಭೆಯ ಗರ್ಭದರ್ಭಕಂಗೆನ್ನಂ ದಾದಿಯಾಗಿ ಕಳುಪಲಿಂತು ಮೂವರುಂ ಬಂದು ಬಹಿತ್ರಮನೇಱಿ ಬರುತಿರ್ಪನ್ನೆಗಂ ಸಮುದ್ರಮಧ್ಯದಲ್ಲಿ

ಕಂ॥ ಪಡಗೊಡೆಯೆ ಪಲಗೆಯೊಂದಂ
ಪಿಡಿದಬಲೆಯನೆನ್ನ ಕೌಂಕುಳಿೊಳ್ ತಳ್ಕಿಸಿಕೊಂ
ಡೆಡೆವಿಡದೆ ಪುಣ್ಯದಿಂದಂ
ತಡಿಗೆಯ್ದಿದೆನೆಯ್ದಿ ಕುಳ್ಳಿರಿರ್ಪಾಕ್ಷಣದೊಳ್ ೮೬

ವ॥ ಆ ಹೇಮಪ್ರಭೆಗರ್ಭಘಾತದಿಂ ಪ್ರಸವವೇದನೆ ಮಸಂಗಿ ಮಗನಂ ಪಡೆಯಲಾಕೆಯ ನೊಂದು ತಮಾಲಗುಲ್ಮದೊಳಿರಿಸಿಯಾ ಕೂಸಿನ ಮೈಯ್ಯಮಾಸಂ ತೊಳೆಯೆ ಬಿಸುನೀರ್ಗುಪಾಯ ಮಂ ನೆನೆಯಲಿಲ್ಲಿಗೆ ಬಂದೆನೆಂದಾವೃದ್ಧೆ ಪೇೞ್ವಸಮಯದೊಳ್

ಗರ್ಭಿಣಿಯಾಗಲು ರತ್ನೋದ್ಭವನು ರತ್ನದತ್ತನಿಗೆ ಹೀಗೆ ಹೇಳಿದನು. ೮೫. "ಇಲ್ಲಿಗೆ ಬಂದು ಬಹುದಿನಗಳಾದುವು. ಇನ್ನು ನಮ್ಮರಸನ ಹತ್ತಿರಕ್ಕೆ ಹೋಗಬೇಕು. ಕೂಡಲೆ ನನ್ನನ್ನು ಸಂತೋಷದಿಂದ ಕಳುಹಿಸಿಕೊಡು" ಎಂದು ಹೇಳಿದನು. ವ॥ ಹೇ ಮುನಿಕುಲ ತಿಲಕ, ಹಾಗೆಯೇ ರತ್ನದತ್ತನು ರತ್ನೋದ್ಭವನಿಗೆ ರತ್ನ ಖಚಿತವಾದ ಆಭರಣಗಳನ್ನೂ ದಿವ್ಯವಸ್ತ್ರಗಳನ್ನೂ ಕೊಟ್ಟು, ನನ್ನನ್ನು ಹೇಮ ಪ್ರಭೆಯ ಗರ್ಭದ ಬಾಲಕನಿಗೆ ದಾದಿಯ ನ್ನಾಗಿ ನಿಯಮಿಸಿ ಕಳುಹಿಸಿದನು. ನಾವು ಮೂವರೂ ಹಡಗನ್ನೇರಿ ಸಮುದ್ರದ ನಡುವೆ ಬರುತ್ತಿರುವಾಗ ೮೬. ಹಡಗು ಮುರಿಯಿತು. ಅಗ ಒಂದು ಹಲಗೆಯನ್ನು ಹಿಡಿದು ಕೊಂಡು ಅಬಲೆಯಾದ ಹೇಮ ಪ್ರಭೆಯನ್ನು ನನ್ನ ಕೌಂಕುಳಿನಲ್ಲಿ ಹಿಡಿದುಕೊಂಡು ಪೂರ್ವಜನ್ಮದ ಪುಣ್ಯದಿಂದ ಹೇಗೋ ದಡವನ್ನು ಸೇರಿದೆನು. ಹಾಗೆ ದಡದಲ್ಲಿ ಕುಳಿತಿರು ವಾಗ. ವ॥ ಆ ಹೇಮಪ್ರಭೆಯು ಗರ್ಭಘಾತದಿಂದ ಹೆರಿಗೆಯ ನೋವು ಹೆಚ್ಚಿ ಒಂದು ಮಗುವನ್ನು ಹಡೆದಳು. ಆಗ ಅವಳನ್ನು ಒಂದು ಹೊಂಗೆಯ ಮರಗಳ ಪೊದರಿನಲ್ಲಿ ಮಲಗಿಸಿ ಆ ಮಗುವಿನ ಶರೀರದ ಕೊಳೆಯನ್ನು ತೊಳೆಯುವುದಕ್ಕಾಗಿ ಬಿಸಿ ನೀರಿಗೆ ಉಪಾಯ ಮಾಡಬೇಕೆಂದು ಇಲ್ಲಿಗೆ ಬಂದೆನು" ಎಂದು ಆ ಮುದುಕಿಯು ಹೇಳಿದಳು.

ಕಂ॥ ಕಟತಟದೊಳೊಸರ್ವಮದದಿಂ
ವಿಟಪಿಗಳಂ ಕಿೞ್ತುಬಿಸುಡುತುಂ ತನ್ಮದದು
ತ್ಕಟದಿಂದೊಂದಿಭಮೆಯ್ತರ
ಲಟವಿಯೊಳಾ ಶಿಶುವನುೞಿದು ಪೋದಳ್ ಭಯದಿಂ ೮೭

ವ॥ ಅಂತಾವೃದ್ಧೆ ಹೇಮಪ್ರಭೆಯಿರ್ದಲ್ಲಿಗೆ ಪೋಗಿಯಲ್ಲಿಂದಾಕೆಸಹಿತಂ ಬೆದಱಿ ತೋಡಿಪೋದಳ್ ಇತ್ತಲಾನೆ ಅರ್ಭಕನಂ ಪಿಡಿದಡಸುವೆನೆಂದಮಾನುನಿಸುವಾಗಲ್

ಕಂ॥ ವಾರಣಮನೊಂದುರಿಪು ಕಂ
ಠೀರವನಾರ್ದೆೞ್ದು ಪೊಯ್ದು ಕುಂಭಸ್ಥಳಮಂ
ಕೂರುಗುರ್ಗಳಿಂದಮುಂಕಿ ವಿ
ದಾರಿಸಲಾ ಶಿಶುವನುೞಿದು ಬಿೞ್ದತ್ತುಗಜಂ ೮೮

ವ॥ ಅಂತಾಗಜಂ ಬೀೞುತುಂ ಪಿಡಿದಿರ್ದ ಪೋತಕನಂ ಭೀತಿಯಿಂ ಮೇಗಣ್ಗೆ ಈಡಾಡಲಾ ಶಿಶುವೊಂದು ಮರದ ಕವಲ್ಗೊಂಬಿನೊಳ್ ಸಿಲ್ಕಲಲ್ಲಿ

ಕಂ॥ ಪುರ್ಬಿಕ್ಕಿ ಪಲ್ಗಳಂ ಕಿಱಿ
ದಿರ್ಬದಿಯುಂ ತುಱಿಸಿ ಕಣ್ಣನರೆಮುಚ್ಚಿ ಬಿಸಿಲ್
ಪರ್ಬಿರೆ ಕಾಯುತ್ತಿರ್ದುದು
ಕೊಬ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ ೮೯

ಆ ಸಮಯದಲ್ಲಿ, ೮೭. ದವಡೆಗಳಿಂದ ಮದದ ನೀರು ಸುರಿಯುತ್ತಿದ್ದ ಮದಿಸಿದ ಆನೆಯೊಂದು ಮರಗಳನ್ನು ಕೀಳುತ್ತಾ ರಭಸದಿಂದ ನುಗ್ಗಿತು. ಅದಕ್ಕೆ ಹೆದರಿ ಆ ಮುದುಕಿಯು ಕಾಡಿನಲ್ಲಿಯೇ ಮಗುವನ್ನು ತೊರೆದು ಓಡಿಹೋದಳು. ತರುವಾಯ ಆ ಮುದುಕಿಯು ಹೇಮಪ್ರಭೆಯ ಬಳಿ ಹೋಗಿ ಅವಳನ್ನೂ ಕರೆದುಕೊಂಡು ಹೆದರಿ ಓಡಿದಳು. ಇತ್ತ ಆನೆಯು ಮಗುವನ್ನು ಹಿಡಿದು, ತುಳಿಯಲು ಹಿಂದು ಮುಂದು ನೋಡುತ್ತಿದ್ದಾಗ. ೮೮. ಒಂದು ಸಿಂಹವು ಅಬ್ಬರಿಸುತ್ತಾಬಂದು ಆನೆಯ ತಲೆಯನ್ನು ತನ್ನ ಹರಿತವಾದ ಉಗುರುಗಳಿಂದ ಬಗೆದು ಸೀಳಿತು. ಆನೆಯು ಸತ್ತು ಮಗುವು ಉಳಿಯಿತು. ಆಗ ಆ ಆನೆಯು ಬೀಳುವಾಗ ಹಿಡಿದಿದ್ದ ಮಗುವನ್ನು ಬೆದರಿ ಮೇಲಕ್ಕೆ ಎಸೆಯಿತು. ಆ ಮಗುವು ಒಂದು ಮರದ ಕವಲುಗೊಂಬಿನಲ್ಲಿ ಸಿಕ್ಕಿಕೊಂಡಿತು. ೮೯. ಆ ಮರದ ಮೇಲೆ ಒಂದು ಕೊಬ್ಬಿದ ದೊಡ್ಡ ಕಪಿಯಿದ್ದಿತಂ. ಅದು ಹುಬ್ಬು ಕುಣಿಸುತ್ತಾ ಹಲ್ಲು ಗಿರಿಯುತ್ತಾ ಎರಡು ಪಕ್ಕೆಗಳನ್ನೂ ತುರಿಸಿಕೊಳ್ಳುತ್ತಾ ಕಂಗಳನ್ನರ್ಧ ಮುಚ್ಚಿಕೊಂಡು ಬಿಸಿಲು ಕಾಯು

ವ॥ ಅಂತಾಕೋಡಗಂ ಪಣ್ಣೆಂದೆತ್ತುತಂತಾಶಿಶುವಂ ತೆಗೆದು ವಾಸಿಸಿನೋಡಿ ಪಣ್ಣಲ್ಲದುದನಱಿದಲ್ಲಿಯೇ ಇರಿಸಿ ಕಾಪೇಯ ಗತಿಯಿಂದತ್ತಲ್ ಪೋದುದು ಇತ್ತಲ್ ಮುನಿಶಿಷ್ಯಂ ನಿಂದಿವೆಲ್ಲವುಮನಲ್ಲಿಯೆ ಗುಲ್ಮದ ಮಱೆಯೊಳ್ ನೋಡುತಿರ್ದು ಸಿಂಹಂ ಪೋದುದನಱಿತು ಮರದ ಮೇಲಣ ಶಿಶುವಂ ತೆಗೆದು ವಾಮದೇವರ ಸಮೀಪಕ್ಕೆ ತರಲವರಿದೆಲ್ಲಿಯ ಶಿಶುವೆಂಬುದುಂ ತತ್ಪ್ರಪಂಚಮಂ ಪೇೞಲಾಮುನಿಯೀ ಬಾಲಕನಂ ನೀಂ ನಮ್ಮರಸಂಗೆ ಕೊಟ್ಟುಬಾಯೆಂಬುದುಮಾತಂ ಪೂರ್ವ ವಿಶೇಷಮಂ ಪೇೞ್ದರಸಂಗೆ ಕುಮಾರನಂ ಕೊಟ್ಟೊಡಾತಂ ಪ್ರೀತಿವಟ್ಟು ಪುಷ್ಪೋದ್ಭವನೆಂದು ಪೆಸರನಿಟ್ಟು ವಸುಮತೀದೇವಿಯ ಕೈಯ್ಯೊಳ್ ಕುಡೆ

ಕಂ॥ ಭೂದೇವತೆ ಷಡೃತುಗಳ
ನಾದರದಿಂ ಸಲಪುವಂತೆ ವಸುಮತಿ ಚಿತ್ತಾ
ಮೋದದಿನಱಿವರ್ ಕುವರರ
ನೋದಿಸುತಂ ಸಲಪುತಿರ್ದಳತಿಕೌತುಕದಿಂ ೬೦

ವ॥ ಅಂತಿರ್ದ ವಸುಮತೀದೇವಿಯೊಂದು ದಿವಸಂ

ಚಂ॥ ಸರಸಿಜಲೋಚನಂ ಶಶಿಮುಖಂ ಹರಿಮಧ್ಯನಿಭೇಂದ್ರಯಾನ ಮು
ದ್ದುರ ಕುಚಕೋಕಮಾತ್ರ ತಿಮಿರದ್ಯುತಿ ವೇಣಿಮದಾಳಿ ಕುಂತಳಂ
ಸುರುಚಿರ ಚಂಪಕಾಭತನುವೊಂದಿದೆಯೊಳ್ ನೆಲಸಿರ್ಪುದಿಂತಿದ
ಚ್ಚರಿಯೆನಲೆಯ್ದಿದಳ್ ವಸುಮತೀವಧು ಕಾಂತ ಸಭಾಂತರಾಳಮಂ ೬೧

ಸುತ್ತಿತ್ತು. ವ॥ ಆ ಕೋತಿಯು ಹಣ್ಣೆಂದು ಆ ಮಗುವನ್ನು ಎತ್ತಿಕೊಂಡು ಮೂಸಿ ನೋಡಿ ಹಣ್ಣಲ್ಲವೆಂದು ತಿಳಿದು ಅದನ್ನಲ್ಲಿಯೇ ಇರಿಸಿ ಕಪಿಗೆ ಸಹಜವಾದ ಚಾಂಚಲ್ಯದಿಂದ ಹೊರಟು ಹೋಯಿತು. ಇದೆಲ್ಲವನ್ನೂ ಪೊದರಿನ ಹಿಂದೆನಿಂತು ನೋಡುತ್ತಿದ್ದ ಮುನಿಶಿಷ್ಯನು ಸಿಂಹವು ಹೋದ ಮೇಲೆ ಮರದ ಮೇಲಿದ್ದ ಮಗುವನ್ನೆತ್ತಿಕೊಂಡು ವಾಮದೇವರ ಹತ್ತಿರಕ್ಕೆ ತಂದನು. ಅವರು ಇದೆಲ್ಲಿಯ ಶಿಶುವೆಂದು ಕೇಳಿದರು. ಅವನು ಅದರ ವೃತ್ತಾಂತವನ್ನೆಲ್ಲ ವಿವರಿಸಿದನು. ಆ ಮುನಿಯು 'ಈ ಮಗುವನ್ನು ನಮ್ಮ ರಾಜನಿಗೆ ಕೊಟ್ಟುಬಾ' ಎಂದು ಅವನಿಗೆ ಹೇಳಿದನು. ಅವನು ಆ ಮಗುವನ್ನು ತೆಗೆದುಕೊಂಡು ಹೋಗಿ ಇದರ ಪೂರ್ವಕಥೆಯನ್ನೆಲ್ಲ ಹೇಳಿ ಅರಸನಿಗೆ ಕೊಟ್ಟನು. ಅರಸನು ಪ್ರೀತಿಯಿಂದ ಆ ಮಗುವಿಗೆ ಪುಷ್ಪೋದ್ಭವನೆಂದು ಹೆಸರಿಟ್ಟು ವಸುಮತೀದೇವಿಯ ಕೈಗೆ ಕೊಟ್ಟನು. ೬೦. ಭೂದೇವತೆಯು ಆರು ಋತುಗಳನ್ನು ಆದರದಿಂದ ಸಲಹುವಂತೆ ವಸುಮತಿಯು ಸಂತೋಷದಿಂದ ಆರುಜನ ಕುಮಾರರನ್ನು ಕೌತುಕದಿಂದ ಸಲಹಿ ಓದಿಸಿದಳು. ವ॥ ಹಾಗಿದ್ದ ವಸುಮತೀದೇವಿಯು ಒಂದು ದಿವಸ. ೬೧. ತನ್ನ ಪತಿಯ ಸಭಾಮಂದಿರವನ್ನು ಪ್ರವೇಶಿಸಿದಳು; ಅವಳ ಕಂಗಳು ತಾವರೆಯಂತಿದ್ದುವು. ಮುಖ ಚಂದ್ರನ ಹಾಗಿದ್ದಿತು. ಸೊಂಟವು ಸಿಂಹದ ನಡುವಿನಂತಿದ್ದಿತು. ಅವಳ ನಡಿಗೆಯು ಮದ್ದಾನೆಯ ನಡಿಗೆಯಂತಿತ್ತು. ಎತ್ತರವಾದ ಸ್ತನಗಳು ಚಕ್ರವಾಕ ಪಕ್ಷಿಗಳ ಜೋಡಿಯಂತೆ ಕಂಗೊಳಿಸು

ವ॥ ಅದಲ್ಲದೆಯುಂ

ನಳನಳಿಪ ಕಲ್ಪಲತೆ ಸ
ತ್ಫಳಮಂ ತಳೆದಿರ್ಪತೆಱದಿನೊಪ್ಪುವ ನವ ಕೋ
ಮಳಬಾಳಕನೊರ್ಬನನತಿ
ವಿಳಾಸದಿಂದೆತ್ತಿಕೊಂಡು ನಗುತೆಯ್ತಂದಳ್ ೯೨

ವ॥ ಅಂತಾಕಾಂತೆ ಬಂದು ಕಾಂತನಂಕಮನಲಂಕರಿಸಿರ್ಪುದುಮರಸನೀ ಪೊಸಕುಮಾರಕನೆತ್ತಣವನೆಂದು ಬೆಸಗೊಳ್ವುದುಂ

ಕಂ॥ ನಸುನಗೆ ಮಿಸುಂಗೆ ಮೊಗದೊಳ್
ಪಸರಿಸೆ ನಿಜದಂತಕಾಂತಿ ನೃಪವರ ಸಭೆಯೊಳ್
ವಸುಧಾಧಿಪಂಗೆ ನಲವಿಂ
ದುಸಿರ್ದಳ್ ವಸುಮತಿಕುಮಾರ ಲಾಭದ ಹದನಂ ೯೩

ವ॥ ಅದೆಂತೆನೆ

ಕಂ॥ ತರಳತರತಾರಹಾರದ
ಕಿರಣಂ ಧವಳಿಸಿ ದಿಗಂತಮಂ ಯೌವನ ನಿ
ರ್ಭರದೆಸೆವ ಕಾಂತೆಯೆನಗಿಂ
ದಿರುಳೊಲವಿಂ ಕನಸಿನಿಂದೆ ತೋಱಿದಳೊರ್ವಳ್ ೯೪

ವ॥ ಅದಲ್ಲದೆಯುಂ ಪಾರಿಜಾತಪ್ರಸೂನಾವತಂಸೆಯುಂ ಪಳಿಕುವೆಸೆದ ಪಾದುಕೆಯುಂ ನಿಸ್ತುಲಸ್ಥೂಲಮುಕ್ತಾಹಾರೆಯುಂ ಕುಂಡಲಮಂಡಿತ ಗಂಡಸ್ಥಳೆಯುಂ ಚಾರುಚಂದನಚರ್ಚಿ

ತ್ತಿದ್ದುವು, ಜಡೆಯು ಕತ್ತಲೆಯ ಸಮೂಹದಂತಿತ್ತು. ತಲೆಗೂದಲು ಮದಿಸಿದ ದುಂಬಿಗಳಂತೆ ಶೋಭಿಸಿತು. ಶರೀರವು ಸುಂದರವಾದ ಸಂಪಗೆ ಹೂವಿನ ಕಾಂತಿಯಿಂದ ಹೊಳೆಯುತ್ತಿತ್ತು. ಇವೆಲ್ಲವೂ ಒಂದೇ ಎಡೆಯಲ್ಲಿ ಆಶ್ಚರ್ಯಕರವಾಗಿ ನೆಲೆಸಿದಂತಿದ್ದ ವಸುಮತಿಯು ಬಂದಳು, ವ।। ಅದೂ ಅಲ್ಲದೆ ೯೨. ನಳನಳಸಿ ಬೆಳೆದ ಕಲ್ಪವೃಕ್ಷವು ಸತ್ಫಲವನ್ನು ಪಡೆದಂತೆ ಪ್ರಕಾಶಿಸುವ ಸುಂದರವಾದ ಎಳಗೂಸೊಂದನ್ನು ಎತ್ತಿಕೊಂಡು ನಗುತ್ತಾ ವಿಲಾಸದಿಂದ ಅವಳು ಬಂದಳು. ಹಾಗೆ ಆ ಕಾಂತೆಯು ಬಂದು ಕಾಂತನ ತೊಡೆಯನ್ನಲಂಕರಿಸಿಲು ಅರಸನು 'ಈ ಹೊಸ ಮಗು ಎಲ್ಲಿಯದು ?' ಎಂದು ಪ್ರಶ್ನಿಸಿದನು. ೯೩. ರಾಜಸಭೆಯಲ್ಲಿ ರಾಜನಿಗೆ ವಸುಮತಿಯು ಕುಮಾರನು ಸಿಕ್ಕಿದ ವೃತ್ತಾಂತವನ್ನು ಹೇಳಿದಳು. ಆಗ ಅವಳ ಮುಖದಲ್ಲಿ ಮುಗುಳ್ನಗೆಯು ಹರಡಿತ್ತು. ಅವಳ ಹಲ್ಲುಗಳ ಕಾಂತಿಯು ಸುತ್ತಹರಡಿತು. ವ॥ ಅದು ಹೇಗೆಂದರೆ, ೯೪. ಹೊಳೆಯುವ ಮುತ್ತಿನ ಹಾರದ ಕಿರಣಗಳು ದಿಗಂತವನ್ನು ಬೆಳಗಲು ನವಯೌವನದಿಂದ ಮನೋಹರಳಾದ ಕಾಂತೆಯೊಬ್ಬಳು ಇಂದು ರಾತ್ರಿ ಕನಸಿನಲ್ಲಿ ಕಾಣಿಸಿಕೊಂಡಳು. ವ।। ಅದಲ್ಲದೆ ಅವಳು ಪಾರಿಜಾತದ ಹೂವನ್ನು ತಲೆಗೆ ಮುಡಿದಿದ್ದಳು. ಸ್ಫಟಿಕಗಳಿಂದ ಹೊಳೆಯುವ ಪಾದುಕೆಗಳನ್ನು

ತೆಯುಂ ನವ್ಯದಿವ್ಯ ಶರೀರೆಯುಮೆನಿಪ ವನಿತೆ ಕನಸಿನೊಳ್ ಬರಲಾನದಂ ನನಸೆಂದು ಬಗೆದು ನೀನಾವಳಿಲ್ಲಿಗೇಕಾರಣಂ ಬಂದೆಯೆಂದೊಡೆ

ಕಂ॥ ದೇವಿಯರೇ ಚಿತ್ತವಿಸಿಂ
ಭಾವಿಸೆ ಗಂಧರ್ವಲೋಕಸಂಭವೆಯಾಂ ರ
ತ್ನಾವಳಿಯೆಂದೆನ್ನ ಪೆಸರ್
ಭಾವಿಸಲಾಂ ಬಂದ ಕಾರ್ಯಮಂ ಬಿನ್ನವಿಪೆಂ ೯೫

ವ॥ ಎಂದಿಂತೆಂದಳ್

ಕಂ॥ ನಿನ್ನಧಿನಾಥನ ಸಚಿವಂ
ಸನ್ನುತಮತಿ ಕಾಮಪಾಲನೆಂಬಾತಂ ಕೇ
ಳೆನ್ನಯ ಕಯ್ಯೊಳ್ ಕೊಟ್ಟಂ
ಚೆನ್ನೆಸೆವೀಸುತನನೆಂದು ತೋಱಿದಳಿವನಂ ೯೬

ವ॥ ಅಂತು ತೋಱಿ ಮತ್ತಮಿಂತೆಂದಳ್

ಕಂ॥ ಆ ಕಾಮಪಾಲನೆಮ್ಮೊಡ
ನೀ ಕುವರನನುಯ್ದು ರಾಜಹಂಸನ ನಿಜ ಕಾಂ
ತಾ ಕರದೊಳೀವುದೆಂದಂ
ಸಾಕಿವನಂ ದೇವಿ ಕೊಳ್ಳೆನುತ್ತುಂ ಕೊಟ್ಟಳ್ ೯೭

ಧರಿಸಿದ್ದಳು. ಬಳ್ಳಿಯ ಜಾತಿಯಂ ದಪ್ಪ ಮುತ್ತುಗಳ ಹಾರವನ್ನು ಹಾಕಿಕೊಂಡಿದ್ದಳು. ಓಲೆಗಳು ಕೆನ್ನೆಗೆ ಅಲಂಕಾರವಾಗಿದ್ದವು. ಸೊಗಸಾದ ಗಂಧವನ್ನು ಹಚ್ಚಿಕೊಂಡಿದ್ದಳು. ನೂತನವಾದ ದಿವ್ಯ ಶರೀರವನ್ನು ತಳೆದಿದ್ದಳು. ಇಂಥ ಕಾಂತೆಯು ಕನಸಿನಲ್ಲಿ ಬರಲು ಅದನ್ನು ನನಸೆಂದೇ ತಿಳಿದು 'ನೀನಾರು ? ಇಲ್ಲಿಗೆ ಬಂದ ಕಾರಣವೇನು ?' ಎಂದು ಅವಳನ್ನು ಪ್ರಶ್ನಿಸಿದೆನು. ೯೫. 'ದೇವಿಯರೇ ! ಕೇಳಿರಿ. ನಾನು ಗಂಧರ್ವ ಲೋಕದಲ್ಲಿ ಹುಟ್ಟಿದವಳು. ನನ್ನ ಹೆಸರು ರತ್ನಾವಳಿ, ನಾನು ಬಂದ ಕೆಲಸವನ್ನು ಹೇಳುವೆನು' ಎಂದು ಅವಳು ಉತ್ತರಿಸಿದಳು. ವ॥ ಎಂದು ಹೇಳಿ ಹೀಗೆ ಹೇಳಿದಳು. ೯೬. 'ಕೇಳು' ನಿನ್ನ ಪತಿಯ ಮಂತ್ರಿಯೂ ಬುದ್ಧಿಶಾಲಿಯೂ ಆದ ಕಾಮಪಾಲನು ಈ ಸುಂದರವಾದ ಶಿಶುವನ್ನು ನನ್ನ ಕೈಯಲ್ಲಿ ಕೊಟ್ಟಿದ್ದಾನೆ' ಎಂದು ಹೇಳಿ ಇವನನ್ನು ತೋರಿಸಿದಳು. ವ॥ ಹಾಗೆ ತೋರಿಸಿ ಹೇಳಿದಳು. ೯೭. ಆ ಕಾಮಪಾಲನು 'ಈ ಶಿಶುವನ್ನು ತೆಗೆದುಕೊಂಡು ಹೋಗಿ ರಾಜಹಂಸನ ಹೆಂಡತಿಯ ಕೈಯ್ಯಲ್ಲಿ ಕೊಡುವುದು' ಎಂದು ನಮ್ಮೊಡನೆ ಹೇಳಿದನು. 'ದೇವಿ ಈ ಮಗುವನ್ನು ತೆಗೆದುಕೋ. ಇವನನ್ನು ಸಾಕು

ವ॥ ಅಂತು ಕುಮಾರನನೆನ್ನ ಮಗ್ಗುಲೊಳಿರಿಸಿ ಪೋದಳ್ ಅನ್ನೆಗಂ

ಕಂ॥ ಆರೊಡನೆ ಮಾತನಾಡಿದೆ
ನಾರಿಲ್ಲಿಗೆ ಬಂದರೆಂದು ನಿದ್ರೆಯಿಂನೆಟ್ಟ
ತ್ತಾರಂ ಕಾಣದೆ ಮಗ್ಗುಲೊ
ಳೋರಂತೆಸೆದಿರ್ದ ನವ್ಯಸುತನಂ ಕಂಡೆಂ ೯೮

ವ॥ ಎಂದರಸಂಗರಸಿ ಪೇಟ್ವುದುಮರಸಂ ಸಂತುಷ್ಟನಾಗಿ ಕಾಮಪಾಲನೇನಾದನೋ ಎಂದು ಚಿಂತಿಸಿ ಕುಮಾರಂಗರ್ಥಪಾಲನೆಂದು ಪೆಸರಿಟ್ಟು ಸಪ್ತಸ್ವರಗಳಂ ಪರಿಪಾಲಿಸುವ ಭರತ ಜ್ಞನಂತೆ ಧರಣೀಶಂ ಪರಿತೋಷದಿಂದಿರಲ್ ಕಿಱಿದು ದಿನದಿಂ ಮೇಲೆ

ಕಂ॥ ಮತ್ತೊಂದು ದಿನಂ ಮುನಿ ಶಿ
ಷ್ಯೋತ್ತಮನರ್ಚನೆಗೆ ಪತ್ರಪುಷ್ಪಮನುಯ್ಯಲ್
ವೊತ್ತಿದರಣ್ಯಕ್ಕೆಯ್ತಂ
ದೆತ್ತಿಸಿಕೊಂಡಿರ್ದದೊಂದು ಶಿಶುವಂ ಕಂಡಂ ೯೯

ವ॥ ಅಂತೊರ್ಬಳೆತ್ತಿಕೊಂಡಿರ್ದ ಶಿಶುವಂ ವಾಮದೇವರ ಶಿಷ್ಯಂ ಕಂಡು

ಕಂ॥ ಎಲ್ಲಿಯವನೀಕುಮಾರಕ
ನೆಲ್ಲಿಯವಳ್ ನೀನರಣ್ಯ ಮಧ್ಯದೊಳಿರ್ಪೇ
ಕೆಲ್ಲಿಗೆ ಪೋದಪೆಯೆಂದು ಮ
ಹೋಲ್ಲಾಸದೊಳೆನಗೆ ಪೇಟ್ವುದೆಂದನಲಂಪಿಂ ೧೦೦

ಎಂದು ಹೇಳಿ, ವ।। ಕುಮಾರನನ್ನು ನನ್ನ ಮಗ್ಗುಲಲ್ಲಿ ಇರಿಸಿ ಹೋದಳು. ಆಗ, ೯೮. 'ಯಾರೊಡನೆ ನಾನು ಮಾತನಾಡಿದೆನು ? ಇಲ್ಲಿಗೆ ಬಂದಿದ್ದವರಾರು ?' ಎಂದು ಯೋಚಿಸುತ್ತಾ ನಿದ್ರೆಯಿಂದ ಎಚ್ಚೆತ್ತೆನು. ಆಗ ಯಾರೂ ಕಾಣಿಸಲಿಲ್ಲ. ಮಗ್ಗುಲಲ್ಲಿ ಪ್ರಕಾಶಿಸುತ್ತಿದ್ದ ಈ ನೂತನ ಶಿಶುವನ್ನು ಮಾತ್ರ ಕಂಡೆನು." ವ।। ಎಂದು ಅರಸಿಯು ಅರಸನಿಗೆ ಹೇಳಿದಳು. ಇದನ್ನು ಕೇಳಿ ಅರಸನು ಸಂತುಷ್ಟನಾದನು. ಕಾಮಪಾಲನು ಏನಾದನೋ ಎಂದು ಚಿಂತಿಸುತ್ತಾ ಕುಮಾರನಿಗೆ ಅರ್ಥಪಾಲನೆಂದು ಹೆಸರಿಟ್ಟು ಸಪ್ತ ಸ್ವರಗಳನ್ನೂ ಪರಿಪಾಲಿಸುವ ನಾಟ್ಯಶಾಸ್ತ್ರವನ್ನು ಬಲ್ಲವನಂತೆ ರಾಜನು (ಏಳು ಮಂದಿ ಕುಮಾರರನ್ನೂ ಪಾಲಿಸುತ್ತ) ಸಂತೋಷದಿಂದಿದ್ದನು. ಕೆಲವು ದಿನಗಳಾದ ಮೇಲೆ. ೯೯. ಮತ್ತೊಂದು ದಿನ ವಾಮದೇವ ಮುನಿಯ ಶಿಷ್ಯನು ಪೂಜೆಗಾಗಿ ಪತ್ರಪುಷ್ಪಗಳನ್ನು ತೆಗೆದುಕೊಂಡು ಹೋಗಲು ದಟ್ಟವಾದ ಕಾಡಿಗೆ ಹೋದನು. ಅಲ್ಲಿ ಒಬ್ಬಳು ಎತ್ತಿ ಕೊಂಡಿದ್ದ ಒಂದು ಶಿಶುವನ್ನು ಕಂಡನು. ವ।। ಆ ಮಗುವನ್ನು ವಾಮದೇವರ ಶಿಷ್ಯನು ಕಂಡು. ೧೦೦. 'ಈ ಕುಮಾರನು ಎಲ್ಲಿಯವನು ? ನೀನು ಎಲ್ಲಿಯವಳು ? ಈ ಕಾಡಿನ ಮಧ್ಯದಲ್ಲಿ ಏಕೆ ಇರುವೆ ? ನೀನು ಎಲ್ಲಿಗೆ ಹೋಗುವಿ ? ಎಂದು ಸಂತೋಷದಿಂದ ನನಗೆ

ವ॥ ಅಂತು ಕೇಳ್ವುದುಮವಳಿಂತೆಂದಳ್

ಕಂ॥ ಮಗಧಧರಣೀಶ್ವರಂಗಾ
ಪಗಮಾದಂ ಪ್ರೇಮದತ್ತನೆನಿಸುವ ಸಚಿವಂ
ಜಗಮಱಿಯೆ ತೀರ್ಥಯಾತ್ರೆಯ
ಬಗೆಯಿಂದೊಂದಗ್ರಹಾರಮಂ ಸಾರ್ದಿರ್ದಂ ೧೦೧

ವ॥ ಅಂತಾ ಪ್ರೇಮದತ್ತಂ ತೀರ್ಥಯಾತ್ರೆಗೆ ಪೋಗುತ್ತುಂ ಧರ್ಮಪುರಮೆಂಬ ಅಗ್ರಹಾರಮಂ ಸಾರ್ದು ಯಜ್ಞಶರ್ಮನೆಂಬ ದ್ವಿಜೋತ್ತಮನ ಸಖ್ಯಂ ಮಾಡಿಕೊಳಲಾತಂ ಕೆಲವು ದಿವಸದಿಂ ಮೇಲೆ ತನ್ನ ಮಗಳ್ ಕಾಳಿಯೆಂಬಳಂ ಕುಡಲವಳ್ಗೆ ಪುತ್ರೋತ್ಪತ್ತಿಯಿಲ್ಲದಿರಲವಳಿಂ ಕಿಱಿಯಳಪ್ಪ ಕಾಳಿಂದಿಯುಂ ಮಗುಳ್ದು ಪ್ರೇಮದತ್ತಂಗೆ ವಿವಾಹಂ ಮಾಡಲವಳ್ಗೆ ಸುಕೃತ ಫಲದಿಂ ಸುತನಪ್ಪುದುಂ ಬೞಿಕ್ಕೆ ಪ್ರೇಮದತ್ತಂ ಯಜ್ಞಶರ್ಮನಿಂ ಕಳುಹಿಸಿಕೊಂಡು ಪೂರ್ವಸಂಕಲ್ಪಿತಮಪ್ಪ ತೀರ್ಥಕ್ಕೆ ಕಾಳಿ ಕಾಳಿಂದಿನಿ ತತ್ಕುಮಾರನಾಂತಂಗೆ ದಾದಿಯಪ್ಪ ನಾನಿಂತೆಲ್ಲರುಂ ಸರಯೂನದಿಗೆ ಪೋಗಿ ಸ್ನಾನಕ್ಕನುಗೈವ ಸಮಯದೊಳ್

ಕಂ॥ ತನಗೆ ತನೂಭವರಿಲ್ಲೆಂ
ಬನುಶಯದಿಂ ಮಗನನೆತ್ತಿಕೊಂಡಿರ್ದೆನ್ನಂ
ಮುನಿದು ನದಿಯೊಳಗೆ ನೂಂಕಿದ
ಳನವರತಂ ಪರರ ಲೇಸನಾಂತಪರೊಳರೇ ೧೦೨

ಹೇಳು' ಎಂದು ಪ್ರೀತಿಯಿಂದ ಅವಳನ್ನು ಪ್ರಶ್ನಿಸಿದನು. ವ।। ಹಾಗೆ ಪ್ರಶ್ನಿಸಲು ಅವಳು ಹೀಗೆ ಉತ್ತರ ಕೊಟ್ಟಳು. ೧೦೧. ಮಗಧ ದೇಶದ ಮಹಾರಾಜನಿಗೆ ಜಗತ್ಪ್ರಸಿದ್ಧನಾದ ಪ್ರೇಮದತ್ತನೆಂಬ ಸಚಿವನೊಬ್ಬನಿದ್ದಾನೆ. ಅವನು ತೀರ್ಥಯಾತ್ರೆಮಾಡುತ್ತಾ ಒಂದು ಅಗ್ರಹಾರಕ್ಕೆ ಹೋದನು. ವ।। ಹಾಗೆ ಪ್ರೇಮದತ್ತನು ತೀರ್ಥಯಾತ್ರೆಗೆ ಹೋಗುತ್ತಾ ಧರ್ಮಪುರವೆಂಬ ಅಗ್ರಹಾರವನ್ನು ತಲಪಿದನು. ಅಲ್ಲಿ ಯಜ್ಞಶರ್ಮನೆಂಬ ಬ್ರಾಹ್ಮಣಶ್ರೇಷ್ಠನ ಸ್ನೇಹವನ್ನು ಮಾಡಿಕೊಂಡನು. ಅವನು ಕೆಲವು ದಿವಸಗಳ ಮೇಲೆ ತನ್ನ ಮಗಳು ಕಾಳಿಯೆಂಬವಳನ್ನು ಕೊಟ್ಟು ಇವನಿಗೆ ಮದುವೆ ಮಾಡಿದನು. ಅವಳಿಗೆ ಮಕ್ಕಳಾಗಲಿಲ್ಲ. ಆಗ ಕಾಳಿಯತಂಗಿ ಕಾಳಿಂದಿಯನ್ನೂ, ಮತ್ತೆ ಪ್ರೇಮದತ್ತನಿಗೆ ಕೊಟ್ಟು ಮದುವೆ ಮಾಡಿದನು. ಅವಳಿಗೆ ಪುಣ್ಯಫಲದಿಂದ ಮಗನಾದನು. ಬಳಿಕ ಪ್ರೇಮದತ್ತನು ಯಜ್ಞಶರ್ಮನ ಅನುಮತಿಯಿಂದ ಮೊದಲೇ ನಿಶ್ಚಿತವಾಗಿದ್ದ ತೀರ್ಥಸ್ನಾನಕ್ಕೆ ಕಾಳಿ, ಕಾಳಿಂದಿ, ಈ ಮಗುವಿನ ದಾದಿಯಾದ ನಾನು ಈ ಎಲ್ಲರೊಡನೆ ಹೋದನು. ಎಲ್ಲರೂ ಸರಯೂನದಿಯಲ್ಲಿ ಸ್ನಾನಕ್ಕೆ ಸಿದ್ಧರಾಗುತ್ತಿದ್ದ ಸಮಯದಲ್ಲಿ ೧೦೨. ತನಗೆ ಮಕ್ಕಳಿಲ್ಲವೆಂಬ ದುಃಖದಿಂದ ಕಾಳಿಯು ಕೋಪಿಸಿಕೊಂಡು ಮಗುವನ್ನೆತ್ತಿಕೊಂಡಿದ್ದ ನನ್ನನ್ನು ನದಿಗೆ ತಳ್ಳಿದಳು. ಯಾವಾಗಲೂ ಪರರ ಸುಖವನ್ನು ನೋಡಿ ಸಹಿಸುವವರು ಈ ಲೋಕ

ವ॥ ಅಂತವಳ್ ಮಗನನೆನ್ನಂ ನದಿಯೊಳ್ ನೂಂಕಲಾನುಮಿವನುಂ ಮಡುವಿನೊಳ್ ಬೀೞ್ದಾನೀ ಶಿಶುವಂ ಬಿಡದಿರ್ಪ ಅವಸ್ಥೆಯೊಳೊಂದು ಬೇರ್ಪಱಿದು ಬಿೞ್ದ ಮೞ್ತಿಯ ಮರಂ ತೆಪ್ಪದಂತೆ ಬರ್ಪುದುಂ ಕಂಡದಂ ಪಿಡಿವನ್ನೆಗಂ

ಕಂ॥ ಪೋೞಲೊಳಗಿರ್ದ ದುಷ್ಟ
ವ್ಯಾಳಂ ಮುಳಿದೆನ್ನ ಕೈಯನೌಡಲ್ ಮತ್ತೀ
ಬಾಳಕನ ಪುಣ್ಯದಿಂ ತ
ತ್ಕೂಳಮನಾಂ ಸಾರ್ದೆನಿನ್ನು ಸೈರಿಸಲಾರೆಂ ೧೦೩

ವ॥ ಇನಿತುಂ ಪೊೞ್ತುಮುದಕದೊಳಿರ್ದ ಕಾರಣಂ ವಿಷವೇಱದಿರ್ದುದು ಈಗಳಸು ನೆತ್ತಿಗೇಱಿದಪುದೀ ಕುಮಾರನಂ ರಕ್ಷಿಸುವುದೆಂದು ಮುನಿಕುಮಾರನ ಕೈಯೊಳ್ ಕುಡಲಾತ ನೀಸಿಕೊಂಡು ನಿನಗೆ ವಿಷಾಪಹಾರಮಪ್ಪೌಷಧಿಯಂ ತಂದೀವೆನೆಂದಾತಂ ಪೋಗಲ್ ವಿಷ ಮೂರ್ಛೆಯಿಂ ಸಮವರ್ತಿನಿಲಯಮನೆಯ್ದಲಾ ಮುನಿಶಿಷ್ಯಂ ಕುಮಾರನಂತಂದು ವಾಮ ದೇವರ್ಗೆ ತೋಱಿ ತದ್ವೃತ್ತಾಂತಮಂ ಪೇೞ್ದಡವರೀತನಂ ಭೂತಳೇಶ್ವರಂಗೆ ಕೊಟ್ಟು ಬಾಯೆಂದು ಕಳುಪಿದೊಡಾತಂ ರಾಜಹಂಸಂಗೆ ಕೊಟ್ಟು ಕುಮಾರಾಗಮ ಸಂಬಂಧಮಂ ಪೇೞ್ದಡರಸನಂ ಪರಿತೋಷಚಿತ್ತನಾಗಿ ಈ ಕುಮಾರಂ ಪ್ರೇಮದತ್ತನ ಮಗನಪ್ಪುದಱಿಂ ಸೋಮದತ್ತನೆಂದು ಪೆಸರನಿಟ್ಟು ಅಪ್ಪದಿಕ್ಪಾಲಕರಿಂ ಪರಿವೇಷ್ಟಿಸಿರ್ದ ಭೂಮಿಯಂತೆ ಭೂಮೀ ಶ್ವರಂ ಸುಖದೊಳಿರ್ಪಿನಮೊಂದು ದಿನಂ

ದಲ್ಲಿದ್ದಾರೆಯೆ ? ವ॥ ಹಾಗೆ ಅವಳು ಮಗನನ್ನೂ ನನ್ನನ್ನೂ ನದಿಯಲ್ಲಿ ತಳ್ಳಿದಳು. ನಾನೂ ಇವನೂ ಮಡುವಿನಲ್ಲಿ ಬಿದ್ದೆವು. ನಾನು ಈ ಮಗುವನ್ನುಬಿಡದೇ ಇದ್ದಾಗ ಒಂದು ಬೇರುಕಿತ್ತುಬಿದ್ದ ಮತ್ತಿಯಮರವು ತೆಪ್ಪದಂತೆ ತೇಲಿಬರುತ್ತಿತ್ತು. ಅದನ್ನು ಕಂಡು ನಾನು ಹಿಡಿದುಕೊಳ್ಳಲು ೧೦೩. ಮರದ ಹೊದರಿನಲ್ಲಿದ್ದ ದುಷ್ಟ ಸರ್ಪವೊಂದು ಮುಳಿದು ನನ್ನ ಕೈಯನ್ನು ಕಚ್ಚಿತು. ಮತ್ತೆ ಈ ಬಾಲಕನ ಪುಣ್ಯದಿಂದ ನದಿಯ ದಡವನ್ನು ಸೇರಿ ದೆನು. ಇನ್ನು ತಡೆಯಲಾರೆನು. ವ॥ 'ಇಷ್ಟು ಹೊತ್ತು ನೀರಿನಲ್ಲಿದ್ದುದರಿಂದ ವಿಷವೇರ ಲಿಲ್ಲ. ಈಗ ಪ್ರಾಣವು ನೆತ್ತಿಗೇರಿದೆ. ಈ ಕುಮಾರನನ್ನು ಕಾಪಾಡಬೇಕು, ಎಂದು ಹೇಳಿ ಮುನಿಕುಮಾರನ ಕೈಯ್ಯಲ್ಲಿ ಶಿಶುವನ್ನು ಕೊಟ್ಟಳು. ಅತನು ಅದನ್ನು ತೆಗೆದುಕೊಂಡು 'ನಿನಗೆ ವಿಷವನ್ನು ಪರಿಹರಿಸುವ ಔಷಧಿಯನ್ನು ತಂದುಕೊಡುವೆನು,' ಎಂದು ಹೇಳಿ ಹೋದನು. ಆಗ ಅವಳು ವಿಷದಿಂದ ಮೂರ್ಛಿತಳಾಗಿ ಯಮನ ಪಟ್ಟಣವನ್ನು ಸೇರಿ ದಳು. ಆ ಮುನಿಶಿಷ್ಯನು ಕುಮಾರನನ್ನು ತಂದು ವಾಮದೇವರಿಗೆ ತೋರಿಸಿ ಆ ವೃತ್ತಾಂತ ವನ್ನೆಲ್ಲ ಹೇಳಿದನು. ಆಗ ಅವರು ಈ ಮಗನನ್ನು ಮಹಾರಾಜನಿಗೆ ಕೊಟ್ಟು ಬಾ ಎಂದು ಹೇಳಿಕಳುಹಿಸಿದರು. ಅವನು ಆ ಮಗವನ್ನು ರಾಜಹಂಸನಿಗೆ ಕೊಟ್ಟು ಕುಮಾರನು ಸಿಕ್ಕಿದ ವಿಷಯವನ್ನು ವಿವರಿಸಿದನು. ಅರಸನು ಅದನ್ನು ಕೇಳಿ ಪರಿತೋಷಗೊಂಡು ಈ

ಉ॥ ಮೆಟ್ಟಿದ ಕೆರ್ಪು ಪೆರ್ಬಿದಿರಬಿಲ್ ಸುಲಿಪಲ್ ಕುಡಿಮೀಸೆ ಕಾನಿನೊ
ಳ್ವಟ್ಟೆಯ ಕುಪ್ಪಸಂ ತಲೆಯ ಸುತ್ತಿನ ನೇಣ್ ಪೆಜಗೆಯ್ದೆ ಬರ್ಪನಾಯ್
ಕಟ್ಟಿದ ಕಲ್ಲಿ ಕೆಂಗಱಿಯ ಕೋಲ್ ಬೆರಸೆಯ್ದಿದನೊರ್ಬ ಬೇಂಟೆಯೊಳ್
ದಿಟ್ಟಿಗೆ ಚೆಲ್ವನಾಗಿ ನೃಪನೋಲಗಮಂ ಮೃಗಯಾ ನಿವೇದಕಂ ೧೦೪

ವ॥ ಅಂತೊರ್ವ ಬೇಂಟೆಗಾಱಂ ಬಂದು ರಾಜಹಂಸಂಗೆ ಪೊಡೆಮಟ್ಟು ಇಂತೆಂದಂ

ಕಂ॥ ವ್ಯಾಧನಿವನೆನ್ನದಿರ್ ಭುವ
ನಾಧಿಪ ಮೃಗಸಮಿತಿ ಪೆರ್ಚಿ ಋಷ್ಯಾಶ್ರಮಮಂ
ಬಾಧಿಸುತಿರ್ದಪುದತಿನಿ
ರ್ಬಾಧೆಯೆನಲ್ ಮಾಟ್ಪುದಲ್ತೆ ಬೇಂಟೆಗೆ ಕಾಲಂ ೧೦೫

ಪಳ್ಳದ ನೀರ್ ಪರಿಗುಂದಿದು
ದೆಲ್ಲಾ ಬೆಳಸುಡುಗಿದತ್ತು ದಾವಾಗ್ನಿಯ ಬ
ಲ್ಪಲ್ಲಲ್ಲಿ ತೋಱಿದುದು ಭೂ
ವಲ್ಲಭ ನಡೆ ಬೇಂಟೆಯಾಡಲೀತಿದು ಸಮಯಂ ೧೦೬

ಕುಮಾರನು ಪ್ರೇಮದತ್ತನ ಮಗನಾದುದರಿಂದ ಸೋಮದತ್ತನೆಂದು ಹೆಸರನ್ನಿಟ್ಟನು. ಅನಂತರ ಅಷ್ಟದಿಕ್ಪಾಲಕರಿಂದ ಸುತ್ತುವರಿಯಲ್ಪಟ್ಟ ಭೂಮಿಯಂತೆ ಆ ಮಕ್ಕಳೊಡನೆ ಅರಸನು ಸುಖವಾಗಿದ್ದನು. ಆಗ ಒಂದು ದಿವಸ ೧೦೪. ಪಾದರಕ್ಷೆಗಳನ್ನು ಮೆಟ್ಟಿದ, ಬಿದಿರಿನ ದೊಡ್ಡ ಬಿಲ್ಲನ್ನು ಹಿಡಿದ, ಬಿಳುಪಾದ ಹಲ್ಲುಗಳುಳ್ಳ, ತೆಳ್ಳಗಿರುವ ಮೀಸೆಯುಳ್ಳ, ಕಪ್ಪುಬಣ್ಣದ ಒಳ್ಳೆಯ ಬಟ್ಟೆಯ ಅಂಗಿಯನ್ನು ಧರಿಸಿದ, ಹಗ್ಗವನ್ನು ತಲೆಗೆ ಸುತ್ತಿದ, ಪಕ್ಕದಲ್ಲಿ ಬರುತ್ತಿದ್ದ ನಾಯಿಯೊಡನೆ ಕೂಡಿದ, ಬಲೆಯ (ಜೋಲವನ್ನು) ಕಟ್ಟಿಕೊಂಡಿದ್ದ, ಕೆಂಪು ಗರಿಗಳುಳ್ಳ ಬಾಣವನ್ನು ಹಿಡಿದಿದ್ದ, ಬೇಟೆಯ ವೇಷದಲ್ಲಿ ದೃಷ್ಟಿಗೆ ಸುಂದರವಾಗಿ ಕಾಣಿಸುತ್ತಿದ್ದ ಬೇಟೆಯ ವಿಷಯವನ್ನು ಹೇಳಲು ನಿಯಮಿತನಾದ ಬೇಟೆಗಾರನೊಬ್ಬನು ನೃಪನ ಓಲಗಕ್ಕೆ ಬಂದನು. ವ॥ ಅವನು ರಾಜಹಂಸನಿಗೆ ನಮಸ್ಕರಿಸಿ ಹೀಗೆ ಹೇಳಿದನು. ೧೦೫. ರಾಜನೆ ! ಮೃಗ ಸಮೂಹವು ಹೆಚ್ಚಿ ಋಷಿಗಳ ಆಶ್ರಮಗಳನ್ನು ಬಾಧಿಸುತ್ತಿದೆ. ಬಾಧೆಯಿಲ್ಲದಂತೆ ಮಾಡಲು ಬೇಟೆಗೆ ಇದು ಸಕಾಲ. ಬೇಟೆಗಾರನು ಹೇಳುತ್ತಿದ್ದಾನೆಂದು ಉಪೇಕ್ಷಿಸಬೇಡ. ೧೦೬. ಹಳ್ಳದಲ್ಲಿ ನೀರು ಹರಿಯುತ್ತಿಲ್ಲ. ಎಲ್ಲ ಬೆಳಸೂ ಒಣಗಿ ಹೋಗಿದೆ. ಅಲ್ಲಲ್ಲಿ ಕಾಡುಕಿಚ್ಚಿನ ಪ್ರಭಾವ ಕಂಡುಬಂದಿದೆ.

ಚಂ॥ ಗಿರಿಗಳ ಪಕ್ಷಮಂ ಕಡಿದು ಗೋತ್ರವಿರೋಧಿಯೆನಿಪ್ಪ ನಾಮಮಂ
ಧರಿಸಿದ ದೇವವಲ್ಲಭನ ಪತ್ತನಕೀಗಳೆ ದಾೞಿಯಿಟ್ಟು ಸು
ಟ್ಟುರಿಪುವೆನೆಂದು ಪರ್ವತವರಂ ಕರದೀಪ ಸಹಸ್ರ ಸಂಖ್ಯೆಯಿಂ
ದಿರುಳಿಡೆಗಾಳಗಕ್ಕೆ ನಡೆವಂತೆವೊಲಿರ್ದುದು ದಾವಪಾವಕಂ ೧೦೭

ವ॥ ಎಂದು ಬಿನ್ನವಿಸಿದ ಬೇಂಟೆಗಾಱನನರಸಂ ಮನ್ನಿಸಿ ಕ್ರೂರಮೃಗಂಗಳ ಬಾಧೆಯುಂ ಪರಿಹರಿಸಿದೊಡೆ ದೋಷಮೇನುಂ ಬರ್ಪುದಿಲ್ಲೆಂದು ಭಾವಿಸಿಯಾಗಳ್ ಪೊಱಮಟ್ಟು ಕಾಪುಗಾಡ ಬೇಡಪಡೆಯುಂ ಕರಸೆ

ಉ॥ ಸಿಂಗದ ಕೇಸರಂ ಪುಲಿಯುಗುರ್ ಚಮರೀಮೃಗವಾಳಜಂ ಮದೇ
ಭಂಗಳ ಮುತ್ತು ಪೀಲಿವೊಱೆ ಪೂತಿಯ ಬೆಕ್ಕುಳಮಂದಿ ಮುಳ್ ವರಾ
ಹಂಗಳ ದಾಡೆ ಕುತ್ತುರಿಯ ಪುಲ್ಲೆಗಳೊರ್ವೊದಲಾದ ವನ್ಯಸಾ
ರಂಗಳ ಭಾರದಿಂ ನಡೆದುಬಂದನದೊರ್ವ ಪುಳಿಂದನಾಯಕಂ ೧೦೮

ವ॥ ಅಂತು ಬಂದು ಕಂಡ ಪುಳಿಂದನಾಯಕನಂ ಮನ್ನಿಸುವುದುಮವಂ ತಾಂ ಪಾಸದೊಳಿರ್ದ ಜಾಯಿಲನಂ ತೋಱಿಸಿ

ರಾಜನೆ! ಹೊರಡು. ಇದು ಬೇಟೆಯಾಡಲು ತಕ್ಕಸಮಯ. ೧೦೭. 'ಗಿರಿಗಳ ರೆಕ್ಕೆಗಳನ್ನು ಕಡಿದು ಗೋತ್ರವಿರೋಧಿ (ಪರ್ವತಶತ್ರು) ಎಂಬ ಹೆಸರನ್ನು ಧರಿಸಿದ ದೇವೇಂದ್ರನ ಪಟ್ಟಣಕ್ಕೆ ಈಗಲೇ ದಾಳಿಯಿಟ್ಟು ಸುಟ್ಟು ಹಾಕುವೆನು' ಎಂದು ನಿಶ್ಚಯಿಸಿ ಪರ್ವತಶ್ರೇಷ್ಠನು ಸಾವಿರಾರು ದೀವಟಿಗೆಗಳ ಸಹಾಯದಿಂದ ರಾತ್ರಿಯುದ್ಧಕ್ಕೆ ನಡೆಯುತ್ತಿದ್ದಾನೆಯೋ ಎಂಬಂತೆ ಕಾಳ್ಕಿಚ್ಚು ಕಾಣಿಸುತ್ತದೆ ವ॥ ಎಂದು ವಿಜ್ಞಾಪಿಸಿದ ಬೇಟೆಗಾರರನ್ನು ಅರಸನು ಗೌರವಿಸಿದನು. ಕ್ರೂರಮೃಗಗಳ ಬಾಧೆಯನ್ನು ಪರಿಹರಿಸಿದರೆ ದೋಷವೇನೂ ಬರುವುದಿಲ್ಲವೆಂದು ಯೋಚಿಸಿದನು. ಆಗಲೇ (ಬೇಟೆಗೆ) ಹೊರಟು ಕಾಡಿನ ಕಾವಲಿನವರಾದ ಬೇಡರ ಪಡೆಯನ್ನು ಕರೆಯಿಸಿದನು. ೧೦೮. ಸಿಂಹದಕೇಸರ, ಹುಲಿಯ ಉಗುರು, ಚಮರೀಮೃಗದ ಕೂದಲು ಪುನಗಿನಬೆಕ್ಕು ಮದಿಸಿದ ಆನೆಗಳಲ್ಲಿ ದೊರೆತ ಮುತ್ತು, ನವಿಲುಗರಿಯ ಹೊರೆ, ಹಂದಿಯ ಮುಳ್ಳು, ಹಂದಿಗಳ ಕೋರೆಹಲ್ಲು, ಕಸ್ತೂರಿಯ ಮೃಗಗಳು, ಮೊದಲಾದ ವನದಲ್ಲಿ ಜನಿಸಿದ ಸಾರವಾದ ವಸ್ತುಗಳ ಭಾರವನ್ನು ಹೊತ್ತು ಒಬ್ಬ ಪುಳಿಂದನಾಯಕನು ನಡೆದುಬಂದನು. ವ॥ ಹಾಗೆ ಬಂದು ಕಂಡ ಬೇಡರ ನಾಯಕನನ್ನು ಮನ್ನಿಸಲು

ಉ॥ ರಾಹುವಿನಂತೆ ಯಕ್ಷಪತಿವೈರಿ ನಿಶೀಥಿನಿಯಂತೆ ಪುಂಡರೀ
ಕಾಹಿತಕಾರಿ ದುಷ್ಟ ಶಿಶುಪಾಲಕನಂತಿರೆ ಕೃಷ್ಣಸಾರತೇ
ಜೋಹರ ಕಾರಣಂ ಕುರುಕುಲಾಧಿಪನಂತೆ ವೃಕೋದರಾರಿ ಕೇಳ್
ಸಾಹಸಮಲ್ಲನೆನ್ನದಟನಂಕದ ಜಾಯಿಲನುರ್ವರಾಧಿಪಾ ೧೦೯

ವ॥ ಎಂದು ಬಿನ್ನವಿಸಿದನಂ ಮನ್ನಿಸೆಯುನಂತರಂ

ಮ॥ ತೊಗರಂ ಪಿಂಡುಗಲಂಕಿ ಸಾಳುವನಭಂಗಂ ಜಾಯಿಲಂ ಸೂಜಿವಾ
ಲಿಗನುದ್ದಂಡನೊಳಂಟನಂಟಿ ಬಟಲಂ ಜೂಗಂ ಜವಂ ರಕ್ಕಸಂ
ಪೊಗೆಗಣ್ಣಂ ಕಲಿಬಂದಿಕಾಱನದಟಂ ವೇಗಾಯ್ಲನೆಂದೆಂಬ ಕು
ನ್ನಿಗಳಂ ಹಾಸದೊಳಿಟ್ಟು ಕಾಡೊಡೆಯರಂದೆಯ್ದಿತ್ತು ಕಾಂತಾರಮಂ ೧೧೦

ಉ॥ ಹಂದಿಗೆಸಾಳುವಂ ಮರೆಗೆ ಜಾಯಿಲನೇಣಕುಲಕ್ಕೆ ಚಂಚುವಾ
ಲಂ ದಣಿದಿರ್ದಕೊಂಡಗುಱಿಗೀ ತೊಗರಂ ರುರು ಸಂಕುಳಕ್ಕೆ ಜೂ
ಗಂ ದಿಟಮಲ್ತುಮಾರಿಯಲೆಭೂಪತಿ ನೋೞ್ಪೊಡೆ ತೋರ್ಪೆನಿಂತು ನೋ
ಡೆಂದತಿ ಭಾಷೆಯಂ ನುಡಿಯುತಿರ್ದನಬೊರ್ಬ ಪುಳಿಂದನಾಯಕಂ ೧೧೧

ಅವನು ಪತ್ತಿರದಲ್ಲಿದ್ದ ಬೇಟೆಯ ನಾಯಿಯನ್ನು ತೋರಿಸಿ ೧೦೯. "ಮಹಾರಾಜನೆ! ಕೇಳು, ನನ್ನ ಈ ಬೇಟೆಯ ನಾಯಿಯು ಶೌರ್ಯವುಳ್ಳುದು. ಪ್ರಸಿದ್ಧವಾದುದು. ಮತ್ತು ಸಾಹಸಮಲ್ಲ. ಇದು ರಾಹುವಿನ ಹಾಗೆ ಋಕ್ಷಪತಿಯ (ಚಂದ್ರ-ಕರಡಿ) ಶತ್ರು. ರಾತ್ರಿಯಂತೆ ಪುಂಡರೀಕಕ್ಕೆ (ಕಮಲ-ಹುಲಿ) ಅಹಿತವನ್ನು ಮಾಡತಕ್ಕದ್ದು. ದುಷ್ಟನಾದ ಶಿಶುಪಾಲನ ಹಾಗೆ ಕೃಷ್ಣನ ಸಾರ ತೇಜೋಹರಣಕ್ಕೆ ಕಾರಣನು, [ಕೃಷ್ಣನ ಸಾರವಾದ ತೇಜೋಹರಣ-ಜಿಂಕೆಯ ವೇಗವನ್ನು ಹರಣಮಾಡು ವುದು] ದುರ್ಯೋಧನನ ಹಾಗೆ ವೃಕೋದರನ (ಭೀಮ-ತೋಳದ ಹೊಟ್ಟೆ) ಶತ್ರು. ವ|| ಎಂದು ವಿಜ್ಞಾಪಿಸಿದ ಅವನನ್ನು ಗೌರವಿಸಿದನು. ಅನಂತರ. ೧೧೦. ತೊಗರ (ಕೆಂಪು ಬಣ್ಣದ ನಾಯಿ) ಪಿಂಡುಗಲಂಕಿ (ಹಿಂಡನ್ನು ಒಡೆಯಬಲ್ಲ) ಸಾಳುವ, ಅಭಂಗ, ಜಾಯಿಲ, ಜೂಗ, ಜವ, ರಕ್ಕಸ, ಹೊಗೆಗಣ್ಣ ಕಲಿ, ಬಂದಿಕಾರ, ಅದಟ, ವೇಗಾಯ್ಲ (ವೇಗವಾಗಿ ಓಡಬಲ್ಲ) ಎಂದು ಮೊದಲಾದ ಹೆಸರುಳ್ಳ ನಾಯಿ ಗಳನ್ನು ಪಕ್ಕದಲ್ಲಿಟ್ಟುಕೊಂಡು ಅಂದು ಬೇಟೆಗಾರರು ಕಾಡಿಗೆ ನುಗ್ಗಿದರು. ೧೧೧. "ಹಂದಿಗೆ ಸಾಳುವನು ಮಾರಿ, ಮರೆಗೆ ಜಾಯಿಲನು ಮಾರಿ, ಏಣಗಳ ಗುಂಪಿಗೆ ಚಂಚು ವಾಲನು ಮಾರಿ, ದಣಿದಿದ್ದ ಕಾಡು ಕುರಿಗೆ ಈ ತೊಗರನು ಮಾರಿ, ರುರುಗಳ ಗುಂಪಿಗೆ ಜೂಗನುಮಾರಿ. ದಿಟ. ರಾಜನೆ, ನೋಡುವ ಹಾಗಿದ್ದರೆ ತೋರಿಸುವೆನು. ನೋಡು" ಎಂದು ಒಬ್ಬ ಪುಳಿಂದ ನಾಯಕನು ಭಾಷೆಯಿಟ್ಟು ಹೇಳುತ್ತಿದ್ದನು. (ಮರೆ, ಏಣ,

ವ॥ ಅಂತು ಪಸಾಯಂಗೊಟ್ಟು ನಡೆವನ್ನೆಗಂ

ಇದೆ ಮರೆ ಹಿಕ್ಕೆಯಿಕ್ಕಿದಡೆ ಪುಲ್ಲೆಯ ಬಾಯ ಕಱುಂಕೆ ಸೂಸಿದ
ತ್ತಿದೆ ಕೆಸಱೊಳ್ ಪೊರಳ್ದು ನಡೆಗೊಂಡುದು ಹಂದಿಯ ಹಿಂಡು ಮುಂದೆ ನೋ
ಡದೆ ಪೊಲಸಟ್ಟು ನಾರ್ತಪುದು ಪೆರ್ಬುಲಿಯಿರ್ದಪುದಕ್ಕೆನುತ್ತ ಪೆ
ರ್ಚಿದವನದಲ್ಲಿ ಪಜ್ಜೆವಟ್ಟೆಯಿಂ ನಡೆಗೊಂಡುದು ಭಿಲ್ಲಸಂಕುಲಂ ೧೧೨

ವ॥ ಆ ಸಮಯದೊಳ್

ಮುಱಿದ ಕೊರಲ್ ನಿಮಿರ್ದ ಕಿವಿ ಕಿತ್ತುವ ಮೆಯ್ ಕಡೆವಾಯ ಪುಲ್ಲೆಸಳ್
ತರಳವಿಲೋಚನಂ ಸೊವಡನಾಲಿಸಿ ಬೆರ್ಚಿ ಬಿಗುರ್ತುಬೇಗದಿಂ
ಸರಳಿಸಿ ಮತ್ತೆ ನಿಂದು ಪೆಱಗಂ ನಡೆನೋೞ್ಪತಿಭೀತಿ ತಮ್ಮೊಳ
ಚ್ಚರಿವಡೆದಿರ್ಪ ಪುಲ್ಲೆಗಳನೀಕ್ಷಿಸಿದಂ ಭುವನಾಧಿನಾಯಕಂ ೧೧೩

ವ॥ ಅದಲ್ಲದೆಯುಂ

ಚಂ॥ ಚರಿಸದೆ ಮೇಪುಗೊಳ್ಳದಿನಿಸಿಕ್ಕೆಯನೊಲ್ಲದೆ ನಿದ್ದೆಯಿಲ್ಲದೊ
ಳ್ಮರನ ನೆೞಲ್ಗೆ ಬಾರದೆ ಮೃಗಾಳಿಗೆ ಸೇರದೆ ನೀರ್ಗೆ ಪಾರದು
ದ್ಧುರಮದನಾಗ್ನಿಗಳ್ಕಿ ತನುತಾಪದ ಬೇಗೆಗೆ ಬಳ್ಕಿ ವಲ್ಲಭಾ
ವಿರಹದೊಳಿರ್ದುದೊಂದು ಹರಿಣಂ ಬರೆದೊತ್ತಿದ ಚಿತ್ರಮೆಂಬಿನಂ ೧೧೪

ರುರು ಇವು ಜಿಂಕೆಯ ವರ್ಗದ ಪ್ರಾಣಿಗಳು.) ಹಾಗೆ ಬಹುಮಾನವನ್ನು ಕೊಟ್ಟು ನಡೆದಾಗ. ೧೧೨. "ಇದೆ ಮರೆಯುಹಿಕ್ಕೆ ಹಾಕಿದಜಾಗ, ಇದೋ ಇಲ್ಲಿ ಹುಲ್ಲೆಯ ಬಾಯಿಯಲ್ಲಿದ್ದ ಗರಿಕೆ ಹುಲ್ಲುಬಿದ್ದಿದೆ ಇದೊ, ಇಲ್ಲಿ ಕೆಸರಿನಲ್ಲಿಬಿದ್ದು ಹೊರಳಿದ ಹಂದಿಯ ಹಿಂಡು ನಡೆದುಹೋಗಿದೆ. ಮುಂದೆ ನೋಡು. ಅದೋ ಅಲ್ಲಿ[1] ಹೆಬ್ಬುಲಿಯು ಇದ್ದಿರಬಹುದು." ಎಂದು ಹೇಳುತ್ತಾ ಬೇಡರ ಗುಂಪು ಆ ವಿಸ್ತಾರವಾದ ಕಾಡಿನಲ್ಲಿ ಹೆಜ್ಜೆಯ ಗುರುತುಳ್ಳ ದಾರಿಯನ್ನು ಹಿಡಿದು ಮುಂದೆ ನಡೆಯಿತು. ವ॥ ಆ ಸಮಯದಲ್ಲಿ. ೧೧೩. ಪಕ್ಕಕ್ಕೆ ತಿರುಗಿದ ಕುತ್ತಿಗೆ, ನೆಟ್ಟಗಾದ ಕಿವಿ, ನಡುಗುವ ಶರೀರ, ಕಡೆಬಾಯಲ್ಲಿ ಸಿಕ್ಕಿಕೊಂಡಿರುವ ಹುಲ್ಲಿನೆಸಳು, ಚಂಚಲವಾದ ಕಣ್ಣು, ಉಗ್ರವಾಸನೆಯನ್ನರಿತು ಹೆದರಿ ಬೇಗ ಬೇಗ ಹಾರಿ ಮತ್ತೆ ನಿಂತು ಪಕ್ಕಕ್ಕೆ ನೋಡುವ ಅತಿಭೀತಿ, ಇವುಗಳಿಂದ ಆಶ್ಚರ್ಯಕರವಾದ ಜಿಂಕೆಗಳನ್ನು ರಾಜನು ನೋಡಿದನು. ವ॥ ಅದೂ ಅಲ್ಲದೆ—೧೧೪. ತನ್ನ ಪ್ರಿಯಳ ಅಗಲಿಕೆಯಿಂದುಂಟಾದ ಕಾಮತಾಪಕ್ಕೆ ಅಳುಕಿ ಶರೀರತಾಪದ ಬೇಗೆಯಿಂದ ಕುಸಿದಿದ್ದ ಒಂದು ಜಿಂಕೆಯು ಬರೆದು ಒತ್ತಿದ ಚಿತ್ರದಂತೆ ಕಾಣಿಸಿತು. ಅದು ಚಲಿಸಲಿಲ್ಲ, ಮೇವು ತಿನ್ನಲಿಲ್ಲ. ಸ್ವಲ್ಪವೂ ವಾಸಸ್ಥಾನದಲ್ಲಿರಲು ಬಯಸಲಿಲ್ಲ. ನಿದ್ದೆ ಮಾಡಲಿಲ್ಲ, ಮರದ ನೆಳಲನ್ನು ಸೇರಲಿಲ್ಲ. ಜಿಂಕೆಗಳ ಗುಂಪಿನಲ್ಲಿ ಬೆರೆಯ

1. ಪೊಲಸು ವಾಸನೆ ಬರುತ್ತಿದೆ. ಆದ್ದರಿಂದ ಅಲ್ಲಿ ಹುಲಿ ಇರಬಹುದು.

ಉ॥ ಪುಲ್ಲೆಯ ಹಿಂಡನೊಂದು ಪುಲಿ ಗೆಂಟಱೊಳೊಯ್ಯನೆಕಂಡು ಪಜ್ಜೆಯಂ
ಮೆಲ್ಲನೆ ಮೆಟ್ಟಿ ಪುಲ್ಲೊಳೆ ಹುದುಂಗಿ ಯದರ್ಕೆ ಲಂಘಿಸಲ್
ತಲ್ಲಳದಿಂ ಕುನುಂಗಿ ನೆಱೆ ನೀಂಟಿಸಿ ನೀಳ್ದ ಕೊರಲ್ಗೆ ಪಾಯ್ದು ತ
ಳ್ವಿಲ್ಲದೆ ನೆತ್ತರಂ ಪದೆದು ಪೀರ್ದೆಟಱಿದಿಕ್ಕಿದುದಿಕ್ಕೆದಾಣದೊಳ್ ೧೧೫

ವ॥ ಅದಂ ಕಂಡು

ಚಂ॥ ಮೆಳೆಗಳನೊತ್ತಗಳ್ ಮರನನೇಱು ಕೆಲಂಬಿಡದಿತ್ತಜಾಱು ಬಂ
ದೊಳಪುಗದಿರ್ ಬಿಡೋ ಪಿಡಿದನಾಯ್ಗಳನಟ್ಟಱಿಯಿತ್ತಲಿತ್ತಪೋ
ಯ್ತೆಲೆಲೆಲೆ ತೋಹಕಟ್ಟ ಕೆಡೆಪೋ ಬಲೆಗಾನಿರೆ ಸೋಹೆನಿಪ್ಪತ
ತ್ಕಳಕಳಮುಣ್ಮೆ ಬೇಡವಡೆ ಬೊಬ್ಬಱಿದಾಡಿದುದಂದು ಬೇಂಟೆಯಂ ೧೧೬

ಚಂ॥ ಪುಲಿವಲೆಕೊಂಬುಕಣ್ಣಿ ಮಿಡಿಗಣ್ಣಿ ತೊವಲ್ವಲೆಸಿಕ್ಕುದಕ್ಕು ಪೆ
ರ್ಮೊಲವಲೆ ಸಂದ ಹಾಸುವಲೆ ನೀರ್ವಲೆ ಮೇಲ್ವಲೆ ಸೊರ್ಕುಮದ್ದು ಪೆ
ರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಱಗಟ್ಟಿ ಕಾನನ
ಸ್ಥಳದೊಳಗಲ್ಪು ತೋಹುವಿಡಿದೊಡ್ಡಿದರ್ಯೆದೆ ಪುಳಿಂದನಾಯಕರ್ ೧೧೭

ಲಿಲ್ಲ. ನೀರು ಕುಡಿಯಲಿಲ್ಲ. ಸುಮ್ಮನೆ ಚಿತ್ರದಲ್ಲಿ ಬರೆದಿದ್ದಂತೆ ಕಾಣಿಸಿತು. ೧೧೫. ಜಿಂಕೆಗಳ ವಾಸಸ್ಥಾನದಲ್ಲಿ ಜಿಂಕೆಗಳ ಹಿಂಡೊಂದನ್ನು ಒಂದು ಹುಲಿಯು (ದೂರದಿಂದ) ನೋಡಿತು. ನಿದಾನವಾಗಿ ಹೆಜ್ಜೆಯಿಡುತ್ತಾ ಹುಲ್ಲಿನಲ್ಲಿ ಅಡಗಿಕೊಳ್ಳುತ್ತಾ ಹೋಗಿ ಅದರ ಮೇಲೆ ಎರಗಿತು. ತಡಮಾಡದೆ, ಭಯದಿಂದ ಮುದುರಿಕೊಂಡು ಮುಂದಕ್ಕೆ ಉದ್ದವಾಗಿ ನೀಡಿದ ಜಿಂಕೆಯ ಕುತ್ತಿಗೆಯ ಮೇಲೆಬಿದ್ದು ರಕ್ತವನ್ನು ಆಸೆಯಿಂದ ಹೀರಿ ಅದನ್ನು ಎಳೆದಾಡಿತು. ವ॥ ಅದನ್ನು ನೋಡಿ. ೧೧೬. "ಮರಗಿಡಗಳ ಗುಂಪು ಅಥವಾ ಪೊದೆಗಳನ್ನು ಆಕ್ರಮಿಸು. ಮರವನ್ನು ಏರಿ ಪಕ್ಕವನ್ನು ಬಿಡದೆ ಇತ್ತಕಡೆಗೆ ಜಾರಿಕೋ. ಬಂದು (ಹಿಂದುಮುಂದು ನೋಡದೆ) ಒಳಕ್ಕೆ ನುಗ್ಗಬೇಡ. ಹಿಡಿದ ನಾಯಿಗಳನ್ನು ಬಿಡು. ಅಟ್ಟಿಸಿಕೊಂಡು ಹೋಗಿ ಇರಿ. ಇತ್ತಹೋಯಿತು, ಇತ್ತ ಹೋಯಿತು. ಎಲೆ ಎಲೆ. ಬೇಲಿಕಟ್ಟಿ ಬಲೆಗೆ ಕೆಡಹು. ನಾನಿದ್ದು ಮೃಗಗಳನ್ನು ಓಡಿಸತ್ತೇನೆ." ಹೀಗೆ ಕಲ ಕಲಧ್ವನಿಯು ಹೊಮ್ಮಲು ಬೇಡರ ಗುಂಪು ಬೊಬ್ಬಿರಿಯುತ್ತಾ ಬೇಟೆಯನ್ನಾಡಿತು. ೧೧೭. ಹುಲಿಯನ್ನು ಹಿಡಿಯುವಬಲೆ, ಕೊಂಬು, ಹಗ್ಗ, ಕಣ್ಣಿವಲೆ (ಎರಡು ಕಡೆ ಕುಣಿಕೆಯಿದ್ದೂ ಎಳೆದು ಕಟ್ಟುವಬಲೆ), ಚರ್ಮದ ಬಲೆ, ಸಿಕ್ಕುದಕ್ಕು [ಸಿಕ್ಕಿಸಿಕೊಂಡು ಹಿಡಿಯುವ ಸಾಧನ] ದೊಡ್ಡ ಮೊಲಗಳನ್ನು ಹಿಡಿಯುವ ಬಲೆ, ಹಾಸುವಬಲೆ, ನೀರಿ ನಲ್ಲಿ ಬೀಸುವಬಲೆ, ಮೇಲಿನಿಂದ ಹಾಕುವಬಲೆ, ಮೈಮರೆಯಿಸುವ (ತೆರೆದ ಆರು ಕೋಲುಗಳಿಗೆ ಸಿಕ್ಕಿಸಿದಬಲೆ,) ಔಷಧಿ, ದೊಡ್ಡಬಲೆ, ಬಿಡುವಾರು ಗೋಡುಬಲೆ ? ಈ ಮೊದಲಾದ ಬಲೆಗಳನ್ನು ಹೊರೆಮಾಡಿ ತೆಗೆದುಕೊಂಡು ಹೋಗಿ ಕಾಡಿನಲ್ಲಿ ಅಗಲವಾಗಿ ಬೇಲಿಗಳನ್ನು ಹಾಕಿ (ಅಡಗುವ ಸ್ಥಳವನ್ನು ಕಂಡುಹಿಡಿದು ಬೇಡರ ನಾಯಕರು ಅವನ್ನು

ವ॥ ಆ ಸಮಯದೊಳ್

ಶಾ॥ ಮುಸ್ತಾಕಂದಮನೆತ್ತಿ ಬೇರ್ಗಳನಿತಂ ತಿಂದುಗ್ರದಾಹಂ ಮಿಗಲ್
ವ್ಯಸ್ತಾಂಬುಪ್ಲವವಾದ ಪೆರ್ಗೆಱೆಗಳೊಳ್ ಪಾಯ್ದಲ್ಲಿ ಮುಂ ನಾಯ್ಗಳಂ
ಹಸ್ತಾಲಂಬಿತವಾದುವುಂ ಬಿಡುಬಿಡೆಂದಾರ್ದಿರ್ದ ಬೇಡರ್ಕಳಂ
ಹಸ್ತಿವ್ಯಾಜದೊಳೊಕ್ಕಲಿಕ್ಕಿ ಕೆಡಪಿತ್ತಂದೊಂದೆ ಸಿಂದೆಕ್ಕಲಂ ೧೧೮

ವ॥ ಅದಂ ಕಂಡು

ಮ॥ ಜವದಿಂ ಬೆಂಗೊಟ್ಟು ಪೋಪೆಕ್ಕಲನನಳವಿಯೊಳ್ ಕಂಡು ತದ್ರಾಜಹಂಸಂ
ಕವಲಂಬಿಂದೆಚ್ಚೊಡಂತುರ್ಬಿನ ನಡುಪಣೆಯೊಳ್ ಮೂಡೆ ನಾಲ್ದಾಡೆಯಾದಂ
ತೆವೊಲಾ ಬೇಡರ್ಕಳಂ ಸೀಟುಗ್ಗಿ ಬಗೆಯೆ ನೃಪಂ ಕೊಂದಪಂ ಪಂದಿಯಲ್ತೆಂ
ದು ವನಂ ಘೋಳೆಂಬಿನಂ ಬೊಬ್ಬಿಱಿದು ಕೆಡುವುತಿರ್ದತ್ತು ಭಿಲ್ಲಪ್ರತಾನಂ

ವ॥ ಅದಲ್ಲದೆಯುಂ ೧೧೯

ಮ॥ ಮೊಳೆಯಿಂದಂ ಪೊಱಮಟ್ಟು ಮೆಯ್ಮುಱಿದು ಕೆಂಗಣ್ಣಿಕ್ಕಿ ಕಂಡಾಳ್ಗಳಂ
ನೆಲನಂ ಗರ್ಜಿಸಿ ಪೊಯ್ದು ಬಾಯ್ದೆಱೆದು ಪುರ್ಬಿಕ್ಕುತ್ತೆ ವಾಲಾಗ್ರಮಂ
ಮುಳಿಸಿಂ ದಾಡೆಗಳಿಂದೆ ಕರ್ಚಿ ಸೆಳೆಯುತ್ತುತ್ಕೋಪದಿಂ ಪಾಯ್ವ ಪೆ
ರ್ಬುಲಿಯಂ ದಂಡಿ[1]ಯೊಳಾಂತು ನೂಂಕಿತಿವಿದಂ ವಿಕ್ರಾಂತ ಕಂಠೀರವಂ ೧೨೦

ಒಡ್ಡಿದರು. ಆ ಸಮಯದಲ್ಲಿ. ೧೧೮. ಕಾಡು ಹಂದಿಯೊಂದು ಕೊನ್ನಾರೀ ಗೆಡ್ಡೆಗಳಷ್ಟನ್ನು ತಿಂದು ಮಿತಿಮೀರಿ ಬಾಯಾರಿಕೆಯಾಗಲು ನೀರು ಉಕ್ಕಿಹರಿಯುತ್ತಿದ್ದ ದೊಡ್ಡ ಕೆರೆಗಳಿಗೆ ನುಗ್ಗಿತು. ಆಗ ಕೈಯ್ಯಲ್ಲಿ ಹಿಡಿದುಕೊಂಡಿದ್ದ ನಾಯ್ಗಳನ್ನು ಬಿಡು ಬಿಡು ಎಂದು ಗಟ್ಟಿಯಾಗಿ ಕೂಗುತ್ತಿದ್ದ ಬೇಡರನ್ನು ಆ ಹಂದಿಯು ಆನೆಯೆಂಬ ಭ್ರಾಂತಿಯನ್ನುಂಟುಮಾಡುತ್ತ ಒಂದೇ ಎದುರು ನಿಂತು ಹೊಡೆದು ಕೆಡವಿತು ವ॥ ಅದನ್ನು ನೋಡಿ. ೧೧೯. ವೇಗದಿಂದ ಬೆನ್ನಿತ್ತು ಓಡುತ್ತಿದ್ದ ಕಾಡು ಹಂದಿಯನ್ನು ಸ್ವಲ್ಪ ದೂರದಲ್ಲಿ ಕಂಡು ಆ ರಾಜಹಂಸನು ಅದಕ್ಕೆ ಕವಲಂಬಿನಿಂದ ಹೊಡೆದನು. ಅದು ಅದರ ಉಬ್ಬಿದ ಹಣೆಯಲ್ಲಿ ನೆಟ್ಟು ನಾಲ್ಕು ಕೋರೆಹಲ್ಲುಗಳಾದಂತಾಯಿತು.[2] ಅನಂತರ ಅದು ಬೇಡರನ್ನು ಸೀಳಿ ಬಗಿದುಹಾಕಿತು. ಆಗ ಬೇಡರ ಗುಂಪು 'ಇದು ಸಾಮಾನ್ಯವಾದ ಹಂದಿಯಲ್ಲ ಇದನ್ನು ರಾಜನು ಕೊಲ್ಲುತ್ತಾನೆ.' ಎಂದು ಕಾಡೇ ಘೋಳ್ ಎನ್ನುವಂತೆ ಬೊಬ್ಬಿರಿಯುತ್ತಾ ಉರುಳಿ ಬೀಳುತ್ತಿತ್ತು. ವ॥ ಅದೂ ಅಲ್ಲದೆ. ೧೨೦. ಪೊದರಿನಿಂದ ಹೊರಕ್ಕೆ ಬಂದು ಮೈಯ್ಯನ್ನು ತಿರುಗಿಸಿ ಕೆಂಗಣ್ಣುಗಳಿಂದ ಬೇಡರನ್ನು ನೋಡಿ ಗರ್ಜಿಸುತ್ತಾ ನೆಲವನ್ನು ಹೊಯ್ದು, ಬಾಯನ್ನು ತೆರೆದುಕೊಂಡು, ಹುಬ್ಬೇರಿಸಿ ಬಾಲದ ತುದಿ

1. ದಂಡಿಯೊಳ್ = ಪರಾಕ್ರಮದಿಂದ ? (ರಂ).

2. ಹಂದಿಯ ಎರಡು ಕೋರೆ ಮತ್ತು ಕವಲಂಬು ಸೇರಿ ನಾಲ್ಕು ಕೋರೆಗಳಂತೆ ಕಾಣಿಸಿತು. (ರಂ)

ವ॥ ಮತ್ತಂ

ಉ॥ ಕತ್ತಲಿಸಿರ್ದ ಪೇರಡವಿಯೊಳ್ ಸಲೆ ಕೋಟ್ಮೃಗ ಬೆಳ್ಮೃಗಂಗಳಂ
ಮಿತ್ತುವಿನಂದದಿಂ ತವಿಸಿ ಪನ್ನಗಲೋಕದ ಜೀವರಾಶಿಗಳ್
ಪೊತ್ತುವಮಾಟ್ಕೆಯಿಂ ತಿದಿಗಳಿಂ ಪೊಗೆದಪ್ಪರೊ ಭಿಲ್ಲರೆಂಬಿನಂ
ಪುತ್ತನಗುಳ್ದು ಪೆರ್ಗರಡಿಗಳ್ ಮೊಗಮಿಟ್ಟೆಸೆಗುಂ ವನಾಂತದೊಳ್ ೧೨೧

ವ॥ ಅಂತನೇಕ ವಿಧದಿಂದಿರ್ಪ ಮೃಗಂಗಳನರಸಂ ಬೇಂಟೆಯಾಡೆ

ಚಂ॥ ಹರಿಕರಿಹಂದಿ ಬೆಳ್ಳಿರಲೆ ಪೆರ್ಬುಲಿ ಹುಲ್ಲೆ ಲುಲಾಯಸಂಕುಳಂ
ಮರೆ ವೃಕರಾಜಿ ಗಂಡಮೃಗ ಶಾಲ್ಮಲಿ ಸಂತತಿ ಕೊಂಕ ಪೆರ್ಮೊಲಂ
ಕರಡಿ ರುರುಪ್ರತಾನಮುಡುಬೆಳ್ಳಿಲಿ ಪೆರ್ದರಿಯುಂಗಿ ಪೇರಣಲ್
ಮರದಣಲೆಂಬಿವಂ ಕೆಡಪಿಯೇಂ ತಿರುಗಿತ್ತೊ ಕಿರಾತ ಸಂಕುಳಂ ೧೨೨

ವ॥ ಅಂತು ಕಿರಾತಪಡೆಸಹಿತಂ ಬೇಂಟೆಯಾಡಿಯರಸಂ ತಿರುಗುವಾಗಳ್ ಮುಂದೆ

ಉ॥ ಬೇಟೆಯ ನಾಯ್ಗಳಂ ಪೊಱೆವ ಪೆರ್ಬಲೆಯುಂ ಸಮಕಟ್ಟುತಿರ್ಪ ಬ
ಲ್ಸಂಟಗೆಗೋಲ್ಗಳಂ ಬಸಿವ ದೀಹವನೋವುವ ನೇರ್ಪುವೆತ್ತ ಕೈ
ದೊಂಟೆಯನೊಪ್ಪಿ ಕಟ್ಟುವ ಕರಂ ಪದನಾಗಿರೆ ಬಿಲ್ಲನಾರಿಯಂ
ತಾಂಟಿಸಿ ನೋಟ್ಪ ಬೇವಸದೊಳಿರ್ದುದು ಪಳ್ಳಿಯ ಭಿಲ್ಲಸಂಕುಳಂ ೧೨೩

ಯನ್ನು ಕೋಪದಿಂದ ಕೋರೆ ಹಲ್ಲುಗಳಿಂದ ಕಚ್ಚಿ ಸೆಳೆಯುತ್ತಾ ಬಹುಕೋಪದಿಂದ ನುಗ್ಗುತ್ತಿರುವ ಹೆಬ್ಬುಲಿಯನ್ನು ವಿಕ್ರಾಂತ ಕಂಠೀರವನಾದ ರಾಜಹಂಸನು ದಂಡೆಗೆ ಅದುಮಿ ತಳ್ಳಿಕೊಂಡು ತಿವಿದನು. ವ॥ ಮತ್ತೂ. ೧೨೧. ವನಪ್ರದೇಶದಲ್ಲಿ ದೊಡ್ಡ ಕರಡಿಗಳು ಹುತ್ತಗಳನ್ನಗೆದು ಅವಕ್ಕೆ ಮುಖವನ್ನಿಟ್ಟುಕೊಂಡುವು. ಅವು ಕತ್ತಲೆ ತುಂಬಿದ ದೊಡ್ಡ ಕಾಡಿನಲ್ಲಿ ಕ್ರೂರಮೃಗಗಳನ್ನೂ ಸಾಧುವಾದ ಮೃಗಗಳನ್ನೂ ಮೃತ್ಯುದೇವತೆಯಂತೆ ನಾಶಮಾಡಿ ಬೇಡರು ಪಾತಾಳಲೋಕದ ಜೀವರಾಶಿಗಳಿಗೆ ಬೆಂಕಿಹತ್ತಿಸುವ ರೀತಿಯಿಂದ ತಿದಿಗಳಿಂದೂದಿ ಹೊಗೆ ತರಿಸುತ್ತಿದ್ದಾರೆಯೋ ಎಂಬಂತೆ ಕಾಣಿಸಿದವು. ವ॥ ಹಾಗೆ ಅನೇಕ ವಿಧಗಳಾದ ಮೃಗಗಳನ್ನು ರಾಜನು ಬೇಟೆಯಾಡಿದನು. ೧೨೨. ಬೇಡರ ಗುಂಪು ಸಿಂಹ, ಆನೆ, ಹಂದಿ, ಜಿಂಕೆ, ಹೆಬ್ಬುಲಿ, ಹುಲ್ಲೆ, ಕಾಡುಕೋಣಗಳ ಸಮೂಹ, ಮರೆಯೆಂಬ ಕವಲುಗೊಂಬಿನ ಜಿಂಕೆ, ತೋಳಗಳ ಸಾಲು, ಖಡ್ಗಮೃಗ, ಬೂರುಗಮರಗಳ ಸಮೂಹ ? ಕೊಂಕ (ಕೊಕ್ಕು) ದೊಡ್ಡಮೊಲ, ಕರಡಿ, ರುರುಗಳೆಂಬ ಒಂದು ಜಾತಿಯ ಜಿಂಕೆಗಳ ಗುಂಪು, ಉಡ, ಬೆಳ್ಳಿಲಿ, ಪೆರ್ದರಿಯುಂಗಿ? (ದೊಡ್ಡ ಇಳಿಜಾರಾದ ಹಳ್ಳಿಗಳಲ್ಲಿ ತಿರುಗಾಡುವ ಪ್ರಾಣಿ?) ದೊಡ್ಡ ಅಣಿಲು, ಮರದಣಿಲು ಮೊದಲಾದ ಪ್ರಾಣಿಗಳನ್ನು ಹೊಡೆದು ಕೆಡಹುತ್ತಾ ಕಾಡಿನಲ್ಲಿ ಅಲೆದಾಡಿದರು. ವ॥ ಹಾಗೆ ಬೇಡರಸೇನೆಯೊಡನೆ ಬೇಟೆಯಾಡಿ ಅರಸನು ಹಿಂದಿರುಗುವಾಗ ಎದುರಿಗೆ ೧೨೩. ಹಳ್ಳಿಯ ಭಿಲ್ಲರ ಸಮೂಹವು ಬೇಟೆಯ ನಾಯಿಗಳನ್ನು ತಿನಿಸನ್ನಿತ್ತು ಪೋಷಿಸುತ್ತಿತ್ತು.

ವ॥ ಅಂತಿರ್ಪುದೊಂದು ಭಿಲ್ಲವಳ್ಳಿಯುಂ ಕಂಡರಸಂ ನಿಲ್ವುದುಮಲ್ಲಿಯ ಪುಳಿಂದರ್,

ಕಂ॥ ಕತ್ತುರಿಯನಾಭಿಯುಂ ಪೊಸ
ಮುತ್ತುಗಳಂ ಮತ್ತಹಸ್ತಿದಂತವನೊಲವಿಂ
ದಿತ್ತರ್ ಕಣೆಗಳನರಸಾ
ಚಿತ್ತವಿಸೆಂದೆನುತೆ ಶಬರನಾಯಕರಾಗಳ್ ೧೨೪

ವ॥ ಅಂತುಬಂದು ಕಂಡ ಬೇಡವಡೆಯೊಳ್

ಕಂ॥ ಮುಗಿಲಮಱೆಯಬ್ಜಮಿತ್ರಂ
ಪಗಲ ಸುಧಾ ಸೂತಿ ಮಸುಳಿಸಿರ್ಪಂತವರೊಳ್
ಸೊಗಸುವ ಶರೀರಕಾಂತಿಯೊ
ಳೊಗೆದಿರ್ದಂ ನವಕುಮಾರಕಂ ನೃಪನಿದಿರೊಳ್ ೧೨೫

ವ॥ ಅಂತಿರ್ದ ಕುಮಾರನಂ ಕಂಡು ಇವನೆಲ್ಲಿಯವನೆತ್ತಣಿಂ ಬಂದನೀತಂ ನಿಮ್ಮ ಕುಲದೊಳ್ ಪುಟ್ಟಲ್ ತಕ್ಕಾತನಲ್ಲೆಂದರಸಂ ಬೆಸಗೊಳಲಲ್ಲಿಯೊರ್ಬಂ

ಕಂ॥ ಜನಪಂ ಪ್ರಹಾರವರ್ಮಂ
ವನದೊಳ್ ಮುಂಗೆಟ್ಟು ಪೋಪ ಪದದೊಳ್ ಕಮಲಾ
ನನೆಯೊರ್ಬಳ ಕೈಯೊಳ್ ಬ
ಲ್ಪಿನೊಳೀತನನೀಟ್ದುಕೊಂಡೆವವನಿಪ ತಿಲಕಾ ೧೨೬

ದೊಡ್ಡ ಬಲೆಯನ್ನು ಸಮನಾಗಿ ಕಟ್ಟುತ್ತಿತ್ತು. ಎದೆಗುಂಡಿಗೆಗೆ ಚುಚ್ಚಿಕೊಂಡಿದ್ದ ಬಾಣಗಳನ್ನು ತೊಳೆಯುತ್ತಿತ್ತು. ಬೇಟೆಗಾಗಿ ಒಡ್ಡುವ ಮೃಗಗಳನ್ನು ರಕ್ಷಿಸುತ್ತಿತ್ತು. ಕೈದೋಟಿಗಳನ್ನು ಸರಿಯಾಗಿ ಕಟ್ಟುತ್ತಿತ್ತು. ಬಿಲ್ಲಿನ ಹೆದೆಬಳ್ಳಿಯನ್ನು ಬೆರಳಿನಿಂದ ಮಿಡಿದುಮಿಡಿದು ಪರೀಕ್ಷಿಸುತ್ತಿತ್ತು. ಹೀಗೆ ಆ ಬೇಡರು ಬೇರೆಬೇರೆ ಕಾರ್ಯಗಳಲ್ಲಿ ಮಗ್ನರಾಗಿದ್ದರು. ವ॥ ಹಾಗಿದ್ದ ಒಂದು ಬೇಡರ ಹಳ್ಳಿಯನ್ನು ನೋಡಿ ರಾಜನು ನಿಂತನು. ಆಗ ಆ ಹಳ್ಳಿಯ ಬೇಡರು, ೧೨೪. ಕಸ್ತೂರಿಯನ್ನೂ ಹೊಸ ಮುತ್ತುಗಳನ್ನೂ ಆನೆಯ ದಂತಗಳನ್ನೂ ಬಾಣಗಳನ್ನೂ "ಅರಸನೆ ಸ್ವೀಕರಿಸು" ಎಂದು ಪ್ರೀತಿಯಿಂದ ಕೊಟ್ಟರು. ವ॥ ಹಾಗೆ ಬಂದು ಕಂಡ ಬೇಡರ ಪಡೆಯಲ್ಲಿ, ೧೨೫. ಅವರ ನಡುವೆ ಸೊಗಸಾದ ಶರೀರ ಕಾಂತಿಯುಳ್ಳ ನವಕುಮಾರನೊಬ್ಬನು ರಾಜನೆದುರಿಗೆ ನಿಂತಿದ್ದನು. ಅವನು ಮೋಡಗಳ ಮರೆಯಲ್ಲಿ ಕಾಣುವ ಸೂರ್ಯನೋ, ಕಾಂತಿಗುಂದಿದ ಹಗಲಿನ ಚಂದ್ರನೋ—ಎಂಬಂತೆ ಕಾಣಿಸುತ್ತಿದ್ದನು. ವ॥ ಹಾಗಿದ್ದ ಕುಮಾರನನ್ನು ನೋಡಿ—"ಇವನು ಎಲ್ಲಿಯವನು ? ಎತ್ತಕಡೆಯಿಂದ ಬಂದನು ? ಇವನು ನಿಮ್ಮ ಕುಲದಲ್ಲಿ ಹುಟ್ಟಲು ತಕ್ಕವನಲ್ಲ" ಎಂದು ಅರಸನು ಪ್ರಶ್ನಿಸಲು, ಅಲ್ಲಿದ್ದ ಒಬ್ಬನು, ೧೨೬. "ರಾಜಶ್ರೇಷ್ಠನೆ ! ಪ್ರಹಾರವರ್ಮ ರಾಜನು ಕಾಡಿನಲ್ಲಿ ಮುಂದುಗಾಣದೆ ಓಡಿ ಹೋದಾಗ ಸುಂದರಿಯೊಬ್ಬಳ ಕೈಯಿಂದ ಬಲಾತ್ಕಾರದಿಂದ ಈ ಕುಮಾರನನ್ನು ಎಳೆದು

ವ॥ ಎಂದು ಮತ್ತಮಿಂತೆಂದಂ

ಕಂ॥ ಈತಂ ದೇವರ್ಗೆಯೆ ತ
ಕ್ಕಾತಂ ಚಿತ್ತವಿಪುದೆಂದು ತದ್ಬಾಲಕನಂ
ಪ್ರೀತಿಯೊಳಿತ್ತಂ ಕೂರ್ತು ಕಿ
ರಾತವರಂ ನೃಪವರಂಗೆ ಮನದುತ್ಸವದಿಂ ೧೨೭

ವ॥ ಅಂತು ಕುಡುವುದುಂ ಕಿರಾತಂಗೆ ಅರಸಂ ಬೇಟ್ಟುದಂ ಕೊಟ್ಟು ಕುಮಾರನನೊಳಗೊಂಡು ಪುರಪ್ರವೇಶಮಂ ಮಾಡಿ ಬೇಡವಡೆಯಂ ಕಳುಪಿ ಆಸ್ಥಾನ ಮಂಟಪಕ್ಕೆ ಬಂದು ವಸುಮತಿಯುಂ ಕರಸಿ ಕುಮಾರಂ ಬಂದ ವೃತ್ತಾಂತಮಂ ಪೇಟ್ದಾತನನಪಹಾರವರ್ಮನೆಂದು ಪೆಸರನಿಟ್ಟು ನವವಿಧಿಗಳಂ ಪಡೆದ ದಿವಸ್ಪತಿಯಂತವನೀಶಂ ಸುಖದೊಳಿರ್ಪುದುಂ ಮತ್ತೊಂದುದಿನಂ

ಕಂ॥ ಆ ವಾಮದೇವ ಶಿಷ್ಯಂ
ನೀವಾರಮನುಯ್ವ ಬಗೆಯಿನೊಂದು ವನಸ್ಥಾ
ಮಾವನಿಗೆ ಬಂದು ಕಂಡಂ
ಕೋವಿದನತಿ ದುಃಖಿಯಪ್ಪ ವೃದ್ಧಾಂಗನೆಯಂ ೧೨೮

ಉ॥ ಬಾಗಿದ ಬೆನ್ನಲ್ಪಕಿವಿ ಬತ್ತಿದಗಲ್ಲಮುದಿರ್ದಪಲ್ ಕರಂ
ತೂಗುವಮಂಡೆ ನೀರ್ಸುರಿವಕಣ್ಮಲರೆಯ್ದೆ ತೆರಳ್ದ ತೋಳ್ಗಳಿಂ
ಬಾಗಿರೆ ಮುಪ್ಪುಮೆಯ್ವಡೆದು ಬಿಂಜದೊಳಂಜದೆ ನಿಂದುದೆಂಬಿನಂ
ಬೇಗೆಯ ಬೆಂಕಿಗಳ್ಕಿ ಕುಳಿರ್ವಳ್ಳದೊಳಿರ್ದ ಮುದುಂಕಿಯೊಪ್ಪಿದಳ್ ೧೨೯

ಕೊಂಡೆವು ಎಂದು ಹೇಳಿ ಮತ್ತೆ ಹೀಗೆ ಹೇಳಿದನು. ೧೨೭. 'ಇವನು ಸ್ವಾಮಿಯ ಬಳಿಯಿರಲು ತಕ್ಕವನು. ಸ್ವೀಕರಿಸಬೇಕು' ಎಂದು ಹೇಳಿ ಆ ಕಿರಾತವರನು ಪ್ರೀತಿಯಿಂದ ರಾಜಶ್ರೇಷ್ಠನಿಗೆ ಆ ಕುಮಾರನನ್ನು ಕೊಟ್ಟನು. ವ॥ ಹಾಗೆ ಕೊಡಲು (ಬಾಲಕನನ್ನು) ಕಿರಾತನಿಗೆ ಅರಸನು ಬೇಡಿದುದನ್ನು ಕೊಟ್ಟನು. ಬಳಿಕ ಕುಮಾರನನ್ನು ಕರೆದುಕೊಂಡು ಪುರವನ್ನು ಪ್ರವೇಶಿಸಿದನು, ಬೇಡರ ಪಡೆಯನ್ನು ಕಳುಹಿಸಿ ಆಸ್ಥಾನ ಮಂಟಪಕ್ಕೆ ಬಂದು ವಸುಮತಿಯನ್ನು ಕರೆಯಿಸಿದನು. ಅವಳಿಗೆ ಕುಮಾರನು ಸಿಕ್ಕಿದ ವೃತ್ತಾಂತವನ್ನು ಹೇಳಿ ಅವನಿಗೆ ಅಪಹಾರವರ್ಮನೆಂದು ಹೆಸರಿಟ್ಟನು. ಅನಂತರ ನವನಿಧಿಗಳನ್ನು ಪಡೆದ ಸೂರ್ಯನಂತೆ ರಾಜನು ಸುಖವಾಗಿದ್ದನು. ಆಗ ಮತ್ತೊಂದು ದಿನ, ೧೨೮. ಆ ವಾಮದೇವ ಮುನಿಯ ಶಿಷ್ಯನು ನೀವಾರ ಧಾನ್ಯವನ್ನು ತರುವುದಕ್ಕಾಗಿ ಕಾಡಿನ ಒಂದು ಪ್ರದೇಶಕ್ಕೆ ಬಂದನು. ಅಲ್ಲಿ ಅವನು ಅತಿಯಾದ ದುಃಖವುಳ್ಳ ಒಬ್ಬಳು ಮುದುಕಿಯನ್ನು ನೋಡಿದನು. ೧೨೯. ಬೆನ್ನುಬಾಗಿದೆ. ಕಿವಿಗಳು ಜೋತಾಡುತ್ತಿವೆ. ಗಲ್ಲವು ಬತ್ತಿಹೋಗಿದೆ. ಹಲ್ಲುಗಳು ಉದುರಿಹೋಗಿವೆ. ತಲೆಯು ತುಂಬ ಅಲ್ಲಾಡುತ್ತಿದೆ. ಹೀಗೆ ಮುಪ್ಪೇ ಆಕಾರವನ್ನು ತಳೆದು ವಿಂಧ್ಯ ಪರ್ವತದ ನಡುವೆ ಅಂಜದೆ ನಿಂತಿದೆಯೋ ಎಂಬಂತೆ, ಸುಡುವ ಬೆಂಕಿಗೆ ಹೆದರಿ ತಣ್ಣಗಿರುವ ನೀರಿನ ಹಳ್ಳದಲ್ಲಿದ್ದ ಮುದುಕಿಯು

ವ॥ ಅಂತಿರ್ದ ವೃದ್ಧೆಯಂ ಮುನಿಶಿಷ್ಯಂ ಕಂಡು

ಕಂ॥ ಎಲೆವೃದ್ಧೆ ವನದೊಳೇಕಂ
ತಱುತೊರ್ಬಳೆ ಕುಳ್ಳಿರ್ಪೆಯೆಂದೊಡೆ ಮತ್ತಂ
ಬೞಲುತೆ ಸುಯ್ದು ಮನಮಂ
ನಿಲಿಸಿ ಬೞಿಕ್ಕುಸಿರ್ವುದರ್ಕ್ಕೆ ಬಗೆಯಂ ತಳೆದಳ್ ೧೩೦

ವ॥ ಅದೆಂತೆಂದೊಡೆ

ಸಕಲಧರಾಧಿನಾಥ ನವರತ್ನಕಿರೀಟ ವಿರಾಜಿತಾಂಘ್ರಿಪಾ
ದುಕನತಿಮಿತ್ರ ರಾಜ ರಮಣೀಯ ಫಲಪ್ರದ ಮರ್ತ್ಯಪಾರಿಜಾ
ತಕನಭಿಯಾತಿಭೂಪ ಗಜವಾಜಿ ರಥಾಪ್ತಪದಾತಿ ದುರ್ಲಭಂ
ಜಕನೆನಲೊಪ್ಪುವಂ ಮಗಧವಲ್ಲಭನುಗ್ರ ವಿರೋಧಿ ದುರ್ಲಭಂ ೧೩೧

ವ॥ ಅಂತಾ ಮಗಧವಲ್ಲಭನಪ್ಪರಾಜಹಂಸಂ ತನ್ನರ್ಧಾಂಗಿಯಪ್ಪ ವಸುಮತಿಯ ಸೀಮಂತಕ್ಕಿಮ್ಮರಸನಪ್ಪ ಪ್ರಹಾರವರ್ಮನಂ ತನಗತಿಮಿತ್ರನಪ್ಪುದಱಿಂ ಕರಸಲಾತಂ ತನ್ನರಸಿಯಪ್ಪ ಪ್ರಿಯಂವರೆಯುಮಿರ್ವರ್ ಕುಮಾರರ್ ಸಹಿತ ಸಕಲಬಲವುಂ ಕೂಡಿಕೊಂಡು ಪುಷ್ಪಪುರಕ್ಕೆ ಬರ್ಪುದುಂ

ಕಾಣಿಸಿದಳು. ವ॥ ಹಾಗಿದ್ದ ಮುದುಕಿಯುನ್ನು ಮುನಿಯ ಶಿಷ್ಯನು ಕಂಡು. ೧೩೦. 'ಎಲೆ ಮುದುಕಿ ! ಈ ಕಾಡಿನಲ್ಲಿ ನೀನೊಬ್ಬಳೇ ಆಯಾಸಗೊಂಡು ಏಕೆ ಕುಳಿತಿದ್ದೀಯೆ' ಎಂದು ಕೇಳಿದನು. ಅದಕ್ಕವಳು ಮತ್ತೆ ಬಳಲುತ್ತಾ ಉಸಿರೆಳೆದುಕೊಂಡು ಮನಸ್ಸನ್ನು ಸರಿಪಡಿಸಿಕೊಂಡು ಮಾತನಾಡಲು ಮನಸ್ಸುಮಾಡಿದಳು. ವ॥ ಅದು ಹೇಗೆಂದರೆ– ೧೩೧. ಉಗ್ರರಾದ ಶತ್ರುಗಳಿಗೆ ದುರ್ಬಲನಾದ ಮಗಧರಾಜನು ಪ್ರಕಾಶಿಸುತ್ತಾನೆ. ಅವನ ಕಾಲಿನ ಪಾದುಕೆಗಳು ಸಕಲ ರಾಜರ ನವರತ್ನಖಚಿತವಾದ ಕಿರೀಟಗಳಿಂದ ಪ್ರಕಾಶಿಸುತ್ತವೆ. ಆವನು ಆಪ್ತರಾದ ಗೆಳೆಯರಿಗೆ ರಮಣೀಯವಾದ ಫಲಗಳನ್ನು ಕೊಡುವ ಭೂಲೋಕದ ಪಾರಿಜಾತ ವೃಕ್ಷವು. ದಂಡೆತ್ತಿಬಂದ ರಾಜರ ಆನೆ ಕುದುರೆ ರಥ ಕಾಲಾಳುಗಳ ದರ್ಪವನ್ನು ಮುರಿಯತಕ್ಕವನು. ವ॥ ಅಂತು ಆ ಮಗಧ ರಾಜನಾದ ರಾಜಹಂಸನು ತನ್ನ ಪತ್ನಿಯಾದ ವಸುಮತಿಯ ಸೀಮಂತಕ್ಕೆ ನಮ್ಮರಸನಾದ ಪ್ರಹಾರವರ್ಮನನ್ನು ಅವನಿಗೆ ತುಂಬ ಮಿತ್ರನಾದುದರಿಂದ ಕರೆಯಿಸಿದನು. ಆಗ ಅವನು ತನ್ನ ಅರಸಿಯಾದ ಪ್ರಿಯಂವದೆ, ಇಬ್ಬರು ಕುಮಾರರು ಮತ್ತು ಸಕಲ ಸೈನ್ಯ

ಕಂ॥ ಅರಿಮಾಳವೇಶ್ವರಂ ನಿಜ
ವಿರೋಧದಿಂ ಬಂದು ಮುತ್ತೆ ಮಗಧೋರ್ವೀಶಂ
ಧುರದೊಳ್ ಮೆಯ್ಮಱೆದಂ ನ
ಮ್ಮರಸಂ ಸಿಕ್ಕಲ್ಕೆ ಬಿಟ್ಟು ಕಳುಪಿದನಾತಂ ೧೩೨

ವ॥ ಅಂತುಬಿಟ್ಟು ಕಳುಪಲೆಮ್ಮರಸಂ ಕುಟುಂಬಸಹಿತಂ ತನ್ನ ಮಿಥಿಲಾಪುರಕೆ ಪೋಗುತಿರ್ದಾಗಳೊರ್ಬ ದೂತನಿದಿರ್ವಂದು

ಕಂ॥ ದುರುಳಂ ಪ್ರಹಾರವರ್ಮಂ
ಪರನೃಪತಿಯ ಕೈಯ್ಗೆ ಸಿಕ್ಕಿದಂ ರಾಜ್ಯಕ್ಕಾ
ನರಸನೆಂದು ವಿಕಟವರ್ಮಂ
ಬರವಸದಿಂ ಪಟ್ಟಬದ್ಧನಾದನಿಳೇಶಾ ೧೩೩

ವ॥ ಅಂತು ನಿನ್ನ ದಾಯಾದ್ಯಪ್ಪ ವಿಕಟವರ್ಮಂ ಪಟ್ಟಮಂ ಕಟ್ಟಿಕೊಂಡುದಲ್ಲದೆಯುಂ ನೀಂ ಬರ್ಪುದಂ ಕೇಳ್ದು ಬಲವಂ ಕೂಡಿಕೊಂಡು ಕೊಲಲ್ ಬರುತಿರ್ಪನೆಂದು ಬಂದ ದೂತಂ ಪೇೞಲರಸಂ ರಾಜಮಾರ್ಗಂ ಬಿಟ್ಟು ಅರಣ್ಯಮಾರ್ಗದೊಳ್ ಪೋಗುತಿರ್ಪಾಗಳ್

ಶಾ॥ ಕ್ರೂರವ್ಯಾಘ್ರ ವನೇಭ ಕೇಸರಿ ಮಹಾಕೋಳಾಹಳಾಂದೋಳ ಘೋ
ರಾರಣ್ಯಾಂತದೊಳದ್ದ ಭೇದದೊದವಿಂ ಬರ್ಪನ್ನೆಗಂ ಕಾರ್ಮುಕ
ಜ್ಯಾರಾವಂ ಮಿಗೆ ಬಾಣಮಂ ಸುರಿಯುತುಂ ವ್ಯಾಧರ್ಕಳೆಯ್ತಂದು ಸಂ
ಹಾರಂ ಮಾಡಿದರೆಮ್ಮ ಭೂಪಬಲಮಂ ಬೆಂಬತ್ತಿ ಬೆಂಬೀೞಿನಂ ೧೩೪

ವನ್ನು ಕರೆದುಕೊಂಡು ಪುಷ್ಪಪುರಕ್ಕೆ ಬಂದನು. ೧೩೨. ಶತ್ರುವಾದ ಮಾಳವ ರಾಜನು ದ್ವೇಷದಿಂದ ಬಂದು ಮುತ್ತಲು ಮಗಧರಾಜನು ಯುದ್ಧದಲ್ಲಿ ಮೂರ್ಛೆಹೊಂದಿದನು. ನಮ್ಮರಸನು ಸೆರೆಸಿಕ್ಕನು. ಆದರೆ ಅವನು ನಮ್ಮರಸನನ್ನು ಬಿಟ್ಟು ಕಳುಹಿಸಿದನು. ಹಾಗೆ ಬಿಡುಗಡೆ ಹೊಂದಿದ ನಮ್ಮ ಅರಸನು ಕುಟುಂಬದೊಡನೆ ತನ್ನ ಮಿಥಿಲಾ ನಗರಕ್ಕೆ ಹೋಗುತ್ತಿದ್ದನು. ಆಗ ಒಬ್ಬ ದೂತನು ಎದುರಾಗಿ ಬಂದು, ೧೩೩. "ರಾಜನೆ! ದುರುಳನಾದ ಪ್ರಹಾರವರ್ಮನು ಶತ್ರುರಾಜರ ಕೈಗೆ ಸಿಕ್ಕಿಕೊಂಡನು. ನಾನೇ ರಾಜ್ಯಕ್ಕೆ ರಾಜ' ಎಂದು ಹೇಳಿಕೊಂಡು ನೀನು ಸೆರೆಸಿಕ್ಕಿರುವದನ್ನು ನಂಬಿ ವಿಕಟವರ್ಮನು ತಾನೇ ಪಟ್ಟಾಭಿಷಿಕ್ತನಾಗಿದ್ದಾನೆ. ವ. ಹೀಗೆ ನಿನ್ನ ದಾಯಾದಿಯಾದ ವಿಕಟವರ್ಮನು ಪಟ್ಟವನ್ನು ಕಟ್ಟಿಸಿಕೊಂಡನು. ಅಲ್ಲದೆ ಈಗ ನೀನು ಬರುತ್ತಿರುವ ಸಮಾಚಾರವನ್ನು ಕೇಳಿ ಸೇನೆಯನ್ನು ಸೇರಿಸಿಕೊಂಡು ನಿನ್ನನ್ನು ಕೊಲ್ಲಲು ಬರುತ್ತಿದ್ದಾನೆ' ಎಂದು ಹೇಳಿದನು. ಆಗ ಇದನ್ನು ಕೇಳಿ ರಾಜನು ರಾಜಮಾರ್ಗವನ್ನು ಬಿಟ್ಟು ಕಾಡು ಹಾದಿಯನ್ನು ಹಿಡಿದು ಹೊರಟನು. ತರುವಾಯ ಕ್ರೂರವಾದ ಹುಲಿ, ಕಾಡಾನೆ ಮತ್ತು ಸಿಂಹಗಳ ಕೋಲಾಹಲ ಧ್ವನಿಯಿಂದ ಘೋರವಾದ ಕಾಡಿನಲ್ಲಿ ಅಡಗಿಕೊಂಡು ಯಾರಿಗೂ ಕಾಣದಂತೆ ಬರುತ್ತಿದ್ದನು. ಆಗ ಬೇಡರು ಬಿಲ್ಲಿನ ಬಳ್ಳಿಗಳನ್ನು ಜೇಗೈಯುತ್ತಾ ಬಾಣಗಳನ್ನು

ವ॥ ಅಂತು ಬೆಂಬತ್ತೆ

ಕಂ॥ ಭಿಲ್ಲರ್ಗಳ್ಕಿದ ಮೃಗಮುಡು
ವಲ್ಲಭನಂ ಸಾರ್ದೊಡಲ್ಲಿ ಪಾವಿನ ಭಯದಿಂ
ತಲ್ಲಣಿಸುವಂತಿರಾಯ್ತೆ ನ
ಗಿಲ್ಲಿ ವಿಪತ್ತೆಂದು ನೃಪತಿ ದುಃಖಿತನಾದಂ ೧೩೫

ವ॥ ಅಂತು ದುಃಖಿತನಪ್ಪಂತು ಕಿರಾತಪಡೆ ಪ್ರಹಾರವರ್ಮನ ಬಲಮಂ ನಿರ್ಮೂಲ ಮಂ ಮಾಳ್ಪಾಗಳಾನಂಜಿಯೆನ್ನ ಕೈಯೊಳಿರ್ದ ಕುಮಾರಸಹಿತಮೋಡಿಬಂದಿಲ್ಲಿರ್ಪುದಂ

ಕಂ॥ ಆದೊರ್ಂದು ಘೋರವಕ್ತ್ರಂ
ಶಾರ್ದೂಲಂ ಮೇಲೆವಾಯಲಾನಂಜಿ ಕರಂ
ಸಾರ್ದು ವನದಿಂ ಕರಾಗ್ರದೊ
ಳಿರ್ದ ಕುಮಾರನನರಣ್ಯದೊಳ್ ಬಿಸುಡಲೊಡಂ ೧೩೬

ವ॥ ಅಂತಾಶಿಶು ಸಮೀಪದೊಳಿರ್ದ ಕಪಿಲಾಸವದೊಳ್ ಪುಗುವುದುಮಲ್ಲಿಗಾ ಪುಲಿ ಪಾಯಲೊಡಂ

ಕಂ॥ ಮುನ್ನಂ ಶರಯಂತ್ರಮನ
ತ್ಯುನ್ನತಿಯಿಂ ಶಬರರೊಲ್ದು ಕಪಿಲಾಸವದೊಳ್
ಚೆನ್ನಸೆಯೆ ಮಾಡಿರಲ್ ಯಂ
ತ್ರಂ ನೆಳ್ಕನೆ ಪುಲಿಯ ಗೋಣನಜಿಯಿತ್ತಾಗಳ್ ೧೩೭

ಸುರಿಸುತ್ತಾ ಬಂದು ನಮ್ಮ ಅರಸನ ಸೈನ್ಯವನ್ನು ಬೆಂಬತ್ತಿದರು. ವ. ಹಾಗೆ ಬೆಂಬತ್ತಲು ೧೩೫. ಬೇಡರ ಭಯದಿಂದ ಜಿಂಕೆಯು ಚಂದ್ರನಲ್ಲಿಗೆ ಹೋದರೆ ಅಲ್ಲಿ ಹಾವಿನ (ರಾಹು ವಿನ) ಭಯದಿಂದ ತಲ್ಲಣಿಸುವ ಸ್ಥಿತಿಯೊದಗಿತು. ಹಾಗೆಯೇ ನನಗಿಲ್ಲಿ ವಿಪತ್ತು ಬಂದಿದೆ (ಒಂದು ಕಷ್ಟದಿಂದ ತಪ್ಪಿಸಿಕೊಂಡರೆ ಮತ್ತೊಂದು ಕಷ್ಟ ಬಂದಿತು) ಎಂದು ರಾಜನು ಚಿಂತಿಸಿದನು. ವ. ಹಾಗೆ ದುಃಖಿತನಾಗಲು ಕಿರಾತ ಸೇನೆಯು ಪ್ರಹಾರವರ್ಮನ ಬಲವನ್ನು ನಿರ್ಮೂಲಗೊಳಿಸಿತು. ಆಗ ನಾನು ಹೆದರಿ ಈ ನನ್ನ ಕೈಯಲ್ಲಿದ್ದ ಮಗು ವಿನೊಡನೆ ಓಡಿಬಂದು ಇಲ್ಲಿರುವಾಗ ೧೩೬. ಘೋರವಾದ ಮುಖವುಳ್ಳ ಹುಲಿ ಯೊಂದು ಗರ್ಜಿಸುತ್ತಾ ನನ್ನ ಮೇಲೆ ನುಗ್ಗಿತು. ಆಗ ನಾನು ಹೆದರಿ ಸ್ವಲ್ಪ ದೂರ ಓಡಿ ಕಾಡಿನಲ್ಲಿ ಕುಮಾರನನ್ನು ಬಿಸುಟೆನು ವ. ಆಗ ಆ ಮಗುವು ಹತ್ತಿರದಲ್ಲಿದ್ದ ಒಂದು ಹಸುವಿನ ಹೆಣದಲ್ಲಿ ಹೋಗಿ ಸೇರಿಕೊಂಡಿತು. ಅಲ್ಲಿಗೂ ಬಂದು ಆ ಹುಲಿಯು ನುಗ್ಗಿತು. ೧೩೭. ಅದಕ್ಕೆ ಮೊದಲೇ ಶಬರರು ಶರಯಂತ್ರವನ್ನು ಎತ್ತರಕ್ಕೆ ಎತ್ತಿ ಕಪಿಲೆಯ ಹೆಣದೊಳಕ್ಕೆ ಚಾತುರ್ಯದಿಂದ ಹೂಡಿದ್ದರು. ಆ ಯಂತ್ರವು ನೆಟ್ಟಗೆ ಹುಲಿಯ ಕೊರ

ವ॥ ಅದಂ ಮಱೆಯೊಳ್ ನೋಡುತಿರ್ದ ಶಬರರ್ ಬಂದು ಪುಲಿ ಕೆಡೆದುದಂ ಕಂಡು ಕುಮಾರನಂ ಕೊಂಡುಪೋದರೆಂದು ವೃದ್ಧೆ ಪೇೞಲ್ ಮುನಿಶಿಷ್ಯಂ ಕೇಳ್ದಾಶ್ಚರ್ಯಂಬಟ್ಟು ಬೇಡರ್ ಪೋದದಾರಿಯುಂ ತೋಱೆಮೆನಲಲ್ಲಿಯೆ ಪೋದರೆಂದು ವೃದ್ಧೆ ಪೇೞಲಾ ಮಾರ್ಗದೊಳಾಂ ಪೋಗಿ ನೋೞ್ಪೆನೆಂದಾ ಮುನಿಶಿಷ್ಯಂ ಪೋಗಿನೋಡಿ

ಕಂ॥ ಎಲ್ಲಿಂದಬಂದೆಯೆಂಬರೊ
ಕೊಲ್ಲಿವನಂ ಬೇಹುಕಾಱನೆಂಬರೊ ಪಾರ್ವಂ
ಮೆಲ್ಲಿದನೆಂಬರೊ ಧರೆಯೊಳ್
ಭಿಲ್ಲರ್ ಕಡುಮೂರ್ಖರೆಂದು ಚಿಂತಿಸುತಿರ್ದಂ ೧೩೮

ವ॥ ಅಂತು ಚಿಂತಿಸುತುಂ ನಡೆಯೆ ಮುಂದೆ

ಚಂ॥ ಅಡವಿಯೊಳಾರ್ದು ಬೇಡವಡೆ ಬೇಂಟೆಯನಾಡಿ ಶರಪ್ರಘಾತದಿಂ
ಕೆಡೆಪಿದ ಬೆಳ್ಮಿಗಂಗಳ ಕಳೇವರಮಂ ಪೊಸಕಿರ್ಚಿನಿಂದವಂ
ಸುಡು ಕಡಿ ಬಿರ್ಚು ಬಲ್ವಿಡಿದು ಕೊಯ್ ಕೊಱೆ ತನ್ನವರ್ಗೀಯೆ
ನಿಪ್ಪನಾಣ್ನುಡಿಗಳನಾಲಿಸುತ್ತುಮಿರದೆಯ್ದಿದನಾಮುನಿ ಭಿಲ್ಲ ಸಂಘಮಂ ೧೩೯

ವ॥ ಅಂತೆಯ್ದುವನ್ನೆಗಮಾ ಬೇಡವಡೆಯೊಳ್ ಕೆಲಂಬರ್

ಳನ್ನು ಕತ್ತರಿಸಿಹಾಕಿತು. ವ॥ ಅದನ್ನು ಮರೆಯಿಂದ ನೋಡುತ್ತಿದ್ದ ಶಬರರು ಬಂದು ಹುಲಿಯು ಸತ್ತು ಬಿದ್ದಿರುವುದನ್ನು ನೋಡಿ ಹುಡುಗನನ್ನು ಎತ್ತಿಕೊಂಡು ಹೋದರು" ಎಂದು ಮುದುಕಿಯು ಹೇಳಿದಳು. ಅದನ್ನು ಕೇಳಿ ಮುನಿಯ ಶಿಷ್ಯನು ಆಶ್ಚರ್ಯಪಟ್ಟು 'ಬೇಡರು ಹೋದ ದಾರಿಯನ್ನು ತೋರಿಸು' ಎಂದು ಕೇಳಿದನು,. 'ಈ ದಾರಿಯಲ್ಲಿ ಹೋದರೆಂದು' ಮುದುಕಿಯು ಹೇಳಲು 'ಆ ದಾರಿಯಲ್ಲಿ ನಾನು ಹೋಗಿ ನೋಡುವೆನು' ಎಂದು ಮುನಿಶಿಷ್ಯನು ಹೋಗಿ ನೋಡಿ ಆ ಶಿಷ್ಯನು. ೧೩೮. 'ಎಲ್ಲಿಂದ ಬಂದೆ ?' ಎಂದು ಕೇಳುತ್ತಾರೆಯೋ ! 'ಇವನು ಗೂಢಚಾರನು, ಕೊಲ್ಲು' ಎಂದೇನಾದರೂ ಹೇಳುತ್ತಾರೆಯೋ ! ಅಥವಾ 'ಬ್ರಾಹ್ಮಣ, ಮೃದುಸ್ವಭಾವದವನು' ಎಂದೇನಾದರೂ ಹೇಳುತ್ತಾರೆಯೋ ! ಭೂಮಿಯಲ್ಲಿ ಭಿಲ್ಲರು ಕಡುಮೂರ್ಖರು ಏನು ಮಾಡುವುದು ?' ಎಂದು ಯೋಚಿಸುತ್ತಿದ್ದನು. ವ॥ ಹಾಗೆ ಚಿಂತಿಸುತ್ತಾ ನಡೆಯುತ್ತಿರಲು ಮುಂದೆ, ೧೩೯. ಬೇಡರ ಪಡೆಯು ಅಡವಿಯಲ್ಲಿ ಬೇಟೆಯಾಡಿ ಬಾಣಗಳನ್ನು ಹೊಡೆದು ಕೊಂದ ಕಾಡುಮೃಗಗಳ ಶರೀರಗಳನ್ನು 'ಹೊಸದಾಗಿ ಬೆಂಕಿ ಹಚ್ಚಿ ಅವನ್ನು ಸುಡು, ಕತ್ತರಿಸು, ಬಿಡಿಸು, ಬಲಬಿಟ್ಟು ಕೊಯ್ಯು, ಕೊರೆ, ನಮ್ಮವರ್ಗೆಲ್ಲ ಕೊಡು' ಎಂದು ಮೊದಲಾಗಿ ಕೂಗಿ ಹೇಳುತ್ತಿತ್ತು. ಅವರ ಇಂಥ ಮಾತುಗಳನ್ನು ಕೇಳುತ್ತಾ ಆ ಮುನಿಯು ಎಲ್ಲಿಯೂ ನಿಲ್ಲದೆ ಬೇಡರ ಗುಂಪಿನ ಹತ್ತಿರ ಬಂದನು. ವ॥ ಹಾಗೆ ಬರುತ್ತಿರುವಾಗ ಆ ಬೇಡರ

ಕಂ॥ ಚಿಕ್ಕವನಂ ಬೇಂಟೆಗೆ ಬಲಿ
ಯಿಕ್ಕುವವೋ ಗುಱಿಯನೊಡ್ಡಿ ಕಿಡೆಪ್ಪುವವೋ ಮೇ
ಲಿಕ್ಕಿ ಬಿಸುಟಸಿಯನಾಸ್ಪವೋ
ಚಿಕ್ಕನೆಯೆಱಡಾಗಿ ಸೀಳ್ವವೋ ಎನುತಿರ್ದರ್ ೧೪೦

ವ॥ ಅಂದೆಂತೆಂಬುದಂ ಕೇಳ್ದಲ್ಲಿಗೊಂದುಪಾಯಮಂ ಕಾಣಲ್‌ವೇಟ್ಕುಮೆಂದು ಪರ ಪ್ರಾಣಾರ್ಥಂ ಪುಸಿದೊಡೆ ದೋಷಮಿಲ್ಲೆಂದು

ಕಂ॥ ಎಲೆಮಗನೆ ಪಡೆದೊಡಲ್ಗದ
ವಟಲಂ ಪುಟ್ಟಿಸುತುಮೆಲ್ಲಿಗೆಯ್ದಿದೆಯೋ ಎಂ
ದಟುತೆ ಪಡೆದಂತೆ ದುಃಖಿದೊ
ಳಳವಡಿಸಿದನೊಂದು ನಟನೆಯಂ ಮುನಿಶಿಷ್ಯಂ ೧೪೧

ವ॥ ಅಂತಟಲುತ್ತೆ ಬರುತಿರ್ದುದಂ ಕಂಡು ಕಿರಾತವಡೆ ಈ ಕುಮಾರಕನೀತನ ಮಗನಾ ಗದೆ ಮಾಣನೆಂದಲ್ಲಿ ಕೆಲಬರ್ ಕರುಣಿಸಿ ಕಣ್ಬನಿಯಂ ತೊಡೆದು ಕುಮಾರನಂ ಕುಡಲಾ ಮುನಿ ಕುಮಾರನಂ ಕೊಂಡುಬಂದು ವೃದ್ಧೆಯಿರ್ದ ತಾಣದೊಳವಳಂ ನೋಡಿ ಕಾಣದೆ ವಾಮದೇವರ ಸಮೀಪಕ್ಕೆಕೊಂಡುಬಂದು ತಚ್ಚಿತ್ರಮಂ ಪೇಟ್ಗೆಡೆಯೀತಂ ರಾಜಹಂಸನ ಮಿತ್ರ ಪುತ್ರನೀತನ ನಾತಂಗೆಕೊಟ್ಟು ಬಾಯೆಂದು ಕಳುಪಲಾತಂ ಬಂದು ಮಾಗಧಂಗೆ ಕೊಟ್ಟು ತದಾಶ್ಚರ್ಯಮಂ

ಪಡೆಯಲ್ಲಿ ಕೆಲವರು. ೧೪೦. "ಈ ಹುಡುಗನನ್ನು ಬೇಟೆಯ ಸಿದ್ಧಿಗಾಗಿ ಬಲಿ ಕೊಡೋಣವೇ ! ಗುರಿಗೆ ಒಡ್ಡಿ ಹೊಡೆದು ತಳ್ಳೋಣವೇ ! ಮೇಲಕ್ಕೆ ಎಸೆದು ಕತ್ತಿ ಯಿಂದ ಚುಚ್ಚಿ ಕೊಲ್ಲೋಣವೇ ! ಚೆಕ್ಕೆಂದು ಎರಡು ಹೋಳಾಗಿ ಸೀಳೋಣವೇ !" ಎಂದು ಚರ್ಚಿಸುತ್ತಿದ್ದರು. ವ॥ ಹಾಗೆ ಹೇಳಿದ ಮಾತುಗಳನ್ನೆಲ್ಲ ಕೇಳಿ "ಇದಕ್ಕೊಂದು ಉಪಾಯವನ್ನು ಕಂಡು ಹಿಡಿಯಬೇಕು. ಪರರ ಪ್ರಾಣ ರಕ್ಷಣೆಗಾಗಿ ಸುಳ್ಳು ಹೇಳಿದರೆ ದೋಷವಿಲ್ಲ" ಎಂದು ನಿಶ್ಚಯಿಸಿದನು. ಆ ಮುನಿ ೧೪೧. 'ಎಲೆ ಮಗನೆ, ನಿನ್ನನ್ನು ಪಡೆದದ್ದರಿಂದ ಅಡಗದಂಥ ದುಃಖವನ್ನುಂಟುಮಾಡಿ ಎಲ್ಲಿ ಹೋದೆಯೋ ?' ಎಂದು ಅಳುತ್ತಾ ದುಃಖಿತನಾದಂತೆ ಮುನಿ ಶಿಷ್ಯನು ನಟನೆ ಮಾಡಿದನು. ವ॥ ಹೀಗೆ ಅಳುತ್ತಾ ಬರುತ್ತಿದ್ದ ಮುನಿಯನ್ನು ಕಿರಾತರ ಗುಂಪು ನೋಡಿತು. ಈ ಕುಮಾರನು ಇವನ ಮಗನೇ ಆಗಿರಬೇಕು ಎಂದು ಚಿಂತಿಸಿ ಅವರಲ್ಲಿ ಕೆಲವರು ಅವರ ಕಣ್ಣೀರನ್ನೊರಿಸಿ ದಯೆ ದೋರಿ ಕುಮಾರನನ್ನು ಕೊಟ್ಟರು. ಆ ಮುನಿಯು ಕುಮಾರನನ್ನು ಕರೆದುಕೊಂಡು ಬಂದು ಮೊದಲಿದ್ದ ಜಾಗದಲ್ಲಿ ಮುದುಕಿಯನ್ನು ಹುಡುಕಿಯೂ ಕಾಣಲಿಲ್ಲ. ಅನಂತರ ವಾಮದೇವರ ಹತ್ತಿರಕ್ಕೆ ಕರೆತಂದು ಆ ಆಶ್ಚರ್ಯ ವೃತ್ತಾಂತವನ್ನು ಹೇಳಿದನು. 'ಇವನು ರಾಜಹಂಸನ ಗೆಳೆಯನ ಮಗನು. ಇವನನ್ನು ಅವನಿಗೆ ಕೊಟ್ಟುಬಾ' ಎಂದು ಹೇಳಿ

ಪೇಟಿಸ್ದೊಡರಸಂ ಸಂತಸಂಬಟ್ಟು ಪ್ರಹಾರವರ್ಮನ ದೆಸೆಗೆ ಸುಯ್ದು ಕುಮಾರಂಗುಪಹಾರವರ್ಮನೆಂದು ಪೆಸರಿಟ್ಟು ವಸುಮತಿಯ ಕೈಯೊಳ್ ಕೊಟ್ಟು ದಶದಿಙ್ಮಂಡಲದಿಂ ಪ್ರಸಿದ್ಧಿವಡೆದಿರ್ಪಂತೆ ದಶಕುಮಾರರಂ ಪಡೆಯೆ

ಮ॥ ಖಗಪೂಷರ್ ಸಲೆದಕ್ಷಯಾಗದೊದವಿಂ ಭಂಗಕ್ಕೆ ಪಕ್ಕಾಗಲಿಂ
ದೊಗೆದಿರ್ದರ್ ದಶಸೂರ್ಯರೆಂಬ ತೆಜಿದಿಂ ಪದ್ಮಾನುರಾಗಪ್ರಭೂ
ತಗುಣಂ ವಿಶ್ರುತದೇಹದೀಪ್ತಿ ಪರರಾಜದ್ವೇಷವೊಪ್ಪಲ್ ಪ್ರತಾ
ಪಿಗಳೆಂ ಪೆಂಪೆಸೆದಿರ್ದರೋ ದಶಕುಮಾರರ್ ಕೌತುಕ ಪ್ರೇಮದಿಂ ೧೪೨

ವ॥ ಅಂತು ದಶಕುಮಾರರ್ ರಾಜವಾಹನ ಪ್ರಮತಿ ಮಿತ್ರಗುಪ್ತ ಮಾತೃಗುಪ್ತ ಸುಶ್ರುತ ಪುಷ್ಪೋದ್ಭವ ಅರ್ಥಪಾಲ ಸೋಮದತ್ತ ಪ್ರಹಾರವರ್ಮ ಉಪಹಾರವರ್ಮರ್ ಅಂತಿರ್ದ ದಶಕುಮಾರರ್ ಭೃಂಗಿ ಭೇತಾಳ ವೈತಾಳಿ ಮರುಜರಿಯೆಂಬ ಶಸ್ತ್ರವಿದ್ಯೆಯೊಳಂ ಸಮಪಾದ ವೈಷಮ ಮಂಡಲಾಲೀಢಪ್ರತ್ಯಾಲೀಢಮೆಂಬ ಧನುರ್ವಿದ್ಯೆಯೊಳಂ ಚತುರಶೀತಿ ಪದ

ಕಳುಹಿಸಿದನು. ಆಗ ಆತನು ಬಂದು ಮಾಗಧನಿಗೆ ಕುಮಾರನನ್ನು ಕೊಟ್ಟು ಆ ಆಶ್ಚರ್ಯವನ್ನು ವಿವರಿಸಿದನು, ಅದನ್ನು ಕೇಳಿ ಅರಸನು ಸಂತೋಷಪಟ್ಟನು. ಪ್ರಹಾರವರ್ಮನಿಗಾಗಿ ದುಃಖಿಸಿದನು. ಕುಮಾರನಿಗೆ ಉಪಹಾರವರ್ಮನೆಂದು ಹೆಸರಿಟ್ಟು ವಸುಮತಿಯ ಕೈಯಲ್ಲಿ ಕೊಟ್ಟನು. ಹೀಗೆ ಹತ್ತು ದಿಙ್ಮಂಡಲದಿಂದ ಪ್ರಸಿದ್ಧಿಯನ್ನು ಪಡೆದಂತೆ ದಶಕುಮಾರರನ್ನು ಪಡೆದನು. ೧೪೨. ಖಗ ಪೂಷ ಎಂಬ ಇಬ್ಬರು ಸೂರ್ಯರು ದಕ್ಷನ ಯಾಗದ ಸಂಬಂಧದಲ್ಲಿ ಅವಮಾನಕ್ಕೆ ಗುರಿಯಾಗಲು ಉಳಿದ ಹತ್ತು ಸೂರ್ಯರು ಈ ರೂಪದಲ್ಲಿ ಹುಟ್ಟಿದ್ದಾರೆಯೋ ಎಂಬಂತೆ ದಶಕುಮಾರರು ತೋರಿದರು. ಈ ಹತ್ತು ಕುಮಾರರೂ ಲಕ್ಷ್ಮಿಯ ಅನುರಾಗದಿಂದ ಹೆಚ್ಚಿದ ಗುಣವುಳ್ಳವರಾಗಿ, ಪ್ರಕಾಶಮಾನವಾದ ದೇಹಕಾಂತಿಯುಳ್ಳವರಾಗಿ, ಶತ್ರು ರಾಜರ ಮೇಲಿನ ದ್ವೇಷವುಳ್ಳವರಾಗಿ. ಆಶ್ಚರ್ಯಕರವಾದ ಪ್ರೀತಿಯಿಂದ ಕೂಡಿದವರಾಗಿ ಪ್ರತಾಪಿಗಳೆಂಬ ಹಿರಿಮೆಯನ್ನು ಪಡೆದು ಪ್ರಕಾಶಿಸಿದರು—ಸೂರ್ಯನ ಪರವಾದ ಅರ್ಥ–1. ಪದ್ಮಾನುರಾಗ ಪ್ರಭೂತ ಗುಣಂ=ಕಮಲದ ಅನುರಾಗವರ್ಧಕರಾದ ವಿಶೇಷ ಗುಣವುಳ್ಳವನು. 2. ಪರರಾಜ ದ್ವೇಷ=ಕೃಷ್ಣಪಕ್ಷದ ಚಂದ್ರನ ದ್ವೇಷ. ಸೂರ್ಯನ ಬೆಳಕು ಬೀಳದೆ ಇದ್ದರೆ ಚಂದ್ರನು ಪ್ರಕಾಶಿಸುವುದಿಲ್ಲ. ಅಥವಾ ಸೂರ್ಯನ ಪ್ರಕಾಶದಲ್ಲಿ ಪ್ರಕಾಶಿಸುವುದಿಲ್ಲ. ಇದನ್ನೇ ದ್ವೇಷವೆಂದು ಕಲ್ಪಿಸಲಾಗಿದೆ. (ತನಗೆ ಪ್ರಿಯಳಾದ ಕಮಲಿನಿಯನ್ನು ಬಾಡಿಸುವುದರಿಂದ ಚಂದ್ರನ ಮೇಲೆ ದ್ವೇಷ). (ರಂ). ವ॥ ಹೀಗೆ ದಶಕುಮಾರರು-ರಾಜವಾಹನ, ಪ್ರಮತಿ, ಮಿತ್ರಗುಪ್ತ, ಮಾತೃಗುಪ್ತ, ಸುಶ್ರುತ, ಪುಷ್ಪೋದ್ಭವ, ಅರ್ಥಪಾಲ, ಸೋಮದತ್ತ, ಪ್ರಹಾರವರ್ಮ, ಉಪಹಾರವರ್ಮ—ಈ ದಶಕುಮಾರರನ್ನೂ ಭೃಂಗಿ[1]

1. ಇಂದ್ರಜಾಲ,

ವಿಧಾನವಾದ ಗಜಶಿಕ್ಷೆಯೊಳಂ ಪಂಚಧಾರಾಸಂಚಿತಮಾದಶ್ವಾರೋಹಣದೊಳಂ ಸ್ವರ್ಣನಾಭ ಚಿತ್ರಕ ವಾತ್ಸ್ಯಾಯನ ವಿರಚಿತ ಕಾಮಶಾಸ್ತ್ರದೊಳಂ ಶಬ್ದಾರ್ಥಾಲಂಕಾರ ವ್ಯಾಕರಣಚ್ಛಂದೋವಿಲಾಸಮೆಸೆವ ಶಬ್ದಶಾಸ್ತ್ರದೊಳಂ ಪ್ರವೀಣರಪ್ಪಂತು ಮಾಡಿ ರಾಜಹಂಸಂ ಸುಖದೊಳಿರ್ದಂ ಅದೆಂತೆನೆ

ಚಂ॥ ಸುಲಲಿತಮಪ್ಪಿನಂ ದಶಕುಮಾರಕರೊಪ್ಪುವ ಬಾಲಲೀಲೆಯಂ
ನಲವಿನೊಳಾವಗಂ ಪಡೆದು ಭಾವಿಸಿ ತನ್ನಯ ಚಿತ್ತದುತ್ಸವಂ
ಫಲಭರಮಾಗಿ ಚೆಲ್ವೆಸೆಯಲಿಂದ್ರಿಯಪಕ್ಷಕುಲಂ ನಿರಂತರಂ
ಚಲಿಸದೆರಂಜಿಸಿರ್ದನಿಳೆಯೊಳ್ ನಿಜಮಾಗಲಭಂಗವಿಕ್ರಮಂ ೧೪೩

ಗದ್ಯಂ॥ ಇದುನಿಖಿಲ ಬುಧಜನ ಮನೋವನಜವನ ದಿವಾಕರ ಕಿರಣ ಪ್ರತಿಮ ಪ್ರಸನ್ನ ಶ್ರೀಮದಭಂಗವಿಟ್ಠಲ ಪದಾಂಭೋಜ ಮತ್ತಮಧುಕರ ಮಧುಸೂದನ ನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ

ಬೇತಾಳ ವೈತಾಳಿ ಮರುಜರಿ[1] ಎಂಬ ಶಸ್ತ್ರವಿದ್ಯೆಯಲ್ಲಿಯೂ, ಸಮಪಾದ ವೈಷಮ[2] ಮಂಡಲಾ[3]ಲೀಢ ಪ್ರತ್ಯಾಲೀಢವೆಂಬ ಧನುರ್ವಿದ್ಯೆಯಲ್ಲಿಯೂ, ಎಂಭತ್ತೊನಾಲ್ಕು ವಿಧವಾದ ಗಜ ಶಿಕ್ಷೆಯಲ್ಲಿಯೂ, ಪಂಚಧಾರಾ[4] ಸಂಚಿತವಾದ ಅಶ್ವಾರೋಹಣ ಶಿಕ್ಷೆಯಲ್ಲಿಯೂ, ಸ್ವರ್ಣನಾಭ ಚಿತ್ರಕ ವಾತ್ಸ್ಯಾಯನರಿಂದ ವಿರಚಿತವಾದ ಕಾಮಶಾಸ್ತ್ರದಲ್ಲಿಯೂ, ಶಬ್ದಾಲಂಕಾರ ಅರ್ಥಾಲಂಕಾರ ವ್ಯಾಕರಣ ಛಂದಸ್ಸಿನ ವಿಲಾಸ ಇವುಗಳಿಂದ ಪ್ರಕಾಶಿಸುವ ಶಬ್ದಶಾಸ್ತ್ರದಲ್ಲಿಯೂ, ಮತ್ತೂ ಅನೇಕ ನೀತಿ ಶಾಸ್ತ್ರಗಳಲ್ಲಿಯೂ, ಪ್ರವೀಣರಾಗುವಂತೆ ಮಾಡಿ ರಾಜಹಂಸನು ಸುಖದಿಂದಿದ್ದನು-ಅದು ಹೇಗೆಂದರೆ, ೧೪೩. ದಶಕುಮಾರರ ಮನೋಹರವಾದ ಬಾಲಲೀಲೆಯನ್ನು ಸರ್ವದಾ ಅಕ್ಕರೆಯಿಂದ ನೋಡಿ ಅನುಭವಿಸಿದನು. ಅದರಿಂದ ಅವನ ಮನಸ್ಸಿನ ಹರ್ಷವು ಫಲಭರಿತವಾಗಿ ಮನೋಹರವಾಯಿತು. ಇಂದ್ರಿಯಗಳೆಂಬ ರೆಕ್ಕೆಗಳು ಸ್ವಲ್ಪವೂ ಚಲಿಸದೆ ಅಂದರೆ ಸ್ಥಿರ ಚಿತ್ತನಾಗಿ ಇಳೆಯಲ್ಲಿ ಅಭಂಗ ವಿಕ್ರಮನಾದ ರಾಜಹಂಸನು ಹೆಸರು ಅನ್ವರ್ಥವಾಗುವಂತೆ ರಂಜಿಸಿದನು. ಅಪ್ರತಿಹತ ಪರಾಕ್ರಮನಾಗಿ ಮೆರೆದನು. ಎಲ್ಲ ವಿದ್ವಾಂಸರ ಮನಸ್ಸೆಂಬ ಕಮಲವನ್ನರಳಿಸುವ ಸೂರ್ಯನ ಕಿರಣಕ್ಕೆ ಸಮನಾದ, ಪ್ರಸನ್ನನಾದ ಅಭಂಗ ವಿಟ್ಠಲನ

1. ಸತ್ತವರನ್ನು ಬದುಕಿಸುವ ವಿದ್ಯೆ ಮೊದಲಾದ ಭೂತವಿದ್ಯೆ
2. ವಿಷಮವಾಗಿ ಪಾದನ್ಯಾಸ.
3. ಬಾಣಬಿಡುವಾಗ ನಿಲ್ಲುವ ರೀತಿಗಳು
4. ಕುದುರೆಗಳ ಓಟದ ಬಗೆ

**ಅಭಿನವದಶಕುಮಾರ ಚರಿತೆಯೊಳ್**
**ಮಗಧೇಶ್ವರ ಮಾಳವರಾಜ ಯುದ್ಧವರ್ಣನಂ**
**ದಶಕುಮಾರೋದಯವರ್ಣನಂ ವಿದ್ಯಾಭ್ಯಾಸವರ್ಣನಂ**

## ದ್ವಿತೀಯಾಶ್ವಾಸಂ

ಪಾದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನಿಂದ ವಿರಚಿತವಾದ ಈ ಅಭಿನವ ದಶಕುಮಾರ ಚರಿತೆಯಲ್ಲಿ ಮಗಧೇಶ್ವರ ಮಾಳವರಾಜ ಯುದ್ಧವರ್ಣನ, ದಶಕುಮಾರೋದಯ ವರ್ಣನ, ವಿದ್ಯಾಭ್ಯಾಸ ವರ್ಣನ ಇವನ್ನೊಳಗೊಂಡ ಎರಡನೆಯ ಆಶ್ವಾಸ ಮುಗಿಯಿತು.

# ತೃತೀಯಾಶ್ವಾಸಂ

ಕಂ॥ ಶ್ರೀಮನ್ಮಗಧಮಹೀ ರತಿ
ಕಾಮಂ ರಿಪುರಾಜ ಮೌಳಿಮಾಣಿಕ್ಯ ರುಚಿ
ಸ್ತೋಮಾಂಘ್ರಿದ್ವಿತಯಂ ನಿ
ಸ್ಸೀಮದಿನೊಪ್ಪಿದನಭಂಗ ವಿಟ್ಠಲಭೃತ್ಯಂ ೧

ವ॥ ಅದಲ್ಲದೆಯುಂ

ಮ ಸ್ರ॥ ನುತಸೇವಾಯಾತ ವೀರಾದ್ಭುತ ರಸ ಜಲದೊಳ್ ಚಾಮರಗ್ರಾಹಿಣೀ ಹ
ಸ್ತತರಂಗ ಶ್ರೇಣಿಯೊಳ್ ಪಾಠಕಜಯಜಯ ಕೋಳಾಹಳಧ್ವಾನದೊಳ್ ಸ
ನ್ನತನಾನಾಭೂಪ ಮೌಳಿವ್ರಜ ಸರಸಿಜದೊಳ್ ಬಂಧು ಸಂದೋಹ ಗಂಭೀ
ರತೆಯೊಳ್ ಸೌಭಾಗ್ಯಶೋಭಾ ಪುಳಿನದೊಳೆಸೆದಂ ರಾಗದಿಂ ರಾಜಹಂಸಂ ೨

ವ॥ ಅಂತು ಸಕಲ ರಾಜಲೋಕಂಬೆರಸೊಡ್ಡೋಲಗಂ ಕೊಟ್ಟಿರ್ದು

ಚಂ॥ ಸಮುಚಿತ ಯೌವನೇಭ ಮದಲೇಖೆಯೋ ಯೌವನ ಪುಷ್ಪ ಭೃಂಗ ಕಾ
ಳಿಮವೊ ವಿಲಾಸಯೌವನ ಸುಧಾಕರ ಲಕ್ಷ್ಮಿಯೊ ಪೇಟಿನಲ್ ಕರಂ
ವಿಮಳಮುಖಾಬ್ಜದೊಳ್ ಮೊಳೆವತುಪ್ಪುಟ ಮೀಸೆಯೊಳೊಪ್ಪುತಿರ್ಪ ವಿ
ಕ್ರಮಯುತನಂ ನಿಜಾತ್ಮಸುತನಂ ಪದೆದೀಕ್ಷಿಸಿದಂ ನೃಪಾಲಕಂ ೩

೧. ಸಂಪದ್ಭರಿತವಾದ ಮಗಧ ಭೂಮಿಯೆಂಬ ರತಿಗೆ ಕಾಮನಾದ, ಶತ್ರುರಾಜರ ಕಿರೀಟಗಳ ಮಾಣಿಕ್ಯಗಳ ಕಾಂತಿಯು ದಟ್ಟವಾಗಿ ಹರಡಿದ ಪಾದದ್ವಯಗಳುಳ್ಳ ಅಭಂಗ ವಿಟ್ಠಲನ ಸೇವಕನು ಅಸಮನಾಗಿ ಪ್ರಕಾಶಿಸಿದನು. ಅದೂ ಅಲ್ಲದೆ ೨. ರಾಜಹಂಸ ಮಹಾರಾಜನು, ಪ್ರಸಿದ್ಧವಾದ ಸೇವೆ ಮಾಡಲು ಬಂದ ವೀರ[1] ಮತ್ತು ಅದ್ಭುತ ರಸಗಳೆಂಬ ನೀರಿನಲ್ಲಿ, ಚಾಮರ ಹಿಡಿದು ಬೀಸುತ್ತಿದ್ದ ತರುಣಿಯರ ಕೈಗಳೆಂಬ ಅಲೆಗಳ ಸಾಲಿನಲ್ಲಿ, ಹೊಗಳು ಭಟ್ಟರ ಜಯ ಜಯ ಎಂಬ ಕೋಲಾಹಲ ಧ್ವನಿಯಲ್ಲಿ, ನಮಸ್ಕರಿಸಿದ ಅನೇಕ ರಾಜರ ಕಿರೀಟ[2]ಗಳ ಗುಂಪೆಂಬ ಕಮಲದಲ್ಲಿ, ಬಂಧುಗಳ ಸಮೂಹದ ಗಂಭೀರತೆಯಲ್ಲಿ, ಸೌಭಾಗ್ಯವೆಂಬ ಪ್ರಕಾಶಿಸುವ ಮರಳರಾಶಿಯ ಮೇಲೆ, ರಾಗದಿಂದ ಪ್ರಕಾಶಿಸಿದನು. ಹೀಗೆ ಸಕಲ ರಾಜ ಸಮೂಹದಿಂದ ಕೂಡಿ ಓಲಗವನ್ನು ನಡೆಯಿಸುತ್ತಿದ್ದನು. ೩. ವಿಮಲವಾದ ಮುಖ ಕಮಲದಲ್ಲಿ ಮೊಳೆಯುತ್ತಿದ್ದ ಮೃದುಳವಾದ ಮೀಸೆಯಿಂದ ಪ್ರಕಾಶಿಸುತ್ತಿದ್ದ ಪರಾಕ್ರಮಶಾಲಿಯಾದ ತನ್ನ ಮಗನನ್ನು ರಾಜನು ಮೆಚ್ಚಿಗೆಯಿಂದ

ಟಿಪ್ಪಣಿ : 1. ಸೇವೆ ಮಾಡಲು ಬಂದ ವೀರರ ಅದ್ಭುತ ರಸವೆಂಬ ಜಲದಲ್ಲಿ, 2. ರಾಜರ ಶಿರಃ ಸಮೂಹವೆಂಬ ಕಮಲದಲ್ಲಿ. ಈ ಪದ್ಯದಲ್ಲಿ ರಾಜನಿಗೂ ಹಂಸಪಕ್ಷಿಗೂ ಹೋಲಿಕೆ (ರಂ).

ವ॥ ಅಂತರಸಂ ಕುಮಾರನಂ ನೋಡಿ ಯುವರಾಜಪಟ್ಟಕ್ಕೆ ಕಾಲವಾದುದೆಂದು ಮನದೊಳ್ ಭಾವಿಸಿ ಮಂತ್ರಿಗಳ್ವೆರಸು ಶುಭದಿನ ಶುಭ ಮುಹೂರ್ತದೊಳ್

ಶಾ॥ ಕಂದರ್ಪಂಗದಟೇಱಿ ಮಂದಪವನಂ ಸಂತೋಷಮಂ ಪೇೞಿ ಮಾ
ಕಂದಂ ಪೂಗುಡಿದೋೞಿ ಸಂತತವಸಂತಂ ಸೌಖ್ಯಮಂ ಬೀೞಿ ಸಾ
ನಂದಂ ಮಂತ್ರಿಗಳಪ್ಪುದಾಯ್ತೆನೆ ಕುಮಾರಂಗಾರ್ಪಿನಿಂ ತನ್ನ ಪೆಂ
ಪಿಂದಾರ್ಯ್ಗಂ ಯುವರಾಜಪಟ್ಟಮನಲಂಪಿಂ ಕಟ್ಟಿದಂ ಭೂಭುಜಂ ೪

ವ॥ ಅಂತು ರಾಜಹಂಸಂ ರಾಜವಾಹನಂಗೆ ಯುವರಾಜ ಪಟ್ಟಮಂ ಕಟ್ಟಿ ದಶಕುಮಾರರಂ ದಿಗ್ವಿಜಯಕ್ಕೆ ಕಳಿಪಲೆಂದು

ಮ॥ ದಿಗಿಭಂ ಘೀಱಿಡೆ ನಾಗಲೋಕದಹಿಗಳ್ ಬೆಂಡೇಱಿ ಭೂಭಾಗದೊಳ್
ಭಗಣಂ ಬೀಱಿ ಮರುತ್ತರಂಗಿಣಿ ಮಱಲ್ ತೋೞಲ್ ತುಳುಂಕಾಡೆ ಗೋ
ತ್ರಗಿರಿವ್ರಾತಮಳುಂಕೆಗೆಟ್ಟು ನಡುಗಲ್ ಶ್ರೀರಾಜಹಂಸಾಜ್ಞೆಯಿಂ
ದೊಗೆದತ್ತಂದು ಸುವರ್ಣ ಕೋಣಹತಿಯಿಂ ಪ್ರಸ್ಥಾನ ಭೇರೀರವಂ ೫

ನೋಡಿದನು. ಅವಳ ಎಳೆಮೀಸೆಯು, ಕಾಲೋಚಿತವಾದ ಯೌವನವೆಂಬ ಆನೆಯ ಮದೋದಕದ ಗೆರೆಯೋ ! ಯೌವನವೆಂಬ ಹೂವಿಗೆರಗಿದ ದುಂಬಿಗಳ ಕಪ್ಪೋ ! ವಿಲಾಸಯುಕ್ತವಾದ ಯೌವನವೆಂಬ ಚಂದ್ರನ ಕಳಂಕದ ಸೊಬಗೋ !-ಹೇಳು ಎಂಬಂತೆ ಕಾಣಿಸಿತು. ವ॥ ಅಂತು ಅರಸನು ಕುಮಾರನನ್ನು ನೋಡಿ ಯುವರಾಜ ಪಟ್ಟಾಭಿಷೇಕಕ್ಕೆ ಇದು ಸಕಾಲವೆಂದು ಮನಸ್ಸಿನಲ್ಲಿ ಚಿಂತಿಸಿ ಮಂತ್ರಿಗಳೊಡನೆ ಶುಭದಿನ ಶುಭಮುಹೂರ್ತದಲ್ಲಿ ೪. ಕಾಮನಿಗೆ ಶೌರ್ಯವು ಹೆಚ್ಚಿತು. ಮಂದಮಾರುತವು ಸಂತೋಷವನ್ನು ಹೆಚ್ಚಿಸಿತು. ಸಿಹಿ ಮಾವಿನಮರವು ಹೂಗೊಂಚಲನ್ನು ತೋರಿಸಿತು. ಹೀಗೆ ಒಂದೇ ಸಮನೆ ವಸಂತ ಋತುವು ಸೌಖ್ಯವನ್ನು ಹರಡಿತು. ಆನಂದದಿಂದ ಮಂತ್ರಿಗಳು ಆಗ ಬೇಕಾದುದು ಆಯಿತು ಎಂದು ಹೇಳಿದರು. ಇಂಥ ಸಮಯದಲ್ಲಿ ರಾಜನು ಕುಮಾರನಿಗೆ ವೈಭವದಿಂದ ತನ್ನ ಹಿರಿಮೆಗೆ ತಕ್ಕಂತೆ ಪ್ರೀತಿಯಿಂದ ಯುವರಾಜನ ಪಟ್ಟವನ್ನು ಕಟ್ಟಿದನು. ೫. ಆಗ ಶ್ರೀ ರಾಜಹಂಸನು ಅಪ್ಪಣೆ ಮಾಡಲು (ಡಂಗುರ ಸಾರುವವರ) ಚಿನ್ನದ ಕೋಲುಗಳ ಬಡಿತದಿಂದ ಪ್ರಯಾಣ ಕಾಲದಲ್ಲಿ (ಯುದ್ಧಕ್ಕಾಗಿ) ಭೇರಿಗಳು ಸದ್ದು ಮಾಡಿದುವು. ಅದರಿಂದ ದಿಗ್ಗಜಗಳು ಘೀಳಿಟ್ಟುವು. ನಾಗಲೋಕದ ಸರ್ಪಗಳು ಬಲಗುಂದಿದುವು. ನೆಲದ ಮೇಲೆ ನಕ್ಷತ್ರಗಳು ಉದುರಿದುವು. ದೇವಗಂಗೆಯು ತುಳುಕಿ ಮಳಲದಿಣ್ಣೆಗಳು ಎದ್ದು ತೂರಿದುವು. ಕುಲ ಪರ್ವತಗಳು ವಶತಪ್ಪಿ ನಡುಗಿದುವು.

ವ॥ ಅಂತು ಪ್ರಯಾಣಭೇರಿಯಂ ಪೊಯಿಸಿ

ಮ॥ ಗುಡಿಗುಡಾರಂ ಪಟಂ ಕೊಟ್ಟಗೆ ಪೆಗಲ್ವೊಱೆ ಪೆರ್ಬಂಡಿಗಳ್ ಪೆಂಪುವೆತ್ತಂ
ಗಡಿ ನಾನಾವಸ್ತ್ರರತ್ನಾಭರಣವಿತತಿ ವೈದ್ಯರ್ ಪೊಲಂ ಬಲ್ಲವರ್ಗಳ್
ಬಿಡಾರಾಣಕ್ಕಾಪ್ತವರ್ಗಂ ಸಹಿತವನಿಪನುಂ ಸೇನೆಯಂ ಕೊಟ್ಟು ತೇಜಂ
ಬಡೆವಲ್ ತತ್ಪುತ್ರರಂ ದಿಗ್ವಿಜಯಮನೆಸಗಲ್ ಕೂರ್ತು ಬೀೞ್ಕೊಟ್ಟನಾಗಳ್

ವ॥ ಮತ್ತಂ ೬

ಕಂ॥ ಕರಿತುರಗರಥ ಪದಾತಿಯ
ನರಸಂ ನಲವಿಂ ಕುಮಾರಕರ್ಗಿತ್ತು ದಿಶಾಂ
ತರಮಂ ಜಯಿಸಿಮೆನುತ್ತಾ
ದರದಿಂ ಬೀೞ್ಕೊಟ್ಟನಾರ್ಪಿನಿಂ ಶುಭದಿನದೊಳ್ ೭

ವ॥ ಅಂತು ಬೀೞ್ಕೊಡಲ್ ದಶಕುಮಾರರನೇಕ ಸೇನಾಸಮನ್ವಿತರ್ ಶುಭಶಕುನದಿಂ ಪೊಱಮಟ್ಟು ಬರ್ಪಾಗಳ್

ಇದು ದಲ್ ದಿಗ್ವಿಜಯಕ್ಕುಪಕ್ರಮಮೆನಲ್ ಸೇನಾ ಪದೋದ್ಧೂತ ಧೂ
ಳಿ ದಿನಾಧೀಶ್ವರ ರಾಜಮಂಡಲಮನಾರ್ಪಿಂ ಮುತ್ತಿಬೆಂಕೊಂಡು ನೀ
ರದಮಾರ್ಗಕ್ಕಿರದೆತ್ತಿ ಧೂಳಿಮಯಮಾಗಲ್ ಮಾಡಿ ಬಲ್ಪಿಂ ವಿಯ
ನ್ನದಿಯಂ ಪೂೞ್ದುಱೆ ಸತ್ಯಲೋಕದೊದವಂ ಮೀಱಿತ್ತಗುರ್ಬಪ್ಪಿನಂ ೮

ವ॥ ಹಾಗೆ ಪ್ರಯಾಣ ಸೂಚಕವಾದ ಭೇರಿಯನ್ನು ಹೊಯ್ಸಿ ೬. ಬಾವುಟ, ಡೇರೆ, ಬಟ್ಟೆ (ಗೋಣಿತಟ್ಟು ಇತ್ಯಾದಿ) ಕೊಟ್ಟಿಗೆ ಕಟ್ಟಲು ಬೇಕಾದ ಪದಾರ್ಥಗಳ ದೊಡ್ಡ ಹೊರೆ, ದೊಡ್ಡ ಬಂಡಿಗಳು, ದೊಡ್ಡ ದೊಡ್ಡ ಅಂಗಡಿಗಳು, ನಾನಾ ವಿಧ ಗಳಾದ ವಸ್ತ್ರ ಮತ್ತು ರತ್ನಾಭರಣಗಳ ಸಮೂಹ, ವೈದ್ಯರು, ದಿಕ್ಕು (ದಾರಿ ಮತ್ತು ಸ್ಥಳ) ಬಲ್ಲವರು. ಸೇನೆಯನ್ನು ನಿಲ್ಲಿಸುವ ಸ್ಥಳಕ್ಕೆ ಬೇಕಾದ ಆಪ್ತ ಜನರ ವರ್ಗ—ಇವು ಗಳಿಂದ ಕೂಡಿದ ಸೇನೆಯನ್ನು ಸಹಾಯಕ್ಕೆ ಕೊಟ್ಟು ರಾಜನು ಆ ಕುಮಾರರನ್ನು ಪರಾ ಕ್ರಮವನ್ನು ತೋರಿಸಿ ದಿಗ್ವಿಜಯ ಮಾಡುವುದಕ್ಕಾಗಿ ಪ್ರೀತಿಯಿಂದ ಕಳುಹಿಸಿದನು. ವ॥ ಮತ್ತು ೭. ಆನೆ ಕುದುರೆ ರಥ ಪದಾತಿಗಳನ್ನು ರಾಜನು ಪ್ರೀತಿಯಿಂದ ಕುಮಾರರಿಗೆ ಕೊಟ್ಟನು. 'ದಿಗ್ಭಾಗಗಳನ್ನೆಲ್ಲ ಗೆಲ್ಲಿರಿ' ಎಂದು ಹೇಳುತ್ತಾ ಶುಭ ದಿನದಲ್ಲಿ ಆದರದಿಂದ ಕೋಲಾಹಲ ಧ್ವನಿಯ ನಡುವೆ ಅವರನ್ನು ಬೀಳ್ಕೊಟ್ಟನು. ವ॥ ಹಾಗೆ ಬೀಳ್ಕೊಡಲು ಶುಭಶಕುನಗಳಾದವು. ದಶಕುಮಾರರು ಸೇನಾಸಹಿತರಾಗಿ ಹೊರಟು ಬರುತ್ತಿದ್ದರು. ಆಗ ೮. ಇದು ದಿಗ್ವಿಜಯಕ್ಕೆ ಪ್ರಾರಂಭವೆನ್ನುವಂತೆ ಸೇನೆಯ ಪಾದಗಳಿಂದ ಮೇಲೆದ್ದ ಧೂಳು ಸೂರ್ಯ ಚಂದ್ರಮಂಡಲಗಳನ್ನುಬ್ಬರಿಸುತ್ತಾ ಮುತ್ತಿತ್ತು. ಹಿಂದೆಯೇ ಮೇಘ ಮಂಡಲಕ್ಕೂ ಮೇಲೇರಿ ಆ ಪ್ರದೇಶವನ್ನೆಲ್ಲ ಧೂಳಿಮಯವಾಗಿಮಾಡಿತು, ತನ್ನ ಬಲುಹಿನಿಂದ ಗಂಗಾನದಿಯನ್ನು ಹೂತು ಹಾಕಿತು. ಅಲ್ಲದೆ ಭಯವಾಗುವಂತೆ ಸತ್ಯಲೋಕದವರೆಗೂ

ಚಂ॥ ಸುರಪತಿಬೆಚ್ಚಲಗ್ನಿ ಸೆಡೆಯಲ್ ಯಮನಳ್ಕಿರಲುಗ್ರ ರಾಕ್ಷಸಂ
ದೊರೆಗೆಡಲಬ್ಧಿಪಂ ಬೆದಱಲೇಣಧರಂ ನಡೆಗುಂದಲೆಯ್ದೆ ಕಿ
ನ್ನರಪತಿ ಬಳ್ಕಲೀಶನತಿಭೀತಿಯೊಳೊಂದಿರೆ ದಿಗ್ಗಜಕ್ಕೆ ಭೀ
ಕರಮೆನೆ ರಾಜವಾಹನನೃಪಂ ನಡೆಗೊಂಡೆಡೆಯೊಳ್ ನಿರಂತರಂ ೯

ಕಂ॥ ಪಟುಭಟ ಪದೋತ್ಥಧೂಳೀ
ಪಟಳಂ ಕವಿದಂಧಕಾರಮಂ ಪುಟ್ಟಿಸೆ ವಿ
ಸ್ಫುಟಮಕುಟರತ್ನ ರುಚಿಯಿಂ
ಕಟಕಂ ನಡೆಗೊಂಡುದಖಿಳಧಾತ್ರೀಪತಿಯಾ ೧೦

ವ॥ ಅಂತು ನಡೆಗೊಂಡು ತನ್ನ ರಾಜ್ಯಮಂ ಕಳೆದು ಹೇಮಕೂಟದ ತಳ್ಪಲ ಮಧ್ಯ ಸ್ಥಾನದೊಳ್ ಬೀಡಂ ಬಿಟ್ಟೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಚಂ॥ ನೊಸಲೊಳಗಿಟ್ಟ ಚೆಲ್ವತಿಲಕಂ ಪಿಡಿದಗ್ಗದ ಸೇಡುಗೋಲ್ ವಿಲಂ
ಬಿಸುವುಪವೀತಮೆಬ್ಬಿ ಬೆಱುಗಾಯದ ಡೋರೆಯೆಳಲ್ವ ಧೋತ್ರಮೇ
ಱಿಸಿದೆಡಗೈಯ್ಯ ಬಿಲ್ ಬೆರಳದರ್ಭೆ ಮಹಾದ್ಭುತಮಂ ಮನಕ್ಕೆ ಸೂ
ಚಿಸಲತಿ ಸಂಭ್ರಮಂಬೆರಸು ಬಂದನದೊರ್ವಸಮಂ ದ್ವಿಜಾಧಮಂ ೧೧

ಮೀರಿ ಹಬ್ಬಿತು. ೯. ರಾಜವಾಹನನು ಸೇನೆಯೊಡನೆ ನಡೆದು ಹೋದ ಪ್ರದೇಶದಲ್ಲಿ ಇಂದ್ರನು ಬೆಚ್ಚಿಬಿದ್ದನು, ಅಗ್ನಿಯು ಹೆದರಿದನು, ಯಮನು ಅಳುಕಿದನು, ನಿಋತಿಯು ತನ್ನ ಸಮತ್ವವನ್ನು ಕಳೆದುಕೊಂಡನು, ವರುಣನು ಬೆದರಿದನು, ವಾಯುವು ಬೀಸಲಿಲ್ಲ, ಕುಬೇರನು ವಿಶೇಷವಾಗಿ ಹೆದರಿ ಬಗ್ಗಿದನು, ಈಶನು ಅತಿ ಭೀತಿ ಹೊಂದಿದನು. ದಿಗ್ಗಜಗಳು ಹೆದರಿಬಿಟ್ಟವು, ೧೦. ಸೈನಿಕರ ಕಾಲುಗಳಿಂದೆದ್ದ ಧೂಳಿನ ಗುಂಪು ಎಲ್ಲೆಡೆ ಕವಿದು ಕತ್ತಲೆಯನ್ನುಂಟುಮಾಡಿತು. ಆಗ ಅವರ ಸ್ಫುಟವಾದ ಕಿರೀಟದ ರತ್ನ ಕಾಂತಿಯ ಬೆಳಕಿನಲ್ಲಿ ರಾಜನ ಸೇನೆಯು ನಡೆದು ಹೋಯಿತು. ವ॥ ಹಾಗೆ ಪ್ರಯಾಣಮಾಡಿ ತನ್ನ ರಾಜ್ಯವನ್ನು ಕಳೆದು ಹೇಮಕೂಟ ಪರ್ವತದ ತಪ್ಪಲ ಮಧ್ಯ ಪ್ರದೇಶದಲ್ಲಿ ಬೀಡನ್ನು ಬಿಟ್ಟು ಒಡ್ಡೋಲಗವನ್ನು ನಡೆಯಿಸುತ್ತಿದ್ದನು. ಆಗ ೧೧. ಹಣೆಯಲ್ಲಿ ಸುಂದರವಾದ ತಿಲಕ, ಕೈಯಲ್ಲಿ ಸೇಡು ತೀರಿಸಿಕೊಳ್ಳಲು ಸಹಾಯಕವಾದ ಶ್ರೇಷ್ಠವಾದ ಬಾಣ ?, ಉದ್ದಕ್ಕೆ ನೇತಾಡುತ್ತಿದ್ದ ಜನಿವಾರ, ಉಬ್ಬಿದ ದೊಡ್ಡ ಗಾಯಗಳ ದೊಗರು (ಕಲೆ) ನೆಲದಲ್ಲಿ ಎಳೆಯುತ್ತಿರುವ ಪಂಚೆ, ಎಡಗೈಯಿಗೇರಿಸಿದಬಿಲ್ಲು, ಬೆರಳಿನಲ್ಲಿ ದರ್ಭೆಯ ಪವಿತ್ರ, ಇವುಗಳಿಂದ ನೋಡುವವರ ಮನಸ್ಸಿನಲ್ಲಿ ಅದ್ಭುತ ಭಾವವನ್ನುಂಟು

ವ॥ ಅಂತೊರ್ಬಬ್ರಾಹ್ಮಣಂ ಬಂದು ಮಂತ್ರವಿಲ್ಲದಕ್ಷತೆಯಂ ಕೊಟ್ಟೊಡೆ ಇದೇನೈ ವಿಪರೀತವೇಷವೆಂದಾತನಂ ರಾಜವಾಹನಂ ಕೇಳ್ವುದುಮಾತನಿಂತೆಂದಂ

ಮ ಸ್ರ॥ ಅಱುನೀರ್ವಳ್ಳಂ ನೆೞಲ್ಗುಂದಿದ ತರುನಿಚಯಂ ಧೂಳಡರ್ದುರ್ಬಿನಿಚ್ಚಂ
ಪಱಿಗೆಟ್ಟಪ್ಪಾರ್ಸೆ ನಿಶ್ಚೇಷ್ಟೆಯ ತನುವನಿಶಂ ಬೋಧನಾಧ್ಯಾನವೇನುಂ
ಮಱಿದುಂ ಮಾಡಲ್ಮನಂಬಾರದ ಬಗೆಮಿಗೆ ಸರ್ವೋರ್ವಿಯೊಳ್ಕೂಡೆನೋಡಲ್
ಬಱನಾಗಲ್ ಪಾರ್ವರಾಗಲ್ ಕೆಲಬರೊಳೆದರಣ್ಯಕ್ಕೆ ಪಕ್ಕಾಗಿ ಬಂದರ್ ೧೨

ವ॥ ಅಂತು ಬಱನಱಿಯಟ್ಟೆ ಕಂದಮೂಲ ಫಲಂಗಳಂ ಮೆಲ್ದು ಜೀವಿಪೆವೆಂದು ಕೆಲಂಬರ್ ಬ್ರಾಹ್ಮಣರೊಡಗೂಡಿ ಶಿಶುವಾಗಿರ್ದೆನ್ನನೆತ್ತಿಕೊಂಡೆಮ್ಮ ತಾಯ್ತಂದೆಗಳರಣ್ಯಕ್ಕೆ ಬಂದು

ಕಂ॥ ಮಾತಂಗವೈರಿ ಸತ್ವಂ
ಮಾತಂಗಕನೆಂಬನಿರ್ದನಾವನದೊಳ್ ಮ
ತ್ತಾತನ ಪೆಸರಿಟ್ಟಂ ಮ
ತ್ತಾತಂ ಪೊರೆದೆನ್ನನೊಲ್ದು ನರಪತಿತನಯಾ ೧೩

ವ॥ ಅಂತು ಪೆಸರಿಡಲಾ ಮಾತಂಗಕನೆಮ್ಮೆಲ್ಲರ್ಗಲ್ಪ ಜೀವನೋಪಾಯಮಂ ಮಾಡುತಿರ್ದನ್ನಂ ಕೆಲವುದಿನದಿಂ ಮೇಲೆ

ಮಾಡುತ್ತಾ ಒಬ್ಬ ಬ್ರಾಹ್ಮಣಾಧಮನು ಬಂದನು. ವ॥ ಹಾಗೆ ಬಂದ ಬ್ರಾಹ್ಮಣನೊಬ್ಬನು ಮಂತ್ರವಿಲ್ಲದೆ ಅಕ್ಷತೆಯನ್ನು ಕೊಟ್ಟನು. ಆಗ ರಾಜವಾಹನನು 'ಇದೇನು ? ಬ್ರಾಹ್ಮಣ ವಿರುದ್ಧವಾದ ವೇಷ?' ಎಂದು ಅವನನ್ನು ಕೇಳಿದನು. ಅದಕ್ಕೆ ಅವನು ಹೀಗೆ ಹೇಳಿದನು. ೧೨. "ಜಲಪ್ರವಾಹಗಳು ಬತ್ತಿದುವು. ಮರಗಳ ಗುಂಪು ಒಣಗಿ ನೆರಳನ್ನು ಕೊಡುತ್ತಿಲ್ಲ. ಎಲ್ಲೆಲ್ಲೂ ಧೂಳು ಹೆಚ್ಚಿ ಹರಡಿ, ಸಂಚರಿಸುವ ಆಸೆಯಿಲ್ಲ. ಶರೀರದಲ್ಲಿ ಚಲನೆಯೇ ಇಲ್ಲ. ಬೋಧನೆ ಅಧ್ಯಾಪನ ಇವೇನನ್ನೂ ಮರೆತೂ ಮಾಡಲು ಮನಸ್ಸು ಬಾರದು. ಅದಕ್ಕೆ ಕಾರಣ ಬರಗಾಲ. ಹೀಗೆ ಭೂಮಿಯಲ್ಲೆಲ್ಲಾ ಬರಗಾಲವು ಹರಡಿತು. ಆಗ ಕೆಲವು ಬ್ರಾಹ್ಮಣರು ಕಾಡನ್ನು ಅರಸಿಬಂದರು. ವ॥ ಹಾಗೆ ಬರಗಾಲವು ಹೊಡೆದಟ್ಟಲು ಗೆಡ್ಡೆ ಗೆಣಸು ಹಣ್ಣುಗಳನ್ನು ತಿಂದು ಬದುಕುವೆವು ಎಂದು ಯೋಚಿಸಿ, ಕೆಲವರು ಬ್ರಾಹ್ಮಣರ ಜೊತೆ ಸೇರಿ ನನ್ನ ತಾಯಿತಂದೆಗಳು ಶಿಶುವಾಗಿದ್ದ ನನ್ನನ್ನು ಎತ್ತಿಕೊಂಡು ಕಾಡಿಗೆ ಬಂದರು. ೧೩. ರಾಜಕುಮಾರನೆ ! ಆ ಕಾಡಿನಲ್ಲಿ ಸಿಂಹದಂತೆ ಪರಾಕ್ರಮಿಯಾದ ಮಾತಂಗಕನೆಂಬವನೊಬ್ಬ ನಿದ್ದನು. ನನ್ನ ತಂದೆಯು ನನಗೆ ಆತನ ಹೆಸರನ್ನಿಟ್ಟು ಪ್ರೀತಿಯಿಂದ ಬೆಳೆಯಿಸಿದನು. ವ॥ ಹಾಗೆ ಹೆಸರಿಡಲು ಆ ಮಾತಂಗಕನು ನಮಗೆಲ್ಲ ಸ್ವಲ್ಪ–ಜೀವಿಸಲು ಸಹಾಯವನ್ನು ಮಾಡುತ್ತಿದ್ದನು. ಹಾಗೆ ಕೆಲವು ದಿನಗಳು ಕಳೆದವು. ಅಮೇಲೆ

ಮ॥ ಜನಕಂ ಮಾತೆ ಸಹೋದರರ್ ಕುಲಜರಾಪ್ತರ್ ಬಂಧುಗಳ್ ಸಂತತಂ
ವನವಾಸವ್ಯಥೆಯಿಂದವರ್ ಮಡಿದರಾನೀ ಬೇಡರೊಳ್ ಕೂಡಿ ಕಾ
ನನದೊಳ್ ಬೇಂಟೆಯನಾಡಿ ಕಳ್ದಿಱಿದು ದುಷ್ಕರ್ಮಕ್ಕೆ ಪಕ್ಕಾದ ಜೀ
ವನದಿಂದಿರ್ದಪೆನುರ್ವರಾಧಿಪತಿ ಕೇಳ್ ಸಂಸರ್ಗಮೇಗೆಯ್ಯದೋ ೧೪

ವ॥ ಎಂದಾದ್ವಿಜಾಧಮಂ ಪೇೞ್ದೊಡೆ ಮತ್ತಮರಸನನಿತುಂ ಗಾಯದ ಕಲೆಗೆ ಕಾರಣ ಮೇನೆಂದು ಕೇಳಲಾತನಿಂತೆಂದಂ

ಕಂ॥ ನೆರೆದಿರ್ದ ಪುರವನಿಱಿಯಲ್
ಕಿರಾತಪತಿ ಪೋಪ ಪದದೊಳಿದಿರೊಳ್ ಪಾರ್ವಂ
ಬರುತಿರ್ದನೊರ್ಬನಾತನ
ನರವರಿಸದೆ ಕೊಲ್ವೆವೆಂದು ಮುತ್ತಿದ ಪದದೊಳ್ ೧೫

ಗೋವಿಂಗಂ ಪಾರ್ವಂಗಂ
ಸಾವಡಸಲ್ ತನ್ನ ಜೀವದಾಸೆಯನುೞಿದೊ
ಲ್ದಾವಂ ಕಾದಪನಾತಂ
ಕೈವಲ್ಯಾಂಗನೆಯಕಾಂತನಪ್ಪನವೋಘಂ ೧೬

೧೪. ತಂದೆ, ತಾಯಿ, ಸಹೋದರರು, ನಮ್ಮ ಕುಲದಲ್ಲಿ ಹುಟ್ಟಿದ ಆಪ್ತರು, ಬಂಧುಗಳು ಎಲ್ಲರೂ ವನವಾಸದ ಕಷ್ಟದಿಂದ ಸತ್ತುಹೋದರು. ನಾನು ಈ ಬೇಡರ ಜೊತೆ ಸೇರಿ ಕೊಂಡು, ಕಾಡಿನಲ್ಲಿ ಬೇಟೆಯಾಡುತ್ತಾ ಕಳುವು ಮಾಡುತ್ತಾ ಇರಿದು ಕೊಲ್ಲುತ್ತಾ ದುಷ್ಕರ್ಮಕ್ಕೆ ಗುರಿಯಾಗಿ ಜೀವನ ನಡೆಯಿಸುತ್ತಿದ್ದೇನೆ. ಮಹಾರಾಜನೆ ! ಕೇಳು ! (ದುಷ್ಟರ) ಸಹವಾಸವು ಏನು ತಾನೇ ಮಾಡಿಸದು ? ವ॥ ಎಂದು ಆ ದ್ವಿಜಾಧಮನು ಹೇಳಲು ಅರಸನು 'ಅಷ್ಟು ಗಾಯಗಳ ಕಲೆಗೆ ಕಾರಣವೇನು' ಎಂದು ಅವನನ್ನು ಪ್ರಶ್ನಿಸಿ ದನು. ಅದಕ್ಕೆ ಆತನು ಹೀಗೆ ಹೇಳಿದನು. ೧೫. ಸಂಪದ್ಭರಿತವಾದ ಪಟ್ಟಣದವರನ್ನು ಇರಿಯುವುದಕ್ಕಾಗಿ ಬೇಡರ ಗುಂಪು ಹೋಗುತ್ತಿರುವಾಗ ಎದುರಾಗಿ ಒಬ್ಬ ಬ್ರಾಹ್ಮಣನು ಬರುತ್ತಿದ್ದನು. ಅವರಾಗ ತಡಮಾಡದೆ ಕೊಲ್ಲುವೆವೆಂದು ಆತನನ್ನು ಮುತ್ತಿದರು. ಆಗ, ೧೬. ಗೋವಿಗೂ ಬ್ರಾಹ್ಮಣನಿಗೂ ಸಾವು ಒದಗಿದ ವೇಳೆಯಲ್ಲಿ ತನ್ನ ಜೀವನದ ಆಸೆಯನ್ನೂ ತೊರೆದು ಯಾವನು ಅವರನ್ನು ರಕ್ಷಿಸುತ್ತಾನೆಯೋ ಅವನು ಮೋಕ್ಷ ಕಾಂತೆಗೆ ಕಾಂತನಾಗುವನು (ಮುಕ್ತಿಯನ್ನು ಪಡೆಯುವನು,) ಎಂಬ ನೀತಿಯನ್ನು ಕೇಳಿ ತಿಳಿದಿದ್ದೆನಾದುದರಿಂದ ನಾನು ಅವನನ್ನು ಕೊಲ್ಲಲು ಬಿಡಲಿಲ್ಲ. ಜೊಯಲ್ಲುವರ ಮೇಲೆ ಬಿದ್ದೆನು. ಆಗ ಅವರು ಆತನನ್ನು ಬಿಟ್ಟು ನನ್ನನ್ನೇ ಇರಿಯಲು ನಾನು ಪ್ರಾಣ ಕಳೆದು

ವ॥ ಎಂಬುದಂ ಕೇಳ್ದಱಿವೆನಪು ದಱಿಂದಾತನಂ ಕೊಲಲೀಸದೆ ಮೇಲೆ ಬಿರ್ದೊಡಾತನಂ ಬಿಟ್ಟೆನ್ನನಿಱಿಯಲಾಂ ಗತಜೀವಿತನಾಗೆ

ಮ॥ ಸಲೆಕಾಯ್ದುರ್ಕಿನ ದಾರೆಯಂ ಬಿಡು ನವದ್ವಾರಂಗಳೊಳ್‌ಕಾಯ್ದ ಕಾ
ವಲಿಯೊಳ್ ಕುಳ್ಳಿರಿಸೊಯ್ದು ಬಾಲವುೞುವುಂ ಕೀವಾಗಿ ತೀವಿರ್ದ ಸೀಂ
ಬುೞುವುಂ ಬಾಯ್ಗೆಱೆ ನೂಂಕು ಪಾಕುಳದೊಳೇಜಲ್ದೇರು ಶಸ್ತ್ರಾಸ್ತ್ರದು
ಯ್ಯಲೆಯಂ ಕೊಯ್‌ಕೊಱೆಯೆಂಬ ಕಾಲಯಮನಂ ಕಂಡೆಂ ಧರಾಧೀಶ್ವರಾ ೧೭

ಕಂ॥ ಪಂಚಮಹಾಪಾತಕಿಯಂ
ವಂಚಕನಂ ನುಡಿದು ಪುಸಿವನಂ ಸಂಗರದೊಳ್
ಹಿಂಚುವನಂ ಪುೞುಗೊಂಡದ
ಸಂಚದೊಳಿಕ್ಕಾವಕಾಲವೇೞದ ತೆಱದಿಂ ೧೮

ವ॥ ಎಂಬ ಘೋರಮುಖನಪ್ಪ ಕಾಲನ ಸಮೀಪಕ್ಕಾಂ ಪೋಗಲಾತನೆನ್ನಂ ನೋಡಿ

ಕಂ॥ ಈತಂ ಬ್ರಾಹ್ಮಣನಂ ಕಾ
ದಾತಂ ಕೃತಕೃತ್ಯನೀತನಂ ತಂದವರಾರ್
ಭೂತಳಕೆ ಪೋಗೆನುತ್ತುಂ
ಪ್ರೇತೇಶಂ ಮಗುಳ್ದು ಕಳುಪಿದಂ ಪದೆದೆನ್ನಂ ೧೯

ಕೊಂಡೆನು. ೧೭. "ಚೆನ್ನಾಗಿ ಕಾಯಿಸಿದ ಉಕ್ಕಿನ ದ್ರವದ ಧಾರೆಗಳನ್ನು ಶರೀರದ ಒಂಭತ್ತು ರಂಧ್ರಗಳಿಗೂ ಸುರಿ. ಕರೆದುಕೊಂಡು ಹೋಗಿ ಕಾದ ಕಾವಲಿಯ ಮೇಲೆ ಕುಳ್ಳಿರಿಸು. ಬಾಲದ ಹುಳುಗಳನ್ನೂ ಕೀವಾಗಿ ತುಂಬಿದ್ದ ಕೀವಿನ ಹುಳುಗಳನ್ನು ಬಾಯಲ್ಲಿ ಹಾಕು. ಪ್ರಾಕಾರದ ಮೇಲಿನಿಂದ ನೂಕು. ಪ್ರಾಕಾರದ ಮೇಲೇರಿದರೆ ಶಸ್ತ್ರಾಸ್ತ್ರಗಳ ಉಯ್ಯಾಲೆಯನ್ನು ಪರಿಸು. ಕೊಯ್ ಕತ್ತರಿಸು" ಎಂದು ಹೇಳುತ್ತಿದ್ದ ಕಾಲಯಮನನ್ನು, ಮಹಾರಾಜನೆ! ಕಂಡೆನು. ೧೮. "ಪಂಚ ಮಹಾ ಪಾತಕಗಳನ್ನು ಮಾಡಿದವನನ್ನೂ, ವಂಚಿಸಿದವನನ್ನೂ ಮಾತು ಕೊಟ್ಟು ಸುಳ್ಳು ಹೇಳಿದವನನ್ನೂ, ಯುದ್ಧದಲ್ಲಿ ಹೆದರಿ ಹಿಮ್ಮೆಟ್ಟಿದವನನ್ನೂ ಮುಂದೆಂದೂ ಎದ್ದು ಬರದ ಹಾಗೆ ಹುಳುಗಳ ಕೊಂಡಗಳಲ್ಲಿ ಹಾಕು" ವ॥ ಹೀಗೆ ಹೇಳುತ್ತಿದ್ದ ಭಯಂಕರವಾದ ಮುಖವುಳ್ಳ ಯಮನ ಹತ್ತಿರಕ್ಕೆ ಹೋದೆನು, ಆಗ ಆತನು ನನ್ನನ್ನು ನೋಡಿ. ೧೯. 'ಇವನು ಬ್ರಾಹ್ಮಣನನ್ನು ಕಾಪಾಡಿದವನು. ಕರ್ತವ್ಯವನ್ನು ಮಾಡಿದ ಪುಣ್ಯಶಾಲಿ. ಈತನನ್ನು ಇಲ್ಲಿಗೆ ತಂದವರು ಯಾರು ?, ಮತ್ತೆ ನೀನು ಭೂಮಿಗೇ

ವ॥ ಅಂತಾ ಯಮನೆನ್ನಂ ಕಳುಪಲ್ ಆಂ ಬರ್ಪಾಗಳ್ ಮುಂದೆ ನಾಂ ಕಾದ ಬ್ರಾಹ್ಮಣನೆನ್ನ ಕಳೇವರಮಂ ಸಂಸ್ಕರಿಸಲೆಂದಿರ್ಪಾಗಳ್

ಕಂ॥ ಗಣನೆಗರಿದೆನಿಪ ದುಷ್ಕೃತ
ಗಣಮಂ ಪರಿಹರಿಸುವಿಷ್ಟ ದೈವಕ್ಕೆ ಸಲ
ಕ್ಷಣಭಜನೆಯೆಸೆಯೆ ದಂಡ
ಪ್ರಣತಂ ತಾನಾದನೇೞ್ವತೆಱದಿಂದೆೞ್ದೆಂ ೨೦

ವ॥ ಅಂತಾನೆೞ್ದುದಂ ಕಂಡಾಬ್ರಾಹ್ಮಣಂ ತನಗೆ ಪ್ರಾಣಮಿರ್ಮಡಿಸಿದಂತೆ ಸಂತಸಂ ಬಟ್ಟಾತನೆನ್ನಂ ಮನೆಗೆ ಕೊಂಡೊಯ್ದು ಶಸ್ತ್ರಹತಿವ್ರಣಮಂ ಮಾಣಿಸೆ ಬೞಿಕ್ಕೆ ನಾಂ ಪೋದಪೆನೆನೆ ಮತ್ತಂ ಕಿಱಿದುದಿನಮಿರಿಸಿಯಾತನಿಂ ಮಂತ್ರೋಪದೇಶಮಂ ಕೈಕೊಂಡು ಆತನಂ ಕಳುಪಿ ಬೞಿಕ್ಕೆನಗೆ ವೈರಾಗಂ ಪುಟ್ಟಲೀ ಹೇಮಕೂಟಪ್ರದೇಶಕ್ಕೆ ತಪಂಬಡಲ್ ಬಂದಿರ್ದಪೆಂ. ಇನ್ನೇಕಾಂತದೊಳೊಂದು ಕಾರ್ಯಮಂ ಪೇೞ್ದಪೆನೆನಲರಸಂ ವಿಸ್ಮಯಂಬಟ್ಟು ಏಕಾಂತಮಂ ಬೞಿಕಪೇೞೆಂದಾತನಂ ಕಳುಪೆ

ಮ॥ ದಿನಯಾತ್ರಾನಿಗಮಕ್ರಮಕ್ಕೆ ವಿಷಮಂ ಸಪ್ತಾಶ್ವಮಿನ್ನೊಂದು ವಾ
ಹನಮಂತಂದು ಸಮಂತುರಂಗಮೆನಿಪಂತಾಂ ಮಾೞ್ಪೆನೆಂಬೊಂದು ಭಾ
ವನೆಯಿಂದುತ್ಸವರಾಗಮಂ ತಳೆದು ಸೂರ್ಯಂ ಪಶ್ಚಿಮಾಂಭೋಧಿಯಂ
ಮನವೊಲ್ದೆಯ್ದಿದನೆಂದು ಬಣ್ಣಿಸೆಜಗಂ ಚೆಲ್ವಾಯ್ತು ಸಂಧ್ಯಾಗಮಂ ೨೧

ಹೋಗು' ಎಂದು ಹೇಳಿ ಯಮನು ನನ್ನನ್ನು ಮೆಚ್ಚಿ ಮತ್ತೆ ಕಳುಹಿಸಿದನು. ವ॥ ಹಾಗೆ ಆ ಯಮನು ನನ್ನನ್ನು ಕಳುಹಿಸಲು, ಬರುತ್ತಾ ಮುಂದೆ ನಾನು ಕಾಪಾಡಿದ ಬ್ರಾಹ್ಮಣನು ನನ್ನ ಶರೀರವನ್ನು ಸಂಸ್ಕರಿಸಲು ಯತ್ನಿಸುತ್ತಿದ್ದುದನ್ನು ಕಂಡೆನು. ಆಗ, ೨೦. ಲೆಕ್ಕ ಮಾಡಲು ಆಗದಷ್ಟು ಮಾಡಿದ ಪಾಪಗಳ ಸಮೂಹವನ್ನು ಪರಿಹರಿಸುವ ಇಷ್ಟ ದೇವತೆಗೆ, ಲಕ್ಷಣವಾಗಿ ಭಜನೆಯನ್ನು ಮಾಡಲು ಸಾಷ್ಟಾಂಗ ಪ್ರಣಾಮವನ್ನು ಮಾಡಿದ ಮನುಷ್ಯನು ಮೇಲಕ್ಕೆ ಏಳುವ ರೀತಿಯಲ್ಲಿ ಸತ್ತು ಮಲಗಿದ್ದ ನಾನು ಎದ್ದೆನು. ವ॥ ಹಾಗೆ ನಾನು ಎದ್ದುದನ್ನು ಕಂಡು ಆ ಬ್ರಾಹ್ಮಣನು ತನಗೆ ಪ್ರಾಣವು ಇಮ್ಮಡಿಸಿದಂತೆ ಸಂತೋಷಪಟ್ಟನು. ಆತನು ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಶಸ್ತ್ರಗಳಿಂದಾದ ಗಾಯಗಳನ್ನು ವಾಸಿಮಾಡಿದನು. ಬಳಿಕ ತಾನು ಹೋಗುತ್ತೇನೆಂದು ಹೇಳಿದರೂ ಬಿಡದೆ ಮತ್ತೆ ಕೆಲವು ದಿನಗಳು ಇರಿಸಿಕೊಂಡಿದ್ದನು. ಅನಂತರ ಆತನಿಂದ ಮಂತ್ರೋಪದೇಶವನ್ನು ಪಡೆದು ಆತನನ್ನು ಕಳುಹಿಸಿದೆನು. ಬಳಿಕ ನನಗೆ ವೈರಾಗ್ಯವು ಹುಟ್ಟಲು ಈ ಹೇಮಕೂಟ ಪ್ರದೇಶಕ್ಕೆ ತಪಸ್ಸುಮಾಡಲು ಬಂದಿದ್ದೇನೆ. ಇನ್ನು ಏಕಾಂತದಲ್ಲಿ ಒಂದು ಕೆಲಸವನ್ನು ಹೇಳುತ್ತೇನೆ ಎಂದು ಹೇಳಿದನು, ಅದನ್ನು ಕೇಳಿ ಅರಸನು ಆಶ್ಚರ್ಯಪಟ್ಟು 'ಏಕಾಂತವನ್ನು ಬಳಿಕ ಹೇಳು' ಎಂದು ಹೇಳಿ ಆತನನ್ನು ಕಳುಹಿಸಿದನು. ೨೧. "ದಿನದ ಪ್ರಯಾಣಕ್ಕೆ ಏಳು ಕುದುರೆಗಳು ವಿಷಮವಾಗಿವೆ, ಸಾಲವು. ಇನ್ನೊಂದು ಕುದುರೆಯನ್ನು ತಂದು ಕುದುರೆಗಳು ಸಮ ಸಂಖ್ಯೆಯಲ್ಲಿರುವಂತೆ

ಕಂ॥ ಮೂಡಣವಾರ್ಧಿಯೊಳೊಪ್ಪುವ
ಬಾಡಬಶಿಖಿಪಶ್ಚಿಮಾಬ್ಧಿಯೌರ್ವಾನಳನಂ
ನೋಡಲ್ ಬರ್ಪಂತಿರ್ದುದು
ನೀಡುಂ ಕೆಂಪಡರ್ದು ಸಂಜೆಯೊಳ್ ರವಿಬಿಂಬಂ ೨೨

ವ॥ ಅಂತು ಸಂಧ್ಯಾಕಾಲದೊಳೋಲಗಮುಂ ವಿಸರ್ಜಿಸಿ ಸಂಧ್ಯಾವಂದನಾದಿ ಕ್ರಿಯೆಗಳಂ ಮಾಡಿ ಕುಳ್ಳಿರ್ದು ದೌವಾರಿಕನಂ ನೋಡಿ ಏಕಾಂತಮಂ ಪೇಳ್ವೆನೆಂದ ಬ್ರಾಹ್ಮಣನಂ ಕರೆಯೆನಲ ವನಾತನಂ ಕರೆವುದುಂ

ಕಂ॥ ಮೆಯ್ಯ ಕೃತಪುಣ್ಯವೆನುತೆನು
ತೊಯ್ಯನೆ ಪದವಿಡುತೆಬಂದು ನೃಪತಿಗೆ ನಲವಿಂ
ಕೈಯೆತ್ತಿ ಪರಸಿ ನಿನಗೇ
ಗೆಯ್ಯಲ್ವೇಟ್ಕುಂದೊಡರಸ ಚಿತ್ತವಿಸೆಂದಂ ೨೩

ವ॥ ಅಂತರಸಂಗಾಬ್ರಾಹ್ಮಣನಿಂತೆಂದಂ

ಕಂ॥ ಸಕಲಾಭರಣಾನ್ವಿತೆ ಕ
ನ್ನಿಕೆಯೊರ್ಬಳ್ ನನ್ನ ಬಟಿಗೆ ಬಂದೆನಗೀ ಮಾ
ಣಿಕವಂ ಕೊಟ್ಟೆನ್ನಿದಿರೊಳ್
ಮುಕುಳಿತ ಕರಕಮಳೆಯಾಗಿ ಮತ್ತಿಂತೆಂದಳ್ ೨೪

ಮಾಡುವೆನು' ಎಂದು ಆಲೋಚಿಸಿ ಅದರಿಂದ ಉಂಟಾದ ಸಂತೋಷದ ರಾಗವನ್ನು ತಳೆದು ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು ಎಂದು ಜಗತ್ತು ವರ್ಣಿಸುವ ಹಾಗೆ, ಸಂಧ್ಯೆಯ ಆಗಮನವು ಸುಂದರವಾಯಿತು ೨೨. ಸಂಜೆಯಲ್ಲಿ ಸೂರ್ಯ ಬಿಂಬವು ತುಂಬ ಕೆಂಪಾಗಿ, ಪೂರ್ವ ಸಮುದ್ರದಲ್ಲಿ ಪ್ರಕಾಶಿಸುವ ಬಡಬಾಗ್ನಿಯು ಪಶ್ಚಿಮ ಸಮುದ್ರದಲ್ಲಿರುವ ಔರ್ವಾಗ್ನಿಯನ್ನು ನೋಡಲು ಬರುತ್ತಿರುವಂತೆ ಕಾಣಿಸಿತು; ವ॥ ಅಂತು ಸಂಜೆಯಲ್ಲಿ ರಾಜಸಭೆಯನ್ನು ಮುಗಿಸಿ ಅರಸನು ಸಂಧ್ಯಾ ವಂದನೆ ಮೊದಲಾದ ವಿಧಿಗಳನ್ನು ಮಾಡಿ ಮುಗಿಸಿ ಕುಳಿತುಕೊಂಡನು. ತರುವಾಯ 'ಏಕಾಂತದಲ್ಲಿ ಹೇಳುವೆನೆಂದ ಬ್ರಾಹ್ಮಣನನ್ನು ಕರೆತಾ' ಎಂದು ದ್ವಾರಪಾಲಕನಿಗೆ ಹೇಳಲು ಅವನು ಅವನನ್ನು ಕರೆತಂದನು, ೨೩. 'ಈ ದೇಹವು ಮಾಡಿದ ಪುಣ್ಯವಿದು' ಎಂದು ಯೋಚಿಸುತ್ತಾ ಆ ಬ್ರಾಹ್ಮಣನು ನೆಟ್ಟಗೆ ನಡೆದುಬಂದು ರಾಜನಿಗೆ ಕೈಯೆತ್ತಿ ಹರಸಿದನು. ನಿನಗೆ ನಾನೇನು ಮಾಡಬೇಕು' ಎಂದು ಅರಸನು ಕೇಳಿದನು. ಅದಕ್ಕೆ ಅವನು 'ಅರಸ, ಕೇಳು' ಎಂದು ಹೇಳಿದನು. ವ॥ ಅರಸನಿಗೆ ಆ ಬ್ರಾಹ್ಮಣನು ಹೀಗೆ ಹೇಳಿದನು. ೨೪. "ಸಕಲಾಭರಣಗಳಿಂದ ಅಲಂಕರಿಸಿಕೊಂಡಿದ್ದ ಕನ್ಯೆಯೊಬ್ಬಳು ನನ್ನ ಹತ್ತಿರಕ್ಕೆ ಬಂದಳು ಮತ್ತು ಈ ಮಾಣಿಕ್ಯವನ್ನು ಕೊಟ್ಟು ನನ್ನ ಮುಂದೆ ಕರಕಮಲಗಳನ್ನು

ಕಂ॥ ನಾಳೆ ಮಗಧೇಶನಣುಗನ
ಪಾಳೆಯುಮೀ ಠಾವನೆಯ್ದಿ ಬಿಡುಗುಂ ತದ್ಭೂ
ಪಾಳಂ ಸತ್ಕ್ರಮದಿಂ ಪಾ
ತಾಳಕ್ಕೆಯ್ತಂದು ನಿನಗೆ ರಾಜ್ಯಮನೀವಂ ೨೫

ವ॥ ಅದಲ್ಲದೆಯುಂ

ಕಂ॥ ನಿನ್ನ ಶರೀರಂ ವಂಶಂ
ಚೆನ್ನಾದಪುದೆನಗೆ ನೀನೆ ಪತಿಯಾದಪೆ ಮ
ತ್ಪನ್ನಗಲೋಕಂ ನಿನಗ
ಕ್ಕುಂ ನೆಟ್ಟನೆನಂಬು ಮದ್ವಚೋವೃತ್ತಕಮಂ ೨೬

ವ॥ ಎಂದಾಕನ್ಯಕೆ ಪೇೞ್ದೊಡೆನ್ನಶರೀರಂ ವಂಶಂ ಪೊಸತಪ್ಪುಪಾಯಂ ನಾಗಲೋಕದ ರಾಜ್ಯಮಪ್ಪಕ್ರಮಂ ನಿನಗಮೆನಗಂ ಸಂಗಮಮಪ್ಪನುವೇತೆಱದಿಂದಪ್ಪುದೆಂದಾಂ ಕೇಳಲ್ ಮಗುೞಿಂತೆಂದಳ್

ಉ॥ ಈ ಗುಹೆಯೊಳ್ ಮಹಾಗ್ನಿತ್ರಿತಯಂ ನೆಲಸಿರ್ಪುದಲ್ಲಿ ಮಂತ್ರ ನಾ
ನಾಗಮಮಿರ್ಪಪುಸ್ತಕಮುಮುಂಟದಱಾದಿಯ ಮಂತ್ರ ಜಾಪ್ಯದಿಂ
ಬೇಗದೊಳಗ್ನಿಯಂಪುಗು ಮಗುೞ್ದು ತದುರ್ವಿಪನೊಂದು ಮಂತ್ರ ಸಂ
ಯೋಗದೊಳೆತ್ತುವಂ ನಿಜಶರೀರವನಿಂತಿದಮೋಘವಾಚಕಂ ೨೭

ಜೋಡಿಸಿ ನಿಂತು ಹೀಗೆ ಹೇಳಿದಳು. ೨೫. ‘ನಾಳೆ ಮಗಧರಾಜನ ಕುಮಾರನು ಈ ಸ್ಥಳಕ್ಕೆ ಬಂದು ಪಾಳೆಯವನ್ನು ಬಿಡುವನು. ಮತ್ತು ಆ ರಾಜನು ನ್ಯಾಯವಾದ ರೀತಿಯಿಂದ ಪಾತಾಳಕ್ಕೆ ಬಂದು ನಿನಗೆ ರಾಜ್ಯವನ್ನು ಕೊಡುವನು. ವ॥ ಅದೂ ಅಲ್ಲದೆ. ೨೬. ನಿನ್ನ ಶರೀರವೂ ವಂಶವೂ ಸುಂದರವಾಗುತ್ತದೆ. ನನಗೆ ನೀನೇ ಪತಿಯಾಗುತ್ತೀಯೆ. ನೀನು ನನ್ನ ನಾಗಲೋಕವನ್ನು ಸೇರುವೆ. ನನ್ನ ಮಾತನ್ನು ನಂಬು ! ವ॥ ಎಂದು ಆ ಕನ್ನಿಕೆಯು ಹೇಳಿದಳು. ‘ನನ್ನ ಶರೀರವೂ ವಂಶವೂ ಹೊಸದಾಗುವ ಉಪಾಯ ವಾವುದು ? ನಾಗಲೋಕದ ರಾಜ್ಯವು ಸಿಕ್ಕುವ ಕ್ರಮವು ಯಾವುದು ? ನಿನಗೂ ನನಗೂ ಸಂಗಮವು ಯಾವ ರೀತಿಯಿಂದಾಗುವುದು ?’ ಎಂದು ನಾನು ಕೇಳಲು ಅವಳು ಮತ್ತೆ ಹೇಳಿದಳು. ೨೭. ಈ ಗುಹೆಯಲ್ಲಿ ಶ್ರೇಷ್ಠವಾದ ತ್ರೇತಾಗ್ನಿಗಳಿವೆ. ಅಲ್ಲಿ ಮಂತ್ರ ಮತ್ತು ನಾನಾ ಆಗಮಗಳಿಂದ ಕೂಡಿದ ಪುಸ್ತಕವೊಂದಿದೆ. ಅದರ ಮೊದಲ ಮಂತ್ರವನ್ನು ಜಪಿಸಿ ಬೇಗ ಅಗ್ನಿಯನ್ನು ಪ್ರವೇಶಿಸು. ಮತ್ತೆ ಆ ರಾಜನು ಒಂದು ಮಂತ್ರ ಸಂಯೋಗ ದಿಂದ ನಿನ್ನ ಶರೀರವನ್ನು ಮೇಲಕ್ಕೆ ಎತ್ತುವನು. ಇದು ವ್ಯರ್ಥವಾಗದ ಮಾತು.

ವ॥ ಅಂತು ನಿನ್ನ ಶರೀರಂ ಪೊಸತಾಗೆ ತತ್ಕುಮಾರಂ ತನ್ಮಾರ್ಗದೊಳೆ ನಿನಗೀವನೆಂದ ವಳ್ ಪೇೞ್ದುದಿದಂ ನೀನಱಿದಂದಮೆಂತೆಂದೊಡೆ ಅವಳ್ ಮಗುೞ್ದಿಂತೆಂದಳ್

ಕಂ॥ ಇನಿತಂ ಮದೀಯ ಪಿತನೊ
ಲ್ದಿನಗಱಿಪಿ ತಪಕ್ಕೆ ಪೋದನಾನೀ ಹದನಂ
ನಿನಗಱಿಪಿದೆನೆಂದು ತದಂ
ಗನೆ ಪೋದಳ್ ಬೞಿಕ ನಾಗಲೋಕಕ್ಕರಸಾ ೨೮

ವ॥ ಅಂತವಳ್ ಪೋದಳ್ ಅವಳ್ ಪೇೞ್ದ ತೆಱದಿಂ ದೇವರ್ ಬಿಜಯಂಗೆಯ್ದಿರ್ ಮೇಲಪ್ಪಕಾರ್ಯಮಂ ನೀವೆಬಲ್ಲಿರೆಂದು ಬ್ರಾಹ್ಮಣಂ ಪೇೞ್ದುದರಸನದಂ ಮನದೆಗೊಂಡು

ಎನ್ನಿಂ ಸಜ್ಜನ್ಮವೆನ್ನಿಂ ಮದನ ಸಮಶರೀರಂ ಲಸತ್ಪ್ರಾಯಮೆನ್ನಿಂ
ದೆನ್ನಿಂದುದ್ವಾಹವೆನ್ನಿಂ ಭುಜಗಭುವನ ನಾಥತ್ವಮಾಯ್ತೆಂಬವೋಲ್ ಮಾ
ೞ್ಪಿನ್ನಿಸ್ಸಂದೇಹಮೀತಂಗಿನಿತು ಘನಯಶೋಲಾಭಮುತ್ಕೀರ್ಣ ಧರ್ಮಂ
ತನ್ನಿಂ ತಾನೇೞ್ತರಲ್ ನೂಂಕುವರೊಳರೆ ಎನುತ್ತುರ್ಬಿದಂ ರಾಜಪುತ್ರಂ ೨೯

ವ॥ ಅದಲ್ಲದೆಯುಂ

ಉ॥ ಮಾನವಜನ್ಮದೊಳ್ ಜನಿಸಿ ನಿತ್ಯಮನಿಂದ್ಯ ಪರೋಪಕಾರಮಂ
ದಾನಮನರ್ಥಪಾಲನೆಯುಮಂ ಮಿಗಲ್ ಮಿಗೆ ಮಾಡದಿರ್ಪಮಂ
ಮಾನವನಲ್ತಮಂ ತೊವಲಚೊಂಬೆ ತೆರಟ್ಟಿದ ಲೆಪ್ಪದಣ್ಕೆ ದು
ಸ್ಸ್ಥಾನದ ಹುಲ್ಲಹಾಹೆ ಪಟಗೋಡೆಯ ಚಿತ್ರಮೆನಲ್ಕೆ ಸಾಲದೇ ೩೦

ಹಾಗೆ ನಿನ್ನ ಶರೀರವು ಹೊಸದಾಗಲು ಆ ಕುಮಾರನು ಆ ಮಾರ್ಗದಲ್ಲಿಯೇ (ತನಗೆ ಉಚಿತವೆನಿಸಿದ ರೀತಿಯಿಂದಲೇ) ನಿನಗೆ (ನಾಗಲೋಕವನ್ನು) ಕೊಡುವನು ಎಂದು ಅವಳು ಹೇಳಿದಳು. ಆಗ ನಾನು 'ಇದು ನಿನಗೆ ಗೊತ್ತಾದುದು ಹೇಗೆ ?' ಎಂದು ಕೇಳಲು ಅವಳು ಮತ್ತೆ ಹೀಗೆ ಹೇಳಿದಳು. ೨೮. ಅರಸನೆ, 'ಇಷ್ಟನ್ನೂ ನನ್ನ ತಂದೆಯು ನನಗೆ ಹೇಳಿ ತಪಸ್ಸಿಗೆ ಹೋದನು. ನಾನು ಈ ವಿಷಯವನ್ನು ನಿನಗೆ ಹೇಳಿದೆನು.' ಎಂದು ಹೇಳಿ ಆ ರಮಣಿಯು ನಾಗಲೋಕಕ್ಕೆ ಹೋದಳು. ಹಾಗೆ ಅವಳು ಹೋದಳು, ಅವಳು ಹೇಳಿದಂತೆ ನೀವು ದಯಮಾಡಿಸಿದ್ದೀರಿ. ಮುಂದೆ ಆಗಬೇಕಾದ ಕೆಲಸವನ್ನು ನೀವೇ ಬಲ್ಲಿರಿ" ಎಂದು ಬ್ರಾಹ್ಮಣನು ಹೇಳಿದನು. ಅದನ್ನು ಅರಸನು ಮನಸ್ಸಿಗೆ ತೆಗೆದುಕೊಂಡು, ೨೯. "ನನ್ನಿಂದ ಇವನಿಗೆ ಉತ್ತಮವಾದ ಜನ್ಮ. ನನ್ನಿಂದ ಮನ್ಮಥನಿಗೆ ಸಮನಾದ ಶರೀರ, ಸುಂದರವಾದ ಪ್ರಾಯ, ನನ್ನಿಂದ ಮದುವೆ, ನನ್ನಿಂದ ನಾಗಲೋಕದ ಒಡೆತನವು ಆಯಿತು, ಎಂಬ ದೊಡ್ಡ ಕೀರ್ತಿಯು ನಿಸ್ಸಂದೇಹವಾಗಿ ತಾನಾಗಿ ಬರುತ್ತದೆ. ಧರ್ಮವೂ ಬರುತ್ತದೆ. ಇಂಥ ಅವಕಾಶವನ್ನು ತಳ್ಳುವರೆ!" ಎಂದು ಯೋಚಿಸಿ ರಾಜಪುತ್ರನು ಹರ್ಷದಿಂದ ಉಬ್ಬಿದನು. ವ॥ ಅಷ್ಟೇ ಅಲ್ಲದೆ ೩೦. ಮನುಷ್ಯನಾಗಿ ಹುಟ್ಟಿ ನಿತ್ಯವೂ ಶ್ರೇಷ್ಠವಾದ ಪರೋಪಕಾರವನ್ನೂ ದಾನವನ್ನೂ ಅರ್ಥಪಾಲನೆಯನ್ನೂ ಅತಿಶಯ

ಕಂ॥ ತರುಲತೆಗಳಖಿಲ ಪುಷ್ಪಂ
ಪರೋಪಕಾರಕ್ಕೆ ಸಲ್ವುದಂ ಕಂಡು ನರರ್
ಪರಹಿತಮನೆಸಗದಿರ್ದೊಡೆ
ಮರದಿಂದತಿ ಕಷ್ಟರಲ್ತೆ ಧರಣೀತಲದೊಳ್ ೩೧

ಪಾತಾಳಲೋಕವಿಜಯಂ
ಮಾತಂಗಕನಿಷ್ಟಸಿದ್ಧಿಯೀಯೆರಡುಂ ಮ
ತ್ಪ್ರೀತಿ ಸಕಲಾವನೀ ವಿ
ಖ್ಯಾತಿಯೆನುತ್ತವನಿಪಾಲ ತನಯಂ ನಲಿದಂ ೩೨

ವ॥ ಅನ್ನೆಗಂ

ಮ॥ ಪದೆಪಿಂದಂಬರ ಲಕ್ಷ್ಮಿಯೆಚ್ಚಿ ಕೊಳಲೆಂದೌತ್ಸುಕ್ಯದಿಂ ಕಜ್ಜಳಂ
ಪುದಿದೊಪ್ಪಿರ್ದ ಕರಂಡಮಂ ತೆಗೆದು ತನ್ನುತ್ಸಾಹದಿಂ ಮುಚ್ಚುಳಂ
ಮುದದಿಂದಂ ತೆಗೆಯುತ್ತುಮಿರ್ಪ ಪದದೊಳ್ ಕೈತಪ್ಪಿ ಬಿದ್ದಂಜನಂ
ಕೆದಱಿತ್ತೆಂಬಿನಮುರ್ಬಿ ಪರ್ಬಿಪರಿದತ್ತೆತ್ತಂ ದಿಶಾಭಿತ್ತಿಯೊಳ್ ೩೩

ವ॥ ಅಂತು ಪರ್ಬಿದ ಕತ್ತಲೆಯೊಳ್

ವಾದ ಪ್ರೀತಿಯಿಂದ ಮಾಡದವನು ಮನುಷ್ಯನಲ್ಲ. ಅವನು ತೊಗಲಿನ ಬೊಂಬೆ, ಮುದ್ದೆಮಾಡಿದ ಎರಕದ ಅಚ್ಚು ? (ಬೊಂಬೆ) ಕೆಟ್ಟ ಜಾಗದಲ್ಲಿರುವ ಹುಲ್ಲಿನಗೊಂಬೆ, ಹಳೆಗೋಡೆಯ ಮೇಲಿನ ಚಿತ್ರ. ೩೧. ಮರಬಳ್ಳಿಗಳ ಹೂವೆಲ್ಲವೂ ಪರೋಪಕಾರಕ್ಕೆ ಉಪಯುಕ್ತವಾಗುತ್ತವೆ. ಇದನ್ನು ನೋಡಿಯೂ ನರರು ಪರೋಪಕಾರವನ್ನು ಮಾಡದೇ ಇದ್ದರೆ ಈ ಭೂಮಂಡಲದಲ್ಲಿ ಅವರು ಮರಕ್ಕಿಂತ ಕಡೆಯಾದವರಲ್ಲವೆ? ೩೨. 'ಪಾತಾಳಲೋಕದ ವಿಜಯ. ಮಾತಂಗಕನಿಗೆ ಇಷ್ಟಾರ್ಥ ಸಿದ್ಧಿ. ಈ ಎರಡೂ ನನಗೆ ಪ್ರಿಯವಾದುವು. ಭೂಮಂಡಲದಲ್ಲೆಲ್ಲಾ ಕೀರ್ತಿಯನ್ನು ತಂದು ಕೊಡತಕ್ಕುವು ! ಎಂದು ಚಿಂತಿಸಿ ರಾಜಕುಮಾರನು ನಲಿದನು. ವ॥ ಅಷ್ಟರಲ್ಲಿ—೩೩. ಎಲ್ಲ ದಿಕ್ಕುಗಳಲ್ಲಿಯೂ ಕತ್ತಲೆಯು ದಟ್ಟವಾಗಿ ಹರಡಿಕೊಂಡಿತು. ಅದು ಅಂಬರವೆಂಬ ಲಕ್ಷ್ಮಿಯು ಆಶೆಯಿಂದ ಹಚ್ಚಿಕೊಳ್ಳುವ ಉತ್ಸಾಹದಲ್ಲಿ ಕಾಡಿಗೆ ತುಂಬಿದ ಭರಣಿಯ ಮುಚ್ಚಳವನ್ನು ವಿಲಾಸದಿಂದ ತೆಗೆಯಲು ಹೋದಾಗ, ಕೈಜಾರಿ ಬಿದ್ದು ಅಂಜನವೆಲ್ಲ ಸುತ್ತ ಕೆದರಿ ಸಿಡಿದು ಹರಡಿತೋ ಎಂಬಂತೆ ಕಂಡಿತು. ವ॥ ಹಾಗೆ ಹರಡಿದ ಕತ್ತಲೆ

ಕಂ॥ ಸೋದರರಂ ವಂಚಿಸಿ ಸ
ತ್ತ್ವೋದಯದಿಂ ನಿರ್ವಿಚಾರದಿಂ ಪರಚಿತ್ತಾ
ಹ್ಲಾದಮನೆಸಗಲ್ ನೃಪಸುತ
ನಾದರದಿಂದಾಯುಧಾನ್ವಿತಂ ಪೊಱಮಟ್ಟಂ ೩೪

ವ॥ ಅಂತು ಪೊಱಮಟ್ಟು ಬ್ರಾಹ್ಮಣಂ ಪೇೞ್ದ ಮಹಾ ಗುಹಾದ್ವಾರಕ್ಕೆ ಬಂದು

ಕಂ॥ ಧಾತ್ರೀತಳಪತಿ ಕಡುಪಿಂ
ರಾತ್ರಿಯೊಳಾ ಬ್ರಾಹ್ಮಣಾನ್ವಿತಂ ಗುಹೆಯಂ ಪೊ
ಕ್ಕಾ ತ್ರೇತಾಗ್ನಿಯ ಕುಂಡದ
ಮಂತ್ರಂಗಳ್ಗೆಱಗಿ ಪುಸ್ತಕಮನೀಕ್ಷಿಸಿದಂ ೩೫

ವ॥ ಅಂತು ಗುಹೆಯೊಳಿರ್ದಗ್ನಿಯುಮಂ ಕೆಲದ ಪುಸ್ತಕಮುಮಂ ಕಂಡು ಮಾತಂಗಕನಂ ನೋಡಿ ನೀಂ ಕನ್ಯಾಸೂಚಿತಮಪ್ಪ ಕಾರ್ಯಮನುದ್ಯೋಗಿಸೆನೆ

ಕಂ॥ ಮನಸಿಜನರೂಪುನಿಜಯೌ
ವನದೇೞ್ಗೆ ವಿವಾಹಸಿದ್ಧಿ ರಾಜ್ಯದಲಾಭಂ
ತನಗಪ್ಪುದೆಂಬ ಹರ್ಷದೊ
ಳನುಮಾನಿಸದಗ್ನಿಯಲ್ಲಿ ಭೋಂಕನೆ ಬಿೞ್ದಂ ೩೬

ಯಲ್ಲಿ ೩೪. ಸಹೋದರರಿಗೆ ತಿಳಿಸದೆ, ಪರಾಕ್ರಮಾತಿಶಯದಿಂದ ವಿಚಾರ ಮಾಡದೆ ಬೇರೆಯವರ ಮನಸ್ಸಿಗೆ ಆಹ್ಲಾದವನ್ನುಂಟುಮಾಡಲು ರಾಜಕುಮಾರನು ಆದರದಿಂದ ಆಯುಧವನ್ನು ಹಿಡಿದು ಹೊರಟನು. ವ॥ ಹಾಗೆ ಹೊರಟು ಆ ಬ್ರಾಹ್ಮಣನು ಹೇಳಿದ ಮಹಾ ಗುಹಾದ್ವಾರಕ್ಕೆ ಬಂದು ೩೫. ರಾಜನು ಪರಾಕ್ರಮದಿಂದ ರಾತ್ರಿಯಲ್ಲಿ ಆ ಬ್ರಾಹ್ಮಣನೊಡನೆ ಗುಹೆಯನ್ನು ಹೊಕ್ಕನು. ಮತ್ತು ಆ ತ್ರೇತಾಗ್ನಿಯ ಕುಂಡದ ಮಂತ್ರಗಳಿಗೆ ನಮಸ್ಕರಿಸಿ ಅಲ್ಲಿದ್ದ ಪುಸ್ತಕವನ್ನು ನೋಡಿದನು. ವ॥ ಹಾಗೆ ಗುಹೆಯಲ್ಲಿದ್ದ ಅಗ್ನಿಯನ್ನೂ ಪಕ್ಕದಲ್ಲಿದ್ದ ಪುಸ್ತಕವನ್ನೂ ನೋಡಿ ಮಾತಂಗಕನಿಗೆ "ನೀನು ಕನ್ಯೆಯು ಸೂಚಿಸಿದ ಕಾರ್ಯವನ್ನು ಸಾಧಿಸಲು ಉದ್ಯೋಗಿಸು" ಎಂದು ಹೇಳಿದನು. ೩೬. ಮನ್ಮಥನ ರೂಪ, ನವಯೌವನ, ವಿವಾಹಸಿದ್ಧಿ, ರಾಜ್ಯ ಲಾಭ ಇವೆಲ್ಲ ತನಗೆ ಬರುವುದೆಂದು ಹರ್ಷದಿಂದ ಹಿಂದು ಮುಂದು ನೋಡದೆ ಮಾತಂಗ

ಕಂ॥ ಮಾತಂಗಕದ್ವಿಜಂ ಕ
ನ್ಯಾತತ್ವಮೆನಿಪ್ಪ ಮಂತ್ರದಿಂದುರಿಯಂ ನಿ
ರ್ಭೀತಿಯಿನಪ್ಪಲ್ ಕಿರ್ಚಿಂ
ದಾ ತನು ಭಸ್ಮಾವಶೇಷವಾದತ್ತಾಗಳ್ ೩೭

ವ॥ ಅದನರಸಂ ಕಂಡು ವಿಸ್ಮಯಸ್ವಾಂತನಾಗಿ ತತ್ಪುಸ್ತಕದೊಳಿರ್ದ ಮಂತ್ರಮಂ ನೋಡಿ

ಮೃತ ಸಂಜೀವನ ಮಂತ್ರದಿಂ ನೃಪಸುತಂ ದಿವ್ಯಾಂಬುವಂ ಮಂತ್ರಿಸು
ತ್ತತಿ ಶೀಘ್ರಂ ಮಿಗಲಗ್ನಿಯೊಳ್ ತಳಿಯೆ ನಿದ್ರಾಸಕ್ತನಾಗಿರ್ದವಂ
ಪ್ರತಿಪೆತ್ತೇಳ್ವವೊಲಂಗ ಸೌಷ್ಟವವಿಲಾಸಂ ಯೌವನಂ ನಿರ್ಮಲಾ
ಕೃತಿಯೊಪ್ಪುತಿರಲಗ್ನಿ ಕುಂಡದೊಳಗಿಂದೆದ್ದಂ ನಗುತ್ತಾದ್ವಿಜಂ ೩೮

ವ॥ ಅಂತೆದ್ದು ಬಂದ ಮಾತಂಗಕ ದ್ವಿಜನನರಸಂ ತಕ್ಕೈಸಿಕೊಂಡು ಸಂತೈಸಿ ಪಾತಾಳ ಭುವನಮಾರ್ಗಮಂ ನೋಡಿ

ಮ॥ ಪ್ರತಿ ಪಕ್ಷಪ್ರಚುರಾವನೀಶವಿಲಸಚ್ಚಾತುರ್ಬಲ ಪ್ರಾಣಮಾ
ರುತ ಪೀತಾಹಿ ವಿರೋಧಿ ಭೂಪತಿ ಮನೋವೇಶ್ಯಾಭುಜಂಗಂ ರಿಪು
ಕ್ಷಿತಿನಾಥಾನ್ವಯ ಚಂದ್ರ ರಾಹು ಸುಖ ಸಂಪದ್ಭೋಗಿ ಪಾತಾಳಮಂ
ನುತಮಾತಂಗಕ ಕಂಧರ ಸ್ಥಿತಕರಂ ಪೊಕ್ಕಂ ಮಹೀಪಾಳಕಂ ೩೯

ಕನು ಅಗ್ನಿಯಲ್ಲಿ ಭೋಂಕನೆ ಬಿದ್ದನು. ೩೭. ಮಾತಂಗನೆಂಬ ಬ್ರಾಹ್ಮಣನು 'ಕನ್ಯಾತತ್ವಂ' ಎಂಬ ಮಂತ್ರದಿಂದ ಭಯವಿಲ್ಲದೆ ಬೆಂಕಿಯುರಿಯನ್ನಪ್ಪಿದನು. ಆಗ ಅವನ ಶರೀರವು ಸುಟ್ಟು ಬೂದಿಯಾಯಿತು. ವ॥ ಅದನ್ನು ಅರಸನು ಕಂಡು ಮನಸ್ಸಿನಲ್ಲಿ ಅಚ್ಚರಿಯನ್ನು ಪಡೆದು ಆ ಪುಸ್ತಕದಲ್ಲಿದ್ದ ಮಂತ್ರವನ್ನು ನೋಡಿ. ೩೮. (ರಾಜಕುಮಾರನು) ಮೃತ ಸಂಜೀವನ ಮಂತ್ರದಿಂದ ದಿವ್ಯವಾದ ನೀರನ್ನು ಮಂತ್ರಿಸಿ ಬೇಗ ಬೆಂಕಿಯ ಮೇಲೆ ಚುಮುಕಿಸಿದನು. ಕೂಡಲೆ ಆ ಬ್ರಾಹ್ಮಣನು ಮಲಗಿದ್ದವನು ಏಳುವಂತೆ ಅಂಗಸೌಷ್ಟವ, ವಿಲಾಸ, ಯೌವನ, ನಿರ್ಮಲವಾದ ಆಕಾರ ಇವುಗಳಿಂದ ಕೂಡಿ ಅಗ್ನಿ ಕುಂಡದಿಂದ ನಗುತ್ತಾ ಎದ್ದನು. ಹಾಗೆ ಎದ್ದುಬಂದ ಮಾತಂಗಕ ಬ್ರಾಹ್ಮಣನನ್ನು ರಾಜನು ತಬ್ಬಿಕೊಂಡು ಸಂತೈಸಿದನು. ಮತ್ತು ಪಾತಾಳಲೋಕಕ್ಕೆ ಹೋಗುವ ದಾರಿಯನ್ನು ನೋಡಿ—೩೯. ರಾಜನು ಕೀರ್ತಿಶಾಲಿಯಾದ ಮಾತಂಗಕನ ಹೆಗಲ ಮೇಲೆ ಕೈಯಿಟ್ಟುಕೊಂಡು ಪಾತಾಳವನ್ನು ಪ್ರವೇಶಿಸಿದನು. ಅವನು ಶತ್ರುರಾಜರ ಚತುರಂಗ ಸೇನೆಯ ಪ್ರಾಣಗಳೆಂಬ ವಾಯುವನ್ನು ಕುಡಿದ ಸರ್ಪ. ಶತ್ರುರಾಜರ ಮನಸ್ಸೆಂಬ ವೇಶ್ಯೆಯರನ್ನು ವಶಪಡಿಸಿಕೊಳ್ಳುವ ವಿಟಪುರುಷ. ಅರಿರಾಯರ ವಂಶವೆಂಬ ಚಂದ್ರನಿಗೆ ಅದನ್ನು ನುಂಗುವ ರಾಹು, ಶತ್ರುರಾಜರ ಸುಖಸಂಪತ್ತುಗಳನ್ನು ಭೋಗಿಸುವವನು.

ವ॥ ಅಂತರಸಂ ಮಾತಂಗಕ ಸಹಿತಂ ಪಾತಾಳ ಭುವನಮಂ ಪೊಕ್ಕು ತನ್ನಾಗ ಕನ್ಯಾ ಭವನಮನೆಯ್ದಿ

ಚಂ॥ ಮಕರಪತಾಕನಾರ್ಪು ವನಿತಾಕೃತಿವೆತ್ತುದೊ ಪೂರ್ಣಚಂದ್ರಚಂ
ದ್ರಿಕೆ ಸತಿರೂಪನಾಂತುದೊ ವಸಂತ ವಿಲಾಸಮಗಣ್ಯಪುಣ್ಯ ಕ
ನ್ಯಕೆಯೆನಿಸಿರ್ದುದೊ ಸಕಲಮೋಹನವಿದ್ಯೆ ಭುಜಂಗರಾಜ ಬಾ
ಲಕಿವೆಸರಿಂ ನೆಗಟ್ದುದೆನೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ ೪೦

ಉ॥ ಪಾಱುವ ತುಂಬಿಯುಂ ಕಳಿವ ಪೂಗಣೆಯುಂ ಮುಗಿವಬ್ಜಮುಂ ತಮಂ
ದೋಱಲಗಲ್ವ ಚಕ್ರಯುಗಮುಂ ನಸುಬಾಡುವ ಕಲ್ಪವಲ್ಲಿಯುಂ
ನೀಱೆಯ ಕುಂತಳಕ್ಕೆ ನಯನಕ್ಕೆ ಮುಖಕ್ಕೆ ಕುಚಕ್ಕೆ ತೋಳ್ಗೆ ಕೈ
ಮೀಱೆ ಸಮಾನಮೆಂದೊಡುಪಮಾ ಪರಿಹೀನಮದಾಗದಿರ್ಪುದೇ ೪೧

ವ॥ ಅಂತು ರೂಪಿಂಗಗ್ಗಳಮಾದ ನಾಗಕನ್ಯೆಯುಂ ಕಂಡರಸಂ ನೀಂ ಪೇಟ್ದ ಬಾಲಕಿ ಯೀಕೆಯಾಗದೆ ಮಾಣಳೆಂದು ಮಾತಂಗಕನಂ ಕೇಳ್ದೊಡಾತಂ ಲಜ್ಜೆಯಿಂ ತಲೆವಾಗಿರಲದಱ

(ಪಾತಾಳವು ಸರ್ಪಲೋಕ, ರಾಜನೂ ಒಂದು ರೀತಿಯಿಂದ ಸರ್ಪವೇ ಆಗಿದ್ದೂ ಅಲ್ಲಿಗೆ ಹೋಗುವುದು ಯುಕ್ತವೇ ಆಗಿದೆ ಎಂದು ಅಹಿ, ಭುಜಂಗ, ರಾಹು, ಭೋಗಿ ಎಂಬ ಸರ್ಪವಾಚಕ ಪದಗಳನ್ನು ಪ್ರಯೋಗಿಸಿ ಚಮತ್ಕಾರವಾಗಿ ವರ್ಣಿಸಲಾಗಿದೆ) ವ॥ ಅನಂತರ ಅರಸನು ಮಾತಂಗಕನೊಡನೆ ಪಾತಾಳಲೋಕವನ್ನು ಹೊಕ್ಕು ಆ ನಾಗಕನ್ಯೆಯ ಭವನಕ್ಕೆ ಹೋದನು. ೪೦. ಮನ್ಮಥನ ಬಲವು ವನಿತೆಯ ಆಕಾರವನ್ನು ಪಡೆದಿದೆಯೋ! ಪೂರ್ಣಚಂದ್ರನ ಬೆಳುದಿಂಗಳು ಹೆಣ್ಣಿನ ರೂಪವನ್ನು ಹೊಂದಿದೆಯೋ ! ವಸಂತನ ವಿಲಾಸವು ಎಣಿಕೆಗೆ ಮೀರಿದ ಪುಣ್ಯಗಳ ಕನ್ಯಕೆಯ ಆಕಾರವನ್ನು ತಳೆದಿದೆಯೋ ! ಎಲ್ಲ ಮೋಹನ ವಿದ್ಯೆಗಳೂ ಸೇರಿ ನಾಗರಾಜನ ಬಾಲಿಕೆಯಾಗಿ ಹುಟ್ಟಿದೆಯೋ ! ಎನ್ನುವಂತೆ ಆ ರಮಣಿಯ ರೂಪವು ಕಂಗೊಳಿಸಿತು. ೪೧. ಹಾರುವ ದುಂಬಿಯು ಆ ತರುಣಿಯ ತಲೆಗೂದಲಿಗೂ, ಅರಳಿದ ಹೂಬಾಣವು ಆಕೆಯ ಕಣ್ಣುಗಳಿಗೂ, ಮುಗಿದುಕೊಳ್ಳು ತ್ತಿರುವ ಕಮಲವು ಆಕೆಯ ಮುಖಕ್ಕೂ ಕತ್ತಲೆ ಹರಡಲು ಅಗಲುವ ಚಕ್ರವಾಕಗಳ ಜೋಡಿಯು ಅವಳ ಸ್ತನಗಳಿಗೂ, ನಸುಬಾಡುವ ಕಲ್ಪಲತೆಯನ್ನು ಅವಳ ತೋಳು ಗಳಿಗೂ ಸಮಾನವೆಂದು ಹೇಳಿದರೆ ಅದು ಉಪಮಾರಹಿತವಾಗದೆ ಇರುತ್ತದೆಯೇ ? (ಉಪಮಾನವನ್ನು ಉಪಮೇಯವಾಗಿಯೂ ಉಪಮೇಯವನ್ನು ಉಪಮಾನ ವಾಗಿಯೂ ಹೇಳಿ ಅವಳ ಅವಯವಗಳು ಅತ್ಯುತ್ಕೃಷ್ಟವೆಂದು ಹೇಳಿದ್ದಾನೆ.) ವ॥ ಹೀಗೆ ಶ್ರೇಷ್ಠವಾದ ರೂಪವುಳ್ಳ ನಾಗಕನ್ಯೆಯನ್ನು ಕಂಡು ರಾಜನು 'ನೀನು ಹೇಳಿದ ಬಾಲಿಕೆಯು ಇವಳೇ ಇರಬೇಕಲ್ಲವೆ' ಎಂದು ಮಾತಂಗನನ್ನು ಕೇಳಿದನು. ಅದಕ್ಕೆ ಅವನು

ನಱಿದು ಮುನ್ನಮೆ ತಾಂ ಪೇೞ್ದೞಪ್ಪುದಱಿಂದಾ ಕನ್ಯೆಯುಂ ಮಾತಂಗಕಂಗೆ ವಿವಾಹಮುಂ ಮಾಡಿ ತದ್ರಾಜ್ಯದೊಳ್ ಪಟ್ಟಮುಂ ಕಟ್ಟಿಯನಂತರಂ ತನ್ಮಾತಂಗಕನಿಂದರಸಂ ಕಳುಪಿಸಿಕೊಳ್ವಾಗಳಾ ಮಾತಂಗಕನಿಂತೆಂದಂ

ಸ್ರ॥ ನಿನ್ನಿಂದಾವಿರ್ಬರುಂ ಕೂಡಿದೆವಹಿಭುವನಂ ಕೈಗೆ ಸಾರ್ದತ್ತು ದೇವ
ರ್ಗಿನ್ನೊಂದಂ ಬಿನ್ನಪಂಗೈದಪೆನಿನಿತು ಪಿಪಾಸೋದಯಂ ಕ್ಷುದ್ಭಯಂ ಕ್ಲೇ
ಶನ್ನಿದ್ರಾಬಾಧೆ ಪಿಂಗಿರ್ಪುದು ನಿಜವಿದಱಿಂ ಸಂತಸಂ ದಿವ್ಯಮಾಣಿ
ಕ್ಯನ್ನೀನೇ ಭಾಜನಂ ಚಿತ್ತವಿಸೆನುತೊಲವಿಂ ರತ್ನಮುಂ ಕೊಟ್ಟನಾಗಳ್ ೪೨

ಕಂ॥ ನಾಡಾಡಿಯ ಮಾಣಿಕಮೆಂ
ದೀಡಾಡದಿರೆಲೆ ಕುಮಾರ ಮನದುತ್ಸವದಿಂ
ಚೂಡಾಮಣಿಯುಂ ಮಾಟ್ಪುದು
ಪಾಡಿವದೆಳವೆೞೆಯನಾಂತರುದ್ರನ ತೆಱದಿಂ ೪೩

ವ॥ ಎಂದು ಪೇೞ್ದು ಮಾತಂಗಕಂ ತನಗೆ ನಾಗ ಕನ್ಯಕೆ ಕೊಟ್ಟ ಮಾಣಿಕ್ಯಮುಂ ಕುಂಡಲಮುಂ ಕೈಕೊಂಡು ಆತನಿಂ ಕಳುಪಿಸಿಕೊಂಡು ರಾಜವಾಹನಂ ತೆರಳಲುದ್ಯುಕ್ತನಾಗಿ ಖಡ್ಗದ್ವಿತೀಯನಾಗಿ

ನಾಚಿಕೆಯಿಂದ ತಲೆ ಬಗ್ಗಿಸಿಕೊಂಡನು. ಅದರಿಂದ ವಿಷಯವನ್ನರಿತು ಮೊದಲೇ ಅವಳು ಹೇಳಿದ್ದುದರಿಂದ ಆ ಕನ್ಯೆಯೊಡನೆ ಮಾತಂಗನಿಗೆ ವಿವಾಹವನ್ನು ಮಾಡಿ ಆ ರಾಜ್ಯದಲ್ಲಿ ಅವನಿಗೆ ಪಟ್ಟಗಟ್ಟಿದನು. ಅನಂತರ ಆ ಮಾತಂಗಕನನ್ನು ಕೇಳಿಕೊಂಡು ಹೊರಟಾಗ ಅವನು ಹೀಗೆ ಹೇಳಿದನು—೪೨. 'ನಿನ್ನಿಂದ ನಾವಿಬ್ಬರೂ ಸೇರಿದೆವು. ನಾಗಲೋಕದ ರಾಜ್ಯವು ಕೈಸೇರಿತು. ಮಹಾರಾಜನಲ್ಲಿ ಒಂದು ವಿಜ್ಞಾಪನೆಯನ್ನು ಮಾಡಿಕೊಳ್ಳುತ್ತೇನೆ. ಬಾಯಾರಿಕೆ, ಹಸಿವು, ನಿದ್ರಾಬಾಧೆ ಮೊದಲಾದ ಕ್ಲೇಶಗಳನ್ನೆಲ್ಲ ತಪ್ಪದೆ ಪರಿಹರಿಸುವ ಈ ದಿವ್ಯವಾದ ಮಾಣಿಕ್ಯಕ್ಕೆ ನೀನೇ ಸರಿಯಾದ ಪಾತ್ರ. ಇದನ್ನು ಸ್ವೀಕರಿಸು' ಎಂದು ಹೇಳಿ ಒಲವಿನಿಂದ ರತ್ನವನ್ನು ಅರಸನಿಗೆ ಕೊಟ್ಟನು. ೪೩. ಕುಮಾರನೆ, ಈ ರತ್ನವನ್ನು ಸಾಮಾನ್ಯವಾದ ರತ್ನವೆಂದು ತಿಳಿದು ಕಳೆಯಬೇಡ. ಪಾಡ್ಯದ ಬಾಲಚಂದ್ರನನ್ನು ಧರಿಸಿದ ರುದ್ರನ ಹಾಗೆ ಇದನ್ನು ಚೂಡಾಮಣಿಯಾಗಿ ಧರಿಸು. ವ॥ ಎಂದು ಹೇಳಿ ಮಾತಂಗಕನು ತನಗೆ ನಾಗಕನ್ಯಕೆಯು ಕೊಟ್ಟ ಮಾಣಿಕ್ಯವನ್ನು ಕೊಡಲು ಅದನ್ನು ತೆಗೆದುಕೊಂಡು ಅವನಿಂದ ಅನುಮತಿಯನ್ನು ಪಡೆದು ರಾಜ

ಚಂ॥ ಉದಯದೊಳೇಳ್ಗೆವೆತ್ತ ರವಿ ವಾರಿಧಿಯಂ ಪೊಱಮಟ್ಟನೆಂಬಿನಂ
ಮದವರಿಪ್ರತಾನವನಿತಾ ನಯನೋತ್ಪಲ ಚಂಡಭಾಸ್ಕರಂ
ವಿದಿತ ಪರೋಪಕಾರನಿಧಿ ಸಾಹಸಕೇಸರಿ ಶಸ್ತ್ರಶಾಸ್ತ್ರಕೋ
ವಿದನಹಿಲೋಕದಿಂ ಪದೆಪಿನಿಂ ಪೊಱಮಟ್ಟನಭಂಗವಿಕ್ರಮಂ ೬೪

ವ॥ ಇದು ನಿಖಿಲ ಬುಧಜನಮನೋ ವನಜವನ ದಿವಾಕರಕಿರಣ ಪ್ರತಿಮ ಪ್ರಸನ್ನ ಶ್ರೀಮದಭಂಗ ವಿಟ್ಠಲ ಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸ ಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಮತಂಗಕ ರಾಜವಾಹನ ಪಾತಾಳಲೋಕವಿಜಯಂ ಮಾತಂಗಕನಿಷ್ಟ ಸಿದ್ಧಿವರ್ಣನಂ ತೃತೀಯಾಶ್ವಾಸಂ

## ತೃತೀಯಾಶ್ವಾಸಂ

ವಾಹನನು ಕತ್ತಿಯನ್ನು ಹಿಡಿದು ಹೊರಡಲು ಸಿದ್ಧನಾದನು. ೬೪. ಪರೋಪಕಾರ ನಿಧಿಯೆಂದು ಪ್ರಸಿದ್ಧನಾದ, ಸಾಹಸ ಕೇಸರಿಯಾದ, ಶಸ್ತ್ರಶಾಸ್ತ್ರ ವಿದ್ಯೆಗಳಲ್ಲಿ ಪರಿಣತನಾದ, ಅಭಂಗ ವಿಕ್ರಮನಾದ ರಾಜವಾಹನನು ನಾಗಲೋಕದಿಂದ ಸಡಗರದಿಂದ ಹೊರಟನು. ಉದಯಕಾಲದಲ್ಲಿ ಪ್ರಕಾಶಮಾನನಾದ ರವಿಯು ಸಮುದ್ರದಿಂದ ಹೊರಕ್ಕೆ ಹೊರಟಂತಿದ್ದಿತು ಅವನ ನಿರ್ಗಮನ. ಅವನು ಮದಿಸಿದ ಶತ್ರುಗಳ ವನಿತೆಯರ ನಯನಗಳೆಂಬ ಕನ್ನೈದಿಲೆಗಳಿಗೆ ಚಂಡಸೂರ್ಯನಾಗಿದ್ದನು. ಎಲ್ಲ ವಿದ್ವಾಂಸರ ಮನಸ್ಸೆಂಬ ಕಮಲವನ್ನರಳಿಸುವ ಸೂರ್ಯನ ಕಿರಣಗಳಿಗೆ ಸಮನಾದ ಪ್ರಸನ್ನನಾದ ಅಭಂಗ ವಿಟ್ಠಲನ ಪಾದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸ ಕವಿ ಚೌಂಡರಾಜನಿಂದ ವಿರಚಿತವಾದ ಅಭಿನವ ದಶಕುಮಾರ ಚರಿತೆಯಲ್ಲಿ ಮಾತಂಗಕ ರಾಜವಾಹನರಿಂದ ಪಾತಾಳಲೋಕ ವಿಜಯ ಮತ್ತು ಮಾತಂಗಕನ ಇಷ್ಟ ಸಿದ್ಧಿವರ್ಣನ ಎಂಬ ತೃತೀಯಾಶ್ವಾಸ ಮುಗಿದುದು.

# ಚತುರ್ಥಾಶ್ವಾಸಂ

## ಪುಷ್ಪೋದ್ಭವ ಚರಿತಂ

ಕಂ॥ ಶ್ರೀ ಲೀಲಾವಸಥಂ ಪಾ
ತಾಲದಿನೇಕಾಕಿಯಾಗಿ ಪೊಱಮಟ್ಟು ಮಹೀ
ಪಾಲಂ ಕುಳ್ಳಿರ್ದನುಪಮ
ಲೀಲೆಯೊಳೊಪ್ಪಿದನಭಂಗವಿಟ್ಠಲಭೃತ್ಯಂ ೧

ವ॥ ಅಂತು ಪೊಱಮಟ್ಟೊಂದು ಚಂದ್ರಕಾಂತ ಶಿಲಾಂತದೊಳ್ ಕುಳ್ಳಿರ್ಪುದುಮನತಿ ದೂರದೊಳ್

ಶಾ॥ ವ್ಯಾಯಾಮಶ್ರಮದಿಂ ಸಡಿಲ್ದವಯವಂ ಸ್ವೇದಾಂಬು ತಳ್ತಂಗಮ
ತ್ಯಾಯಾಸವ್ಯಥೆಯಂ ನಿರೂಪಿಸುವ ವಕ್ತ್ರಾಬ್ಜಂ ಸಮುತ್ಖಾತಕೌ
ಕ್ಷೇಯಂ ರಂಜಿಸುವೊರ್ವ ವಿಕ್ರಮಭುಜಂ ಸಂರಂಭದಿಂ ಬರ್ಪುದುಂ
ಶ್ರೇಯಃಕಾಯನಿದಾವನೆಂದು ನರಪಂ ಸಂಪ್ರೀತಿಯಿಂ ನೋಡಿದಂ ೨

ವ॥ ಅಂತು ನೋಡಿ ಮತ್ತಂ

ಕಂ॥ ಅವಯವ ಸೌಷ್ಟವಮಂಗ
ಚ್ಛವಿ ಶೀಘ್ರವಿಲಾಸಗಮನಮಱಸುವಲಂಪಿಂ
ತವಕವಿದುಂ ದಲ್ ಪುಷ್ಪೋ
ದ್ಭವನೆಂಬುದನಱಪದಿರದು ಮನ್ಮಾನಸದೊಳ್ ೩

೧. ಲಕ್ಷ್ಮಿಯ ಕ್ರೀಡಾಗೃಹವೆನಿಸಿ ಅಭಂಗ ವಿಟ್ಠಲನ ಸೇವಕನಾದ ಪಾತಾಳದಿಂದ ಏಕಾಕಿಯಾಗಿ ಹೊರಕ್ಕೆ ಬಂದು ಕುಳಿತ, ಮಹಾರಾಜನು ಅಸಮವಾದ ವಿಲಾಸದಿಂದ ಪ್ರಕಾಶಿಸಿದನು. ವ॥ ಹಾಗೆ ಹೊರಕ್ಕೆಬಂದು ಒಂದು ಚಂದ್ರಕಾಂತ ಶಿಲೆಯ ಕೊನೆಯಲ್ಲಿ ಕುಳಿತು ಹತ್ತಿರದಲ್ಲಿ ೨. ತನ್ನ ಕಡೆ ಸಂಭ್ರಮದಿಂದ ಬರುತ್ತಿದ್ದ ಪರಾಕ್ರಮಿಯೊಬ್ಬನನ್ನು ನೋಡಿದನು. ಅವನ ಅವಯವಗಳು ವ್ಯಾಯಾಮದ ಶ್ರಮದಿಂದ ಸಡಿಲಗೊಂಡಿದ್ದುವು. ಮೈಯ್ಯಲ್ಲಿ ಬೆವರು ಹರಿಯುತ್ತಿತ್ತು. ಅವನ ಮುಖಕಮಲವು ಅತ್ಯಾಯಾಸದಿಂದುಂಟಾದ ವ್ಯಥೆಯನ್ನು ಹೊರಸೂಸುತ್ತಿತ್ತು. ಹಿರಿದ ಕತ್ತಿಯನ್ನು ಹಿಡಿದಿದ್ದನು. 'ಈ ಕೀರ್ತಿಶಾಲಿಯು ಯಾವನು ?' ಎಂದು ಪ್ರೀತಿಯಿಂದ ರಾಜನು ಅವನನ್ನು ನೋಡಿದನು. ವ॥ ಹಾಗೆ ನೋಡಿ ಮತ್ತೆ. ೩. ಅವಯವಗಳ ಸೌಂದರ್ಯ, ಶರೀರದ ಕಾಂತಿ, ವಿಲಾಸವುಳ್ಳ ಶೀಘ್ರಗಮನ, ಹುಡುಕುವ ಸಂಭ್ರಮ ಆತುರ ಇವು ನನ್ನ ಮನಸ್ಸಿನಲ್ಲಿ ಇವನು ಪುಷ್ಪೋದ್ಭವನೆಂಬುದನ್ನು ತಿಳಿಯಿಸದೇ

ಕಂ॥ ಎಂದು ಬಗೆಯುತ್ತೆ ನೋಡಲ್
ಮುಂದರಸಂಗಧಿಕ ಸೌಖ್ಯಮಿದಿರ್ವರ್ಪವೊಲಾ
ನಂದದೆ ನಲಿದೀಕ್ಷಿಸುತುಂ
ಬಂದಂ ಪುಷ್ಪೋದ್ಭವಂ ಮುದಶ್ರುಗಳೊಗೆಯಲ್ ೪

ವ॥ ಅಂತು ಪುಷ್ಪೋದ್ಭವಂ ಬಂದು ಪಾತಾಳದ್ವಾರದ ಚಂದ್ರಕಾಂತ ಶಿಲಾತಲದೊಳಿರ್ದ ರಾಜವಾಹನನಂ ಕಂಡು

ಚಂ॥ ನಯನದೊಳಶ್ರುವಾರಿ ಪುಳಕಂ ನಿಜದೇಹದೊಳುತ್ಸವಂ ಮನೋ
ಜಯದೊಳನೂನಕಾಂತಿ ಮುಖಮಂಡಲದೊಳ್ ಗುರುಭಕ್ತಿ ಚಿತ್ತದೊಳ್
ಪ್ರಿಯಮಖಿಳಾಂಗದೊಳ್ ನಲಿಯೆ ಸಿದ್ಧಮನೋರಥನಿಂದು ದೇವರಂ
ಘ್ರಿಯನೊಸೆದೀಕ್ಷಿಸಲ್ ಪಡೆದೆನೆಂದು ಮನಂಮಿಗೆ ಮೆಯ್ಯನಿಕ್ಕಿದಂ ೫

ವ॥ ಅಂತು ಮೆಯ್ಯಿಕ್ಕಲೊಡಂ

ಕಂ॥ ಆನಂದಾಶ್ರು ತುಳುಂಕೆ ನಿ
ಜಾನನದೊಳ್ ರೋಮಪುಳಕಮುಣ್ಮೆ ಶರೀರಂ
ತಾನುಬ್ಬೆ ಪೊರೆಯೇಱಲ್ ನೃಪ
ಸೂನು ನಿಜಾನುಜನನಪ್ಪಿಕೊಂಡನಲಂಪಿಂ ೬

ಇರವು ೪. ಎಂದು ಯೋಚಿಸಿ ಅತ್ತ ನೋಡಿದನು. ಆಗ ಮುಂದೆ, ಅಧಿಕ ಸೌಖ್ಯವೇ ಎದಿರುಗೊಂಡು ಬರುವಂತೆ ಸಂತೋಷದಿಂದ ನಲಿಯುತ್ತಾ ಆನಂದಾಶ್ರುಗಳನ್ನು ಸುರಿಸುತ್ತಾ ಪುಷ್ಪೋದ್ಭವನು ಅರಸನಿಗೆದುರಾಗಿ ಬಂದನು. ವ॥ ಹಾಗೆ ಪುಷ್ಪೋದ್ಭವನು ಬಂದು ಪಾತಾಳದ ಬಾಗಿಲಿನಲ್ಲಿದ್ದ ಚಂದ್ರಕಾಂತ ಶಿಲಾತಲದ ಮೇಲೆ ಕುಳಿತಿದ್ದ ರಾಜವಾಹನನನ್ನು ನೋಡಿ ೫. 'ಸಿದ್ಧ ಮನೋರಥನಾದ ನಾನು ಇಂದು ಸ್ವಾಮಿಯ ಪಾದಗಳ ದರ್ಶನಮಾಡಲು ಪುಣ್ಯವನ್ನು ಪಡೆದಿದ್ದೇನೆ' ಎಂದು ಹೇಳುತ್ತಾ, ಹರ್ಷದಿಂದ ನಮಸ್ಕರಿಸಿದನು. ಆಗ ಅವನ ಕಂಗಳಲ್ಲಿ ಆನಂದಬಾಷ್ಪವು ಸುರಿಯುತ್ತಿತ್ತು. ಶರೀರದಲ್ಲಿ ರೋಮಾಂಚವುಂಟಾಗಿದ್ದಿತು. ಮನೋಜಯದಲ್ಲಿ ಸಂತೋಷವಿತ್ತು. ಮುಖಮಂಡಲನಲ್ಲಿ ಶ್ರೇಷ್ಠವಾದ ಕಾಂತಿ ಹೊಳೆಯುತ್ತಿತ್ತು. ಮನಸ್ಸಿನಲ್ಲಿ ಗುರುಭಕ್ತಿಯು ತುಂಬಿದ್ದಿತು. ಇಡೀ ಶರೀರದಲ್ಲಿ ಪ್ರೀತಿಯು ನಲಿಯುತ್ತಿತ್ತು. ವ॥ ಹಾಗೆ ನಮಸ್ಕರಿಸಲು ೬. ಅರಸನ ಮುಖದಲ್ಲಿ ಆನಂದಾಶ್ರುವು ತುಂಬಿ ತುಳುಕಿತು. ಶರೀರದಲ್ಲಿ ರೋಮಾಂಚವುಂಟಾಯಿತು. ಹರ್ಷದಿಂದ ಮೈಯುಬ್ಬಿತು. ಹೀಗೆ ಆನಂದದಿಂದ ರಾಜವಾಹನನು ತನ್ನ ತಮ್ಮನನ್ನು ತಬ್ಬಿಕೊಂಡನು. ವ॥ ಅರಸನು ಅಪ್ಪಿ

ವ॥ ಅಂತರಸನಪ್ಪಿಕೊಂಡೊಡೆ ಪುಷ್ಪೋದ್ಭವನಿಂತೆಂದಂ

ಕಂ॥ ದೇವರ್ಗೆ ದಾಸನಲ್ಲದೆ
ಭಾವಿಸೆ ಮತ್ತೊರ್ಬನಲ್ತು ತಳ್ಕೈಸಿಕೊಳ
ಲ್ಕಾವ ಸಮನೆಂದು ಮತ್ತೆ ಪ
ದಾವನತ ಮುಖಾಬ್ಜನಾಗಲೆತ್ತಿದನರಸಂ ೭

ವ॥ ಅಂತರಸಂ ಪರಮೋತ್ಸಾಹದಿಂ ಶಿರವಂ ಪಿಡಿದೆತ್ತಿ ಪತ್ತಿರೆ ಕುಳ್ಳಿರಿಸಿ

ಕಂ॥ ನಿಷ್ಪಂದ ದೃಷ್ಟಿಯಿಂ ಸುಖ
ಬಾಷ್ಪಾಂಬು ತುಟುಂಕೆ ದಶನರುಚಿಹರ್ಷಲತಾ
ಪುಷ್ಪದವೋಲ್ ಪಸರಿಸಲೇಂ
ಪುಷ್ಪೋದ್ಭವ ಸುಖಮೆ ಎಂದು ನರಪತಿ ಕೇಳ್ದಂ ೮

ವ॥ ಅಂತು ಕೇಳಲೊಡಂ

ಕಂ॥ ಧರೆಯೊಳ್ ಜ್ಯೇಷ್ಠಭ್ರಾತೃವೆ
ಗುರು ದೈವಂ ಮಾತೃ ಪಿತೃವೆನಿಪ್ಪುದಱಿಂ ದೇ
ವರನಗಲ್ದಿರ್ದೆನಗೆ ಸುಖಂ
ದೊರೆಕೊಳ್ವುದುಮುಂಟೆ ದೇವ ನೀನಱಿಯದುದೇ ೯

ವ॥ ಎಂದು ಪೇೞ್ದೊಡರಸಂ ಪರಿತೋಷಂಬಟ್ಟು ಬೞಿಕಿಂತೆಂದಂ

ಕೊಳ್ಳಲು ಪುಷ್ಪೋದ್ಭವನು ಹೀಗೆ ಹೇಳಿದನು. ೭. 'ವಿಚಾರ ಮಾಡಿದರೆ ನಾನು ಸ್ವಾಮಿಗೆ ಸೇವಕನಲ್ಲದೆ ಮತ್ತಾರೂ ಅಲ್ಲ, ತಬ್ಬಿಕೊಳ್ಳುವಷ್ಟು ನಿಮಗೆ ನಾನು ಸಮನಲ್ಲ' ಎಂದು ಹೇಳಿ ಮತ್ತೆ ಅವನ ಕಾಲಿಗೆ ತನ್ನ ಮುಖ ಕಮಲವನ್ನು ಬಗ್ಗಿಸಿದನು. ಆಗ ಅರಸನು ಅವನ ತಲೆಯನ್ನು ಮೇಲೆತ್ತಿದನು, ವ॥ ಅರಸನು ಪರಮೋತ್ಸಾಹದಿಂದ ಅವನ ತಲೆಯನ್ನು ಹಿಡಿದೆತ್ತಿ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು, ೮. ನಿಶ್ಚಲವಾದ ದೃಷ್ಟಿಯಿಂದ ನೋಡುತ್ತಾ ಸುಖದ ಕಂಬನಿಯನ್ನು ಸುರಿಸುತ್ತಾ 'ಪುಷ್ಪೋದ್ಭವನೆ ! ಸುಖವೆ !' ಎಂದು ನರಪತಿಯು ಪ್ರಶ್ನಿಸಿದನು. ಆಗ ಅವನ ಹಲ್ಲುಗಳ ಕಾಂತಿಯು ಸಂತೋಷವೆಂಬ ಬಳ್ಳಿಯ ಹೂಗಳು ಹರಡಿದಂತೆ ಕಂಗೊಳಿಸಿತು. ವ॥ ಹಾಗೇ ಕೇಳಲು, ೯. "ಧರೆಯಲ್ಲಿ ಹಿರಿಯಣ್ಣನೆ ಗುರು, ದೈವ, ತಾಯಿ, ತಂದೆ ಎಂದೆನಿಸುತ್ತಾನೆ ದೇವ ! ಹೀಗಿರುವಾಗ ನಿನ್ನಿಂದಗಲಿದ ನನಗೆ ಸುಖವುಂಟಾಗುವುದುಂಟೆ ! ನಿನಗೆ ತಿಳಿಯದೇ !" ವ॥ ಎಂದು ಪುಷ್ಪೋದ್ಭವನು ಹೇಳಿದನು. ಅರಸನು, ಅದನ್ನು ಕೇಳಿ ಸಂತೋಷ ಹೊಂದಿ

ಕಂ॥ ಆನಲ್ಲಿಂ ಪೋದ ಬೞಿ
ಕ್ಕೇನಂ ಬಗೆದಿರ್ದಿರೆಲ್ಲರೆಲ್ಲಿಗೆ ಪೋದಿರ್
ನೀನೆಲ್ಲಿರ್ದಪೆ ಪೇೞಿಂ
ದಾ ನರಪತಿಕೇಳ್ದನಲ್ತೆ ಪುಷ್ಪೋದ್ಭವನಂ ೧೦

ವ॥ ಅಂತು ಕೇಳಲೊಡಂ ಪುಷ್ಪೋದ್ಭವನಿಂತೆಂದಂ

ಕಂ॥ ದೇವರ ಕೆಯ್ಯಿಂ ಬೀೞ್ಕೊಂ
ಡಾವೆಲ್ಲರ್ ಪೋಗಿಯಾಯಿರುಳ್ ಸಲೆ ಸುಖನಿ
ದ್ರಾವಿಷ್ಟರಾಗಿ ಬೆಳಗಿನ
ಜಾವದೊಳೆರ್ದಿರ್ದೆವೈದೆ ಬೆಳಗಾಯ್ತಾಗಳ್ ೧೧

ವ॥ ಅಂತು ಬೆಳಗಾಗಲೊಡಂ ಸಂಧ್ಯಾವಂದನಾದಿ ಕ್ರಿಯೆಗಳಂ ಮಾಡಿ

ಮ॥ ಕಮಳಾನಂದಕರಂ ತಮೋವ್ರಜಹರಂ ಚಕ್ರಪ್ರತಿಷ್ಠಾಪರಂ
ಸುಮನಃ ಪ್ರೀತಿಯುತಂ ಮಹೋದಯನುತಂ ಪೀತಾಂಬರಾಲಂಕೃತಂ
ನಮಿತಾಶಾಮುಖಶೋಭಿತಂ ಬಹಳದೋಷಾರಾತಿ ಲಕ್ಷ್ಮೀಶನಂ
ತಮಿತಪ್ರಾಭವಮೂರ್ತಿ ಸೂರ್ಯನುದಯಂಗೆಯ್ದಂ ಧರಾಧೀಶ್ವರಾ ೧೨

ಮತ್ತೆ ೧೦. "ನಾನು ಅಲ್ಲಿಂದ ಹೋದ ಮೇಲೆ ನೀವೆಲ್ಲರೂ ಏನೆಂದು ಯೋಚಿಸಿದಿರಿ ? ಎಲ್ಲಿಗೆ ಹೋದಿರಿ ? ನೀನು ಎಲ್ಲಿದ್ದೆ ? ಹೇಳು" ಎಂದು ಪುಷ್ಪೋದ್ಭವನನ್ನು ಕೇಳಿದನು. ವ॥ ಹಾಗೆ ಕೇಳಲು ಪುಷ್ಪೋದ್ಭವನು ಹೀಗೆ ಉತ್ತರಿಸಿದನು—೧೧. "ಸ್ವಾಮಿಯಿಂದ ಬೀಳ್ಕೊಂಡು ನಾವೆಲ್ಲರೂ ಮುಂದೆ ಪ್ರಯಾಣ ಮಾಡಿದೆವು. ರಾತ್ರಿಯಾಗಲು ಸುಖವಾಗಿ ನಿದ್ರಿಸಿದೆವು. ಚೆನ್ನಾಗಿ ಬೆಳಗಾಗಲು ಬೆಳಗಿನ ಜಾವದಲ್ಲಿ ಎದ್ದೆವು ವ॥ ಬೆಳಗಾಗಲು ಸಂಧ್ಯಾವಂದನಾದಿ ಕ್ರಿಯೆಗಳನ್ನು ಮಾಡಿದೆವು. ೧೨. ಕಮಲಗಳಿಗೆ ಆನಂದಕರನಾದ, ಕತ್ತಲೆಯ ಗುಂಪನ್ನು ಚದುರಿಸುವ, ಚಕ್ರವಾಕಪಕ್ಷಿಗಳನ್ನು ಒಂದುಗೂಡಿಸುವ, ಹೂವುಗಳನ್ನು ಅರಳಿಸುವ, ಪುಣ್ಯಶಾಲಿಗಳಿಂದ ಸ್ತುತಿಸಲ್ಪಟ್ಟ (ಅಥವಾ ಶ್ರೇಷ್ಠವಾದ ಉದಯಕಾಲದಲ್ಲಿ ಸ್ತುತಿಸಲ್ಪಟ್ಟ) ಹಳದಿಯ ಬಣ್ಣಕ್ಕೆ ತಿರುಗಿದ ಆಕಾಶದಿಂದ ಅಲಂಕೃತನಾದ, ಬಾಗಿದ ಆಶಾ (ದಿಕ್) ವನಿತೆಯರ ಮುಖಗಳಿಂದ ಶೋಭಿತನಾದ, ಕಗ್ಗತ್ತಲ ರಾತ್ರಿಯ ಶತ್ರುವಾದ ಅಮಿತವಾದ ಪ್ರಭಾವವುಳ್ಳ ಸೂರ್ಯನು ಲಕ್ಷ್ಮೀಶನಂತೆ, ಅರಸನೇ ! ಉದಯಿಸಿದನು–ಲಕ್ಷ್ಮೀಶನ ಪರವಾದ ಅರ್ಥ, ಲಕ್ಷ್ಮಿಗೆ ಆನಂದಕರನು, ಅಜ್ಞಾನವೆಂಬ ಕತ್ತಲೆಯನ್ನು ಓಡಿಸುವವನು ; ಚಕ್ರಾಯುಧದಿಂದ ಗೌರವವುಳ್ಳವನು, ದೇವತೆಗಳಿಗೆ ಪ್ರೀತಿಕರನು, ಪುಣ್ಯಶಾಲಿಗಳಿಂದ ಸ್ತುತಿಸಲ್ಪಟ್ಟವನು, ಪೀತಾಂಬರಧಾರಿಯಾದವನು,

ಕಂ॥ ಕುಮುದಿನಿಗೆ ದಿವಾಶ್ವಾಸಂ
ಸಮನಿಸೆ ಕಮಳಿನಿ ನಗುತ್ತೆ ಕೋಕಂಗಳ್ಗ
ದ್ಭ್ರಮರಧ್ವನಿಯಂ ತೋಱಿಸೆ
ಸಮಸುಖಮಾಯ್ತೆಂದಳತಿ ರಜೋಗುಣಮೆಸೆಯಲ್ ೧೩

ಶಾ॥ ಕಾಯಕ್ಲೇಶಮದೆನ್ನೊಳಾಗೆ ಜಗದೊಳ್ ಮರ್ಬುರ್ಬಿ ಮೈವೆರ್ಚಿದ
ನ್ಯಾಯಂ ಕೈಮಿಗಲೆನ್ನ ಕಾಂತನನಲಂಪಿಂ ಕೂಡಿದಳ್ ಪಶ್ಚಿಮಾ
ಶಾಯೋಷಿತ್ಕುಟಿಲಾತ್ಮೆಯೆಂದು ದಿವಸಶ್ರೀ ಬೈದು ಬೆಂಬತ್ತಿದಳ್
ಛಾಯಾಸಂಕುಳದಿಂದೆನಲ್ಕೆ ಪಡುವಲ್ ಮುಂತಾದುವೆಲ್ಲಾ ನೆಟಿಲ್ ೧೪

ವ॥ ಅಂತುದಯವಾಗಲೊಡಂ ನಿಮ್ಮಡಿಗಳಂ ನೋಡಲಾಸ್ಥಾನಮಂಟಪಕ್ಕೆ ಬಂದು ಕಾಣದೆ ಸೆಜ್ಜೆವನೆಯಂ ನೋಡೆಯಲ್ಲಿಯುಂ ಕಾಣದೆ

ಉ॥ ಸಂಗಸುಖಕ್ಕೆ ಕೂರ್ತು ವನದೇವತೆಯೊಯ್ದಳೋ ಮೇಣ್ ಭುಜದ್ವಯಾ
ಲಿಂಗನದಾಸೆಯಿಂ ಖಚರಕಾಂತೆಯರೊಯ್ದರೊ ಯೌವನಕ್ಕೆ ಮೋ
ಣಂಗವಿಸಲ್ಕೆ ಕಿನ್ನರಿಯರೊಯ್ದರೊ ಮೇಣ್ ಕಡುಪಿಂ ನಿಶಾಟರೊಳ್
ಸಂಗರವಾಯ್ತೊ ಪೇಟೆನುತೆ ಚಿಂತಿಸುತಿರ್ದೞಿಳಾಧಿನಾಯಕಾ ೧೫

ಭಕ್ತರ ಆಶಾಪೂರ್ಣಮುಖಗಳಿಂದ ಶೋಭಿತನಾದವನು, ದುಷ್ಟ ಸಂಹಾರಕನು. ೧೩. ಕನ್ನೈದಿಲೆಗೆ ದಿವಾಶ್ವಾಸವುಂಟಾಯಿತು. (ಮೊಗ್ಗಾಯಿತು ?) ಅದೇ ಸಮಯಕ್ಕೆ ಕಮಲಿನಿಯು ಅರಳಿ ಚಕ್ರವಾಕಗಳಿಗೆ ಮೇಲಕ್ಕೆ ಹಾರುವ ದುಂಬಿಗಳ ಧ್ವನಿಯನ್ನು ತೋರಿಸಿತು. ಹೆಚ್ಚಾಗಿ ಹರಡಿದ ರಜೋಗುಣದಿಂದ (ಪರಾಗ–ಮಬ್ಬು) ಸಮಸುಖ ವಾಯ್ತೆಂದು ಎಂದಳು. ೧೪. 'ನನಗೆ ಕಾಯಕ್ಲೇಶವನ್ನುಂಟುಮಾಡಿ, ಜಗತ್ತಿನಲ್ಲೆಲ್ಲಾ ಒತ್ತಾದ ಕತ್ತಲೆಯನ್ನು ಹರಡಿ, ಅನ್ಯಾಯವು ಕೈಮೀರಲು, ಪಶ್ಚಿಮದಿಗಂಗನೆಯು ನನ್ನ ಕಾಂತನೊಡನೆ ಪ್ರೀತಿಯಿಂದ ಕೂಡಿದಳು. ಅವಳು ಕುಟಿಲ ಸ್ವಭಾವದವಳು' ಎಂದು ಬೈಯ್ಯುತ್ತಾ ದಿವಸಲಕ್ಷ್ಮಿಯು ನೆರಳಿನ ಸಮೂಹದ ನೆಪದಿಂದ ಬೆನ್ನಟ್ಟಿ ಓಡಿಸಿದಳೋ ಎಂಬಂತೆ ನೆರಳು ಪಶ್ಚಿಮ ದಿಕ್ಕಿಗೆ ಎಲ್ಲೆಡೆಯೂ ಹರಡಿತು[1] ವ॥ ಉದಯ ವಾದ ಕೂಡಲೆ ನಿಮ್ಮ ಪಾದದರ್ಶನಕ್ಕಾಗಿ ಆಸ್ಥಾನ ಮಂಟಪಕ್ಕೆ ಬಂದೆವು. ಅಲ್ಲಿ ಕಾಣದೆ ಮಲಗುವ ಮನೆಗೆ ಹೋಗಿ ನೋಡಿದೆವು. ಅಲ್ಲಿಯೂ ಕಾಣದೆ—೧೫. ಸಂಗ ಸುಖವನ್ನು ಬಯಸಿ ವನದೇವತೆಯೇನಾದರೂ ಕರೆದುಕೊಂಡು ಹೋದಳೊ, ತೋಳು ಗಳೆರಡರಿಂದಲೂ ಆಲಂಗಿಸಿ ಕೊಳ್ಳಬೇಕೆಂಬ ಆಸೆಯಿಂದ ದೇವಾಂಗನೆಯರೇನಾದರೂ ಕರೆದುಕೊಂಡು ಹೋದರೊ, ಯೌವನದಿಂದ ಆಕರ್ಷಿತರಾಗಿ ಕೂಡುವುದಕ್ಕಾಗಿ ಕಿನ್ನರಿ ಯರೇನಾದರೂ ಕರೆದುಕೊಂಡು ಹೋಗಿರಬಹುದೊ, ಅಥವಾ ಪರಾಕ್ರಮದಿಂದ ರಾಕ್ಷಸರೊಡನೆ ಯುದ್ಧವೇನಾದರೂ ನಡೆಯಿತೋ, ಹೇಳು–ಎಂದು ಧರಾಕಾಂತನೆ !

1. ಪ್ರಾತಃಕಾಲದಲ್ಲಿ ವೃಕ್ಷಾದಿಗಳ ನೆರಳು ಪಶ್ಚಿಮ ದಿಕ್ಕಿಗೆ ಬಾಗಿರುವುದು (ರಂ).

ಚಂ॥ ದಿಗಧಿಪರಂ ತೆರಳ್ಚುವೆವೊ ನಾಗನಿವಾಸದ ಶೇಷನಂ ಬರಲ್
ತೆಗೆವೆವೊ ಗೋತ್ರಪರ್ವತಮನಿರ್ಕಡಿ ಮಾೞ್ಪೆವೊ ಮೇಘಮಾರ್ಗಮಂ
ಬಗಿವೆವೊ ವಾರ್ಧಿಯಂ ಮುಳಿದು ಪೀರ್ವೆವೊ ಭೂಮಿಯನೆಯ್ದೆ ಪೋೞ್ವೆ
ವೋ ಬಗೆಮಿಗೆ ಪೇೞ್ವೆಂಬ ಕಡುಪಂ ತಳೆದಿರ್ದೆವಿಳಾಧಿನಾಯಕಾ ೧೬

ವ॥ ಎಂದ ಮಾತಿಂಗರಸನ ಮೊಗದೊಳ್ ಮುಗುಳ್ನಗೆ ಮಿಸುಂಗಲದನಱಿದು ಪುಷ್ಪೋದ್ಭವನಿಂತೆಂದಂ

ಕಂ॥ ಆಪವನಾರದವಂ ಸೇ
ನಾಪತಿಯೇಕಾಕಿ ಬಡವನಧಿಕಂ ಕಿಱಿಯಂ
ತಾಪಸನುದ್ಧತನೆನ್ನದೆ
ಕೋಪಂ ಸಮವಲ್ತೆ ಜೀವರಾಶಿಯೊಳೆಲ್ಲಂ ೧೭

ವ॥ ಅಂತಸ್ತಾಪದಿಂದಾದ ಕೋಪಮಂ ತೞ್ಗಿಸಿಕೊಂಡು

ಕಂ॥ ಸರ್ವೋಪಾಯದೊಳಱಿಯಲ್
ನಿರ್ವಾಹಮದಲ್ಲದಿಲ್ಲವೆಂತೆನಲಾವಿ
ನ್ನೊರ್ವೊರ್ವರೆಯ್ದಿ ದೆಸೆಗಳೊ
ಳುರ್ವೀ ವಲ್ಲಭನನಱಸೆ ಪೋಪುದೆ ಕಜ್ಜಂ ೧೮

ಯೋಚಿಸುತ್ತಿದ್ದೆವು. ೧೬. ರಾಜನೆ ! "ದಿಕ್ಕುಗಳ ಒಡೆಯರನ್ನು ಎದುರಿಸಿ ಓಡಿಸೋಣವೇ ! ನಾಗಲೋಕದಲ್ಲಿ ವಾಸ ಮಾಡುವ ಆದಿಶೇಷನನ್ನು ಹೊರಕ್ಕೆ ಎಳೆದು ಹಾಕೋಣವೇ ! ಕುಲಪರ್ವತಗಳನ್ನು ಎರಡು ತುಂಡಾಗಿ ಕತ್ತರಿಸಿ ಹಾಕೋಣವೇ ! ಆಕಾಶವನ್ನು ಬಗಿದು ಹಾಕೋಣವೇ ! ಕೋಪದಿಂದ ಸಮುದ್ರವನ್ನು ಹೀರಿ ಬಿಡೋಣವೋ ! ಭೂಮಿಯನ್ನು ಚೆನ್ನಾಗಿ ಸೀಳೋಣವೇ ! ಹೇಳು" ಎಂಬ ಒಂದು ಆವೇಶವನ್ನು ಆಗ ನಾವು ತಳೆದಿದ್ದೆವು. ವ॥ ಹೀಗೆ ಹೇಳಿದ ಮಾತನ್ನು ಕೇಳಿ ಅರಸನ ಮುಖದಲ್ಲಿ ಮುಗುಳ್ನಗೆಯು ಮಿನುಗಿತು. ಅದನ್ನು ತಿಳಿದು ಪುಷ್ಪೋದ್ಭವನು ಹೀಗೆ ಹೇಳಿದನು—೧೭. "ಕೈಲಾಗುವವನು, ಕೈಲಾಗದವನು, ಸೇನಾಪತಿ, ಒಬ್ಬಂಟಿಗ, ಬಡವ, ಮೇಲಾದವನು, ಕೀಳಾದವನು, ತಪಸ್ವಿ, ಕ್ರೂರಿ, ಎಂಬ ವ್ಯತ್ಯಾಸವಿಲ್ಲದೆ ಜೀವರಾಶಿಗಳಲ್ಲಿ ಎಲ್ಲರಿಗೂ ಕೋಪವು ಸಮಾನವಾದುದಷ್ಟೆ ! ವ॥ ಅಂತಸ್ತಾಪದಿಂದ ಉಂಟಾದ ಕೋಪವನ್ನು ಅಡಗಿಸಿಕೊಂಡು—೧೮. "ಎಲ್ಲ ಉಪಾಯಗಳಿಂದ ಅರಿಯಲು ಯತ್ನಿಸಿದರೂ ಇನ್ನು ಇದಕ್ಕೆ ಉಪಾಯವೇ ಇಲ್ಲವೆಂದು ಹೇಳಲಾಗದು. ಆದುದರಿಂದ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೋಗಿ ಅರಸನನ್ನು ಅರಸೋಣ. ಇದೇ ಯುಕ್ತ

ವ॥ ಅಂತು ದೇವರನಱಸ ಪೋಪುದುಂ ನಿಶ್ಚಯಂಮಾಡಿ ಮಗಧೇಶ್ವರಂಗೆ ತದ್ವಿಶೇಷಮಂ ಪೇೞ್ದಟ್ಟಿ ಬಲಮೆಲ್ಲಮಂ ಪುಷ್ಪಪುರಕ್ಕೆ ಕಳಿಪಿ

ಕಂ॥ ಎಣ್ಬಟ್ಟೆಗಳೊಳ್ ನೃಪನಂ
ಕಾಣ್ಬನ್ನಂ ತೊೞಲಿಮೆಂದು ಮನದೊಳಗೞಲಿಂ
ದೆಣ್ಬರುಮನಪ್ಪಿಯುಂ ಬಿಸು
ಗಣ್ಬನಿಯಿಂದೊಂದು ದೆಸೆಗೆ ಪೊಱಮಟ್ಟಾಗಲ್ ೧೯

ಎಲ್ಲೆಡೆಯೊಳಱಸಿ ಕಾಣದೊ
ಡೆಲ್ಲರ್ ಚಂಪಾಪುರಕ್ಕೆ ಬಂದೊಲವಿಂ ಮ
ತ್ತಲ್ಲಿಂ ಮೇಲಣ ಕಾರ್ಯಮ
ನುಲ್ಲಾಸದೊಳಱಿಪಲೆಂದು ಕಳಿಪಿದೆನವರಂ ೨೦

ವ॥ ಅಂತವರೆಲ್ಲರಂ ಕಳಿಪಿಯಾನೊಂದೆಸೆಗೆ ಪೊಱಮಟ್ಟಾಗಳ್

ಮ॥ ಸರಸೀಜಾತಸಖಂ ಸಹಸ್ರಕರದಿಂ ಸರ್ವೋರ್ವಿಯೊಳ್ ಕೆಂಡಮಂ
ಪರಪುತ್ತಿರ್ದನೊ ಮೇಣ್‌ದವಾನಳ ಶಿಖಾಸಂತಾನಮಿಂತೀಗಳು
ರ್ವರೆಯೊಳ್ ಮೂರ್ತಿಯನಾಂತು ನಿಂದುದೊ ದಿಟಂ ಪೇೞೆಂಬಿನಂ ಕಾಯ್ಪನಿ
ರ್ಭರದಿಂ ಕೈಮಿಗೆ ಬಂದುದಗ್ಗಳ ನಿದಾಘಂ ಮಾಘಸಂಹಾರಕಂ ೨೧

ವಾದ ಕಾರ್ಯ. ವ॥ ಎಂದು ಸ್ವಾಮಿಯನ್ನು ಅರಸಲು ಹೋಗುವುದೆಂದು ನಿಶ್ಚಯಿಸಿ ಮಗಧ ರಾಜನಿಗೆ ಈ ವಿಷಯವನ್ನು ಹೇಳಿ ಕಳುಹಿಸಿ ಸೇನೆಯನ್ನೆಲ್ಲ ಕುಸುಮಪುರಕ್ಕೆ ಕಳುಹಿಸಿದೆವು. ೧೯. 'ಎಂಟು ದಿಕ್ಕುಗಳಲ್ಲಿಯೂ ರಾಜನನ್ನು ಕಾಣುವವರೆಗೂ ಹುಡುಕಿರಿ' ಎಂದು ಹೇಳಿ ಎಂಟು ಜನರೂ ದುಃಖದಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡು ಕಣ್ಣೀರಿಡುತ್ತಾ ಅಗಲಿ ಒಬ್ಬೊಬ್ಬರೂ ಒಂದೊಂದು ದಿಕ್ಕಿಗೆ ಹೊರಟೆವು. ಆಗ ೨೦. ಎಲ್ಲ ಸ್ಥಳಗಳಲ್ಲಿಯೂ ಹುಡುಕಿ ಕಾಣದೆ ನಾವೆಲ್ಲರೂ ಚಂಪಾಪುರಕ್ಕೆ ಬಂದು ಸೇರಿದೆವು. ಮತ್ತೆ ಅಲ್ಲಿಂದ ಮುಂದೆ ಆಗಬೇಕಾದ ಕಾರ್ಯವನ್ನು ಉಲ್ಲಾಸದಿಂದ ತಿಳಿಸುವುದಕ್ಕಾಗಿ ಅವರನ್ನು ಕಳುಹಿಸಿದೆನು. ವ॥ ಹಾಗೆ ಅವರನ್ನೆಲ್ಲ ಕಳುಹಿಸಿ ನಾನು ಒಂದು ಕಡೆಗೆ ಹೊರಟೆನು. ಆಗ ೨೧. ಮಾಗಿಯ ಕಾಲವನ್ನು ನಾಶಮಾಡಿ ಪ್ರಬಲವಾದ ಬೇಸಿಗೆಯು ಬಂದಿತು. ಸೂರ್ಯನು ತನ್ನ ಸಾವಿರ ಕಿರಣಗಳಿಂದ ಭೂಮಿಯಲ್ಲೆಲ್ಲ ಕೆಂಡವನ್ನು ಹರಡುತ್ತಿದ್ದಾನೆಯೋ ! ಅಥವಾ, ಕಾಳ್ಕಿಚ್ಚಿನ ಉರಿಗಳ ಸಮೂಹವು ಈಗ ಭೂಮಿಯ ಮೇಲೆ ಈ ರೂಪವನ್ನು ತಳೆದು ನಿಂತಿದೆಯೋ ! ನಿಜವನ್ನು ಹೇಳು ಎಂಬ

ಚಂ॥ ಖರಕರತಾಪದಿಂದವನಿ ಪೊಪ್ಪಳಿಸಿತ್ತಖಿಳಾದ್ರಿಗಳ್ ಭಯಂ
ಕರಮೆನೆ ಕಾಯ್ದು ಕರ್ಬುನದವೋಲ್ ಕಿಡಿವೆತ್ತುವನೋಕಹ ವ್ರಜಂ
ಮುರುಟಿದುವಧ್ವಗರ್ ಮಿಡುಕಿ ಕಿಚ್ಚಿನ ಕೀಡೆವೊಲಾದರಾ ದಿಶಾಂ
ತರಮನಲಾಶೆಯಾದುವೆನಲೇವೊಗಟ್ವೆಂ ಕಡುಪಂ ನಿದಾಘದಾ ೨೨

ಚಂ॥ ವನಮೃಗರಾಜಿಗಳ್ ತೃಷೆಯ ಕೋಟಲೆಯಿಂ ವನವೆಲ್ಲಮಂ ತೊಟ
ಲ್ದಿನ ಕಿರಣಂಗಳಿಂ ಕೆಡೆದು ಚೇಷ್ಟಿಸಿ ಕಂಡು ಮರೀಚಿಕಾ ಜಲ
ಕ್ಕನುನಯದಿಂ ಕರಂ ಪರಿದು ಲಂಘಿಸಿ ತಮ್ಮೆರ್ದೆಯಾಱೆ ತಾಱು ತ
ಟ್ಟೆನಲಸುವಿಂದಗಲ್ದುವೆನಲಿಲ್ಲಿ ದುರಾಸೆಯೊಳಾರೊ ಬೀಟದರ್ ೨೩

ಕಂ॥ ನಿರವಧಿ ನಿದಾಘ ದುರ್ಭರ
ಪರಿತಾಪದೊಳುರಿದು ಕರಿದು ವನಗಜಕುಂಭಂ
ಬಿರಿಯೆ ತಳತಳಿಸಿದುವು ರವಿ
ಕಿರಣದ ತತ್ತಿಗಳೆನಲ್ಕೆ ಮುತ್ತುಗಳಾಗಳ್ ೨೪

ವ॥ ಅಂತುಗ್ರವಾದ ನಿದಾಘದೊಳಾಂ ಪೋಗುತ್ತೆ

ಹಾಗೆ ಆ ಬೇಸಿಗೆಯ ಬೇಗೆಯು ಒತ್ತಾಗಿ ಹರಡಿಕೊಂಡು ಬಂದಿತು ೨೨. ಉಗ್ರವಾದ ಕಿರಣಗಳುಳ್ಳ ಸೂರ್ಯನ ತಾಪದಿಂದ ಭೂಮಿಯು ಬಿರಿದು ಹೊಪ್ಪಳಿಕೆ[1]ಗಳೆದ್ದುವು. ಬೆಟ್ಟಗಳೆಲ್ಲ ಭಯಂಕರವಾದ ಕಬ್ಬಿಣದ ಹಾಗೆ ಕಿಡಿಗಳನ್ನು ಕೆದರಿದುವು. ಮರಗಳ ಗುಂಪು ತಾಪಕ್ಕೆ ಒಣಗಿ ಸುರುಟಿಕೊಂಡುವು. ದಾರಿಗರು ಒದ್ದಾಡಿ ಬೆಂಕಿಯ ಹುಳುಗಳಂತಾದರು. ಎಲ್ಲ ದಿಕ್ಕುಗಳೂ ಆಗ್ನೇಯ ದಿಕ್ಕುಗಳಂತಾದವು. ಆ ಬೇಸಿಗೆಯ ಪ್ರತಾಪವನ್ನು ಏನೆಂದು ಹೇಳಲಿ ? ೨೩. ಕಾಡುಮೃಗಗಳು ಬಾಯಾರಿ ಹಿಂಸೆಯನ್ನು ತಡೆಯಲಾರದೆ ಕಾಡಿನಲ್ಲೆಲ್ಲ ಅಲೆದಾಡಿದುವು. ಸೂರ್ಯನ ಕಿರಣಗಳಿಂದ ತಾಪಗೊಂಡು ಬಿದ್ದು ಹೊರಳಿದುವು. ಕೊನೆಯ ಬಿಸಿಲ್ಗುದುರೆಯ ನೀರಿಗೆ ಹಂಬಲಿಸಿ ಓಡಿಹೋಗಿ ಹೃದಯವು ಒಣಗಲು ಮೋಸ ಹೋಗಿ ಪ್ರಾಣನೀಗಿದುವು. ದುರಾಸೆಗೊಳಗಾದವರು ಯಾರು ತಾನೇ ಕೆಡುವುದಿಲ್ಲ ? ೨೪. ಮಿತಿಮೀರಿದ ಬೇಸಿಗೆ ತಡೆಯಲಾಗದ ಪರಿತಾಪದಿಂದ ಉರಿದು ಕರಿದು ಕಾಡಾನೆಯ ಕುಂಭ ಸ್ಥಳವು ಬಿರಿಯಿತು. ಆಗ ಅಲ್ಲಿದ್ದ ಮುತ್ತುಗಳು ಸೂರ್ಯನ ಕಿರಣದ ಮೊಟ್ಟೆಗಳೋ ಎಂಬಂತೆ ತಳತಳ ಹೊಳೆದುವು. ವ॥ ಹಾಗೆ ಉಗ್ರವಾದ ಬೇಸಿಗೆಯಲ್ಲಿ ನಾನು

1. ಹೊಪ್ಪಳಿಕೆ=ಚಕ್ಕೆ.

ಉ॥ ಮೆಯ್ಮೃಱಿಸುಂದಿ ಪಲ್ಲೊಣಗಿ ಕಣ್ಕುೞಿದುಗ್ರನಿದಾಘತಾಪದಿಂ
ಬಾಯ್ಮಿಗೆ ಬತ್ತಿ ನಾಲಗೆ ಸುರುಳ್ದಿರ್ದೆಯಾಱಿ ಮನಂಕಟಿಲ್ದು ಮೆ
ಲ್ಸುಯ್ಮಿಗಿಲಾಗಿ ದೃಷ್ಟಿ ಪರಿಗುಂದಿ ಸಮಂತಸು ಪೋಪರಂದದಿಂ
ಕೆಯ್ಮುಡಿಸನ್ನೆಯೆನ್ನೊಳೆಸೆಯಲ್ ಕಡುನೀರಡಸಿರ್ದೆನುರ್ವಿಪಾ ೨೫

ವ॥ ಅಂತು ತೃಷಾಪೀಡಿತನಾಗಿ ಪೋಪಾಗಳ್ ಮುಂದೆ

ಮ॥ ಇಭಸಂಹಾರಿರವ ಪ್ರತಿಧ್ವನಿ ಗುಹಾರಮ್ಯಂ ಜರತ್ತಾಪಸ
ಕ್ಷುಭಿತಂ ಕ್ರೂರಮೃಗಪ್ರಕೀರ್ಣಕಟಕಂ ನಿತ್ಯಾಂಧಕಾರಂ ಮಣಿ
ಪ್ರಭವಸ್ಥಾನ ನಿಕುಂಜಮೆನ್ನಿದಿರೊಳಂದೊಪ್ಪಿರ್ದುದೌನ್ನತ್ಯದಿಂ
ನಭಮಂ ಚುಂಬಿಸುತಿರ್ದುದೊಂದು ಕುಧರಂ ಭೂಪಾಲ ವಿದ್ಯಾಧರಾ ೨೬

ವ॥ ಮತ್ತಮಾ ಪರ್ವತಂ ಸರ್ವಜ್ಞನಂತೆ ಬಹಳ ಗುಹಾನ್ವಿತಮುಂ ರಾಜಧಾನಿಯಂತೆ ಚಿತ್ರಶಾಲಾಭಿರಾಮಮುಂ ಋಷಿಸಭಾಮಂಡಲದಂತೆ ಭೃಗುವಿರಾಜಿತಮುಂ ರಂಗಶೋಭೆಯಂತೆ ಶೃಂಗಾರವಿಲಾಸಮುಂ ದ್ವಿಜರಾಜಿಯಂತೆ ಸದ್ವಂಶಭೂಷಣಮುಂ ವಿಳಾಸಿನೀಜನದಂತೆ ತಮಾಳ

ಹೋಗುತ್ತಾ—೨೫. ಮಹಾರಾಜನೆ ! ತುಂಬ ನೀರಡಿಕೆಯಿಂದ ಸಾಯುವವರಂತೆ ಕೈ ತಲೆಗಳಿಂದ ಸನ್ನೆ ಮಾಡುವ ಸ್ಥಿತಿಯನ್ನು ಹೊಂದಿದೆನು. ಉಗ್ರವಾದ ಬೇಸಿಗೆಯ ತಾಪ ದಿಂದ ಶರೀರದ ಮೇಲಿನ ಎಚ್ಚರ ತಪ್ಪಿತು. ಹಲ್ಲು ಒಣಗಿ ಹೋಯಿತು. ಕಣ್ಣುಗಳು ಗುಳಿಬಿದ್ದುವು. ಬಾಯಿ ಬತ್ತಿಹೋಯಿತು. ನಾಲಿಗೆ ಒಣಗಿ ಸುರುಟಿತು. ಎದೆಯು ಒಣಗಿ ಹೋಯಿತು. ಮನಸ್ಸು ಶಕ್ತಿಗುಂದಿತು. ಉಸಿರಾಡುವುದು ನಿದಾನವಾಯಿತು. ನೋಟದ ಗತಿ ಕುಂದಿತು. ವ|| ಹಾಗೆ ಬಾಯಾರಿಕೆಯಿಂದ ಪೀಡಿತನಾಗಿ ಹೋಗು ತ್ತಿದ್ದೆನು. ಆಗ ಮುಂದೆ—೨೬. ಭೂಪಾಲ ವಿದ್ಯಾಧರನೆ ! ನಾನು ಎದುರಿನಲ್ಲಿ ತುಂಬ ಉನ್ನತವಾದ, ಆಗಸವನ್ನು ಚುಂಬಿಸುತ್ತಿದ್ದ ಒಂದು ಪರ್ವತವನ್ನು ಕಂಡೆನು. ಅದು ಸಿಂಹ ಧ್ವನಿಯ ಪ್ರತಿಧ್ವನಿಯನ್ನೊಳಗೊಂಡ ಗುಹೆಗಳಿಂದ ರಮ್ಯವಾಗಿದ್ದಿತು. ವೃದ್ಧ ತಪಸ್ವಿ ಗಳ ತಪೋವೇಗದಿಂದ ತಳಮುಳಗೊಂಡಿದ್ದಿತು. ಅದರ ತಪ್ಪಲುಗಳಲ್ಲಿ ಕ್ರೂರ ಮೃಗ ಗಳು ಸಂಚರಿಸುತ್ತಿದ್ದುವು. ಯಾವಾಗಲೂ ಕತ್ತಲೆ. ರತ್ನದ ಗಣಿಗಳುಳ್ಳ ಪೊದೆಗಳಿಂದ ತುಂಬಿದ್ದಿತು. ವ|| ಆ ಪರ್ವತವು ಶಿವನಂತೆ ಅನೇಕ ಗುಹೆಗಳಿಂದ ಕೂಡಿದೆ (ಗುಹ= ಕುಮಾರಸ್ವಾಮಿ ; ಗುಹೆ) ರಾಜಧಾನಿಯ ಹಾಗೆ ಚಿತ್ರಶಾಲೆಗಳಿಂದ ಸುಂದರವಾಗಿದೆ. (ಶಾಲ=ಶಾಲೆ ; ಸಾಲವೃಕ್ಷ) ಋಷಿಗಳ ಸಭೆಯಂತೆ ಭೃಗುವಿನಿಂದ ವಿರಾಜಿತವಾಗಿದೆ. (ಭೃಗು=ಕಡಿದಾದ ಹಳ್ಳಿ, ಭೃಗು ಋಷಿ) ರಂಗಭೂಮಿಯ ಶೋಭೆಯ ಹಾಗೆ ಶೃಂಗಾರದ ವಿಲಾಸ[1]ದಿಂದ ಕೂಡಿದೆ. ಬ್ರಾಹ್ಮಣರ ಸಾಲಿನಂತೆ ಸದ್ವಂಶವೆಂಬ ಭೂಷಣವುಳ್ಳದ್ದಾಗಿದೆ.

---

1. ಶೃಂಗ=ವೃಕ್ಷಾಗ್ರದಲ್ಲಿ, ಅರ=ಸಂಚರಿಸುವ, ವಿ=ಹಕ್ಕಿಗಳ, ಲಾಸ=ಕುಣಿತ ದಿಂದ (ರಂ)

ಪತ್ರವಿರಾಜಿತಮುಂ ಕೈಲಾಸಗಿರಿಯಂತೆ ಪಂಚಾಸ್ಯಸಂಚಿತಮುಂ ನಭೋತ್ಪಾತಕದಂತೆ ಪ್ರತಿ ಸೂರ್ಯ ವಿಜೃಂಭಿತಮುಂ ಭಾರತದಂತೆ ಸಕಲಮುಖಮಂಡಿತವ್ಯಾಳಮುಂ ದಿವಸಶ್ರೀಯಂತೆ ಪತಂಗಪಥರಂಜಿತಮುಮೆನಿಸಿರ್ಪುದು ಅಂತುಮಲ್ಲದೆಯುಂ

ಉ॥ ಚಿತ್ರದ ಕಂಕಣಂ ಬಳಪದೋಲೆ ಕುರುಳ್ಗಳವಟ್ಟ ಕಾಡ ಹೂ
ಕತ್ತರಿಪೀಲಿಯುಳ್ಳುಡೆ ವನೇಭಜ ಮೌಕ್ತಿಕಹಾರಯುಪ್ಪಿ ಬಾ
ಗೊತ್ತಿದ ಬಿಲ್ಸರಲ್ ಕದಕದಿಪ್ಪಕುಚಂ ಸುಲಿಪಲ್ಲ ಕಾಂತಿ ಚೆ
ಲ್ವೆತ್ತಧರಂ ಮನಂಗೊಳೆ ಪುಳಿಂದಿಯರೊಪ್ಪುವರಾ ಮಹಾದ್ರಿಯೊಳ್ ೨೭

ಮ॥ ಮಱಿಸಿಂಗಂಗಳ ಹಾಸಮಂ ತಿವಿದು ಮತ್ತೇಭಕ್ಕೆ ಬಿಟ್ಟಂತವಂ
ತಱಿಸಲ್ವನ್ನೆಗಮಾಗಳಾ ಗಜದ ಕುಂಭಸ್ಥಾನದೊಳ್ ನೆತ್ತರಂ
ಸುಱಸುಱಿಂದಿರದೀಂಟಿ ದೋರೆಸಸಿಮುತ್ತಂ ಸುತ್ತಲುಂ ಚೆಲ್ಲಿ ಕಾ
ಡೆಱೆಯುಂ ಬಂದೊಸೆದಾಯ್ದುವಂ ಶಬರಿ ಮೆಚ್ಚಿಲ್ ಮಾಡುವಳ್ ಹಾರವಂ ೨೮

(ಒಳ್ಳೆಯ ಬಿದುರೆಂಬ ಭೂಷಣ-ಒಳ್ಳೆಯ ವಂಶವೆಂಬ ಭೂಷಣ) ಸುಂದರ ನಾರಿಯರಂತೆ ತಮಾಲ ಪತ್ರಗಳಿಂದ ವಿರಾಜಿತವಾಗಿದೆ. (ಹೊಂಗೆಯ ಮರದೆಲೆಗಳು-ಮುಖ ಮತ್ತು ಕೆನ್ನೆಗಳ ಮೇಲೆ ಬರೆದ ತಮಾಲ ಪತ್ರಾಕಾರದ ಚಿತ್ರಗಳು). ಕೈಲಾಸ ಗಿರಿಯ ಹಾಗೆ ಪಂಚಾಸ್ಯನಿಂದ ಕೂಡಿದೆ (ಪಂಚಾಸ್ಯ = ಸಿಂಹ-ಶಿವ). ಆಕಾಶದಲ್ಲಿ ಕಾಣಿಸುವ ಉತ್ಪಾತ ದಂತೆ ಪ್ರತಿ ಸೂರ್ಯನಿಂದ ವಿಜೃಂಭಿಸುತ್ತಿತ್ತು (ಪ್ರತಿ ಸೂರ್ಯ = ಪ್ರತಿಫಲಿಸಿದ ಮಿಥ್ಯಾ ಸೂರ್ಯ). ಭಾರತದ ಹಾಗೆ ಅಲಂಕೃತವಾದ ಮುಖವುಳ್ಳ ವ್ಯಾಳನಿಂದ ಕೂಡಿದೆ (ವ್ಯಾಳ=ಸರ್ಪ-ದುಷ್ಟ). ದಿವಸ ಲಕ್ಷ್ಮಿಯಂತೆ ಪತಂಗ ಪಥದಿಂದ ರಂಜಿತವಾಗಿದೆ (ಪತಂಗ ಪಥ-ಸೂರ್ಯನ ದಾದಿಯಾದ ಆಕಾಶ) ಆಕಾಶದಲ್ಲಿ ಬಣ್ಣಬಣ್ಣದಿಂದ ಪ್ರಕಾಶಿಸುತ್ತದೆ. ಅಷ್ಟೇ ಅಲ್ಲದೆ. ೨೭. ಚಿತ್ರದ ಬಳೆ, ಬಳಪದ ಕಲ್ಲಿನ ಓಲೆ, ಕೂದಲಿಗೆ ಅಂದವಾಗಿ ಕಟ್ಟಿದ ಕಾಡಹೂ, ಕತ್ತರಿ ಹೊಲಿಗೆಯ ನವಿಲುಗರಿಯ ಉಡಿಗೆ, ಕಾಡಾನೆ ಗಳ ಕುಂಭ ಸ್ಥಳದಲ್ಲಿ ದೊರೆತ ಮುತ್ತುಗಳ ಹಾರ, ಬಗ್ಗಿಸಿ ನೆಲದ ಮೇಲೆ ಒತ್ತಿ ಓಡಿದ ಬಿಲ್ಲು ಬಾಣಗಳು, ಕಂಪಿಸುವ ಕುಚಗಳು, ಚೆನ್ನಾಗಿ ತೊಳೆದ ಹಲ್ಲುಗಳ ಕಾಂತಿ, ಚೆಲುವಾದ ತುಟಿ, ಇವುಗಳಿಂದ ಮನಸ್ಸನ್ನು ಸೆಳೆಯುವ ಬೇಡಿತಿಯರು ಆ ಮಹಾದ್ರಿಯಲ್ಲಿ ಒಪ್ಪಿ ದರು. ೨೮. ಶಬರರಾಜನು ಬಂದು ಮರಿಸಿಂಗವನ್ನು ಹಗ್ಗವೆಳೆದು ತಿವಿದು ಮದಿಸಿದ ಆನೆಯ ಮೇಲೆ ಬಿಡುತ್ತಿದ್ದನು. ಏನಾಯಿತೆಂದು ನಿಶ್ಚಯಿಸುವಷ್ಟರಲ್ಲಿ ಆ ಆನೆಯ ಕುಂಭ ಸ್ಥಳದಿಂದ ನೆತ್ತರು ಉಕ್ಕಿ ಹರಿಯುತ್ತಿತ್ತು. ಅದನ್ನು ಸುರ್‌ಸುರ್ ಎಂದು ಹೀರುವಾಗ ಬೆಳಗಿರುವ ದೊರೆ ಮುತ್ತುಗಳು ಸುತ್ತಲೂ ಚೆಲ್ಲುತ್ತಿದ್ದುವು. ಶಬರಿಯು ಮೆಚ್ಚಿಗೆಯಿಂದ

ಮ ಸ್ರ॥ ಅರುಣಾಕ್ಷಂ ರೌದ್ರರೂಪಂ ಘುರುಘುರಿತಮುಖಂ ಶೀರ್ಣಶೃಂಗಂ ಶಿಲಾನಿ
ಷ್ಠುರದೇಹಂ ದೀರ್ಘವಾಳಂ ಕಠಿಣಖುರಪುಟಂ ರೇಣುಭಾಳಸ್ಥಳಂ ಘ
ರ್ಘರನಾದಂ ವೃತ್ತಕಂಠಂ ಕುಸುಮ ಧವಳರೋಮಂಥಫೇನಂ ಕರಂ ಭೀ
ಕರಮಾಗಲ್ಕೊಪ್ಪುಗುಂ ಕಾನನದೊಳಿಭಸಮಾನಂ ಲುಲಾಯಪ್ರತಾನಂ ೨೯

ಉ॥ ಪುತ್ತಡರ್ದಿರ್ದಮೆಯ್ ಪೊದಱುಗೊಂಡ ಜಟಾವಳಿ ಕೆಯ್ಯ ಕಾಲುಗುರ್
ಸುತ್ತಿ ಕಟಂಕಟೇಯುಮೆನಲಾದ ಬಸಿಱ್ ಪರಮಾತ್ಮರೂಪದೊಳ್
ಪತ್ತಿದ ಶಾಂತದೃಷ್ಟಿ ಶಶಿಕಾಂತಶಿಲಾಬ್ರುಸಿ ಕಷ್ಟಮೌನಮೊ
ಪ್ಪುತ್ತಿರೆ ಜೀರ್ಣತಾಪಸಕುಲಂ ಮೆೞೆದಿರ್ದು (ರ್ಪು) ದು ತನ್ಮಹಾದ್ರಿಯೊಳ್ ೩೦

ವ॥ ಅಂತು ಪೊಗೞ್ತೆಗಳುಂಬಮಾದ ಪರ್ವತಮಂ ಕಂಡು

ಕಂ॥ ತಪ್ಪಲ ತರುತತಿನೋಡಲ
ನಳ್ಪವೆನಲ್ ಕುಸುಮಫಲಮನಾಂತು ಪವನಮಂ
ಕೀೞ್ಪಡಿಸುತಿರ್ದುದಿಲ್ಲಿಯೆ
ನೋೞ್ಪಂ ನೀರಿರದೆ ಮಾಣದೆಂದೆಯ್ದಲೊಡಂ ೩೧

ಅವನ್ನಾರಿಸಿ ಹಾರವನ್ನು ಕಟ್ಟುತ್ತಿದ್ದಳು, ೨೯. ಕಾಡಿನಲ್ಲಿ ಆನೆಗಳ ಹಾಗಿರುವ ಕಾಡುಕೋಣಗಳ ಗುಂಪು ಬಹಳ ಭೀಕರವಾಗಿ ಕಾಣಿಸುತ್ತಿತ್ತು. ಅವುಗಳ ಕಂಗಳು ಕೆಂಪು, ಆಕಾರವು ಅತಿ ಭಯಂಕರ. ಮುಖಗಳಿಂದ ಘುರುಘುರು ಎಂಬ ಶಬ್ದ ಬರುತ್ತಿತ್ತು. ಕೊಂಬುಗಳು ಮುರಿದಿದ್ದುವು. ದೇಹವು ಕಲ್ಲಿನಂತೆ ಗಟ್ಟಿ. ಬಾಲಗಳು ಉದ್ದ, ಗೊರಸುಗಳು ತುಂಬ ಕಠಿಣ. ಹಣೆಯಮೇಲೆಲ್ಲ ಧೂಳುತುಂಬಿದೆ. ಘರ್ಘರ ಧ್ವನಿಯನ್ನು ಮಾಡುತ್ತಿವೆ. ಕೊರಳು ದುಂಡಾಗಿದೆ. ಮೆಲುಕು ಹಾಕುವುದಿರಿಂದುಂಟಾದ ನೊರೆಯು ಹೂವಿನಂತೆ ಬೆಳ್ಳಗಿದೆ. ಇವುಗಳಿಂದ ಅವು ಭಯಂಕರವಾಗಿವೆ. ೩೦. ಆ ಮಹಾದ್ರಿಯಲ್ಲಿ ಜೀರ್ಣರಾದ ತಾಪಸರ ಸಮೂಹವು ಪ್ರಕಾಶಿಸುತ್ತಿತ್ತು. ಅವರ ಶರೀರದ ಸುತ್ತ ಹುತ್ತ ಬೆಳೆದಿತ್ತು. ಜಟೆಗಳು ಪೊದರಾಗಿದ್ದುವು. ಕೈ ಕಾಲುಗಳಲ್ಲಿ ಉಗುರು ಉದ್ದವಾಗಿ ಬೆಳೆದಿದ್ದುವು. ಹೊಟ್ಟೆಯು ಬತ್ತಿಹೋಗಿ ಸೊಂಟದೊಳಕ್ಕೆ ಸೇರಿ ಹೋಗಿದ್ದಿತು. ಶಾಂತವಾದ ಅವರ ದೃಷ್ಟಿಗಳು ಪರಮಾತ್ಮ ಸ್ವರೂಪದಲ್ಲಿ ನಟ್ಟಿದ್ದುವು. ದರ್ಭಾಸನವು ಅವರಿಗೆ ಚಂದ್ರಕಾಂತಶಿಲೆಯೇ ಆಗಿದ್ದಿತು. ಕಷ್ಟಕರವಾದ ಮೌನವ್ರತವನ್ನು ಆಚರಿಸುತ್ತಿದ್ದರು. ವ॥ ಹಾಗೆ ಹೊಗಳಿಕೆಗೆ ಅತಿಶಯವಾದ ಪರ್ವತವನ್ನು ನೋಡಿ. ೩೧. 'ಈ ತಪ್ಪಲಿನಲ್ಲಿರುವ ಮರಗಳ ಗುಂಪು ನೋಡಲು ಅತಿಶಯವಾದ ಸೊಬಗಿನಿಂದ ಕೂಡಿದೆ ಹೂ ಹಣ್ಣುಗಳಿಂದ ತುಂಬಿದ ಉಪವನವನ್ನೂ ಮೀರಿಸಿದೆ. ಇಲ್ಲಿಯೇ ನೋಡುವೆನು,

ಕಂ॥ ಮತ್ಪ್ರಾಣ ಸಮೂಹಕ್ಕೆ ಲ
ಸತ್ಪ್ರೀತಿಯನೊದವಿಸುತ್ತುಮಿರ್ಪುದನಾನು
ದ್ಯತ್ಪ್ರಮದಮೊಸೆಯೆ ಕಂಡೆಂ
ತತ್ಪ್ರಸ್ತದೊಳಮರನದಿಗೆ ಸೆಣಸುವ ಕೊಳನಂ ೩೨

ಮ ಸ್ರ॥ ಜಳಪಕ್ಷಿಧ್ವಾನದಿಂ ಲಕ್ಷ್ಮಿಯ ವಿವಿಧ ಸುಖಾಸೀನದಿಂ ಕೋಕಕೋಳಾ
ಹಳಶೋಭಾಯಾನದಿಂ ಪಂಕಜಕುವಲಯ ಸಂತಾನದಿಂ ತೀರ ಪುಷ್ಪಾ
ವಿಳ ಲೀಲೋದ್ಯಾನದಿಂ ನಿರ್ಮಳಮಣಿಮಯ ಸೋಪಾನದಿಂ ಖೇಚರೀಸ
ಕುಳಕೇಳೀ ಸ್ಥಾನದಿಂ ರಂಜಿಪ್ಪುದು ಲಹರಿಕೋದ್ದಂಡಮಂಭೋಜಷಂಡಂ ೩೩

ವ॥ ಅಂತೆಸೆವ ಸರೋವರಮಂ ಕಂಡು

ಕಂ॥ ಪಿರಿಯಕೊಳನುದಕಮಂ ಕಂ
ಡುರವಣೆಯಿಂ ಪೊಕ್ಕು ತೇಂಕಿ ಮೊಗೆಮೊಗೆದೊಲವಿಂ
ದೆರಡಳ್ಳೆ ಪಿಟ್ಗಿ ತೇಗು
ಬ್ಬರಿಸಲ್ ಕುಳಿರ್ವಮಳ ಜಲಮನೀಂಟಿದೆನರಸಾ ೩೪

ನೀರು ತಪ್ಪದೆ ಇರಬೇಕು" ಎಂದು ಯೋಚಿಸಿ ಮುಂದೆ ಹೋದೆನು. ಕೂಡಲೇ ೩೨. ಆ ಪರ್ವತದ ತಪ್ಪಲಿನಲ್ಲಿ ಗಂಗಾನದಿಗೆ ಸ್ಪರ್ಧಿಸುವ ಒಂದು ಕೊಳವನ್ನು ಕಂಡೆನು. ಅದು ನನ್ನ ಪ್ರಾಣಗಳ ಸಮೂಹಕ್ಕೆ ಹೆಚ್ಚಾದ ಪ್ರೀತಿಯನ್ನುಂಟುಮಾಡಿತು, ಅತಿಶಯವಾದ ಆನಂದವನ್ನುಂಟುಮಾಡಿತು. ೩೩. ಮಿರುಗುವ ಎತ್ತರವಾಗಿ ಬೆಳೆದ ಕಮಲಗಳ[1] ಸಮೂಹವು ನೀರು ಹಕ್ಕಿಗಳ ಧ್ವನಿಯಿಂದಲೂ, ಲಕ್ಷ್ಮಿಯ ವಿಧ ವಿಧವಾದ ಸುಖವಾಗಿ ಕುಳಿತ ಭಂಗಿಗಳಿಂದಲೂ ಕೋಲಾಹಲ ಮಾಡುತ್ತಾ ನಡೆಯುವ ಚಕ್ರವಾಕ ಪಕ್ಷಿಗಳ ಶೋಭಾಕರವಾದ ನಡಿಗೆಯಿಂದಲೂ, ಕಮಲ ಕನ್ನೈದಿಲೆಗಳ ಸಮೂಹದಿಂದಲೂ ದಡದ ಹೂತುಂಬಿದ ಕ್ರೀಡೋದ್ಯಾನಗಳಿಂದಲೂ, ನಿರ್ಮಲವಾದ ಮಣಿಮಯವಾದ ಮೆಟ್ಟಲುಗಳಿಂದಲೂ, ಅಪ್ಸರ ಸ್ತ್ರೀಯರಿಂದ ತುಂಬಿದ ಕೇಳೀ ಸ್ಥಾನಗಳಿಂದಲೂ ರಂಜಿಸಿತು. ವ॥ ಅಂತು ಪ್ರಕಾಶಿಸುವ ಸರೋವರವನ್ನು ನೋಡಿ. ೩೪. ಅರಸನೇ ! ಆ ದೊಡ್ಡ ಕೊಳದ ನೀರನ್ನು ಕಂಡ ಕೂಡಲೆ ವೇಗವಾಗಿ ನೀರಿಗಿಳಿದೆನು, ತುಂಬಿ ತುಂಬಿ ಆನಂದದಿಂದ ಎರಡು ಅಳ್ಳೆಗಳೂ ಓಗ್ಗಿ ತೇಗು ಉಬ್ಬರಿಸಿ ಬರುವಂತೆ ತಂಪಾದ ಶುದ್ಧವಾದ ನೀರನ್ನು

1. ಅಂಭೋಜಷಂಡ ಎಂಬ ಶಬ್ದವನ್ನು ಕಮಲಾಕರ–ಕೊಳ ಎಂಬ ಅರ್ಥದಲ್ಲಿ ಕವಿಯು ಪ್ರಯೋಗಿಸಿದಂತೆ ಕಂಡು ಬರುತ್ತದೆ (ರಂ)

ಕಂ॥ ಕರಚರಣಂದೊಳೆದು ಮನಂ
ಪರಿತೋಷಮನೆಯ್ದೆ ತಂಪುದೇಹದೊಳೊಲ್ದಾ
ವರಿಸಿ ಕುಳಿರ್ಕೋಡೆ ಸುಖೋ
ತ್ಕರದಿಂ ಕುಳ್ಳಿರ್ದೆನೊಂದು ನಿಮಿಷಮಿಳೇಶಾ ೩೫

ವ॥ ಅಂತು ಕುಳ್ಳಿರ್ದು ರಮಣೀಯದಿಂದರಲ್ದರುಣ ಸರೋಜದೊಳ್ ಮೊರೆವ ಮಧುಕರಗಾನಕ್ಕೆ ಕುಣಿವಂತೆ ಸುಳಿವ ಕಳಹಂಸಗಳಿಂ ಕಲ್ಹಾರ ಕಿಂಜಲ್ಕ ಪರಾಗದಿಂ ಮುಂಜುಮು ಸಗೆ ಸಂಜೆಯಾಯ್ತೆಂದಂಜುವ ಚಕ್ರವಾಕಂಗಳಿಂ ಬೆಳ್ಮುಗಿಲ್ದುಱುಗಲುಂ ತರತರದಿಂ ತೇರಯಿಸುವ ತೆರೆಗಳಿಂ ಪಥಿಕಪರಿಶ್ರಾಂತಿಯುಂ ಪರಿಹರಿಸಲ್ ಕರೆವಂತೆ ರವಂ ಮಿಗುವ ನೀರ್ವಕ್ಕಿಗಳ ಕೂಜಿತಂ ಗಳಿಂ ಹಿಮಶೈಲಂ ಕರಗಿ ಸರಸಿಯಾದಂತೆಸೆವ ಪೂಗೊಳದ ರಮಣೀಯತೆಯುಂ ಮನಂದಣಿಯೆ ನೋಟ್ಟಾಗಳ್

ಮ ಸ್ರ॥ ಅತಿಕಾಯಂ ಸಾಹಸಾಂಕಂ ಮುಕುಳಿತಕರನೀರೇರುಹಂ ತೀವ್ರಚಿಂತಾ
ನ್ವಿತಚಿತ್ತಂ ಬದ್ಧವೇಣೀ ಜಟಿಲಿತನಭಯಂ ಸಂತತಂ ಕುಂಡಲಾಂದೋ
ಳಿತಕರ್ಣಂ ದಿವ್ಯತೇಜೋಮಯನಭಿನವರೂಪಂ ಲಸಚ್ಛೈಲಶೃಂಗ
ಸ್ಥಿತನಿರ್ದಂ ಛಾಯೆ ನೀರೊಳ್ ಪೊಳೆಯೆ ಪದಪಿನಿಂ ಕಂಡೆನಾಗಳ್ ನರೇಂದ್ರಾ ೩೬

ವ॥ ಅಂತು ನೀರೊಳ್ ಪೊಳೆದ ನೆಟಲಂ ಕಂಡು ಪರ್ವತಮಂ ನೋಟ್ಟಾದುಂ

ಕುಡಿದೆನು. ೩೫. ರಾಜನೆ ! ಕೈಕಾಲುಗಳನ್ನು ತೊಳೆದುಕೊಂಡೆನು. ಮನಸ್ಸಿಗೆ ಪರಮಾನಂದವಾಯಿತು. ತಂಪು ದೇಹದಲ್ಲೆಲ್ಲ ವ್ಯಾಪಿಸಿತು. ತಂಪಾವರಿಸಲು ಹೆಚ್ಚಾದ ಸುಖದಲ್ಲಿ ಮುಳುಗಿ ಒಂದು ನಿಮಿಷ ಕುಳಿತುಕೊಂಡೆನು. ವ॥ ಹಾಗೆ ಕುಳಿತುಕೊಂಡು ಹಿಮಗಿರಿಯು ಕರಗಿ ಸರೋವರವಾದಂತೆ ಹೊಳೆಯುವ ಹೂಗೊಳದ ರಮಣೀಯತೆ ಯನ್ನು ಮನಸ್ಸಿಗೆ ತೃಪ್ತಿಯಾಗುವವರೆಗೂ ನೋಡಿದೆನು. ಆ ಸರೋವರವು ರಮಣೀಯ ವಾಗಿ ಅರಳಿದ ಕೆಂದಾವರೆಗಳಲ್ಲಿ ಮೊರೆಯುವ ದುಂಬಿಗಳ ಗಾನಕ್ಕೆ ಸರಿಯಾಗಿ ಕುಣಿಯು ವಂತೆ ಸಂಚರಿಸುವ ಹಂಸಗಳಿಂದ ತುಂಬಿದೆ. ಬೆಳ್ದಾವರೆಗಳ ಕೇಸರಗಳಿಂದೆದ್ದ ಪರಾಗ ಗಳಿಂದ ಮಂಜು ಮುಸಗಲು ಸಂಜೆಯಾಯಿತೆಂದು ಹೆದರುವ ಚಕ್ರವಾಕಗಳಿಂದ ಕೂಡಿದೆ, ಬಿಳಿ ಮೋಡಗಳ ಗುಂಪನ್ನು ವಿಧವಿಧವಾಗಿ ಒಟ್ಟುಗೂಡಿಸುವಂತೆ ಕಾಣುವ ಅಲೆಗಳಿಂದ ಕೂಡಿದೆ. ದಾರಿಗರ ಆಯಾಸವನ್ನು ಹೋಗಲಾಡಿಸಲು ಅವರನ್ನು ಬನ್ನಿರಿ ಎಂದು ಕರೆಯುವಂತೆ ತೋರುವ ನೀರ್ಹಕ್ಕಿಗಳ ಧ್ವನಿಗಳಿಂದಲೂ ತುಂಬಿದೆ. ೩೬. ರಾಜನೆ ! ಆಗ ನಾನು ದಿವ್ಯತೇಜೋಮಯನಾದ, ಹೊಳೆಯುವ ಬೆಟ್ಟದ ಶಿಖರದಂತೆ ಸ್ಥಿರನಾದ, ಅಭಿನವರೂಪನಾದ, ವ್ಯಕ್ತಿಯೊಬ್ಬನನ್ನು ಕಂಡೆನು. ಅವನ ನೆರಳು ನೀರಿನಲ್ಲಿ ಹೊಳೆಯುತ್ತಿತ್ತು. ಅವನು ದೊಡ್ಡ ಶರೀರವುಳ್ಳವನು, ಮಹಾಸಾಹಸಿ. ಅವನ ಕರ ಕಮಲಗಳು ಮುಗಿದುಕೊಂಡಿದ್ದುವು. ತೀವ್ರವಾದ ಚಿಂತೆಯಿಂದ ಕೂಡಿದ ಮನಸ್ಸುಳ್ಳ ವನೂ ಜಟಾಧರನೂ ಭಯರಹಿತನೂ ಆಗಿದ್ದನು. ಕುಂಡಲಗಳಿಂದ ಅವನ ಕಿವಿಗಳು ತೂಗುತ್ತಿದ್ದುವು. ವ॥ ಹಾಗೆ ನೀರಿನಲ್ಲಿ ಹೊಳೆಯುತ್ತಿದ್ದ ನೆಳಲನ್ನು ನೋಡಿ ಬೆಟ್ಟ

ಕಂ॥ ಶೃಂಗಾಗ್ರದಿಂ ನೆಲಕ್ಕೆ ಮ
ನಂಗುಂದದೆ ಬಿರ್ದು ಜೀವಮಂ ತೊಱೆವೆನೆನು
ತ್ತಂಗವಿಸಿ ಬೀೞುತಿರ್ದನ
ನಂಗೆಯ್ಯಿಂದಾಂತೆನೊರ್ವನಂ ನೃಪತಿಲಕಾ ೩೭

ವ॥ ಅಂತು ಬೀೞ್ವಾತನಂ ನಾಂ ಕಯ್ಯೊಳಾಂಪುದುಂ

ಉ॥ ಏಕೆಲೆತಂದೆಯಾಂತೆ ಗತಭಾಗ್ಯನನೂರ್ಜಿತ ಪಾಪಕರ್ಮನಂ
ಭೀಕರ ಜೀವವಂಚಕನನುಗ್ರನನಿಷ್ಟ ಸುಹೃದ್ವಿಯೋಗಿಯಂ
ಲೌಕಿಕ ಬಾಹ್ಯನಂ ಬಗೆಯೆ ಕಲ್ಲೆರ್ದೆಯನಂ ಮಿಗೆ ಕಷ್ಟ ಚಿತ್ತನಂ
ಶೋಕಶರೀರನಂ ಸುಖವಿದೂರನನುತ್ಕಟ ದುಃಖಭಾರನಂ ೩೮

ಕಂ॥ ಭಾವಿಸೆ ಚಿಂತಾನಳನಿಂ
ಬೇವುದಱಿಂ ಪ್ರಿಯರ ಸಂಗದಿಂದಗಲ್ದು ಕರಂ
ನೋವುದಱಿಂದಡವಿಗಳೊಳ್
ಸಾವುದೆ ಲೇಸಲ್ತೆ ನೀತಿವಂತರ ಮತದಿಂ ೩೯

ಅದಱಿಂದಂ ಪಾತಕನಂ
ಬರ್ದುಕಿಸದಿರ್ ಮರಳಿನೂಂಕೆನುತ್ತಾತಂ ಮ
ತ್ಪದಯುಗಳಕ್ಕೆಱಗಿದೊಡೆ
ತ್ತಿದೆನೆನ್ನಯ ಕಣ್ಣೊಳುದಕಮುಳ್ಳಾಡುವಿನಂ ೪೦

ವನ್ನು ನೋಡಿದನು. ೩೭. ನೃಪತಿಲಕ ! 'ಶಿಖರದತುದಿಯಿಂದ ಬಿದ್ದು ಪ್ರಾಣಗಳನ್ನು ಕಳೆದು ಕೊಳ್ಳುವೆನೆಂದು ನಿಶ್ಚಯಿಸಿ ಮೇಲಿನಿಂದ ಬೀಳುತ್ತಿದ್ದವನೊಬ್ಬನನ್ನು ಅಂಗೈಯ್ಯಿಂದ ಹಿಡಿದುಕೊಂಡೆನು. ವ॥ ಹಾಗೆ ಬೀಳುತ್ತಿದ್ದವನನ್ನು ನಾನು ಕೈಯಲ್ಲಿ ಹಿಡಿದುಕೊಳ್ಳಲು. ೩೮. "ಏಕೆ, ಎಲೆ ತಂದೆ, ನನ್ನನ್ನು ಹಿಡಿದೆ ? ನಾನು ಭಾಗ್ಯರಹಿತನು, ತುಂಬ ಪಾಪಮಾಡಿದವನು. ಭಯಂಕರನಾದ ಜೀವವಂಚಕನು. ಉಗ್ರ ಸ್ವಭಾವದವನು. ಇಷ್ಟನಾದ ಮಿತ್ರನಿಂದ ಅಗಲಿದವನು. ಲೌಕಿಕ ವ್ಯವಹಾರಗಳಿಗೆ ಹೊರಗಾದವನು. ಕಲ್ಲಿನಂಥ ಹೃದಯವುಳ್ಳವನು. ಕಷ್ಟವನ್ನನುಭವಿಸುತ್ತಿರುವ ಮನಸ್ಸುಳ್ಳವನು. ಶೋಕತುಂಬಿದ ಶರೀರವುಳ್ಳವನು. ಸುಖರಹಿತನು. ಉತ್ಕಟವಾದ ದುಃಖಹೊತ್ತವನು. ೩೯. ನಾನು ಚಿಂತಾಗ್ನಿಯಿಂದ ಬೇಯುತ್ತಿದ್ದೇನೆ. ಪ್ರಿಯರ ಸಂಗವನ್ನು ಕಳೆದುಕೊಂಡು ನಾನು ತುಂಬ ನೋವನ್ನನುಭವಿಸುತ್ತಿದ್ದೇನೆ. ಆದುದರಿಂದ ಯೋಚಿಸಿದರೆ ಅಡವಿಗಳಲ್ಲಿ ಸಾಯುವುದೇ ನ್ಯಾಯವಾದುದು. ಇದೇ ನೀತಿವಂತರ ಅಭಿಪ್ರಾಯ. ೪೦. 'ಆದುದರಿಂದ ಈ ಪಾಪಿಯನ್ನು ಬದುಕಿಸಬೇಡ. ಮರಳಿ ನೂಕು ಎನ್ನುತ್ತಾ ಅವನು ನನ್ನ ಎರಡು ಕಾಲುಗಳಿಗೆ ಬಿದ್ದನು. ಅದನ್ನೂ ನೋಡಿ ನನ್ನ ಕಂಗಳಲ್ಲಿ ಕಂಬನಿಯು ತುಳುಕಿತು.

ವ॥ ಅಂತಾಮರಣ ನಿಶ್ಚಯದಿಂ ಮಿಗಿಲಾದ ದುಃಖಮೆನ್ನೊಳಾಗಲೆಂತಾನುಂ ಸಂತೈಸಿ ಕೊಂಡಾತನನಾನಿಂತೆಂದೆಂ

ಚಂ॥ ಇನಿತಟಲೇತಱಿಂ ನಿನಗೆ ಸಂಭವಿಸಿತ್ತೆಲೆ ತಂದೆ ಪೇೞೆನಲ್
ಮನದೊಳಟಲ್ದು ನಿಂದು ಬಿಸುಸುಯ್ದು ಕರಂ ಬೆಱಗಾಗಿ ಪೂರ್ವಮಂ
ನೆನೆದು ವಿಧಾತೃ ಕಲ್ಪನೆಯನಾವನೊ ಮೀಱುವನೆಂದು ಮತ್ತೆ ಭೋಂ
ಕನೆ ತಿಳಿದೆನ್ನನೀಕ್ಷಿಸಿ ನಿಜಸ್ಥಿತಿಯಂ ನುಡಿಯಲ್ಕೊಡರ್ಚಿದಂ ೪೧

ಕಂ॥ ಸಕಲಧರಣೀಶಮಣಿಮಯ
ಮಕುಟಸ್ಥಿತ ಪಾದಪೀಠನಭಿನವಲಕ್ಷ್ಮೀ
ಮುಕುರಂ ಮಗಧೋರ್ವೀ ಪಾ
ಲಕನೆಸೆವಂ ರಾಜಹಂಸನೆಂಬ ನರೇಂದ್ರಂ ೪೨

ಆತನ ಸಚಿವರೊಳತಿ ವಿ
ಖ್ಯಾತಂ ರತ್ನೋದ್ಭವಂ ದಲೆಂದೆನ್ನ ಪೆಸರ್
ಮಾತೇಂ ರತ್ನವ್ಯವಹಾ
ರಾತುರದಿಂ ವಾರ್ಧಿಗೆಯ್ದಿದೆಂ ನಲವಿಂದಂ ೪೩

ಅವನನ್ನು ಮೇಲಕ್ಕೆ ಎತ್ತಿದೆನು. ವ॥ ಅವನ ಸಾಯುವ ನಿಶ್ಚಯಕ್ಕಿಂತ ಮಿಗಿಲಾದ ದುಃಖವು ನನಗಾಯಿತು. ಅದನ್ನು ತಡೆದುಕೊಂಡು ಅವನಿಗೆ ನಾನು ಹೀಗೆ ಹೇಳಿದೆನು. ೪೧. 'ಎಲೆ ತಂದೆ ! ಇಷ್ಟು ದುಃಖವು ನಿನಗೆ ಯಾವ ಕಾರಣದಿಂದ ಉಂಟಾಯಿತು. ಹೇಳು' ಎಂದು ನಾನು ಕೇಳಿದೆನು. ಅವನು ಮನಸ್ಸಿನಲ್ಲಿಯೇ ದುಃಖಿಸುತ್ತಾ ಬಿಸಿಯು ಸಿರನ್ನು ಬಿಟ್ಟನು. ತುಂಬ ಬೆರಗಾದನು. ಹಿಂದಿನದನ್ನು ನೆನೆದನು. 'ಬ್ರಹ್ಮನ ಇಷ್ಟವನ್ನು ಯಾರೂ ಮೀರಲಾರರು ಎಂದು ತಿಳಿದು ನನ್ನನ್ನು ನೋಡಿ ತನ್ನ ನಿಜಸ್ಥಿತಿಯನ್ನು ಹೇಳಲು ಉಪಕ್ರಮಿಸಿದನು. ೪೨. ಮಗಧ ರಾಜನಾದ ರಾಜಹಂಸನೆಂಬ ಮಹಾ ರಾಜನು ಪ್ರಕಾಶಿಸುತ್ತಾನೆ. ಅವನ ಪಾದಪೀಠದ ಮೇಲೆ ಸಕಲ ರಾಜರೂ ತಮ್ಮ ಮಣಿ ಮಯವಾದ ಕಿರೀಟಗಳನ್ನಿಡುತ್ತಾರೆ. ಅಭಿನವ (ರಾಜ) ಲಕ್ಷ್ಮಿಯ ಕನ್ನಡಿಯವನು. ೪೩. ನನ್ನ ಹೆಸರು ಆತನ ಮಂತ್ರಿಗಳಲ್ಲೆಲ್ಲ ಪ್ರಸಿದ್ಧನಾದ ರತ್ನೋದ್ಭವನೆಂದು. ಹೆಚ್ಚಿನ ಮಾತೇನು ? ರತ್ನ ವ್ಯಾಪಾರಕ್ಕಾಗಿ ನಲವಿನಿಂದ ಸಮುದ್ರದ ಮೇಲೆ ಹೊರಟೆನು.

ಕಂ॥ ಹರಿ ತನ್ನಳಿಯಂ ತಾನಾ
ಹರಿಯಳಿಯಂ ತನ್ನೊಳೊಲ್ದು ಹರಿಯಿರ್ಪಂ ತಾಂ
ಹರಿಯೊಳಗಿರ್ಪೆನೆನಲ್ ಸಾ
ಗರದಾಧಿಕ್ಯಮನಂದಾವನಭಿವರ್ಣಿಸುವಂ ೪೪

ವ॥ ಅಂತೆಸೆವ ಸಮುದ್ರಮಧ್ಯದಲ್ಲಿ ಸುವರ್ಣದ್ವೀಪಮನೆಯ್ದಿರ್ಪುದುಮಲ್ಲಿ ರತ್ನದತ್ತನೆಂಬ ವಣಿಗ್ವರಂ ತನ್ನ ತನುಜೆಯಪ್ಪ ಹೇಮಪ್ರಭೆಯನೆನಗೆ ಕುಡಲವಳ್ಗಮೊಗಮನುದಿನಂ ನವಪ್ರಿಯಮಾಗಿ

ಕಂ॥ ಸಮಯೌವನಂ ಸಮಶ್ರೀ
ಸಮಸೌಖ್ಯಂ ಸಮಗುಣಂ ಸಮಪ್ರೀತಿ ಸಮ
ಪ್ರಮದಂ ಸಮಸತ್ವಂ ಸಲೆ
ಸಮನಿಸಿತಿರ್ವರ್ಗೆ ಕೇಳ್ದಯಾಂಬು ನಿಧಾನಾ ೪೫

ವ॥ ಅಂತು ಸಮಸುಖದಿಂದಿರಲ್ ಕಿಱಿದು ದಿನದಿಂ ಮೇಲೆ ತತ್ಕಾಂತೆಯಂತರ್ವತ್ನಿಯಾಗಲ್ ಆ ರತ್ನದತ್ತನಿಂ ಕಳಿಪಿಸಿಕೊಂಡು ಮನೋವಲ್ಲಭೆಯುಮಾಕೆಯ ದಾದಿಯುಮಾನುಮಿಂತು ಮೂವರುಂ ಪಡಂಗನೇಱಿ ನಡುವಗಲೊಳ್ ಬರ್ಪಾಗಲ್

೪೪. ಹರಿಯು ತನ್ನ ಅಳಿಯ. (ಸಾಗರ ಕನ್ಯೆಯಾದ ಲಕ್ಷ್ಮೀಪತಿ) ತಾನು ಆ ಹರಿಯ ಅಳಿಯ. (ಹರಿಯ ಪಾದದಿಂದ ಜನಿಸಿದ ಗಂಗಾ ಪತಿ) ಹರಿಯು ಪ್ರೀತಿಯಿಂದ ತನ್ನಲ್ಲಿ ವಾಸಿಸುತ್ತಾನೆ. ತಾನು ಹರಿಯಲ್ಲಿದ್ದೇನೆ.[1] (ಸಮುದ್ರಕ್ಕೇ ಹರಿ ಎಂಬ ಹೆಸರಿದೆ). ಹೀಗಿರುವ ಸಾಗರದ ಮಹಿಮೆಯನ್ನು ಯಾವನು ತಾನೇ ವರ್ಣಿಸಲು ಶಕ್ತನು. ವ॥ ಹಾಗೆ ಪ್ರಕಾಶಿಸುವ, ಸಮುದ್ರದ ನಡುವೆ ಇದ್ದ ಸುವರ್ಣದ್ವೀಪವನ್ನು ತಲಪಿದೆನು. ಅಲ್ಲಿ ರತ್ನದತ್ತನೆಂಬ ವೈಶ್ಯ ಶ್ರೇಷ್ಠನು ತನ್ನ ಮಗಳಾದ ಹೇಮಪ್ರಭೆಯನ್ನು ನನಗೆ ಕೊಟ್ಟು ಮದುವೆಮಾಡಿದನು. ನನಗೂ ಅವಳಿಗೂ ದಿನ ದಿನವೂ ಹೊಸ ಹೊಸ ರೀತಿಯಲ್ಲಿ ಪ್ರೀತಿಯು ಬೆಳೆಯಿತು. ೪೫. ದಯಾಸಾಗರನೆ ! ಕೇಳು. ನಮ್ಮಿಬ್ಬರಲ್ಲಿಯೂ ಒಂದೇ ಸಮನಾದ ಪ್ರಾಯ, ಕಾಂತಿ (ಐಶ್ವರ್ಯ) ಸೌಖ್ಯ, ಗುಣ, ಪ್ರೀತಿ, ಹರ್ಷ ಶಕ್ತಿಗಳು ಸರಿಯಾದ ರೀತಿಯಲ್ಲಿ ಸೇರಿಕೊಂಡಿದ್ದುವು. ಇಬ್ಬರಲ್ಲಿಯೂ ಮೇಲೆ ಹೇಳಿದ ಎಲ್ಲ ಗುಣಗಳೂ ಸಮವಾಗಿ ಬೆರೆತಿದ್ದವು. ವ॥ ಹಾಗೆ ಸಮ ಸುಖದಿಂದ ಇರಲು ಕೆಲವು ದಿನಗಳ ಮೇಲೆ ಆ ನನ್ನ ಪ್ರಿಯೆಯು ಗರ್ಭಿಣಿಯಾದಳು. ಆಗ ಆ ರತ್ನದತ್ತನಿಂದ ಅಪ್ಪಣೆಯನ್ನು ಪಡೆದು ಬೀಳ್ಕೊಂಡು ನನ್ನ ಪ್ರಿಯೆಯೂ, ಆಕೆಯ ದಾದಿಯೂ, ನಾನೂ, ಮೂವರೂ

1. ವಿಶ್ವೋದರನಾದ ಹರಿಯ ಗರ್ಭದಲ್ಲಿ ಸಮುದ್ರವಿದೆ (ರಂ).

ಶಾ॥ ಇನ್ನೇವೇಳ್ದಪೆನಣ್ಣ ಬಲ್ಸಿಡಿಲಪೊಯ್ಲಂ ಮಾರಿಯುದ್ರೇಕಮಂ
ಖಿನ್ನಪ್ರೀತಿಯನೆಯ್ದೆ ಪೆರ್ಚಿದೆರ್ದೆಗಿಚ್ಚುಂ ವಾರ್ಧಿಯೊಳ್ ತದ್ವಹಿ
ತ್ರನ್ನೀರ್ಪೊಯ್ಲು ಮುಳುಂಗಲೆಂ ಬರ್ದುಕಿದೆಂ ಪಾಪಿಷ್ಠನಾಗಿರ್ದನ
ನ್ನೆನ್ನರ್ಧಾಂಗಿ ಬಟಿಕ್ಕ ತೀರ್ದಬಗೆಯಂ ಕೈಕೊಂಡೆ ನಾಂ ತೀರದೊಳ್ ೪೬

ಕಂ॥ ಪ್ರಿಯತಮೆಯನಗಲ್ದ ಶರೀ
ರಿಯ ಜೀವನಮೇವುದೆಂದು ಮರಣಮನಾಂ ನಿ
ಶ್ಚಯಮಂ ಮಾಡುವ ಪದದೊಳ್
ಬಯಲರವಂ ಪುಟ್ಟಿತಂತರಿಕ್ಷದೊಳಾಗಳ್ ೪೭

ವ॥ ಅದೆಂತೆನೆ

ಕಂ॥ ಪದಿನಾಱು ವರ್ಷದಿಂದೀ
ಮದನಾದ್ರಿಯೊಳೊಲ್ದು ಕಾಣ್ಬೆ ರತ್ನೋದ್ಭವ ನೀಂ
ಸುದತಿಯನೆಂದೆಂದಾಕಾ
ಶದ ವಾಕ್ಯಂ ಪುಟ್ಟಿತದ್ಭುತ ಧ್ವನಿಯಿಂದಂ ೪೮

ವ॥ ಅದು ಕಾರಣಮೀ ಕಾಮಗಿರಿಗೆ ಬಂದು ಪದಿನಾಱುವರ್ಷಂ ತುಂಬಿತ್ತೆನೆ ಮರಣಮೆ ಶರಣಮೆಂಬನ್ನೆಗಂ

ಬಂದು ಹಡಗನ್ನೇರಿ ನಡುಹಗಲಿನಲ್ಲಿ ಬರುತ್ತಿದ್ದೆವು. ಆಗ. ೪೬. "ಅಣ್ಣ ! ಆ ಬಲವಾದ ಸಿಡಿಲಹೊಡೆತವನ್ನೂ, ಮಾರಿಯ ಉದ್ರೇಕವನ್ನೂ ಪ್ರೀತಿನಾಶವನ್ನೂ, ಬಹಳವಾಗಿ ಹೆಚ್ಚಿದ ಹೃದಯದಲ್ಲಿ ಉರಿದ ಬೇಕಿಯನ್ನೂ, ಏನೆಂದು ವಿವರಿಸಲಿ ? ಸಮುದ್ರದಲ್ಲಿ ಹಡಗು ನೀರಿನ ಹೊಡೆತದಿಂದ ಮುಳುಗಿಹೋಗಿ ನಾನು ಮಾತ್ರ ಬದುಕಿದೆನು. ಪಾಪಿಷ್ಠನಾದ ನನ್ನ ಹೆಂಡತಿಯು ತೀರಿಹೋದ ಬಗೆಯನ್ನು ಬಳಿಕ ತೀರವನ್ನು ತಲುಪಿದ ಮೇಲೆ ತಿಳಿದೆನು. ೪೭. ಪ್ರಿಯತಮೆಯನ್ನು ಅಗಲಿದ ಮನುಷ್ಯನ ಬಾಳು ವ್ಯರ್ಥವೆಂದು ಯೋಚಿಸಿ ಸಾಯಲು ನಿಶ್ಚಯ ಮಾಡಿದ ಸಮಯದಲ್ಲಿ ಅಂತರಿಕ್ಷದಲ್ಲಿ ಒಂದು ಅಶರೀರವಾಣಿಯು ಹುಟ್ಟಿತು. ವ॥ ಅದು ಹೇಗೆಂದರೆ. ೪೮. 'ರತ್ನೋದ್ಭವ ! ನೀನು ಇಂದಿನಿಂದ ಹದಿನಾರುವರ್ಷಗಳಿಗೆ ಈ ಮದನಾದ್ರಿಯಲ್ಲಿ ನಿನ್ನ ಹೆಂಡತಿಯನ್ನು ಕಾಣುವೆ' ಎಂದು ಅದ್ಭುತವಾದ ಧ್ವನಿಯಿಂದ ಆಕಾಶವಾಣಿಯು ಹೇಳಿತು. ವ॥ ಆ ಕಾರಣದಿಂದ ಈ ಕಾಮಗಿರಿಗೆ ಬಂದು ಹದಿನಾರು ವರ್ಷಗಳಾದುವು, (ಕಾಂತೆಯ ದರ್ಶನ

ಕಂ॥ ಪಿತನೆಂಬುದನಱಿದತಿ ದುಃ
ಖಿತನಾದೆಂ ದೇಸೆಗೆಟ್ಟು ಮಚ್ಚಿತ್ತದೊಳೀ
ಕತೆಯಂ ಕೇಳ್ದವರಳ್ಕೆರ್ದೆ
ಧೃತಿಗುಂದದೆ ಬಲ್ಪುವಿಡಿದು ಸೈರಿಸಿದಪುದೇ ೪೯

ವ॥ ಅಂತು ತತ್ಪ್ರಪಂಚಮಂ ಪೂರ್ವದೊಳ್ ಕೇಳ್ದಱಿವೆನದಱಿಂದಾತನೆನ್ನ ಪಿತನೆಂದಱಿದು ಆಶ್ವಾಸಿಸುವೆನೆಂದನುಮಾನಿಸುವಾಗಳ್ ಮತ್ತೊಂದು ದೆಸೆಯಲ್ಲಿ

ಮ॥ ಎನಗಾರಿರ್ದಪರಕ್ಕ ಮುಪ್ಪಿನವಳಂ ಕಣ್ಗಟ್ಟಿ ಬಿಟ್ಟಂತು ಕಾ
ನನದೊಳ್ ವಹ್ನಿಮುಖಕ್ಕೆ ಸಲ್ವ ಬಗೆಯಂ ಕೈಕೊಳ್ವರೇ ಪೇೞಿಳಾ
ವನಿತಾರತ್ನಮೆ ಕಾಮರಾಜ ವಿಜಯಂ ಕೈಸೂಱೆವೋಯ್ತಕ್ಕಟೆಂ
ಬನಿತಾರ್ತ ಧ್ವನಿ ಕೇಳಲಾಯ್ತೆನಗೆಲೇ ರಾಜಾಧಿರಾಜೋತ್ತಮಾ ೫೦

ವ॥ ಅಂತು ಪೊದಱ್ದಾರ್ತ ಧ್ವನಿಯಂ ಕೇಳ್ದು ರತ್ನೋದ್ಭವನನೊಂದಶೋಕತರುವಿನ ನೆೞಲೊಳ್ ಕುಳ್ಳಿರಿಸಿಯಾಧ್ವನಿಯ ಬೞಿವಿಡಿದೈದಿ ನೋೞ್ಪನ್ನೆಗಂ

ಚಂ॥ ಜಗುೞ್ದ ಕಚಾಗ್ರಮಂ ಸಸಿನೆಗೈದು ಕುಚಂಗಳನುತ್ತರೀಯದಿಂ
ಬಿಗಿದು ಪೊರೞ್ದ ಮುಂಜೆಱಗನೊಪ್ಪಿರೆ ಸೆಕ್ಕಿಯುಳುರ್ವ ಕುಂಡದ
ಗ್ನಿಗೆ ಬಲವಂದು ತನ್ನ ನಿಜದೇವತೆಯಂ ನೆನೆದಿರ್ಕರಂಗಳಂ
ಮುಗಿದು ಚಿತಾಗ್ನಿಯಂ ಪುಗುವಳಂ ಮಿಗೆ ಕಂಡೆನಿಳಾಧಿನಾಯಕಾ ೫೧

ವಾಗದುದರಿಂದ) ಇನ್ನು ನನಗೆ ಸಾಯುವುದೇ ಗತಿ" ಎಂದು ಹೇಳಿದನು. ಆಗ. ೪೯. ಆತನು ನನ್ನ ತಂದೆಯೆಂದು ತಿಳಿದು ಮನಸ್ಸಿನಲ್ಲಿ ನೆಲೆಗೆಟ್ಟು ಅತಿಯಾದ ದುಃಖವನ್ನು ಪಡೆದೆನು. ಈ ಕತೆಯನ್ನು ಕೇಳಿದವರ ನಿರ್ಬಲವಾದ ಮೃದುಹೃದಯವು ಧೈರ್ಯವನ್ನು ಕಳೆದುಕೊಳ್ಳದೆ ಶಕ್ತಿಯಿಂದ ದುಃಖವನ್ನು ತಡೆದುಕೊಳ್ಳಬಲ್ಲದೆ ?! ವ॥ ಹಾಗೆ ಆ ವಿಷಯಗಳನ್ನೆಲ್ಲ ಮೊದಲೇ ಕೇಳಿ ತಿಳಿದಿದ್ದೆನು. ಆದುದರಿಂದ ಅವನು ನನ್ನ ತಂದೆಯೆಂದು ತಿಳಿದು ಸಮಾಧಾನ ಮಾಡಿಕೊಳ್ಳುವೆನು ಎಂದು ಹಿಂದೆ ಮುಂದೆ ಯೋಚಿಸುತ್ತಿರುವಾಗ ಮತ್ತೊಂದು ಕಡೆಯಲ್ಲಿ ೫೦. ಎಲೆ ರಾಜಾಧಿರಾಜರಲ್ಲಿ ಉತ್ತಮನಾದವನೇ ! "ಅಕ್ಕ ! ನನಗೆ ಬೇರೆ ಯಾರಿದ್ದಾರೆ ? ಮುದುಕಿಯನ್ನು ಕಣ್ಣುಕಟ್ಟಿ ಕಾಡಿನಲ್ಲಿ ಬಿಟ್ಟ ಹಾಗಾಯಿತು. ಅಗ್ನಿ ಪ್ರವೇಶಕ್ಕೆ ಮನಸ್ಸುಮಾಡಬಹುದೇ ? ಭೂಮಿಯಲ್ಲಿನ ಮಹಿಳೆಯರಲ್ಲಿ ಶ್ರೇಷ್ಠಳಾದವಳೇ ! ಹೇಳು. ಕಾಮರಾಜನ ವಿಜಯವೂ ವ್ಯರ್ಥವಾಯಿತು. ಅಕಟ" ಎಂಬ ಆರ್ತಧ್ವನಿಯೊಂದು ನನಗೆ ಕೇಳಿಸಿತು. ವ॥ ಹಾಗೆ ಹೊಮ್ಮಿಬರುತ್ತಿದ್ದ ಆರ್ತಧ್ವನಿಯನ್ನು ಕೇಳಿ ರತ್ನೋದ್ಭವನನ್ನು ಒಂದು ಅಶೋಕವೃಕ್ಷದ ನೆಳಲಿನಲ್ಲಿ ಕುಳ್ಳಿರಿಸಿ ಆ ಧ್ವನಿಯು ಬಂದ ದಾರಿಯನ್ನು ಹಿಡಿದು ಹೋಗಿ ನೋಡಿದೆನು ಆಗ. ೫೧. ಒಬ್ಬ ಸ್ತ್ರೀಯು ಜಾರಿದ ತಲೆಗೂದಲನ್ನು ಸಿಕ್ಕು ಬಿಡಿಸಿಕೊಂಡಿದ್ದಳು. ಸ್ತನಗಳನ್ನು ಮೇಲು ಹೊದಿಕೆಯಿಂದ (ಉತ್ತರೀಯ) ಬಿಗಿದು

ವ|| ಅಂತಗ್ನಿ ಪ್ರವೇಶಮಂ ಮಾೞ್ಪಳಂ ಕಂಡು

ಕಂ|| ಭರವಸದಿಂದೆಯ್ದಿ ಪೊದ
ೞ್ದುರಿಯೊಳ್ ಬೀೞ್ವವಳ ಬಾಹುಲತೆಯಂ ಪಿಡಿಯಲ್
ತರಳತರ ಭೀತಿರಸಮಂ
ಕುರಿಸಲ್ ತತ್ತರುಣಿಯೆನ್ನನಂದಿಂತೆಂದಳ್ ೫೨

ಚಂ|| ಅಡವಿಯೊಳಿಂತು ಬಂದು ಪರನಾರಿಯನಗ್ನಿಮುಖ ಪ್ರವೇಶಿಯಂ
ಪಿಡಿವುದು ನೀತಿಯಲ್ತು ಬಿಡು ತಮ್ಮ ಮನಃಪ್ರಿಯನಂಗಸಂಗಮಂ
ಪಡೆದಪೆನಿಂದು ವಾಸವನಿವಾಸದೊಳೆಂದುಸಿರ್ವನ್ನೆಗಂ ಕೆಲಂ
ಬಿಡಿದೞುತಿರ್ದ ವೃದ್ಧಸತಿಯೆನ್ನಡಿಯೊಳ್ ಪೊರಳ್ದಳ್ ನೃಪೇಶ್ವರಾ ೫೩

ವ|| ಅಂತಾವೃದ್ಧ ಸತಿಯೆನ್ನಡಿಯೊಳ್ ಪೊರಳೆ

ಕಂ|| ಏೞ್ತಾಯೆ ಕಿಱಿಯನಡಿಯೊಳ್
ಬೀೞ್ವುದನುಚಿತಮೀ ಸರೋಜಾನನೆ ತಾಂ
ನೇೞ್ತಂದಳೇಕೆ ಶಿಖರಿಗೆ
ಪೇೞ್ತುಡೆಯದೆನಲ್ಕೆ ಪೇೞಲುದ್ಯತೆಯಾದಳ್ ೫೪

ಕೊಂಡಿದ್ದಳು. ಹರಡಿಕೊಂಡಿದ್ದ ಮುಂಜೆರಗನ್ನು ಸರಿಯಾಗಿ ಸಿಕ್ಕಿಸಿಕೊಂಡಿದ್ದಳು. ಉರಿಯುತ್ತಿದ್ದ ಅಗ್ನಿಕುಂಡದ ಅಗ್ನಿಗೆ ಪ್ರದಕ್ಷಿಣೆಮಾಡಿದಳು. ತನ್ನ ಇಷ್ಟ ದೇವತೆಯನ್ನು ಧ್ಯಾನಮಾಡಿ ಎರಡು ಕೈಗಳನ್ನು ಮುಗಿದುಕೊಂಡಿದ್ದಳು. ಈ ಸ್ಥಿತಿಯಲ್ಲಿ, ಮಹಾರಾಜನೆ ಚಿತಾಗ್ನಿಯಲ್ಲಿ ಪ್ರವೇಶಿಸಲು ಸಿದ್ಧಳಾಗಿದ್ದವಳೊಬ್ಬಳನ್ನು ಕಂಡೆನು. ವ|| ಹಾಗೆ ಅಗ್ನಿಪ್ರವೇಶ ಮಾಡಲು ಸಿದ್ಧಳಾಗಿದ್ದವಳನ್ನು ಕಂಡು, ೫೨. ಭರವಸೆಯಿಂದ ಹತ್ತಿರಕ್ಕೆ ಹೋಗಿ ಬೆಂಕಿಯಲ್ಲಿ ಬೀಳುತ್ತಿದ್ದವಳ ಬಾಹುಲತೆಯನ್ನು ಹಿಡಿದೆನು. ಆಗ ಆ ತರುಣಿಯು ಭಯದಿಂದ ನನಗೆ ಹೀಗೆ ಹೇಳಿದಳು. ೫೩. 'ಕಾಡಿನಲ್ಲಿ ಹೀಗೆ ಬಂದು ಅಗ್ನಿಪ್ರವೇಶ ಮಾಡುತ್ತಿರುವ ಪರಸ್ತ್ರೀಯನ್ನು ತಡೆಹಿಡಿಯುವುದು ನ್ಯಾಯವಲ್ಲ. ತಮ್ಮ, ಬಿಟ್ಟುಬಿಡು. ಇಂದು ನಾನು ಸ್ವರ್ಗದಲ್ಲಿ ನನ್ನ ಮನಃಪ್ರಿಯನ ಸಂಗವನ್ನು ಪಡೆಯುತ್ತೇನೆ.' ಎಂದು ಹೇಳಲು ಆಗ ಪಕ್ಕ ಹಿಡಿದುಕೊಂಡು ಅಳುತ್ತಿದ್ದ ಮುದುಕಿಯು, ಮಹಾರಾಜ, ನನ್ನ ಅಡಿಗಳ ಮೇಲೆ ಬಿದ್ದು ಹೊರಳಿದಳು. ವ|| ಹಾಗೆ ಆ ಮುದುಕಿಯು ನನ್ನ ಕಾಲುಗಳ ಮೇಲೆ ಬಿದ್ದು ಹೊರಳಾಡಲು ೫೪. 'ತಾಯೆ ! ಏಳು, ಹಿರಿಯಳಾದ ನೀನು ಕಿರಿಯನಾದ ನನ್ನ ಕಾಲುಗಳ ಮೇಲೆ ಬಿದ್ದು ಅಳುವುದು ಉಚಿತವಲ್ಲ. ಈ ಕಮಲ ಮುಖಿಯು ಈ ಬೆಟ್ಟಕ್ಕೆ ಏಕೆಬಂದಳು ? ತಡಮಾಡದೆ

ವ॥ ಅದೆಂತೆನೆ

ಕಂ॥ ಭೂ ಪೊಗಟಲ್ಕೆ ಸುವರ್ಣ
ದ್ವೀಪಂ ಶರನಿಧಿಯ ನಡುವೆ ಮೆಱೆದಿರ್ಪುದು ತ
ದ್ದ್ವೀಪದೊಳಿರ್ಪಂ ಸಕಳಕ
ಳಾಪತಿ ಸಲೆ ರತ್ನದತ್ತನೆಂಬ ಧನಾಢ್ಯಂ ೫೫

ಆ ಧನಿಕನಣುಗಿಯೀ ಪು
ಣ್ಯಾಧಿಕೆ ಪೆಂಪೆಸೆವ ಪೆಸರ ಹೇಮಪ್ರಭೆ ಬಿಂ
ಬಾಧರೆ ಲಾವಣ್ಯ ರಸಾಂ
ಭೋಧಿ ಕಳಾವತಿ ನೆಗಟ್ದ ಕನ್ಯಾರತ್ನಂ ೫೬

ಇವಳನುಱೆ ರತ್ನದತ್ತಂ
ವಿವಿಧಾಲಂಕಾರ ಸಹಿತವೊಲವಿಂ ರತ್ನೋ
ದ್ಭವನೆಂಬ ಮಗಧ ನೃಪ ಸಚಿ
ವ ವರಂಗಿತ್ತಂ ಜಸಂ ಪದಿರ್ಮಡಿಸುವಿನಂ ೫೭

ವ॥ ಅಂತು ರತ್ನದತ್ತನೀ ಕನ್ಯಕೆಯಂ ರತ್ನೋದ್ಭವಂಗೆ ಕುಡಲಿರ್ವರ್ಗಮನ್ಯೋನ್ಯ ಸ್ನೇಹಂ ಕೈಮಿಕ್ಕಿರೆ

ಕಂ॥ ಕಾಮನ ತೂಣೀರಂ ಸುಮ
ನೋ ಮಾರ್ಗಣಗರ್ಭದಿಂ ಮನಂಗೊಳಿಪಂತೀ
ಶ್ಯಾಮೆಗೆ ಗರ್ಭಂ ಮೆಱೆಯಲ್
ಕಾಮಿಸಿದಂ ಕಾಂತನೆಸೆವ ತನ್ನಯ ಪುರಮಂ ೫೮

ಹೇಳು' ಎಂದು ಕೇಳಿದೆನು. ಆಗ ಅವಳು ಹೇಳಲು ಪ್ರಾರಂಭಿಸಿದಳು. ವ॥ ಅದು ಹೇಗೆಂದರೆ—೫೫. ಸಮುದ್ರದ ನಡುವೆ ಸುವರ್ಣ ದ್ವೀಪವೆಂಬ ದ್ವೀಪವು ಪ್ರಕಾಶಿಸುತ್ತದೆ. ಅದನ್ನು ಭೂಮಿಯವರೆಲ್ಲ ಹೊಗಳುತ್ತಾರೆ. ಆ ದ್ವೀಪದಲ್ಲಿ ರತ್ನದತ್ತನೆಂಬ ಧನಿಕನಿದ್ದಾನೆ. ಅವನು ಸಕಲ ಕಲೆಗಳನ್ನು ಬಲ್ಲವನು. ೫೬. ಈ ಅಧಿಕ ಪುಣ್ಯವತಿಯು ಆ ಧನಿಕನ ಮಗಳು. ಹೇಮ ಪ್ರಭೆಯೆಂಬ ಪ್ರಸಿದ್ಧವಾದ ಹೆಸರಿವಳಿಗೆ. ಇವಳ ತುಟಿ ತೊಂಡೆಯ ಹಣ್ಣಿನಂತಿದೆ. ಇವಳು ಲಾವಣ್ಯ ರಸದ ಸಮುದ್ರ. ಕಲೆಗಳನ್ನರಿತ ಪ್ರಸಿದ್ಧಳಾದ ಕನ್ಯಾರತ್ನ. ೫೭. ರತ್ನದತ್ತನು ಇವಳನ್ನು ವಿಧವಿಧವಾದ ಒಡವೆಗಳಿಂದ ಅಲಂಕರಿಸಿ ಪ್ರೀತಿಯಿಂದ ಮಗಧರಾಜನ ಮಂತ್ರಿಯಾದ ರತ್ನೋದ್ಭವನಿಗೆ ಕೊಟ್ಟು ಮದುವೆಮಾಡಿದನು. ಇದರಿಂದ ಅವನ ಕೀರ್ತಿಯು ವಿಶಾಲವಾಗಿ ಹೆಚ್ಚಿ ಹರಡಿತು. ವ॥ ಹಾಗೆ ರತ್ನದತ್ತನು ಈ ಕನ್ಯಕೆಯನ್ನು ರತ್ನೋದ್ಭವನಿಗೆ ಕೊಟ್ಟನು. ಇಬ್ಬರಿಗೂ ಪರಸ್ಪರ ಪ್ರೀತಿಯು ಅತಿಶಯವಾಗಿ ಬೆಳೆಯಿತು. ೫೮. ಕ್ರಮೇಣ ಆ ಸುಂದರಿಯು ಗರ್ಭವತಿಯಾದಳು. ಕಾಮನ ಬತ್ತಳಿಕೆಯು ಹೂಬಾಣಗಳನ್ನು ಒಳಗೊಂಡು ಸುಂದರವಾಗಿ ಕಾಣುವಂತೆ ಇವಳು ಗರ್ಭದಿಂದ ಅತಿಮನೋಹರಳಾಗಿ ಪ್ರಕಾಶಿಸಿದಳು. ಆಗ

**ವ॥ ಅಂತೀಕೆ ಪೂರ್ಣಗರ್ಭೆಯುಂ ತಳೆಯಲೀಕೆಯ ವಲ್ಲಭನಪ್ಪ ರತ್ನೋದ್ಭವಂ ತನ್ನ ಪತ್ತನಕ್ಕೆ ಪೋಗಲ್ ರತ್ನದತ್ತನಿಂ ಕಳಿಪಿಸಿಕೊಂಡುಮೀಕೆಯನೊಡಗೊಂಡಾಂ ಸಹಿತಮಂಭೋಧಿಯೊಳ್ ಬಹಿತ್ರಮನೇಱಿ ಬರ್ಪಾಗಳ್**

**ಕಂ॥ ಮೈನಾಕಗಿರಿ ಮಹಾಂಬುನಿ**
**ಧಾನದೊಳಟ್ಟಂತೆ ತದ್ಬಹಿತ್ರಂ ಮುೞುಗಲ್**
**ಮಾನಿನಿಯುಂ ಕಳ್ಕಿಸಿಕೊಂ**
**ಡಾನೊಯ್ಯನೆ ಪುಣ್ಯದಿಂದೆ ತಡಿಗೇಱ್ತಂದೆಂ ೫೯**

**ವ॥ ಅಂತು ತಡಿಗೆ ಬಂದೀಕೆಯ ಬಲ್ಕೆಯುಂ ನಾನಾಱಿಸುತ್ತಿರೆ ತನ್ನ ಪತಿಯಂ ಕಾಣದೆ ಮುೞುಂಗಿದನೆಂದನುಮಾನಿಸಿ**

**ಕಂ॥ ಗಹಗಹನೆ ನಕ್ಕು ನೋಡಾ**
**ನಿಹಪರ ಸೌಖ್ಯಕ್ಕೆ ಬಾಹ್ಯಮಾಗಿಯುಮಿನ್ನು**
**ತ್ಸಾಹದಿಂ ಜೀವಿಪೆನೆಂದೇ**
**ಕೆ ಹೀನಬುದ್ಧಿಯನೊಡರ್ಚಿದಪೆನೊ ವಿಧಾತ್ರಾ ೬೦**

**ವ॥ ಎಂದು ರತ್ನೋದ್ಭವಂ ಮುೞುಂಗಿ ತಾನುೞಿದಿರ್ದುದರ್ಕೆ ಪೇಸಿ ಮರಣೋಪಾಯಮುಂ ನೆನೆಯುತ್ತಿರೆ**

ಇವಳ ಕಾಂತನು ತನ್ನೂರಿಗೆ ಹೋಗಬೇಕೆಂದು ಆಶಿಸಿದನು. ವ॥ ಇವಳ ವಲ್ಲಭನಾದ ರತ್ನೋದ್ಭವನು ರತ್ನದತ್ತನ ಅಪ್ಪಣೆಯನ್ನು ಪಡೆದು ಪೂರ್ಣ ಗರ್ಭಿಣಿಯಾದ ಇವಳನ್ನು ಕರೆದುಕೊಂಡು ನನ್ನೊಡನೆ ಹಡಗನ್ನೇರಿ ಸಮುದ್ರದಲ್ಲಿ ಬರುತ್ತಿರುವಾಗ. ೫೯. ಮೈನಾಕಗಿರಿಯು ಮಹಾಸಾಗರದಲ್ಲಿ ಮುಳುಗಿದಂತೆ ಆ ಹಡಗು ಸಮುದ್ರದಲ್ಲಿ ಮುಳುಗಿಹೋಯಿತು. ಹೇಗೋ ಪೂರ್ವ ಪುಣ್ಯದಿಂದ ಈ ಮಾನಿನಿಯನ್ನು ತಬ್ಬಿ ಹಿಡಿದುಕೊಂಡು ಬೇಗ ಬೇಗ ದಡಕ್ಕೆ ಬಂದು ಸೇರಿದೆನು. ವ॥ ಹಾಗೆ ದಡಕ್ಕೆ ಬಂದು ಈಕೆಯ ಬಳಲಿಕೆಯನ್ನು ಹೋಗಲಾಡಿಸಲು ಯತ್ನಿಸುತ್ತಿದ್ದೆನು. ಆಗ ಇವಳು ತನ್ನ ಪತಿಯನ್ನು ಕಾಣದೆ ಮುಳುಗಿ ಹೋಗಿರಬಹುದೆಂದು ಅನುಮಾನಿಸಿ—೬೦. ಗಹಗಹ ಎಂದು ನಕ್ಕು 'ವಿಧಾತನೆ ! ನೋಡು ನಾನು ಈ ಲೋಕದ ಮತ್ತು ಪರಲೋಕದ ಸೌಖ್ಯಕ್ಕೆ ಬಾಹ್ಯಳಾಗಿ ಇನ್ನೂ ಉತ್ಸಾಹದಿಂದ ಬದುಕಬೇಕೆಂಬ ಹೀನ ಬುದ್ಧಿಯನ್ನು ಏಕೆ ಉಂಟುಮಾಡಿದೆ.' ವ॥ ಎಂದು ದುಃಖಿಸುತ್ತಾ ರತ್ನೋದ್ಭವನು ಮುಳುಗಿ ತಾನು ಮಾತ್ರ ಬದುಕಿ ಉಳಿದುದಕ್ಕೆ ಹೇಸಿಕೊಂಡು ತಾನೂ ಸಾಯುವ ದಾರಿಯನ್ನು

ಕಂ॥ ಹೇಮಪ್ರಭೆ ನೀಂ ಕೂಡುವೆ
ಕಾಮಾದ್ರಿಯೊಳಧಿಕನಪ್ಪ ರತ್ನೋದ್ಭವನಂ
ವಾಮೆ ಪದಿನಾಱು ವರ್ಷ
ಕ್ಕೀಮಾತಂ ನಂಬಿರೆಂದುದಾಕಾಶರವಂ ೬೧

ವ॥ ಅಂತಶರೀರವಾಕ್ಯಮಂ ಕೇಳ್ದುದಱಿನೀಕೆಯು ಮರಣಚಿಂತೆಯುಂ ಬಿಡಿಸಿ ಕಾಮ ಶೈಲಕ್ಕೆ ಪೋಗಲೆಂದಿರ್ಪಾಗಳ್

ಕಂ॥ ನೀರೊಳ್ ಬಂದ ಬಟಲ್ಕೆಯಿ
ನೋರಂತಿರೆ ಬೇನೆವಃಸಗಿ ಹೇಮಪ್ರಭೆ ವಿ
ಸ್ತಾರದಿನಾಗಳ್ ಪಡೆದಳ್
ವಾರಿಜಸಖನಂತಿರೆಸೆವ ಪುತ್ರನನೊಲವಿಂ ೬೨

ವ॥ ಅಂತು ಪಡೆದು

ಕಂ॥ ಇನ್ನುಸಿರ್ವುದೇನೊ ತತ್ಸುತ
ನನ್ನೋಡಲ್ ಪಡೆದಳಿಲ್ಲ ಪಾಪಿಷ್ಠೆಯೆನ
ಪ್ಪೆನ್ನಯ ಕಯ್ಯೊಳ್ ಕುಡಲಾಂ
ಬೆನ್ನೀರ್ಗೆಂದೊಂದು ಪುಱವನರಸಲ್ ಪೋದೆಂ ೬೩

ವ॥ ಅಂತಾ ಶಿಶುವಿನ ಮೆಯ್ಯ ಮಾಸಂ ತೊಳೆಯಲ್ ಬಿಸುನೀರಂ ದೊರೆಕಿಸಲೆಂದೊಂದು ಪುರದ ದಾರಿಯೊಳ್ ಬರುತಿರ್ಪಾಗಳ್

ಯೋಚಿಸುತ್ತಿದ್ದಳು. ಆಗ ೬೧. 'ಹೇಮಪ್ರಭೆ ! ನೀನು ಶ್ರೇಷ್ಠನಾದ ರತ್ನೋದ್ಭವನನ್ನು ಕಾಮಾದ್ರಿಯಲ್ಲಿ ಇಂದಿನಿಂದ ಹದಿನಾರು ವರ್ಷಕ್ಕೆ ಖಂಡಿತವಾಗಿ ಸೇರುವೆ. ಈ ಮಾತನ್ನು ನಂಬು' ಎಂದು ಆಕಾಶವಾಣಿಯು ಕೇಳಿಸಿತು. ವ॥ ಹೀಗೆ ಆ ಅಶರೀರವಾಣಿಯನ್ನು ಕೇಳಿ ಇವಳ ಮರಣ ಚಿಂತೆಯನ್ನು ಅದರಿಂದ ತಪ್ಪಿಸಿ ಕಾಮಶೈಲಕ್ಕೆ ಹೋಗಬೇಕೆಂದಿರುವಾಗ—೬೨. ನೀರಿನಲ್ಲಿ ಬಂದ ಬಳಲಿಕೆಯಿಂದ ಅತಿಶಯವಾದ ಪ್ರಸವ ವೇದನೆಯು ಹೇಮಪ್ರಭೆಗುಂಟಾಯಿತು. ಅದರಿಂದವಳು ಸೂರ್ಯನಂತೆ ಹೊಳೆಯುತ್ತಿದ್ದ ಮಗನನ್ನು ಪಡೆದಳು. ವ॥ ಹಾಗೆ ಹಡೆದು. ೬೩. ಇನ್ನು ಹೇಳುವುದೇನು ? ಆ ಮಗುವನ್ನು ನೋಡಲು ಅದೃಷ್ಟ ಪಡೆಯಲಿಲ್ಲ. ಪಾಪಿಷ್ಠೆಯಾದ ನನ್ನ ಕೈಗೆ ಕೊಟ್ಟಳು. ಆಗ ನಾನು ಬಿಸಿ ನೀರಿಗಾಗಿ ಒಂದು ಪುರವನ್ನು ಹುಡುಕಿಕೊಂಡು ಹೋದೆನು. ವ॥ ಆ ಮಗುವಿನ ಶರೀರದ ಮಾಸನ್ನು ತೊಳೆಯಲು ಬಿಸಿನೀರನ್ನು ದೊರಕಿಸಿಕೊಳ್ಳುವುದಕ್ಕಾಗಿ ಒಂದು ಪುರದ ದಾರಿಯಲ್ಲಿ ಬರುತ್ತಿರುವಾಗ—

ಕಂ॥ ಪಾಪಹರಮೂರ್ತಿ ಕಟ್ಟಿದ
ಕೌಪೀನಂ ಮಿಱುಪ ಜಡೆಗಳೊಪ್ಪುವ ಹರಯಂ
ಲೇಪನ ವಿಭೂತಿ ರಂಜಿಪ
ತಾಪಸ ಸುತನೆನ್ನನಂದು ಭೋಂಕನೆ ಕಂಡಂ ೬೪

ವ॥ ಅಂತೆನ್ನಂ ಕಂಡೀ ಬಾಲಕನೆಲ್ಲಿಯವನೆಂದಾ ಮುನಿಕುಮಾರಂ ಕೇಳ್ದ ಸಮಯದೊಳ್

ಕಂ॥ ಕಾಡಾನೆ ಸೊರ್ಕಿ ತರುಗಳ
ನೀಡಿಱಿಯುತ್ತೆನ್ನಿದಿರ್ಗೆ ಬರಲೆನಗೆ ಭಯಂ
ಮೂಡೆ ಕರದೆಳೆಯಮಗನಂ
ನೋಡದೆ ಬಿಸುಟೀಕೆಯಿರ್ದ ತಾಣಕ್ಕೊಗೆದೆಂ ೬೫

ವ॥ ಅಂತಾಮಗನಂ ಬಿಸುಟೀಕೆಯ ಸಮೀಪಕ್ಕೆ ಬಂದೆಲ್ಲಿಯುಮಿರಲಣ್ಮದಾಕಾಶ ವಾಕ್ಯಮಂ ಕೇಳ್ದೀ ಕಾಮಶೈಲಕ್ಕೆ ಬಂದೀಕೆಯ ಕಾಂತಾಗಮನಮಂ ಚಿಂತಿಸುತಿರ್ದೀ ಪೊೞ್ತಿಂಗೆ ಪದಿನಾಱುವರ್ಷಂ ತುಂಬಿ

ಕಂ॥ ನನ್ನಿಯಬರಿಸಂ ತುಂಬಿ
ತ್ತೆನ್ನರಸಂ ಬಾರನೆಂದು ಶಿಖಿಯಂ ಪುಗುವಳ್
ತನ್ನಮನದುರಿಗೆ ಸೈರಿಸ
ದಿನ್ನೇನಂ ಪೇೞ್ವೆನೆಂದು ಸುಱ್ರನೆ ಸುಯ್ದಳ್ ೬೬

೬೪. ತಟಕ್ಕನೆ ಒಬ್ಬ ಮುನಿಪುತ್ರನಂ ಕಂಡನು. ಅವನ ಮೂರ್ತಿಯು ಪಾಪಹರವಾದುದು. ಲಂಗೋಟಿಯನ್ನು ಕಟ್ಟಿಕೊಂಡಿದ್ದನು. ಜಡೆಗಳು ಮಿರುಗುತ್ತಿದ್ದುವು. ಪ್ರಕಾಶಮಾನವಾದ ಯೌವನವುಳ್ಳವನು. ಮೈಗೆಲ್ಲ ವಿಭೂತಿಯನ್ನು ಬಳಿದುಕೊಂಡಿದ್ದನು. ವ॥ನನ್ನನ್ನು ನೋಡಿ 'ಈ ಬಾಲನು ಎಲ್ಲಿಯವನು' ಎಂದು ಆ ಮುನಿಕುಮಾರನು ಕೇಳಿದ ಸಮಯದಲ್ಲಿ. ೬೫. ಒಂದು ಮದಿಸಿದ ಕಾಡಾನೆಯು ಮರಗಳನ್ನು ನುಗ್ಗಿ ಮುರಿಯುತ್ತಾ ನನ್ನ ಎದುರಿಗೇ ಬಂದಿತು. ನನಗೆ ತುಂಬ ಭಯವಾಯಿತು. ಕೂಡಲೆ ಕೈಯಲ್ಲಿದ್ದ ಎಳೆಯ ಮಗುವನ್ನು ಹಿಂದೆ ಮುಂದೆ ನೋಡದೆ ಬಿಸಾಡಿ ಈಕೆಯು ಇದ್ದ ಜಾಗಕ್ಕೆ ಬಂದೆನು. ವ॥ ಹಾಗೆ ಮಗುವನ್ನು ಬಿಸುಟು ಈಕೆಯ ಹತ್ತಿರಕ್ಕೆ ಬಂದು ಎಲ್ಲಿಯೂ ಇರಲಾಗದೆ ಆಕಾಶವಾಣಿಯನ್ನು ಕೇಳಿ ಈ ಕಾಮಶೈಲಕ್ಕೆ ಬಂದು ಈಕೆಯ ಕಾಂತನ ಆಗಮನವನ್ನು ನಿರೀಕ್ಷಿಸುತ್ತಿದ್ದೆವು. ಈ ಹೊತ್ತಿಗೆ ಹದಿನಾರು ವರ್ಷಗಳು ತುಂಬಿದುವು. ೬೬. 'ಆಕಾಶವಾಣಿಯು ನಿಜವೆಂದು ಹೇಳಿದ ವರುಷ ಮುಗಿಯಿತು. ನನ್ನ ಪತಿಯು ಬರಲಿಲ್ಲ' ಎಂದು ಯೋಚಿಸಿ ತನ್ನ ಮನಸ್ಸಿನ ದುಃಖಾಗ್ನಿಯನ್ನು ತಡೆಯಲಾರದೆ ಈಕೆಯು ಅಗ್ನಿಪ್ರವೇಶ ಮಾಡುತ್ತಿದ್ದಾಳೆ. ಇನ್ನೇನು ಹೇಳಲಿ ?'

ವ॥ ಎಲೆಯುರಸ ವೃದ್ಧೆ ಪೇೞ್ದುದಱಿಂದೆಮ್ಮ ತಾಯೆಂದಱಿದಾಕೆಯುನೇತಾನುಂ ಸಂತಯಿಸಿ ನಿನ್ನವಲ್ಲಭನಂತೋಱಿದಪೆಂ ಬಾಯೆಂದಶೋಕತರುವಿನ ತಲದೊಳಿರ್ಪ ರತ್ನೋದ್ಭವನಂ ತೋಱಿಸೆ

ಉ॥ ಭೋಂಕೆನಲೊರ್ಬರೊರ್ಬರ ಮುಖಂಗಳನೀಕ್ಷಿಸಿ ಬಾಷ್ಪವಾರಿಯೊಳ್
ತೇಂಕಿದರಪ್ಪಿಕೊಂಡ ರತಿಸಮ್ಮದದಿಂ ಮಿಗೆ ದುಃಖಭಾರಮಂ
ನೂಂಕಿದರಂತರಿಕ್ಷವಚನಂ ದಿಟಮಾಯ್ತು ಸಮಸ್ತ ಭಾಗ್ಯಮಿಂ
ದಂಕುರಿಸಿತ್ತೆನುತ್ತೆ ಮಗುಳ್ದೆನ್ನ ಮುಖಾಬ್ಜಮನೊಲ್ದು ನೋಡಿದರ್ ೬೭

ವ॥ ಅಂತು ನೋಡಿ ಎಲೆಮಹಿಮ ನೀನಾರೆಂದೆನ್ನಂ ಬೆಸಗೊಳೆ

ಕಂ॥ ವಾರಣಮಂ ಕಂಡಂಜಿ ಮ
ಹಾರಣ್ಯದೊಳೀಕೆ ಬಿಸುಟುಪೋದ ಕುಮಾರಂ
ಕಾರಣದೊಳಿಲ್ಲಿಗೆಯ್ದಿದೆ
ನಾರಯ್ಯಲ್ ನಿಮ್ಮ ಪುತ್ರನೆಂದೆಱಗಿರ್ದೆಂ ೬೮

ಮಃ॥ ಇದನೇವೇೞ್ವುದೊ ಭಾಗ್ಯದೇೞ್ತರವನಾನಂದಾರ್ಣವಂ ಮೀರೆದ
ಪ್ಪಿದ ಚೆಲ್ವಂ ನಿಜಪುಣ್ಯಪುಂಜವೆನಸುಂ ಕೈಸಾರ್ದುದಂ ಮಂಗಳಾ
ಸ್ಪದ ಸಂಸಾರಸುಖಂ ಫಲಂಬಡೆದುದಂ ಚಿತ್ತೋತ್ಸವಂ ಕೆಯ್ಗೆ
ಟ್ಟಿದುದಂ ಮಾನಸ ಜನ್ಮಸಾರದೊದವಂ ನೇತ್ರಾಬ್ಜ ಸಾಫಲ್ಯಮಂ ೬೯

ಎಂದು ಹೇಳಿ ಸುರ್‌ಎಂದು ನಿಟ್ಟುಸಿರುಬಿಟ್ಟಳು. ವ॥ ಎಲೆಯುರಸ ! ಮುದುಕಿಯ ಹೇಳಿಕೆಯಿಂದ ನನ್ನ ತಾಯಿಯೆಂದು ತಿಳಿದು ಆಕೆಯನ್ನು ಬಹಳ ಕಷ್ಟದಿಂದ ಸಮಾಧಾನ ಪಡಿಸಿದೆನು. 'ನಿನ್ನ ಪತಿಯನ್ನು ತೋರಿಸುವೆನು. ಬಾ !' ಎಂದು ಹೇಳಿ ಕರೆದು ಕೊಂಡು ಹೋಗಿ ಅಶೋಕವೃಕ್ಷದ ತಳದಲ್ಲಿದ್ದ ರತ್ನೋದ್ಭವನನ್ನು ತೋರಿಸಿದೆನು, ೬೭. ಒಡನೆ ಅವರು ಒಬ್ಬರೊಬ್ಬರ ಮುಖಗಳನ್ನು ನೋಡಿದರು. ಕಣ್ಣೀರಿನಲ್ಲಿ ಮುಳುಗಿ ತೇಲಿದರು. ಅತಿ ಸಂತೋಷದಿಂದ ಪರಸ್ಪರ ತಬ್ಬಿಕೊಂಡರು. ದುಃಖದ ಹೊರೆಯನ್ನು ಕಳೆದುಕೊಂಡರು. 'ಆಕಾಶವಾಣಿಯು ನಿಜವಾಯಿತು. ಇಂದು ಸಮಸ್ತ ಭಾಗ್ಯವೂ ಮೊಳೆಯಿತು' ಎಂದು ಹೇಳುತ್ತಾ ಮತ್ತೆ ನನ್ನ ಮುಖಕಮಲವನ್ನು ಒಲಿದು ನೋಡಿದರು. ವ॥ ಹಾಗೆ ನೋಡಿ 'ಎಲೆ ಮಹಾತ್ಮ ! ನೀನಾರು ?' ಎಂದು ನನ್ನನ್ನು ಕೇಳಿದರು. ೬೮. "ಆನೆಯನ್ನು ಕಂಡು ಹೆದರಿ ಮಹಾರಣ್ಯದಲ್ಲಿ ಈಕೆಯು ಬಿಸುಟುಹೋದ ಕುಮಾರನು ನಾನೇ. ಯಾವುದೋ ಕಾರಣದಿಂದ ಇಲ್ಲಿಗೆ ಬಂದೆನು. ನಿಮ್ಮ ಮಗನೆಂದರಿದು ನಿಮಗೆ ನಮಸ್ಕರಿಸುತ್ತಿದ್ದೇನೆ" ಎಂದು ಹೇಳಿದೆನು. ೬೯. ಇದನ್ನು ಹೇಗೆ ಹೇಳೋಣ ! ಭಾಗ್ಯವು ಎದ್ದುಬಂದಿತು. ಆನಂದದ ಸಮುದ್ರವು ಚೆಂದವಾಗಿ ಮೇರೆಮೀರಿ ಹರಿಯಿತು. ಅವರ ಪೂರ್ವ ಪುಣ್ಯದ ಸಮೂಹವು ಕೈಗೆ ಸಿಕ್ಕಿತು. ಮಂಗಳಕ್ಕೆ ಆಶ್ರಯವಾದ ಸಂಸಾರ ಸುಖವು ಫಲವನ್ನು ಕೊಟ್ಟಿತು. ಮನಸ್ಸಿ

ಉ॥ ಇಂದಿನ ಸೌಖ್ಯಮಿಂದಿನ ಮಹೋನ್ನತಿಯಿಂದಿನ ಭಾಗ್ಯದೇಳ್ಗೆ ಮ
ತ್ತಿಂದಿನ ಚಿತ್ತದುಜ್ಜ್ವಳಿಕೆಯಿಂದಿನ ಪುಣ್ಯಫಲಂ ಸಮಂತು ನ
ಮ್ಮಿಂದಿನಮೆಯ್ಮೆಯಿಂದಿನನುರಾಗಸುಖಂ ಪರಿಭಾವಿಸಲ್ ಕರಂ
ಚೆಂದಮದಾಯ್ತೆನುತ್ತೆ ಮನದುತ್ಸವವಾರಿಧಿಯೊಳ್ ಮುಳುಂಗಿದರ್ ೭೦

ವ॥ ಅಂತೆನ್ನಂ ತೆಗೆದು ಮುಹುರ್ಮುಹುರಾಲಿಂಗನ ಮೂರ್ಧಘ್ರಾಣನಂಗೆಯ್ದು ಸಂಪೂರ್ಣಮನೋರಥರಾದ ತಾಯ್ತಂದೆಗಳ್ ಬೆರಸು ಚಿತ್ತೋತ್ಸವಂ ಮುಂದುವರಿಯಲಲ್ಲಿಂದೆ ತೆರಳ್ದು ಬರ್ಪಾಗಳ್ ಮುಂದೆ

ಮ॥ ಸುತಸಾಮಧ್ವನಿ ಹೋಮಧೂಮಪವನಂ ಸಂಭಾಷಣಂ ಮಂತ್ರ ಹೂಂ
ಕೃತಿಯಾಹ್ವಾನ ವಿಸರ್ಜನಸ್ಥಿತಿ ಮಹಾದೇವಾರ್ಚನಂ ತಾಪಸ
ಪ್ರತಿಪತ್ತಿವ್ರತಮಾತ್ರ ನಿತ್ಯನಿಯಮಂ ಕಾಲತ್ರಯಜ್ಞಾನಮು
ಗ್ರತಪಂ ಶಾಂತರಸಪ್ರವಾಹಮೆಸೆಯಲ್ ಚೆಲ್ವಾಯ್ತು ಋಷ್ಯಾಶ್ರಮಂ ೭೧

ವ॥ ಮತ್ತಮಲ್ಲಿ ಮೃಗರಾಜಿಯ ಮೆಯ್ಯನುಗುರ್ಗಳಿಂ ತುಱಿಸಿ ಕಂಡೂತಿಯಂ ಕಳೆವ ಪುಂಡರೀಕಗಳಿಂ ಕಂಠೀರವ ಕಿಶೋರಂಗಳಂ ಕರದೊಳಿಟ್ಟೊಯ್ಯನುಯ್ಯಲಾಡಿಸುವ

ನಲ್ಲಿ ಹರ್ಷವು ಹೆಪ್ಪುಗಟ್ಟಿತು. ಮನಸ್ಸಿನಲ್ಲಿ ಕಣ್ಣುಗಳೆಂಬ ಕಮಲಗಳಿಗೆ ಸಾಫಲ್ಯ ವುಂಟಾಯಿತು. ವರ್ಣಿಸುವುದು ಅಸಾಧ್ಯ. ೭೦. ಇಂದಿನ ಸೌಖ್ಯ, ಇಂದಿನ ಮಹೋನ್ನತಿ, ಇಂದಿನ ಭಾಗ್ಯದ ಏಳಿಗೆ ಮತ್ತು ಇಂದಿನ ಮನಸ್ಸಿನ ಪ್ರಕಾಶ, ಇಂದಿನ ಪುಣ್ಯಫಲ, ನಮ್ಮ ಇಂದಿನ ವಿಶೇಷವಾದ ಮಹಿಮೆ, ಇಂದಿನ ಅನುರಾಗದ ಸುಖ ಆಲೋಚಿಸಿದರೆ ಎಲ್ಲವೂ ಚೆಂದವಾಗಿವೆ ಎಂದು ಯೋಚಿಸಿ ಅವರು ಮನಸ್ಸಿನ ಆನಂದಸಾಗರದಲ್ಲಿ ಮುಳುಗಿದರು. ವ।। ಅವರು ನನ್ನನ್ನು ಸೆಳೆದುಕೊಂಡು ಮತ್ತೆಮತ್ತೆ ಆಲಿಂಗನ ಮಾಡಿಕೊಂಡರು. ತಲೆಯನ್ನು ಮೂಸಿ ನೋಡಿದರು. ಹೀಗೆ ಸಂಪೂರ್ಣ ಮನೋರಥರಾದ ತಾಯಿ ತಂದೆಗಳೊಡನೆ ಮನಸ್ಸಿನಲ್ಲಿ ಆನಂದವು ತುಂಬಿ ಹರಿಯಲು ಅಲ್ಲಿಂದ ಹೊರಟುಬಂದೆನು. ಆಗ ಮುಂದೆ ೭೧. ಪ್ರಶಸ್ತವಾದ ಸಾಮಗಾನದ ಧ್ವನಿ, ಹೋಮ ಧೂಮವನ್ನು ಹೊತ್ತ ಗಾಳಿ ಪರಸ್ಪರ ಸಂವಾದ, ಮಂತ್ರಪಠಣ, ಹೂಂಕಾರ, ದೇವತೆಗಳನ್ನು ಆಹ್ವಾನಿಸುವುದು, ವಿಸರ್ಜಿಸುವುದು, ದೇವತೆಗಳ ಪ್ರತಿಷ್ಠೆ, ಮಹಾದೇವನ ಪೂಜೆ, ತಾಪಸನಾಗಲು ಮಾಡಬೇಕಾದ ವ್ರತ, ನಿತ್ಯವೂ ಆಚರಿಸುವ ನಿಯಮಗಳು, ಭೂತ ವರ್ತಮಾನ ಭವಿಷ್ಯತ್ಕಾಲಗಳ ಜ್ಞಾನ, ಉಗ್ರವಾದ ತಪಸ್ಸು, ಶಾಂತರಸದ ಪ್ರವಾಹ–ಇವುಗಳಿಂದ ಕೂಡಿದ ಒಂದು ಋಷ್ಯಾಶ್ರಮವು ಸುಂದರವಾಗಿ ಕಾಣಿಸಿತು. ವ॥ ಅಲ್ಲಿ ಹುಲಿಗಳು ಜಿಂಕೆಗಳ ಮೈಯ್ಯನ್ನು ಉಗುರುಗಳಿಂದ ತುರಿಸಿ ಮೈನವೆಯನ್ನು ಹೋಗಲಾಡಿಸುತ್ತಿದ್ದುವು. ಕಾಡಾನೆಗಳು ಸಿಂಹದ ಮರಿಗಳನ್ನು ತಮ್ಮ ಸೊಂಡಿಲು

ಡಾನೆಗಳಿಂ ಬಿಸುಲುರವಣೆಗೆ ಬಸವಳಿವ ವಿಷಾಹಿಗೆ ಪತತ್ರಪಲ್ಲವಮಂ ಜಲ್ಲರಿವಿಡಿದ ಕಲಾಪಿ
ಳಿಂ ಜರತ್ತಾಪಸರ್ಗೆ ಚರಣಪರಿಚರ್ಯೆಯಮಂ ಮಾಳ್ಪ ವನಚರಂಗಳಿಂ ಮುನಿಕುಮಾರರ ಕೆಯ್ಯಂ
ಡಿದು ಮೆಲ್ಲನಡಿಯಿಡಿಸುವ ಭಲ್ಲೂಕಂಗಳಿಂ ಕವಲ್ಗೋಂಬಿನೊಳ್ ಕಮಂಡಲಮಂ ನೇಱಿಲ್
ಳುಂಕದಂತೆ ತಳೆದಿರ್ದ ಸಾರಂಗಂಗಳಿಂ ಋಷಿಕುಮಾರಿಯರ್ಗೆ ನೆರವಾಗಿ ಚರಿಯಿಪ ಹರಿಣಿಗಳಿಂ
ರ್ಣಶಾಲೆಯೊಳ್ ಪರೆದ ಪುಷ್ಪರಜಮಂ ಸಮಱೆತೊಡೆವ ಚಮರೀಮೃಗಂಗಳಿಂ ಹೋಮಧೇ
ನುವಂ ಕ್ಷೇಮುವಪ್ಪಂತು ಕಾದಿರ್ಪ ಗೋಲಾಂಗೂಲಂಗಳಿಂ ತಾಪಸಕುಮಾರರೊಡನೆ ಚಾಪಳತೆ
ಯಿಂ ಶಾಸ್ತ್ರಾನುವಾದನಂಗೆಯ್ವ ರಾಜಕೀರಂಗಳಿಂ ಅಗ್ನಿಹೋತ್ರ ರಕ್ಷಣಾರ್ಥಂ ಬಾಳ್ವೇಲಿಯುಂ
ರ್ಪ ಎಯ್ಯಪಂದಿಗಳಿಂ ನೀವಾರಾಂಕುರಕ್ಕೆ ಠಾವಪ್ಪಂತು ಲಾಂಗೂಲಪದ್ಧತಿಯಂ ಮಾಳ್ಪ
ರಾಹಗಳಿಂ ಶಾಂತರಸವಾರ್ಧಿ ಮೇರೆದಪ್ಪಿದಂತಿರ್ದುದು ಅಂತುಮಲ್ಲದೆಯುಂ

ಮ॥ ಶ್ರುತಿಮಾರ್ಗಶ್ರವಣಂ ಪುರಾಣಕಥನಂ ಷಟ್ತರ್ಕ ಸಂಭಾಷಣಂ
ಸ್ಮೃತಿ ಚಿಂತಾವ್ಯಸನಂ ಸಮಸ್ತ ಪುರುಷಾರ್ಥಾಳಾಪಕಂ ಪೆಂಪುವೆ
ತ್ತಿತಿಹಾಸಸ್ಮೃತಿವಿಸ್ಮಯಂ ಸಕಲಧರ್ಮಾಧರ್ಮ ನೈರೂಪಣ
ಸ್ಥಿತಿವೈಶೇಷಿಕದಿಂದದೇಂ ಮೆಱೆದುದೋ ಚೆಲ್ವಾಗಿ ಋಷ್ಯಾಶ್ರಮಂ ೭೨

ಗಳಲ್ಲಿಟ್ಟುಕೊಂಡು ಉಯ್ಯಾಲೆಯಾಡಿಸುತ್ತಿದ್ದುವು. ನವಿಲುಗಳು ಬಿಸಿಲ ಬೇಗೆಗೆ ತಲ್ಲಣಿಸುವ ವಿಷ ಸರ್ಪಗಳಿಗೆ ತಮ್ಮ ರೆಕ್ಕೆ ಗರಿಗಳನ್ನು ಛತ್ರಿಯಂತೆ ಹಿಡಿದು ನೆಳಲು ಕೊಡುತ್ತಿದ್ದುವು. ಕಪಿಗಳು ಮುದಿತಾಪಸರಿಗೆ ಪಾದ ಸೇವೆಯನ್ನು ಮಾಡುತ್ತಿದ್ದುವು. ಭಲ್ಲೂಕಗಳು ಮುನಿಕುಮಾರರ ಕೈಹಿಡಿದುಕೊಂಡು ಮೆಲ್ಲನೆ ನಡೆಯಿಸುತ್ತಿದ್ದುವು. ಸಾರಂಗಗಳು ಕಮಂಡಲವನ್ನು ತುಳುಕದಂತೆ ತಮ್ಮ ಕವಲು ಕವಲಾದ ಕೊಂಬುಗಳಲ್ಲಿ ಸಿಕ್ಕಿಸಿಕೊಂಡಿರುತ್ತಿದ್ದುವು. ಹೆಣ್ಣು ಜಿಂಕೆಗಳು ಋಷಿ ಕುಮಾರಿಯರಿಗೆ ಸಹಾಯ ಮಾಡುತ್ತಾ ಸಂಚರಿಸುತ್ತಿದ್ದುವು. ಚಮರೀ ಮೃಗಗಳು ಪರ್ಣಶಾಲೆಯಲ್ಲಿ ಹರಡಿದ್ದ ಹೂಗಳ ಪರಾಗಗಳನ್ನು ಗುಡಿಸಿ ಒರೆಸುತ್ತಿದ್ದುವು. ಗೋಲಾಂಗೂಲಗಳು ಹೋಮ ಧೇನುವನ್ನು ತೊಂದರೆಯಾಗದಂತೆ ಕಾವಲು ಕಾಯುತ್ತಿದ್ದುವು. ಅರಗಿಣಿಗಳು ತಾಪಸ ಕುಮಾರರೊಡನೆ ಚಪಲತೆಯಿಂದ ಶಾಸ್ತ್ರಾರ್ಥಗಳನ್ನು ಅನುವಾದ ಮಾಡುತ್ತಿದ್ದುವು. ಮುಳ್ಳು ಹಂದಿಗಳು ಜೀವವಿರುವ ಬೇಲಿಯ ಹಾಗೆ ಸುತ್ತಿಕೊಂಡು ಯಜ್ಞ ರಕ್ಷಣೆಯನ್ನು ಮಾಡುತ್ತಿದ್ದುವು. ಹಂದಿಗಳು ಕಾಡು ಭತ್ತದ ಮೊಳಕೆಗಳಿಗೆ ಸ್ಥಳವನ್ನು ಮಾಡುವಂತೆ ನೇಗಿಲಿನಿಂದ ಉಳುತ್ತಿದ್ದುವು. ಹೀಗೆ ಆಶ್ರಮವು ಶಾಂತಿರಸದ ಸಮುದ್ರವು ಮೇರೆ ಮೀರಿದಂತೆ ಕಾಣಿಸುತ್ತಿತ್ತು. ಅಷ್ಟೇ ಅಲ್ಲದೆ—೭೨. ಶ್ರುತಿಗಳ ವಿಚಾರವನ್ನು ಕೇಳುವುದು, ಪುರಾಣಗಳ ಪ್ರವಚನ, ಆರು ಶಾಸ್ತ್ರಗಳ ಚರ್ಚೆ, ಸ್ಮೃತಿಗಳ ವಿಷಯಂಗಳ ಆಲೋಚನೆಯಲ್ಲಿ ಆಸಕ್ತಿ, ಎಲ್ಲ ಪುರುಷಾರ್ಥಗಳ (ಧರ್ಮಾರ್ಥಕಾಮಮೋಕ್ಷ) ಸಂಬಂಧವಾದ ಸಂಭಾಷಣೆ, ಹಿರಿಮೆಯುಳ್ಳ ಇತಿಹಾಸದ ಸ್ಮರಣೆಯಿಂದಾದ ವಿಸ್ಮಯ, ಸಕಲ

ವ॥ ಅಂತೆಸೆವ ಋಷ್ಯಾಶ್ರಮಮಂ ಪುಗಲದಱೊಳ್

ಮ॥ ಉರಿಗಣ್ಣೋಱದ ಶಂಕರಂ ಫಣಿಕುಲಂ ತಳ್ತುರ್ವರೀಶಂ ಮಹಾ
ಗರಳಂ ಪೊರ್ದದಶಂಭು ಚರ್ಮವಸನಂ ಮೆಯ್ವೆರ್ಚದಂಧಾರಿ ಕೂ
ರ್ತರೆವೆಣ್ಣಾಗದ ರುದ್ರನೆಂಟೆರ್ದೆಯ ನಂಟರ್ಪಂಗಮಂ ತಾಳದಂ
ಬರಗಂಗಾಧರನೆಂಬ ಪೆಂಪುವಡೆದಂ ಸರ್ವಜ್ಞಯೋಗೀಶ್ವರಂ ೭೩

ವ॥ ಅಂತಿರ್ದ ಸರ್ವಜ್ಞರೆಂಬ ಯೋಗೀಶ್ವರರಂ ಕಂಡವರಿಂ ಪ್ರಸಾದಮಂ ಪಡೆದು ನಿರವಧಿ ಪರಿಚರ್ಯಮಂ ಮಾಡುತ್ತಿರಲಾಂ ಸಂಸಾರಿಯುಪ್ಪುದಱಿಂದರ್ಥ ಸಂಬಂಧದಿಂ ಜೀವಿಸುವನೆಂಬು ದನವರಱಿತು ಕರುಣಿಸೆ

ಕಂ॥ ಕರುಣಾಳುಗಳಪ್ಪುದಱಿಂ
ಪರಿಚರ್ಯೆಯ ತುಷ್ಟಿಯಿಂ ಮುನಿಶ್ರೇಷ್ಠಂ ನಿ
ರ್ಭರ ಶಾಂತದೃಷ್ಟಿಯಿಂದಾ
ದರದಿಂ ಕರೆದೆನಗೆ ಕೊಟ್ಟರೊಂದೌಷಧಿಯಂ ೭೪

ವ॥ ಅಂತೌಷಧಿಯಂ ಕೊಟ್ಟು ಮತ್ತಮಿಂತೆಂದರ್

ಕಂ॥ ಅಡಿಗಡಿಗೆ ನಿಧಾನಂಗಳ್
ಪೊಡವಿಯೊಳಿಡಿದಿರ್ಪುವದಱಿನೀಯೌಷಧಿಯಿಂ
ಪಡೆದಂಜನದಿಂ ಧನಮಂ
ತಡೆಯದೆ ಪಡೆಯೆಂದು ಬೆಸಸಿದರ್ ಮುನಿಮುಖ್ಯರ್ ೭೫

ಧರ್ಮಾಧರ್ಮಗಳ ನಿರೂಪಣೆಯ ವಿಶೇಷವಾದ ರೀತಿ–ಇವುಗಳಿಂದ ಋಷ್ಯಾಶ್ರಮವು ತುಂಬ ಸುಂದರವಾಗಿ ಮೆರೆಯಿತು. ವ|| ಹಾಗೆ ಪ್ರಕಾಶಿಸುವ ಋಷ್ಯಾಶ್ರಮವನ್ನು ಪ್ರವೇಶಿಸಲು ಅದರಲ್ಲಿ—೭೩. ಉರಿಗಣ್ಣಿಲ್ಲದ ಶಂಕರ, ಹಾವುಗಳನ್ನು ಧರಿಸಿದ ಜಗದೀಶ್ವರನಾದ ಶಿವ, ಭಯಂಕರವಾದ ವಿಷಧರನಲ್ಲದ ಶಂಭು, ಚರ್ಮಾಂಬರಧಾರಿ ಯಲ್ಲದ ಈಶ್ವರ, ಪ್ರೀತಿಸಿ ಅರ್ಧನಾರೀಶ್ವರನಾಗದ ರುದ್ರ, ಎದೆಗಾರಿಕೆಯುಳ್ಳ ಅಂಗ ವನ್ನು ತಾಳದ ಗಂಗಾಧರ ಎಂಬ ಮಹಿಮೆಯುಳ್ಳ ಸರ್ವಜ್ಞರೆಂಬ ಯೋಗೀಶ್ವರರು ಕಾಣಿಸಿದರು. (ಶಿವನ ಮಹಿಮೆಯುಳ್ಳವರು. ಆದರೆ ಶಿವನ ಲಕ್ಷಣಗಳಿಲ್ಲ). ವ॥ ಹಾಗಿದ್ದ ಸರ್ವಜ್ಞರೆಂಬ ಯೋಗೀಶ್ವರರನ್ನು ಕಂಡು ಅವರಿಂದ ಪ್ರಸಾದವನ್ನು ಪಡೆದು ಒಂದೇ ಸಮವಾಗಿ ಸೇವೆಯನ್ನು ಮಾಡುತ್ತಿದ್ದೆನು. ನಾನು ಸಂಸಾರಿಯಾಗಿದ್ದು ಹಣದ ವ್ಯವಹಾರ ದಿಂದ ಜೀವಿಸುವವನೆಂದು ತಿಳಿದು ಕರುಣೆದೋರಿದರು—೭೪. ಅವರು ಕರುಣಾಳು ಗಳಾಗಿದ್ದರು. ನನ್ನ ಸೇವೆಯಿಂದ ತೃಪ್ತಿಯನ್ನು ಹೊಂದಿದರು. ಆದುದರಿಂದ ಆ ಮುನಿ ಶ್ರೇಷ್ಠರು ನನ್ನನ್ನು ಆದರದಿಂದ ಹತ್ತಿರಕ್ಕೆ ಕರೆದು ನನಗೆ ಒಂದು ಔಷಧಿಯನ್ನು ಕೊಟ್ಟರು. ವ॥ ಹಾಗೆ ಔಷಧಿಯನ್ನು ಕೊಟ್ಟು ೭೫. "ಈ ಭೂಮಿಯಲ್ಲಿ ಹೆಜ್ಜೆ ಹೆಜ್ಜೆಗೂ ನಿಧಿಗಳು ಅಡಗಿರುತ್ತವೆ. ಆದುದರಿಂದ ಈ ಔಷಧಿಯಿಂದ ಪಡೆದ ಅಂಜನದ

ವ॥ ಅದರ್ಕಾಂ ಮಹಾಪ್ರಸಾದಮೆಂದು ಔಷಧಿಯಿಂದಂಜನಂಬಡೆದು ನೋಟಪ್ಪಾಗಳ್

ಕಂ॥ ನೋಡಿದ ತಾಣಂ ಕನಕದ
ಬೀಡಾಗಿರೆ ಕಂಡು ಚಿತ್ತದಾರ್ತಂ ಪಿಂಗಲ್
ತೋಡಿದೆನರ್ಥಮನೇನಂ
ಮಾಡದೊ ಸನ್ಮುನಿಪಸಂಗಮಾಪದ್ಭಂಗಂ ೭೬

ವ॥ ಅಂತು ಭರತಕುಲದಂತೆ ಗಾಂಗೇಯಸಂಪತ್ತಿಯಂ ಪಡೆದು ದೇವರಂ ಕಾಣ್ಬುಪಾಯಮಂ ಚಿಂತಿಸುತಿರ್ಪನ್ನೆಗಮೊಂದು ದಿವಸಂ

ಚಂ॥ ಮಿಸುನಿಯ ಗಗ್ಗರಂ ಸಸಿನಗೋಂಬಿನ ಚೌರಿಯಿಟಿಲ್ವ ಗಂಟೆಗಳ್
ಮಿಸುಪುರಗೆಜ್ಜೆ ಮಿಂಡಿಗೆಗಳಂ ಮಿಗೆ ಚುಂಬಿಪ ವಾಲಮೊಪ್ಪಿ ನಿಂ
ದೆಸೆವೆಳಸಣ್ಣರೋಮತತಿ ಕೊರ್ಬಿದ ಮೆಯ್ ಮಿಗೆ ಹೇಱುವೆತ್ತನ
ಡ್ವಸಹಿತಮಾವನಸ್ಥಳಮನೆಯ್ದಿದನೊರ್ವ ಮಹಾವಣಿಗ್ವರಂ ೭೭

ಉ॥ ದಾವಣಿಗೂಂಟಮಂ ಪೊಡೆವ ಕಾಟ್ಕುರುಳಂ ಪರಿದಾಯ್ವ ಪೇರ್ಗಳಂ
ಠಾವಱಿದೊಟ್ಟಲೊಟ್ಟುವ ಸಮಸ್ಥಳದೊಳ್ ಗುಡಿಪೊಯ್ವ ಬೆನ್ನ ಪು
ಣ್ಣೋವುವ ನೀರ್ಗೊಳಕ್ಕೆ ಬಟಲ್ವೆಟ್ಟುಗಳಂ ಪೊಡೆವಕ್ಕಿಯಂ ಕರಂ
ಭಾವಿಸೆ ಸೇರೆಗೊಂಡಡುವ ದೋಲಿಗರಿಂದೆಸೆದಂ ವಣಿಗ್ವರಂ ೭೮

ಸಹಾಯದಿಂದ ತಪ್ಪದೆ ಧನವನ್ನು ಪಡೆ" ಎಂದು ಮುನಿ ಶ್ರೇಷ್ಠರು ಹೇಳಿದರು. ವ॥ ಅದಕ್ಕೆ ನಾನು ಮಹಾಪ್ರಸಾದವೆಂದು ಹೇಳಿ ಔಷಧಿಯಿಂದ ಅಂಜನವನ್ನು ಪಡೆದು ನೋಡಿದೆನು. ಆಗ ೭೬. ನಾನು ನೋಡಿದ ಸ್ಥಾನವು ಚಿನ್ನದ ಬೀಡಾಗಿದ್ದಿತು. ಅದನ್ನು ನೋಡಿ ಮನಸ್ಸಿನ ಆತುರವನ್ನು ಅಡಗಿಸುವುದಕ್ಕಾಗಿ ಧನಕ್ಕಾಗಿ ನೆಲವನ್ನು ತೋಡಿದೆನು. ಆಪತ್ತನ್ನು ನಾಶಮಾಡುವ ಮುನಿ ಶ್ರೇಷ್ಠನ ಸಹವಾಸವು ಏನನ್ನು ತಾನೇ ಮಾಡದು ? ವ॥ ಹಾಗೆ ಭರತ ಕುಲದಂತೆ ಗಾಂಗೇಯ ಸಂಪತ್ತಿಯನ್ನು ಪಡೆದು ಸ್ವಾಮಿಯನ್ನು ಕಾಣುವ ಉಪಾಯವನ್ನು ಯೋಚಿಸುತ್ತಿದ್ದೆನು. ಆಗ ಒಂದು ದಿವಸ-(ಗಾಂಗೇಯ= ಭೀಷ್ಮ ಮತ್ತು ಚಿನ್ನ) ೭೭. ಹೊರೆ ಹೊತ್ತ ಒಂದು ಗೂಳಿಯೊಡನೆ ಒಬ್ಬ ವಣಿಗ್ವರನು ಆ ವನಸ್ಥಳಕ್ಕೆ ಬಂದನು. ಆ ಎತ್ತಿಗೆ ಚಿನ್ನದ ಗಗ್ಗರಗಳನ್ನು (ದೊಡ್ಡ ಗೆಜ್ಜೆಗಳನ್ನು) ಕಟ್ಟಲಾಗಿತ್ತು. ಅಲ್ಲದೆ ಅದು ನೀಳವಾದ ಕೊಂಬುಗಳಿಗೆ ಕಟ್ಟಿದ ಚೌರಿಯ ಗೊಂಡೆಗಳು, (ಕುತ್ತಿಗೆಯಲ್ಲಿ) ಜೋಲಾಡುವ ಗಂಟೆಗಳು, ಹೊಳೆಯುವ ಶಬ್ದ ಮಾಡುವ ಗೆಜ್ಜೆಗಳು (?) ಮೊಳಕಾಲುಗಳನ್ನು ಮುಟ್ಟುವ ಬಾಲ, ಹೊಳೆಯುವ ಸಣ್ಣ ರೋಮಗಳ ಸಮೂಹ, ಕೊಬ್ಬಿ ಬೆಳೆದ ಶರೀರ, ಇವುಗಳಿಂದ ಪ್ರಕಾಶಿಸುತ್ತಿತ್ತು. ೭೮. ದೋಲಿಗರು (ಮೇನಾ ಹೊರುವವರು) ಎತ್ತನ್ನು ಕಟ್ಟಲು ಗೂಟ ಬಡಿಯುತ್ತಿದ್ದರು. ಕೆಲವರು ಕಾಡಿನ ಬೆರಣಿಗಳನ್ನು ಆರಿಸುತ್ತಿದ್ದರು. ಹೊರೆಗಳನ್ನು ಸರಿಯಾದ ಸ್ಥಳದಲ್ಲಿ ಪೇರಿಸುತ್ತಿದ್ದರು. ಮತ್ತೆ ಕೆಲವರು ಸಮವಾದ ಜಾಗದಲ್ಲಿ ಗೂಡಾರವನ್ನು ಹಾಕು

ವ॥ ಅಂತಲ್ಲಿಗೊರ್ಬ ವೃದ್ಧವ್ಯವಹಾರಿ ಬಂದು ಬೀಡುಬಿಡುವುದುಮದಱೊಳೊರ್ಬನನೀತನಾರೆಂದಾಂ ಕೇಳ್ವುದುಮಾತನಿಂತೆಂದಂ

ಕಂ॥ ವಿಭವಧನೇಶಂ ಪದ್ಮ
ಪ್ರಭನೆಂಬಂ ಹೇಮದತ್ತನಣುಗನ ಪರದಂ
………………… …………………
ಶುಭಚರಿತಂ ಸಲೆ ಪರೋಪಕಾರ ಚರಿತ್ರಂ ೭೯

ವ॥ ಎಂದು ಪೇಳ್ವುದುಮಾನಾತನಲ್ಲಿಗೆ ಪೋಗಿ ಮೃದುಸಂಭಾಷಣಂಗೆಯ್ಯಲಾತಂ ಪ್ರೀತಿವಟ್ಟು ಕಿಱಿದು ದಿನಮಿರ್ದಲ್ಲಿ ತಳರ್ದು ಪೋಪಾಗಳೆನ್ನಂ ಕರೆದು

ಕಂ॥ ಎನ್ನ ನಿಜಮಿತ್ರನಾದೊಡ
ಮೆನ್ನೂರ್ಗೊಡವಂದು ತತ್ಪುರಶ್ರೀಯುನಲಂ
ಪಿನ್ನೋಡಿಯುವಂತೀಶ್ವರ
ನುನ್ನತ ಸಂಪದಮನೀಕ್ಷಿಪುದು ನಲವಿಂದಂ ೮೦

ವ॥ ಎಂದು ಪೇಟ್ೞೊಡಂತೆಗೆಯ್ವೆನೆಂದಾತನಿಂ ಕೆಲವೆಟ್ತುಗಳನೀಸಿಕೊಂಡು ಅಸಂಖ್ಯಾತವಸ್ತುವಂ ತುಂಬಿ ಸರ್ವಜ್ಞರಂ ಬೀಳ್ಕೊಂಡು ಪದ್ಮ ಪ್ರಭನೊಡನೆ ಬಂದವಂತೀ ಪುರಮಂ ಕಂಡು

ತ್ತಿದ್ದರು. ಇತರರು ಬೆನ್ನಿನ ನೋವನ್ನು ನಿವಾರಿಸಲು ನೀರಿನ ಕೊಳಕ್ಕೆ ಬಳಲಿದ ಎತ್ತುಗಳನ್ನು ಕರೆದುಕೊಂಡು ಹೋಗುತ್ತಿದ್ದರು. ಉಳಿದವರು ಅಕ್ಕಿಯನ್ನು ಬೊಗಸೆಯಿಂದ ತೆಗೆದು ಬೇಯಿಸುತ್ತಿದ್ದರು. ಇಂಥ ದೋಲಿಗರಿಂದ ವಣಿಗ್ವರನು ಪ್ರಕಾಶಿಸಿದನು. ವ॥ ಹಾಗೆ ಅಲ್ಲಿಗೆ ಒಬ್ಬ ವೃದ್ಧನಾದ ವ್ಯಾಪಾರಿಯು ಬಂದು ಬೀಡು ಬಿಟ್ಟನು. ನಾನು ಅವರಲ್ಲೊಬ್ಬನನ್ನು 'ಈತನಾರು ?' ಎಂದು ಕೇಳಿದೆನು. ಅದಕ್ಕೆ ಆತನು ಹೀಗೆ ಹೇಳಿದನು. ೭೯. "ಈತನು ಭೋಗೈಶ್ವರ್ಯಗಳೊಡೆಯನು. ಹೆಸರು ಪದ್ಮಪ್ರಭ, ಹೇಮದತ್ತನ ಮಗನು, ವ್ಯಾಪಾರಿ ಶುಭಚರಿತನು, ವಿಶೇಷವಾಗಿ ಪರೋಪಕಾರ ಮಾಡುವ ನಡತೆಯುಳ್ಳವನು" ವ॥ ಎಂದು ಹೇಳಲು ನಾನು ಆತನ ಬಳಿ ಹೋಗಿ ಮೃದುವಾಗಿ ಮಾತನಾಡಿದೆನು. ಆತನು ಸಂತೋಷಿಸಿ ಕೆಲವು ದಿನಗಳು ಅಲ್ಲಿ ತಂಗಿದ್ದು ಅಲ್ಲಿಂದ ಹೊರಟು ಹೋಗುವಾಗ ನನ್ನನ್ನು ಕರೆದು— ೮೦. "ನನ್ನ ನಿಜ ಮಿತ್ರನಾದ ನೀನು ನನ್ನ ಊರಿಗೆ ನನ್ನ ಜೊತೆಯಲ್ಲಿ ಬಂದು ಆ ಊರಿನ ಅಂದವನ್ನೂ ಐಶ್ವರ್ಯವನ್ನೂ ನೋಡಬೇಕು. ಮತ್ತು ಅವಂತಿರಾಜನ ಉನ್ನತವಾದ ಸಂಪತ್ತನ್ನೂ, ನಲವಿನಿಂದ ನೋಡಬೇಕು. ವ॥ ಎಂದು ಹೇಳಲು ಹಾಗೆಯೇ ಮಾಡುವೆನೆಂದೆನು. ಆತನಿಂದ ಕೆಲವು ಎತ್ತುಗಳನ್ನು ಈಸಿಕೊಂಡು ಅವುಗಳ ಮೇಲೆ ಅಸಂಖ್ಯಾತ ವಸ್ತುಗಳನ್ನು ಹೇರಿದೆನು. ಸರ್ವಜ್ಞರಿಂದ ಅಪ್ಪಣೆ ಪಡೆದುಕೊಂಡು ಪದ್ಮಪ್ರಭನೊಡನೆ ಬಂದು ಅವಂತೀಪುರ

ಚಂ|| ಅತನು ಪುರಾಧಿಪಂ ತಳವಱಂ ಶಶಿ ಪೆರ್ಗಡೆ ಮಂದಮಾರುತಂ
ರತಿ ನಗರಾಧಿದೇವತೆ ವಸಂತನಶೇಷಗುಣ ಪ್ರಬೋಧಕಂ
ಕೃತಕನಗಾಳಿ ಕೋಂಟೆ ಮಕರಂದರಸಂ ನದಿಯಾದ ತತ್ಪುರ
ಸ್ಥಿತಿಯ ವಿಲಾಸಮಂ ಬಗೆದು ಬಣ್ಣಿಸುವಂ ಶುಕರೂಪನಲ್ಲವೇ ೪೧

ಉ|| ಆ ರಮಣೀಯಪುಷ್ಪಪುರಮಧ್ಯದೊಳೊಪ್ಪುವ ದೇವತಾಗೃಹ
ದ್ವಾರಸಮುಚ್ಚಳದ್ವಿಮಳಗುಗ್ಗುಳಧೂಪದ ಧೂಮ ಮಂಡಲಾ
ಕಾರಮನಾಂತು ವಾರವನಿತಾಮಣಿಮಂಟಪ ಗೋಪುರಂಗಳೊಳ್
...ಮೊಱೆಗುಂ ಕಳಕಂಠಸಹಾಯಮೆಂಬಿನಂ ೪೨

ಮಲ್ಲಿಗೆವಳ್ಳಿ ಪರ್ಬಿದೆಳಮಾವೆಳಮಾವಿನ ಕೆಂದಳಿರ್ಗಳಂ
ಮೆಲ್ಲನೆ ಚಂಚುವಿಂ ಕರ್ದುಕಿ ಬಗ್ಗಿಪ ಕೋಕಿಲೆ ಕೋಕಿಲಸ್ವನ
ಕ್ಕಲ್ಲಿಯೆ ಮೂರ್ಛೆವೋಪ ವಿರಹಿಪ್ರಕರಂ ವಿರಹಿಪ್ರತಾನಮಂ
ಪುಲ್ಲಶರಂಗಳಿಂದಿಸುವ ಮನ್ಮಥನಿಂದೆಸೆಗುಂ ಬಹಿರ್ವನಂ ೪೩

ವನ್ನು ಕಂಡೆನು. ೪೧. ಪುರದೊಡೆಯನು ಮನ್ಮಥ ; ನಗರದ ಕಾವಲುಗಾರನು ಚಂದ್ರ, ನಗರ ಪ್ರಧಾನನು ಮಂದಮಾರುತ, ನಗರದ ಅಧಿದೇವತೆಯು ರತಿ, ಅಶೇಷ ಗುಣಗಳನ್ನೂ ಹೆಚ್ಚಿಸುವವನು ವಸಂತ, ಕೃತಕ ಪರ್ವತಗಳ ಸಾಲೇ ಕೋಟೆ, ಹೂಗಳ ಮಕರಂದ ರಸ ಪ್ರವಾಹವೇ ನದಿ, ಇಂಥ ಮಹಿಮೆಯುಳ್ಳ ಆ ನಗರದ ವಿಲಾಸವನ್ನು ತಿಳಿದು ವರ್ಣಿಸಬೇಕಾದರೆ ಅವನು ಶುಕಮಹರ್ಷಿಯ ಅವತಾರವೇ ಆಗಬೇಕು. ೪೨. ಆ ರಮಣೀಯವಾದ ಪುಷ್ಪಪುರದ ನಡುವೆ ಒಂದು ಮನೋಹರವಾದ ದೇವಾಲಯವಿದೆ. ಅದರ ಬಾಗಿಲಿನಿಂದ ಹೊರಕ್ಕೆ ನುಗ್ಗುವ ಶುದ್ಧವಾದ ಗುಗ್ಗುಳದ ಧೂಪದ ಹೊಗೆಯು ಮಂಡಲಾಕಾರದಿಂದ ವೇಶ್ಯೆಯರ ಮಣಿಮಂಟಪದ ಗೋಪುರಗಳಲ್ಲಿ ಕೋಗಿಲೆಗಳಿಗೆ ಸಹಾಯವಾಗುವಂತೆ ಮೆರೆಯುತ್ತದೆ. (ಮೋಡದ ಹಾಗೆ ನವಿಲುಗಳಿಗೆ ಸಹಾಯವಾಗುವಂತೆ ಮೆರೆಯುತ್ತದೆ.?) (ಕಳಕಂಠ—ಗೋಪುರಗಳಲ್ಲಿರುವ ಪಾರಿವಾಳಗಳು?) ೪೩. ನಗರದ ಹೊರಗಡೆಯ ಉದ್ಯಾನವು ತುಂಬ ಪ್ರಕಾಶಿಸುತ್ತದೆ. ಅಲ್ಲಿ ಎಳೆಮಾವಿನ ಮರಗಳಿಗೆ ಮಲ್ಲಿಗೆ ಬಳ್ಳಿಗಳು ಹಬ್ಬಿಕೊಂಡಿವೆ. ಆ ಮಾವಿನ ಮರದ ಕೆಂಪಾದ ಚಿಗುರನ್ನು ಮೆಲ್ಲಗೆ ಕೊಕ್ಕಿನಿಂದ ಕುಕ್ಕಿ ತಿಂದು ಕೋಗಿಲೆಗಳು ಮಧುರವಾಗಿ ಕೂಗುತ್ತವೆ. ಪ್ರಿಯರಿಂದ ಅಗಲಿದವರು ಕೋಗಿಲೆಯ ಧ್ವನಿಯನ್ನು ಕೇಳಿ ಮೂರ್ಛೆಹೋಗುತ್ತಾರೆ. ಆ ವಿರಹಿಗಳಿಗೆ ಮನ್ಮಥನು ಅರಳಿದ ಕುಸುಮಬಾಣಗಳನ್ನು ಹೊಡೆಯುತ್ತಾನೆ. ಹೀಗೆ

ವ॥ ಅಂತು ಪೊಗೞ್ತೆ ನೆಗೞ್ತೆವಡೆದವಂತೀಪುರಮಂ ಪೊಕ್ಕು ಪದ್ಮಪ್ರಭನಂ ಕಾಣಿಸಿ ಕೊಂಡಾತನಿಂ ಕೃತಪ್ರೀತನಾಗಿ ಪರಿತೋಷಮನೆಯ್ದಿ ತಾಯ್ತಂದೆಗಳಂ ಸಕಲ ವಸ್ತುವಂ ಕ್ಷೇಮ ದಲ್ಲಿರಿಸಿ ಪ್ರತಿದಿನಂ ಹೇಮದತ್ತನನನುವರ್ತಿಸಿಕೊಂಡಿರ್ಪಿನಮಾ ಹೇಮದತ್ತಂ

ಕಂ॥ ಸ್ವರಗತಿಚೇಷ್ಟೆಗಳತ್ಯಾ
ದರದೀಪ್ತಸ್ಥಾನಶಾಂತಿದಿಙ್ಮಂತ್ರಮನೋ
ಹರಕಾಲಮೆಂಬ ಶಕುನದ
ಪರಿವಿಡಿಯುಂ ಹೇಮದತ್ತನೋದುತ್ತಿರ್ದಂ ೮೪

ವ॥ ಅಂತಾ ಹೇಮದತ್ತಂ ಶಕುನಶಾಸ್ತ್ರಮನೋದುವುದಂ ಕೇಳ್ದೀತನಿಂದೆಮ್ಮಗ್ರಜನ ವಾರ್ತೆಯನಱಿಯಲ್ಬರ್ಪುದೆಂದಾತನನಿಂತೆಂದಂ

ಕಂ॥ ಎಮ್ಮರಸನೆಂದು ಬಂದಪ
ನೆಮ್ಮ ಮನೋರಥವದೆಂದು ನೆರೆದಪುದೆಂದೀ
ನಿಮ್ಮ ನಿಮಿತ್ತದಿನಱಿದೆನ
ಗುಮ್ಮಹಮಂ ಹೇಮದತ್ತಂ ಮಾಟ್ಪುದು ನಲವಿಂ ೮೫

ವ॥ ಎಂದೊಡಾತನಂತೆಗೆಯ್ವೆನೆಂದೊಂದು ದಿನಮೆನ್ನನೊಡಗೊಂಡೊಂದು ವನಕ್ಕೆ ಪೋಗಿ ಪಕ್ಷಿಯ ನಿಮಿತ್ತಮಂ ಹೇಮದತ್ತಂ ನೋಳ್ಪಾಗಳಾನಾ ವನ ವಿಸ್ತಾರಮಂ ನೋಟ್ಪೆ ನೆಂದು ತೊಟಲ್ವಾಗಳ್

ಉದ್ಯಾನ ಸೊಗಸಾಗಿದೆ. ವ॥ ಹಾಗೆ ಹೊಗಳಿಕೆಗೂ ಪ್ರಸಿದ್ಧಿಗೂ ಪಾತ್ರವಾದ ಅವಂತೀನಗರವನ್ನು ಹೊಕ್ಕು ಪದ್ಮಪ್ರಭನನ್ನು ಕಂಡೆನು. ಆತನಿಂದ ಸತ್ಕೃತನಾಗಿ ಸಂತೋಷವನ್ನು ಪಡೆದೆನು. ತಾಯಿ ತಂದೆಗಳನ್ನೂ ಸಕಲವಸ್ತುಗಳನ್ನೂ ಕ್ಷೇಮವಾಗಿ ರಕ್ಷಿಸಿದೆನು. ಪ್ರತಿದಿನವೂ ಹೇಮದತ್ತನನ್ನು ಅನುವರ್ತಿಸಿಕೊಂಡಿದ್ದೆನು. ಆ ಹೇಮ ದತ್ತನು—೮೪. ಸ್ವರ, ಗತಿ, ಚೇಷ್ಟೆಗಳು, ಅತ್ಯಾದರ, ದೀಪ್ತ ಸ್ಥಾನ, ಶಾಂತಿ, ದಿಙ್ಮಂತ್ರ, ಮನೋಹರ ಕಾಲ ಮೊದಲಾದ ಶಕುನದ ಕ್ರಮಗಳನ್ನು ಓದುತ್ತಿದ್ದನು. ವ॥ ಹಾಗೆ ಹೇಮದತ್ತನು ಶಕುನಶಾಸ್ತ್ರವನ್ನೋದುವುದನ್ನು ಕೇಳಿ ಅವನಿಂದ ನಮ್ಮಣ್ಣನ ಸಮಾ ಚಾರವನ್ನರಿಯಬಹುದೆಂದು ಆತನಿಗೆ ಹೀಗೆ ಹೇಳಿದೆನು. ೮೫. "ಹೇಮದತ್ತನೆ! ನಮ್ಮರಸನು ಎಂದು ಬರುತ್ತಾನೆ ? ನಮ್ಮ ಮನೋರಥವು ಎಂದು ಫಲಿಸುವುದು ? ಎಂಬುದನ್ನು ನಿಮ್ಮ ಈ ಶಕುನಶಾಸ್ತ್ರದಿಂದ ತಿಳಿದು ಹೇಳಿ ನನಗೆ ಸಂತೋಷವನ್ನುಂಟು ಮಾಡು." ವ॥ ಅದನ್ನು ಕೇಳಿ ಆತನು 'ಹಾಗೆಯೇ ಮಾಡುವೆನು' ಎಂದು ಹೇಳಿ ಒಂದು ದಿನ ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಕಾಡಿಗೆಹೋದನು. ಅಲ್ಲಿ ಹೇಮ ದತ್ತನು ಹಕ್ಕಿಯ ಶಕುನವನ್ನು ನೋಡುತ್ತಿರುವಾಗ ನಾನು ಆ ವನದ ವಿಸ್ತಾರವನ್ನು

ಚಂ॥ ಮನಸಿಜಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ ಮನೋ
ಜನ ಕೃತಕಾದ್ರಿಯೋ ಕುಸುಮಬಾಣನ ಸಜ್ಜೆಯೊ ಕಂತುರಾಜನಿಂ
ಬಿನ ರತಿಶಾಲೆಯೋ ಮದನನೊಡ್ಡಿದ ಕಾಮುಕಕಂಠಪಾಶಮೋ
ನನೆಕೊನೆವೋದ ಮಾಮರನೋ ಪೇೞ್ನೆ ರಂಜಿಸಿದತ್ತು ಮಾಮರಂ ೮೬

ವ॥ ಮತ್ತಮದು ರಾಜಭವನದಂತು ಜಾಳಕವಿಳಾಸಮುಂ ಗ್ರಹಚಾರದಂತುಪರಾಗ ಸಂಪೂರ್ಣಮುಂ ಮುನಿಸಭಾಮಂಡಳದಂತು ಶುಕಪರಿಪ್ರೀತಿಯುಂ ವಿಳಾಸಿನೀ ಜನದಂತು ದ್ವಿಜಚ್ಛದಮನೋಹರಮುಂ ಕಲ್ಯಪಾನ ಗೃಹದಂತು ಮಧುಪ ಪರೀತಮುಂ ವಿಕಸಿತ ಕಮಳದಂತು ವನಮಧ್ಯಸ್ಥಿತಮುಮೆನಿಸಿರ್ಪುದು ಅಂತುಮಲ್ಲದೆಯುಂ

ಕಂ॥ ಆ ಸಹಕಾರದ ಕೆಲದೊಳ್
ವಾಸವನಂತನಿಮಿಷಾವೃತಂ ಗಗನದವೋಲ್
ದೇಸೆ ಮಿಗುವಬ್ಜಹಂಸಾ
ವಾಸಂ ಮೆಱೆದಿರ್ಪ ಪೂಗೊಳಂ ರಂಜಿಸುಗುಂ ೮೭

ನೋಡುವೆನೆಂದು ತಿರುಗುತ್ತಿರುವಾಗ—೮೬. ಮನ್ಮಥನ ಮದ್ದಾನೆಯೋ, ಕಾಮನ ಬಿಲ್ಲಿನ ಮನೆಯೋ ಮದನನು ನಿರ್ಮಿಸಿದ ಕೃತಕವಾದಬೆಟ್ಟವೋ, ಕುಸುಮ ಬಾಣನ ಹಾಸಿಗೆಯೊ, ಮನ್ಮಥನ ಕ್ರೀಡಾಶಾಲೆಯೋ, ಮದನನು ಒಡ್ಡಿದ ಕಾಮುಕರನ್ನು ನೇಣು ಹಾಕುವ ಹಗ್ಗವೋ, ಮೊಗ್ಗುಗಳಿಂದ ತುಂಬಿ ಚಿಗುರಿದ ಮಾವಿನ ಮರವೋ ಹೇಳು ಎನ್ನುವಂತೆ ಮಾಮರವು ರಂಜಿಸಿತು. ವ॥ ಮತ್ತೆ ಅದು ಅರಮನೆಯಂತೆ ಜಾಲರಿಯ ವಿಲಾಸದಿಂದ ಕೂಡಿದೆ. ಗ್ರಹಗಳ ಸಂಚಾರದಂತೆ ಉಪರಾಗದಿಂದ ಕೂಡಿದೆ ಮುನಿಗಳ ಮಂಡಲಾಕಾರವಾದ ಸಭೆಯಂತೆ ಶುಕ ಪರಿಪ್ರೀತಿಯಿಂದ ಕೂಡಿದೆ ವಿಲಾಸಿನಿಯರಂತೆ ದ್ವಿಜಚ್ಛೇದದಿಂದ ಮನೋಹರವಾಗಿದೆ. ಹೆಂಡದಂಗಡಿಯ ಹಾಗೆ ಮಧುಪದಿಂದ ತುಂಬಿದೆ ಅರಳಿದ ಕಮಲದ ಹಾಗೆ ವನಮಧ್ಯದಲ್ಲಿದೆ. ಅಷ್ಟೇ ಅಲ್ಲದೆ—೮೭. ಆ ಮಾವಿನ ಮರದ ಪಕ್ಕದಲ್ಲಿ ಒಂದು ಹೂಗೊಳವು ರಂಜಿಸುತ್ತದೆ. ಅದು ಇಂದ್ರನ ಹಾಗೆ ಅನಿಮಿಷಗಳಿಂದ ಆವೃತವಾಗಿದೆ, ಆಕಾಶದಂತೆ ಸುಂದರವಾದ ಅಬ್ಜಹಂಸಗಳ ವಾಸಸ್ಥಾನ

---

ಟಿಪ್ಪಣಿ : ಜಾಲಕ = ಹೂವಿನಗೊಂಚಲು ; ಕಿಟಕಿ. ಉಪರಾಗ = ಕೆಂಪುಬಣ್ಣ ; ಗ್ರಹಣ. ಶುಕ = ಗಿಳಿ ; ಶುಕಮುನಿ. ದ್ವಿಜಚ್ಛೇದ = ತುಟಿ ; ಹಕ್ಕಿಗಳ ರೆಕ್ಕೆ; ವನ = ಅರಣ್ಯ, ನೀರು. ಮಧುಪ = ದುಂಬಿ ; ಮದ್ಯಪಾಯಿ.

ಅನಿಮಿಷ = ಮೀನು ; ದೇವತೆ. ಹಂಸ = ಹಂಸ; ಸೂರ್ಯ ಅಬ್ಜ = ಕಮಲ; ಚಂದ್ರ.

ವ॥ ಅಂತು ನೈರ್ಮಲ್ಯವಿಲಾಸಮಾದ ಪೂಗೊಳನ ತಡಿಯೊಳ್

ಕಂ॥ ವನಲಕ್ಷ್ಮಿ ತನ್ನ ಘನಲೋ
ಚನದೊಪ್ಪಮನಂಬುಜಕ್ಕೆ ಮೀಂಗಳ್ಗೀಯು
ಲ್ಕನುನಯದಿಂ ಬಂದಿರ್ಪ
ಳೆನೆ ಪೂಗೊಳನಲ್ಲಿ ಕಾಂತೆ ಸಂತಸಮಿರ್ದಳ್ ೮೮

ಚಂ॥ ವದನಸರೋಜಿನೀ ಪರಿಮಳಕ್ಕೆಱಗಿರ್ದಳಿಯೆಂಬ ಚೆಲ್ವನೊ
ಲ್ದೊದವಿಪ ಕುಂತಳಂ ಚಿಕುರ ಬಂಧುರಬಂಧ ಮಹಾಂಧಕಾರಮಂ
ಬೆದಱಿಸುತಿರ್ಪಪಾಂಗಮರುಣಾಧರಧಾತು ರಸಾನುಲೇಪನಂ
ಪುದಿದೆ ಕಪೋಲಭಿತ್ತಿ ಮೆಱೆಗುಂ ಪದೆಪಿಂ ಮೃಗಶಾಬನೇತ್ರೆಯಾ ೮೯

ವ॥ ಅಂತಿರ್ದ ಕಾಂತೆಯುಂ ಮೆಲ್ಲನೆ ಸಾರ್ದು

ಕಂ॥ ಅನುರಾಗಂ ಮುಖಪದ್ಮದೊ
ಳನುತಾಪಂ ಚಿತ್ತದೊಳ್ ವಿಳಾಸಾದಿಗುಣಂ
ತನುವಿನೊಳತಿಚಿಂತಾ ಸ್ಥಿತಿ
ಮನದೊಳ್ ಪೆರ್ಚಿರ್ದ ಸತಿಯನೊಸೆದೀಕ್ಷಿಸಿದೆಂ ೯೦

ವ॥ ಅಂತಾಕಾಂತೆಯುಂ ಕಂಡು ನೀನಿಲ್ಲಿಯೊರ್ವಳೆ ಇರ್ಪುದರ್ಕೆ ಕಾರಣಮೇನೆಂದಾಂ ಕೇಳಲೊಡಂ

ವ॥ ಹಾಗೆ ನೈರ್ಮಲ್ಯಕ್ಕೆ ವಿಲಾಸಸ್ಥಾನವಾದ ಹೂಗೊಳದ ದಡದಲ್ಲಿ—೮೮. ಆ ಹೂಗೊಳದಲ್ಲಿ ಕಾಂತೆಯೊಬ್ಬಳು ಸಂತಸದಿಂದ ಇದ್ದಳು, ಅವಳು ತನ್ನ ಘನವಾದ ಕಣ್ಣಿನ ಅಂದವನ್ನು ಕಮಲಕ್ಕೂ ಮೀನುಗಳಿಗೂ ಕೊಡಲು ಪ್ರೀತಿಯಿಂದ ಬಂದಿದ್ದ ವನಲಕ್ಷ್ಮಿಯೋ ಎಂಬಂತೆ ಕಾಣಿಸಿದಳು. ೮೯. ಆ ಹರಿಣಾಕ್ಷಿಯ ಮುಂಗುರುಳುಗಳು ಮುಖ ಕಮಲದ ಪರಿಮಳಕ್ಕೆರಗುವ ದುಂಬಿಗಳ ಅಂದವನ್ನೊದಗಿಸಿತು. ಅವಳ ಅಪಾಂಗವು ಸುಂದರವಾದ ಕೂದಲ ಗಂಟೆಂಬ ಮಹಾಂಧಕಾರವನ್ನು ಬೆದರಿಸುತ್ತಿತ್ತು. ಅವಳ ವಿಶಾಲವಾದ ಕೆನ್ನೆಗಳು ಕೆಂದುಟಿಯ ಧಾತುರಸ ಬಳಿದಂತೆ ಕೆಂಪಾಗಿ ರಂಜಿಸುತ್ತಿತ್ತು. ವ॥ ಹಾಗಿದ್ದ ಕಾಂತೆಯ ಹತ್ತಿರಕ್ಕೆ ಹೋಗಿ—೯೦. ಮುಖ ಕಮಲದಲ್ಲಿ ಅನುರಾಗ, ಚಿತ್ತದಲ್ಲಿ ಅನುತಾಪ, ವಿಲಾಸವೇ ಮೊದಲಾದ ಗುಣಗಳು ಶರೀರದಲ್ಲಿ, ಮನಸ್ಸಿನಲ್ಲಿ ಅತಿಚಿಂತೆ, ಇವು ಹೆಚ್ಚಿದ ಆ ಸತಿಯನ್ನು ಗಮನಿಸಿ ನೋಡಿದೆನು. ವ॥ ಆ ಕಾಂತೆಯನ್ನು ನೋಡಿ 'ನೀನು ಇಲ್ಲಿ ಒಬ್ಬಳೇ ಇರುವುದಕ್ಕೆ ಕಾರಣವೇನು ? ಎಂದು

ಕಂ॥ ನಯನತ್ರಿಭಾಗದಿಂದೆ
ನ್ನಯ ಮೊಗಮಂ ನೋಡಿ ಮಗುಳ್ದು ಮಱವಟ್ಟಂತಾ
ಶ್ರಯಮಿಲ್ಲದ ಲತೆ ತೆಂಗಾ
ಳಿಯೊಳಲ್ಲಾಡುವವೊಲಾಕೆ ಕಣ್ಗೆಸೆದಿರ್ದಳ್ ೯೧

ವ॥ ಅಂತೆನ್ನಂ ನೋಡಿ ಲಜ್ಜೆಯೊಳ್ ಮುಳುಂಗಿ ಬಿಸುಸುಯ್ದಿಂತೆಂದಳ್

ಕೇಳೆಲೆ ಪರೇಂಗಿತಜ್ಞಾ
ನಾಲಯ ಬಲ್ಪಿಂದವಂತೀದೇವಂ ಗುಣಸ
ಲ್ಲೀಲಂ ತನ್ನಯ ಮಗನಾ
ಜ್ಞಾಲಂಬದಿನಿರ್ಪನಲ್ತೆ ಕಾಪಿನ ಮನೆಯೊಳ್ ೯೨

ವ॥ ಅಂತವಂತೀಶ್ವರನ ಮಗನಪ್ಪ ದರ್ಪಸಾರಂ ತಮ್ಮ ತಂದೆಯಪ್ಪವಂತೀಶ್ವರನಂ ಸೆಱೆಯೊಳಿಟ್ಟು ತನ್ನ ಪ್ರಧಾನಿಯಪ್ಪ ಚಂಡವರ್ಮನ ಮೇಲೆ ರಾಜ್ಯಭಾರಮಂ ನಿಲಿಸಿ ತಾನ ಖಿಳಭೂಮಿಯುಂ ಪಡೆವೆನೆಂದು ತಪಂಗೆಯ್ಯಲ್ ಪೋದಂ ಈಗಳ್

ಕಂ॥ ಜನವಱಯೆ ಚಂಡವರ್ಮಂ
ಗನುಜನೆನಲ್ ಮೆಱೆವ ದಾರವರ್ಮಂ ಪದೆಪಿಂ
ತನಗೆ ವಧುವಾಗಬೇಕೆಂ
ದನುನಯದಿಂ ಕಾಡುತಿರ್ಪನಾನೊಲ್ಲದೊಡಂ ೯೩

ಯುವತಿಯರುಂ ಕವಿತೆಯುಮು
ತ್ಸವದಿಂ ಸ್ವೇಚ್ಛೆಗಳಿನೆಯ್ದಲತಿಸುಖಮಕ್ಕುಂ
ತವಕದ ಬಲ್ಪಿಂದೆಱಯಲ್
ಭುವನದೊಳತಿ ವಿರಸಮಾಗದಿರ್ಪುದೆ ಕೆಳೆಯಾ ೯೪

ನಾನು ಕೇಳಿದೆನು. ಕೂಡಲೆ—೯೧. ಕಡೆಗಣ್ಣಿನಿಂದ ನನ್ನ ಮುಖವನ್ನು ನೋಡಿ ಮತ್ತೆ ಸುಮ್ಮನಾದಳು. ಆಗ ಅವಳು ಆಶ್ರಯವಿಲ್ಲದ ಬಳ್ಳಿಯು ತೆಂಗಾಳಿಯಲ್ಲಿ ಅಲ್ಲಾಡು ವಂತೆ ಕಾಣಿಸಿದಳು. ವ॥ ನನ್ನನ್ನು ನೋಡಿ ನಾಚಿಕೆಯಲ್ಲಿ ಮುಳುಗಿ ಬಿಸುಸುಯ್ದು ಹೀಗೆ ಹೇಳಿದಳು. ೯೨. "ಎಲೆ ಪರರ ಇಂಗಿತವನ್ನು ಅರಿಯಬಲ್ಲವನೆ! ಕೇಳು. ಪರಾಕ್ರಮಿಯೂ ಗುಣಶಾಲಿಯೂ ಆದ ಅವಂತಿರಾಜನು ತನ್ನ ಮಗನ ಆಜ್ಞೆಯಿಂದ ಕಾವಲುಳ್ಳ ಮನೆಯಲ್ಲಿ ಬಂಧಿತನಾಗಿದ್ದಾನೆ. ವ॥ ಅವಂತಿರಾಜನು ತನ್ನ ಮಗನಾದ ದರ್ಪಸಾರನು ತನ್ನ ತಂದೆಯಾದ ಅವಂತಿ ರಾಜನನ್ನು ಸೆರೆಯಲ್ಲಿರಿಸಿ ತನ್ನ ಮಂತ್ರಿಯಾದ ಚಂಡವರ್ಮನ ಮೇಲೆ ರಾಜ್ಯಭಾರವನ್ನು ನಿಲ್ಲಿಸಿ ತಾನು ಭೂಮಿಯನ್ನೆಲ್ಲವನ್ನೂ ಪಡೆಯುವೆನೆಂದು ತಪಸ್ಸುಮಾಡಲು ಹೋದನು. ಈಗ—೯೩. ಜನರಿಗೆಲ್ಲ ಗೊತ್ತು. ಚಂಡವರ್ಮನ ತಮ್ಮನೆಂದು ಮೆರೆಯುವ ದಾರುವರ್ಮನು ನನಗೆ ಇಷ್ಟವಿಲ್ಲದಿದ್ದರೂ ನಾನು ಅವನನ್ನು ವರಿಸಬೇಕೆಂದು ಕಾಡುತ್ತಿದ್ದಾನೆ. ೯೪. ಮಿತ್ರನೆ! ಯುವತಿಯರೂ ಕವಿತೆಯೂ ತಾವಾಗಿ ಸಂತೋಷದಿಂದ ತಮ್ಮ ಇಚ್ಛೆಯಿಂದ ಬಂದರೆ ಅತಿಸುಖವುಂಟಾಗು

ಕಂ॥ ನಲವಿಂ ಬೆರಸದೆ ಭೀತಿಯ
ಬಲದಿಂ ಬೆರಸಲ್ಕೆ ಕಾಂತೆಯರ್ಗನುರಾಗಂ
ಪೞಿದಾಗೆ ಪುರುಷರೌಷಧಿ
ಗುಳಿಗೆಯವೊಲ್ ಮನಕ್ಕೆ ಹೇಯಮಂ ಪುಟ್ಟಿಪಗುಂ ೯೫

ವ॥ ಎಂದು ಮತ್ತಮಿಂತೆಂದಳ್

ಕಂ॥ ಒಂದೆಡೆಗೆಱಗಿದ ಚಿತ್ತಮ
ನೊಂದೆಡೆಗೆೞೆದುಯ್ವೆನೆಂದು ಬಯಸುವ ಮನುಜಂ
ಬಂದ ತೊಱೆಯುದಕಮಂ ಬ
ಲ್ಪಿಂದಂ ಶೈಲಾಗ್ರಮಕ್ಕೆ ತಿರ್ದದೆ ಮಾಣಂ ೯೬

ವ॥ ಅದಂ ಕೇಳ್ದಾಂ ನಿನ್ನ ಚಿತ್ತಮೆಲ್ಲಿರ್ದಪುದು ನೀನಾರ್ ಪೆಸರೇನೆಂದು ಕೇಳ್ವುದುಮಾಕೆ ಲಜ್ಜೆಯಿಂ ತಲೆಗುತ್ತಿಂತೆಂದಳ್

ಕಂ॥ ವಿನಯನಿಧಿ ಹೇಮಗುಪ್ತನ
ತನೂಜೆಯಾಂ ಬಾಲಚಂದ್ರಿಕಾಖ್ಯೆಯೆನುತ್ತಾ
ನನಮಂ ಬಾಗಿ ಮಗುಳ್ದೊ
ಯ್ಯನೆ ಮನ್ಮುಖಮಂ ನಿರೀಕ್ಷಿಸುತ್ತಿಂತೆಂದಳ್ ೯೭

ಎಲೆ ಸೊಬಗ ನಿನ್ನನೆಮ್ಮಯ
ನಿಲಯದೊಳಂದೊರ್ಮೆ ಕಂಡೆನಂದು ಮೊದಲ್ಗೊಂ
ಡಲರಂಬನೆನ್ನನುಱೆ ಕೋ
ಟಲೆಗೊಳಿಸುತ್ತಿರ್ಪನೆಂದು ಲಜ್ಜಿತೆಯಾದಳ್ ೯೮

ತ್ತದೆ. ಆತುರದಿಂದ ಬಲವಂತವಾಗಿ ಎಳೆದರೆ ಭುವನದಲ್ಲಿ ಅತಿವಿರಸವಾಗದೇ ಇರುತ್ತದೆಯೇ ? ೯೫. ನಲವಿನಿಂದ ಬೆರೆಯದೆ ಭಯದಬಲದಿಂದ ಕಾಂತೆಯರನ್ನು ಕೂಡಿದರೆ ಪುರುಷರ ಅನುರಾಗವು ಹಳೆಯದಾದ ಔಷಧಿಯ ಗುಳಿಗೆಯಂತೆ ಅವರ ಮನಸ್ಸಿನಲ್ಲಿ ಜುಗುಪ್ಸೆಯನ್ನುಂಟುಮಾಡುವುದು." ವ॥ ಹೀಗೆ ಹೇಳಿ ಮತ್ತೆ ಹೀಗೆಂದಳು.—೯೬. "ಒಂದೆಡೆಯಲ್ಲಿ ಪ್ರೀತಿಯುಳ್ಳ ಚಿತ್ತವನ್ನು ಮತ್ತೊಂದೆಡೆಗೆ ತಿರುಗಿಸುವೆನೆಂಬ ಮನುಷ್ಯನು ಹರಿದು ಬಂದ ತೊರೆಯ ನೀರನ್ನು ಪರಾಕ್ರಮದಿಂದ ಬೆಟ್ಟದ ತುದಿಗೆ ತಿರುಗಿಸ ಬಯಸುತ್ತಾನೆ." ವ॥ ಅದನ್ನು ಕೇಳಿ ನಾನು 'ನಿನ್ನ ಮನಸ್ಸು ಎಲ್ಲಿದೆ ? ನೀನು ಯಾರು ? ನಿನ್ನ ಹೆಸರೇನು ?' ಎಂದು ಕೇಳಿದೆನು. ಅದಕ್ಕವಳು ನಾಚಿಕೆಯಿಂದ ತಲೆ ತಗ್ಗಿಸಿ—೯೭. 'ನಾನು ವಿನಯ ನಿಧಿಯಾದ ಹೇಮಗುಪ್ತನ ಮಗಳು. ನನ್ನ ಹೆಸರು ಬಾಲಚಂದ್ರಿಕೆ.' ಎಂದು ಹೇಳಿ ಮುಖವನ್ನು ತಗ್ಗಿಸಿಕೊಂಡು ನನ್ನ ಮುಖವನ್ನು ನೋಡುತ್ತಾ ಹೀಗೆ ಹೇಳಿದಳು. ೯೮. "ಸುಂದರನೆ ! ನಿನ್ನನ್ನು ಒಂದು ಸಲ ನಮ್ಮ ಮನೆಯಲ್ಲಿ ನೋಡಿದೆನು. ಅಂದಿನಿಂದ ಕಾಮನು ನನ್ನನ್ನು ತುಂಬ ಕಾಡುತ್ತಿದ್ದಾನೆ. ಹೀಗ

ವ॥ ಅಂತು ಲಜ್ಜಿತೆಯಾದುದಂ ಕಂಡು ಮತ್ತಮಾನಿಂತೆಂದೆಂ

ಕಂ॥ ಸತಿಯರ ಚಿತ್ತಮನಱಿಯಲ್
ಪಿತಾಮಹಂಗರಿದು ಮನುಜರಳವಲ್ತೆಂಬು
ನ್ನತಿಯುಳ್ಳೊಡೇನೊ ನಾಂ ನಿ
ನ್ನ ತೀವ್ರಚಿಂತೆಯನಗಲ್ಚುವೆಂ ಕಮಳಾಕ್ಷೀ ೯೯

ವ॥ ಎಂದೆಂತಾದೊಡಂ ನಿನ್ನ ಚಿತ್ತಕ್ಲೇಶಮಂ ಪರಿಹರಿಸುವಂತು ದಾರುವರ್ಮನಂ ಕಾಲನಿಳಯಮನೆಯ್ದುವಂತೊಂದುಪಾಯಮಂ ಪೇೞ್ವೆನದೆಂತೆನೆ

ಕಂ॥ ಇಂದು ಮೊದಲಾಗಿ ನಿನ್ನೊಡ
ವಂದಿರ್ಪಂ ಬೊಮ್ಮರಕ್ಕಸಂ ಮತ್ತಾರಂ
ಕಂದೆಱೆದು ನೋಡಲೀಸಂ
ಸಂದೆಗಮಿಲ್ಲೆಂದು ಪೇೞ್ವುದೆಲ್ಲರೊಳಬಲೇ ೧೦೦

ವ॥ ಅದಲ್ಲದೆಯುಂ

ಕಂ॥ ಇಂದುಮುಖಿ ನಿನ್ನ ಸಂಗದೊ
ಳೊಂದಿರುಳಿರ್ದುೞಿದನಾದೊಡಾತಂ ನಿನಗೊ
ಲ್ದೆಂದಿಂಗಂ ನಿಜವಲ್ಲಭ
ನೆಂದುಸಿರ್ದನೆನುತ್ತೆ ಪೇೞ್ವುದೆಲ್ಲರೊಳಬಲೇ ೧೦೧

ವ॥ ಇದಂ ಕೇಳ್ದು ದಾರುವರ್ಮನಂಜಿದೊಡಂಜಲಿ ಅಂಜದಿರ್ದೊಡೆ ಬೞಿಕಂ

ಹೇಳಿ ನಾಚಿಕೊಂಡಳು.” ವ॥ ಹಾಗೆ ಅವಳು ನಾಚಿಕೊಂಡುದನ್ನು ಕಂಡು ಮತ್ತೆ ನಾನು ಹೀಗೆ ಹೇಳಿದೆನು. ೯೯. “ಸತಿಯರ ಮನಸ್ಸನ್ನು ತಿಳಿದುಕೊಳ್ಳುವುದಕ್ಕೆ ಬ್ರಹ್ಮನಿಗೂ ಸಾಧ್ಯವಿಲ್ಲ. ಮನುಜರಿಗಂತೂ ಶಕ್ತಿಗೆ ಮೀರಿದ ವಿಷಯ ಎಂಬ ಪ್ರಸಿದ್ಧವಾದ ನುಡಿಯಿದೆ. ಏನಾದರಾಗಲಿ ನಾನು ನಿನ್ನ ತೀವ್ರವಾದ ಚಿಂತೆಯನ್ನು “ಕಮಲಾಕ್ಷಿ!” ಪರಿಹರಿಸುವೆನು. ವ॥ ಹೇಗಾದರೂ ಮಾಡಿ ನಿನ್ನ ಚಿತ್ತಕ್ಲೇಶವನ್ನು ಪರಿಹರಿಸಲು ದಾರುವರ್ಮನನ್ನು ಯಮನಗರಿಗೆ ಕಳುಹಿಸುವ ಒಂದು ಉಪಾಯವನ್ನು ಹೇಳುವೆನು. ಅದು ಹೇಗೆಂದರೆ. ೧೦೦. ಅಬಲೆಯೆ! ‘ಇಂದಿನಿಂದ ಬ್ರಹ್ಮರಾಕ್ಷಸನೊಬ್ಬನು ನನ್ನೊಡನೆ ಬಂದು ವಾಸಮಾಡುವನು. ಅವನು ಮತ್ತೆ ಯಾರನ್ನೂ ಕಣ್ತೆರೆದು ನಿನ್ನನ್ನು ನೋಡಲು ಬಿಡುವುದಿಲ್ಲ ಇದರಲ್ಲಿ ಸಂದೇಹವಿಲ್ಲ’ ಎಂದು ಎಲ್ಲರಿಗೂ ನೀನು ಹೇಳು. ವ॥ ಅಷ್ಟೇ ಅಲ್ಲದೆ—೧೦೧. ‘ಇಂದು ಮುಖಿ! ‘ಆತನು ಬಂದು ರಾತ್ರಿ ನಿನ್ನ ಸಂಗದಲ್ಲಿದ್ದು ಬದುಕಿದುದೇ ಆದರೆ ಆತನೇ ನಿನಗೆ ಎಂದಿಗೂ ನಿಜವಲ್ಲಭವಾಗುವನು ಎಂದು ಹೇಳಿದನು.’ ಎಂದು ಎಲ್ಲರಿಗೂ ಹೇಳು. ವ॥ ಇದನ್ನು ಕೇಳಿ ದಾರುವರ್ಮನು ಹೆದರಿ

ಕಂ॥ ಕರಿಕಳಭನನುದ್ಧತಕೇ
ಸರಿ ಸೀಟ್ದು ಸಿಱುಂಬುಳಾಡುವಂತಿರೆ ಖಳನಂ
ಕರಚರಣಘಾತದಿಂ ಸಂ
ಹರಿಸಿ ಯಮಾಲಯುವನೆಯ್ದಿಪೆಂ ಕಮಳಾಕ್ಷೀ ೧೦೨

ವ॥ ಎಂದಾಕೆಗೆ ಪೇೞ್ದು ಕಳಿಪಿಯಾಂ ಹೇಮದತ್ತನ ಸಮೀಪಕ್ಕೆ ಪೋಗಿ ಶಕುನ ವೃತ್ತಾಂತಮಂ ಕೇಳ್ದೊಡಾತನೀತೆಂದಂ

ಕಂ॥ ಭೋರೆನೆ ಮುಟ್ಟುನ್ನತಗತಿ
ಚಾರವನೆನ್ನಿದಿರೊಳೆಸಗಿದತ್ತದಱಿಂ ನೀ
ನೀರೈದು ದಿವಸದೊಳ್ ವಿ
ಸ್ತಾರಮೆನಲ್ ಕಾಣ್ಬೆಯಲ್ತೆ ನಿಮ್ಮಗ್ರಜನಂ ೧೦೩

ವ॥ ಎಂದು ಪೇೞ್ದೊಡಾಮಾತಿಂಗನುರಾಗಂ ಮನದೊಳುರ್ಕಿಯಾ ಹೇಮದತ್ತನು ಮಾನುಂ ನಿಜನಿವಾಸಕ್ಕೆ ಬರ್ಪುದುಂ

ಕಂ॥ ಮನೆಯೊಳ್ ಮಂತಣದೊಳ್ ಪುರ
ವನಿತರೊಳುರ್ವೀಶಭವನದೊಳ್ ಸಚಿವನಿಕೇ
ತನದೊಳ್ ಬೇಗಂ ಪರೆದುದು
ವನಜಾನನೆ ಬಾಲಚಂದ್ರಿಕೆಯ ವೃತ್ತಾಂತಂ ೧೦೪

ವ॥ ಅಂತಾಸುದ್ದಿ ಪರೆದೊಡಂ ದಾರುವರ್ಮನದಂ ವಿಚಾರಿಸದೆ ಬಾಲಚಂದ್ರಿಕೆಯ ಧ್ಯಾನದೊಳಿರ್ಪನದೆಂತೆನೆ

ದರೆ ಹೆದರಲಿ. ಹೆದರದೇ ಇದ್ದರೆ ಬಳಿಕ. ೧೦೨. ಕೋಪಗೊಂಡ ಸಿಂಹವು ಆನೆಯ ಮರಿಯನ್ನು ಸೀಳಿ ಸುತ್ತಲೂ ಎರಚುವಂತೆ ಖಳನನ್ನು ಕೈಕಾಲು ಮುರಿದು ಕೊಂದು 'ಕಮಳಾಕ್ಷಿ !' ಯಮನಗರಿಗೆ ಕಳುಹಿಸುವೆನು. ವ॥ ಎಂದು ಅವಳಿಗೆ ಹೇಳಿ ಕಳುಹಿಸಿ ಹೇಮದತ್ತನ ಹತ್ತಿರಕ್ಕೆ ಹೋಗಿ ಶಕುನದ ಸಮಾಚಾರವನ್ನು ಕೇಳಿದೆನು. ಅದಕ್ಕವನು ಹೀಗೆ ಹೇಳಿದನು. ೧೦೩. "ಗ್ರಹಗಳು ಭೋರೆಂದು ಮುಟ್ಟಿ ನನ್ನಿದಿರಿನಲ್ಲಿ ಉನ್ನತ ಗತಿಯಿಂದ ಚಲಿಸಿದುವು. ಅದರಿಂದ ನೀನು ಇನ್ನು ಹತ್ತುದಿನಗಳಲ್ಲಿ ನಿನ್ನಣ್ಣನನ್ನು ನೋಡುವೆ." ವ॥ ಎಂದು ಹೇಳಿದ ಮಾತನ್ನು ಕೇಳಿ ಮನಸ್ಸಿನಲ್ಲಿ ಅನುರಾಗವು ಉಕ್ಕಿತು. ಆ ಹೇಮದತ್ತನೂ ನಾನೂ ನಮ್ಮ ಮನೆಗೆ ಬಂದೆವು. ೧೦೪. ಮನೆಯಲ್ಲಿ, ಚರ್ಚಿಸುವೆಡೆಯಲ್ಲಿ, ಪುರದಲ್ಲೆಲ್ಲ, ಅರಮನೆಯಲ್ಲಿ, ಮಂತ್ರಿಯ ಮನೆಯಲ್ಲಿ, ಎಲ್ಲೆಲ್ಲೂ ಕಮಲಮುಖಿಯಾದ ಬಾಲಚಂದ್ರಿಕೆಯ ವೃತ್ತಾಂತವು ಬೇಗ ಹರಡಿತು. ವ॥ ಹಾಗೆ ಸುದ್ದಿಯು ಹರಡಿದರೂ ದಾರುವರ್ಮನು ಅದನ್ನು ಆಲೋಚಿಸದೆ ಬಾಲಚಂದ್ರಿಕೆಯ

ಕಂ॥ ಕಳವಿಂದಿರ್ಪಂಗಂ ಸತಿ
ಯುಳಿವಿಂದಿರ್ಪಂಗಮತಿದರಿದ್ರಂಗಂ ಕ
ಳ್ಗೆಳಸಿರ್ಪಂಗಂ ಮಿಗೆ ತಾ
ನೞಿವ ಭಯಂ ತೋಱದೆಂಬುದಿದು ಸಿದ್ಧಾಂತಂ ೧೦೫

ಇದು ಠಾವಿದು ಠಾವಲ್ತಿಂ
ತಿದು ಸೌಮ್ಯಮಸೌಮ್ಯಮಿದು ಗುಣಂ ದುರ್ಗುಣಮು
ಪ್ಪುದಿದಾಗದಿದೆಂಬ ವಿವೇ
ಕದ ಬಗೆಯಂ ಬಗೆಯರಲ್ತೆ ಕಾಮುಕರಿಳೆಯೊಳ್ ೧೦೬

ವ॥ ಅದು ಕಾರಣವಾಗೆ ಭಯರಸಂ ತೋಱದೆ ಪ್ರಿಯರಸಂ ಮೀರೆದಪ್ಪೆಮೆಯ್ಮ
ಱೆದು ಮಱೆದಿರಲ್ ಮಱುದಿವಸಂ

ಕಂ॥ ಕಿರಣಸಮೂಹಮನೊಲವಿಂ
ಭರದಿಂ ಪೊಱಗಟ್ಟಿ ಪದೆಪಿನಿಂದಂಬರಮಂ
ಪರಿಹರಿಸಿ ಪಡುವಣಬ್ಧಿಯ
ನರವಿಂದಸಖಂ ವಿಲಾಸದಿಂದಂ ಪಾಯ್ದಂ ೧೦೭

ವ॥ ಅಂತಸ್ತಮಾನವಾಗಲೊಡಂ

ಧ್ಯಾನದಲ್ಲಿಯೇ ಇದ್ದನು. ಅದು ಹೇಗೆಂದರೆ ೧೦೫. ಕಳವು ಮಾಡಿ ಬದುಕುವವನಿಗೂ, ಪರಸ್ತ್ರೀವ್ಯಾಮೋಹವುಳ್ಳವನಿಗೂ, ತೀರ ಬಡವನಿಗೂ, ಹೆಂಡ ಕುಡಿಯಲು ಬಯಸುವವನಿಗೂ ವಿಶೇಷವಾಗಿ ತಾನು ನಾಶವಾಗುವ ಭಯವು ತೋರುವುದಿಲ್ಲ. ಎಂಬ ಮಾತು ಸಿದ್ಧಾಂತ. ೧೦೬. ಇದು ಉಚಿತವಾದ ಸ್ಥಾನ—ಇದು ಉಚಿತವಾದ ಸ್ಥಾನವಲ್ಲ, ಇದು (ಕೋಮಲ) ಹಿತಕರ–ಇದು ಅಹಿತಕರ, ಇದು ಗುಣ–ಇದು ದುರ್ಗುಣ, ಇದು ಮಾಡಬಹುದಾದುದು–ಇದು ಮಾಡಬಾರದುದು, ಎಂಬ ವಿವೇಕದ ರೀತಿಯನ್ನು ಲೋಕದಲ್ಲಿ ಕಾಮುಕರು ಯೋಚಿಸುವುದಿಲ್ಲ. ವ॥ ಆ ಕಾರಣದಿಂದ ದಾರುವರ್ಮನಲ್ಲಿ ಹೆದರಿಕೆಯು ತೋರಲಿಲ್ಲ. ಪ್ರೀತಿಯೆಂಬ ರಸವು ಮೇರೆ ಮೀರಿತು. ಮೈಮರೆದು ಯಾವುದನ್ನೂ ಎಣಿಸದಿದ್ದನು. ಮಾರನೆಯ ದಿವಸ ೧೦೭. ಅರವಿಂದ ! ಸಖನಾದ ಸೂರ್ಯನು ಕಿರಣಗಳ ಸಮೂಹವನ್ನು ಪ್ರೀತಿಯಿಂದ ಬೇಗ ಹೊರಕ್ಕೆ ತಳ್ಳಿ, ಆಸೆಯಿಂದ ಆಕಾಶವನ್ನು ತೊರೆದು ವಿಲಾಸದಿಂದ ಪಶ್ಚಿಮ ಸಮುದ್ರವನ್ನು ಹೊಕ್ಕನು. (ರವಿಯು ತನ್ನ ಕಾಂತೆಯೊಡನೆ ರಮಿಸಲು ಅಂಬರವನ್ನೂ ತೊರೆದು ಸಮುದ್ರದಲ್ಲಿ ವಿಲಾಸದಿಂದ ಇಳಿದನು ಎಂಬ ಅರ್ಥಾಂತರ ಪ್ರತೀತಿಯುಂಟು). ವ॥ ಹಾಗೆ ಮುಳುಗಲು—

ಉ॥ ಕಪ್ಪುರವೀಳೆಯುಂ ಕುಸುಮಮಾಲಿಕೆ ಕತ್ತುರಿಗಂದದಣ್ಕೆ ಚೆ
ಲ್ವಪ್ಪವುಳಾಂಬರಂ ಮಣಿಮಯಾಭರಣಂ ಪುದಿದುದ್ಧಚಿತ್ರದಿಂ
ದೊಪ್ಪುವ ಪಟ್ಟೆಯುಂ ಪದೆಪಿನಿಂ ಸತಿಗಿತ್ತೊಡಗೊಂಡು ಬೇಗದಿಂ
ಬಪ್ಪುದೆನುತ್ತವಂ ಕೆಲವರಿಂ ಕರೆದಟ್ಟಿದನಾ ಕುಮಾರಿಯುಂ ೧೦೮

ವ॥ ಅಂತಾಕೆಯುನವಂ ಕರೆಯುಲಟ್ಟಿದುದನಾನಱಿದು

ಕಂ॥ ಮಿಗೆ ಸಪುರಸೀರೆಯುಂ ಮ
ಲ್ಲಗಂಟನಿಂದುಟ್ಟು ಮೇಲೆ ಪೆಣ್ಣುಡೆಯುಂ ದಿ
ಟ್ಟಿಗೆ ಸೊಗಸಲುಟ್ಟು ಬೞಿಕೊ
ಯ್ಯಗೆ ಸಾರ್ದೆಂ ಬಾಲಚಂದ್ರಿಕಾಂತಃಪುರಮಂ ೧೦೯

ವ॥ ಅಂತು ಸಾರ್ದು ನಾನಾಕೆಯುಂ ದಾರುವರ್ಮನಲ್ಲಿಗೆ ನಡೆಯಲ್ ಪೇೞ್ದು

ಕಂ॥ ಮೃಗಶಾಬನೇತ್ರೆಗಾನಡ
ಪಗಿತ್ತಿಯೆಂಬಂತಿರೆಲೆಯು ಮಡಿಸಿ ಕುಡುತ್ತುಂ
ಪೊಗದೊಳ್ ಮುಳಿಸೊಗೆಯಲ್ ಪಿಂ
ದುಗೊಂಡು ಪೋಗಿರ್ದೆನವನ ಬಾಗಿಲೊಳರಸಾ ೧೧೦

ವ॥ ಅಂತಾವಿರ್ಬರುಂ ಬಾಗಿಲೊಳಿರ್ಪುದುಂ ದೌವಾರಿಕರ್ ಪೋಗಿ ಪೇೞೆ ರಕ್ಕಸನ ಭಯಕ್ಕಂಜಿ ಸಕಳಪರಿವಾರಮುಂ ಕಾಪುವೇೞ್ದು ದಾರುವರ್ಮನೆಮ್ಮಂ ಕರಸೆ

೧೦೮. ಆ ದಾರುವರ್ಮನು, ಕರ್ಪೂರಮಿಶ್ರವಾದ ವೀಳೆಯ, ಹೂವಿನಮಾಲೆ, ಕಸ್ತೂರಿ ಮಿಶ್ರವಾದ ಸುಗಂಧಲೇಪ, ಅಂದವಾದ ಬಟ್ಟೆ, ರತ್ನಖಚಿತವಾದ ಆಭರಣಗಳು, ಆಕರ್ಷಕವಾದ ಉತ್ತಮ ಚಿತ್ರಗಳಿಂದ ಹೊಳೆಯುವ ರೇಶ್ಮೆಯ ಸೀರೆ, ಇವನ್ನೆಲ್ಲ ಕೊಟ್ಟು ಬಾಲಚಂದ್ರಿಕೆಯನ್ನು ಜೊತೆಯಲ್ಲಿಯೇ ಕರೆದುಕೊಂಡು ಬನ್ನಿರಿ ಎಂದು ಹೇಳಿ ಕೆಲವರನ್ನು ಆ ಸುಕುಮಾರಿಯನ್ನು ಕರೆತರಲು ಕಳುಹಿಸಿದನು. ವ॥ ಹಾಗೆ ಅವನು ಅವಳನ್ನು ಕರೆತರಲು ದೂತಿಯರನ್ನಟ್ಟಿದ ವಿಷಯವನ್ನರಿತು—೧೦೯. ತುಂಬ ತೆಳ್ಳಗಿದ್ದ ಬಟ್ಟೆಯನ್ನು ಒಳಗೆ ಮಲ್ಲ ಗಂಟು ಹಾಕಿ ಉಟ್ಟೆನು. ಬಳಿಕ ಮೇಲೆ ನೋಡಲು ಸೊಗಸಾಗಿರುವಂತೆ ಹೆಣ್ಣಿನ ಉಡಿಗೆಯನ್ನುಟ್ಟೆನು. ಬಳಿಕ ನೇರವಾಗಿ ಬಾಲಚಂದ್ರಿಕೆಯ ಅಂತಃಪುರಕ್ಕೆ ಹೋಗಿ ಸೇರಿದೆನು. ವ॥ ಹಾಗೆ ಹೋಗಿ ಸೇರಿ ನಾನು ಆಕೆಗೆ ದಾರುವರ್ಮನ ಹತ್ತಿರ ಹೋಗಲು ಹೇಳಿದನು—೧೧೦. ಹರಿಣಾಕ್ಷಿಗೆ ನಾನು (ತಾಂಬೂಲದ ಭರಣಿಯನ್ನು ತರುವವಳು) ಎಂಬಂತೆ ತೋರಿಸಿಕೊಳ್ಳುತ್ತಾ ವೀಳೆಯದೆಲೆಯನ್ನು ಮಡಿಸಿಕೊಡುತ್ತಾ ಕೋಪದಿಂದಲೆ ಅವಳನ್ನು ಹಿಂಬಾಲಿಸಿ ಅವನ ಮನೆಯ ಬಾಗಿಲಿಗೆ ಹೋದೆನು, ವ॥ ಹಾಗೆ ನಾವಿಬ್ಬರೂ ಬಾಗಿಲಿನಲ್ಲಿ ಬಂದಿರುವ ಸಮಾಚಾರವನ್ನು ದ್ವಾರಪಾಲಕರು ಒಳಗೆ ಹೋಗಿ ದಾರುವರ್ಮನಿಗೆ ಹೇಳಿದರು. ಅವನು ಬ್ರಹ್ಮರಾಕ್ಷಸನ ಭಯದಿಂದ ಹೆದರಿ ಸಕಲ ಪರಿವಾರಕ್ಕೂ ಸರಿಯಾಗಿ ಕಾಯಬೇಕೆಂದು ಹೇಳಿ ನಮ್ಮನ್ನು ಒಳಕ್ಕೆ ಕರೆಯಿಸಿದನು.

ಮ ಸ್ರ॥ ಮೃದುಚಿತ್ರಂ ಜಾಳಕಂ ಪುತ್ರಿಕೆ ಶುಕತತಿ ಪಾರಾವತಂ ರಾಜಹಂಸ
ಚ್ಛದತಲ್ಪಂ ತಾಳವೃಂತಂ ಕುಸುಮವಿತತಿ ತಾಂಬೂಲಕಂ ಕಂಪುನೀರ್ ತೀ
ವಿದ ಚಂದ್ರಗ್ರಾವಕುಂಭಂ ಮೆಱೆದು ಸೊಗಸಿನಿಂದಿರ್ಪ ತತ್ಕಾಮಕೇಳೀ
ಸದನಕ್ಕಾವೇಟ್ತರಲ್ ಭೋಂಕನೆ ಮನದೊಲವಿಂ ಕಂಡನಾ ದಾರುವರ್ಮಂ ೧೧೧

ವ॥ ಅಂತು ಕಂಡು

ಕಂ॥ ಮೊಗದೊಳ್ ಪಸರಿಸೆ ರಾಗಂ
ನಗೆ ಮೊಳೆಯಲ್ ಕರಣವಿತತಿ ತವಕಿಸೆ ಧೃತಿಯುಂ
ಮಿಗೆ ಕುಂದಲಾತನಂಗದೊ
ಳೊಗೆಯಲ್ ಬಹುವಿಧವಿಕಾರಮಾನದನಱಿದೆಂ ೧೧೨

ವ॥ ಅಂತು ಮನದೊಳ್ ತವಕಂಗೆಯ್ದುಱಿದು ಕಣ್ಸನ್ನೆಯಿಂ ಸಕಲವಾರನಾರಿಯರುಂ
ಕಳುಪಿಯಾನಿರ್ದೊಡಂ ನಾಣ್ಚದೆ

ಕಂ॥ ಇನಿತು ದಿನಂ ಕಾಡಿದೆ ಧೂ
ರ್ತೆ ನಿನ್ನನಾನಿಂದು ಬಿಡುವೆನೇ ಎನುತುಂ ಭೋಂ
ಕನೆ ನಿಱಿಗೆ ಪಾಯಲಾನಿ
ನ್ನೆನಿತಂ ಸೈರಿಸುವೆನೆಂದು ಮುಸುಕಂ ಮಾಣ್ದೆಂ ೧೧೩

ವ॥ ಅಂತೆನ್ನ ಮುಸುಕಂ ತೆಗೆದು ಅಡಪವಂ ಕೆಲದೊಳಿಟ್ಟು

೧೧೧. ಮೃದುವಾದ ವಿಚಿತ್ರವಾದ ಪರದೆ. ಗೊಂಬೆಗಳು. ಗಿಳಿಗಳ ಗುಂಪು. ಪಾರಿವಾಳ, ಹಂಸತೂಲಿಕಾತಲ್ಪ. ಬೀಸಣಿಗೆ, ಹೂಗಳರಾಶಿ, ತಾಂಬೂಲ, ಪನ್ನೀರು, ತುಂಬಿದ ಚಂದ್ರ ಕಾಂತಶಿಲೆಯ ಕುಂಭ ಇವುಗಳಿಂದ ಸೊಗಸಾಗಿ ಮೆರೆಯುತ್ತಿದ್ದ ಅವನ ಕಾಮ ಕೇಳೀ ಗೃಹಕ್ಕೆ ನಾವು ಬರಲು ಆ ದಾರುವರ್ಮನು ಭೋಂಕನೆ ಎದ್ದು ಮನಃ ಪ್ರೀತಿಯಿಂದ ಕಂಡು ಸ್ವಾಗತಿಸಿದನು. ವ।। ಹಾಗೆ ನೋಡಿ—೧೧೨. ಅವನ ಮುಖದಲ್ಲಿ ಅನುರಾಗವು ಪರಡಿತು. ನಗೆಯು ಮೊಳೆಯಿತು. ಇಂದ್ರಿಯುಗಳು ಆತುರದಿಂದ ಧೈರ್ಯಗುಂದಿದುವು. ಅವನ ಅಂಗದಲ್ಲಿ ಬಹುವಿಧವಿಕಾರಗಳುಂಟಾದುವು. ನಾನು ಅದನ್ನು ಅರಿತೆನು. ವ।। ಹಾಗೆ ಮನಸ್ಸಿನ ಆತುರದಿಂದ ಕಣ್ಸನ್ನೆಯಿಂದ ಎಲ್ಲ ವಾರ ನಾರಿಯರನ್ನೂ ಹೊರಕ್ಕೆ ಕಳುಹಿಸಿದನು. ಬಳಿಕ ನಾನಿದ್ದರೂ ನಾಚಿಕೆಯಿಲ್ಲದೆ—೧೧೩. 'ಧೂರ್ತಳೆ! ಇಷ್ಟುದಿನ ನೀನು ನನ್ನನ್ನು ಕಾಡಿದೆ. ನಾನು ನಿನ್ನನ್ನು ಇಂದು ಬಿಡುವೆನೇ! ಎಂದು ಹೇಳುತ್ತಾ ಭೋಂಕನೆ ಅವಳ ಸೀರೆಯ ನಿರಿಯನ್ನು ಹಿಡಿಯಲು ನುಗ್ಗಿದನು. ನಾನು ಇನ್ನು ಎಷ್ಟು ಸೈರಿಸಲಿ ? ಮುಸುಕನ್ನು ತೆಗೆದು ಹಾಕಿದೆನು. ವ।। ಹಾಗೆ ನಾನು ಮುಸುಕನ್ನು

ಉ॥ ಇಂದು ಕೃತಾಂತ ಮಂದಿರಮನೆಯ್ದಿಪೆನೆಂದುಱೆ ದಾರುವರ್ಮನಂ
ಮೊದಲೆವಾಯ್ದು ಮುನ್ನುರವನೊತ್ತಿ ನೆಲಕ್ಕೆೞೆದಿಕ್ಕಲವಂತವಂ
ನೊಂದು ಕರುಳ್ಗಳಂ ರುಧಿರಮಂ ನೆಱೆಕಾಱಿ ಬೞಲ್ದು ಬಿೞ್ದನೆ
ನ್ನಿಂದಮೆನಲ್ಕೆ ಕೊಂದು ಬೞೆಕಾಂ ಪೊಱಮಟ್ಟೆನಿಳಾಧಿನಾಯಕಾ ೧೧೪

ವ॥ ಅಂತು ಪೊಱಮಡುತುಂ

ಕಂ॥ ತರುಣಿಗೆ ರ್ಮೋಹಿಸಿದೊಡೆ ಬೊ
ಮ್ಮರಕ್ಕಸಂ ದಾರುವರ್ಮನಂ ಮುಳಿಸಿಂ ಸಂ
ಹರಿಸಿದನೆನುತಾಂ ಪೊಱಮಡೆ
ನೆರೆದಿರ್ದವರಿತ್ತಲಿತ್ತಲೋಡಿದರೆಲ್ಲರ್ ೧೧೫

ವ॥ ಆ ಕಳಕಳದೊಳ್ ಬಾಲಚಂದ್ರಿಕೆಯುಮಾನುಂ ಪೊಱಮಟ್ಟು ಪೋದೆವು ಆತನ ಮರಣವಾರ್ತೆ ಕರ್ಣಪರಂಪರೆಯಿಂ ಚಂಡವರ್ಮನ ಕಿವಿಗೆಯ್ದೆ

ಕಂ॥ ಮುನಿದೆಯ್ದೆ ಬಾಲಚಂದ್ರಿಕೆ
ನೆನೆದಳೆ ಹಾ! ದಾರುವರ್ಮ ನಿನ್ನಯ ಸಾವಂ
ಮನಸಿಜನಿಭಾಂಗ ಹಾ! ಹಾ!
ಎನುತುಂ ಗುಣಿ ಚಂಡವರ್ಮನಂದೆಯ್ತಂದಂ ೧೧೬

ವ॥ ಅಂತು ಬಾಯೞೆಯುತ್ತುಂ ಬಂದಾತನ ಕಳೇಬರಮಂ ಕೃಶಾನುವಿಂಗೊಪ್ಪಿಸಿ ಬೞೆಯಂ

ಕಳಚಿ ಹಡಪವನ್ನು ಪಕ್ಕದಲ್ಲಿಟ್ಟೆನು. ೧೧೪. 'ಇಂದು ಯಮನ ಪಟ್ಟಣಕ್ಕೆ ಕಳುಹಿಸುವೆನು' ಎಂದು ಹೇಳುತ್ತಾ ದಾರುವರ್ಮನನ್ನು ಮುಂದಲೆ ಹಿಡಿದು ಕೆಡವಿದೆನು. ಎದೆಯನ್ನು ಮೆಟ್ಟಿ ನೆಲದಲ್ಲಿ ಎಳೆದಾಡಿದೆನು. ಅವನು ತುಂಬನೊಂದು ಕರುಳುಗಳನ್ನೂ ರಕ್ತವನ್ನು ಕಾರುತ್ತಾ ಬಳಲಿ ನೆಲದ ಮೇಲೆ ಬಿದ್ದನು. ರಾಜನೆ, ಹೀಗೆ ಅವನನ್ನು ಕೊಂದು ಬಳಿಕ ಅಲ್ಲಿಂದ ಹೊರಕ್ಕೆ ಬಂದೆನು. ವ॥ ಹಾಗೆ ಹೊರಡುತ್ತಾ ೧೧೫. ತರುಣಿಯನ್ನು ಮೋಹಿಸಿ ಕೆಣಕಿದುದರಿಂದ ಬ್ರಹ್ಮರಾಕ್ಷಸನು ದಾರುವರ್ಮನನ್ನು ಕೋಪದಿಂದ ಸಂಹರಿಸಿದನು ಎಂದು ಹೇಳುತ್ತಾ ನಾನು ಹೊರಕ್ಕೆ ಬರಲು ಅಲ್ಲಿದ್ದವರೆಲ್ಲ ಅತ್ತ ಇತ್ತ ಓಡಿಹೋದರು. ವ॥ ಆ ಗಲಾಟೆಯಲ್ಲಿ ಬಾಲಚಂದ್ರಿಕೆಯೂ ನಾನೂ ಹೊರಕ್ಕೆ ಹೊರಟು ಹೋದೆವು. ಆತನ ಸಾವಿನ ಸುದ್ದಿಯು ಕಿವಿಯಿಂದ ಕಿವಿಗೆ ಹರಡಿ ಚಂಡವರ್ಮನ ಕಿವಿಗೂ ಬಿದ್ದಿತು. ೧೧೬. "ಕಾಮನ ಹಾಗೆ ಶರೀರವುಳ್ಳ ದಾರುವರ್ಮನೆ ಹಾ ! ಕೋಪಿಸಿಕೊಂಡು ಬರಲು ಬಾಲಚಂದ್ರಿಕೆಯು ನಿನ್ನ ಸಾವನ್ನು ನೆನೆದಳೆ ! ಹಾ ! ಹಾ !" ಎನ್ನುತ್ತಾ ಗುಣಶಾಲಿಯಾದ ಚಂಡವರ್ಮನು ಅಲ್ಲಿಗೆ ಬಂದನು. ವ॥ ಹೀಗೆ ಗೋಳಾಡುತ್ತಾ ಬಂದು ಆತನ ಶರೀರಕ್ಕೆ ಅಗ್ನಿ ಸಂಸ್ಕಾರವನ್ನು ಮಾಡಿದನು.

ಕಂ॥ ತನತನಗೆ ಬೇಡಬೇಡೆಂ
ದೆನೆ ಸೊರ್ಕಿಂ ಬಾಲಚಂದ್ರಿಕೆಯನಾರ್ಪಿಂದಿಂ
ಬಿನೊಳಿರಿಸಿ ಬೊಮ್ಮರಕ್ಕರ
ನನುಮಾನಿಸದೊದೆಯೆ ದಾರುವರ್ಮಂ ತೀರ್ದಂ ೧೧೭

ವ॥ ಎಂದು ಜನವಾದಂ ನೆಲೆಗೊಂಡಿರಲಾಂ ವಿಪ್ರವೇಷದೊಳಿರ್ದು ಕೆಲವು ದಿನದಿಂ ಮೇಲೆ ಹೇಮದತ್ತನಂ ಸಾರ್ದು ಬಾಲಚಂದ್ರಿಕೆಯಂ ಬೇಡಲಾತನಿಂತೆಂದಂ

ಕಂ॥ ಈ ಕನ್ಯಕೆಯನದೊರ್ಬಂ
ಸೋಕಿರ್ಪಂ ಬೊಮ್ಮರಕ್ಕಸಂ ಬ್ರಾಹ್ಮಣ ನೀ
ನೇಕೆ ಮರುಳಾಗಿ ಪರಿಣಯ
ನಾಕಾಂಕ್ಷೆಯೊಳೀವೆ ಜೀವಮಂ ವಿಧಿಗೊಲವಿಂ ೧೧೮

ವ॥ ಎಂದು ಪೇೞ್ದೊಡೆ ಆ ಬ್ರಹ್ಮರಾಕ್ಷಸನನೆಂತಾದೊಡಂ ಸಂತವಿಟ್ಟು ಕನ್ಯೆಯನೆ ಱಿವೆನೆಂದೊಡಾಂ ಕುಡುವೆನೆಂದು ಹೇಮದತ್ತಂ ಶುಭಲಗ್ನಮಂ ನಿಶ್ಚಯಿಸಿ ಮಾಡಿ

ತಳಿರ್ವಂದರ್ ತೋರಣಂ ವೇದಿಕೆ ವಿವಿಧಪತಾಕಾಳಿ ಭೃಂಗಾರುಕುಂಭಂ
ಕಳಸಂ ಮೇಲ್ಕಟ್ಟು ವಾದ್ಯಪ್ರತತಿ ಸಕಲಧಾನ್ಯಾಂಕುರಂ ಸತ್ಸಭಾಮಂ
ದಳವೇದೋಚ್ಚಾರಣಂ ಮಂಗಳಜಯನಿನದಂ ಪೆರ್ಚಲುತ್ಸವಂ ಕಂ
ಗೊಳಿಸಲ್ ಗೃಹ್ಯೋಕ್ತದಿಂ ಕನ್ಯಕೆಯನೊಲವಿನಿಂದೀಯಲುದ್ಯುಕ್ತನಾದಂ ೧೧೯

ಬಳಿಕ. ೧೧೭. "'ಬೇಡ ಬೇಡ !' ಎಂದರೂ ಸೊಕ್ಕಿನಿಂದ ಬಾಲಚಂದ್ರಿಕೆಯನ್ನು ಪ್ರೀತಿಸ ಹೋದ ದಾರುವರ್ಮನನ್ನು ಬ್ರಹ್ಮರಾಕ್ಷಸನು ಅನುಮಾನಿಸದೆ ಒದ್ದು ಕೊಂದನು." ವ॥ ಎಂದು ಜನರಲ್ಲಿ ಸುದ್ದಿಯು ಬಲವಾಗಿ ಹರಡಿತು. ಆಗ ನಾನು ಬ್ರಾಹ್ಮಣ ವೇಷದಲ್ಲಿ ಇದ್ದುಕೊಂಡು ಕೆಲವು ದಿನಗಳಾದ ಮೇಲೆ ಹೇಮದತ್ತನ ಹತ್ತಿರ ಹೋಗಿ ಬಾಲ ಚಂದ್ರಿಕೆಯನ್ನು ಬೇಡಿದೆನು. ಆಗ ಅವನು ಹೀಗೆ ಹೇಳಿದನು. ೧೧೮. "ಈ ಕನ್ನಿಕೆ ಯನ್ನು ಒಬ್ಬ ಬ್ರಹ್ಮರಾಕ್ಷಸನು ಹಿಡಿದುಕೊಂಡಿದ್ದಾನೆ. ಬ್ರಾಹ್ಮಣ ! ನೀನೇಕೆ ಬುದ್ಧಿ ಯಿಲ್ಲದೆ ಇವಳನ್ನು ಮದುವೆಯಾಗಲು ಬಯಸಿ ಜೀವವನ್ನು ಕಳೆದುಕೊಳ್ಳುವೆ ?". ವ॥ ಎಂದು ಹೇಳಲು "ಆ ಬ್ರಹ್ಮರಾಕ್ಷಸನನ್ನು ಹೇಗಾದರೂ ಮಾಡಿ ಸಮಾಧಾನ ಮಾಡಿ ಕನ್ಯೆಯನ್ನು ಕೂಡುವೆನು" ಎಂದು ನಾನು ಹೇಳಿದೆನು. ಆಗ ಹೇಮದತ್ತನು ಹಾಗಾದರೆ ಕೊಡುವೆನೆಂದು ಹೇಳಿ ಶುಭಲಗ್ನವನ್ನು ನಿಶ್ಚಯ ಮಾಡಿದನು. ೧೧೯. ಚಿಗುರಿನ ಚಪ್ಪರ, ತೋರಣ, ಮದುವೆಯ ಜಗಲಿ, ವಿಧವಿಧವಾದ ಪತಾಕೆಗಳ ಸಾಲು, ಚಿನ್ನದ ಬಿಂದಿಗೆಯ ಕಲಶ, ಮೇಲ್ಕಟ್ಟು, ವಾದ್ಯಗಳ ಸಮೂಹ, ಎಲ್ಲ ಧಾನ್ಯಗಳ ಮೊಳಕೆಗಳು, ಸಜ್ಜನರ ಸಭೆ, ವೇದಘೋಷ, ಮಂಗಳವನ್ನು ಕೋರುವ ಜಯ ಧ್ವನಿ–ಇವುಗಳಿಂದ ವಿವಾಹದ ಉತ್ಸವವು ವೈಭವದಿಂದ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಿರಲು ಗೃಹ್ಯ ಸೂತ್ರದಲ್ಲಿ ಹೇಳಿರುವಂತೆ ಕನ್ನಿಕೆಯನ್ನು ಪ್ರೀತಿಯಿಂದ ಕೊಡಲು ಸಿದ್ಧನಾದನು.

ವ|| ಅಂತನುಗೆಯ್ದುಂ ಲಗ್ನಕಾಂ ಬಂದು ಮಜ್ಜನಂಬುಗುವಾಗಳ್

ಕುಸುಮಿತವಾದ ಪದ್ಮಲತೆಯೊಳ್ ಪೊಸಕೇದಗೆಯೊಳ್ಳೆಸಳ್ಗಳೊ
ಳ್ಪೆಸೆವಿನಮುಣ್ಮಿ ಪೊಣ್ಮಿದನಿತಲ್ಲದೆ ತುಂಬಿಗಳುಂ ಪೊದಟ್ದು ಲಾ
ಲಿಸಿದಪುವೆಂಬಿನಂ ಸುದತಿಯರ್ ಪದೆದೆನ್ನಯ ದೇಹಮೊಯ್ದು ರ್ಘೋಂ
ಪಿಸುತಿರೆ ಪೂಸಿದರ್ ಮೃದುಕರಾಂಬುಜದಿಂ ನವಗಂಧತೈಲಮಂ ೧೨೦

ವ|| ಅನಂತರಂ

ಕಂ|| ಹರಜೂಟದೊಳೊಲವಿಂದಂ
ಬರಗಂಗಾವಾರಿ ಸುರಿವ ತೆಱದಿಂದಂ ಮ
ಚ್ಛಿರದೊಳ್ ಪೊಂಗಳಸಂಗಳಿ
ನರುಣಾಧರೆಯರ್ ಜಲಾಭಿಷೇಕಂಗೆಯ್ದರ್ ೧೨೧

ವ|| ಅಂತು ಮಜ್ಜನಂಗೆಯ್ಸಿ ಮಧುಪರ್ಕಮಂ ಮಾಡಿಸಿ

ಕಂ|| ಸೌಭಾಗ್ಯಪಟ್ಟಮಂ ತಾ
ಳ್ದ್ವಿಭಾಳದೊಳೆಂದು ಕುಂಭಿಕುಂಭದ ಪಾಂಗಿಂ
ಶೋಭೆವಡೆದಿರ್ದ ನೊಸಲೊಳ್
ಶ್ರೀಭೂಸುರರೊಲ್ದು ಕಟ್ಟಿದರ್ ಬಾಸಿಗಮಂ ೧೨೨

ವ|| ಹೀಗೆ ಸಿದ್ಧಮಾಡಿದ ಮೇಲೆ ಮದುವೆಗಾಗಿ ಬಂದು ನಾನು ಸ್ನಾನ ಮಾಡುತ್ತಿರುವಾಗ ೧೨೦. ಹೂವು ಬಿಟ್ಟ ತಾವರೆಯ ಬಳ್ಳಿಯಲ್ಲಿ ಹೊಸದಾದ ತಾಳೆಯ ಹೂವಿನ ಸೊಗಸಾದ ದಳಗಳ ಅಂದವು ಸುಂದರವಾಗಿ ಉಕ್ಕಿ ಹರಿಯಿತು. ಅಷ್ಟೇ ಅಲ್ಲದೆ ದುಂಬಿಗಳು ವ್ಯಾಪಿಸಿ ಕೊಂಡು ಲಾಲಿಸುತ್ತಿವೆ ಎಂಬ ಹಾಗೆ ಸ್ತ್ರೀಯರು ಪ್ರೀತಿಯಿಂದ ನನ್ನ ದೇಹಕ್ಕೆ ವಿಶೇಷ ವಾಗಿ ರ್ಘೋಂಪು ಬರುವಂತೆ ತಮ್ಮ ಮೃದುವಾದ ಕರಕಮಲಗಳಿಂದ ಹೊಸದಾದ ಗಂಧ ತೈಲವನ್ನು ಹಚ್ಚಿದರು. (ಸುವಾಸನೆಯ ಎಣ್ಣೆಯನ್ನು ಹಚ್ಚಿದರು) ವ|| ಅನಂತರ ೧೨೧. ಶಿವನ ಜಡೆಯಿಂದ ಆಕಾಶ ಗಂಗೆಯ ನೀರು ಸುರಿಯುವ ಹಾಗೆ, ಚೆಂದುಟಿಯ ನಾರಿಯರು ನನ್ನ ತಲೆಯ ಮೇಲೆ ಚಿನ್ನದ ಬಿಂದಿಗೆಗಳಿಂದ ಜಲಾಭಿಷೇಕವನ್ನು ಮಾಡಿ ದರು. ವ|| ಹಾಗೆ ಸ್ನಾನಮಾಡಿಸಿ ಮಧುಪರ್ಕವನ್ನು ಕೊಟ್ಟರು. ೧೨೨. ಬ್ರಾಹ್ಮಣರು ಆನೆಯ ಕುಂಭಸ್ಥಳದಂತೆ ಸುಂದರವಾಗಿದ್ದ ನನ್ನ ಹಣೆಯ ಮೇಲೆ ಪ್ರೀತಿಯಿಂದ ಬಾಸಿಂಗವನ್ನು ಕಟ್ಟಿದರು. ಅದು ಮುಂದೆ ಹಣೆಯ ಮೇಲೆ ಸೌಭಾಗ್ಯಕರವಾದ ಪಟ್ಟ

ವ॥ ಅಂತು ಬಾಸಿಗಂಗಟ್ಟಿ

ಕಂ॥ ಸತಿಯ ಪದನಖದ ದೀಧಿತಿ
ಸಿತಾಕ್ಷಿನವಕಾಂತಿ ನಡುವೆ ದಟ್ಟೈಸಿತ್ತೆಂ
ಬತಿಶಯಗುಣದಿಂ ಮೃದು ಶು
ಭ್ರತೆಯಿಂ ಮೆಱೆದಿರ್ಪ ಸೀರೆಯಂ ತೆಱೆವಿಡಿದರ್ ೧೨೩

ವ॥ ಅಂತು ತೆಱೆವಿಡಿದು

ಕಂ॥ ಆಯುತವೇ ಆಯುತವ
ತ್ತಾಯುತವೇ ಆಯುತಂ ಸಮಂತಾಯುತವೇ
ಆಯುತ ಪುಣ್ಯಾಹ ಮೆನ
ಲ್ಕಾಯುವತಿಯ ಮೊಗಮನೊಲ್ದು ನೋಡುತ್ತಿರ್ದಂ ೧೨೪

ವ॥ ಅಂತು ತೆಱೆದೆಗೆಯಲೊರ್ಬರೊರ್ಬರ ಮೊಗಮಂ ನೋಟ್ಪ ಸಮಯದೊಳ್ ಹೇಮದತ್ತಂ ಕೈನೀರೆಱೆಯೆ

ಕಂ॥ ಇನನುದಯಂಗೆಯ್ಯಲೊಡಂ
ವನಜಂ ನೀರೇಜಮಂತೆ ತತ್ಕೋಮಳೆಯಾ
ನನಕಮಳವರಳಲೆನ್ನಯ
ಮನಮೆಂಬುದ್ಭ್ರಮರ ಮೆಱಗಲೆಳಸಿತ್ತಾಗಳ್ ೧೨೫

ವನ್ನು ತಾಳುವೆ ಎಂದು ಸೂಚಿಸುವಂತಿತ್ತು. ವ॥ ಹಾಗೆ ಬಾಸಿಂಗವನ್ನು ಕಟ್ಟಿ. ೧೨೩. ಶುಭ್ರವಾಗಿ ಹೊಳೆಯುವ ಬಟ್ಟೆಯ ತೆರೆಯನ್ನು ಹಿಡಿದರು. ಅದು ಕನ್ನಿಕೆಯ ಕಾಲುಗುರಿನ ಕಾಂತಿ ಮತ್ತು ಅವಳ ಬಿಳುಪಾದ ಕಣ್ಣುಗಳ ನೂತನವಾದ ಕಾಂತಿ ಎರಡೂ ನಡುವೆ ದಟ್ಟವಾಗಿ ಸೇರಿಕೊಂಡಿತ್ತು ಎಂಬ ಒಂದು ಅತಿಶಯವಾದ ಗುಣದಿಂದ ಶೋಭಿಸುತ್ತಿತ್ತು. ವ॥ ಹಾಗೆ ತೆರೆಯನ್ನು ಹಿಡಿದು ಸರಿಯಾದ ಸಮಯ ಸರಿಯಾದ ಮುಹೂರ್ತ ಎನ್ನುತ್ತಾ ವ॥ ಹಾಗೆ ತೆರೆಯನ್ನು ತೆಗೆಯಲು ಒಬ್ಬರು ಇನ್ನೊಬ್ಬರ ಮುಖವನ್ನು ನೋಡುವ ಸಮಯದಲ್ಲಿ ಹೇಮದತ್ತನು(ಕೈನೀರು)ಧಾರೆಯೆರೆದನು. ೧೨೫. ಸೂರ್ಯನು ಉದಯಿಸಿದಾಗ ಕಮಲವು ಸಂತೋಷದಿಂದ ಅರಳುತ್ತದೆ ಹಾಗೆ ಆ ಕೋಮಲೆಯ ಮುಖಕಮಲವು ಆನಂದದಿಂದ ಅರಳಿತು. ಆಗ ನನ್ನ ಮನಸ್ಸೆಂಬ ಚಲಿಸುವ ದುಂಬಿಯು

ಕಂ॥ ಎಡವಿಡದೆ ಪುಳಕಮುಣ್ಮಲ್
ಕಡುಲಜ್ಜೆಯೆನಿಪ್ಪ ಮಡುವಿನೊಳ್ ಕಂಪಿಸುತುಂ
ದಡದಡಿಸಿ ಬೀಟ್ವೆನ್ನಂ
ಪಿಡಿಯೆಂಬಂತಾಕೆ ನೀಡಿದಳ್ ನಿಜಕರಮಂ ೧೨೬

ಸುದತೀರತ್ನಂ ಕೈಸಾ
ರ್ದುದು ಪುಣ್ಯದ ಫಲಮೆನುತ್ತೆ ಪದೆಪಿಂ ಕಾಂತಾ
ಮೃದುಕರತಳಮಂ ಪಿಡಿದೆಂ
ಮದನಂ ತಿರುಪೊಯ್ದು ಕಬ್ಬಿನಿಲ್ಲಂ ಪಿಡಿಯಲ್ ೧೨೭

ವ॥ ಅಂತು ಪಾಣಿಗ್ರಹಣಂ ಮಾಡಿ ಯಥೋಕ್ತ ಹೋಮಂ ಬೇಳ್ದನಂತರಂ ಸಪ್ತಪದಿಗಳಂ ಮೆಟ್ಟಿಸಿ ಬಳಿಕ್ಕ ಚತುರ್ಥದಿವಸದೊಳ್

ಶಿರದೊಳ್ ತಳ್ತ ಸಿತಾಕ್ಷತಂ ಗಗನಗಂಗಾಂಭಃಕಣಂ ಬಾಸಿಗಂ
ತರುಣೇಂದುದ್ಯುತಿ ರೋಚನಾತ್ತತಿಲಕಂ ಭಾಳಾಂಬಕಂ ಗೌರಿ ತ
ತ್ತರುಣೀರತ್ನಮೆನಲ್ಕೆ ನಾಂದಿಮುಖದೊಳ್ ವಿದ್ವದ್ಗಣಸ್ತೋತ್ರಮಂ
ಕುರಿಸಲ್ ಪೆಂಪಿನುಮಾಮಹೇಶ್ವರನವೋಲ್ ಪುಷ್ಪೋದ್ಭವಂ ರಂಜಿಪಂ ೧೨೮

ವ॥ ಎಂದು ಸಕಲ ಬಂಧುಜನಂ ವಂದಿಜನಂಗಳುಂ ಸ್ತೋತ್ರಮಂ ಮಾಡಲಲ್ಲಿ ಕೆಲಂಬರ್

ಅದರ ಮೇಲೆ ಎರಗಲು ಆಶಿಸಿತು. ೧೨೬. ಒಂದೇ ಸಮನಾಗಿ ರೋಮಾಂಚ ಉಂಟಾಗಲು ಕಡುಲಜ್ಜೆಯ ಮಡುವಿನಲ್ಲಿ ಮುಳುಗಿ ನಡುಗಿ ಹೆಜ್ಜೆ ತಪ್ಪಿ ಬೀಳುವ ನನ್ನನ್ನು ಹಿಡಿದುಕೋ ಎಂಬ ಹಾಗೆ ಅವಳು ತನ್ನ ಕೈಯ್ಯನ್ನು ನೀಡಿದಳು. ೧೨೭. "ಸ್ತ್ರೀರತ್ನವು ಕೈಗೆ ಸಿಕ್ಕಿತು. ಇದು ಪೂರ್ವ ಪುಣ್ಯದ ಫಲ" ಎಂದು ಯೋಚಿಸುತ್ತಾ ಪ್ರೀತಿಯಿಂದ ಕಾಂತೆಯ ಮೃದುವಾದ ಕರತಳವನ್ನು ಹಿಡಿದೆನು. ಆಗ ಮದನನು ಹೆದೆಯನ್ನು ಜೇಗೈದು ತನ್ನ ಕಬ್ಬಿನ ಬಿಲ್ಲನ್ನು ಹಿಡಿದನು. ವ॥ ಹಾಗೆ ಪ್ರಾಣಿಗ್ರಹಣವನ್ನು ಮಾಡಿದೆನು. ಶಾಸ್ತ್ರದಲ್ಲಿ ಹೇಳಿರುವಂತೆ ಹೋಮವನ್ನು ಮಾಡಿದ ನಂತರ ಸಪ್ತಪದಿಯನ್ನು ನಡೆಸಿದರು. ಬಳಿಕ ನಾಲ್ಕನೆಯ ದಿವಸದಲ್ಲಿ ೧೨೮. "ತಲೆಯ ಮೇಲೆ ಧರಿಸಿದ ಬಿಳಿಯ ಅಕ್ಷತೆಯು ಆಕಾಶಗಂಗೆಯ ನೀರಿನ ಕಣಗಳು. ಹಣೆಯ ಮೇಲೆ ಕಟ್ಟಿದ ಬಾಸಿಂಗವು ಬಾಲಚಂದ್ರನ ಕಾಂತಿ, ಪ್ರಕಾಶಮಾನವಾದ ತಿಲಕವು (ಗೋರೋಚನದ ತಿಲಕ) ಹಣೆಗಣ್ಣು, ಆ ತರುಣೀ ರತ್ನವೇ ಗೌರಿ, ಎಂಬುದಾಗಿ ನಾಂದೀ ಮುಖದಲ್ಲಿ (ಒಂದು ವಿವಾಹ ಕರ್ಮ) ವಿದ್ವಾಂಸರ ಸಮೂಹವು ಸ್ತುತಿಸಲು ಪುಷ್ಪೋದ್ಭವನು ಪೆಂಪುಳ್ಳ ಉಮಾ ಮಹೇಶ್ವರನಂತೆ ರಂಜಿಸುತ್ತಿದ್ದಾನೆ" ವ॥ ಎಂದು ಸಕಲಬಂಧು ಜನರೂ ಸ್ತುತಿ

ಕಂ॥ ವನಜಮುಖಿಯುಂ ಭಯಂಬಿ
ಟ್ಟನುನಯದಿಂ ಮದುವೆಯಾದ ಪಾರ್ವಂ ನಮ್ಮಾ
ಳನನೊದೆದ ಬೊಮ್ಮರಕ್ಕಸ
ನೆನುತಿರ್ದತ್ತಖಿಳ ಪೌರಜನವನವರತಂ ೧೨೯

ಈ ಪುಷ್ಪೋದ್ಭವನೆಂಬ ಮ
ಹಾಪುರುಷಂ ಬ್ರಹ್ಮರಾಕ್ಷಸಂ ಮಿಗೆ ಮಾಯಾ
ರೂಪಿಂದೆ ದಾರುವರ್ಮಮ
ಹೀಪತಿಯಂ ಕೊಂದನಿವಳ ದೆಸೆಯಿಂದೊಲವಿಂ ೧೩೦

ವ॥ ಎಂದು ಜನಾನುವಾದಂ ನೆಗೞೆ ಬೞಿಕಲ್ಲಿಯೆ ಪಾರ್ವರೂಪಂ ನಟಿಸಿ

ಮೊಗಮಂ ನೋಡಿ ನಿಜಾಕ್ಷಿ ಲಲ್ಲೆನುಡಿಯಂ ಕೇಳ್ದುಱ್ಕಿಂ ಕರ್ಣಮಾ
ವಗಮೊಲ್ದಂಗವನಪ್ಪಿ ತೋಳ್ಗಳಧರೋದ್ಯತ್ಸಾರಮಂ ಪೀರ್ದು ನಾ
ಲಗೆ ಪೆಂಪಿಂದೊಡಗೂಡಿ ನಲ್ಮೆ ತಣಿವಂ ಪೆತ್ತಿರ್ಪುದಿಲ್ಲೆಂಬ ಕೂ
ರ್ಮೆಗೆ ಜನ್ಮಾಲಯಮಾದ ಕಾಂತೆಯೊಲವಂತಿಂತುಂತೆನಲ್ ಬರ್ಕುಮೇ ೧೩೧

ವ॥ ಇಂತು ಸುಖಮಿರ್ದು ಬೞಿಯಂ ನಿಮ್ಮಡಿಯನಱಸಲ್ ಬಂದು

ಪಾಠಕರೂ ಸ್ತೋತ್ರವನ್ನು ಮಾಡುತ್ತಿರಲು ಅಲ್ಲಿ ಕೆಲವರು ೧೨೯. "ಕಮಲ ಮುಖಿಯನ್ನು ಭಯವಿಲ್ಲದೆ ಪ್ರೀತಿಯಿಂದ ಮದುವೆ ಮಾಡಿಕೊಂಡ ಬ್ರಾಹ್ಮಣನು ನಮ್ಮ ಒಡೆಯನನ್ನು ಒದೆದು ಕೊಂದ ಬ್ರಹ್ಮರಾಕ್ಷಸನು" ಎಂದು ಪುರಜನರೆಲ್ಲರೂ ಒಂದೇ ಸಮನಾಗಿ ಹೇಳುತ್ತಿದ್ದರು. ೧೩೦. ಈ ಪುಷ್ಪೋದ್ಭವನೆಂಬ ಮಹಾಪುರುಷನೇ ಬ್ರಹ್ಮರಾಕ್ಷಸನು. ಮಾಯಾ ರೂಪದಿಂದ ದಾರುವರ್ಮನು ಮಹಾರಾಜನನ್ನು ಇವಳಿಗಾಗಿ ಉತ್ಸಾಹದಿಂದ ಕೊಂದನು. ವ॥ ಎಂದು ಜನರಲ್ಲಿ ವದಂತಿಯು ಹರಡಲು ಬಳಿಕ ಅಲ್ಲಿಯೇ ಬ್ರಾಹ್ಮಣರ ರೂಪವನ್ನು ನಟಿಸಿದೆನು. ೧೩೧. ಕಣ್ಣು ಅವಳ ಮುಖವನ್ನು ನೋಡಿ, ಕಿವಿಯು ಅವಳ ಪ್ರೀತಿಯ ಲಲ್ಲೆಯನುಡಿಗಳನ್ನು ಕೇಳಿ, ತೋಳುಗಳು ಎಡೆಬಿಡದೆ ಪ್ರೀತಿಯಿಂದ ಅವಳ ಶರೀರವನ್ನು ತಬ್ಬಿಕೊಂಡು, ನಾಲಗೆಯು ಅವಳ ಅಧರ ರಸಪಾನಮಾಡಿ, ವಿಶೇಷವಾಗಿ ಸಂತೋಷದಿಂದ ಒಡಗೂಡಿ ತೃಪ್ತಿಯನ್ನು ಪಡೆಯಲಿಲ್ಲ ಎಂಬ ಅತಿಶಯವಾದ ಪ್ರೀತಿಗೆ ತವರು ಮನೆಯಾದ ಕಾಂತೆಯ ಬಲವನ್ನು ಹಾಗಿದೆ ಹೀಗಿದೆ ಎಂದು ವರ್ಣಿಸುವುದಕ್ಕೆ ಸಾಧ್ಯವೇ ? ವ॥ ಹೀಗೆ ಸುಖವಾಗಿದ್ದು ಬಳಿಕ

ನಯನಂ ಮಾಡಿದ ಪುಣ್ಯವೆಂತುಟೊ ನಿಜ ಶ್ರೀಪಾದವಂ ಕಂಡೆನೆ
ನ್ನಯ ಜನ್ಮಂ ಸಫಲಕ್ಕೆ ಬಂದುದು ಸಮಸ್ತೋರ್ವೀತಳಂ ಕೈಗೆ ನಿ
ಶ್ಚಯದಿಂ ಸಾರ್ದುದೆನುತ್ತೆ ಭಕ್ತಿಭರದಿಂ ಮೆಯ್ಯಿಕ್ಕಿರಲ್ ತಮ್ಮನಂ
ಪ್ರಿಯದಿಂ ಮನ್ನಿಸಿದಂ ನೃಪಾಲತಿಲಕಂ ಶ್ರೀ ಮಾಗಧೋರ್ವೀಶ್ವರಂ ೧೩೨

ವ॥ ಅಂತು ಮನ್ನಿಸಿ ಮತ್ತಮಿಂತೆಂದಂ

ಇನಿಯಳ ಸಂಗಮಂ ತೊಱೆದು ಪೆಂಪಿನ ತನ್ನ ಶರೀರಸೌಖ್ಯಮಂ
ನೆನೆಯದೆ ತಂದೆತಾಯ್ಗಳಿರವಂ ಪರಿಭಾವಿಸದೆನ್ನ ಭಕ್ತಿಯಿಂ
ನನೆಕೊನೆವೋಗಿಯಿಂತಱಸಿ ಬಂದವನಾವನೆನುತ್ತೆ ತಮ್ಮನಂ
ಮನವೊಸೆದಪ್ಪಿ.......................ನಭಂಗವಿಕ್ರಮಂ ೧೩೩

ಇಂತು ನಿಖಿಲಬುಧಜನ ಮನೋಜವನ ದಿವಾಕರಕಿರಣ ಪ್ರತಿಮಪ್ರಸನ್ನ ಶ್ರೀಮದಭಂಗ ವಿಟ್ಠಲ ಪದಾಂಭೋಜಮತ್ತ ಮಧುಕರ ಮಧುಸೂಧನ ನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತದೊಳ್ ಪುಷ್ಪೋದ್ಭವ ಕಥಾವೃತ್ತಾಂತಂ

## ಚತುರ್ಥಾಶ್ವಾಸಂ

ನಿಮ್ಮ ಪಾದಗಳನ್ನು ಹುಡುಕುತ್ತಾ ಬಂದು. ೧೩೨. ಕಂಗಳು ಮಾಡಿದ ಪುಣ್ಯ ವೆಂಥದೊ ! ನಿಮ್ಮ ಶ್ರೀಪಾದವನ್ನು ಕಂಡೆನು. ನನ್ನ ಜನ್ಮವು ಸಫಲವಾಯಿತು. ಇಡೀ ಭೂಮಂಡಲವೆ ನಿಶ್ಚಯವಾಗಿ ಕೈವಶವಾಯಿತು– ಎಂದು ಹೇಳುತ್ತಾ ಅತಿಶಯವಾದ ಭಕ್ತಿಯಿಂದ ನಮಸ್ಕರಿಸಿದನು. ಶ್ರೀಮಾಗಧ ಭೂಮಿಯೊಡೆಯನಾದ ಮಹಾರಾಜನು ಹಾಗೆ ನಮಸ್ಕರಿಸಿದ ತಮ್ಮನನ್ನು ಮನ್ನಿಸಿದನು. ವ॥ ಹಾಗೆ ಮನ್ನಿಸಿ ಮತ್ತೆ ಹೀಗೆ ಹೇಳಿದನು. ೧೩೩. ಪ್ರಿಯೆಯ ಸಂಗವನ್ನೂ ತೊರೆದು ಹಿರಿದಾದ ತನ್ನ ಶರೀರದ ಸೌಖ್ಯ ವನ್ನೂ ಗಮನಿಸದೆ ತಂದೆ ತಾಯಿಗಳು ಇರುವ ವಿಷಯವನ್ನೂ ವಿಚಾರಿಸದೆ, ನನ್ನ ಮೇಲಿನ ಭಕ್ತಿಯ ಭಾರದಿಂದ ಹೀಗೆ ಹುಡುಕಿಕೊಂಡು ಬಂದ ತಮ್ಮನು ಯಾವನಾದರೂ ಇದ್ದಾನೆಯೇ ಎಂದು ಹೇಳುತ್ತಾ ಅಭಂಗ ವಿಕ್ರಮನಾದ ಮಹಾರಾಜನು ತಮ್ಮನನ್ನು ಮನಃ ಪ್ರೀತಿಯಿಂದ ಬಿಗಿದಪ್ಪಿಕೊಂಡನು. ನಾಲ್ಕನೆಯ ಆಶ್ವಾಸ ಮುಗಿಯಿತು.

# ಪಂಚಮಾಶ್ವಾಸಂ

## ಸೋಮದತ್ತ ಚರಿತಂ

ಕಂ॥ ಶ್ರೀ ತಳ್ಕೊತ್ತುವ ವಕ್ಷಂ
ಭೂತಳಪತಿ ನಿಜಸಹೋದರಾನ್ವಿತನೆಟ್ದಂ
ಕೌತುಕದಿಂ ಶಶಿಕಾಂತ ಶಿ
ಲಾತಳದಿಂ ಪದೆದಭಂಗವಿಠ್ಠಲಭೃತ್ಯಂ ೧

ವ॥ ಅಂತಲ್ಲಿಂದೆಟ್ದು ಪುಷ್ಪೋದ್ಭವನ ಮೊಗಮಂ ನೋಡಲಾತನಿಂಗಿತವನಱಿದಿಂತೆಂದಂ

ಮ॥ ವಿಜಯಶ್ರೀ ಕುಚಮೌಕ್ತಿಕಾಭರಣ ಕೇಳ್ ವಿಜ್ಞಾಪನಂ ದೇವ ನೀಂ
ಬಿಜಯಂಗೆಯ್ವುದವಂತಿಪತ್ತನಕೆ ತತ್ಸೌಂದರ್ಯಮಂ ನೋಡಿ ದಿ
ಗ್ವಿಜಯಂ ಮಾಳ್ಪುದೆನಲ್ಕದಂ ಮನದೆಗೊಂಡಾನಂದದಿಂ ಸದ್ಗುಣ
ವ್ರಜಯುಕ್ತಂ ತಳರ್ದಂ ವಿನೋದವಿಭವಂ ಶ್ರೀಮಾಗಧಕ್ಷೋಣಪಂ ೨

ವ॥ ಅಂತಲ್ಲಿಂ ತಳರ್ದವಂತೀಪುರಕ್ಕೆ ಬರ್ಪಾಗಳ್ ಮುಂದೆ

ಉ॥ ತಾಳಮೃದಂಗಕಾಹಳರವಂ ಪದೆದಾಟ್ವ ಪಿಶಾಚಕೋಟಿ ಭೇ
ತಾಳರ ಬೊಬ್ಬೆ ರಕ್ಕಸರ ತಿಂತಿಣಿ ಭೂತಭಯಂಕರಸ್ವನಂ
ಕಾಳಿಕರಾಳಿಭೈರವಿಯರಾರ್ತರವಂ ಪುದಿದೊಪ್ಪುತಿರ್ಪ ದು
ರ್ಗಾಳಯಮಂ ಮನೋಮುದದೊಳೀಕ್ಷಿಸಿದಂ ನೃಪಕಾಳಭೈರವಂ ೩

೧. ಅಭಂಗ ವಿಟ್ಠಲನ ಸೇವಕನಾದ ರಾಜ್ಯಲಕ್ಷ್ಮಿಯನ್ನು (ಕಾಂತಿಯನ್ನು) ವಕ್ಷಸ್ಥಳದಲ್ಲಿ ಧರಿಸಿದ ರಾಜವಾಹನನು ತನ್ನ ಸಹೋದರನೊಡನೆ ಕೌತುಕದಿಂದ ಪ್ರೀತಿಯಿಂದಲೂ ಚಂದ್ರಕಾಂತ ಶಿಲಾತಳದಿಂದ ಎದ್ದನು. ವ|| ಹಾಗೆ ಅಲ್ಲಿಂದ ಎದ್ದು ರಾಜವಾಹನನು ಪುಷ್ಪೋದ್ಭವನ ಮುಖವನ್ನು ನೋಡಿದನು. ಆಗ ಆತನು ಅವನ (ರಾಜವಾಹನನ) ಇಂಗಿತವನ್ನರಿತು ಹೀಗೆ ಹೇಳಿದನು. ೨. 'ವಿಜಯಲಕ್ಷ್ಮಿಯ ಸ್ತನಗಳಿಗೆ ಮುತ್ತಿನಹಾರವಾದ ದೇವನೆ ! ನನ್ನ ವಿಜ್ಞಾಪನೆಯನ್ನು ಕೇಳು. ನೀನು ಆವಂತಿ ಪಟ್ಟಣಕ್ಕೆ ದಯೆಮಾಡಿಸು. ಆ ನಗರದ ಸೌಂದರ್ಯವನ್ನು ನೋಡಿ ತರುವಾಯ ದಿಗ್ವಿಜಯವನ್ನು ಮಾಡು.' ಈ ಮಾತುಗಳನ್ನು ಮನಸ್ಸಿಗೆ ತೆಗೆದುಕೊಂಡು ಆನಂದದಿಂದ ಸದ್ಗುಣಗಳ ಸಮೂಹದಿಂದ ಕೂಡಿದ ವಿನೋದ ಸ್ವಭಾವವುಳ್ಳ ಶ್ರೀಮಗಧದೇಶದೊಡೆಯನು ಅಲ್ಲಿಂದ ಹೊರಟನು. ವ॥ ಅಲ್ಲಿಂದ ಹೊರಟು ಆವಂತೀಪುರಕ್ಕೆ ಬರುತ್ತಿರುವಾಗ ಮುಂದೆ ೩. ರಾಜರಿಗೆ ಕಾಲಭೈರವ ಸ್ವರೂಪನಾದ ರಾಜನು ದುರ್ಗಿಯ ಮಂದಿರವನ್ನು ಸಂತೋಷದಿಂದ ನೋಡಿದನು. ತಾಲ ಮೃದಂಗ ಕಹಳೆಗಳ ಧ್ವನಿ, ವಿಕಾರವಾಗಿ ಕೂಗುವ ಪಿಶಾಚಿಗಳ

ಚಂ॥ ತಲೆಗಳ ಹೂಜೆ ಬಲ್ಗರುಳ ತೋರಣಮಕ್ಷಿಗಳಕ್ಷತಂ ಬೆರ
ಲ್ಗಳ ನಿಡುರಾಸಿ ನಾಲಗೆಯ ಪಂದರವಿಕ್ಕಿದ ಕೈಗಳೋಳಿ ಮುಂ
ದಲೆಯ ಬಣಂಬೆ ದಿಟ್ಟಿಗೆ ಭಯಂಕರಮಂ ಮಿಗೆ ಮಾಳ್ಪ ಕಾಳಿಕಾ
ನಿಳಯಮನುರ್ವರಾಧಿಪತಿ ಕಂಡನಶೀವ ಮನೋನುರಾಗದಿಂ ೪

ರಗಳೆ॥ ಅಂತಿರ್ಪ ದುರ್ಗಾಲಯಂ ಮನೋಹರಮಾಗಿ
ತಿಂತಿಣಿಯ ಮರುಳ್ಪಡೆಗಳಿಂ ಭಯಂಕರಮಾಗಿ
ಭೂತಬೇತಾಳದಳ್ಳಿಱಿದಾಡುವಾಟದಿಂ
ಪೂತಿನಿಯರಲೆದು ರುಧಿರವನೆಱೆವ ಕಾಟದಿಂ
ನರಮಾಂಸಮಂ ಬೇಟ್ಪ ರಕ್ಕಸರ ನೆರವಿಯಿಂ
ಮರುಳ ನಡುವಿಟ್ಟ ನೆತ್ತರ ಹರವಿಯಿಂ
ಕಿಡಿಗಣ್ಣ ದಡಿಗಜಟ್ಟಿಗರ ಗರ್ಜನೆಗಳಿಂ
ನಿಡುಗರುಳ ಮಾಲೆಯಂ ತಳೆದಸುರಮುನಿಗಳಿಂ
ಬೊಮ್ಮರಕ್ಕಸರೊಡನೆ ನಗುವ ಶಾಕಿನಿಯರಿಂ
ಸುಮ್ಮಾನದಿಂ ತೊಳಲ್ವ ವೀರ ಡಾಕಿನಿಯರಿಂ
ಅರಿದರಿದು ಗುಡಿಸಿರ್ದ ಕೊರ್ಬಿರ್ದ ಕುಱಿಗಳಿಂ
ಅರೆಗಣ್ಗಳಿಸೆವ ಕೋಣನ ತಲೆಯ ಮುಱಿಗಳಿಂ

ಗುಂಪು, ಭೇತಾಳಗಳ ಬೊಬ್ಬೆ, ರಾಕ್ಷಸರ ಗುಂಪು, ಭೂತಗಳ ಭಯಂಕರವಾದ ಶಬ್ದ, ಕಾಳಿ ಕರಾಳಿಭೈರವಿಯರ ಆರ್ತಧ್ವನಿ ಇವುಗಳಿಂದ ತುಂಬಿ ಆ ದೇವಾಲಯವು ಪ್ರಕಾಶಿಸುತ್ತಿತ್ತು. ೪. ತಲೆಗಳ ಹೂಜೆಗಳು, ದೊಡ್ಡ ಕರುಳುಗಳ ತೋರಣ, ಕಣ್ಣುಗಳ ಅಕ್ಷತೆ, ಬೆರಳುಗಳ ದೊಡ್ಡರಾಶಿ, ನಾಲಗೆಗಳ ಹಂದರ, ರಾಶಿಹಾಕಿದ ಕೈಗಳ ಸಾಲು, ಮುಂದಲೆಗಳ ಮೆದೆ ಇವುಗಳಿಂದ ನೋಡಲು ಭಯಂಕರವಾದ ಕಾಳಿಕಾದೇವಾಲಯವನ್ನು ಮಹಾರಾಜನು ಬಹಳ ಕೌತುಕದಿಂದ ನೋಡಿದನು. ೫. ಹಾಗಿದ್ದ ದುರ್ಗಾಲಯವು ಮನೋಹರವಾಗಿದ್ದಿತು. ಗುಂಪಾಗಿದ್ದ ಪಿಶಾಚಿಗಳ ಪಡೆಗಳಿಂದ ಭಯಂಕರವಾಗಿದ್ದಿತು. ಭೂತಭೇತಾಳಗಳು ಪದ ಸ್ವರವಾಗಿ ಇರಿದು ಅಡುವ ಆಟದಿಂದಲೂ, ಪೂತಿನಿಯರು ಅಲೆದಾಡುತ್ತಾ ರಕ್ತವನ್ನು ಚೆಲ್ಲುವ ಕಾಟದಿಂದಲೂ, ನರಮಾಂಸವನ್ನು ಬೇಯಿಸುವ ರಾಕ್ಷಸರ ಗುಂಪಿನಿಂದಲೂ, ಪಿಶಾಚಿಗಳ ನಡುವೆ ಇಟ್ಟ ರಕ್ತ ತುಂಬಿದ ದೊಡ್ಡ ಮಡಕೆಯಿಂದಲೂ ಭಯಂಕರವಾಗಿ ಕಾಣುತ್ತಿತ್ತು. ಅಲ್ಲಿ ದಪ್ಪಶರೀರದ ಜಟ್ಟಿಗಳು ಕಂಗಳಿಂದ ಕಿಡಿಗಳನ್ನು ಕಾರುತ್ತಾ ಗರ್ಜಿಸುತ್ತಿದ್ದರು. ಅಸುರಮುನಿಗಳು ಉದ್ದವಾದ ಕರುಳ ಮಾಲೆಗಳನ್ನು ಧರಿಸಿದ್ದರು. ವೀರ ಡಾಕಿಣಿಯರು ಬ್ರಹ್ಮರಾಕ್ಷಸರೊಡನೆ

ಪುರುಷಾರ್ಥ ಸಿದ್ಧಿಯಂ ಪಡೆವಧಿಕಸಿದ್ಧರಿಂ
ಪರಮಾಯುಷಮಂ ಬಯಸುವತಿ ತಪೋವೃದ್ಧರಿಂ
ದೆಸೆವ ದುರ್ಗಾನಿಲಯಮಂ ಮಹೋದ್ಯೋಗದಿಂ
ವಸುಧಾಧಿಪಂ ಪೊಕ್ಕನತಿ ಮನೋರಾಗದಿಂ

ಉರಿಯಂ ಸೂಸುವ ಭಾಳನೇತ್ರಮಹಿರಾಜೋತ್ಕುಂಡಲಂ ಕ್ರೂರಭೀ
ಕರದಂಷ್ಟ್ರಾಂಕುರಮಸ್ತ್ರಶಸ್ತ್ರ ಭಯದೋದ್ಯತ್ಪಾಣಿ ಸನ್ಮೌಕ್ತಿಕಾ
ಭರಣಂ ಕೇಸರಿವಾಹನಂ ಮೃದುಜಟಾಸಂತಾನವೊಪ್ಪಿರ್ಪ ಭಾ
ಸುರ ದುರ್ಗಾಂಬಿಕೆಯಂ ನಮಸ್ಕರಿಸಿದಂ ವಿಕ್ರಾಂತಕಂಠೀರವಂ ೬

ವ॥ ಅಂತು ತಾನುಂ ಪುಷ್ಪೋದ್ಭವನುಂ ದುರ್ಗಾಂಬಿಕೆಗೆ ನಮಸ್ಕರಿಸಿ ಸ್ತೋತ್ರಜಪ ಧ್ಯಾನದಿಂ ಕಣ್ಗಳಂ ಮುಗಿದಿರ್ಪಾಗಳ್

ಚಂ॥ ಅತಿರಭಸೋನ್ಮುಖಂ ಬಹಳಕಾರ್ಯಧುರಂಧರನಪ್ರತರ್ಕ್ಯನು
ದ್ಧತರಿಪು ಸೈನ್ಯಸಾಗರ ಘಟೋದ್ಭವನೂರ್ಜಿತ ಭಾಗ್ಯವೈಭವಂ
ಕತಿಪಯಸೇನೆಯಂ ತಳೆದದೊರ್ಬ ಕುಮಾರಕನೊಲ್ದು ಮರ್ತ್ಯಸೇ
ವಿತೆಯೆನಿಸಿರ್ಪ ದುರ್ಗಿಗೆ ನಮಸ್ಕರಿಸಲ್ ಪದೆದಲ್ಲಿಗೆಯ್ದಿದಂ ೭

ನಕ್ಕು ನಲಿದಾಡುವ ಶಾಕಿನಿಯರೊಡನೆ ಸುಮ್ಮಾನದಿಂದ ನಡೆದಾಡುತ್ತಿದ್ದರು. ಕೊಬ್ಬಿದ್ದ ಕುರಿಗಳನ್ನು ಕತ್ತರಿಸಿ ಒತ್ತರಿಸಿ ಪಕ್ಕಕ್ಕೆ ಗುಡಿಸಿ ತಳ್ಳಿದ್ದರು. ಕಂಗಳನ್ನು ಅರ್ಧತೆರೆದ ಕೋಣನ ತಲೆಯ ತುಂಡುಗಳು ಬಿದ್ದಿದ್ದುವು. ಆ ದುರ್ಗಾಲಯವು ಪುರುಷಾರ್ಥ ಸಿದ್ಧಿಯನ್ನು ಬಯಸುವ ಶ್ರೇಷ್ಠರಾದ ಸಿದ್ಧರಿಂದಲೂ, ದೀರ್ಘಾಯುಷ್ಯವನ್ನು ಬಯಸುವ ಅತಿತಪೋವೃದ್ಧರಿಂದಲೂ ತುಂಬಿತ್ತು. ಹೀಗೆ ಪ್ರಕಾಶಿಸುವ ದುರ್ಗಾ ಮಂದಿರವನ್ನು ಮಹಾರಾಜನು ಅತ್ಯುತ್ಸಾಹದಿಂದಲೂ ಪ್ರೀತಿಯಿಂದಲೂ ಹೊಕ್ಕನು. ೬. ವಿಕ್ರಾಂತ ಕಂಠೀರವನಾದ ಮಹಾರಾಜನು ಪ್ರಕಾಶಮಾನಳಾದ ದುರ್ಗಾಂಬಿಕೆಗೆ ನಮಸ್ಕಾರ ಮಾಡಿದನು. ಅವಳ ಹಣೆಗಣ್ಣು ಉರಿಯನ್ನು ಸೂಸುತ್ತಿತ್ತು. ಸರ್ಪ ರಾಜನೇ ಅವಳ ಕರ್ಣಾಭರಣ. ಅವಳ ಕೋರೆಹಲ್ಲುಗಳು ಕ್ರೂರವೂ ಭಯಂಕರವೂ ಆಗಿದ್ದುವು. ಅವಳ ಮೇಲೆತ್ತಿದ ಕೈಗಳು ಅಸ್ತ್ರಶಸ್ತ್ರಗಳಿಂದ ಭೀಕರವಾಗಿದ್ದುವು. ಉತ್ತಮವಾದ ಮುತ್ತಿನ ಒಡವೆಗಳನ್ನು ಧರಿಸಿದ್ದಳು. ಅವಳ ವಾಹನ ಸಿಂಹ. ಮೃದುವಾದ ಜಟಾಸಂತಾನದಿಂದ ಶೋಭಿಸುತ್ತಿದ್ದಳು. ವ॥ ಆತನೂ ಪುಷ್ಪೋದ್ಭವನೂ ದುರ್ಗಾಂಬಿಕೆಗೆ ನಮಸ್ಕರಿಸಿ ಸ್ತೋತ್ರ ಜಪಧ್ಯಾನಗಳನ್ನು ಮಾಡುತ್ತಾ ಕಂಗಳನ್ನು ಮುಚ್ಚಿಕೊಂಡರು ಆಗ ೭. ಕುಮಾರನೊಬ್ಬನು ಕೆಲವು ಸೈನ್ಯದೊಡನೆ ದೇವತೆಗಳಿಂದ ಸೇವಿತಳಾದ ದುರ್ಗಿಗೆ ನಮಸ್ಕರಿಸಲು ಪ್ರೀತಿಯಿಂದ ಅಲ್ಲಿಗೆ ಬಂದನು. ಅವನು ಅತಿ ರಭಸದಿಂದ ಎದುರಾಗಿ ಬರುತ್ತಿದ್ದನು. ಅನೇಕ ಕೆಲಸಗಳ ಹೊರೆಯನ್ನು ಹೊತ್ತಿದ್ದನು. ಊಹಿಸಲಾಗದ ಶಕ್ತಿಯುಳ್ಳವನು. ಉದ್ಧತವಾದ ಶತ್ರುಸೇನೆಯೆಂಬ ಸಾಗರಕ್ಕೆ

ವ॥ ಅಂತೊರ್ವ ಕುಮಾರಕಂ ಬಂದು ದುರ್ಗಾಲಯದ ಪೊಱಗೆ ಪರಿವಾರಮಂ ನಿಲಿಸಿಯೊರ್ಬನೆ ಒಳಗಂ ಪೊಕ್ಕು

ಮ ಸ್ರ॥ ವಿಳಸದ್ಬಾಳಾಂಬಕಂ ಭಾಸುರಮಣಿಮಕುಟಂ ಷೋಡಶೋದ್ಯದ್ಭುಜಂ ನಿ
ರ್ಮಳಚಂಚತ್ಕುಂಡಲಂ ಕುಂಕುಮಮಳಯಜಕಸ್ತೂರಿಕಾಲಿಪ್ತ ವಕ್ಷ
ಸ್ಸ್ಥಳವೊಪ್ಪಂಬೆತ್ತ ದುರ್ಗಾಂಘ್ರಿಗೆ ನಲಿದು ನಮಸ್ಕಾರಮಂ ಮಾಡಿದಂ ನಿ
ಶ್ಚಳಚಿತ್ತಂ ಭಕ್ತಿಯಿಂ ಕೌತುಕಮೆನಿಪ ಮಹಾಸ್ತೋತ್ರದಿಂದಾರ್ಯಪುತ್ರಂ ೮

ವ॥ ಅಂತು ನಮಸ್ಕರಿಸಿಯಿಂತೆಂದಂ

ಸ್ವಾಗತೆ

ಕಂ॥ ರಾಜವಾಹನ ನೃಪಾಲಕನಂ ನಿ
ರ್ವ್ಯಾಜದಿಂ ಪಡೆದು ಕಂಡೊಡೆ ನಿನ್ನಂ
ಪೂಜಿಪೆಂ ಬಹಳ ಮೌಕ್ತಿಕದಿಂದಂ
ಭೋಜನೇತ್ರೆ ವನದುರ್ಗಿ ನಿತಾಂತಂ ೯

ವ॥ ಎಂದು ಪರಸಿಕೊಳ್ವಾಮಾತಂ ರಾಜವಾಹನಂ ಕೇಳ್ದು

ಕಂ॥ ಬೆಡಗಿದುವೆ ಸೋಮದತ್ತನ
ನುಡಿಯವೊಲಿರ್ದಪುದೆನುತ್ತುಮಲರ್ಗಣ್ಗಡೆಯಿಂ
ಪೊಡವಿಪತಿ ತೆಱೆದು ನೋಡಿದ
ನಡಿಗಡಿಗುಣ್ಮಲ್ಕೆ ಬಹಳತನುಪುಳಕಂಗಳ್ ೧೦

ದ್ರೋಣ ಅಗಸ್ತ್ಯನಾಗಿದ್ದನು. ಶ್ರೇಷ್ಠವಾದ ಭಾಗ್ಯದ ವೈಭವದಿಂದ ಕೂಡಿದ್ದನು. ವ॥ ಹಾಗೆ ಒಬ್ಬ ಕುಮಾರನು ಬಂದು ದುರ್ಗಾಲಯದ ಹೊರಗಡೆ ಪರಿವಾರವನ್ನೆಲ್ಲ ನಿಲ್ಲಿಸಿ ಒಬ್ಬನೇ ಒಳಹೊಕ್ಕನು. ೮. ಹೊಳೆಯುವ ಹಣೆಗಣ್ಣುಳ್ಳ ಪ್ರಕಾಶಮಾನವಾದ ರತ್ನಕಿರೀಟವನ್ನು ಧರಿಸಿದ, ಮೇಲೆತ್ತಿದ ಹದಿನಾರು ಕೈಗಳುಳ್ಳ ನಿರ್ಮಲವಾದ ಅಲುಗಾಡುವ ಕುಂಡಲಗಳನ್ನು ಹೊಂದಿದ, ಕುಂಕುಮ, ಗಂಧಕಸ್ತೂರಿ ಇವುಗಳನ್ನೂ ಹಚ್ಚಿದ ವಕ್ಷಃಸ್ಥಳವುಳ್ಳ, ದುರ್ಗಾದೇವಿಯ ಪಾದಗಳಿಗೆ ಕುಮಾರನು ನಲಿದು ನಿಶ್ಚಲಮನಸ್ಸಿನಿಂದ, ಕೌತುಕವನ್ನುಂಟುಮಾಡುವ ಭಕ್ತಿಯಿಂದ ಮಹಾಸ್ತೋತ್ರಗಳನ್ನು ಹೇಳುತ್ತಾ ನಮಸ್ಕಾರಮಾಡಿದನು. ವ॥ ಹಾಗೆ ನಮಸ್ಕರಿಸಿ ಹೀಗೆ ಹೇಳಿದನು– ೯. "ಕಮಲದಂತೆ ಕಂಗಳುಳ್ಳ ವನದುರ್ಗಿಯೇ! ನಾನು ರಾಜವಾಹನ ರಾಜನನ್ನು ಯಾವ ಅಡ್ಡಿಯೂ ಇಲ್ಲದೆ ನೋಡಿದೆನಾದರೆ ನಿನ್ನನ್ನು ಅನೇಕ ಮುತ್ತುಗಳಿಂದ ಪೂಜಿಸುವೆನು" ವ॥ ಎಂದು ಹರಸಿಕೊಂಡನು. ಆ ಮಾತನ್ನು ರಾಜವಾಹನನು ಕೇಳಿ ೧೦. ಮಾತಿನ ರೀತಿಯನ್ನು ನೋಡಿದರೆ ಇದಂ ಸೋಮದತ್ತನ ಮಾತಿನ ಹಾಗೆ ಕಾಣುತ್ತದೆ ಎಂದು ಹೇಳುತ್ತಾ ತನ್ನ ಅಲರ್ಗಣ್ಗಳ ತುದಿಯಿಂದ ನೋಡಿದನು. ಆಗ ಅವನ ಶರೀರದಲ್ಲಿ ಅಡಿಗಡಿಗೆ ರೋಮಾಂಚವು ಹೊರಸೂಸಿತು,

ವ॥ ಅಂತು ಧ್ಯಾನಮಂ ಬಿಟ್ಟು ಕಣ್ದೆಱೆದು ನೋಡಿ

ಕಂ॥ ಇದಪೂರ್ವದರ್ಶನಂ ಸೋ
ಮದತ್ತನಂ ಕಂಡೆನೆಂಬ ಮಾತಂ ಕೇಳ್ದು
ಬೞಿದ ನಯನಜಲದೊಳಾತಂ
ಪದಕಮಳಕ್ಕೆಱಗಿ ಬೞಿಕ ನಲಿದೀಕ್ಷಿಸಿದಂ ೧೧

ವ॥ ಅಂತು ಸೋಮದತ್ತಂ ರಾಜವಾಹನನ ಮುಖಕಮಲಮಂ ನೋಡಿ

ಕಂ॥ ಇಂದೆನಗೆ ಭಾಗ್ಯದೇವತೆ
ತಂದಿತ್ತಳೆದೇವ ನಿಮ್ಮ ಪದಕಮಳಮನೆಂ
ದ್ದಂದೊಲ್ದು ಸೋಮದತ್ತಂ
ವಂದಿಸಿದಂ ಮಗುಳ್ದು ಮಗುಳ್ದು ನೃಪತಿಗಲಂಪಿಂ ೧೨

ವ॥ ಅಂತು ವಂದಿಸುವುದುಂ ರಾಜವಾಹನಂ ಸೋಮದತ್ತನಂ ತಟ್ಕೈಸಿಕೊಂಡು ಪತ್ತಿರೆ ಕುಳ್ಳಿರಿಸಿ

ಕಂ॥ ಈ ರಾಜ್ಯಪದವಿದೆತ್ತಣ
ದೀರಭಸಂಗೆಯ್ವ ಸೇನೆಯೆತ್ತಣ್ತೆನುತುಂ
ಆ ರಾಜಸೂನು ಬೆಸಗೊಳ
ಲೋರಂತಿರೆ ಸೋಮದತ್ತನುಸಿರಲ್ ಬಗೆದಂ ೧೩

ವ॥ ಧ್ಯಾನವನ್ನು ತೊರೆದು ಕಣ್ಣುಗಳನ್ನು ತರೆದು ನೋಡಿ ೧೧. 'ಇದು ಅಪೂರ್ವವಾದ ದರ್ಶನ. ಸೋಮದತ್ತನನ್ನು ಕಂಡೆನು' ಎಂದು ಹೇಳಿದನು. ಆ ಮಾತನ್ನು ಕೇಳಿ ಸೋಮದತ್ತನು ಕಂಗಳಿಂದ ಆನಂದಬಾಷ್ಪವನ್ನು ಸುರಿಸುತ್ತಾ ರಾಜವಾಹನನ ಪಾದ ಕಮಲಗಳಿಗೆ ಎರಗಿದನು. ಬಳಿಕ ಪ್ರೀತಿಯಿಂದ ನೋಡಿದನು. ವ॥ ಸೋಮದತ್ತನು ರಾಜವಾಹನನ ಮುಖಕಮಲವನ್ನು ನೋಡಿ ೧೨. 'ದೇವ! ಇಂದು ನನಗೆ ನನ್ನ ಭಾಗ್ಯದೇವತೆಯು ನಿಮ್ಮ ಪದಕಮಲವನ್ನು ತಂದುಕೊಟ್ಟಳು.' ಎಂದು ಹೇಳುತ್ತಾ ಪ್ರೀತಿಯಿಂದ ಮತ್ತೆ ಮತ್ತೆ ರಾಜವಾಹನ ಮಹಾರಾಜನಿಗೆ ನಮಸ್ಕಾರ ಮಾಡಿದನು. ವ॥ ರಾಜವಾಹನನು ನಮಸ್ಕರಿಸಿದ ಸೋಮದತ್ತನನ್ನು ತಬ್ಬಿಕೊಂಡು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ೧೩. "ಈ ರಾಜ್ಯಪದವು ಎಲ್ಲಿಯದು? ಈ ರಭಸದಿಂದ ಚಲಿಸುವ ಸೇನೆಯು ಎಲ್ಲಿಯದು?" ಎಂದು ಅವನನ್ನು ಪ್ರಶ್ನಿಸಿದನು. ಅದನ್ನು ಕೇಳಿ ಸೋಮ

ಉ॥ ದೇವರ ಪಾದಪಲ್ಲವಮನೆಣ್ದೆಸೆಯೊಳ್ ಪದೆದೀಕ್ಷಿಸುತ್ತೆ ನಾಂ
ಭೂವಳಯಕ್ಕೆ ದರ್ಪಣಮೆನಿಪ್ಪ ಲಸತ್ಕುಸುಮಾಪುರ ಪ್ರದೇ
ಶಾವನಿಯೊಳ್ ಬರುತ್ತುಮಿರೆ ಮುಂದೆ ಪಸುರ್ದ್ದಳಿರ್ದೊಂಗಲಿಂದೆ ಶೋ
ಭಾವಹಮಪ್ಪುದೊಂದು ವನಮಿರ್ದುದು ಕೇಳ್ ಭುವನಾಧಿನಾಯಕಾ ೧೪

ವ॥ ಆ ವನಮನೆಯ್ದ್ದಲದಱೊಳಗೆ

ಚಂ॥ ಉದಯಗಿರೀಂದ್ರದೊಳ್ ದಿನಕರಂ ಪದೆಪಿಂದುದಯಿಪ್ಪನೆಂಬ ಮಾ
ತದು ಪುಸಿಯೆಂಬಿನಂ ಕಿರಣಜಾಲದಿನೆಣ್ದೆಸೆಯಂಧಕಾರಮಂ
ಬೆದಱಿಸುತಿರ್ಪುದೊಂದು ಪೊಸಮಾಣಿಕಮೆನ್ನಿದಿರಲ್ಲಿ ಬಿಟ್ದಿರ
ಲ್ಕಿದು ಪೊಸತಾವ ಕಾರಣದಿನಿಲ್ಲಿಗೆ ಬಂದುದೆನುತ್ತೆ ನೋಡಿದೆಂ ೧೫

ಕಂ॥ ಇದು ಮಾಂಸಖಂಡಮೆಂದೋ
ವದೆ ಗಿಡುಗಂ ತಂದು ಬಿಸುಟುದೋ ಪದೆಪಿಂ ಮೇ
ಣಿದಮೂಲ್ಯಮೆಂದು ದೈವಂ
ಮುದದಿಂದೆನಗಿತ್ತುದೋ ಎನುತೀಕ್ಷಿಸಿದೆಂ ೧೬

ವ॥ ಅಂತು ನೋಡಿ

ಕಂ॥ ಫಣಿರಾಜವಿಶಾಲಲಸ
ತ್ಫಣಾಗ್ರದಂತೆಸೆವ ಹಸ್ತಕಂಕಣದೊಳ್ ಕೇ
ವಣಿಸಲ್ತಕ್ಕುದೆನುತ್ತಾ
ಮಣಿಯಂ ತೆಗೆದೆಂ ನೃಪಾಲಕುಲಮಣಿದೀಪಾ ೧೭

ದತ್ತನು ಉತ್ತರಿಸಲು ಮನಸ್ಸು ಮಾಡಿದನು. ೧೪. "ಪ್ರಪಂಚದೊಡೆಯನೇ ! ಕೇಳು. ನಾನು ಎಂಟುದಿಕ್ಕುಗಳಲ್ಲಿಯೂ ಸ್ವಾಮಿಯ ಪಾದ ಪಲ್ಲವವನ್ನು ಹುಡುಕುತ್ತಾ ಭೂಮಂಡಲಕ್ಕೆ ಕನ್ನಡಿಯಾದ ಪ್ರಕಾಶಮಾನವಾದ ಕುಸುಮಾಪುರದ ಪ್ರದೇಶದಲ್ಲಿ ಬರುತ್ತಿದ್ದೆನು. ಅಗ ಮುಂದೆ ಹಸುರಾದ ತಳಿರ ಗೊಂಚಲುಗಳಿಂದ ಸುಂದರವಾದ ಒಂದು ವನವಿದ್ದುದನ್ನು ಕಂಡೆನು. ವ॥ ಆ ವನದೊಳಕ್ಕೆ ಹೋಗಿ ಅದರಲ್ಲಿ ೧೫. 'ಶ್ರೇಷ್ಠವಾದ ಉದಯಗಿರಿಯಲ್ಲಿ ಸೂರ್ಯನು ಪ್ರೀತಿಯಿಂದ ಉದಯಿಸುತ್ತಾನೆ' ಎಂಬ ಮಾತು ಸುಳ್ಳು-ಎಂಬ ಹಾಗೆ ತನ್ನ ಕಿರಣ ಜಾಲದಿಂದ ಎಂಟು ದಿಕ್ಕುಗಳ ಕತ್ತಲೆಯನ್ನೂ ಹೆದರಿಸಿ ಓಡಿಸುತ್ತಿರುವ ಒಂದು ಹೊಸದಾದ ಮಾಣಿಕ್ಯವು ನನ್ನ ಎದುರಿನಲ್ಲಿ ಬಿದ್ದಿದ್ದಿತು. 'ಇದು ಹೊಸಬಗೆ. ಯಾವಕಾರಣದಿಂದ ಇಲ್ಲಿಗೆ ಬಂದಿದೆ ?'-ಎಂದು ಅದನ್ನು ದಿಟ್ಟಿಸಿ ನೋಡಿದೆನು. ೧೬. 'ಇದನ್ನು ಮಾಂಸ ಖಂಡವೆಂದು ತಿಳಿದು ಗಿಡುಗನು ಆಶೆಯಿಂದ ಎತ್ತಿ ತಂದು ಹಾಕಿದೆಯೋ! ಅಥವಾ ಅಮೂಲ್ಯವಾದುದೆಂದು ದೈವವೇ ನನಗೆ ಮುದದಿಂದ ಇತ್ತಿದೆಯೋ !' ಎಂದು ಅದನ್ನು ನೋಡಿದೆನು. ವ॥ ಹಾಗೆ ನೋಡಿ ೧೭. ರಾಜಕುಲಕ್ಕೆ ಮಣಿದೀಪವಾದ ಮಹಾರಾಜನೆ! ನಾಗರಾಜನ ವಿಶಾಲವಾದ ಹೊಳೆಯುವ ಹೆಡೆಯ ತುದಿಯಂತೆ ಪ್ರಕಾಶಿಸುವ ಕೈಬಳೆ

ವ॥ ಅಂತಾಮಾಣಿಕಮಂ ಕೊಂಡು ಬರ್ಪಾಗಳ್

ಕಂ॥ ತನಗೆ ಮಣಿ ದೊರಕದೆಂಬೊಂ
ದನುತಾಪದೆ ತಪನನೆಯ್ದಿದನೊ ಶರನಿಧಿಗೆಂ
ಬಿನಮೊಸೆವ ರಾಗದಿಂ ಭೋಂ
ಕೆನಲಪರಾಂಭೋಧಿಗಿೞಿದನಬ್ಜಸಹಾಯಂ ೧೮

ವ॥ ಅಂತು ಸೂರ್ಯನಸ್ತಮಾನವಾಗಲೊಡಂ

ಚಂ॥ ತೊಟಲ್ವ ಭಟರ್ಕಳಬ್ಬರಣೆ ಕುಂಜರಬೃಂಹಿತಮಶ್ವಹೇಷಿತಂ
ಪಲವು ಪದಾತಿ ವಾದ್ಯರವಮುತ್ಪಲಕಸ್ಫುಟ ತಾಡನಸ್ವನಂ
ಜಲಧರವೇಂಬೊಲೆನ್ನ ಕಿವಿಗೆಯ್ತರಲಾಂ ಪದೆದೊಂದು ವಾಹಿನೀ
ಕಳಕಳಮೆಂದು ನಿಶ್ಚಯಿಸಿದೆಂ ಬಗೆಯೊಳ್ ನೃಪರೂಪ ಮನ್ಮಥಾ ೧೯

ವ॥ ಅಂತಾ ಕಳಕಳವಂ ಕೇಳ್ದಾರಾತ್ರಿಯೊಳೊರ್ಬನೆ ಪಾಳೆಯಮಂ ಪುಗುವುದುಂ ಪಾಳೆಯವೇಟ್ತಂದು . . . . . . . . . ಕುಸುಮಪುರದ ಪೊಱವೊಟಲ ದೇವಾಲಯದೊಳ್ ನಿದ್ದೆಗೆಯ್ದು ಬೆಳಗಾಗಲೊಡಂ

ಉ॥ ಇಕ್ಕಿದ ಯಜ್ಞಸೂತ್ರವೆರಡುಂ ಕರದೊಳ್ ಪೊಸದರ್ಭೆ ಕೌಂಕುೞೊಳ್
ಸೆಕ್ಕಿದ ಪುಸ್ತಕಂ ಪಿಡಿದ ಪೀಲಿಯ ನುಣ್ಗೊಡೆಯುಟ್ಟ ಧೋತ್ರಮೆ
ಯ್ದುಕ್ಕುೞಿಸಿರ್ದ ಕುಕ್ಷಿ ನಡುಕಂ ಮಿಗುವಂಗಮಗುರ್ಬಿಸುತ್ತಿರಲ್
ಚಿಕ್ಕನೆ ಬಂದನೊರ್ವಂ ಬಡಪಾರ್ವನರಾತಿ ಚಮೂಭಯಂಕರಾ ೨೦

ಯಲ್ಲಿ ಕೂಡಿಸಲು ತಕ್ಕುದು ಎಂದು ಯೋಚಿಸಿ ಆ ಮಾಣಿಕ್ಯವನ್ನು ತೆಗೆದುಕೊಂಡೆನು. ವ॥ ಆ ಮಾಣಿಕ್ಯವನ್ನು ತೆಗೆದುಕೊಂಡು ಬರುತ್ತಿರುವಾಗ ೧೮. ತನಗೆ ಮಣಿಯು ದೊರಕದು ಎಂಬ ಅನುತಾಪದಿಂದ ಸೂರ್ಯನು ಸಮುದ್ರದಲ್ಲಿಳಿದನೋ ಎಂಬಂತೆ ಸೂರ್ಯನು ಕೂಡಲೆ ಕೆಂಪಾಗಿ ಪಶ್ಚಿಮ ಸಮುದ್ರದಲ್ಲಿ ಮುಳುಗಿದನು. ವ॥ ಹಾಗೆ ಸೂರ್ಯನು ಮುಳುಗಲು—೧೯. ರಾಜ ರೂಪದ ಮನ್ಮಥನೇ ! ಕೇಳು ! ಸಂಚರಿಸುವ ಸೈನಿಕರ ಅಬ್ಬರದ ದನಿ, ಆನೆಗಳ ಘೀಂಕಾರ, ಕುದುರೆಗಳ ಕೆನೆತ, ಹಲವು ಪದಾತಿ ಸೈನ್ಯದ ವಾದ್ಯ ಧ್ವನಿ, ಸ್ಫುಟವಾಗಿ ಕೇಳಿಸುವ ತಮಟೆಯ ಶಬ್ದ—ಇವು ಮೋಡದ ಗುಡುಗಿನ ದನಿಯಂತೆ ನನ್ನ ಕಿವಿಯನ್ನು ಪ್ರವೇಶಿಸಲು ನಾನು ಇದು ಬಂದು ಸೇನೆಯ ಕಳಕಳ ಧ್ವನಿಯೆಂದು ನಿಶ್ಚಯಿಸಿದೆನು. ವ॥ ಆ ಕಳಕಳ ಧ್ವನಿಯನ್ನು ಕೇಳಿ ಆ ರಾತ್ರಿಯಲ್ಲಿ ಒಬ್ಬನೇ ಪಾಳೆಯವನ್ನು ಹೊಕ್ಕೆನು. ಅನಂತರ ಪಾಳೆಯದಿಂದ ಹೊರಟು.... ಕುಸುಮಪುರದ ಊರ ಹೊರಗಿನ ದೇವಾಲಯದಲ್ಲಿ ನಿದ್ದೆಮಾಡಿದೆನು. ಬೆಳಗಾದ ಕೂಡಲೆ ೨೦. ಶತ್ರುಸೈನ್ಯ ಭಯಂಕರನೇ ! ಕೇಳು. ಒಬ್ಬ ಬಡಬ್ರಾಹ್ಮಣನು ಅಲ್ಲಿಗೆ ಬಂದನು. ಅವನು ಜನಿವಾರವನ್ನು ಹಾಕಿಕೊಂಡಿದ್ದನು. ಕೈಯ್ಯಲ್ಲಿ ಹೊಸ ದರ್ಭೆಯನ್ನು ಹಿಡಿದಿದ್ದನು. ಕಂಕುಳಲ್ಲಿ ಪುಸ್ತಕವನ್ನು ಸಿಕ್ಕಿಸಿಕೊಂಡಿದ್ದನು. ನವಿಲುಗರಿಯ

ವ॥ ಅಂತೊರ್ಬಂ ಬಡಪಾರ್ವಂ ದಾನಾರ್ಥಿಯಾಗಿ ಬಂದು ದಾನಮಂ ಬೇಡಲೊಡಂ ಕಂಡು

ಕಂ॥ ಕುಡುವನೊ ಕುಡನೋ ಎನುತುಂ
ನಡುನಡುಗುತ್ತಂಜಿ ಬಂದು ಬೇಡ್ಪವನಿಂದಂ
ಕುಡದಿರ್ಪವನತಿಕಷ್ಟಂ
ಪೊಡವಿಯೊಳೆಂಬುಕ್ತಿಯಂ ವಿಚಾರಿಸಿ ಬಱಿಯಂ ೨೧

ಅಪ್ರತಿದಾನವೆನುತ್ತುಂ
ಸುಪ್ರೀತಿಯೊಳೆನ್ನ ಕೆಯ್ಯ ಮಾಣಿಕವಂ ತ
ದ್ವಿಪ್ರಂಗೆ ಕೊಟ್ಟು ಪದಪ
ದ್ಮಪ್ರಣತ ಶರೀರನಾದೆನವನಿಪತಿಲಕಾ ೨೨

ವ॥ ಅಂತು ಬ್ರಾಹ್ಮಣಂಗೆ ರತ್ನಮಂ ಕುಡಲಾತಂ

ಚಂ॥ ತನು ನಯುವೇಱಿ ವಕ್ತ್ರಕಮಲಂ ಸುವಿಕಾಸಮನೆಯ್ದೆ ಚಿತ್ತಸಂ
ಜನಿತಮುದಂ ಕವಲ್ವರಿಯೆ ವಿಸ್ಮಯಸಂಭ್ರಮಮುರ್ವೆ ಭೂಸುರಂ
ಮನವೊಸೆದೆನ್ನನೊಲ್ದು ಪರಸುತ್ತನುರಾಗದೊಳಿತ್ತ ದಾನದಿಂ
ನಿನಗೆ ಶುಭೋದಯಂ ಮಿಗುಗೆನುತ್ತೊಲವಿಂ ತಳರ್ದಂ ಮಹೀಪತೀ ೨೩

ವ॥ ಅಂತಾ ಬ್ರಾಹ್ಮಣನೆನ್ನಂ ಪರಸಿ ರತ್ನಮಂ ಕೊಂಡು ಪೋಗಿಯಾಂ ಮುನ್ನ ಕಳಕಳವಂ ಕೇಳ್ದ ಪಾಳೆಯಮಂ ಪೊಕ್ಕು

ಕೊಡೆಯನ್ನು ಹಿಡಿದಿದ್ದನು. ಧೋತ್ರವನ್ನುಟ್ಟಿದ್ದನು. ಹೊಟ್ಟೆಯು ಹಿಂದಕ್ಕೆ ಸೇದಿ ಹೋಗಿತ್ತು. ಅವಯವಗಳು ನಡುಗುತ್ತಿದ್ದುವು. ಅವನ ಆಕಾರವು ಭಯಂಕರವಾಗಿದ್ದಿತು. ವ॥ ಹೀಗೆ ಒಬ್ಬ ಬಡಬ್ರಾಹ್ಮಣನು ದಾವನ್ನು ಬೇಡುವುದಕ್ಕಾಗಿ ಬಂದು ದಾನವನ್ನು ಬೇಡಿದನು. ಅದನ್ನು ನೋಡಿ ನಾನು—೨೧. "ಕೊಡುವನೋ ಕೊಡುವುದಿಲ್ಲವೋ ಎಂದು ನಡುನಡುಗುತ್ತಾ ಹೆದರಿ ಬಂದು ಬೇಡುವವನನ್ನು ನೋಡಿ ಈ ಲೋಕದಲ್ಲಿ ಕೊಡದೇ ಇರುವವನು ಅತಿಕಷ್ಟವನ್ನನುಭವಿಸಬೇಕಾಗುತ್ತದೆ ಎಂಬ ನಾಣ್ಣುಡಿಯು ಬಳಕೆಯಲ್ಲಿದೆ" ಇದನ್ನಾಲೋಚಿಸಿ ಬಳಿಕ—೨೨. ಅವನಿಪತಿತಿಲಕನೇ ! ದಾನಕ್ಕೆ ಪ್ರತಿದಾನದ ಅಪೇಕ್ಷೆಯಿಲ್ಲ ಎಂದು ಹೇಳುತ್ತಾ ನನ್ನ ಕೈಯ್ಯಲ್ಲಿದ್ದ ಮಾಣಿಕ್ಯವನ್ನು ಆ ಬ್ರಾಹ್ಮಣನಿಗೆ ಕೊಟ್ಟು ಅವನ ಪಾದಕಮಲಗಳಿಗೆ ನಮಸ್ಕಾರಮಾಡಿದೆನು. ವ॥ ಹೀಗೆ ನಾನು ಆ ಬ್ರಾಹ್ಮಣನಿಗೆ ರತ್ನವನ್ನು ಕೊಟ್ಟೆನು. ಆಗ ೨೩. ರಾಜನೇ ! ಆತನ ಶರೀರವು ಪುಳಕಿತವಾಯಿತು. ಮುಖ ಕಮಲವು ಅರಳಿತು. ಮನಸ್ಸಿನಲ್ಲಿ ಆನಂದವು ಕವಲಾಗಿ ಹರಿಯಿತು. ಆಶ್ಚರ್ಯವೂ ಸಂಭ್ರಮವೂ ಹೆಚ್ಚಿತು. ಬ್ರಾಹ್ಮಣನು ಮನಃಪೂರ್ವಕವಾಗಿ ಪ್ರೀತಿಯಿಂದ 'ಅನುರಾಗದಿಂದ ಕೊಟ್ಟ ದಾನದಿಂದ ನಿನಗೆ ಅಮಿತವಾದ ಶುಭೋದಯವಾಗಲಿ' ಎಂದು ಹರಸಿ ಹೊರಟುಹೋದನು. ವ॥ ಹಾಗೆ ಆ ಬ್ರಾಹ್ಮಣನು ನನ್ನನ್ನು ಹರಸಿ ರತ್ನವನ್ನು ತೆಗೆದುಕೊಂಡು ಹೋದನು. ನಾನು

ಕಂ॥ ಭಾಂದಸನಧಿಕದರಿದ್ರಂ
ಮಂದಂ ಜಿಹ್ವಾನಲಂಪಟಂ ಗತಭಾಗ್ಯಂ
ಸೌಂದರರತ್ನಮನವರವ
ರ್ಗಂದೊಲವಿಂ ಮಾಱಲೆಂದು ತೋಱಿದನರಸಾ ೨೪

ವ॥ ಅಂತಾರತ್ನಮನವರವರ್ಗೆ ತೋಱುದುಂ

ಕಂ॥ ಈ ಪಾರ್ವಂಗೀರತ್ನಮ
ದೀಪರಿಯಿಂ ಬಪ್ಪುದರ್ಕೆ ಕಾರಣಮೇನೆಂ
ದಾ ಪಾಳೆಯದೊಳ್ ತೊಳಲ್ವ ಮ
ಹಾಪಿಶುನರ್ ಪಿಡಿದು ಕಟ್ಟಿದರ್ ಕಡುಬೇಗಂ ೨೫

ವ॥ ಅಂತಾ ಪಾರ್ವನಂ ನಿರ್ಬಂಧಿಸುವುದುಮಾತಂ ಕೊಟ್ಟಾತನ ತೋರ್ಪೆನೆಂದೆನ್ನ ನವರ್ಗೆ ತೋಱುದುಂ

ಮ॥ ಅಱುವರ್ ಕಳ್ಳರ ಕೂಡಲಾತನಿವನಂ ಕಟ್ಟಾರ್ಪಿನಿಂ ಮಾಣಿಕಂ
ಕುರುಪಾಯ್ತೆಂದು ಕೆಲಂಬರೆನ್ನನದಟಿಂ ಕಾರಾಗೃಹಕ್ಕುಯ್ದು ಕಾ
ಲ್ಕೊಱೆವಂತಾಸುರವಪ್ಪಿನಂ ನಿಗಡಮಂ ಸಾರ್ಚಲ್ಕಿದೇನೆಂದು ಸೈ
ವೆಱಗಾಗಿರ್ದೆನದಲ್ತೆ ಪೂರ್ವವಿಧಿಯಂ ಮೀಱಲ್ಕದೇಂ ಬರ್ಕುಮೇ ೨೬

ಮೊದಲು ಕಳಕಳ ಶಬ್ದವನ್ನು ಕೇಳಿದ ಪಾಳಯವನ್ನು ಹೊಕ್ಕೆನು—೨೪. ಅರಸನೇ ! ಕೇಳು ಕಡುಬಡವನಾದ, ಮಂದಬುದ್ಧಿಯುಳ್ಳ, ಚಾತುರ್ಯದಿಂದ ಮಾತನಾಡಲು ಬಾರದ, ಭಾಗ್ಯಹೀನನಾದ ಆ ಬ್ರಾಹ್ಮಣನು ಸುಂದರವಾದ ಆ ರತ್ನವನ್ನು ಮಾರುವುದಕ್ಕಾಗಿ ಅಲ್ಲಿದ್ದವರಿಗೆಲ್ಲಾ ಒಲವಿನಿಂದ ತೋರಿಸಿದನು. ವ॥ ಹಾಗೆ ಆ ರತ್ನವನ್ನು ಅಲ್ಲಿದ್ದವರಿಗೆ ತೋರಿಸಲು. ೨೫. 'ಈ ಬ್ರಾಹ್ಮಣನಿಗೆ ಈ ರತ್ನವು ಹೇಗೆ ಸಿಕ್ಕಿತು. ಇದಕ್ಕೆ ಕಾರಣವೇನು ?' ಎಂದು ಆ ಪಾಳೆಯದಲ್ಲಿ ಸಂಚರಿಸುವ ಚಾಡಿಕೋರರು ಅವನನ್ನು ಬೇಗ ಹಿಡಿದು ಕಟ್ಟಿಹಾಕಿದರು. ವ॥ ಆ ಬ್ರಾಹ್ಮಣನನ್ನು ಕಟ್ಟಿಹಾಕಲು ಅವನು 'ನನಗೆ ಇದನ್ನು ಕೊಟ್ಟವನನ್ನು ತೋರಿಸುವೆನು' ಎಂದು ಹೇಳಿ ನನ್ನನ್ನು ಅವರಿಗೆ ತೋರಿಸಿದನು. ೨೬. "ಆರು ಜನ ಕಳ್ಳರೊಡನೆ ಈತನೂ ಸೇರಿದವನು. ಇವನನ್ನು ಬಲವಾಗಿ ಕಟ್ಟು ! ಮಾಣಿಕ್ಯದ ಗುರುತು ಸಿಕ್ಕಿತು" ಎಂದು ಕೆಲವರು ನನ್ನನ್ನು ಕಾರಾಗೃಹಕ್ಕೆ ಕರೆದುಕೊಂಡು ಹೋಗಿ ಕಾಲು ಕೊರೆಯುವಂತೆ ಬಿಗಿಯಾಗಿ ಸಂಕೋಲೆಯನ್ನು ಬಿಗಿದರು. ಇದೇನು ಗ್ರಹಚಾರವೆಂದು ಆಶ್ಚರ್ಯಚಕಿತನಾದೆನು. ಅಲ್ಲದೆ ಜನ್ಮಾಂತರದ

ವ॥ ಅಂತೆನ್ನಂ ಸಂಕಲೆಯನಿಕ್ಕಿ ಮಾಣಿಕವಂ ಕೊಂಡಾ ಬ್ರಾಹ್ಮಣನಂ ಬಿಟ್ಟರ್ ಇತ್ತಲಾಂ ಕಾರಾಗೃಹದೊಳಗೆ

ಕಂ॥ ಮೆಯ್ಗಳ್ ಬೆಳರ್ತುಂ ಕಾಲ್ಗಳ್
ಕೆಯ್ಗಳ್ ಬಡವಾಗಿ ಕುಱುಕು ಪತ್ತಿದ ಪುರ್ಬಿಂ
ಬಾಯ್ಗ್ಗಡಸಿದ ಕಿಣವಲ್ಲಿಂ
ಸುಯ್ಗೊಳಗಾಗಿರ್ದರಲ್ಲಿ ಸಂಕಲೆಯವರ್ಗಳ್ ೨೭

ವ॥ ಅಂತು ಸಂಕಲೆಯಲ್ಲಿರ್ದಱುವರಂ ಕಂಡು ನೀವಾರೆತ್ತಣವರೆಂದಾಂ ಬೆಸಗೊಳ್ವುದುಂ

ಕಂ॥ ಕುಸುಮಪುರಿಗೊಪ್ಪುವರಸಂ
ಕುಸುಮಾಯುಧಮೂರ್ತಿ ಧರ್ಮಶೇಖರನೆಂಬಂ
ಕುಸುಮಾವತಿಯಂ ಪಡೆದಂ
ಕುಸುಮಂ ಪರಿಮಳಮನೊಲ್ದು ಪಡೆವವೊಲಾತಂ ೨೮

ವ॥ ಅಂತಾ ಕುಸುಮಪುರದೊಡೆಯನಪ್ಪ ಧರ್ಮಶೇಖರನ ಮಗಳಂ ಲಲಿತಪುರದ ದೀರ್ಘಬಾಹುಕಂ ಬೇಡೆ ಧರ್ಮಶೇಖರಂ ಕುಡದಿರ್ಪುದುಮಾ ದೀರ್ಘಬಾಹುಕಂ ಬಲ್ಪಿಂ ಕೊಳಲೆಂದು

ಕಂ॥ ಕುಸುಮಾವತಿಯಂ ಕೊಳಲೆಂ
ದು ಸೇನೆಯಂ ನೆಱಪಿ ದೀರ್ಘಬಾಹುಕನಾಗಳ್
ಕುಸುಮಪುರದರಸನಂ ಮು
ತ್ತಿ ಸಾಹಸಂ ಮೆಱೆವೆನೆಂದು ತಾನೇಟ್ಟಿಂದಂ ೨೯

ಕರ್ಮಗಳನ್ನು ಯಾರಿಗೂ ಮೀರಲು ಸಾಧ್ಯವಿಲ್ಲವಷ್ಟೆ. ವ॥ ನನಗೆ ಸಂಕೋಲೆಯನ್ನು ಹಾಕಿ ಮಾಣಿಕ್ಯವನ್ನು ತೆಗೆದುಕೊಂಡು ಆ ಬ್ರಾಹ್ಮಣನನ್ನು ಬಿಟ್ಟರು. ಇತ್ತ ನಾನು ಕಾರಾಗೃಹದಲ್ಲಿ (ಬಂಧಿತರಾದ ಆರು ಜನರನ್ನು ಕಂಡೆನು.) ೨೭. ಸಂಕೋಲೆಯಿಂದ ಬಂಧಿತರಾದ ಆ ಕಳ್ಳರ ದೇಹಗಳು ಬಿಳಿಚಿಕೊಂಡಿದ್ದುವು. ಕೈಕಾಲುಗಳು ಬಡವಾಗಿದ್ದುವು. ಹುಬ್ಬುಗಳು....ಕಿಣ ಹತ್ತಿದ ಹಲ್ಲುಗಳು ಬಾಯ್ಗೆ ಅಂಟಿಕೊಂಡಿದ್ದುವು. ನಿಟ್ಟುಸಿರುಬಿಡುತ್ತಿದ್ದರು. ವ॥ ಅವರನ್ನು ಕಂಡು 'ನೀವಾರು ? ನೀವು ಎತ್ತಣವರು ?' ಎಂದು ಕೇಳಿದೆನು. ಅವರು ಹೇಳಿದರು : ೨೮. "ಕುಸುಮಾಯುಧನಂತೆ ಆಕಾರವುಳ್ಳ ಧರ್ಮಶೇಖರನು ಕುಸುಮಪುರಿಗೆ ತಕ್ಕ ರಾಜನು. ಕುಸುಮವು ಪರಿಮಳವನ್ನು ಪಡೆಯುವಂತೆ ಆತನು ಕುಸುಮಾವತಿಯೆಂಬ ಪಟ್ಟಣವನ್ನು ಪಡೆದಿದ್ದನು. ವ॥ ಆ ಕುಸುಮಪುರಿಯ ಒಡೆಯನಾದ ಧರ್ಮಶೇಖರನ ಮಗಳನ್ನು ಲಲಿತಪುರದ ದೀರ್ಘಬಾಹುಕನು ಕೇಳಿದನು. ಧರ್ಮಶೇಖರನು ಕೊಡಲಿಲ್ಲ. ಆಗ ಆ ದೀರ್ಘಬಾಹುಕನು ಬಲಾತ್ಕಾರದಿಂದ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದನು. ೨೯. ದೀರ್ಘಬಾಹುಕನು ಕುಸುಮಾವತಿಯನ್ನು ವಶಪಡಿಸಿಕೊಂಡು ಕುಸುಮಪುರದರಸನನ್ನು ಮುತ್ತಿ ಸಾಹಸ

ವ॥ ಅಂತೆೞ್ತಂದು ದೀರ್ಘಬಾಹುಕನಲ್ಲಿ ಬಿಡಲೆಮ್ಮರಸನಪ್ಪ ಧರ್ಮಶೇಖರನೆಮ್ಮಂ ಕಂಡು

ಕಂ॥ ಧರೆಯೊಳಮೂಲ್ಯಂ ದನುಜಾ
ಮರಲೋಕದೊಳಿಲ್ಲೆನಿಪ್ಪ ಮಾಣಿಕವೇೞುಂ
ಟರಿನೃಪನ ಮನೆಯೊಳೆಂದೆ
ಮ್ಮರಸಂ ಕಳಲಟ್ಟಿದಂ ಬೞಿಕ್ಕಱುವರಮಂ ೩೦

ವ॥ ಅಂತಾಮಱುವರುಂ ಬಂದು

ಕಂ॥ ನವರತ್ನದ ಮನೆಯಂ ಕ
ನ್ನವಿಕ್ಕಿ ಮಾಣಿಕ್ಯವನುಯ್ವ ಪದದೊಳ್ ಕಾದಿ
ರ್ದವರಱಿದು ಪಿಡಿದು ಮಾಣಿ
ಕ್ಯವನಾಱಂ ಕಂಡರಱಸಿಯೊಂದಂ ಕಾಣರ್ ೩೧

ವ॥ ಅಂತಾವೇೞುಮಾಣಿಕವಂ ಕೊಂಡು ಪೋಗುತ್ತೆ ಸಿಕ್ಕುವಲ್ಲಿಯೊಂದು ಮಾಣಿಕ್ಯವಂ ಬೀೞಲಿಕ್ಕಿದೆವು ಅದು ದೈವಯೋಗದಿಂ ನಿನಗೆ ಬಂದುದಱಿಂ ನೀನೆಮ್ಮಂತು ಕಳ್ಳನಾದೆಯೆಂದವರ್ ಪೇೞ್ದು ಮತ್ತಂ

ಕಂ॥ ಕಳವಿಂ ಕುಸುಮಪುರೀಶಂ
ಗೆಲಲಿರ್ದಪನೆಮ್ಮನೆಂದು ಲಲಿತಪುರೀಶಂ
ಮುಳಿದೆತ್ತಿ ನಾಳೆ ಲಗ್ಗೆಯ
ನುಲಿಯುತ್ತುಂ ಮಾೞ್ಪೆನೆಂದು ಗರ್ಜಿಸುತಿರ್ದಂ ೩೨

ವನ್ನು ಮುರಿಯಬೇಕು ಎಂದು ಸೈನ್ಯವನ್ನು ಕೂಡಿಸಿಕೊಂಡು ಬಂದನು. ವ॥ ಹಾಗೆ ಬಂದು ದೀರ್ಘಬಾಹುಕನು ಬೀಡುಬಿಟ್ಟನು. ಆಗ ನಮ್ಮರಸ ಧರ್ಮಶೇಖರನು ನಮ್ಮನ್ನು ನೋಡಿ ೩೦. 'ಧರೆಯಲ್ಲಿ ಅಮೂಲ್ಯವಾದ ಏಳುಮಾಣಿಕ್ಯಗಳು ಶತ್ರು ರಾಜನ ಮನೆಯಲ್ಲಿವೆ. ಅಂಥವು ದನುಜರ ಲೋಕದಲ್ಲೂ ಇಲ್ಲ. ದೇವಲೋಕದಲ್ಲೂ ಇಲ್ಲ. ಅವನ್ನು ಕದ್ದು ತನ್ನಿ' ಎಂದು ಹೇಳಿ ನಮ್ಮ ಆರು ಜನರನ್ನೂ ಕಳುಹಿಸಿದನು, ವ॥ ಹಾಗೆ ಆರು ಜನರೂ ಬಂದು. ೩೧. ನವರತ್ನಗಳಿದ್ದ ಮನೆಗೆ ಕನ್ನಹಾಕಿ ಮಾಣಿಕ್ಯಗಳನ್ನು ಎತ್ತಿಕೊಂಡು ಹೋಗುತ್ತಿರುವಾಗ ಕಾವಲುಗಾರರು ನಮ್ಮನ್ನು ಹಿಡಿದು ಬಡಿದರು. ಆರು ಮಾಣಿಕ್ಯಗಳನ್ನು ಕಸಿದುಕೊಂಡರು. ಹುಡುಕಿದರೂ ಒಂದು ಸಿಗಲಿಲ್ಲ, ವ॥ ನಾವು ಏಳು ಮಾಣಿಕ್ಯಗಳನ್ನೂ ತೆಗೆದುಕೊಂಡು ಹೋಗುತ್ತಾ ಸಿಕ್ಕಿಬಿದ್ದಾಗ ಒಂದು ಮಾಣಿಕ್ಯವನ್ನು ಕೆಳಕ್ಕೆ ಬೀಳಿಸಿದೆವು. ಅದು ದೈವಯೋಗದಿಂದ ನಿನಗೆ ಸಿಕ್ಕಿ ನೀನೂ ನಮ್ಮಂತೆ ಕಳ್ಳನಾದೆ" ಎಂದು ಅವರು ಹೇಳಿದರು. ಮತ್ತೆ ೩೨. "ಕುಸುಮಪುರದೊಡೆಯನಾದ ಧರ್ಮಶೇಖರನು ಕಳವಿನಿಂದ ನಮ್ಮನ್ನು ಗೆಲ್ಲಬೇಕೆಂದಿದ್ದಾನೆ" ಎಂದು ಯೋಚಿಸಿ ಲಲಿತಪುರೀಶನಾದ ದೀರ್ಘಬಾಹುಕನು ಕೋಪಿಸಿಕೊಂಡು ನಾಳೆ ಮುತ್ತಿಗೆಯನ್ನು ಹಾಕಿ

ವ॥ ಅಂತು ಗರ್ಜಿಸುವ ದೀರ್ಘಬಾಹುಕಂ ಕಡೆವೇಂಟೆಗೆ ಪೋಗಿರ್ದಪನೆಂದವರ್ ಪೇೞ್ವ ಸಮಯದೊಳ್

ಕಂ॥ ಅಂಬರ ಗಂಗಾತೀರದೊ
ಳಂಬಿದೋಲಾಡುತಿರ್ಪ ಹಂಸಂ ವರುಣಾ
ಶಾಂಬುಧಿಗೆ ಪಾಱಿಪೋದ
ತ್ತೆಂಬಂತಿನನಪರ ಜಲಧಿಗೆಯ್ದಿದನಾಗಳ್ ೩೩

ಉ॥ ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂ
ದೊಂದಿರುಳಿಕ್ಕೆ ಮುಚ್ಚಳವನಾ ಪುಗಿಲೊಳ್ ತೆಱಪಾಗೆ ಸೂೞ್ಗೆ ಕೃ
ಷ್ಣಂ ದಯೆಯಿಂದೆ ಬಂದು ಬಿಗಿಯಪ್ಪೆ ಧರಾಂಗನೆಯಂ ತದಂಗಕಾ
ರ್ಷ್ಣ್ಯಂ ದಿಟದಿಂ ಕವಲ್ತುದೆನೆ ಪರ್ವಿದುದುರ್ವಿಯ ತಮಂ ೩೪

ವ॥ ಅಂತಳವಿಗೞಿದ ಕೞ್ತಲೆಯೊಳ್

ಕಂ॥ ಅಲಘುಭುಜಬಲದಿನಾಗಳ್
ಘಳಿಲನೆ ಪದೆದೆಲ್ಲರಂಘ್ರಿಯೊಳ್ ಸಾರ್ಚಿದ ಸಂ
ಕಲೆಗಳನಿರ್ಕರದಿಂದಂ
ಬಳೆಯಂ ನುರ್ಗೊತ್ತುವಂತೆ ನುರ್ಗಿದನಾಗಳ್ ೩೫

ಸರಿಯಾಗಿ ಪ್ರತೀಕಾರ ಮಾಡುವೆನು ಎಂದು ಹೇಳುತ್ತಾ ಗರ್ಜಿಸುತ್ತಿದ್ದನು. ವ॥ ಹಾಗೆ ಗರ್ಜಿಸುವ ದೀರ್ಘಬಾಹುಕನು ಬೇಟೆಗೆ ಹೋಗಿದ್ದಾನೆಂದು ಅವರು ಹೇಳಿದರು. ಆ ಸಮಯದಲ್ಲಿ ೩೩. ಆಕಾಶಗಂಗೆಯ ತೀರದಲ್ಲಿ ಸಂತೋಷದಿಂದ ತಿರುಗಾಡುತ್ತಿದ್ದ ಹಂಸವು ಪಶ್ಚಿಮ ಸಮುದ್ರಕ್ಕೆ ಹಾರಿಹೋಯಿತೋ ಎಂಬಂತೆ ಸೂರ್ಯನು ಪಡುಗಡಲನ್ನು ಸೇರಿದನು. ೩೪. ಲಕ್ಷ್ಮಿಯು ಪದ್ಮಮಂದಿರದಲ್ಲಿದ್ದುಕೊಂಡು ಪ್ರಣಯ ಪ್ರಕೋಪದಿಂದ ಒಂದು ರಾತ್ರಿ ಬಾಗಿಲಿನ ಕದವನ್ನು ಹಾಕಿಕೊಂಡಳು. ಆಗ ಅವಳ ಸರದಿಯು ತಪ್ಪಲು ಕೃಷ್ಣನು ದಯೆಯಿಂದ ಬಂದು ಧರಾಂಗನೆಯನ್ನು ಬಿಗಿಯಾಗಿ ತಬ್ಬಿಕೊಂಡನು. ಅಗ ಅವನ ಅಂಗದ ಕಪ್ಪುಬಣ್ಣವು ನಿಜವಾಗಿ ಕವಲಕವಲಾಗಿ ಚಿಗುರಿ ಹಬ್ಬಿತೋ ಎಂಬಂತೆ ಕತ್ತಲೆಯು ಭೂಮಿಯಲ್ಲೆಲ್ಲಾ ಹರಡಿತು. ವ॥ ಹಾಗೆ ಅಳತೆಗೆ ಸಿಕ್ಕದ ಕತ್ತಲೆಯಲ್ಲಿ ೩೫. ಅಧಿಕವಾದ ಭುಜಬಲದಿಂದ ಎಲ್ಲರ ಕಾಲುಗಳಲ್ಲಿ ತೊಡಿಸಿದ್ದ ಸಂಕೋಲೆಗಳನ್ನು, ಬಳೆಗಳನ್ನು ಒತ್ತಿ ಮುರಿಯುವಂತೆ, ಎರಡು ಕೈಗಳಿಂದಲೂ

ವ॥ ಆಂತವರಱುವರ ಸಂಕಲೆಯುಮಂ ಮುಱಿದವರ್ವೆರಸು ದೀರ್ಘಬಾಹುವಿನ ಪಾಳೆಯದಿಂ ಪೊಱಮಟ್ಟು ಕುಸುಮಪುರಮಂ ಪೊಕ್ಕು ಧರ್ಮಶೇಖರನಂ ಕಾಣ್ಬುದುಮವ ನೊಡನೆಯುವರಿಂತೆಂದರ್

ಕಂ॥ ಈತನತಿ ವಿಕ್ರಮೋದಯ
ನೀತಂ ಪದೆದೆಮ್ಮ ಕಾಲ ಸಂಕಲೆಯಂ ನಿ
ರ್ಭೀತಿಯೊಳುಡಿದು ಬಿಸುಟ್ಟಂ
ಭೂತಳಪತಿ ನಿನ್ನ ಭುಜಬಲಕ್ಕೆ ಸಹಾಯಂ ೩೬

ವ॥ ಎಂದವರ್ ಬಿನ್ನಪಂಗೆಯ್ಯಲಾ ಧರ್ಮಶೇಖರನೆನ್ನಂ ಮನ್ನಿಸಲಾತನೊಳಿಂತೆಂದೆಂ

ಕಂ॥ ಎಲೆ ಧರ್ಮಶೇಖರೇಶ್ವರ
ಮುಳಿದೆಯ್ತಂದಿರ್ಪ ದೀರ್ಘಬಾಹುಕನಂ ದೋ
ರ್ಬಳದಿಂ ಸಂಹರಿಸುವೆನ
ಗ್ಗಳವೆನಿಸಿರ್ಪಧಿಕ ಚಿಂತೆಯಂ ಬಿಸುಡೆಂದೆಂ ೩೭

ವ॥ ಆ ಮಾತಿಂಗಾತಂ ಪ್ರೀತಮನಸ್ಕನಾಗಿ ತನ್ನ ಚಾತುರಂಗ ಬಲವನೆನ್ನೊಡನೆ ತೆರಳವೇೞ್ದು

ಉ॥ ಕತ್ತುರಿಗೋಡ ಕರ್ಣಮೆಳನೀಲದ ನುಣ್ಪುಮದರ್ಕ್ಷಿ ವಕ್ಷಮಂ
ಪತ್ತಿದ ಕಂಧರಂ ಮೃದುಸಟಾವಳಿ ಸುಯ್ಲ್ಲನರಳ್ವ ಘೋಣಮು
ದ್ವೃತ್ತಮನಂ ನಯಂಬಡೆದ ರೋಮಚಯಂ ನಿಮಿರ್ವೆತ್ತ ವಾಳಮು
ತ್ಕೃತ್ತಮಲಕ್ಷಣಂ ಮೆಱೆವ ವಾರುವಮಂ ಪದೆದಿತ್ತನಾನೃಪಂ ೩೮

ಕೂಡಲೆ ಒತ್ತಿ ಚೂರು ಚೂರು ಮಾಡಿದೆನು. ವ॥ ಆ ಆರು ಜನರ ಸಂಕೋಲೆಯನ್ನು ಮುರಿದು ಅವರೊಡನೆ ದೀರ್ಘಬಾಹುವಿನ ಪಾಳಯದಿಂದ ಹೊರಟೆನು. ಕುಸುಮಪುರ ವನ್ನು ಪ್ರವೇಶಿಸಿ ಧರ್ಮಶೇಖರನನ್ನು ನಾವು ಕಂಡೆವು. ಆಗ ಅವರು ಅವನೊಡನೆ ಹೀಗೆಂದರು. ೩೬. "ಭೂತಳಪತಿ ! ಈತನು ಅತಿಪರಾಕ್ರಮಶಾಲಿ. ಭೀತಿಯಿಲ್ಲದೆ ನಮ್ಮ ಕಾಲಿನ ಸಂಕೋಲೆಗಳನ್ನು ಮುರಿದು ಬಿಸುಟನು. ನಿನ್ನ ಭುಜಬಲಕ್ಕೆ ಸಹಾಯಕನಾಗಿರು ವನು." ವ॥ ಎಂದು ಅವರು ವಿಜ್ಞಾಪಿಸಿದರು. ಅದನ್ನು ಕೇಳಿ ಆ ಧರ್ಮಶೇಖರನು ನನ್ನನ್ನು ಗೌರವಿಸಿದನು. ಆಗ ನಾನು ಅವನಿಗೆ ಹೀಗೆ ಹೇಳಿದೆನು. ೩೭. 'ಎಲೆ ಧರ್ಮ ಶೇಖರರಾಜ ! ಕೋಪಿಸಿಕೊಂಡು ಬಂದಿರುವ ದೀರ್ಘಬಾಹುಕನನ್ನು ತೋಳ್ಬಲದಿಂದ ಸಂಹರಿಸುವೆನು. ಈ ನಿನ್ನ ಅಧಿಕವಾದ ಚಿಂತೆಯನ್ನು ಬಿಟ್ಟುಬಿಡು.' ವ॥ ನನ್ನ ಮಾತಿನಿಂದ ಆತನು ಸಂತೋಷವನ್ನು ಹೊಂದಿ ತನ್ನ ಚತುರಂಗಸೈನ್ಯಕ್ಕೆ ನನ್ನೊಡನೆ ಹೊರಡುವಂತೆ ಹೇಳಿದನು. ೩೮. ಕತ್ತುರಿಯ ಹಾಗೆ ಹೆಣೆದುಕೊಂಡಿರುವ ಕಿವಿ, ನೀಲಿಯ ಬಣ್ಣದ ಕಣ್ಣು, ಎದೆಗೆ ಹತ್ತಿದ ಹೆಗಲು, ಮೃದುವಾದ ಕೊರಳಿನ ರೋಮ ರಾಜಿ, ಉಸಿರು ಬಿಡುವಾಗ ಅಗಲವಾಗುವ ಮೂಗಿನ ಹೊಳ್ಳೆ, ಸೊಕ್ಕಿದ ಮನಸ್ಸು, ನುಣುಪಾದ

ಕಂ॥ ಸೊಗಸೆಸೆಯೆ ಬೆಂಗೆವಾಯ್ದೊ
ಯ್ಯಗೆ ಮಡದಿಂದೌಂಕಿ ವಾಘೆಯುಂ ಸಡಿಲೆ ಬಿಡಲ್
ಮೃಗಕೌಶಿಕ ಸಂಭವವೇ
ಗಗತಿಯಿಃನೊಪ್ಪಿರ್ದುದಾ ತುರಂಗಮರತ್ನಂ ೩೯

ವ॥ ಅಂತೆಸೆದ ಜಾತ ಶ್ವಮನೆನಗೆ ಕುಡಲೊಡಂ

ಚಂ॥ ವಿತತ ದೃಢಾಸನಂ ನವಖಲೀನಗುಣಾಂಕಿತಬದ್ಧದೃಷ್ಟಿ ಲೇ
ಪಿತಲಸದೂರು ಕಿಂಚಿದನುವಕ್ರಿಮಜಾನು ಋಜುಪ್ರಸನ್ನ ಸು
ಸ್ಥಿತ ತನುವೆನ್ನೊಳೊಪ್ಪೆ ಗತಿ ಧಾರೆ ಲಯಂ ಜವಮಣ್ಪು ಬಲ್ಮೆಯುಂ
ಕಿತಮೆನಿಸಿರ್ಪ ಚಿತ್ರಗತಿಯಂ ಮೆಱೆದೆಂ ಸುಕುಮಾರಶೇಖರಾ ೪೦

ವ॥ ಅಂತೆನ್ನ ತೊಡೆಗಳವಟ್ಟ ಕುದುರೆಯಂ ಬೆಂಗೆವಾಯ್ದು ಕಿಱಿದು ಸೇನೆಸಹಿತಂ ಪೊಱಮಟ್ಟು ಬೇಂಟೆಯಿಂ ಬರುತಿರ್ದ ದೀರ್ಘಬಾಹುಕನೊಳ್ ಪೊಣರ್ಚಲ್ ಪೋಪನ್ನೆಗಂ

ಉ॥ ಪೆರ್ಬುಲಿ ಪಾಯೆ ಕಂಠಗತಜೀವಿತರಾದವರೆಕ್ಕಲಂ ಕನ
ಲ್ದುರ್ಬಿ ಪಿಸುಳ್ದ ದೊಂಡೆಗರುಳಂ ತಳೆದಿರ್ಪವರಾರ್ದು ಭಲ್ಲುಕಂ
ಜರ್ಬಿಯುವುಂಡೆ ಬಲ್ಮಿದುಳೆಟಲ್ವ ಶಿರಂಗಳನೊತ್ತುತಿರ್ಪವರ್
ಸರ್ಬಮೃಗಂಗಳಂ ಕೆಡಪಿ ಬರ್ಪವರೊಪ್ಪಿದರುರ್ವರಾಧಿಪಾ ೪೧

ಶರೀರದ ರೋಮಗಳ ಸಮೂಹ, ಮೇಲಕ್ಕೆ ನಿಮಿರಿದ ಬಾಲ—ಈ ಅತ್ಯುತ್ತಮವಾದ ಲಕ್ಷಣಗಳಿಂದ ಪ್ರಕಾಶಿಸುವ ಕುದುರೆಯೊಂದನ್ನು ಆ ರಾಜನು ಪ್ರೀತಿಯಿಂದ ಕೊಟ್ಟನು. ೩೯. ಸೊಗಸಾದ ಆ ಕುದುರೆಯ ಬೆನ್ನನ್ನು ಏರಿ ಹಿಮ್ಮಡಿಯಿಂದ ಅದುಮಿ ಲಗಾಮನ್ನು ಸಡಿಲಿಸಿದೆನು. ಕೂಡಲೆ ಆ ತುರಂಗಮ ರತ್ನವು ಕೌಶಿಕನು (ವಿಶ್ವಾಮಿತ್ರನು) ಸೃಷ್ಟಿಸಿದ ಮೃಗದ ವೇಗದಿಂದ ಓಡಿ ಪ್ರಕಾಶಿಸಿತು. ವ॥ ಹಾಗೆ ಪ್ರಕಾಶಿಸುವ ಜಾತಿಯ ಕುದುರೆಯನ್ನು ನನಗೆ ಕೊಡಲು—೪೦. ಸುಕುಮಾರ ಶೇಖರನೇ ! ದೃಢವಾಗಿ ಆಸನದ ಮೇಲೆ ಕುಳಿತು ಹೊಸದಾದ ಕಡಿವಾಣದ ಹಗ್ಗವನ್ನು ಸ್ಥಿರವಾಗಿ ನೋಡುತ್ತಾ, ಲೇಪ ಬಳಿದ ಸುಂದರವಾದ ತೊಡೆಗಳಿಂದ, ಮಂಡಿಯನ್ನು ಸ್ವಲ್ಪ ಬಗ್ಗಿಸಿ, ನೇರವಾಗಿ ಶರೀರವನ್ನು ಇಟ್ಟುಕೊಂಡು, ಗತಿ, ಧಾರೆ, ಲಯ, ಜವ, ಅಣ್ಪು, ಬಲ್ಮೆಗಳಿಂದ ಕೂಡಿದ ಚಿತ್ರಗತಿಯಿಂದ ಕುದುರೆಯನ್ನು ಓಡಿಸಿದೆನು. ವ॥ ಹಾಗೆ ನನ್ನ ತೊಡೆಗಳ ಹಿಡಿತಕ್ಕೆ ಸಿಕ್ಕಿದ ಕುದುರೆಯ ಬೆನ್ನಿನ ಮೇಲೆ ಕುಳಿತು ಸ್ವಲ್ಪ ಸೈನ್ಯದೊಡನೆ ಹೊರಟು ಬೇಟೆಯಿಂದ ಬರುತ್ತಿದ್ದ ದೀರ್ಘಬಾಹುವಿನೊಡನೆ ಹೋರಾಡಲು ಹೋಗುತ್ತಿದ್ದೆನು. ಆಗ ೪೧. ಮಹಾರಾಜನೆ ! ಆಗ ಒಂದು ದೊಡ್ಡ ಗುಂಪು ಎದುರಾಗಿ ಬರುತ್ತಿತ್ತು, ಅದರಲ್ಲಿ ಕೆಲವರು ಹೆಬ್ಬುಲಿಯು ಮೇಲೆ ನುಗ್ಗಿದುದರಿಂದ ಕಂಠಜೀವಿತ ಪ್ರಾಣರಾಗಿದ್ದರು. ಕೆಲವರ ಹೊಟ್ಟೆಗಳಿಂದ ಕಾಡುಹಂದಿಯು ಬಗಿಯಲು ದಂಡೆಗರುಳುಗಳು ಜೋಲುತ್ತಿದ್ದುವು. ಕೆಲವರ ತಲೆಗಳಿಂದ ಭಲ್ಲೂಕಗಳು ಕಚ್ಚಲು ಮಿದುಳುಗಳು ಹೊರ ಬಂದು

ವ॥ ಅಂತು ಬೇಂಟೆಕಾಱವಡೆ ಬರ್ಪುದಂ ಕಂಡು ದೀರ್ಘಬಾಹುಕನ ಬರವಂ ನಿಶ್ಚಯಂ ಮಾಡಿ ಸಂಶಯಾಸ್ಪದವಿಲ್ಲದಂತು ತನ್ನ ಪಾಳೆಯಃದಿಂದಿದಿರ್ವರ್ಪ ಸೇನೆಯೆಂಬಂತೆ ನಂಬುಗೆ ಪುಟ್ಟುವಂತೆ ಪೋಗಿ ತನ್ನೃಪನಂ ಸಮ್ಮುಖದೊಳ್ ಕಂಡು

ಬಿಡುಬಿಡು ನಿನ್ನ ಬಲ್ಗುದುರೆಯಂ ಕಡುಪಿಂ ಪಿಡಿದಿರ್ಪ ಡಾಣೆಯಂ
ಜಡಿ ಮೆಱೆದಿರ್ದೆನೆಂದಿರದಿರೆಂದು ನಿಜಾಶ್ವಮನೌಂಕಿ ಮೌಳಿಯಂ
ಸಿಡಿಲೆಱಪಂದದಿಂದೆಱಗೆ ಸೈಪೆಱಗಾಗಿ ಮಹಾಗ್ರಹೋಚ್ಚಯಂ
ಪೊಡೆದವೊಲಾಗೆ ಮೂರ್ಛೆಗೊಳಗಾದನಟಿಲ್ ಮಿಗೆ ದೀರ್ಘಬಾಹುಕಂ ೪೨

ವ॥ ಅಂತು ಮೂರ್ಛಿತನಾದುದಂ ಕಂಡಾಂ ಶಿರಶ್ಛೇದಂಗೆಯ್ಯಲೊಡಂ ಕಳಕಳಂ ಪೊಣ್ಮೆ

ಎಲೆ ಕಳ್ಳರ್ ಪಾಯ್ದರಲ್ಲಲ್ಲಸವಸದೆ ಬಯಲ್[1] ಬಂದುದಲ್ಲಲ್ಲ ಕೇಳ್ ಮ
ದ್ಬಲವೀಗಳ್ ಬಂದುದಲ್ಲಲ್ಲಿದು ಕುಸುಮಪುರಿನಾಥಸೈನ್ಯಂ ಮಹಾದೋ
ರ್ಬಲದಿಂದೇಟ್ಟಂದು ನಮ್ಮೃರ್ವಿಪನನದಟನಿಂ ತೀರ್ಚಿತೆಂದಂತತಿ ವ್ಯಾ
ಕುಳಚಿತ್ತರ್ ದೀರ್ಘಬಾಹುಕ್ಷಿತಿಪನ ಸುಭಟರ್ ಮುಂಗೆಡುತ್ತಿರ್ದರಾಗಳ್ ೪೩

ನೇತಾಡುತ್ತಿದ್ದರೆ ಅವುಗಳನ್ನು ಕೈಯಿಂದ ಅದುಮಿ ಒಳಕ್ಕೆ ತಳುತ್ತಿದ್ದರು. ಮತ್ತೆ ಕೆಲವರು ಎಲ್ಲ ವಿಧವಾದ ಪ್ರಾಣಿಗಳನ್ನು ಸಂಹರಿಸಿದವರಾಗಿದ್ದರು. ವ॥ ಹಾಗೆ ಬೇಟೆಕಾರರು ಬರುವುದನ್ನು ಕಂಡು ದೀರ್ಘ ಬಾಹುಕನು ಬರುತ್ತಿದ್ದಾನೆಂದು ನಿಶ್ಚಯ ಮಾಡಿಕೊಂಡು ಸಂಶಯ ಬರದಂತೆ ತನ್ನ ಪಾಳೆಯದಿಂದ ಎದುರಾಗಿ ಬರುತ್ತಿರುವ ಸೇನೆಯೆಂಬ ನಂಬಿಕೆಯನ್ನು ಹುಟ್ಟಿಸಿ ಆ ರಾಜನ ಮುಂದೆ ಹೋಗಿ ನಿಂತೆನು—೪೨. ನಾನು "ನಿನ್ನ ಬಲವಾದ ಕುದುರೆಯನ್ನು ಬಿಟ್ಟುಬಿಡು. ಪರಾಕ್ರಮದಿಂದ ಪ್ರತಿಜ್ಞೆ ಮಾಡಿದ್ದರೆ ಎದುರಿಸು ; ಮರೆತಿದ್ದೆನು ಎಂದು ಇರಬೇಡ" ಎಂದು ಹೇಳುತ್ತಾ ನನ್ನ ಕುದುರೆಯನ್ನು ಹುರಿದುಂಬಿಸಿ ನುಗ್ಗಿಸಿ ಸಿಡಿಲು ಎರಗಿದಂತೆ ಎರಗಿದೆನು. ದೀರ್ಘಬಾಹುಕನು ಚಕಿತನಾದನು. ಮಹಾಗ್ರಹಗಳ ಗುಂಪು ಎರಗಿದಂತಾಗಿ ಕೂಡಲೆ ಮೂರ್ಛಿತನಾದನು. ವ॥ ಹಾಗೆ ಮೂರ್ಛಿತನಾದ ದೀರ್ಘಬಾಹುಕನ ತಲೆಯನ್ನು ಕತ್ತರಿಸಿದೆನು. ಆಗ ಕಲಕಲ ಧ್ವನಿಯು ಹೊಮ್ಮಿತು. ೪೩. "ಎಲೆ ಕಳ್ಳರು ನುಗ್ಗಿ ಬಂದುದಲ್ಲ. ಗಡಿಬಿಡಿಯಿಂದ ಮೈದಾನದಲ್ಲಿ ನುಗ್ಗಿ ಬಂದುದೂ ಅಲ್ಲ. ಕೇಳು, ನಮ್ಮ ಸೈನ್ಯವೂ ಬಂದುದಲ್ಲ. ಇದು ಕುಸುಮಪುರೀ ರಾಜನ ಸೈನ್ಯ. ಮಹಾಭುಜ ಬಲದಿಂದ ನುಗ್ಗಿ ಬಂದು ನಮ್ಮರಸನನ್ನು ತೀರಿಸಿತು". ಎಂದು ಅತಿವ್ಯಾಕುಳಚಿತ್ತರಾಗಿ ದೀರ್ಘಬಾಹು ರಾಜನ ಸೈನಿಕರು ಏನು

---

[1], ಭೂತ, ಪಿಶಾಚಿ (ರಂ)

ವ॥ ಅಂತು ಮುಂಗೆಟ್ಟು ಸುತ್ತಲುಂ ಪರಿದು ಪೋಪ ರಿಪುಸೈನ್ಯಮುಂ ಕಂಡು

ಕಂ॥ ಗರುಡನಹಿನಿಚಯಮುಮಂ ಸಂ
ಹರಿಸುವ ತೆಱದಿಂದೆ ದೀರ್ಘಬಾಹುಕನ ಮಹೋ
ದ್ಧುರಸೇನೆಯುನಾರ್ಪಿಂದಾ
ವರಿಸಿ ಕೊಲಲ್ಕಸಗಿದೆಂ ನೃಪಾಲಕತಿಲಕಾ ೪೪

ವ॥ ಅಲ್ಲಿ ಬೆರಲಂ ಕರ್ಚಿದರಂ ಪರಿಹರಿಸಿ ಮರನನೇಱಿದರಂ ಮರಳಿನೋಡದೆ ಹಲ್ಲಂ ಕಿಱಿದರಂ ಕೊಲ್ಲದೆ ಬಿಟ್ಟು ಹುತ್ತುವನಡರ್ದರಂ ಹತ್ತೆ ಸಾರದೆ ನೀರ್ಗಾಂತರ್ಗಳ್ಕೆಯುಂ ತೋಱದೆ ಲಿಂಗವನಪ್ಪಿದರಂ ಹಿಂಗಳೆದು ನೀರಂ ಪೊಕ್ಕರ್ಗೆ ಬೀರವಂ ತೋಱದೆ ಬಿಡುದಲೆಯುವರ್ಗೆ ಕಡುಪುವೀಱದೆ ಹುಲ್ಲಂ ಹಿಡಿದರ್ಗೆ ಬಲ್ಲಾಳ್ತನವಂ ತೋಱದೆ ನಿರಾಯುಧರಂ ಧುರದೊಳ್ ಮುಟ್ಟದೆ ಶರಣೆಂದವರ ಶಿರವಂ ಕಾದು ಮಾಱಾಂತರಂ ತಾಱುತಟ್ಟಪ್ಪಿನಂ ಮಾಡಿ

ಚಂ॥ ಜವನಱಿಯುಟ್ಟುವಂತೆ ಕಡೆಗಾಲದ ನಂಜಿನ ಗಾಳಿ ಬೀಸುವಂ
ತವಿರಳಮೇಘವಜ್ರ ಕವಿವಂತಸಿತೋರಗನಟ್ಟಿ ನುಂಗುವಂ
ತವಚರದೆತ್ತಲುಂ ಪರಿದು ಭೀತಿಯೊಳೋಡುವ ದೀರ್ಘಬಾಹುಸೈ
ನ್ಯವನಡವಾಯ್ತು ಸಂಹರಿಸಿದೆಂ ನಿಜಸಾಹಸದಿಂ ಮಹೀಪತೀ ೪೫

ಮಾಡಬೇಕೆಂದು ತಿಳಿಯದೆ ಒದ್ದಾಡುತ್ತಿದ್ದರು. ವ॥ ಏನು ಮಾಡಬೇಕೆಂದು ತಿಳಿಯದೆ ಸುತ್ತ ಓಡಿ ಹೋಗುತ್ತಿದ್ದ ಶತ್ರು ಸೈನ್ಯವನ್ನು ಕಂಡು—೪೪. ನೃಪಾಲಕ ತಿಲಕನೇ ! ಗರುಡನು ಹಾವುಗಳ ಗುಂಪನ್ನು ಸಂಹರಿಸುವ ಹಾಗೆ ದೀರ್ಘಬಾಹುಕನ ಮಹಾಸೇನೆಯನ್ನು ಪರಾಕ್ರಮದಿಂದ ಆಕ್ರಮಿಸಿ ಕೊಲ್ಲಲು ಪ್ರಯತ್ನಿಸಿದೆನು. ವ॥ ಅಲ್ಲಿ ಬೆರಳು ಕಚ್ಚಿದವರನ್ನು ಕೊಲ್ಲಲಿಲ್ಲ. ಮರ ಹತ್ತಿದವರನ್ನು ಮರಳಿ ನೋಡಲಿಲ್ಲ. ಹಲ್ಲುಗಿರಿದವರನ್ನು ಕೊಲ್ಲದೆ ಬಿಟ್ಟೆನು. ಹುತ್ತವನ್ನೇರಿದವರ ಹತ್ತಿರಕ್ಕೆ ಹೋಗಲಿಲ್ಲ. ನೀರಿಗಿಳಿದವರನ್ನು ಬೆದರಿಸಲಿಲ್ಲ. ಲಿಂಗವನ್ನಪ್ಪಿಕೊಂಡವರನ್ನು ಹಿಂದಕ್ಕೇ ಬಿಟ್ಟೆನು. ನೀರನ್ನು ಹೊಕ್ಕವರ ಮೇಲೆ ಶೌರ್ಯವನ್ನು ತೋರಲಿಲ್ಲ. ತಲೆ ಕೆದರಿಕೊಂಡು ಓಡುವವರ ಮೇಲೆ ಪರಾಕ್ರಮವನ್ನು ತೋರಿಸಲಿಲ್ಲ. ಹುಲ್ಲು ಹಿಡಿದವರ ಮೇಲೆ ವೀರ್ಯವನ್ನು ತೋರಲಿಲ್ಲ. ನಿರಾಯುಧರನ್ನು ಯುದ್ಧದಲ್ಲಿ ಮುಟ್ಟಲಿಲ್ಲ. ಶರಣು ಎಂದವರನ್ನು ರಕ್ಷಿಸಿ ಎದುರಿಸಿದವರನ್ನು ಚದುರಿ ಓಡಿ ಹೋಗುವಂತೆ ಮಾಡಿದೆನು. ೪೫. ಮಹಾರಾಜನೆ ! ಯಮನು ಹೊಡೆದು ಓಡಿಸುವಂತೆ, ಪ್ರಳಯ ಕಾಲದಲ್ಲಿ ವಿಷದ ಗಾಳಿಯು ಬೀಸುವ ಹಾಗೆ, ಎಡೆಬಿಡದೆ ಸಿಡಿಲು ಮಿಂಚುಗಳು ಕವಿಯುವ ಹಾಗೆ, ಕೃಷ್ಣಸರ್ಪವು ಅಟ್ಟಿಸಿಕೊಂಡು ಬಂದು ಕಚ್ಚುವ ಹಾಗೆ, ಜುಗುಪ್ಸೆಯಿಂದ ಬೇರೆ ದಾರಿಗಾಣದೆ ಎಲ್ಲ ಕಡೆಗೂ ಭಯದಿಂದ ಓಡುತ್ತಿದ್ದ ದೀರ್ಘಬಾಹುವಿನ ಸೈನ್ಯವನ್ನು ಅಡ್ಡಗಟ್ಟಿ ಸ್ವಸಾಹಸದಿಂದ ಸಂಹರಿಸಿದೆನು.

ವ॥ ಅಂತು ರಣಾವೇಶದಿಂದಾಂತ ಭಟಸಂತಾನಮಂ ಕೃತಾಂತಮಂದಿರಮಂ ಪುಗಿಸುವಾಗಳ್

ಮ॥ ಪಿರಿದುಂ ದೈವವಿಘಾತಿಯಿಂದೆ ಸುಖಮಂ ಕಾಣ್ಬಾಸೆ ಮಾಣ್ದಿರ್ದೊಡೇಂ
ಗಿರಿಯೊಳ್ ತಾಪಸವೃತ್ತಿಯಿಂ ಕ್ಷಪಿಸಿ ಜೀವಂ ಪೋಗದಿಂದಿಲ್ಲಿ ದು
ರ್ಮರಣಕ್ಕಿಂತೊಳಗಾದೆನೇ ವಿಧಿಯೆ ಮುನ್ನಾನಾವನಂ ದುಃಖಸಾ
ಗರದೊಳ್ ನೂಂಕಿದೆನೆಂದೊರಲ್ವ ದನಿಯಂ ಕೇಳ್ದಿಯ್ದಿದೆಂ ೪೬

ವ॥ ಆ ಧ್ವನಿಯಂ ಕೇಳ್ದಲ್ಲಿಗೆಯ್ದಿ ನೋಳ್ಪನ್ನೆಗಂ

ಉ॥ ಮಂಗಳಮೂರ್ತಿ ತಾಪಸಶಿರೋಮಣಿಯಾಗಮ ಚಕ್ರವರ್ತಿ ಶು
ದ್ಧಾಂಗನಬಾಧಕಂ ಕುಲವಧೂಸಹಿತಂ ಮುಖಸೂತ್ರ ಸಚ್ಛಿಖಾ
ಸಂಗತನತ್ಯಪೂರ್ವದುರಿತಾಂಬುಧಿಬಾಧಕ ಬಾಡಬಾನಳಂ
ಸಂಗರಬಾಧೆಗಳ್ಕಿ ಶಿವಘೋಯೆನುತಿರ್ದನದೊರ್ಬ ಭೂಸುರಂ ೪೭

ವ॥ ಮತ್ತಾತಂ ಬಾಡಬನಾಮಧೇಯನಾಗಿಯುಂ ಜಡಾಕರನಿವಾಸಿಯಲ್ಲ ; ತಿಲಕಾಲಂಕೃತನಾಗಿಯುಂ ಮಹಾರಣ್ಯಮಲ್ಲ ; ರಾಮಾನ್ವಿತನಾಗಿಯುಮಯೋಧ್ಯೆಯಲ್ಲ ಕಾಕಪಕ್ಷವಿಳಾಸಿಯಾಗಿಯುಂ ಬಲಿಭುಕ್ಕಲ್ಲೆನಿಸಿರ್ದ ಭೂಸುರನಂ ಕಂಡೆನ್ನ ಕೈದುಮಂ ಕೀಲಾಳಿನ ಕೆಯ್ಯೊಳ್ ಕೊಟ್ಟುಮಾವರಿರ್ವರುಮಂ ನಮಸ್ಕರಿಸಿ

ವ॥ ಹಾಗೆ ರಣಾವೇಶದಿಂದ ಎದುರಿಸಿದ ಸೇನಾ ಸಮೂಹವನ್ನು ಯಮಪಟ್ಟಣಕ್ಕೆ ಕಳುಹಿಸಿದೆನು. ಆಗ–(ಅಳುವ ಶಬ್ದ ಕೇಳಿಸಿತು) ೪೬. "ಹಿರಿದಾದ ದೈವವಿಘಾತಿಯಿಂದ ಸುಖವನ್ನು ಕಾಣುವ ಆಸೆಯನ್ನು ತೊರೆದಿದ್ದರೂ, ಬೆಟ್ಟದ ಮೇಲೆ ತಪಸ್ಸು ಮಾಡಿ ದೇಹವನ್ನು ಕರಗಿಸಿದರೂ ಪ್ರಾಣ ಹೋಗಲಿಲ್ಲ. ಆದರೆ ಇಂದು ಇಲ್ಲಿ ದುರ್ಮರಣಕ್ಕೆ ಒಳಗಾದೆನು. ವಿಧಿಯೇ ! ಮೊದಲು ನಾನು ಯಾರನ್ನು ದುಃಖಸಾಗರದಲ್ಲಿ ತಳ್ಳಿದ್ದೆನೋ, ಕಾಣೆನು" ಎಂದು ಅಳುವ ಶಬ್ದವನ್ನು ಕೇಳಿ ಮಹಾರಾಜ, ಅಲ್ಲಿಗೆ ಹೋದೆನು. ವ॥ ಆ ಧ್ವನಿಯನ್ನು ಕೇಳಿದಲ್ಲಿಗೆ ಹೋಗಿ ನೋಡಿದಾಗ—೪೭. ಬ್ರಾಹ್ಮಣನೊಬ್ಬನು ಯುದ್ಧದ ಹಿಂಸೆಗೆ ಹೆದರಿ ಶಿವಘೋ ಎಂದು ಕೂಗುತ್ತಿದ್ದನು. ಅವನು ಮಂಗಳಕರವಾದ ಆಕಾರವುಳ್ಳವನಾಗಿದ್ದನು. ತಪಸ್ವಿಗಳಲ್ಲೆಲ್ಲಾ ಶ್ರೇಷ್ಠನು. ವೇದವಿದ್ಯೆಯಲ್ಲಿ ಪರಿಣತ. ಶುದ್ಧವಾದ ಶರೀರವುಳ್ಳವನು. ಯಾರಿಗೂ ತೊಂದರೆಯನ್ನುಂಟು ಮಾಡದವನು. ಸತ್ಕುಲದಲ್ಲಿ ಹುಟ್ಟಿದ ಹೆಂಡತಿಯುಳ್ಳವನು. ಜನಿವಾರ ಮತ್ತು ಶಿಖೆಯನ್ನು ಧರಿಸಿದ್ದನು. ಅಪೂರ್ವವಾದ ಪಾಪವೆಂಬ ಸಮುದ್ರವನ್ನು ಶೋಷಿಸುವ ಬಡಬಾಗ್ನಿ. ಆತನು ಬಾಡಬನೆಂದು ಹೆಸರುಳ್ಳವನಾಗಿದ್ದರೂ ಸಮುದ್ರವಾಸಿಯಲ್ಲ (ಬಾಡಬ = ಬಾಡಬಾಗ್ನಿ ಮತ್ತು ಬ್ರಾಹ್ಮಣ) ತಿಲಕದಿಂದ ಅಲಂಕೃತನಾಗಿದ್ದರೂ ಮಹಾರಣ್ಯವಲ್ಲ. (ತಿಲಕ = ಹಣೆಗೆ ಹಚ್ಚಿದ ತಿಲಕ–ತಿಲಕ ವೃಕ್ಷ) ರಾಮೆಯಿಂದ ಕೂಡಿದ್ದರೂ ಅಯೋಧ್ಯೆಯಲ್ಲ (ರಾಮ = ಶ್ರೀರಾಮ. ರಾಮಾ = ಸ್ತ್ರೀ) ಕಾಕಪಕ್ಷಗಳ ವಿಳಾಸ

ಕಂ॥ ಈ ವೇಷಮೆತ್ತಣದು ಸಮ
ರಾವನಿಗೆಯ್ತಂದುದೆತ್ತಣದು ನೀವೀ ರಾ
ಜಾವಸಥ ಪುರೋಹಿತರೋ
ಭಾವಿಸಲರಿದೆಮಗೆ ಪಾರ್ವ ನಿಮ್ಮಯ ಬರವಂ ೪೮

ವ॥ ಎಂದು ನಿಮ್ಮಿರವೆಲ್ಲಿ ಇಲ್ಲಿಗೆತ್ತಣಿಂ ಬಂದಿರೆಂದು ಭಕ್ತಿಪುರಸ್ಸರಂ ಕೇಳಲಾಗಿ ದ್ವಿಜೋತ್ತಮನಿಂತೆಂದಂ

ಶಾ॥ ಏನಂ ಪೇಟ್ವುದೊ ಪೂರ್ವಮಂ ನೆನೆದೊಡಗ್ನಿಜ್ವಾಲೆ ಕೈಕೊಂಡು ಹೃತ್ಸ್ಥಾನಂ
ಭೋಂಕೆನೆ ಭಸ್ಮಮಾಗಲಸು ಬೇಗಂ ಪಾಱೆ ದಿಗ್ಭ್ರಾಂತಿಯಿಂ
ದೇನುಂ ತೋಱದೆ ಪೋಪುದಾದೊಡಮದಂ ಪೇಟ್ದಪ್ಪೆನೆಂದಾದ್ವಿಜಂ
ತಾನೆಂತಾನುಮವಸ್ಥೆಯಿಂದುಸಿರ್ವುದರ್ಕುದ್ಯೋಗಮಂ ತಾಳ್ದಿದಂ ೪೯

ವ॥ ಅದೆಂತೆನೆ

ಕಂ॥ ಮಗಧ ಕ್ಷಿತೀಶ್ವರಂ ಸ
ತ್ವಗುಣಾನ್ವಿತ ರಾಜಹಂಸನೆಂಬಂ ವಿಶ್ವೋ
ರ್ವಿಗೆ ಮೆಱೆವ ವಸುಮತೀ ಕಾಂ
ತೆಗೆ ಕಾಂತಂ ವಿವಿಧರಿಪು ನೃಪಾಲಕೃತಾಂತಂ ೫೦

ವುಳ್ಳವನಾಗಿದ್ದರೂ ಬಲಿಯನ್ನು ತಿನ್ನುವ ಕಾಗೆಯಲ್ಲ (ಕಾಕಪಕ್ಷ=ಕಾಗೆಯ ಗರಿಗಳಂಥ ಜುಲ್ಪಿ ಕೂದಲು-ಕಾಗೆಯ ರೆಕ್ಕೆ) ಇಂಥ ಬ್ರಾಹ್ಮಣನನ್ನು ಕಂಡು ಕೂಡಲೆ ನನ್ನ ಆಯುಧ ವನ್ನು ಆಳಿನ ಕೈಯ್ಯಲ್ಲಿ ಕೊಟ್ಟು ಅವರಿಬ್ಬರಿಗೂ[1] ನಮಸ್ಕರಿಸಿದೆನು. ೪೮. "ಈ ನಿಮ್ಮ ವೇಷವು ಎಲ್ಲಿಯದು ? ಈ ಯುದ್ಧ ಭೂಮಿಗೆ ಬಂದದ್ದು ಹೇಗೆ? ನೀವು ಈ ರಾಜರ ಮನೆಯ ಪುರೋಹಿತರೋ ? ಬ್ರಾಹ್ಮಣನೆ ! ನೀವು ಇಲ್ಲಿಗೆ ಹೇಗೆ ಬಂದಿರೆಂದು ಊಹಿಸಲು ಸಾಧ್ಯವಿಲ್ಲ. ವ॥ ನೀವು ಎಲ್ಲಿ ವಾಸಿಸುತ್ತೀರಿ ? ಇಲ್ಲಿಗೆ ಎಲ್ಲಿಂದ ಬಂದಿರಿ ?" ಎಂದು ಭಕ್ತಿಯಿಂದ ಕೇಳಿದೆನು. ಅದಕ್ಕೆ ಆ ಬ್ರಾಹ್ಮಣನು ಹೀಗೆ ಹೇಳಿದನು.—೪೯. "ಏನೆಂದು ಹೇಳಲಿ. ಹಿಂದಿನದನ್ನು ನೆನೆಸಿಕೊಂಡರೆ ಅಗ್ನಿಯ ಜ್ವಾಲೆಯು ಹತ್ತಿ ಉರಿದು ಹೃದಯವನ್ನು ಕೂಡಲೆ ಸುಟ್ಟು ಬೂದಿಮಾಡುತ್ತದೆ. ಪ್ರಾಣವು ಬೇಗ ಹಾರಿ ಹೋಗುತ್ತದೆ. ದಿಗ್ಭ್ರಾಂತಿಯುಂಟಾಗಿ ಏನು ಮಾಡಲೂ ತೋರುವುದಿಲ್ಲ. ಆದರೂ ಅದನ್ನು ಹೇಳುತ್ತೇನೆ. ಎಂದು ಆ ಬ್ರಾಹ್ಮಣನು ತಾನು ಅನುಭವಿಸಿದ ಅವಸ್ಥೆಯನ್ನೆಲ್ಲ ಹೇಳಲು ಉದ್ಯುಕ್ತನಾದನು ವ॥ ಅದು ಹೇಗೆಂದರೆ ೫೦. ರಾಜಹಂಸನೆಂಬ ಮಗಧ ರಾಜನಿದ್ದಾನೆ. ಅವನು ಸತ್ವಗುಣವುಳ್ಳವನು. ಇಡೀ ಭೂಮಿಯಲ್ಲಿ ಪ್ರಸಿದ್ಧನಾದ ಭೂ

1. ಬ್ರಾಹ್ಮಣ ಮತ್ತು ಅವನ ಹೆಂಡತಿ

ಕಂ॥ ಆತನರಮನೆಯ ಸಚಿವರ್
ನೀತಿವಿದರ್ ಸಕಲಧರ್ಮಶಾಸ್ತ್ರಕ್ರಮ ವಿ
ಖ್ಯಾತರ್ ನಾನಾಭೋಗಪ
ರೀತರ್ ಪದೆದೆಣ್ಬರುಂ ವಿನೋದವಿಳಾಸರ್ ೫೧

ಅವರೊಳ್ ಪ್ರಸಿದ್ಧಿವಡೆದೊ
ಪ್ಪುವನಾತಂ ಪ್ರೇಮದತ್ತನೆಂಬಾತಂ ಪಾ
ಪವಿದೂರ ತೀರ್ಥಯಾತ್ರಾ
ವ್ಯವಸಾಯದೊಳೊಂದಿ ಪದೆಪಿನಿಂ ಪೊಱಮಟ್ಟಂ ೫೨

ವ॥ ಅಂತು ಪೊಱಮಟ್ಟನೇಕದೇಶಮಂ ಕಳೆದೋದು ಧರ್ಮಪುರಮೆಂಬ ಅಗ್ರಹಾರಕ್ಕೆ ಬಂದು ಯಜ್ಞಶರ್ಮನೆಂಬ ದ್ವಿಜೋತ್ತಮನ ಮನೆಯೊಳ್ ಕಿಱಿದುದಿನಮಿರಲ್

ಕಂ॥ ಆತನ ಸಚ್ಚಾರಿತ್ರ
ಕ್ಕಾತನ ಸದ್ಗುಣಕೆ ಸಾಡೆ ಸಂತೋಷಂಬ
ಟ್ಟಾತಂಗೆ ಯಜ್ಞಶರ್ಮಂ
ಪ್ರೀತಿ ಮಿಗಲ್ ಕಾಳಿಯೆಂಬ ಮಗಳಂ ಕೊಟ್ಟಂ ೫೩

ವ॥ ಅಂತಾಕಾಳಿಯುಂ ಪಾಣಿಗ್ರಹಣಮಂ ಮಾಡಿ ಕಿಱಿದುದಿನಮಿರಲವಳ್ಗೆ ಸಂತತಿಯಿಲ್ಲದಿರ್ಪುದಱಿಂ ಮಗುಳ್ದು ಯಜ್ಞಶರ್ಮನೆಂಬಂ

ಕಂ॥ ಅವಳನುಜೆಯುಂ ವಿಲಾಸೋ
ತ್ಸವದಿಂ ಕಾಳಿಂದಿಯೆಂಬಳಂ ಕೊಟ್ಟಂ ಭೂ
ದಿವಿಜನಿಧಿಯಾಕೆಯೊಳ್ ನಿ
ತ್ಯವಿನೋದದಿನಿರ್ದನನುದಿನಂ ತತ್ಸಚಿವಂ ೫೪

ಕಾಂತೆಯ ಕಾಂತನು. ವಿವಿಧ ಶತ್ರುರಾಜರಿಗೆ ಯಮ ಸ್ವರೂಪನು. ೫೧. ಅವನಿಗೆ ಎಂಟು ಜನ ಮಂತ್ರಿಗಳು. ಎಲ್ಲರೂ ನೀತಿವಿದರು. ಸಕಲ ಧರ್ಮಶಾಸ್ತ್ರಗಳನ್ನು ಬಲ್ಲವರು. ನಾನಾ ಭೋಗಗಳುಳ್ಳವರು. ವಿನೋದಪರರು. ೫೨. ಪ್ರೇಮದತ್ತನೆಂಬುವನು ಅವರಲ್ಲಿ ಪ್ರಸಿದ್ಧನಾದವನು. ಪಾಪರಹಿತನು. ತೀರ್ಥಯಾತ್ರೆಗಾಗಿ ಪ್ರೀತಿಯಿಂದ ಹೊರಟನು. ವ॥ ಹಾಗೆ ಹೊರಟು ಅನೇಕ ದೇಶಗಳನ್ನು ಸಂಚರಿಸಿ ಧರ್ಮಪುರವೆಂಬ ಒಂದು ಅಗ್ರಹಾರವನ್ನು ತಲುಪಿದನು. ಅಲ್ಲಿ ಯಜ್ಞಶರ್ಮನೆಂಬ ಬ್ರಾಹ್ಮಣ ಶ್ರೇಷ್ಠನ ಮನೆಯಲ್ಲಿ ಕೆಲವು ದಿನಗಳ ಕಾಲ ವಾಸಮಾಡಿದನು. ೫೩. ಅವನ ಒಳ್ಳೆಯ ನಡತೆಗೂ ಒಳ್ಳೆಯ ಗುಣಗಳಿಗೂ ಮೆಚ್ಚಿ ಆ ಯಜ್ಞಶರ್ಮನು ಪ್ರೀತಿಯಿಂದ ಪ್ರೇಮದತ್ತನಿಗೆ ಕಾಳಿಯೆಂಬ ತನ್ನ ಮಗಳನ್ನು ಕೊಟ್ಟನು. ವ॥ ಕಾಳಿಯನ್ನು ಮದುವೆ ಮಾಡಿಕೊಂಡು ಕೆಲವು ದಿನಗಳಿರಲು ಅವಳಿಗೆ ಮಕ್ಕಳಾಗಲಿಲ್ಲ. ಅದರಿಂದ ಮತ್ತೆ ಯಜ್ಞಶರ್ಮನು—೫೪. ಅವಳ ತಂಗಿ ಕಾಳಿಂದಿಯೆಂಬವಳನ್ನು ಸಂತೋಷದಿಂದ ಕೊಟ್ಟು ಮದುವೆ ಮಾಡಿದನು. ಆ ಮಂತ್ರಿಯು ಅವಳೊಡನೆ ದಿನವೂ ವಿನೋದದಿಂದ ಸುಖವಾಗಿ ಕಾಲ ಹಾಕುತ್ತಿದ್ದನು.

ವ|| ಅಂತಾಕೆಗಮಾತಂಗಮತಿಸ್ನೇಹಂ ಸಲುತ್ತಿರಲ್ ಕೆಲವು ದಿನದಿಂ ಮೇಲೆ

ಕಂ|| ಹೃದಯದೊಳನುರಾಗಾಂಕುರ
ಮುದಯಿಸೆ ಸಂತೋಷಮಖಿಳಬಂಧುಜನಕ್ಕಂ
ದುದಯಿಸೆ ಪರಮೋತ್ಸವದಿಂ
ದುದಯಿಸಿದಂ ತನಯನವಳ್ಗೆ ವಿಕ್ರಮನಿಳಯಾ ೫೫

ಧನಧಾನ್ಯಬಂಧುಮಿತ್ರರ್
ವನಿತಾತತಿ ರಾಜ್ಯಮೆಂಬುವೇವುದೊ ಮುದ್ದಿಂ
ಬಿನದಮನೊಡರ್ಚಿಯಾಡುವ
ತನಯಂ ಸಂಸಾರ ಶರಧಿಸೀಮೆಯದಲ್ತೇ ೫೬

ವ|| ಅಂತವರ್ಗೆ ಪುತ್ರೋತ್ಪತ್ತಿಯಾಗಲೊಡಂ ಪೂರ್ವನಿಶ್ಚಿತಮಪ್ಪ ತೀರ್ಥಕ್ಕೆ ಪೋಗಲೆಂದು ಯಜ್ಞಶರ್ಮನಿಂ ಕಳಿಪಿಸಿಕೊಂಡು ಕಾಳಿಕಾಳಿಂದಿ ತತ್ಕುಮಾರನಾತನ ದಾದಿ ಸಹಿತಂ ಸರಯೂನದಿಗೆ ಪೋಗಿ ತಂತಮಗೆ ರಮ್ಯಸ್ಥಾನಮಂ ನೋಡಿ ಸ್ನಾನಮಂ ಗೆಯ್ವಾಗಳ್

ಚಂ|| ಉರಿ ಪರಿದಪ್ಪುದೆನ್ನೊಡಲೊಳುಳ್ಳಿರ್ದೆ ಬೆಂದಪುದೆನ್ನ ಗಂಟಲಂ
ಸೆರೆಬಿಗಿದಪ್ಪುದೊಂದು ನುಡಿಯುಂ ತಲೆದೋರದು ಚಿತ್ತದುತ್ಸವಂ
ಮುಱುಟಿತು ಭಾಗ್ಯದೇಳ್ಗೆ ಬಯಲಾಯ್ತು ಸಮಸ್ತಮುದಂ ಮನೋಮುದಂ
ಬಱಡೆನಿಸಿತ್ತು ಮತ್ತಿಸಿರ್ದುದೇನೊ ವಿಧಿಪ್ರತಿಬಂಧಕಾರ್ಯಮಂ ೫೭

ವ|| ಆವಳಿಗೂ ಅವನಿಗೂ ಅತಿ ಸ್ನೇಹವು ಬೆಳೆಯಿತು. ಕೆಲವು ದಿನಗಳಾದ ಮೇಲೆ—೫೫. ವಿಕ್ರಮಕ್ಕೆ ಆಶ್ರಯನಾದವನೇ ! ಕೇಳು, ಅವಳಿಗೆ ಪರಮೋತ್ಸವಕ್ಕೆ ಕಾರಣನಾಗಿ ಮಗನೊಬ್ಬನು ಹುಟ್ಟಿದನು. ಅದರಿಂದ ಹೃದಯದಲ್ಲಿ ಅನುರಾಗದ ಅಂಕುರವು ಉದಯಿಸಿತು. ಅಖಿಳ ಬಂಧು ಜನರಿಗೂ ಸಂತೋಷವು ಉದಯಿಸಿತು. ೫೬. ಧನ ಧಾನ್ಯ ಬಂಧು ಮಿತ್ರರು ವನಿತೆಯರು ರಾಜ್ಯ ಇವುಗಳಿಂದ ಏನು ಪ್ರಯೋಜನ ? ಮುದ್ದಿನಿಂದ ವಿನೋದವನ್ನುಉಂಟುಮಾಡಿ ಆಡುವ ಮಗನು ಸಂಸಾರ ಸಾಗರದ ಎಲ್ಲೆಯಲ್ಲವೇ ? ವ|| ಹೀಗೆ ಅವರಿಗೆ ಪುತ್ರೋತ್ಪತ್ತಿಯಾದ ಮೇಲೆ ಹಿಂದೆಯೇ ನಿಶ್ಚಯಮಾಡಿದ್ದಂತೆ ತೀರ್ಥಯಾತ್ರೆಗೆ ಹೋಗಬೇಕೆಂದು ಯಜ್ಞಶರ್ಮನಿಂದ ಅಪ್ಪಣೆಪಡೆದು ಕಾಳಿ, ಕಾಳಿಂದಿ ಅವಳ ಮಗನದಾದಿ ಎಲ್ಲರೂ ಸೇರಿ ಸರಯೂ ನದಿಗೆ ಹೋದರು. ಅಲ್ಲಿ ತಮ ತಮಗೆ ಸುಂದರವಾಗಿ ಕಾಣುವ ಸ್ಥಳಗಳನ್ನು ಆರಿಸಿಕೊಂಡು ಸ್ನಾನಮಾಡಿದರು. ಆಗ ೫೭. ಇಬ್ಬರು ಸ್ತ್ರೀಪುರುಷರು "ನನ್ನ ಶರೀರದಲ್ಲಿ ಬೆಂಕಿ ಹತ್ತಿ ಕೊಂಡು ಉರಿಯುತ್ತಿದೆ. ಹೃದಯವು ಬೆಂದು ಹೋಗುತ್ತಿದೆ. ನನ್ನ ಗಂಟಲ ನರಗಳು ಸೇದಿ ಹೋಗುತ್ತಿವೆ. ಬಾಯಿಂದ ಒಂದು ಮಾತೂ ಹೊರಡುತ್ತಿಲ್ಲ. ಮನಸ್ಸಿನ ಆನಂದವು ಕುಗ್ಗಿ ಹೋಯಿತು. ಭಾಗ್ಯದ ಏಳಿಗೆಯು ಕುಂಠಿತವಾಯಿತು. ಎಲ್ಲ ರೀತಿಯ ಮುದವೂ ಮನಸ್ಸಿನ ಆನಂದವೂ

ವ॥ ಎಂದು ಸ್ತ್ರೀಪುರುಷರಿರ್ಬರುಂ ಬಿಸುಸುಯ್ಯಲಾನಿನಿತು ದುಃಖಕ್ಕೆ ಕಾರಣಮೇ ನೆಂಬುದುಂ ಮತ್ತಮಾ ದ್ವಿಜೋತ್ತಮನಿಂತೆಂದಂ

ಕಂ॥ ಕನಸಿನ ಸಿರಿ ಕಾರ್ಮುಗಿಲೊ
ಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನ ಡಾಳಂ
ಜನಪತಿಯ ಕೂರ್ಮೆಯೆನಲಾ
ತನೊಳಾಯ್ತಾತ್ಮಜನ ಸೌಖ್ಯಮಿನ್ನೇವೇಳ್ವೆಂ ೫೮

ವ॥ ಅದೆಂತೆನೆ

ಚಂ॥ ಹೃದಯದ ತಾಪದಿಂ ಸವತಿಮಚ್ಚರದಿಂ ತನಗಾತ್ಮಜಾತರಿ
ಲ್ಲದ ಘನಕೋಪದಿಂ ಪರರ ಪೆರ್ಚುಗೆಯಂ ಕಡುಕೆಯ್ದು ಕಾಣಲಾ
ಅದ ಚಲದಿಂದೆ ಪೆತ್ತವರ್ಗೆ ದುಃಖಮನೋಪದೆ ಮಾಡಿ ಕಾಳಿ ನೂಂ
ಕಿದಳೊಡಸಂದು ಬಂದ ತೊಱೆಯೊಳ್ ಮಗನಂ ಪಗೆಯೆಂಬ ಮಾಱ್ಕೆಯಿಂ ೫೯

ವ॥ ಅಂತು ಕಾಳಿ ತೊಱೆಯೊಳ್ ಮಗನಂ ನೂಂಕಿ ತಾನಲ್ಲದಂತಟುತ್ತೆಬರಲ್ ಇಂಗಿತಸ್ವಭಾವದಿಂದವಳೆ ನೂಂಕಿದಳೆಂದು ಪ್ರೇಮದತ್ತನಱಿದು

ಶೂನ್ಯವಾಯಿತು. ಬಂದಿರುವ ವಿಧಿತಂದ ದುಃಖವನ್ನು ಏನೆಂದು ವಿವರಿಸೋಣ". ವ॥ ಎಂದು ಹೇಳಿ ಕೊಂಡು ನಿಟ್ಟುಸಿರನ್ನು ಬಿಟ್ಟರು. ನಾನು 'ಇಷ್ಟು ದುಃಖಕ್ಕೆ ಕಾರಣ ವೇನು' ಎಂದು ಕೇಳಿದೆನು. ಒಡಕ್ಕೆ ಆ ಬ್ರಾಹ್ಮಣೋತ್ತಮನು ಮತ್ತೆ ಹೀಗೆಂದು ಹೇಳಿ ದನು. ೫೮. ಕನಸಿನಲ್ಲಿ ಕಾಣುವ ಐಶ್ವರ್ಯ. ಮಳೆಗಾಲದ ಮೋಡಗಳಿಂದ ನಿರ್ಮಿತ ವಾದ ಚಿತ್ರ, ಹೆಂಗಸರ ಪ್ರೀತಿ, ಮಿಂಚಿನ ಬೆಳಕು, ರಾಜನ ಸ್ನೇಹ ಇವುಗಳಂತೆ ಮಗನ ಸೌಖ್ಯವು ಅವನಲ್ಲಿ (ಹುಟ್ಟಿದ ಮಗನಲ್ಲಿ) ಅಸ್ಥಿರವಾಯಿತು. ಅದನ್ನು ಹೇಗೆ ಹೇಳಲಿ ? ವ॥ ಅದು ಹೇಗೆಂದರೆ—೫೯. ಹೃದಯದ ತಾಪದಿಂದಲೂ, ಸವತಿಯ ಮೇಲಿನ ಮಾತ್ಸರ್ಯದಿಂದಲೂ, ತನಗೆ ಮಕ್ಕಳಿಲ್ಲವೆಂಬ ಕೋಪದಿಂದಲೂ. ಪರರ ಉನ್ನತಿಯನ್ನು ಸೈಪನೆಯಿಂದ ನೋಡಲಾಗದ ಹಟದಿಂದಲೂ, ಕಾಳಿಯು ಶತ್ರುವೆಂದು ತಿಳಿದು ಮಗ ನನ್ನು ನದಿಗೆ ನೂಕಿದಳು, ಹೆತ್ತವರಿಗೆ ತುಂಬ ದುಃಖವನ್ನುಂಟುಮಾಡಿದಳು. ವ॥ ಹಾಗೆ ಕಾಳಿಯು ಮಗನನ್ನು ನದಿಗೆ ತಳ್ಳಿ, ತಾನು ಆ ಕೆಲಸವನ್ನು ಮಾಡದವಳಂತೆ ಅಳುತ್ತಾ ಬಂದಳು. ಅವಳ ಇಂಗಿತ ಸ್ವಭಾವದಿಂದ ಅವಳೇ ನೂಕಿದವಳೆಂದು ಪ್ರೇಮ

ಕಂ॥ ಹಾ! ಮಗನೆ ಹಾ! ಕುಮಾರಕ!
ಹಾ! ಮುದ್ದುಗ ಹಾ! ವಿಳಾಸನಿಧಿ ಹಾ! ಗುಣಿ ಹಾ!
ಹಾ! ಮಕ್ಕಳ ಮಾಣಿಕಮೆಂ
ದಾಮೋಹದೊಳಾತನೆಯ್ದೆ ದುಃಖಿತನಾದಂ ೬೦

ವ॥ ಅದಲ್ಲದೆಯುಂ

ಉ॥ ಬೆಟ್ಟವನೇಱಿ ಪಾಸಱಿಗೆ ಬೀೞ್ವೆನೊ ಪೆರ್ದೊಱೆಗೆನ್ನ ಜೀವಮಂ
ಕೊಟ್ಟು ಕೃತಾರ್ಥನಪ್ಪೆನೊ ದಾವಾಗ್ನಿಗೆ ಬೀೞ್ವೆನೊ ತನ್ನ ಜಿಹ್ವೆಯಂ
ತೊಟ್ಟನೆ ಕಿೞ್ತುಕೊಳ್ವೆನೊ ನದೀತಟದೊಳ್ ಪದೆದನ್ನ ಪಾನಮಂ
ಬಿಟ್ಟು ಶರೀರಮಂ ತೊರೆದು ಗೆಲ್ವೆನೊ ಸಂಸೃತಿಯಂ ನಿರಂತರಂ ೬೧

ವ॥ ಎಂದು ಚಿಂತಿಸಿ ಮತ್ತಂ ಮನ್ಮಾರ್ಗಕ್ಕಾತ್ಮವಿಘಾತಂ ಕರ್ತವ್ಯಮಲ್ತೆಂದು

ಚಂ॥ ಮೃದುತರಲೋಳಿವಾಯ್ ತಳರ್ವದಟ್ಟಡಿ ಮೆಲ್ಲನೆ ಮುದ್ದುಗೆಯ್ತವಿಂ
ಪೊದವಿದ ನುಣ್ನುಡಿ ಮುದಂ ಮಿಗೆ ತಪ್ಪಳಿಗಾಡುವಾಯತಂ
ತುದಿವೆರಲುಯ್ಯಲಾಟಮಿನಿತುಂ ಪದೆದೊಪ್ಪುವ ಪುತ್ರಮಾರನಿ
ಲ್ಲದ ತನುವೇವುದೆಂದು ತಪಮಂ ಚರಿಸಲ್ ಬಗೆದಂ ಮಹಾದ್ರಿಯೊಳ್ ೬೨

ದತ್ತನು ಆರಿತನು—೬೦. "ಹಾ ! ಮಗನೆ, ಹಾ! ಕುಮಾರನೆ, ಹಾ ! ಮುದ್ದುಗನೆ, ಹಾ ! ವಿಳಾಸ (ಬೆಡಗು) ಗಳಿಗಾಶ್ರಯನೆ, ಹಾ ! ಗುಣಶಾಲಿಯೆ, ಹಾ ! ಹಾ ! ಮಕ್ಕಳ ಮಾಣಿಕ್ಯವೇ" ಎಂದು ಆತನು ಮೋಹಿತನಾಗಿ ತುಂಬ ದುಃಖಿಸಿದನು. ವ।। ಅದಲ್ಲದೆ ೬೧. 'ಬೆಟ್ಟವನ್ನು ಹತ್ತಿ ಅಲ್ಲಿಂದ ಬಂಡೆಯ ಮೇಲೆ ಬೀಳಲೇ ! ಮಹಾನದಿಯಲ್ಲಿ ಬಿದ್ದು ಜೀವವನ್ನು ಕಳೆದುಕೊಂಡು ಕೃತಾರ್ಥನಾಗಲೇ ! ಕಾಳ್ಕಿಚ್ಚಿಗೆ ಹಾರಲೇ ! ಕೂಡಲೆ ನನ್ನ ನಾಲಿಗೆಯನ್ನು ಕಿತ್ತುಕೊಳ್ಳಲೇ ! ನದಿಯ ದಡದಲ್ಲಿ ಅನ್ನ ಪಾನಗಳನ್ನು ತೊರೆದು ಶರೀರವನ್ನು ಕಳೆದುಕೊಂಡು ಐಂದೇಸಲ ಸಂಸಾರವನ್ನು ಗೆಲ್ಲಲೇ' ಫ॥ ಎಂದು ಚಿಂತಿಸಿ ಮತ್ತೆ ನನ್ನ ಮಾರ್ಗಕ್ಕೆ ಆತ್ಮಹತ್ಯೆಯು ಕರ್ತವ್ಯವಲ್ಲ ಎಂದು ನಿಶ್ಚಯಿಸಿದನು. ೬೨. ಅನಂತರ ತುಂಬ ಮೃದುವಾದ ಜೊಲ್ಲುಸುರಿಯುವಬಾಯಿ, ನಡೆಯುವಾಗ ಇಡುವ ಪುಟ್ಟ ಪುಟ್ಟ ಹೆಜ್ಜೆ, ಮೆಲ್ಲಗೆ, ಮುದ್ದಾಟ, ಮಧುರವಾದ ನಯವಾದ ತೊದಲು ನುಡಿ, ಆನಂದದಿಂದ ತುದಿಬೆರಲನ್ನು ಬಾಯಲ್ಲಿಟ್ಟುಕೊಂಡು ಚಪ್ಪರಿಸುವುದು, ಈಚೆಗೂ ಆಚೆಗೂ ಒಲೆದಾಡುವುದು, ಈ ಗುಣಗಳಿಂದ ಕೂಡಿದ ಮಗನಿಲ್ಲದ ಮೇಲೆ ಈ ಶರೀರ ದಿಂದ ಪ್ರಯೋಜನವೇನು ? ಎಂದು ಚಿಂತಿಸಿ ಬೆಟ್ಟದಲ್ಲಿ ತಪಸ್ಸು ಮಾಡಲು ಆಲೋಚಿ

ಕಂ॥ ಸುತರುಳ್ಳೊಡೆ ಸಂಸಾರ
ಸ್ಥಿತಿ ಸುಖಮವರಿಲ್ಲದಂದು ಸಂಸಾರಿಗೆ ದು
ರ್ಗತಿ ತಪ್ಪದಪ್ಪುದದಱಿಂ
ಯತಿಮಾರ್ಗಂ ಸೌಖ್ಯಮಲ್ತೆ ಭಾವಿಪೊಡರಸಾ ೬೩

ಅಪ್ಪಪ್ಪೆನೆ ಮಿಗೆ ಪರಿತಂ
ದಪ್ಪುವ ಚೈಮುಂಡೆನಲ್ ನೊಸಲ್ಗೆಳಸುವ ಕೈ
ತಪ್ಪಳೆಗುಟ್ಟಲ್ ಕುಣಿಕುಣಿ
ದಪ್ಪುವ ಬಾಲಕನನುೞಿದು ಜೀವಿಪರೊಳರೇ ೬೪

ಉಡಿಗಂಟೆ ಮುಱಿವು ಮಾಗಾಯ್
ಸೊಡರ್ವಕ್ಕಿನ ಬೊಟ್ಟು ಪೊಳೆವ ಕಿಱುಜಡೆದುಱುಗಲ್
ಸಡಗರದ ಗೆಜ್ಜೆಯುಂದುಗೆ
ಕಡು ಚೆಲ್ವಾಗಿಪ್ಪ ಸುತನಡಂಗಿದನರಸಾ ೬೫

ಚಂ॥ ಕೃಪೆಯಿನಗಲ್ದ ಭೂಪತಿಯ ಪಟ್ಟಣದಿಂ ವನವಾಸವಗ್ಗಳಂ
ಕಪಟಿಯ ಸಂಗದಿಂ ಪುಲಿಯ ಸಂಗಮತೀವಸುಖಂ ದರಿದ್ರದಿಂ
ಕ್ಷಪಿಪುದಱಿಂದೆ ಲೇಸು ಮರಣಂ ಸುತರಿಲ್ಲದ ಬಾೞ್ಕೆಯಿಂ ಮಹಾ
ತಪದೊಳನಾರತಂ ತಪವನಾಂಪುದು ಸೌಖ್ಯಮಿದಲ್ತೆ ಸತ್ಪಥಂ ೬೬

ಸಿದನು. ೬೩. ಅರಸ, ಮಕ್ಕಳಿದ್ದರೆ ಸಂಸಾರದಲ್ಲಿ ಸುಖ. ಮಕ್ಕಳಿಲ್ಲದಿದ್ದರೆ ಸಂಸಾರಿಗೆ ದುರ್ಗತಿ ತಪ್ಪದು. ಆದುದರಿಂದ ಯತಿಯಮಾರ್ಗವೇ ವಿಚಾರಿಸಿದರೆ ಸೌಖ್ಯಕರವೆಂದು ತಿಳಿದುಬರುತ್ತದೆ. ೬೪. ಅಪ್ಪ ಅಪ್ಪ ಎನ್ನಲು ಓಡಿ ಬಂದು ಅಪ್ಪಿಕೊಳ್ಳುತ್ತಾನೆ. ಚೈಮುಂಡೆನಲು ? ಹಣೆಯನ್ನು ಕೈಯಿಂದ ಮುಟ್ಟಿಕೊಳ್ಳುತ್ತಾನೆ. ಚಪ್ಪಾಳೆ ಹೊಡೆದರೆ ಕುಣಿ ಕುಣಿದು ತಬ್ಬಿಕೊಳ್ಳುತ್ತಾನೆ. ಇಂಥ ಬಾಲಕನನ್ನು ಕಳೆದುಕೊಂಡು ಜೀವಿಸುವವರುಂಟೆ ? ೬೫. ಅರಸನೇ ! ಉಡಿದಾರಕ್ಕೆ ಕಟ್ಟಿದ ಗಂಟೆ, ಮುರಿವು, ಮಾವಿನ ಕಾಯಿ, ಕಾಡಿಗೆಯ ಬೊಟ್ಟು, ಹೊಳೆಯುವ ಸಣ್ಣ ಜಡೆಯ ಕೂದಲಿನ ಗೊಂಚಲು, ಸಡಗರದ ಗೆಜ್ಜೆ ಕಾಲಂದಿಗೆ ಇವುಗಳಿಂದ ಅತಿ ಸುಂದರನಾದ ಮಗನು ಸತ್ತುಹೋದನು. ೬೬. ದಯೆಯಿಲ್ಲದ ರಾಜನ ಪಟ್ಟಣದಲ್ಲಿರುವುದಕ್ಕಿಂತ ವನವಾಸವು ಮೇಲು. ಕಪಟಿಯ ಸಂಗಕ್ಕಿಂತ ಹುಲಿಯ ಸಂಗವು ಹೆಚ್ಚು ಸುಖಕರ. ಬಡತನದಿಂದ ಕೊರಗುವುದಕ್ಕಿಂತ ಮರಣವು ಉತ್ತಮ. ಮಕ್ಕಳಿಲ್ಲದ ಬಾಳುವೆಗಿಂತ ಮಹಾತಪಸ್ಸನ್ನು ಎಡಬಿಡದೆ ಆಚರಿಸು

ವ॥ ಎಂದು ಪುತ್ರವಿಯೋಗದಿಂ ಶರೀರಮಂ ನೀಗಲೆಂದು

ಕಂ॥ ಘೂಕಧ್ವನಿ ಶಾರ್ದೂಲಮ
ಹಾಕಳಕಳ ವನಗಜಾಸ್ಯ ಘೂತ್ಕೃತಿ ಘನ ಭ
ಲ್ಲೂಕವಿಕರಾಳಹೂಂಕೃತಿ
ಭೀಕರವೆನಿಸಿರ್ಪಾರಣ್ಯಮಂ ಮಿಗೆ ಪೊಕ್ಕಂ ೬೭

ಮ॥ ರವಿಚಂದ್ರಾತಪಸಂಕುಳ ಪ್ರಚುರನಿರ್ಭೇದ್ಯಂ ಜರದ್ವ್ಯಾಘ್ರಸಿಂ
ಹವನೇಭಾಕುಳಮುಗ್ರವಿಗ್ರಹ ಕಿರಾತಸ್ತೋಮ ಸಂಕೀರ್ಣ ಪೂ
ರ್ಣವಿಲಾಸಂ ಮೆಱೆದಿರ್ಪುದೊಂದು ವನಮಂ ಪೊಕ್ಕಲ್ಲಿ ನಿಶ್ಶಂಕೆಯಿಂ
ಯುವತೀಸಂಯುತನೊಪ್ಪುವೆತ್ತ ತಪಮಂ ಕೈಕೊಂಡನುತ್ಸಾಹದಿಂ ೬೮

ವ॥ ಅಂತು ಘೋರಾರಣ್ಯಮಂ ಪೊಕ್ಕು ದಶೇಂದ್ರಿಯಮಂ ದಶವಾಯುವಂ ನಿರ್ಬಂಧಿಸಿ ಕಣ್ಗಳಂ ಮುಗಿದು ಕೈಯ್ಯೊಡ್ಡಿ ವಾಯುವಶದಿಂ ಬಂದುದೆ ಆಹಾರಮೆಂದು ಪದ್ಮಾಸನದೊಳಿರ್ದು ಪದಿನಾಲ್ಕು ವರ್ಷಂ ತುಂಬೆ

ಕಂ॥ ಇಂದೀರೇಟ್ಬರಿಸಂ ಮಿಗೆ
ಸಂದತ್ತೊಲ್ದನಶನವ್ರತಂ ಬಿಡದಸುವಂ
ಪಿಂದಿಕ್ಕುವೆನೆಂದಿರೆ ಸಲೆ
ಬಂದೆಸಗಿತ್ತದ್ಭುತಾಶೆ ನಿನ್ನಿನ ದಿವಸಂ ೬೯

ವುದು ಸೌಖ್ಯ, ಇದೇ ಸನ್ಮಾರ್ಗವಲ್ಲವೇ ? ವ।। ಎಂದು ಮಗನ ಅಗಲಿಕೆಯಿಂದ ಶರೀರವನ್ನು ತೊರೆಯಬೇಕೆಂದು ೬೭. ಗೂಬೆಯ ಕೂಗು, ಹುಲಿಯ ಗರ್ಜನೆ, ಕಾಡಾನೆಗಳ ಘೀಂಕಾರ, ದೊಡ್ಡ ಕರಡಿಗಳ ಕರಾಳವಾದ ಹೂಂಕಾರ ಇವುಗಳಿಂದ ಭಯಂಕರವಾದ ಕಾಡನ್ನು ಹೊಕ್ಕನು. ೬೮. ಸೂರ್ಯಚಂದ್ರರ ಪ್ರಕಾಶವೂ ಆ ಕಾಡಿನಲ್ಲಿ ಪ್ರವೇಶಿಸುತ್ತಿರಲಿಲ್ಲ. ಮುದಿ ಹುಲಿ ಸಿಂಹ ಕಾಡಾನೆಗಳು ತುಂಬಿ ಉಗ್ರವಾಗಿತ್ತು. ಭೀಕರವಾದ ಶರೀರವುಳ್ಳ ಕಿರಾತರಿಂದ ತುಂಬಿ ಪೂರ್ಣವಿಲಾಸದಿಂದ ಮೆರೆದಿತ್ತು. ಆ ಕಾಡನ್ನು ನಿರ್ಭಯವಾಗಿ ಪ್ರವೇಶಿಸಿ ಸ್ತ್ರೀಯರೊಡನೆ ಉತ್ಸಾಹದಿಂದ ತಪಸ್ಸನ್ನು ಕೈಗೊಂಡನು. ವ।। ಹಾಗೆ ಘೋರವಾದ ಕಾಡನ್ನು ಪ್ರವೇಶಿಸಿ ಹತ್ತು ಇಂದ್ರಿಯಗಳನ್ನೂ ಹತ್ತು ವಾಯುಗಳನ್ನೂ ಅಡಗಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಕೈನೀಡಿ ಗಾಳಿಯಿಂದ ಹಾರಿ ಬಂದುದನ್ನೇ ಆಹಾರವನ್ನಾಗಿ ಮಾಡಿಕೊಂಡು ಪದ್ಮಾಸನದಲ್ಲಿ ಕುಳಿತು ಹದಿನಾಲ್ಕುವರ್ಷ ತಪಸ್ಸುಮಾಡಿದನು. ೬೯. 'ಇಂದಿಗೆ ಹದಿನಾಲ್ಕುವರ್ಷಗಳು ತುಂಬಿದುವು. ಶ್ರದ್ಧೆಯಿಂದ ಉಪವಾಸ ವ್ರತವನ್ನು ನಿಲ್ಲಿಸದೆ ಪ್ರಾಣಗಳನ್ನು ತೊರೆಯುವೆನು' ಎಂದು ಯೋಚಿಸು

ಚಂ॥ ಯಮನಿಯಮಾಸನಾದಿ ವಿವಿಧ ಕ್ರಮದಿಂ ಗಿರಿತಳ್ಪದೊಳ್ ಮನೋ
ರಮೆಯುತಂ ತಪಶ್ಚರಣಮಂ ತಳೆದೆನ್ನೊಡಲಂ ಬಿಸುಟ್ಟು ಸಂ
ಯಮಿನಿಗೆ ಪೋಪೆನೆಂದು ತನುವಂ ಕ್ಷಪಿಸುತ್ತಿರಲೊಂದಪೂರ್ವ ಸಂ
ಭ್ರಮದೊಳೆ ಗಾಳಿ ತೀಡಿತದನೇವೊಗಳ್ವುಪ್ಪುದೊ ವಿಕ್ರಮೋದಯಾ ೭೦

ವ॥ ಅದೆಂತೆನೆ

ಪೊಡೆಯುತ್ತುಂಗಿರಿಶೃಂಗಮಂ ನೆಗೆಪುತುಂ ವ್ಯೋಮಕ್ಕೆ ಭೂಜಂಗಳಂ
ಕೆಡಪುತ್ತುಂ ಗುಹೆಯೊಳ್ ಪ್ರತಿಧ್ವನಿಗುಡುತ್ತುಂ ನಿಮ್ನಗಾಸ್ಥಾನದೊಳ್
ತೊಡರುತ್ತುಂ ಮಳೆವಕ್ಕೆಯೊಳ್ ಮೃಗಮನಂದೊಡ್ಡಿಸುತ್ತಾರ್ಜಿನು
ಗ್ಗಡದಿಂ ತೀಡಿದುದೊಂದು ಘೋರಪವನಂ ಚಿತ್ರಾವಹಂ ನಾಡೆಯುಂ ೭೧

ವ॥ ಅಂತು ಬಿಱುಗಾಳಿ ತೀಡಲದಱಿಂದೊಳ್

ಕಂ॥ ನಿಮ್ಮಯ ಸುತನಂ ಕಣ್ಡಪಿ
ರುಮ್ಮಳಮಿನ್ನೇಕೆ ನಾಳೆ ಪಗಲೆನುತಾಗಳ್
ತಮ್ಮಿರ್ಬರ ಮನದುತ್ಸಾ
ಹಮ್ಮಿಗಲೊಂದೋಲೆ ಬಿಟ್ಟುದಾತನ ಕರದೊಳ್ ೭೨

ವ॥ ಅಂತಾತನೊಡ್ಡಿದ ಕರತಲದೊಳೊಂದೋಲೆ ವಾಯುವಶದಿಂ ಬೀಟ್ಟುದುಮದಂ ಕಣ್ದೆಱೆದು ನೋಡಿ

ತ್ತಿರಲು ನೆನ್ನೆಯದಿವಸ ಅದ್ಭುತವಾದ ರೀತಿಯಲ್ಲಿ ಆಶೆಯೊಂದು ಒದಗಿತು. ೭೦. ಯಮ ನಿಯಮ ಆಸನ ಮೊದಲಾದ ಯೋಗಾಭ್ಯಾಸದ ವಿಧಾನಗಳಿಂದ ಬೆಟ್ಟದ ತಪ್ಪಲಿನಲ್ಲಿ ಹೆಂಡತಿಯೊಡನೆ ತಪಸ್ಸನ್ನಾಚರಿಸಿ ಶರೀರವನ್ನು ಬಿಸುಟು ಯಮಲೋಕಕ್ಕೆ ಹೋಗಬೇಕೆಂದು ದೇಹವನ್ನು ಕರಗಿಸುತ್ತಿರುವಾಗ ಸಂಭ್ರಮದಿಂದ ಒಂದು ಗಾಳಿಯು ಬೀಸಿತು. ವಿಕ್ರಮೋದಯನೆ ಅದನ್ನು ಏನೆಂದು ಹೊಗಳಲಿ. ವ॥ ಅದು ಹೇಗೆಂದರೆ—೭೧. ಒಂದು ಘೋರವಾದ ಬಿರುಗಾಳಿಯು ಆಶ್ಚರ್ಯಕರವಾದ ರೀತಿಯಲ್ಲಿ ವೇಗವಾಗಿ ಬೀಸಿತು. ಅದು ಬೆಟ್ಟದ ಶಿಖರಗಳನ್ನು ಹೊಡೆದು ಕೆಡಹಿತು. ಮರಗಳನ್ನು ಕಿತ್ತು ಆಕಾಶಕ್ಕೆ ಹಾರಿಸಿತು. ಗುಹೆಗಳಲ್ಲಿ ಎದುರುದನಿಯನ್ನುಂಟುಮಾಡಿತು. ನದಿಗಳು ಹರಿಯುವ ಇಳಿಜಾರುಗಳಲ್ಲಿ ತೊಡರಿನಿಂತು ಹರಿಯಿತು. ಮಳೆಗಳಲ್ಲಿ ಮೃಗಗಳು ಗುಂಪುಗೂಡುವಂತೆ ಮಾಡಿತು. ವ॥ ಹಾಗೆ ಬಿರುಗಾಳಿಯು ಬೀಸಲು ಅದರಿಂದ ೭೨. 'ನಾಳೆ ಹಗಲು ನಿಮ್ಮ ಮಗನನ್ನು ಕಾಣುವಿರಿ. ಇನ್ನು ದುಃಖಿಸಬೇಕಾಗಿಲ್ಲ.' ಎಂದು ಬರೆದ ಪತ್ರವೊಂದು ಅವನ ಕೈಯ್ಯಲ್ಲಿ ಬಿದ್ದಿತು. ಅವರಿಬ್ಬರ ಉತ್ಸಾಹ ಮಿಗಿಲಾಯಿತು. ವ॥ ಹಾಗೆ ಅತನು ನೀಡಿದ್ದ ಕರತಳದಲ್ಲಿ ಒಂದು ಪತ್ರವು ವಾಯುವಶದಿಂದ ಹಾರಿ ಬಂದು

ಮ ಸ್ರ॥ ಇದು ಮತ್ಪ್ರಾಣಪ್ರತಿಷ್ಠಾಪಕಮಿದು ಮುದವಾರಾಶಿಪೂರ್ಣೇಂದು ನೋಡ
ಲ್ಕಿದರರ್ಥಂ ಸಾರ್ಥಕರ್ಣಾಮೃತಮಿದಱ ಲಸದ್ದರ್ಶನಂ ಮತ್ತನೂಜಾ
ಭ್ಯುದಯಂ ಪೆಂಪಿಂದಿದೇೞ್ತಂದುದು ಸಕಲಸುಖಂ ಮುಂದಿದಿರ್ವಪ್ಪುದಂ ಪೇ
ೞ್ದುದೆನುತ್ತಾಪತ್ರವಂ ಕೂರ್ತವಯವದೊಳಲಂಪಿಂ ಸಮಂತೊತ್ತಿಕೊಂಡಂ ೭೩

ವ॥ ಅಂತಪೂರ್ವಮಪ್ಪ ಪತ್ರಮಂ ಕಂಡು ಹರ್ಷವಿಷಾದಂಗಳನೊಂದನೊಂದಟ್ಟಿ ಮುಗುಳ್ದು ಪುತ್ರಸ್ಮರಣದುಃಖಮಂ ಕೈಕೊಂಡು ಸಂತೈಸಿಕೊಂಡಿಂತೆಂದಂ

ಈ ಕಡೆ ಮೂಲಪ್ರತಿಗಳಲ್ಲಿ ಕಥಾಸಂದರ್ಭಕ್ಕೆ ಅನುಚಿತವಾದ

ಕಂ॥ ಪಲವಾಳಾಪದೊಳೇಂ ಕೇ
ಳೆಲೆ ಸೊಬಗ ತದೀಯಪುತ್ರನುಂ ನೀನೆ ವನ
ಸ್ಥಲದೊಳ್ ತಪ್ಪದುಜ್ಜುಗದೀ
ನೆಲಸಿರ್ದಾ ಪ್ರೇಮದತ್ತನುಂ ನಾನೆಂದಂ ಎಂಬ ಪದ್ಯವೊಂದಿದೆ. ೭೪

ಜಗದೊಳ್ ಪುತ್ರವಿಹೀನರ
ಮೊಗಮಂ ನೋಡಲ್ಕೆ ದೋಷಮಕ್ಕದಱಿಂದಂ
ಮಿಗೆ ಪಾತಕಿಯಾನೆನ್ನಂ
ಬಗೆವರೆ ನುಡಿಸುವರೆ ಭಾಗ್ಯವಂತರ್ ಧರೆಯೊಳ್ ೭೫

ಬಿದ್ದಿತು. ಅದನ್ನು ಕಣ್ಣುಗಳನ್ನು ತೆರೆದು ನೋಡಿ—೭೪. 'ಇದು ನನ್ನ ಪ್ರಾಣಗಳನ್ನು ನಿಲ್ಲಿಸತಕ್ಕುದು, ಇದು ಆನಂದಸಾಗರವನ್ನುಕ್ಕಿಸುವ ಪೂರ್ಣಚಂದ್ರ. ವಿಚಾರಿಸಿದರೆ ಕರ್ಣಾಮೃತವಾದ ಅರ್ಥವನ್ನು ಸೂಚಿಸುತ್ತದೆ. ಇದರ ದರ್ಶನವು ನನ್ನ ಮಗನ ಅಭ್ಯುದಯ ಸೂಚಕವಾಗಿದೆ. ಈಗ ಒದಗಿದ ಈ ಹಿರಿದಾದ ಹರ್ಷವು ಮುಂದೆ ಬರುವ ಸಕಲ ಸುಖಗಳನ್ನೂ ಹೇಳುತ್ತಿದೆ,' ಎಂದು ಹೇಳುತ್ತಾ ಆ ಪತ್ರವನ್ನು ಪ್ರೀತಿಯಿಂದ ತನ್ನ ಮೈಗೆ ಒತ್ತಿಕೊಂಡನು. ವ॥ ಅಪೂರ್ವವಾದ ಆ ಪತ್ರವನ್ನು ನೋಡಿದಾಗ ಹರ್ಷ ವಿಷಾದಗಳು ಒಂದು ಮತ್ತೊಂದನ್ನು ಒತ್ತರಿಸಿಕೊಂಡು ಬಂದುವು. ಮತ್ತೆ ಪುತ್ರಸ್ಮರಣೆಯಿಂದ ದುಃಖವುಂಟಾಯಿತು. ಮತ್ತೆ ಸಮಾಧಾನ ಮಾಡಿಕೊಂಡು ಹೀಗೆ ಹೇಳಿದನು. ೭೫. ಜಗತ್ತಿನಲ್ಲಿ ಮಕ್ಕಳಿಲ್ಲದವರ ಮುಖವನ್ನು ನೋಡಿದರೆ ದೋಷವು ಬರುತ್ತದೆ. ಆದುದರಿಂದ ತುಂಬ ಪಾಪಿಯಾದ ನನ್ನನ್ನು ಭೂಮಿಯಲ್ಲಿ ಭಾಗ್ಯವಂತರು ಲಕ್ಷಿಸು

ವ॥ ಅಂತೆಂಬುದುಂ

ಚಂ॥ ಎನಗನುರಾಗಮುರ್ಬೆ ತನು ಕೊರ್ಬೆ ಮುದಶ್ರುಗಳುಣ್ಮಿ ಕೊರ್ವೆ ಭೋಂ
ಕನೆ ಪೊಱಪೊಣ್ಮೆ ಮೋಹರಸಮುರ್ಕೆ ಮುದಂ ಕುಡಿಯಿಕ್ಕೆ ಭಕ್ತಿ ಭಾ
ವನೆ ತಲೆದೋಱೆ ವಕ್ತ್ರಕಮಲಂ ನಯಮೇಱೆ ಮನಂ ತಳಿರ್ತು ಜು
ಮ್ಮನೆ ಪುಳಕಂ ಕವಲ್ತು ಬಿಗಿದಪ್ಪಿದೆನಪ್ಪಮನಮ್ಮ(?)ನುರ್ವರಾಧಿಪಾ ೭೬

ವ॥ ಅಂತಿರ್ದವರೆಮ್ಮ ತಾಯ್ತಂದೆಗಳೆಂಬುದನಱಿದಲ್ಲಿಗೆ ಬಂದ ವೃತ್ತಾಂತಮಂ ಕೇಳ್ವೆನೆಂದು ಸ್ಥೈರಿಸಿಕೊಂಡು ಮತ್ತಮಿಂತೆಂದೆಂ

ಕಂ॥ ಈ ದೀರ್ಘಬಾಹುವಿರ್ದೆಡೆ
ಗಾದರದಿಂ ಬಂದಿರೇಕೆ ಪೇೞಿಮೆನಲ್ಕಾ
ಹಾದೈವಮೆ ಎಂದಧಿಕವಿ
ಷಾದಂ ಮಿಗೆ ಕೇಳೆನುತ್ತುಮವನಿಂತೆಂದಂ ೭೭

ವಾಯುವಶದಿಂದೆ ಬಂದ ಶು
ಭಾಯತವೆಂದೆನಿಪ ಪತ್ರಭಾಷಿತದಿಂದಾ
ಹಾಯೆಂದು ಪೆರ್ಚಲೆನ್ನೊಳ್
ಗೇಯುರಸಂ ನೆಲಸಿದತ್ತು ಮನದುತ್ಸವದಿಂ ೭೮

ತ್ತಾರೆಯೇ! ಮಾತನಾಡಿಸುತ್ತಾರೆಯೇ!" ವ|| ಹಾಗೆ ಹೇಳಲು—೭೬. ಮಹಾರಾಜನೆ ನನಗೆ ಅನುರಾಗವು ಉಬ್ಬಿತು. ಶರೀರವು ಕೊಬ್ಬಿತು, ಸಂತೋಷದ ಕಂಬನಿ ಉಕ್ಕಿತು. ಸ್ನೇಹವು ವೇಗವಾಗಿ ಹೊರ ಹೊಮ್ಮಿತು. ಮೋಹರಸವು ಉಕ್ಕಿತು. ಆನಂದವು ಲತೆಯಂತೆ ಹಬ್ಬಿತು. ಭಕ್ತಿಯ ಭಾವನೆಯು ಕಾಣಿಸಿಕೊಂಡಿತು. ಮುಖ ಕಮಲವು ಪ್ರಕಾಶಿಸಿತು. ಮನಸ್ಸು ಚಿಗುರಿ ಜುಮ್ ಎಂದು ರೋಮಾಂಚವುಂಟಾಯಿತು ? (? ರೋಮಾಂಚವನ್ನು ಪಡೆದು ನನ್ನ ಜನನೀಜನಕರನ್ನು ಬಿಗಿದಪ್ಪಿಕೊಂಡೆನು ?) ವ|| ಹಾಗಿದ್ದವರನ್ನು ನನ್ನ ತಾಯಿತಂದೆಗಳೆಂದು ಅರಿತೆನು. ಮತ್ತು ಅಲ್ಲಿಗೆ ಬಂದ ವೃತ್ತಾಂತವನ್ನು ಕೇಳುವೆನೆಂದು ಸ್ಥೈರಿಸಿಕೊಂಡು ಹೀಗೆಂದೆನು—೭೭. "ಈ ದೀರ್ಘಬಾಹುವಿದ್ದ ಸ್ಥಳಕ್ಕೆ ಆದರದಿಂದ ಏಕೆಬಂದಿರಿ ? ಹೇಳಿ." ಎಂದು ಕೇಳಿದೆನು. ಅದಕ್ಕೆ ಅವನು ಹಾ ದೈವವೆ ! ಎಂದು ಉದ್ಗರಿಸಿ ಅಧಿಕ ವಿಷಾದದಿಂದ 'ಕೇಳು' ಎಂದು ಹೀಗೆ ಹೇಳಿದನು. ೭೮. "ವಾಯುವಶದಿಂದ ಶುಭಾಶಯವುಳ್ಳ ಪತ್ರವೊಂದು ಬಂದಿತು. ಅದರಲ್ಲಿದ್ದ ಮಾತುಗಳಿಂದ ನನಗೆ ಆಹಾ ಎಂದು ಉದ್ಗಾರದೊಡನೆ ಉತ್ಸಾಹವು ಹೆಚ್ಚಿ

ವ॥ ಅದೆಂತೆನೆ

ಚಂ॥ ವನಮೃಗರಾಜಿಗಳ್ ಪಡೆದು ಮೆಯ್ಮಱೆಯಲ್ಕರಿಕೆಳ್ದ ಕಾಟಿಪ್ಪೊಲಂ
ನನೆಕೊನೆವೋಗೆ ಭಿಲ್ಲತತಿ ಬಲ್ಬೆಱಗಾಗಿರೆ ಮತ್ತೆ ಪಂಚಮ
ಸ್ವನವೊಗೆವಪ್ಪಿಲಾಣೆವಣಿಯಿಂ ಪೊಸದೇಸೆಯೆನಲ್ಕೆ ಕೋಕಿಲ
ಧ್ವನಿಯನದಿರ್ಪಿಯೆನ್ನ ಮನಮುಕ್ಕಿರೆ ಪಾಡಿದೆನಾವನಾಂತದೊಳ್ ೭೯

ಕಂ॥ ವಲ್ಲಕಿಯುಂ ಕಾಮನ ಪೂ
ವಿಲ್ಲ ಗುಣಧ್ವನಿಯುನಿಟಿಕೆಗೆಯ್ದು ಕುಜಂಗಳ್
ಪಲ್ಲವಿಸಲೆನ್ನ ಚಿತ್ತ ಸು
ಖೋಲ್ಲಾಸಂ ಪೆರ್ಚಿ ಪಾಡಿದೆಂ ನಲವಿಂದಂ ೮೦

ವ॥ ಅಂತಾಪುತ್ರನಂ ನಾಳೆ ಮಧ್ಯಾಹ್ನಕ್ಕೆ ಕಾಣ್ಬೆನೆಂಬ ಹರ್ಷಾತಿರೇಕದಿಂ ಪಾಡ ತಿರ್ಪಾಗಳ್

ಕಂ॥ ಈ ಭೂಪಂ ಬೇಂಟೆಗೆ ಬಂ
ದಾಭೂಧರದಲ್ಲಿ ಪಾಡುತಿರ್ದೆನ್ನಂ ಕಂ
ಡಾಭೋಗವಾಗೆ ಕಿನ್ನರ
ಲಾಭಂ ತನಗಾಯ್ತೆನುತ್ತೆ ಪಿಡಿದೆಯ್ತಂದಂ ೮೧

ಮನಸ್ಸಿನಲ್ಲಿ ಗಾನರಸವು ಉಕ್ಕಿತು. ವ।। ಅದು ಹೇಗೆಂದರೆ—೭೯. ಆ ವನಾಂತದಲ್ಲಿ ಮನಸ್ಸಿನಲ್ಲಿ ಆನಂದವು ಉಕ್ಕಿ ಕೋಗಿಲೆಯ ಧ್ವನಿಯನ್ನೂ ಮೀರಿಸಿ ಹಾಡಿದೆನು. ಅದನ್ನು ಕೇಳಿ ಕಾಡಿನ ಪ್ರಾಣಿಗಳೆಲ್ಲ ಹರ್ಷದಿಂದ ಮೆಯ್ಮರೆತುವು. ಸುಟ್ಟು ಕರಿಕಾಗಿದ್ದ ಕಾಡಿನ ಹೊಲಗಳೆಲ್ಲ ನನೆಕೊನೆಗಳಿಂದ ತುಂಬಿ ಪ್ರಕಾಶಿಸಿದುವು. ಕಾಡಿನ ಭಿಲ್ಲರ ಗುಂಪು ಬೆರಗಾಯಿತು. ಪಂಚಮ ೮೦. ಮನಸ್ಸಿನಲ್ಲಿ ಸುಖೋಲ್ಲಾಸವು ಹೆಚ್ಚಿ ನಲವಿನಿಂದ ಹಾಡಿದೆನು. ಅದು ವೀಣಾಧ್ವನಿಯನ್ನೂ ಕಾಮನ ಬಿಲ್ಲಿನ ಹಗ್ಗದ ಧ್ವನಿಯನ್ನೂ ಅಡ ಗಿಸಿ ಮರಗಳನ್ನು ಚಿಗುರಿಸಿತು. ವ।। ಹಾಗೆ ಮಗನನ್ನು ನಾಳೆ ಮಧ್ಯಾಹ್ನ ನೋಡು ನೆಂದು ಹರ್ಷಾತಿರೇಕದಿಂದ ಹಾಡುತ್ತಿದ್ದೆ. ಆಗ—೮೧. ಈ ದೀರ್ಘಬಾಹುವೆಂಬ ರಾಜನು ಬೇಟೆಯಾಡುವುದಕ್ಕಾಗಿ ಬಂದು ಆ ಬೆಟ್ಟದಲ್ಲಿ ಹಾಡುತ್ತಿದ್ದ ನನ್ನನ್ನು ಕಂಡು ಸಂತೋಷವಾಗಲು, 'ತನಗೆ ಕಿನ್ನರನ ಲಾಭವಾಯಿತು' ಎಂದು ಹೇಳುತ್ತಾ ನನ್ನನ್ನು ಇಲ್ಲಿಗೆ

ವ॥ ಎಂದು ಹೇೞ್ವುದುಂ

ಕಂ॥ ಎನ್ನಯ ಕಣ್ಮಲರ್ಗಳ ನೀ
ರೆನ್ನಯ ಮುಂಗಾಣಲೆಸೆದಿರಲ್ ಕಂಡವರ್ಗಳ್
ನಿನಗಿನಿತೇಕೆ ದುಃಖಂ
ಚೆನ್ನಿಗ ನೀನಾರೆನಲ್ ತೊದಳ್ಕಿಗೆ ನುಡಿದೆಂ ೮೨

ಕಾಳಿ ತೊಱೆ[3]ಯೊಳಗೆ ನೂಂಕಿದ
ಬಾಳಕನೆಂಬಾತನಾನೆನುತ್ತಂಘ್ರಿಗೆ ಮ
ದ್ಭಾಳವನೀಡಾಡಲ್ ಪದೆ
ದಾಳಿಂಗಿಸಿದರ್ ವಿಳಾಸದಿಂದವರೆನ್ನಂ ೮೩

ತಂದೆಯಲರ್ಗ್ಗಣ್ಗಳೊಳಾ
ನಂದಾಶ್ರು ತುಳುಂಕೆ ತಾಯ ಮೊಲೆಯೊಳ್ ಪಾಲ್ ಜು
ಮ್ಮೆಂದೆೞ್ಚು ಪಾಯಲಿರ್ವರ್
ನಂದನನಂ ನೋಡಿಯಪ್ಪಿ ಹರ್ಷಿತರಾದರ್ ೮೪

ವ॥ ಅಂತು ಹರ್ಷಿತರಾಗಿ

ಕ್ಷೋಣೀತಲದೊಳ್ ತ್ರಿಜಗ
ತ್ಪ್ರಾಣಂ ಪವನಂ ದಲೆಂಬುದೆನ್ನೊಳ್ ದಿಟಮಾ
ಯ್ತೂಣೆಯಮಿಲ್ಲದೆ ಮಕ್ಕಳ
ಮಾಣಿಕವಂ ಕಂಡೆವೆಂದೆನುತ್ತವರೊಸೆದರ್ ೮೫

ಹಿಡಿದು ತಂದನು. ವ॥ ಎಂದು ಹೇಳಲು ೮೨. ನನ್ನ ಹೂವಿನಂಥ ಕಂಗಳಲ್ಲಿ ನೀರು ಮುಂದೆ ಸ್ಪಷ್ಟವಾಗಿ ಕಾಣುತ್ತಿರಲು ಅದನ್ನು ಕಂಡು, ನನ್ನ ತಂದೆತಾಯಿಗಳು 'ಚೆನ್ನಿಗ ನಿನಗೇಕೆ ಇಷ್ಟು ದುಃಖ? ನೀನು ಯಾರು?' ಎಂದು ಕೇಳಿದರು. ಅದಕ್ಕೆ ನಾನು ೮೩. ಕಾಳಿಯು ನದಿಗೆ ನೂಕಿದ ಬಾಲಕನು ನಾನೆ' ಎಂದು ಹೇಳುತ್ತಾ ಅವರ ಪಾದಗಳ ಮೇಲೆ ಹಣೆಯನ್ನು ಚಾಚಲು, ಅವರು ಪ್ರೀತಿಯಿಂದ ನನ್ನನ್ನು ಆಲಿಂಗಿಸಿಕೊಂಡರು. ೮೪. ತಂದೆಯ ಅಲರ್ಗಣ್ಣುಗಳಲ್ಲಿ ಆನಂದಾಶ್ರುವು ಸುರಿಯಿತು. ತಾಯ ಮೊಲೆಯಲ್ಲಿ ಜುಮ್ ಎಂದು ಹಾಲು ಉಕ್ಕಿ ಹರಿಯಿತು. ಇಬ್ಬರೂ ಮಗನನ್ನು ನೋಡಿ ತಬ್ಬಿಕೊಂಡು ಹರ್ಷಿತರಾದರು. ವ॥ ಹಾಗೆ ಹರ್ಷವನ್ನು ಹೊಂದಿ– ೮೫. 'ಭೂಮಂಡಲದಲ್ಲಿ ವಾಯುವು ಮೂರುಲೋಕಗಳ ಪ್ರಾಣನಲ್ಲವೇ ! ಈ ಮಾತು ನನ್ನ ವಿಷಯದಲ್ಲಿ ಲೋಪವಿಲ್ಲದೆ ನಿಜವಾಯಿತು. ಮಕ್ಕಳು ಮಾಣಿಕ್ಯವನ್ನು ಕಂಡೆವು' ಎಂದು ಹೇಳುತ್ತಾ ಆನಂದಿ

ವ॥ ಅಂತು ಸಂತಸದಂತವನೆಯ್ದಿದ ತಂದೆತಾಯ್ಗಳಸಾೞದೋೞಾರೂಢರಪ್ಪಂತುಮಾಡಿ ಬೞಿಗಳ್ ದೀರ್ಘಬಾಹುಕನಂ ಕಾಲಮಂದಿರವನೆಯ್ದಿಸಿದೊಸಗೆಯಂ ಕುಸುಮಪುರೇಶಂ ಕೇಳ್ದೆನಗಿದಿರ್ವಂದೊಡಾತಂ ಸಹಿತಂ ದೀರ್ಘಬಾಹುಕನ ಲಲಿತಪುರಕ್ಕೆ ನಡೆದು

ಉ॥ ಅಂಜದೆ ಬಂದು ಕಾಣ್ಬುದಃ ಸಮಸ್ತಜನಂ ಸಚಿವರ್ಕಳೊಲ್ಮೆಯಿಂ
ಕುಂಜರವಾಜಿಕೋಶತತಿಯಂ ಪಡೆದೊಪ್ಪಿಪುದಪ್ಪಶೋಭೆಯಿಂ
ರಂಜಿಪುದಾವಗಂ ಪುರವನೆಂದು ನೃಪಾಲಯಮಂ ವಿಳಾಸದಿಂ
ಸಂಜನಿತಪ್ರಿಯಂಬೆರಸು ಪೊಕ್ಕೆನತೀವ ಮನೋನುರಾಗದಿಂ ೮೬

ವ॥ ಅಂತು ದೀರ್ಘಬಾಹುಕನರಮನೆಯಂ ಧರ್ಮಶೇಖರಸಹಿತಂ ಪೊಕ್ಕು ಪುರಜನ ಪರಿಜನವಂ ತಂದು ಧರ್ಮಶೇಖರಂಗೆ ಕಾಣಿಸಲಾತಂ ಪ್ರೀತಿವಟ್ಟು

ಕಂ॥ ಎನ್ನ ಛಲವಿಂದು ಸಂದ
ತ್ತೆನ್ನ ಮನೋರಥ ಫಲಂ ಕರಂ ಸಾರ್ದುದು ಮ
ತ್ತೆನ್ನ ಕುಲವೊಳ್ಪುವೆತ್ತುದು
ನಿನ್ನಿಂದೆನಗೆಂದು ಧರ್ಮಶೇಖರನೊರೆದಂ ೮೭

ವ॥ ಎಂದು ಸಂತೋಷಂಬಟ್ಟದೆ ಮುಹೂರ್ತವಾಗೆ ತನ್ನ ಮಗಳಪ್ಪ ಕುಸುಮಾವತಿ ಯನೆನಗೆ ಕೊಟ್ಟಲ್ಲಿಯೆ ಪಟ್ಟವಂ ಕಟ್ಟಿ ತಾಂ ಕುಸುಮಪುರಿಗೆ ಪೋದಂ ಇತ್ತಲ್

ಸಿದರು. ವ॥ ಹಾಗೆ ಸಂತಸದ ತುದಿಯನ್ನು ತಲಪಿದ ತಾಯಿತಂದೆಗಳನ್ನು ಮೇನೆ ಯಲ್ಲಿ ಕುಳ್ಳಿರಿಸಿಕೊಂಡು ಹೊರಟೆನು. ಆಗ ದೀರ್ಘಬಾಹುವನ್ನು ಯಮನಗರಿಗೆ ಕಳುಹಿಸಿದ ಶುಭವೃತ್ತಾಂತವನ್ನು ಕೇಳಿದ ಕುಸುಮಪುರದೊಡೆಯನು ನನಗೆ ಎದಿರು ಗೊಂಡು ಬಂದನು. ಅವನೊಡನೆ ದೀರ್ಘಬಾಹುಕನ ಲಲಿತಪುರಕ್ಕೆ ಹೋದೆನು. ೮೬. "ಎಲ್ಲ ಜನರೂ ಹೆದರದೆ ಬಂದು ಕಾಣಬೇಕು. ಮಂತ್ರಿಗಳು ಪ್ರೀತಿಯಿಂದ ಆನೆ ಕುದುರೆ ಕೋಶಗಳನ್ನು ತಂದೊಪ್ಪಿಸಬೇಕು. ಪುರವನ್ನು ಯಾವಾಗಲೂ ಎಂಟು ವಿಧ ವಾಗಿಯೂ ಅಲಂಕರಿಸಬೇಕು ಎಂದು ಸಾರಿಸಿ ವಿಲಾಸದಿಂದ ಅತ್ಯಂತ ಮನೋನುರಾಗ ದಿಂದ ಮಿತ್ರನೊಡನೆ ಅರಮನೆಯನ್ನು ಹೊಕ್ಕೆನು. ವ॥ ಧರ್ಮಶೇಖರನೊಡನೆ ದೀರ್ಘಬಾಹುಕನ ಅರಮನೆಯನ್ನು ಹೊಕ್ಕು ಪುರಜನ ಪರಿಜನರನ್ನು ಕರೆತಂದು ಧರ್ಮಶೇಖರನಿಗೆ ಪರಿಚಯ ಮಾಡಿಕೊಟ್ಟೆನು. ಅದರಿಂದ ಅವನಿಗೆ ತುಂಬ ಸಂತೋಷ ವಾಯಿತು. ೮೭. ನನ್ನ ಹಟವಿಂದು ಫಲಿಸಿತು. ನನ್ನ ಮನೋರಥವಿಂದು ಕೈಗೂ ಡಿತು. ಮತ್ತು ನನ್ನ ಕುಲವಿಂದು ಒಳ್ಳೆಯ ಹೆಸರನ್ನು ಪಡೆಯಿತು. ಇದೆಲ್ಲವೂ ಆದುದು ನಿನ್ನಿಂದ ಎಂದು ಧರ್ಮಶೇಖರನು ಹೇಳಿದನು. ವ॥ ಹೀಗೆ ಸಂತೋಷ ಪಟ್ಟು ಅದೇ ಮುಹೂರ್ತದಲ್ಲಿ ತನ್ನ ಮಗಳು ಕುಸುಮಾವತಿಯನ್ನು ನನಗೆ ಕೊಟ್ಟು ಮದುವೆ ಮಾಡಿದನು. ಅಲ್ಲದೆ ಆ ಪುರದಲ್ಲಿಯೆ ನನಗೆ ಕೊಟ್ಟು ಮದುವೆ ಮಾಡಿ ದನು. ಅಲ್ಲದೆ ಆ ಪುರದಲ್ಲಿಯೆ ನನಗೆ ಪಟ್ಟವನ್ನು ಕಟ್ಟಿ ತಾನು ಕುಸುಮಪುರಿಗೆ

ಪೊಸತೆನಿಸಿರ್ದ ರಾಜ್ಯವನಲಂಪು ಮಿಗುತ್ತಿರೆ ಸಂತವಿಟ್ಟು ಮ
ನ್ನಿಸಿ ಸಚಿವರ್ಕಳಂ ಪುರಜನಕ್ಕುಡಲಿತ್ತು ಭವತ್ಪ್ರಪಂಚಮಂ
ಕುಸುಮಪುರೇಶನಂದನೆಗೆ ಪೇೞ್ದ ನಿಜಾಂಘ್ರಿ ಸರೋಜಮಂ ನಿರೀ
ಕ್ಷಿಸುವನುರಾಗದಿಂ ಕಿಱಿದು ವಾಹಿನಿಯಿಂ ತಳರ್ದೆಂ ಮಹೀಪತೀ ೮೮

ವ॥ ಅಂತು ಪೊಱಮಟ್ಟು ದುರ್ಗಾಪ್ರಾರ್ಥನೆಯಂ ಮಾಡಿಯೊಡವಂದಸೇನೆಯಂ ಮಗುಳ್ದು ಕಳಿಪಿ ದೇವರಂ ಕಾಣ್ಬನ್ನವೇಕಾಕಿಯಾಗಿ ಪೋಪೆನೆಂಬನ್ನೆಗಂ

ಸ್ರ॥ ಕಂಗೆಟ್ಟಂಗಕ್ಷಿಗಳ್ ದಿಗ್ಭ್ರಮೆ ಮಿಸುಪ ನರಂಗೆಯ್ದೆ ಪೆರ್ಬಟ್ಟೆ ದಾರಿ
ದ್ರ್ಯಂಗರ್ಥಂ ಶೂನ್ಯಚಿತ್ತಂಗಧಿಕವರವನೀವಿಷ್ಟದೈವಂ ಕರಂ ವೃ
ದ್ಧಂಗಾದಿವ್ಯಾಮೃತಂ ತೋರ್ಪವೊಲೆನಗೆ ಭವನ್ಮೂರ್ತಿಯಿಂದಿಲ್ಲಿ ತೋಱಿ
ತ್ತಂಗಶ್ರೀಯೊಳ್ ವಿಳಾಸಂ ಮೆಱೆದುದೆನುತ್ತೆ ಮೆಯ್ವೆರ್ಚಿದಂ ಸೋಮದತ್ತಂ
೮೯

ಕಂ॥ ಜಗದಂಬಿಕೆಯೆನಿಸುವ ದು
ರ್ಗೆಗೆ ಪರಕೆಯನೀವೆನೆಂಬ ಕತದಿಂ ನಿಮ್ಮಂ
ಘ್ರಿಗಳಂ ಕಂಡೆನೆನುತ್ತೆ ಮು
ತ್ತುಗಳಿಂದರ್ಚಿಸಿದನಂಬಿಕಾ ಪದಯುಗಮಂ ೯೦

ಹೋದನು. ಇತ್ತ—೮೮. ಹೊಸದಾದ ರಾಜ್ಯವನ್ನು ಸುಖವು ಹೆಚ್ಚುವಂತೆ ಚೆನ್ನಾಗಿ ಪಾಲಿಸಿದೆನು. ಮಂತ್ರಿಗಳನ್ನು ಗೌರವಿಸಿ ಪುರಜನರಿಗೆ ಉಡಲು ತಿನ್ನಲುಕೊಟ್ಟು ರಕ್ಷಿಸಿದೆನು. ಕುಸುಮಪುರದ ರಾಯನು ನಿನ್ನ ವಿಷಯವನ್ನೆಲ್ಲ ಅಂದು ನನಗೆ ಹೇಳಿದ್ದನು. ಅದರಂತೆ 'ಮಹಾರಾಜನೆ, ನಿನ್ನ ಪಾದಕಮಲಗಳನ್ನು ನೋಡಬೇಕೆಂಬ ಅನುರಾಗದಿಂದ ಸಣ್ಣ ಸೇನೆಯೊಡನೆ ಹೊರಟೆನು. ವ॥ "ಹಾಗೆ ಹೊರಟು ದುರ್ಗಿಯನ್ನು ಪ್ರಾರ್ಥಿಸಿ ಜೊತೆಯಲ್ಲಿ ಬಂದ ಸೇನೆಯನ್ನು ಹಿಂದಕ್ಕೆ ಕಳುಹಿಸಿ ಸ್ವಾಮಿಯನ್ನು ಕಾಣಲು ಒಬ್ಬಂಟಿಗನಾಗಿ ಹೋಗುವೆನೆಂದು ಯೋಚಿಸುತ್ತಿರುವಾಗ— ೮೯. ಕಣ್ಣುಕಾಣದವನಿಗೆ ಕಂಗಳು ಬಂದಂತಾಯಿತು. ಎತ್ತಕಡೆ ಹೋಗಬೇಕೆಂದು ತಿಳಿಯದೆ ದಿಗ್ಭ್ರಮೆಯುಂಟಾದ ಮನುಷ್ಯನಿಗೆ ರಾಜಮಾರ್ಗವೇ ದೊರಕಿದಂತಾಯಿತು. ಬಡವನಿಗೆ ಹಣ ಸಿಕ್ಕ ಹಾಗಾಯಿತು, ಶೂನ್ಯವಾದ ಮನಸ್ಸುಳ್ಳವನಿಗೆ ಅಧಿಕವರವನ್ನು ಕೊಡುವ ಇಷ್ಟ ದೇವತೆಯು ಪ್ರತ್ಯಕ್ಷವಾದಂತಾಯಿತು. ಹಣ್ಣು ಮುದುಕನಿಗೆ ಅಮೃತವು ಸಿಕ್ಕಂತಾಯಿತು. ನನಗೆ ಇಂದು ಇಲ್ಲಿ ನಿನ್ನ ಮೂರ್ತಿಯು ದರ್ಶನವಾಯಿತು. ಅಂಗಕಾಂತಿಯಲ್ಲಿ ವಿಲಾಸವು ಮೆರೆಯಿತು" ಎಂದು ಹೇಳುತ್ತಾ ಸೋಮದತ್ತನು ಆನಂದ ತುಂದಿಲನಾದನು. ೯೦. ಜಗದಂಬಿಕೆಯಾದ ದುರ್ಗಿಗೆ ಹರಕೆ ಹೊತ್ತುದರಿಂದ ನಿಮ್ಮ ಪಾದಗಳನ್ನು ನಾನು ಕಂಡೆನು. ಎಂದು ಸೋಮದತ್ತನು ಹೇಳುತ್ತಾ ಅಂಬಿ

ವ॥ ಅಂತು ದುರ್ಗಾಂಬಿಕೆಗೆ ಹರಕೆಯನೊಪ್ಪಿಸಿಯುಪಾರ ಪರಿತೋಷದಿಂ ಸೋಮದತ್ತಂ ರಾಜವಾಹನನಂಘ್ರಿಗಳನೋಲೈಸುತ್ತಿರೆಯಿರೆ

ಕಂ॥ ಬಾಹುಬಲದಿಂ ತಳರ್ದತಿ
ಸಾಹಸದಿಂ ಕೊಂಡ ರಾಜ್ಯಮಂ ವಿಪುಳನವ
ಸ್ನೇಹದ ಸತಿಯಂ ಬಿಟ್ಟೀ
ಮೋಹದೊಳೇಟ್ಟುಂದೆಯೇಕೆ ಪೇಟ್ ಸುಕುಮಾರಾ ೮೧

ವ॥ ಎಂದು ಬುದ್ಧಿವೇಟ್ಟು ಪೊಸರಾಜ್ಯವನೀಪರಿ ನಿರಾಧಾರಮಪ್ಪಂತಿರೆ ಇರಿಸಲಾಗದು ಇಂದೆ ಪೋಗಾನವಂತಿಪುರಮಂ ಪೊಕ್ಕು ಬರ್ಪೆನೆಂದು ಸೋಮದತ್ತನಂ ಕಳಿಪಲಾತಂ ಬೀಟ್ಕೊಂಡು ಪೋಗೆ

ಇನಿತು ಸಮರ್ಥರಾರೊ ಪರರಾಜ್ಯವನಿಟ್ಕೊಳಿಗೊಂಡು ಶೌರ್ಯದಿಂ
ಜನಪ ತನೂಜೆಯಂ ಮದುವೆಯಾಗಿ ವಿರೋಧಿಯನಿಕ್ಕಿ ಮೆಟ್ಟಿಯೊ
ರ್ಬನೆ ಮಗುಳ್ದೆಮ್ಮನೀಕ್ಷಿಸಲನೂನ ಮಹೋತ್ಸವದಿಂ ತಳರ್ದನೆಂ
ದನುಜನನಾವಗಂ ಪೊಗಟ್ದು ಮೆಚ್ಚಿದನಲ್ತೆಯಭಂಗ ವಿಕ್ರಮಂ ೮೧

ಇದು ನಿಖಿಲಬುಧಜನ ಮನೋಜವನ ದಿವಾಕರಕಿರಣ ಪ್ರತಿಮ ಪ್ರಸನ್ನ ಶ್ರೀಮದಭಂಗವಿಟ್ಠಲ ಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಸೋಮದತ್ತ ಕಥಾವೃತ್ತಾಂತಂ

## ಪಂಚಮಾಶ್ವಾಸಂ

ಕೆಯ ಪಾದಗಳೆರಡನ್ನೂ ಮುತ್ತುಗಳಿಂದ ಪೂಜಿಸಿದನು. ವ|| ದುರ್ಗಾಂಬಿಕೆಗೆ ಹರಕೆಯನ್ನು ಒಪ್ಪಿಸಿ ಫಲಪ್ರಾಪ್ತಿಯಿಂದುಂಟಾದ ಮೇರೆಮೀರಿದಂಥ ಸಂತೋಷದಿಂದ ಸೋಮದತ್ತನು ರಾಜವಾಹನನ ಪಾದಗಳಿಗೆ ಸೇವೆ ಸಲ್ಲಿಸುತ್ತಿದ್ದನು. ೮೧. ಆಮೇಲೆ ರಾಜವಾಹನನು ಸೋಮದತ್ತನಿಗೆ ಬಾಹುಬಲಪ್ರದರ್ಶನಕ್ಕಾಗಿ ಹೊರಟು ಸಾಹಸಾತಿಯದಿಂದ ವಶಪಡಿಸಿಕೊಂಡ ರಾಜ್ಯವನ್ನೂ ವಿಪುಲವಾದ ನವಸ್ನೇಹವುಳ್ಳ ಪತ್ನಿಯನ್ನೂ ತೊರೆದು 'ಸುಕುಮಾರನೇ' ಮೋಹದಿಂದ ಏಕೆಬಂದೆ ? ಹೇಳು" ವ|| ಎಂದು ಬುದ್ಧಿಯನ್ನು ಹೇಳಿ ಹೊಸರಾಜ್ಯವನ್ನು ಹೀಗೆ ನಿರಾಧಾರಸ್ಥಿತಿಯಲ್ಲಿಡಬಾರದು, ಇಂದೆ ಹೋಗು, ನಾನು ಅವಂತಿಪುರವನ್ನು ಹೊಕ್ಕುಬರುವೆನು' ಎಂದು ಹೇಳಿ ರಾಜವಾಹನನು ಸೋಮದತ್ತನನ್ನು ಕಳುಹಿಸಿದನು. ಅವನೂ ಬೀಳ್ಕೊಂಡು ಹೊರಟನು. ೮೨. "ಇಷ್ಟು ಸಮರ್ಥರಾದವರು ಯಾರಿದ್ದಾರೆ? ಪರರಾಜ್ಯವನ್ನು ಶೌರ್ಯದಿಂದ ವಶಪಡಿಸಿಕೊಂಡು ರಾಜಕುಮಾರಿಯನ್ನು ಮದುವೆಯಾದನು. ಶತ್ರುಗಳನ್ನು ಸಂಹರಿಸಿ ಒಬ್ಬನೇ ಮತ್ತೆ ನಮ್ಮನ್ನು ನೋಡಲು ಮಹೋತ್ಸವದಿಂದ ಹೊರಟು ಬಂದಿದ್ದಾನೆ," ಎಂಬುದಾಗಿ ಅಭಂಗವಿಕ್ರಮನೆನಿಸಿದ ರಾಜವಾಹನನು ತಮ್ಮನನ್ನು ವಿಶೇಷವಾಗಿ ಹೊಗಳಿ ಮೆಚ್ಚಿದನು.

# ಷಷ್ಠಾಶ್ವಾಸಂ

## ರಾಜವಾಹನ ಚರಿತಂ

ಕಂ॥ ಶ್ರೀ ವಕ್ಷಸ್ಥಳನಖಿಳಕ
ಳಾವಿನುತಂ ಸೋಮದತ್ತನಂ ಕಳಿಪಿ ಕಳಾ
ಕೋವಿದನಲ್ಲಿಂದೆಳ್ದಂ
ಪಾವನಗುಣನಿಧಿಯಭಂಗವಿಟ್ಠಲಭೃತ್ಯಂ ೧

ವ॥ ಅಂತು ರಾಜವಾಹನಂ ದುರ್ಗಾಲಯಮಂ ಪೊಱಮಟ್ಟವಂತೀದೇಶಕ್ಕಭಿಮುಖನಾಗಿ

ಚಂ॥ ಪಲವು ನದೀನದಪ್ರಕರಮಂ ಪಲವದ್ರಿಗಳಂ ವನಂಗಳಂ
ಪಲವನನಂತದೇಶಮನನಂತ ಪುರಂಗಳನಂತನಂತಸು
ಸ್ಥಲಮನಿತೆಲ್ಲಮಂ ಕಳೆದು ರಾಜಕುಮಾರಕನೊಲ್ದು ಪೊಕ್ಕನು
ಜ್ಜ್ವಲವೆನಿಸಿರ್ಪವಂತಿ ವಿಷಯಾಂತರಮಂ ನಿಜಸೋದರಾನ್ವಿತಂ ೨

ಕೃತಯುಗದೊಂದು ಗೂಳಿಯುಃವೊ ಮರ್ತ್ಯರ ಕೆಯ್ವೊಲನೋ ವಿಲೋಚನಾ
ಮೃತವೊ ಕೊಳಂಗಳೋ ಸಿರಿಯ ತಾಯ್ಮನೆಯೋ ವನವೋ ವಸಂತದೇ
ವತೆಯೊ ವಿಳಾಸಿನೀಜನವೊ ಕಾಮಶರಾಳಿಯೊ ಪೇೞೆನಲ್ಕೆ ಸ
ನ್ನುತಿವಡೆದೊಪ್ಪುಗುಂ ವಿಷಯಸಂತತಿಯಿಂ ವಿಷಯಂ ನಿರಂತರಂ ೩

೧. ಪ್ರಕಾಶಮಾನವಾದ ವಕ್ಷಸ್ಥಳವುಳ್ಳ, ಸಮಸ್ತ ಕಲೆಗಳಿಂದ ಪ್ರಸಿದ್ಧನಾದ ಕಲೆಗಳಲ್ಲಿ ಕೋವಿದನಾದ, ಪಾವನಗಳಿಂದ ಗುಣಗಳಿಗೆ ಆಶ್ರಯನಾದ, ಅಭಂಗ ವಿಟ್ಠಲನ ಸೇವಕನಾದ ರಾಜವಾಹನನು ಸೋಮದತ್ತನನ್ನು ಕಳುಹಿಸಿ ಅಲ್ಲಿಂದ ಹೊರಟನು. ವ॥ ಹಾಗೆ ರಾಜವಾಹನನು ದುರ್ಗಾಮಂದಿರದಿಂದ ಹೊರಟು ಅವಂತೀ ದೇಶದ ಕಡೆಗೆ ಪ್ರಯಾಣ ಮಾಡಿದನು. ೨. ಹಲವು ನದಿಗಳನ್ನೂ ನದಗಳನ್ನೂ ಬೆಟ್ಟಗಳನ್ನೂ ವನಗಳನ್ನೂ ದೇಶಗಳನ್ನೂ, ಪುರಗಳನ್ನೂ, ಪವಿತ್ರ ಸ್ಥಳಗಳನ್ನೂ ಕಳೆದು ರಾಜವಾಹನನು ತನ್ನ ಸಹೋದರನೊಡನೆ ಉಜ್ಜ್ವಲವಾದ ಅವಂತೀ ದೇಶವನ್ನು ಪ್ರೀತಿಯಿಂದ ಹೊಕ್ಕನು. ೩. ಕೃತಯುಗವು ವಲಸೆಬಂದಿದೆಯೋ, ಮನುಷ್ಯರ ಸುಕ್ಷೇತ್ರಗಳೋ ಕಣ್ಣುಗಳಿಗೆ ಅಮೃತವೋ, ಕೊಳಗಳೋ ಲಕ್ಷ್ಮಿಯ ತವರು ಮನೆಯೋ, ವನವೋ ವಸಂತ ದೇವತೆಯೋ, ವಿಳಾಸಿನೀಜನರೋ ಕಾಮಬಾಣಗಳೋ ಹೇಳು ಎಂಬಂತೆ ಅನೇಕ ವಿಷಯ

ವ॥ ಅದಲ್ಲದೆಯುಂ

ಮ॥ ವಿರಹಂ ಕೋಕಂಗಳೊಳ್ ಸತ್ಕುಲಹತಿ ದಿವದೊಳ್ ಬಂಧನಂ ನವ್ಯಪುಷ್ಪೋ
ತ್ಕರದೊಳ್ ದುಷ್ಟಸ್ವಭಾವಂ ತುರಗದೊಳರಿಸಂಮರ್ದನಂ ವಿಷ್ಣುಹಸ್ತಾಂ
ತರದೊಳ್ ವ್ಯಾಜಂ ಮಹಾಲಂಕೃತಿಯೊಳಧರ ಸಂಜೀವನಂ ಸಂತತಂ ನಾ
ಗರಿಕಾದಿ ಪ್ರೌಢರೊಳ್ ಸಂದೆಸೆವುದನುದಿನಂ ಸಲ್ಲದಾನಾಡೊಳೆಂದುಂ ೪

ಆ ವಿಷಯಕ್ಕೆ ನೂತ್ನಮಣಿದರ್ಪಣದಂತೆ ಲಸದ್ವಿಭೂತಿಸಂ
ಭಾವಿತನಿರ್ಮಳ ಪ್ರಚುರವೃತ್ತಮೆನಿಪ್ಪ ಜನಪ್ರಸನ್ನಸೌ
ಖ್ಯಾವಹಮಂ ನಿಮಿರ್ಚಿ ನವರತ್ನ ಸುವರ್ಣವಿಕೀರ್ಣದಿವ್ಯಹ
ರ್ಮ್ಯಾವಳಿಯಿಂ ವಿಚಿತ್ರಮೆನೆ ರಂಜಿಪುದಲ್ಲಿಯವಂತಿಕಾಪುರಂ ೫

ವ॥ ಅಂತಾಪುರಮಂ ಮುಟ್ಟುವರೆ

ಸುಲಲಿತ ಚಂದ್ರಕಾಂತ ಕಲಶಂಗಳಿನಂಗನೆಯರ್ ವಿಳಾಸದಿಂ
ಕುಳಿರ್ವ ಜಲಂಗಳಂ ಮೊಗೆದು ಪಾಂಥಜನಕ್ಕೆಱೆಯುತ್ತಿರಲ್ಕೆ ಶೀ
ತಳಜಲಮೆಲ್ಲಮುಂ ಸಮೆಯೆ ತಮ್ಮ ಮುಖೇಂದು ಮರೀಚಿಯಿಂದಮಾ
ಕಳಶಮನೈದೆ ತೀವಿ ಪಥಿಕರ್ಗೆಱೆವರ್ ತೃಷೆ ಪಿಂಗುವನ್ನೆಗಂ ೬

ಸಮೂಹದಿಂದ ಕೂಡಿದ ಆದೇಶವು ಹೆಸರುವಾಸಿಯಾಗಿ ಪ್ರಕಾಶಿಸಿತು. ವ॥ ಅಲ್ಲದೆ ೪. ಆ ನಾಡಿನಲ್ಲಿ ಯಾವಾಗಲೂ (ಪ್ರಿಯರ) ಅಗಲಿಕೆಯಿಲ್ಲ. ಅದು ಇರುವುದು ಚಕ್ರವಾಕ ಪಕ್ಷಿಗಳಲ್ಲಿ, ಸತ್ಕುಲಕ್ಕೆನಾಶವಿಲ್ಲ. (ನಕ್ಷತ್ರನಾಶ ?) ಅದಿರುವುದು ದಿವದಲ್ಲಿ? ಬಂಧನವು (ಕಟ್ಟುವುದು) ಆ ನಾಡಿನಲ್ಲಿಲ್ಲ. ಹೊಸದಾದ ಹೂಗಳನ್ನು ಕಟ್ಟುವ ವಿಷಯದಲ್ಲಿಯೇ ಅದರ ವ್ಯವಹಾರ. ಅಲ್ಲಿ ದುಷ್ಟಸ್ವಭಾವವು ಕಾಣಿಸುವುದಿಲ್ಲ. ಕುದುರೆಗಳಲ್ಲಿ ಅದಿದೆ. ಅರಿಗಳನ್ನು[1] ಸೋಲಿಸಿ ಅಡಗಿಸುವುದು ವಿಷ್ಣುವಿನ ಒಂದು ಕೈಯಲ್ಲಿದೆಯೇ ಹೊರತು ಇಲ್ಲಿಲ್ಲ. (ಶತ್ರುಗಳಿಂದ ಭಯವಿಲ್ಲವೆಂದರ್ಥ). ವ್ಯಾಜ(ನೆಪ)ವೆಂಬುದು ಮಹಾಲಂಕೃತಿಯೇ ವಿನಾ ಈ ನಾಡಿನಲ್ಲಿಲ್ಲ (ವ್ಯಾಜ ಎಂಬುದು ಒಂದು ಅಲಂಕಾರ) ಅವರ ಸಂಜೀವನವು (ಅಧರಾಮೃತಪಾನ-ಸೀಚ ಪ್ರೋತ್ಸಾಹ) ನಾಗರಿಕ ಮೊದಲಾದ ಪ್ರೌಢರಲ್ಲಿಯೇ ಹೊರತು ಆ ನಾಡಿನಲ್ಲಿಲ್ಲ. ೫. ಅವಂತಿಕಪುರವು ವಿಚಿತ್ರವಾದ ರೀತಿಯಲ್ಲಿ ಪ್ರಕಾಶಿಸುತ್ತದೆ. ಅದು ಆ ದೇಶಕ್ಕೆ ಹೊಸದಾದ ಮಣಿಗನ್ನಡಿಯಂತೆ ಹೊಳೆಯುತ್ತದೆ. ವಿಶೇಷವಾದ ಐಶ್ವರ್ಯದಿಂದ ಸಂಭಾವಿತವಾದ ನಿರ್ಮಲವಾದ ನಡೆವಳಿಕೆಯುಳ್ಳ ಜನರಿಗೆ ಹೆಚ್ಚು ಸುಖವನ್ನು ಕೊಡುವ, ನವರತ್ನಗಳಿಂದಲೂ ಸುವರ್ಣದಿಂದಲೂ ತುಂಬಿದ ದಿವ್ಯ ಪ್ರಾಸಾದಗಳಿಂದ ಸುಂದರವಾಗಿದೆ. ವ॥ ಹಾಗೆ ಆ ಪುರದ ಹತ್ತಿರಕ್ಕೆ ಬರಲು— ೬. ಅಲ್ಲಿ ಅಂಗನೆಯರು ಮನೋಹರವಾದ ಚಂದ್ರಕಾಂತ ಶಿಲೆಯ ಕೊಡಗಳನ್ನು ಹಿಡಿದು ದಾರಿಗರಿಗೆ ತಂಪಾದ ನೀರನ್ನು ತುಂಬಿ ತುಂಬಿ ಎರೆಯುತ್ತಿದ್ದರು. ಇದ್ದಕ್ಕಿದ್ದ ಹಾಗೆ

1. ಅರಿ=ಚಕ್ರದಿಂದ, ಸಂಮರ್ದನ=ಶತ್ರುನಾಶ (ರಂ).

ಮ॥ ಬಿಸಿಲಿಂ ಬೆಂಡಾದವರ್ ತತ್ಪ್ರಪೆಗೆ ಬಂದು ನೀರಟ್ಟಿಯಿಂ ನೀರ್ಗೆ ಕೈಮು
ಟ್ಟುಸಿರಂ ಸುಂಗಿರ್ದ ನಾಸಾಪುಟಮರಳೆ ಬೆಮರ್ ಚುಮ್ಮನುತ್ತಿರ್ಕೆ ಕೈಕಂ
ಪಿಸೆ ಗಂಟಲ್ ತಟ್ಟುತಾಱಲ್ ತನು ತಣಿದು ಕುಳಿರ್ಕೆಯ್ದೆ ಪಂಚೇಂದ್ರಿಯಂಗಳಾ
ಗಿಸೆ ತಾಪಂ ಪೋಗಿ ಪಾಂಥರ್ ಕುಳಿರ್ವ ಸಲಿಲಮಂ ಪೀರ್ದು ತೇಗುತ್ತೆ
ಪೋದರ್ ೭

ವ॥ ಅಂತಾಪ್ರಪೆಯೊಳಾತಪತಾಪಮಂ ಕಳೆದಲ್ಲಿಂ ತಳರ್ವಾಗಳ್ ಮುಂದೆ

ಉ॥ ರಾಜಶುಕಂ ಕರ್ದುಕಿ ರಸಧಾರೆಗಳಿಂದೆಸೆದಿರ್ಪ ದಾಡಿಮೀ
ರಾಜಿಗಳಿಂ ಪಿಕಾಳಿ ಕುಟುಕಲ್ ಸೊನೆಬಿಂದುಗಳೊಪ್ಪುವಾಮ್ರ ಧಾ
ತ್ರೀಜದಿನುಳ್ಳರಲ್ದಲರ್ಗಳೊಳ್ನಱುಗಂಪನೊಱಲ್ದು ಪೀರ್ವ ಭೃಂ
ಗೀಜಯನಾದದಿಂ ಪದೆಪಿನಿಂ ಮೆಱೆಗುಂ ಪುರದಾ ಬಹಿರ್ವನಂ ೮

ವ॥ ಅಂತಾಪುರದ ಬಹಿರ್ವನದ ವಿಳಾಸಮಂ ನೋಡುತ್ತುಂ ಬರೆವರೆ ಮುಂದೆ

ಮ ಸ್ರ॥ ಅಗಱಿಂ ಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾ
ಳಿಗಳಿಂದಾಳ್ವೇರಿಯಿಂ ಕೊತ್ತಳದಿನಿಡುಸರಳ್ಗಂಡಿಯಿಂ ಖಂಡಿಯಿಂದಂ
ಬಗೆಗೊಳ್ವಂ ಬೀಱೆ ನೋಡುತ್ತಡಿಗಡಿಗೆ ಸಿರಂದೂಗುತುಂ ವ್ಯೈಮೆಯಿಂದಂ
ಪುಗುತಂದಂ ಕೂರ್ತವಂತೀಪುರದೊಳಗನಿಳಾಕಾಮಿನೀಜೀವಿತೇಶಂ ೯

ಶೀತಳಜಲವೆಲ್ಲ ತೀರಿಹೋಯಿತು. ಆಗ ಅವರು ತಮ್ಮ ಮುಖಚಂದ್ರನ ಕಿರಣಗಳಿಂದ ಜಿನುಗಿದ ಚಂದ್ರಕಾಂತ ಶಿಲೆಯ ನೀರಿನಿಂದ ಆ ಕಳಶಗಳನ್ನು ತುಂಬಿ ದಾರಿಗರಿಗೆ ಬಾಯಾರಿಕೆಯು ಅಡಗುವವರೆಗೂ ನೀರೆರೆಯುತ್ತಿದ್ದರು. ೭. ಬಿಸಿಲಿನಿಂದ ಕುಗ್ಗಿ ಬಾಯಾರಿದ ದಾರಿಗರು ಓಡಿಬಂದು ನೀರಿಗೆ ಕೈಯೊಡ್ಡಿದರು. ಉಸಿರು ಹಿಡಿದುಕೊಂಡು, ಮೂಗು ಅರಳಿಸಿ, ಮೈಯಲ್ಲಿ ಬೆವರನ್ನು ಚಿಮ್ಮಿಸುತ್ತಾ, ಕೈಗಳು ನಡುಗಲು ನೀರು ಕುಡಿದರು. ಆ ನೀರು ಗಂಟಲನ್ನು ತಟ್ಟಿತು. ತಾಪವು ಆರಿ ಶರೀರವು ತೃಪ್ತಿಯನ್ನು ಹೊಂದಿದಂತಾಯಿತು. ಹೀಗೆ ಪಥಿಕರು ಪಂಚೇಂದ್ರಿಯಗಳೂ ತೃಪ್ತಿಯನ್ನು ಪಡೆದು ತಾಪವು ಕಳೆಯುವಂತೆ ತಣ್ಣೀರನ್ನು ಕುಡಿದು ತೇಗುತ್ತಾ ಹೋಗುತ್ತಿದ್ದರು. ವ॥ ಹೀಗೆ ಅರವಟ್ಟಿಗೆಯಲ್ಲಿ ಬಿಸಿಲಿನ ತಾಪವನ್ನು ಕಳೆದುಕೊಂಡು ಅಲ್ಲಿಂದ ಹೊರಟರು. ಆಗ ಮುಂದೆ—೮. ಅರಗಿಳಿಗಳು ಕುಟುಕಿ ಧಾರೆ ಧಾರೆಯಾಗಿ ಸುರಿದು ಹರಿಯುವ ರಸವುಳ್ಳ ದಾಳಿಂಬೆ ಮರದ ಸಾಲುಗಳು, ಕೋಗಿಲೆಗಳು ಕುಟುಕಲು ರಸಸೋರುವ ಹಣ್ಣುಗಳಿಂದ ತುಂಬಿದ ಮಾವಿನಮರದ ಸಾಲುಗಳು. ಅರಳಿದ ಹೂಗಳಲ್ಲಿ ನರುಗಂಪನ್ನು ಹೀರುವ ದುಂಬಿಗಳ ಮಧುರನಾದ, ಇವುಗಳಿಂದ ಆ ನಗರದ ಹೊರಭಾಗದ ಉದ್ಯಾನವು ಸುಂದರ ವಾಗಿ ರಂಜಿಸುತ್ತದೆ. ವ॥ ಆ ನಗರದ ಹೊರದೋಟದ ಅಂದವನ್ನು ನೋಡುತ್ತಾ ಬರುತ್ತಿದ್ದಾಗ ಮುಂದೆ— ೯. ಕಂದಕ. ಪ್ರಕಾರ. ಧ್ವಜ ಸ್ತಂಭವುಳ್ಳ ಬತ್ತೇರಿ ಅನುಪಮ ವಾದ ಹೆಬ್ಬಾಗಿಲು. ಪತಾಕೆಗಳ ಸಾಲುಳ್ಳ ಕಂದಕದ ಬದಿಯಗೋಡೆ. ಕೋಟೆಯ ಮೇಲಿನ ಎತ್ತರವಾದ ಬುರುಜು, ಗುಂಡಿಡುವ ನೇರವಾದ ಕಿಂಡಿ, ಕೋಟೆಯ ಕಿರುದಾರಿ

ವ॥ ಅಂತು ಪುರಮಂ ಪೊಕ್ಕು ರಾಜವಾಹನಂ ಪುಷ್ಪೋದ್ಭವನ ಮೊಗಮಂ ನೋಡಿ ಈ ಪಟ್ಟಣಮನಾಳ್ವರಸನ ಪೆಸರೇನೆಂದು ಕೇಳ್ವುದುಮಾತನಿಂತೆಂದಂ

ಕಂ॥ ಈ ಪುರಮನಾಳ್ವನಾನತ
ಭೂಪಾಲಕ ಮೌಳಿಮುಕುಟಮಂಡಿತಚರಣಂ
ಚಾಪಲರಿಪುನೃಪಮಥನ ಭು
ಜಾಪರಿಘನವಂತಿ ದೇವನೆಂಬ ನರೇಂದ್ರಂ ೧೦

ಆ ಭೂಪನರಸಿ ಗುಣಗಣ
ಶೋಭಾನ್ವಿತೆ ಪೆಂಪಿನಿಂ ಸುರೇಂದ್ರನ ಸತಿವೋಲ್
ಸೌಭಾಗ್ಯವಂತೆ ಮಂಗಳ
ವೈಭವೆ ಮಾದೇವಿಯೆಂಬ ವನಿತಾರತ್ನಂ ೧೧

ಅವರಿರ್ವರ್ಗೊಲವಿಂ ಸಂ
ಭವಿಸಿರ್ದಂ ಕೀರ್ತಿಸಾರನಿಂ ಪಿರಿಯಂ ಭೂ
ಭುವನಪತಿ ದರ್ಪಸಾರಂ
ನವನೀತಿ ಪ್ರೌಢನತುಳಗರ್ವಾರೂಢಂ ೧೨

ಆ ದರ್ಪಸಾರನನುಜೆ ಕೃ
ಶೋದರಿ ಶಶಿಮುಖಿಯವಂತಿಸೌಂದರಿ ಲೋಕೋ
ನ್ಮಾದಿನಿ ಘನಕುಚೆ ಸಕಲಗು
ಣೋದವಸಿತೆ ಪೆಸರೊಳೆಸೆವ ಕನ್ಯಾರತ್ನಂ ೧೩

ಇವುಗಳಿಂದ ಮನಸ್ಸಿಗೆ ಆನಂದವನ್ನು ಆ ನಗರವು ಬೀರುತ್ತಿತ್ತು. ಇಂಥ ಸುಂದರವಾದ ಅವಂತೀಪುರವನ್ನು ರಾಜವಾಹನ ಮಹಾರಾಜನು ಆಡಿಗಡಿಗೆ ನೋಡುತ್ತಾ ಮೆಚ್ಚಿ ತಲೆ ದೂಗುತ್ತಾ ಪ್ರವೇಶಿಸಿದನು. ವ॥ ನಗರವನ್ನು ಪ್ರವೇಶಿಸಿ ರಾಜವಾಹನನು ಪುಷ್ಪೋದ್ಭವನ ಮುಖವನ್ನು ನೋಡಿ ಈ ಪಟ್ಟವನ್ನಾಳುವ ಅರಸನ ಹೆಸರೇನು ? ಎಂದು ಕೇಳಿದನು. ಅದಕ್ಕೆ ಅವನು ಹೀಗೆ ಹೇಳಿದನು—೧೦. ಅವಂತಿ ದೇವನೆಂಬ ರಾಜನು ಈ ಪುರವನ್ನಾಳುತ್ತಾನೆ. ಇವನ ಚರಣಗಳಿಗೆ ಹಲವಾರು ರತ್ನ ಕಿರೀಟ ಧರಿಸಿದ ತಲೆಗಳನ್ನು ಬಗ್ಗಿಸುತ್ತಾರೆ. ಚಾಪಲರಾದ ಶತ್ರುರಾಜರನ್ನು ಸೋಲಿಸಬಲ್ಲ ಮಹಾಬಾಹುವಿವನು. ೧೧. ಮಹಾದೇವಿಯೆಂಬ ನಾರೀರತ್ನವು ಆ ಅರಸನ ಅರಸಿ. ಅವಳು ಗುಣಗಣಗಳ ಶೋಭೆಯುಳ್ಳವಳು. ಹಿರಿಮೆಯಿಂದ ಇಂದ್ರನ ರಾಣಿಯಂತೆ ಸೌಭಾಗ್ಯವತಿ. ಮಂಗಳಕರವಾದ ವೈಭವವುಳ್ಳವಳು. ೧೨. ಅವರಿಬ್ಬರಿಗೂ ಪ್ರೀತಿಯ ಮಗನು ದರ್ಪಸಾರನು. ಕೀರ್ತಿಸಾರನಿಗಿಂತ ಹಿರಿಯನು. ಭೂಭುವನಗಳಿಗೊಡೆಯ. ನೂತನ ರಾಜನೀತಿಗಳಲ್ಲಿ ಪ್ರವೀಣ. ಅತುಳಗರ್ವವುಳ್ಳವನು. ೧೩. ಅವಂತಿ ಸುಂದರಿ ಯೆಂಬ ಹೆಸರಿನಿಂದ ಪ್ರಕಾಶಿಸುವ ಕನ್ಯಾರತ್ನವು ಆ ದರ್ಪಸಾರನ ತಂಗಿ. ಅವಳು ಕೃಶೋದರಿ, ಶಶಿಮುಖಿ, ಲೋಕಕ್ಕೆ ಹುಚ್ಚು ಹಿಡಿಸುವವಳು, ಘನಸ್ತನಿ, ಸಕಲಗುಣಗಳಿಗೆ

ಕಂ॥ ಆಕೆಗಮೆನ್ನರಸಿಗಮು
ವ್ಯಾಕುಳದಿಂದತಿಸಖಿತ್ವಮೆಸೆದಿರ್ಪುದು ಪ
ದ್ಮಾಕರಕೆ ರಾಜಹಂಸಾ
ನೀಕಕ್ಕನವರತಸಂಗಮೊಪ್ಪುವ ತೆಱದಿಂ ೧೪

ವ॥ ಎಂದು ಪುಷ್ಪೋದ್ಭವಂ ಪೇೞಲ್ ರಾಜವಾಹನಂ ಕೇಳುತ್ತುಂ ಪುಷ್ಪೋದ್ಭವನ ಪಿತೃಮಾತೃಗಳಿರ್ದ ಮನೆಗೆ ಬಂದವರ್ಗೆ ನಮಸ್ಕರಿಸಿ ತನಗೆ ಪೊಡೆಮಟ್ಟ ಬಾಲಚಂದ್ರಿಕೆಯುಂ ಪರಸಿ ಬೞಿಯುಂ

ಕಂ॥ ಹಿಮಜಲದಿಂ ಕರಚರಣಾ
ಗ್ರಮುಖಪ್ರಕ್ಷಾಲನಂಗಳಂ ಮಾಡಿ ಸುಗಂ
ಧಮಯಾಂಬುವನೀಂಟಿ ಪಥ
ಶ್ರಮಮಂ ಕಳೆದಂ ನೃಪಾಲತನಯಲಲಾಮಂ ೧೫

ವ॥ ಅನಂತರಂ ಮಜ್ಜನಭೋಜನಾದಿ ವ್ಯಾಪಾರಮಂ ಮಾಡಿ ದೇಶಾಂತರ ವೃತ್ತಾಂತಮಂ ರತ್ನೋದ್ಭವ ಹೇಮಪ್ರಭೆ ಬಾಲಚಂದ್ರಿಕೆಯರ್ಗೆ ಪೇೞ್ದು ಪಲವು ದಿನಮೆಲ್ಲರಱಿವಂತು ತಾನುಂ ಪುಷ್ಪೋದ್ಭವನುಂ ವಿಪ್ರವೇಷದಿಂದಿರಲ್

ಕಂ॥ ಎಂದಿನ ತೆಱದಿನವಂತೀ
ಸುಂದರಿಯೋಲಗಕೆ ಬಾಲಚಂದ್ರಿಕೆ ಪೋಗಿ
ರ್ದಂದಂದಿನ ವಾರ್ತೆಗಳಂ
ಬಂದೊಲವಿಂ ಪೇೞ್ದಳುರ್ವರಾಧೀಶ್ವರನೊಳ್ ೧೬

ಆಶ್ರಯ ಸ್ಥಾನ. ೧೪. ಆಕೆಗೂ ನನ್ನ ಹೆಂಡತಿಗೂ, ಕಮಲ ಸರೋವರಕ್ಕೂ ರಾಜಹಂಸ ಸಮೂಹಕ್ಕೂ ಸಂತತವಾದ ಸಂಗವಿರುವಂತೆ, ನಿರ್ಬಾಧವಾದ ಸ್ನೇಹವಿದೆ ವ॥ ಎಂದು ಪುಷ್ಪೋದ್ಭವನು ಹೇಳಿದ ಮಾತನ್ನು ರಾಜವಾಹನನು ಕೇಳಿ ಅವನ ತಾಯಿ ತಂದೆಗಳ ಮನೆಗೆ ಹೋಗಿ ಅವರಿಗೆ ನಮಸ್ಕರಿಸಿದನು. ತನಗೆ ನಮಸ್ಕರಿಸಿದ ಬಾಲಚಂದ್ರಿಕೆಯನ್ನು ಹರಸಿದನು. ಬಳಿಕ ೧೫. ರಾಜವಾಹನನು ಹಿಮಜಲದಿಂದ ಕೈಕಾಲುಮುಖಗಳನ್ನು ತೊಳೆದುಕೊಂಡನು. ಸುಗಂಧವುಳ್ಳ ನೀರನ್ನು ಕುಡಿದು ದಾರಿಯ ಆಯಾಸವನ್ನು ಕಳೆದುಕೊಂಡನು. ವ॥ ಅನಂತರ ಸ್ನಾನಭೋಜನಾದ ಕಾರ್ಯಗಳನ್ನು ಮುಗಿಸಿದನು. ರತ್ನೋದ್ಭವ, ಹೇಮಪ್ರಭೆ, ಬಾಲಚಂದ್ರಿಕೆಯರಿಗೆ ಬೇರೆ ಬೇರೆ ದೇಶಗಳ ವೃತ್ತಾಂತಗಳನ್ನು ವಿವರಿಸಿದನು. ಕೆಲವು ದಿನಗಳಕಾಲ ಪುಷ್ಪೋದ್ಭವನೂ ಎಲ್ಲರಿಗೂ ತಿಳಿಯುವಂತೆ ಬ್ರಾಹ್ಮಣ ವೇಷದಿಂದಿದ್ದರು. ೧೬. ಎಂದಿನಂತೆಯೇ ಬಾಲಚಂದ್ರಿಕೆಯು ಅವಂತಿ ಸುಂದರಿಯ ಓಲಗಕ್ಕೆ ಹೋಗಿ ಅಂದಂದಿನ ಸಮಾಚಾರಗಳನ್ನು

ವ॥ ಅಂತು ಪ್ರತಿದಿನಂ ಪುಟ್ಟಿದ ವಾರ್ತಾವಿಶೇಷಮಂ ಪೇೞುತ್ತಿರ್ದೊಂದುದಿವಸಂ ರಾಜವಾಹನನುಂ ಪುಷ್ಪೋದ್ಭವನುಂ ಕುಳ್ಳಿರ್ದಾಗಳಾ ಬಾಲಚಂದ್ರಿಕೆ ಬಂದೀತೆಂದಳ್

ಕಂ॥ ಭಾವನ ಗುಣಮನವಂತೀ
ದೇವಿ ಕರಂ ಕೇಳ್ದು ಮೆಚ್ಚಿ ಕಾಣಲ್ವೇೞ್ಕುಂ
ದಾವನಿತೆ ಪೊಱಗಣುಪವನ
ದೋವರಿಗೆೞ್ತರ್ಪುದೆಂದು ಪೇೞ್ದಳ್ ನಿಮ್ಮಂ ೧೭

ವ॥ ಎಂದೊಡೀ ಪ್ರಸಂಗಕ್ಕೆ ಕಾರಣಮೇನೆಂದು ರಾಜವಾಹನಂ ಕೇಳ್ದೊಡಾಕೆ ಇಂದಾಂ ತಳ್ವಿ ಪೋಗಲೆನ್ನನವಂತಿಸೌಂದರಿ ನೋಡಿ

ಕಂ॥ ವನಜಮುಖಿ ನಿನ್ನ ಬರವೇ
ಕಿನಿತುಂ ಪೊೞ್ತಾದುದೆಂದು ಪೇೞ್ದನಲಾಂ ಕೇಳ್
ವಿನಯವತಿ ನಮ್ಮ ಪೊಸಭಾ
ವನ ಪದಪರಿಚರ್ಯೆಯಿಂದೆ ನಾಂ ತಳ್ವಿರ್ದೆಂ ೧೮

ವ॥ ಎಂದೊಡಾತನೆಲ್ಲಿಂದಂ ಬಂದನೆಂದಾಕೆ ಕೇಳ್ದೊಡೆ ಆಂ ಮುನ್ನಱಿದಿರ್ದ ದೇಶಾಂತರ ವೃತ್ತಾಂತಮಂ ಪೇೞ್ದು ಮತ್ತಮನೇಕಗುಣಂಗಳಂ ಪೇಳಲ್ ಸುಭಗಮೂರ್ತಿಯಂ ನಾಳೆ ಪುಷ್ಪಾಪಚಯವ್ಯಾಜದಿಂ ವನಕ್ಕೆ ಬಂದು ನೋೞ್ಪೆನಾತನುಪವನವಿಳಾಸಮಂ ನೋಡುತ್ತಿರಲ್ ಪೇೞೆಂದಳೆಂದು ಪೇೞ್ದೊಡದರ್ಕರಸಂ ಹರ್ಷಂಬಟ್ಟು ಮಱುದೆವಸಂ

ತಿಳಿದುಬಂದು ರಾಜವಾಹನಿಗೆ ಪ್ರೀತಿಯಿಂದ ಹೇಳುತ್ತಿದ್ದಳು. ವ॥ ಹೀಗೆ ಪ್ರತಿದಿನವೂ ನಡೆದ ವಿಶೇಷ ವಾರ್ತೆಗಳನ್ನು ಹೇಳುತ್ತಿರುವಾಗ ಒಂದು ದಿವಸ ರಾಜವಾಹನನೂ ಪುಷ್ಪೋದ್ಭವನೂ ಕುಳಿತಿರುವಾಗ ಬಾಲಚಂದ್ರಿಕೆಯು ಬಂದು ಹೀಗೆ ಹೇಳಿದಳು. ೧೭. ಭಾವನ (ರಾಜವಾಹನನ) ಗುಣಗಳನ್ನು ಕೇಳಿ ಅವಂತೀ ದೇವಿಯು ತುಂಬ ಮೆಚ್ಚಿಕೊಂಡಿದ್ದಾಳೆ. ನಿಮ್ಮನ್ನು ಅವಳು ನೋಡಬೇಕೆಂದು ನಗರದ ಹೊರಗಣ ಉದ್ಯಾನದ ಗುಡ್ಡದ ಪಕ್ಕಕ್ಕೆ ಬರಬೇಕೆಂದು ಹೇಳಿದ್ದಾಳೆ. ವ॥ ಎಂದು ಹೇಳಲು 'ಈ ಪ್ರಸಂಗಕ್ಕೆ ಕಾರಣವೇನು ?' ಎಂದು ರಾಜವಾಹನನು ಅವಳನ್ನು ಕೇಳಿದನು. ಅದಕ್ಕೆ ವಳು ಇಂದು ನಾನು ತಡವಾಗಿ ಹೋಗಲು ಅವಂತಿ ಸುಂದರಿಯು ನನ್ನನ್ನು ನೋಡಿ– ೧೮. 'ಕಮಲ ಮುಖಿಯೇ ! ನೀನು ಬರಲು ಏಕೆ ಇಷ್ಟು ಹೊತ್ತಾಯಿತು' ಎಂದು ಕೇಳಿದಳು. ನಾನು 'ವಿನಯವತಿಯೇ ! ನಮ್ಮ ಹೊಸ ಭಾವನ ಸೇವಾಕಾರ್ಯದ ದೆಸೆ ಯಿಂದ ಬರುವುದು ತಡವಾಯಿತು ಎಂದು ಉತ್ತರಗೊಟ್ಟೆನು. ವ॥ ಅದನ್ನು ಕೇಳಿ ಅವಳು 'ಆತನು ಯಾರು? ಎಲ್ಲಿಂದ ಬಂದನು ?' ಎಂದು ಕೇಳಿದಳು. ನಾನು ಮೊದಲು ತಿಳಿದಿದ್ದ ದೇಶಾಂತರ ಸಂಚಾರದ ವೃತ್ತಾಂತವನ್ನು ಹೇಳಿ ನಿನ್ನ ಅನೇಕ ಗುಣಗಳನ್ನು ಹೇಳಿದೆನು. ಆಗ ಅವಳು 'ಆ ಸುಂದರಾಕಾರನನ್ನು ನಾಳೆ ಹೂವು ಕೊಯ್ಯುವ ನೆಪ

ಕಂ॥ ಪಸುರ್ದಳಿರ್ಗಳಿನಲರ್ದೊಪ್ಪುವ
ಕುಸುಮಂಗಳಿನೊಲೆವ ಫಲವಿತಾನಂಗಳಿನೊ
ಲ್ಪಿಸೆವ ಶುಕಪಿಕರವಂಗಳಿ
ನೆಸೆದಿರ್ಪುದ್ಯಾನಮಂ ನೃಪಾಲಂ ಪೊಕ್ಕಂ ೧೯

ಅಲರ್ದಲರ್ದೊಂಗಲಂ ಕುಣಿಸುತುಂ ಸೊನೆಸೋನೆಯುನೆಯ್ದೆ ಸೂಸುತುಂ
ತಳಿರ್ಗಳಿಜುಂಬಿನಿಂ ನುಸುಳುತುಂ ಮಕರಂದಮನಪ್ಪುತುಂ ಕೊಳಂ
ಗಳ ತಡಿಯೊಳ್ ವಿಹಾರಿಸುತೆ ಪಾಡುವ ಸೋಗೆಗಳಂ ಬಿದಿರ್ಚುತುಂ
ಪಲವು ವಿನೋದದಿಂ ಸುಟಿವುದಾಬನದೊಳ್ ಮಿಗೆ ಮಂದಮಾರುತಂ ೨೦

ವ॥ ಆ ಮಂದಮಾರುತನನಿದಿರ್ಗೊಳುತ್ತಂ ನೋಡಲ್ ಮುಂದೆ

ಉ॥ ತಲ್ಲಣದಿಂ ಸಮಂತುದಯಮಾಗಲೊಡಂ ಪರಿತಂದು ತುಂಬಿ ತಂ
ಪೆಲ್ಲಮನೀಟ್ದುಕೊಂಡಪುವೆನುತ್ತಿರವಂತಿಗೆ ಜಾಜಿಮೊಲ್ಲೆಗಳ್
ಮಲ್ಲಿಗೆ ತಮ್ಮ ತಮ್ಮ ನಜುಗಂಪನೆ ಬೈತಿಡಲಿತ್ತವೋಲ್ ಮನ
ಕ್ಕಲ್ಲಿಸೆಗುಂ ಕದಂಬಮೆನಿಪೋಗರಗಂಪೆಸೆದಿರ್ಪ ಚಂಪಕಂ ೨೧

ದಿಂದ ಉಪವನಕ್ಕೆ ಬಂದು ನೋಡುವೆನು. ಅವನೂ ಅಲ್ಲಿಗೆ ಬಂದು ಉಪವನದ ವಿಲಾಸ
ವನ್ನು ನೋಡುತ್ತಾ ಇರಲಿ' ಎಂದಳು ಎಂದು ಹೇಳಿದಳು. ಈ ಮಾತನ್ನು ಕೇಳಿ
ಅರಸನು ಹರ್ಷವನ್ನು ಹೊಂದಿ ಮರು ದಿವಸ—೧೯. ಸುಂದರವಾದ ಉದ್ಯಾನವನ
ವನ್ನು ಹೊಕ್ಕನು. ಆ ಉದ್ಯಾನವು ಹಸುರಾದ ಚಿಗುರುಗಳಿಂದಲೂ, ಅರಳಿದ ಹೂ
ಗಳಿಂದಲೂ, ಇತ್ತ ಅತ್ತ ಒಲೆಯುವ ಹಣ್ಣುಗಳ ಗೊಂಚಲುಗಳಿಂದಲೂ, ಗಿಳಿ ಕೋಗಿಲೆ
ಗಳ ಮಧುರ ರವಗಳಿಂದಲೂ ರಮ್ಯವಾಗಿತ್ತು. ೨೦. ಅರಳಿದ ಹೂಗೊಂಚಲುಗಳನ್ನು
ಕುಣಿಸುತ್ತಾ, ರಸದ ಸೋನೆಯನ್ನು ಸುತ್ತ ಚೆಲ್ಲುತ್ತಾ, ಚಿಗುರಿನ ಗುಂಪಿನೊಳಗಿನಿಂದ
ಸುಳಿಯುತ್ತಾ, ಮಕರಂದವನ್ನು ಹೀರಿಕೊಳ್ಳುತ್ತಾ, ಕೊಳಗಳ ದಡದಲ್ಲಿ ವಿಹರಿಸುತ್ತಾ,
ಹಾಡುವ ನವಿಲುಗಳನ್ನು ಜಾಗರವಾಡಿಸುತ್ತಾ, ಹೀಗೆ ಹಲವು ವಿನೋದಗಳಿಂದ ಮಂದ
ಮಾರುತವು ಆ ವನದಲ್ಲಿ ಬೀಸುತ್ತದೆ. ವ॥ ಆ ಮಂದ ಮಾರುತವನ್ನು ಎದಿರು
ಗೊಳ್ಳುತ್ತಾ ನೋಡುತ್ತಿರುವಾಗ ಮುಂದೆ—೨೧. ಅಲ್ಲಿ ಉದಯವಾದ ಕೂಡಲೆ ದುಂಬಿ
ಗಳು ಬಂದು ಕಂಪೆಲ್ಲವನ್ನೂ ಹೀರಿಕೊಂಡುಬಿಡುತ್ತವೆ ಎಂದು ಹೆದರಿ ಇರವಂತಿಗೆ
ಜಾಜಿ ಮೊಲ್ಲೆ ಮಲ್ಲಿಗೆಗಳು ತಮ್ಮ ತಮ್ಮ ಸುಗಂಧವನ್ನು ಬಚ್ಚಿಡಲು ಕೊಟ್ಟಿವೆಯೋ
ಎಂಬಂತೆ, ಗುಂಪಾಗಿ ಬೆಳೆದಿರುವ ಪೂರ್ಣವಾಗಿ ಅರಳಿ ಸುವಾಸನೆಯಿಂದ ಗಮಗಮಿ

ಮ॥ ಕುಸುಮಂ ತೀವಿರೆ ಪೊರ್ದುಗುಂ ಮಧುಪಸಂಗಕ್ಲೇಶಮೆಂದಂತವಂ
ಬಿಸುಟತ್ಯದ್ಭುತದಿಂ ಮೊದಲ್ತುದಿವರಂ ಕಾಯ್ಪಣ್ಗಳಂ ಪೇಱಿ ಕ
ಣ್ಗೆಸೆದೊಪ್ಪಂಬಡೆದಿರ್ಪ ಬಕ್ಕೆವಲಸಂ ಮುಂಕೊಂಡು ಪದ್ಮೋದ್ಭವಂ
ರಸವಸ್ತುಪ್ರಕರಂಗಳಂ ಬೞಿಕದೇಂ ಮಾಡಲ್ ಮನಂದಂದನೋ ೨೧

ಚಂ॥ ಪದೆದು ಸುಧಾಂಶು ರಾಹುಭಯದಿಂದಮೃತಂ ಮಡಗಿಟ್ಟನೀಟ್ವ ಪೋ
ಗವ ತೆಱದಿಂ ನಯಂಬಡೆದ ಪಚ್ಚೆಯ ಕುಪ್ಪಿಗೆಯೊಳ್ ಸುರಪೆಯಿಂ
ಬುದನಱಿದಂಬಿನಿಂ ಮೆಱೆವ ಕೋಮಳಕಾಂತಿಯನಾಂತು ನಾಡೆ ಭೂ
ಜದೊಳೊಲೆದಾಡುತಿರ್ಪ ಪಸುರ್ಗಾಯ್ಗಳನೀಕ್ಷಿಸಿದಂ ಕುಮಾರಕಂ ೨೨

ಚಂ॥ ತಳಿರ್ವನೆಯೊಳ್ ಪೊರಳ್ದು ಸೊನೆವಿಂದುಗಳೊಳ್ ನಸುನಾಂದು ಗಂಡುಗೋ
ಗಿಲೆಗಿಳಿತುಂಬಿಗಳ್ಗಗಿದು ತೆಂಕಣ ಗಾಳಿಗೆ ಕಂಪಿಸುತ್ತೆ ಪೂ
ಗಳನುಱೆ ನೂಂಕಿ ಚೈತ್ರವಿಟನೊಳ್ ವಿರಹಾತುರೆಯಾದ ಕಾಂತೆವೋಲ್
ವಿಳಸಿತವಾಗಿ ಮಾಮರದೊಳಿರ್ದುವು ಮಾವಿನ ಪಣ್ಗಳೋಳಿಗಳ್ ೨೩

ಸುವ ಸಂಪಗೆಮರವು, ಮನಸ್ಸಿಗೆ ಉಲ್ಲಾಸಕರವಾಗಿ ತೋರುತ್ತಿತ್ತು. ೨೧. ಹೂಗಳು ತುಂಬಿದ್ದರೆ ದುಂಬಿಗಳಿಂದ ತೊಂದರೆಯುಂಟಾಗುತ್ತದೆ ಎಂದು ಯೋಚಿಸಿ ಅವನ್ನು ತೊರೆದು ಬುಡದಿಂದ ತುದಿಯವರೆಗೂ ಕಾಯ್ಗಳನ್ನೂ ಹಣ್ಣುಗಳನ್ನೂ ಹೇರಿಕೊಂಡು ಒಂದು ಬಕ್ಕೆ ಹಲಸಿನಮರವು ಅಲ್ಲಿ ಕಂಗಳಿಗೆ ಸೊಗಸಾಗಿ ಕಾಣಿಸುತ್ತಿತ್ತು. ಬ್ರಹ್ಮನು ಮೊದಲು ಇದನ್ನು ನೋಡಿ ಅನಂತರ ರಸವಸ್ತುಗಳನ್ನು ಸೃಷ್ಟಿಸಿದನೋ ಏನೋ ಎಂದು ಇದನ್ನು ನೋಡಿದಾಗ ಊಹೆ ಬರುತ್ತದೆ. ೨೨. ಕುಮಾರನು ಕೋಮಲವಾದ ಕಾಂತಿಯಿಂದ ಮೆರೆಯುವ ಮರದಲ್ಲಿ ಒಲೆದಾಡುತ್ತಿದ್ದ ಮಿರುಗುವ ಹಸುರುಗಾಯಿಗಳನ್ನು ನೋಡಿದನು. ಅವು ಚಂದ್ರನು ರಾಹುವಿನ ಭಯದಿಂದ ಅಮೃತವನ್ನು ಯಾರೂ ಎತ್ತಿಕೊಂಡು ಹೋಗದಂತೆ ಸುರಕ್ಷಿತವಾಗಿ ತುಂಬಿಟ್ಟ ನಯವಾದ ಪಚ್ಚೆಯ ಭರಣಿಗಳೋ ಎಂಬಂತೆ ಕಾಣಿಸಿದುವು. ೨೩. ಮಾವಿನಮರದಲ್ಲಿ ಮಾವಿನಹಣ್ಣುಗಳ ಗೊಂಚಲುಗಳು ಚೈತ್ರನೆಂಬ ವಿಟನಿಗೆ ಅಗಲಿಕೆಯಿಂದ ಹಾತೊರೆಯುವ ಕಾಂತೆಯಂತೆ ವಿಲಾಸದಿಂದ ಪ್ರಕಾಶಿಸಿದುವು. ಹೇಗೆಂದರೆ- ಅವು ವಿರಹತಪ್ತಳಾದ ಕಾಂತೆಯಂತೆ ಚಿಗುರಿನ ಮನೆಯಲ್ಲಿ ಹೊರಳಾಡಿದುವು. ಸೊನೆಯ ಸಮೂಹದಲ್ಲಿ ನೆನೆದುವು. ಗಂಡುಕೋಗಿಲೆ ಗಿಳಿ ದುಂಬಿಗಳಿಗೆ ಹೆದರಿದುವು. ತೆಂಕಣ ಗಾಳಿಗೆ ನಡುಗಿದುವು. ಹೂಗಳನ್ನು ಪಕ್ಕಕ್ಕೆ ನೂಕಿದುವು. ವಿರಹಿಣಿಯ ಅವಸ್ಥೆ

ಚಂ॥ ತನಿವದನಾಗಿ ಕೆಂಪನೊಳಕೊಂಡು ಸುಗಂಧಮನಾಂತು ತುಂಬಿಯೊ
ಪ್ಪಿನಿರಸಮುರ್ಬೆ ಸದ್ವಿಜಪರೀಕ್ಷಿತಮಲ್ಲದ ಮುನ್ನ ಪೀರ್ದ ಮಾ
ವಿನ ತನಿವಣ್ಗಳಂ ಸೊಬಗರಾದವರಾಗಳೆ ತಮ್ಮ ಕೂರ್ತ ಕಾ
ಮಿನಿಯರ ಪೆಂಪುವೆತ್ತಧರಸೇವೆಯ ಭಾವನೆಯೊಳ್ ಮುೞುಂಗಿದರ್ ೨೫

ವ॥ ಮತ್ತಮದು ವನದೇವತೆಯರ್ ವನಕೇಳಿಗೆ ವಂದ ಮೆಲ್ಲಡಿವಜ್ಜೆಗಳನಱಿಪುವ ಪಿಂಜರಿತಪರಾಗಪುಂಜದಿಂ ಕಲಕಂಠಗಳೊಳ್ಗೊನರ್ಗಳಂ ಕರ್ದುಂಕೆ ಸುರಿವ ಸೊನೆವೊನಲಿಂದಗ್ಗಳಮಾದ ಕೋೞ್ಕೆಸಱಿಂ ಗಿಳಿವಿಂಡುಗಳ್ ಕೞಿವಣ್ಗಳಂ ಕರ್ದುಂಕೆ ಇನಿದುಮೊಸರ್ವ ದಾಡಿಮಾರಸಂಗಳಿಂ ಮೆಲ್ಲೆಲರ್ ತೀಡೆ ವಲ್ಲಿಗಳಿಂದೊಕ್ಕ ವೊಲ್ಲೆಮಲ್ಲಿಗೆಯುರಲಿಂ ಖಚರೀನಿಚಯಂ ಗಗನಮನಡರಲ್ ಬೞಲ್ಕೆಯುಂ ಕಳೆಯೆ ಪಟ್ಟಿರ್ದು ಪೋದ ಪಲ್ಲವದ ಪಾಸಿಕೆಗಳಿಂ ಬಂಡುಂಡು ಮಂಡಳಿಸಿ ಝೇಂಕಾರಂಗುಡುವ ಮಱಿಪಱಿಮೆಗಳಿಂ ಕಂದರ್ಪನ ಬೇಹಿನಂತೆಂದು ಸುೞಿವ ಮಂದಮಾರುತನಿಂ ಚೆಂದಂಬಡೆದಿರ್ದ ವನಮಂ ನೋಡುತ್ತುಂ ಬರೆ ಅಲ್ಲಿ

ಯೆಲ್ಲ ಅವುಗಳಲ್ಲಿ ಕಾಣಿಸಿದುವು. ೨೫. ಹದವಾಗಿ ಮಾಗಿದ ಕೆಂಪುಬಣ್ಣಕ್ಕೆ ತಿರುಗಿದ ಸುಗಂಧವುಳ್ಳ ತೊಂಡೆಹಣ್ಣಿನಂತೆ ಒಪ್ಪುವ (ದುಂಬಿಮುತ್ತಿದ) ಸಿಹಿಯಾದ ರಸವುಕ್ಕುವ ರುಚಿಯಾದ ಮಾವಿನ ಹಣ್ಣುಗಳನ್ನು ಪಕ್ಷಿಗಳು ರುಚಿನೋಡುವುದಕ್ಕೆ ಮೊದಲೇ (ಒಳ್ಳೆಯದ್ವಿಜರು ಪರೀಕ್ಷಿಸುವುದಕ್ಕೆ ಮೊದಲೇ) ರಸಿಕರು ರುಚಿನೋಡಿದರು. ಕೂಡಲೇ ಅವರು ಇವರಿಂದ ತಮ್ಮ ಪ್ರಣಯಿನಿಯರ ಮಧುರವಾದ ಅಧರವನ್ನು ಪಾನಮಾಡಿದಂತೆ ಬಗೆದು ಆ ಭಾವನೆಯಲ್ಲಿ ಮುಳುಗಿದರು. ವ॥ ಆ ವನದಲ್ಲಿ ಒಂದು ಕಡೆ ಹೊಂಬಣ್ಣದ ಪರಾಗಗಳು ದಟ್ಟವಾಗಿ ಹರಡಿ ಅದರ ಮೇಲೆ ವನಕ್ರೀಡೆಗಾಗಿ ಬಂದ ವನದೇವತೆಯರ ಮೃದುವಾದ ಪಾದಗಳ ಗುರುತುಗಳು ಕಾಣುತ್ತಿದ್ದುವು. ಅಲ್ಲಲ್ಲಿ ಕೋಗಿಲೆಗಳು ಮೃದುವಾದ ಚಿಗುರುಗಳನ್ನು ಕುಟುಕಲು ಅವುಗಳಿಂದ ಸುರಿದ ಸೊನೆಯ ಪ್ರವಾಹದಿಂದ ನೆಲವೆಲ್ಲ ಕೆಸರಾಗಿದ್ದಿತು. ಒಂದು ಕಡೆ ಗಿಳಿಗಳ ಹಿಂಡು ಕಳಿತ ಹಣ್ಣುಗಳನ್ನು ಕುಟುಕಲು ದಾಳಿಂಬೆಯ ಸಿಹಿಯಾದ ರಸವು ಸೋರುತ್ತಿತ್ತು. ಇನ್ನೊಂದೆಡೆ ಮಂದಮಾರುತವು ಬೀಸಲು ಬಳ್ಳಿಗಳಿಂದ ಮೊಲ್ಲೆಮಲ್ಲಿಗೆ ಹೂಗಳು ಕೆಳಕ್ಕೆ ಉದುರಿದ್ದುವು. ಮತ್ತೊಂದೆಡೆ ದೇವಾಂಗನೆಯರು ಗಗನಕ್ಕೇರುವ ಮೊದಲು ಆಯಾಸವನ್ನು ಕಳೆದುಕೊಳ್ಳಲು ಮಲಗಿದ್ದು ಹೋದ ಚಿಗುರಿನ ಹಾಸಿಗೆಗಳು ಕಾಣಿಸುತ್ತಿದ್ದುವು. ಅಲ್ಲಲ್ಲಿ ಮರಿದುಂಬಿಗಳು ಮಕರಂದವನ್ನು ಕುಡಿದು ಮಂಡಲಾಕಾರದಿಂದ ಹಾರುತ್ತಾ ಝೇಂಕಾರಮಾಡುತ್ತಿದ್ದುವು. ಅಲ್ಲಿ ಮಂದಮಾರುತವು ಕಾಮನ ಗೂಢಚಾರನಂತೆ ಬೀಸುತ್ತಿತ್ತು. ಹೀಗೆ ಸುಂದರವಾದ ಆ ವನವನ್ನು ನೋಡುತ್ತಾ ಬರುತ್ತಿರುವಾಗ,

ವ॥ ಅಂತು ಮಱಿಮಿಂಚಿನ ತುಱುಗಲಂತೆಯುಂ ಇಂದುಕಳೆಯ ಸಂದಣಿಯಂತೆಯುಂ ಅರಲ ಸರಲ ಹೊರಳಿಯಂತೆಯುಂ ಕುಡಿಲತೆಯ ಗಡಣದಂತೆಯುಂ ಪಸುರಡಕೆಯ ಸಸಿಯಂತೆಯುಂ ಚಂದ್ರಿಕೆಯ ಗಡಣದಂತೆಯುಂ ಚಿತ್ತಜಪತಾಕೆಯ ಮೊತ್ತದಂತೆಯುಂ ತೆಂಬೆಲರ ಬಂಬಲಂತೆಯುಂ ವಸಂತನ ಪೊಸಬೀಡಿನಂತೆಯುಂ ವನದೇವತೆಯ ಮನದೇವತೆಯಂತೆಯುಂ ವಿಲಾಸದಿಂ ಬರ್ಪ ವಿಲಾಸಿನೀಜನದ ನಡುವೆ

ಉ॥ ಮೇಲುವನೊಯ್ಯನೋಸರಿಸುತುಂ ಕುರುಳಂ ಬೆರಳಿಂದಮುರ್ಚುತುಂ
ತೋಳ ವಿಲಾಸಮಂ ಮೆಱೆಯುತುಂ ಕಡೆಗಣ್ಬೆಳಗಂ ತುಱುಂಕುತುಂ
ಸೋಲಮನೀಯುತುಂ ವಿಟರೊಳೆಣ್ದೆಸೆಯೊಳ್ ಮುಡಿಗಂಪುವಾಱುತುಂ
ಲೀಲೆಯೊಳಂದವಂತಿವಧು ಬಂದಳನಂಗನಿಧಾನವೆಂಬಿನಂ ೩೨

ವ॥ ಮತ್ತಮವಳಾಪಾದಮಸ್ತಕರೂಪವರ್ಣನಮೆಂತೆಂದೊಡೆ

ಕಂ॥ ಪೊಸಮುತ್ತನುಗುಳ್ವ ನವಶು
ಕ್ತಿ ಸಂಪುಟಂ ಕಡಲ ವಿದ್ರುಮಂ ಸೋಂಕಲೊಡಂ
ನಸುಗೆಂಪುವೆತ್ತುವೆಂಬಂ
ತೆಸೆಗುಂ ನಖದೀಪ್ತಿ ಮೆಱೆಪ ಪದಯುಗಮವಳಾ ೩೩

ದಲ್ಲಿ ಸೃಷ್ಟಿಸಿದ್ದಾನೆಯೋ ಎಂಬಂತೆ ಆ ಅಬಲೆಯರ ಗುಂಪು ಮೆರೆಯಿತು. ವ॥ ಮರಿ ಮಿಂಚಿನ ಗುಂಪಿನಂತೆಯೂ, ಚಂದ್ರನ ಕಲೆಗಳ ಸಂದಣಿಯ ಹಾಗೆಯೂ, ಹೂವಿನ ಬಾಣಗಳ ಸಮೂಹದಂತೆಯೂ, ಹಬ್ಬುವ ಬಳ್ಳಿಯ ಗುಂಪಿನಂತೆಯೂ, ಹಸುರಾದ ಅಡಕೆಯ ಸಸಿಯ ಹಾಗೆಯೂ, ಬೆಳದಿಂಗಳ ಸಮೂಹದಂತೆಯೂ ಮನ್ಮಥನ ಪತಾಕೆಗಳ ಗುಂಪಿನಂತೆಯೂ, ತಂಗಾಳಿಯ ರಾಶಿಯಂತೆಯೂ ವಸಂತನ ಹೊಸಮನೆಯ ಹಾಗೂ, ವನದೇವತೆಯ ಮನೆದೇವತೆಯಂತೆಯೂ ವಿಲಾಸದಿಂದ ಬರುತ್ತಿದ್ದ ವಿಲಾಸವತಿಯರ ನಡುವೆ, ೩೨. ಅವಂತಿಕುಮಾರಿಯು ಮನ್ಮಥನ ನಿಧಿಯೋ ಎಂಬಂತೆ ವಿಲಾಸದಿಂದ ಬರುತ್ತಿದ್ದಳು. ಅವಳು ಸೆರಗನ್ನು ನಿಧಾನವಾಗಿ ಸರಿಪಡಿಸಿಕೊಳ್ಳುತ್ತಿದ್ದಳು. ಮುಂಗುರುಳುಗಳನ್ನು ಬೆರಳಿನಿಂದ ಪಕ್ಕಕ್ಕೆ ಸರಿಸುತ್ತಿದ್ದಳು. ತೋಳುಗಳ ವಿಲಾಸ ಪ್ರದರ್ಶಿಸುತ್ತಿದ್ದಳು. ಕಡೆಗಣ್ ಕಾಂತಿಯನ್ನು ಸುತ್ತ ಹರಡುತ್ತಿದ್ದಳು. ಕಾಮುಕರಿಗೆ ಮೋಹವನ್ನುಂಟುಮಾಡುತ್ತಿದ್ದಳು. ಎಂಟು ದಿಕ್ಕುಗಳಿಗೂ ತಲೆಗೂದಲ ಸುವಾಸನೆಯನ್ನು ಹರಡುತ್ತಿದ್ದಳು. ವ॥ ಕಾಲಿನಿಂದ ತಲೆಯವರೆಗೂ ಅವಳ ರೂಪದ ವರ್ಣನೆ ಹೇಗೆಂದರೆ ೩೩. ಉಗುರಿನ ಕಾಂತಿಯಿಂದ ಮೆರೆಯುವ ಅವಳ ಪಾದಗಳೆರಡೂ, ಹೊಸಮುತ್ತನ್ನುಗುಳುವ ಮುತ್ತಿನ ಚಿಪ್ಪು ಕಡಲಿನ ಹವಳದ ಸೋಂಕಿ

ಕಂ॥ ಮದನನ ಬಾಣನಿಷಂಗಂ
ಸುದತಿಯ ಕಾಲ್ವಿಡಿದು ಪೆಂಪುವಡೆಯಲ್ ಬಂದಿ
ರ್ದುದೊ ಪೇೞ್ವೆಂಬ ವಿಳಾಸಾ
ಸ್ಪದದಿಂ ಮೆಱೆದಿರ್ದುವವಳ ೩೪

ಕಾಮನನಿಳಯಕ್ಕೊಲವಿಂ
ಸೋಮಂ ಶುಭಲಗ್ನದೊಳ್ ಪ್ರತಿಷ್ಠಿಸಿದ ಲಸ
ತ್ಕೋಮಳರಂಭಾಸ್ತಂಭನಿ
ಕಾಮಮೆನಲ್ ಮೆಱೆವುವಾಕೆಯೂರುದ್ವಿತಯಂ ೩೫

ಮದನಶಬರಾಸ್ತ್ರತತಿಗ
ಳ್ಕಿದ ವಿಟಮೃಗಸಮಿತಿಯಡರ್ದು ಬರ್ದುಕುವ ಶೈಲಾ
ಗ್ರದ ತೆಱದಿನೊಪ್ಪುತಿರ್ಕುಂ
ಸುದತಿಯ ಗುರುತರನಿತಂಬಮತ್ಯುನ್ನತಿಯಿಂ ೩೬

ಮಡದಿಯ ಸೆಳೆನಡು ತನ್ನಯ
ಬಡತನದಿಂ ಹರಿಯ ಮಧ್ಯಮಂ ನಯದಿಂ ಕೀ
ೞ್ಪಡಿಸುತ್ತಿರ್ಪುದನಱಿದುಂ
ಪಿಡಿಗೊಳಗಾಗಿರ್ಪುದೆಂಬುದದು ಪುಸಿಯಲ್ತೇ ೩೭

ನಿಂದ ನಸುಗೆಂಪನ್ನು ಪಡೆದಿದೆಯೋ ಎಂಬಂತೆ ಹೊಳೆಯುತ್ತಿದ್ದುವು. ೩೪. ಅವಳ ಕಾಲುಗಳು ಮದನನ ಬಾಣಗಳ ಬತ್ತಳಿಕೆಯು ರಮಣಿಯ ಕಾಲುಗಳನ್ನು ಹಿಡಿದು ಗೌರವವನ್ನು ಪಡೆಯಲು ಬಂದಿದೆಯೋ ಎಂಬಂತೆ ವಿಳಾಸಕ್ಕೆ ಆಶ್ರಯವಾಗಿ ಮೆರೆಯುತ್ತಿದ್ದುವು, ೩೫. ಆಕೆಯ ತೊಡೆಗಳೆರಡೂ, ಕಾಮನಮನೆಗೆ ಒಲವಿನಿಂದ ಚಂದ್ರನು ಶುಭಲಗ್ನದಲ್ಲಿ ಕಟ್ಟಿಸಿದ ಹೊಳೆಯುವ ಕೋಮಲವಾದ ಬಾಳೆಯ ಕಂಬಗಳೋ ಎಂಬಂತೆ ಮೆರೆದುವು. ೩೬. ಮದನನೆಂಬ ಬೇಟೆಗಾರನ ಅಸ್ತ್ರಗಳಿಗೆ ಹೆದರಿದ ವಿಟಪುರುಷರೆಂಬ ಮೃಗಸಮೂಹವು ಹತ್ತಿ ಬದುಕಿಕೊಳ್ಳಬಹುದಾದ ಬೆಟ್ಟದ ಶಿಖರವೋ ಎಂಬಂತೆ ಆ ರಮಣಿಯ ಗುರುತರವಾದ ನಿತಂಬವು ಅತ್ಯುನ್ನತಿಯಿಂದ ಪ್ರಕಾಶಿಸಿತು. ೩೭. ಮಡದಿಯ ತೆಳುವಾದ ಸೊಂಟವು ತನ್ನ ಬಡತನದಿಂದ (ಕೃಶತೆ) ಸಿಂಹದ ಸೊಂಟವನ್ನು ಕೀಳುಪಡಿಸುತ್ತಿದೆ. ಇದನ್ನು ತಿಳಿದೂ ಹಿಡಿಗೆ ಒಳಗಾಗಿದೆಯೆಂಬುದು ಹುಸಿಯಲ್ಲವೇ? (ಪಿಡಿ = ಹೆಣ್ಣಾನೆ ಮತ್ತು ಕೈಹಿಡಿತ) ಹಿಡಿತಕ್ಕೆ ಸಿಕ್ಕುವಷ್ಟು ನಡು

ಕಂ॥ ವಿಟರ ಚಳನಯನಶಫರಂ
ಚಟುಲತೆಯಿಂ ತಿರುಗುತಿರ್ಪ ಲಾವಣ್ಯರಸೋ
ತ್ಕಟಕೂಪವೆಂಬ ತೆಱದಿಂ
ಕುಟಿಲಾಳಕಿಗೆಸೆದುದಲ್ತೆ ನಾಭೀಗರ್ತಂ ೩೮

ನಾರಿ ನನೆವಿಲ್ಲವಿಲ್ಲ ನುಣ್ಪಿನ
ನಾರಿಯನೊಲ್ದೀಗಳಿಂತು ಪಡೆದಪಳೆನೆ ಭೃಂ
ಗೀರುಚಿರರುಚಿಯಿನೆಸೆಗುಂ
ನಾರಿಯ ನಿಡುಬಾಸೆ ಕೋಮಳಚ್ಛವಿಯಿಂದಂ ೩೯

ಶಶಿಕಿರಣಮನಾಯ್ದಾಯ್ದೊ
ಳ್ಪಿಸೆಯಲ್ ಪೋಣಿಸಿದ ತೆಱದ ಮುಕ್ತಾಹಾರಂ
ನಸುಸೋಂಕೆ ಮುಗಿದುವೆಂಬಂ
ತೆಸೆಗುಂ ಕುಚಕಮಲಕುಟ್ಮಲಂ ಕೋಮಳೆಯಾ ೪೦

ಸಲ್ಲಲಿತವಿಮಲಸುಮನೋ
ವಲ್ಲರಿಯಂ ತಳೆದು ಪದೆಪಿನಿಂ ಮೆಲ್ಲೆಲರಿಂ
ದಲ್ಲಾಡುವ ಲತೆಗಳವೆನೆ
ಸೆಳ್ಳುಗುರಿಂದೆಸೆವುವವಳ ನಿಡುನಳಿತೋಳ್ಗಳ್ ೪೧

ಸಣ್ಣದಾಗಿತ್ತು. ೩೮. ಸುರುಳಿಯಾದ ಮುಂಗುರುಳುಳ್ಳ ಅವಳ ನಾಭೀ ಗರ್ತವು (ಹೊಕ್ಕುಳೆಂಬ ಹಳ್ಳ) ಕಾಮುಕ ಪುರುಷರ ಚಂಚಲವಾದ ಕಂಗಳೆಂಬ ಮೀನುಗಳು ಚಟುವಟಿಕೆಯಿಂದ ಹರಿದಾಡುವ ಲಾವಣ್ಯವೆಂಬ ರಸದ ಭಾವಿಯಂತೆ ಪ್ರಕಾಶಿಸಿತು. ೩೯. ದುಂಬಿಗಳಂತೆ ಮನೋಹರವಾದ ಹೊಟ್ಟೆಯ ಮೇಲಿನ ರೋಮರಾಜಿಯು ಕೋಮಲ ಕಾಂತಿಯನ್ನು ನೋಡಿದರೆ, ಅವಂತಿಸುಂದರಿಯು ತನ್ನ ಕೋಮಲವಾದ ಕಾಂತಿಯಿಂದ ಮನ್ಮಥನ ಬಿಲ್ಲಿನ ನುಣುಪಾದ ಹೆದೆಯನ್ನು ಪಡೆದಳೋ ಎಂಬಂತೆ ಕಾಣುತ್ತಿದ್ದಳು. ೪೦. ಚಂದ್ರನ ಕಿರಣಗಳನ್ನು ಆರಿಸಿ ಆರಿಸಿ ಸುಂದರವಾಗಿ ಪೋಣಿಸಿರುವಂತೆ ಹೊಳೆಯುವ ಮುತ್ತಿನಹಾರವು ನಸುಸೋಂಕಲು ಮುಚ್ಚಿಕೊಂಡುವೋ ಎಂಬಂತೆ ಆ ಕೋಮಲೆಯ ಕುಚಗಳೆಂಬ ಕಮಲದಮೊಗ್ಗುಗಳು ಪ್ರಕಾಶಿಸಿದುವು. ೪೧. ಅವಳ ನೀಳವಾದ ಕೋಮಲವಾದ ತೋಳುಗಳು ತೆಳುವಾದ ಉಗುರುಗಳಿಂದ ಕೂಡಿ, ಮನೋಹರವಾದ ಹೂವಿನಗೊಂಚಲುಗಳನ್ನು ತಳೆದು ಮೃದುವಾದ ಗಾಳಿ

ಕಂ॥ ಇಂಬಿನ ಕಂಬುಗ್ರೀವಮ
ದೆಂಬರ ಮಾತಿರ್ಕೆ ಮೌಕ್ತಿಕಗ್ರೀವಂ ತಾ
ನೆಂಬುಪಮೆವೆತ್ತು ಶೋಭಾ
ಡಂಬರಮಂ ಪಡೆದುದವಳ ಕೋಮಲಕಂಠಂ ೪೨

ಅನುರಾಗರಸವಿಲಾಸಿನಿ
ಯಿನಿಯನ ಮೇಲ್ಪಾಯಲೆಂದು ತದ್ವದನನಿಕೇ
ತನದ ಪೊಸಂತಿಲೊಳಿರ್ದಪ
ಳೆನೆ ಸತಿಯೊಳ್ದುಟಿಯ ಕೆಂಪು ರಂಜಿಸುತಿರ್ಕುಂ ೪೩

ವದನ ಸಿತಾಂಬುಜದೊಳ್ ಕೊಂ
ಕದಂತು ತರತರದ ಶೋಭೆಯಿಂದೊಪ್ಪುವ ವ
ಜ್ರದ ಕೇಸರವೆಂಬುಪಮೆಗೆ
ಪಡೆದುವೆನಲ್ ಮೆಱೆವುವವಳ ದಂತದ್ಯುತಿಗಳ್ ೪೪

ಕ್ಷೋಣಿಯನಲೆಯಲ್ ಸುಮನೋ
ಬಾಣಂ ಕುಸುಮಾಸ್ತ್ರವಿತತಿಯಂ ಮಸೆವ ಲಸ
ಚ್ಛಾಣಮೆನಲೆಸೆಯುತಿರ್ಕುಂ
ಮಾಣಿಕ್ಯಾಧರೆಯ ನುಣ್ಪುವೆತ್ತ ಕಪೋಲಂ ೪೫

ಯಲ್ಲಿ ಅಲ್ಲಾಡುವ ಬಳ್ಳಿಗಳೋ ಎಂಬಂತೆ ಕಾಣಿಸಿದುವು. ೪೨. ಸುಂದರವಾದ ಶಂಖದಂಥ ಕುತ್ತಿಗೆ ಎಂದು ಹೇಳುವವರ ಮಾತು ಹಾಗಿರಲಿ, ಅವಳ ಕೋಮಲವಾದ ಕಂಠವು ಮುತ್ತಿನಂಥ ಕಂಠ ಎಂಬ ಹೋಲಿಕೆಯನ್ನು ಪಡೆದು ಅತಿಶಯವಾದ ಶೋಭೆಯಿಂದ ಪ್ರಕಾಶಿಸಿತು, ೪೩. ಅನುರಾಗರಸವೆಂಬ ವಿಲಾಸಿನಿಯು ಪ್ರಿಯನ ಮೇಲೆ ನುಗ್ಗಲೆಂದು ಅವಳ ಬಾಯೆಂಬ ಮನೆಯ ಹೊಸ್ತಿಲಿನಲ್ಲಿ ನಿಂತಿದ್ದಾಳೆಯೋ ಎಂಬಂತೆ ಆ ಸತಿಯ ಅಂದವಾದ ತುಟಿಯ ಕೆಂಪು ರಂಜಿಸಿತು, ೪೪, ಅವಳ ಹಲ್ಲಿನ ಕಾಂತಿಗಳು ಮುಖವೆಂಬ ಬೆಳ್ದಾವರೆಯಲ್ಲಿ ನೇರವಾಗಿ ಹೊರಟು ವಿಧವಿಧವಾದ ಶೋಭೆಯಿಂದ ಹೊಳೆಯುವ ವಜ್ರದ ಕೇಸರಗಳ ಹೋಲಿಕೆಯನ್ನು ಪಡೆದಂತೆ ಮೆರೆಯುತ್ತಿದ್ದವು. ೪೫. ಮಾಣಿಕ್ಯದಂತೆ ಕೆಂಪಾದ ಅಧರವುಳ್ಳ ಅವಳ ನುಣುಪಾಗಿ ಹೊಳೆಯುವ ಕೆನ್ನೆಯ ಭೂಮಿಯಲ್ಲಿ ಸಂಚರಿಸಲು ಮನ್ಮಥನು ತನ್ನ ಕುಸುಮಾಸ್ತ್ರಗಳನ್ನು

ಕಂ॥ ಪಱಿಮೆಗಳೆಂಜಲಿಸದ ಮು
ನ್ನಱಿದು ವಸಂತಂ ಸುಗಂಧಮಂ ಬೈತಿಟ್ಟಾ
ನಱುಗಂಪಿನ ಕುಪ್ಪೆಗೆಯೆಂ
ಬೆಱಕಮನೊದರಿಸುವುದವಳ ನಾಸಾಮುಕುಳಂ ೪೬

ಲಲನಾರತ್ನವಿದೆನಿಸಿ
ರ್ಪೆಳೆಯಳ ಕಣ್ಬುಗುವುದರ್ಕೆ ಸಮಯಂಬಡೆಯಲ್
ನೆಲಸಿರ್ಪಂಜನರೇಖಾ
ವಿಳಾಸಮಂ ಪಡೆದುವವಳ ತಳ್ತಿವೆದುಱುಗಲ್ ೪೭

ಅಂಬುಜಪತ್ರಕ್ಕೆಱಗಿದ
ತುಂಬಿಯ ಮಱಿಯೆಂಬ ತೆಱದಿನಬ್ಜಾಕ್ಷಿಯ ಕ
ಣ್ಗಿಂಬಾಗಿರ್ದುವು ಸರ್ವರ
ಕಣ್ಬುಗೆ ಕರಿಯಾಲಿ ನೀಲಮಣಿಸನ್ನಿಭದಿಂ ೪೮

ತಿಂಗಳ ಬೆಳಗಿನ ರಸದಿನ
ನಂಗಂ ಪೂಗಣೆಯನುರ್ದಿ ಚಿತ್ರಿಸಿದನೊ ಕರ
ಣಂಗಳ ಸೀಮೆಯೆನಲ್ ನಿಡು
ಗಂಗಳ ಬಿಳಿಯಾಲಿ ರಂಜಿಕುಂ ಕೋಮಳೆಯಾ ೪೯

ಮಸೆಯುವ ಮಿರುಗುವ ಸಾಣೆಕಲ್ಲೋ ಎಂಬಂತೆ ಪ್ರಕಾಶಿಸಿತು. ೪೬. ದುಂಬಿಗಳು ಹೀರಿ ಎಂಜಲು ಮಾಡುವುದಕ್ಕೆ ಮೊದಲೇ ತಿಳಿದು ವಸಂತನು ಸುಗಂಧವನ್ನು ಬಚ್ಚಿಟ್ಟ ಸುಗಂಧದ ಭರಣಿಯೋ ಎಂಬ ಭಾವನೆಯನ್ನು ಅವಳ ನಾಸಾಮುಕುಳವು ಉಂಟುಮಾಡುತ್ತಿತ್ತು, ೪೭. ಅವಳ ಒತ್ತಾದ ರೆಪ್ಪೆಗೂದಲು, ಲಲನಾರತ್ನವೆಂದು ಹೆಸರುವಾಸಿಯಾದ ಈ ಯುವತಿಯ ಕಣ್ಣುಗಳ ಒಳಕ್ಕೆ ಹೋಗಲು ಸಮಯವನ್ನು ಕಾಯುತ್ತಾ ನೆಲಸಿರುವ ಕಾಡಿಗೆಯ ರೇಖೆಯ ಶೋಭೆಯನ್ನು ಪಡೆಯಿತು. (ಕಾಡಿಗೆಯ ಗೆರೆಯಂತೆ ಕಾಣಿಸಿತು) ೪೮. ತಾವರೆಯ ಎಸಳಿಗೆರಗಿದ ದುಂಬಿಯ ಮರಿಯ ಹಾಗೆ ಆ ಕಮಲಾಕ್ಷಿಯ ಕಪ್ಪಾದ ಆಲಿಗಳು ಪೊಳೆದುವು. ನೀಲರತ್ನದ ಹಾಗೆ ಕಂಗಳಿಗೆ ಚೆಂದವಾಗಿದ್ದು ಎಲ್ಲರ ಕಣ್ಣುಗಳನ್ನೂ ಪೊಕ್ಕವು. ಅಷ್ಟು ಆಕರ್ಷಕವಾಗಿದ್ದುವು ಅವಳ ಆಲಿಗಳು. ೪೯. ಬೆಳುದಿಂಗಳ ರಸದಿಂದ ಅನಂಗನು ಹೂವಿನ ಬಾಣವನ್ನು ಉಜ್ಜಿ ತನ್ನ ಆಯುಧದ ಕಡೆಯ ಎಲ್ಲೆಯನ್ನು ಚಿತ್ರಿಸಿದನೋ ಎಂಬ ಹಾಗೆ ಆ ಕೋಮಲೆಯ ಬಿಳಿಯ ಆಲಿಯು ರಂಜಿಸಿತು.

ಕಂ॥ ಎಲೆ ಚಂದ್ರವದನೆ ನಿನ್ನಯ
ಕೆಳೆಯನ ಬಲ್ಪಗೆಯ ಮಱಿಗಳೆಂದಬ್ಜಭವಂ
ಮುಳಿದೊಪ್ಪುಗೊಟ್ಟ ರಾಹುವಿ
ನೆಳಮಱಿಯೆನಲಡರ್ದ ಪುರ್ಬು ರಂಜಿಪುವವಳಾ ೫೦

ಕಿವಿಯೆಂದು ಬರೆಯುತುಂ ಮೊದ
ಲ ವರ್ಣಮಂ ಮಱೆದು ಕಡೆಯ ವರ್ಣಮನಂಗೋ
ದ್ಭವನರ್ತು ಬರೆದನೆಂಬಂ
ತೆ ವಿಳಾಸಂಬೆತ್ತುವವಳ ವರ್ಣಿತಕರ್ಣಂ ೫೧

ಅಲರ್ವಿಲ್ಲನೋಜೆಯಿಂದಾ
ಲಲನೆಯ ಸಮುದಾಯಶೋಭೆಯಂನಿತಂ ಬರೆಯಲ್
ಕಲಿಯಲಳವಟ್ಟ ಚಿತ್ರದ
ಫಲಕವೆನಲ್ ಪೊಳೆವುದೆಸೆವ ಪೆಱೆನೊಸಲವಳಾ ೫೨

ನಾಸಾಚಂಪಕಗಂಧ
ಕ್ಕಾಸುರದಿಂದಱಿಯದೆಱಗಿದೆಳದುಂಬಿಗಳೊ
ಲ್ದಾಸೊರ್ಕಿ ನೆಲಸಿದಪುವೆನೆ
ದೇಸೆಯನಾಂತವಳ ಕುಟಿಲಕುಂತಳವೆಸೆಗುಂ ೫೩

೫೦. "ಎಲೆ ಚಂದ್ರವದನೆ, ನಿನ್ನ ಗೆಳೆಯನಾದ ಚಂದ್ರನ ಬಲಿಷ್ಠ ಶತ್ರುವಾದ ರಾಹುವಿನ ಮರಿಗಳು ಇವು" ಎಂದು ಬ್ರಹ್ಮನು ಕೋಪಿಸಿಕೊಂಡು ಆಕೆಯ ವಶಕ್ಕೆ ಕೊಟ್ಟ ರಾಹುವಿನ ಎಳೆ ಮರಿಗಳೋ ಎಂಬಂತೆ ಅವಳ ಏರಿದ ಹುಬ್ಬುಗಳು ರಂಜಿಸಿದುವು. ೫೧. ಕಿವಿಯೆಂದು ಬರೆಯಲು ಹೊರಟು ಮೊದಲವರ್ಣವನ್ನು ಮರೆತು ಕಡೆಯ ವರ್ಣವನ್ನು ಮದನನು ಪ್ರೀತಿಸಿ ಬರೆದನೋ ಎಂಬಂತೆ ಅವಳ ಪ್ರಶಂಸನೀಯವಾದ ಕಿವಿಗಳು ವಿಲಾಸವನ್ನು ಪಡೆದವು. (ಎಂಬ ಅಕ್ಷರದ ಸೊಗಸು) ೫೨. ಮನ್ಮಥನು ತನ್ನ ಪ್ರೌಢಿಮೆಯಿಂದ ಆ ರಮಣಿಯ ಒಟ್ಟು ಸೌಂದರ್ಯವನ್ನೂ ಬರೆಯಲು ಕಲಿಯುವುದಕ್ಕಾಗಿ ಸಿದ್ಧಪಡಿಸಿದ ಚಿತ್ರದ ಹಲಗೆಯಂತೆ ಅವಳ ಪ್ರಕಾಶಮಾನವಾದ ಚಂದ್ರನಂಥ ಹಣೆಯು ಹೊಳೆಯುತ್ತಿತ್ತು. ೫೩. ಮೂಗೆಂಬ ಸಂಪಗೆ ಹೂವಿನ ಗಂಧಕ್ಕೆ ಆವೇಶದಿಂದ ತಿಳಿಯದೆ ಎರಗಿದ ಮರಿದುಂಬಿಗಳು, ಬಲಿದು ಸೊಕ್ಕಿ ನೆಲಸಿದವೋ

ಕಂ॥ ಲೇಸೆನಿಸುವಾಲಿಯುರಳಂ
ಸೂಸುವ ನವಮೇಘದಂತೆ ಕುಸುಮಾವಳಿಯಂ
ಬಾಸಣಿಸಿ ಮೆಱೆವ ಸೋರ್ಮುಡಿ
ಭಾಸುರಮೆನಿಸಿರ್ದುದಮಳಕಮಳಾನನೆಯಾ ೫೪

ತಿಲಕಂ ತಮಾಲಪತ್ರಾ
ವಲಿಚಿತ್ರಕವೆಸೆವ ಬನದೊಳಿರಲಲ್ಲದೆ ಪೇೞ್
ತಿಲಕಂ ತಮಾಲಪತ್ರಾ
ವಲಿಚಿತ್ರಕಮಿವಳ್ಗೆ ಮೆಱೆವುದಚ್ಚರಿಯಲ್ತೆ ೫೫

ವ॥ ಅದಲ್ಲದೆಯುಂ

ಕಂ॥ ಕನ್ನೆಯ ಚರಣದ ಸೊಬಗಿಂ
ತೆನ್ನರ ಮುಕುಟಕ್ಕೆ ಸಾರ್ವುದೆಂದುಲಿವಂತ
ತ್ಯುನ್ನತ ಪದದೊಳ್ ಮೆಱೆಗುಂ
ರನ್ನದ ನೇವುರದ ದನಿ ಸರೋಜಾನನೆಯಾ ೫೬

ಮಾರನರಮನೆಯ ರತ್ನದ
ತೋರಣವೆಂಬಂತೆ ಮೆಱೆವ ನವರತ್ನದ ಕಿ
ರ್ಮ್ಮೀರರುಚಿ ಮೀಱಿಯೆ ಮೇಖಲೆ
ನೀಱಿಯ ಸೆಳೆನಡುವಿನೊಳ್ ಮನಂಗೊಳಿಸಿರ್ಕುಂ ೫೭

ಎಂಬಂತೆ ಅಂದವಾದ ಅವಳ ಕುಟಿಲಕೇಶಗಳು ಪ್ರಕಾಶಿಸುತ್ತಿದ್ದವು. ೫೪. ಚೆಲುವಾದ ಆಲಿಕಲ್ಲುಗಳನ್ನು ಹೊರಚೆಲ್ಲುವ ನೂತನವಾದ ಮೋಡದಂತೆ, ಹೂಮಾಲೆಯನ್ನು ಮುಡಿದ ಆ ಕಮಲಮುಖಿಯ ಜೋಲುವ ಮುಡಿಯು ಪ್ರಕಾಶಿಸಿತು. ೫೫. ತಿಲಕವೂ (ಒಂದು ಮರ) ತಮಾಲಪತ್ರಾವಲಿಯ ಅಲಂಕಾರ (ಹೊಂಗೆಯ ಮರದೆಲೆಗಳ ಗೊಂಚಲ ಸೌಂದರ್ಯ)ವೂ ಕಾಡಿನಲ್ಲಿ ಇರಬೇಕಾದವು. ಆ ತಿಲಕವೂ (ಹಣೆಯ ತಿಲಕ) ತಮಾಲ ಪತ್ರಾವಲಿಯ ಅಲಂಕಾರ (ಹೊಂಗೆಯ ಎಲೆಯಂತೆ ಕೆನ್ನೆಯ ಮೇಲೆ ಬರೆದ ಅಲಂಕಾರ ವಿಶೇಷ)ವೂ ಇವಳ ಮುಖದಲ್ಲಿ ಸುಂದರವಾಗಿ ಕಾಣಿಸುತ್ತಿದೆ, ಇದು ಆಶ್ಚರ್ಯವಲ್ಲವೇ ! ಹೇಳು. ವ॥ ಅದೂ ಅಲ್ಲದೆ—೫೬. ಕನ್ಯೆಯ ಚರಣದ ಸೊಬಗು ಇಂತಿಂಥವರ ಕಿರೀಟಕ್ಕೆ ಹರಡುವುದು ಎಂದು ಹೇಳುವಂತೆ, ಆ ಸರೋಜಮುಖಿಯ ರತ್ನದ ಕಾಲಂದಿಗೆಯ ಧ್ವನಿಯು ಅತ್ಯುನ್ನತ ಸ್ಥಾನದಲ್ಲಿ (ಎತ್ತರಕ್ಕೇರಿ) ಮೆರೆಯುತ್ತದೆ. ೫೭. ಆ ಸುಂದರಿಯ ತೆಳುವಾದ ಸೊಂಟದಲ್ಲಿದ್ದ ವಿವಿಧ ವರ್ಣದ ಕಾಂತಿಗಳನ್ನು ಚೆಲ್ಲುವ ನವರತ್ನಗಳ ಒಡ್ಯಾಣವು ಮನ್ಮಥನ ಅರಮನೆಯಲ್ಲಿ ಕಟ್ಟಿದ ರತ್ನಗಳ ತೋರಣವೋ ಎಂಬಂತೆ ಮನೋಹರವಾಗಿದ್ದಿತು.

ಕಂ॥ ಈ ಲಲಿತಬಾಹುಯುಗದ ಸು
ಖಾಲಿಂಗನದಿಂ ಮೃದುತ್ವಮಂ ಪಡೆದಪೆವೆಂ
ದಾಲಿಂಗಿಸಿರ್ದ ಮಣಿಯೆನೆ
ಬಾಲೆಯ ನವರತ್ನಕಂಕಣಾಂಗದವಿರ್ಕುಂ ೫೮

ಇರುಳಿನಿತು ತಿಮಿರಮಂ ಸಂ
ಹರಿಸಲ್ಕೆ ಸಹಸ್ರಕರವನಾಂತಿರ್ಪಂ ಭಾ
ಸ್ಕರನೆಂದು ನಗುವವೊಲ್ ಭಾ
ಸುರಕಾಂತಿಯಿನೆಸೆವುವವಳ ಮಣಿಕಟಕಂಗಳ್ ೫೯

ಅಲರಂಬಿಂಗಣಿಸಂ ಮಣಿ
ಕುಲದಿಂ ಸಮೆದಂಗಜಂ ಪದಂಗೊಳಿಸಿದವೋಲ್
ತಳತಳಿಸಿ ಪೊಳೆಯುತಿರ್ಕುಂ
ಲಲನೆಯ ಪೆಂಪೆಸೆವ ಬೆರಳ ಮಣಿಮುದ್ರಿಕೆಗಳ್ ೬೦

ಸಸಿಮೊಗದೊಳ್ ನಕ್ಷತ್ರಂ
ಮಿಸುಪುದು ಮರ್ಯಾದೆಯೆಂದು ಸಕಲಜನಂ ಭಾ
ವಿಸುತಿರೆ ನುಣ್ಬೆಳಗಿಂ ರಂ
ಜಿಸುಗುಂ ನಾಸಾಗ್ರದಲ್ಲಿ ಮೂಕುತಿಯವಳಾ ೬೧

೫೮. ಬಾಲೆಯ ನವರತ್ನ ಖಚಿತವಾದ ತೋಳು ಬಳೆಯು, ಈ ಸುಂದರವಾದ ತೋಳೆರಡರ ಸುಖಕರವಾದ ಸ್ಪರ್ಶದಿಂದ ಮಾರ್ದವವನ್ನು ಪಡೆಯೋಣವೆಂದು ರತ್ನವು ಆಲಿಂಗಿಸಿಕೊಂಡಿದೆಯೋ ಎಂಬಂತೆ ರಂಜಿಸಿತು. ೫೯. ರಾತ್ರಿಯಲ್ಲಿ ಇಷ್ಟು ಸ್ವಲ್ಪ ಕತ್ತಲೆಯನ್ನು ಸಂಹರಿಸುವುದಕ್ಕಾಗಿ ಸೂರ್ಯನು ಸಾವಿರ ಕರಗಳನ್ನು (ಕಿರಣ ಮತ್ತು ಕೈ) ಹೊಂದಿದ್ದಾನಲ್ಲಾ ಎಂದು ಅವನನ್ನು ನೋಡಿ ನಗುವಂತೆ ಅವಳ ರತ್ನದ ಬಳೆಗಳು ಹೊಳೆಯುವ ಕಾಂತಿಯಿಂದ ಪ್ರಕಾಶಿಸಿದುವು. ೬೦. ಲಲನೆಯ ಶ್ರೇಷ್ಠವಾದ ಬೆರಳುಗಳಲ್ಲಿದ್ದ ರತ್ನದ ಉಂಗುರಗಳು ಮಣಿಗಳನ್ನು ಸೇರಿಸಿ ಬೆಸೆದು ಉಜ್ಜಿ ಹದಗೊಳಿಸಿದ ಮದನನ ಹೂಬಾಣಗಳಂತೆ ತಳತಳಿಸಿ ಹೊಳೆಯುತ್ತಿದ್ದುವು. ೬೧. ಅವಳ ಮೂಗಿನ ತುದಿಯಲ್ಲಿ ಮೂಗುತಿಯು ಬೆಳಗಿ ರಂಜಿಸಿತು. ಸಕಲಜನರೂ ಚಂದ್ರನ ಬಳಿ ನಕ್ಷತ್ರವು ಹೊಳೆಯುವುದು ಯುಕ್ತವಾಗಿಯೇ ಇದೆ ಎಂದು ಭಾವಿಸಿದರು. (ಮುಖವು ಚಂದ್ರನ ಹಾಗಿದ್ದರೆ, ಮೂಗುತಿಯು ನಕ್ಷತ್ರದಂತೆ ಹೊಳೆಯಿತು)

ಕಂ॥ ನಿಡುಗಣ್ಬೆಳಗಿನ ಪೂರಂ
ಕಡುಪಿಂ ಕಡೆಗೋಡಿವರಿಯೆ ಕಾಂಚೀದಾಮಂ
ತಡೆಯಲ್ಕಿರದಡರ್ದುದೆನಲ್
ಮಡದಿಗೆ ಚೆಲ್ವಾಯ್ತು ತೋರ ಮುತ್ತಿನಹಾರಂ ೬೨

ಸಕಲಾಭರಣದ್ಯುತಿ ಕ
ರ್ಣಿಕೆಯಾದುದೇನಱಿಯಾಯ್ತು ವದನ ಸರೋಜಂ
ವಿಕಸಿತವಾದುದಱಿಂದೆಂ
ಬ ಕೂರ್ವೆರ್ಣಯಿಂ ಮುತ್ತಿನೋಲೆಯೊಪ್ಪಿದುವವಳಾ ೬೩

ವ॥ ಅದಲ್ಲದೆಯುಂ

ಮ॥ ನಡುವಿಂಗೊಳ್ನಡೆ ದೇಹಕಾಂತಿಗಳಕಂ ವಕ್ತ್ರಕ್ಕೆ ಪಾದದ್ವಯಂ
ಮುಡಿಗುತ್ತುಂಗಕುಚಂ ಭುಜಕ್ಕೆ ನಯನಂ ದಂತಕ್ಕೆ ನೈತಂಬದಿ
ಟ್ಟೆಡೆಗಳ್ ಮೆಲ್ನುಡಿಗೊಪ್ಪುವೆತ್ತಧರಮಾರ್ಪಿಂ ಬಲ್ಲವರ್ ಭಾವಿಸಲ್
ಕಡುಪಿಂದಂ ಜವವೆಂದೊಡೇವೊಗಟ್ವುದೋ ರೂಪಂ ವಿಚಿತ್ರಾಂಗಿಯಾ ೬೪

ವ॥ ಮತ್ತಮಾಕೆ ವನದೇವತೆಯಂತೆ ಮಂಗಳಪ್ರಮೋದಪ್ರಸವಮುಖವಿಕಾಸಿತೆಯುಂ ದಿನಲಕ್ಷ್ಮಿಯಂತೆ ಸುಭಗಮೂರ್ತಿವಿಳಾಸಿಯುಂ ಮೇಘಸಮಯ ಮಯೂರಿಯಂತೆ ಕಳಾಪ

೬೨. ನೀಳವಾದ ಕಂಗಳ ಕಾಂತಿಯ ಪ್ರವಾಹವು ಉಕ್ಕಿ ಕೋಡಿ ಹರಿಯಲು ಅದನ್ನು ಒಡ್ಯಾಣವು ತಡೆಯಿತು. ಆಗ ಕಾಂತಿಯ ಪ್ರವಾಹವು ಹಿಂದಿರುಗಿ ಮೇಲಕ್ಕೇರಿತು–ಎನ್ನುವಂತೆ ದಪ್ಪ ಮುತ್ತಿನ ಹಾರವು ಆ ರಮಣಿಗೆ ಚೆಲುವನ್ನೊದಗಿಸಿತು. ೬೩. ಮುಖ ಕಮಲವು ಅರಳಿದುದರಿಂದ, ಸ್ಪಷ್ಟವಾಗಿ ಕಾಣಿಸುವ ಸಕಲಾಭರಣಗಳ ಕಾಂತಿಯು ಕರ್ಣಿಕೆಯಂತೆ (ಬೀಜಕೋಶ) ಅವಳ ಸೊಗಸಾದ ಮುತ್ತಿನ ಓಲೆಗಳು ರಂಜಿಸಿದುವು. ವ॥ ಅದೂ ಅಲ್ಲದೆ ೬೪. ನಡುವಿಗೆ ಒಳ್ಳೆಯ ನಡಿಗೆ, ದೇಹದ ಕಾಂತಿಗೆ ಮುಂಗುರುಳು. ಮುಖಕ್ಕೆ ಎರಡು ಪಾದಗಳು, ತಲೆಗೂದಲ ಗಂಟಿಗೆ ಉನ್ನತವಾದ ಸ್ತನಗಳು, ಭುಜಗಳಿಗೆ ಕಂಗಳು, ಹಲ್ಲಿಗೆ ನಿತಂಬ ಪ್ರದೇಶ, ಮೃದುವಾದ ನುಡಿಗೆ ಹೊಳೆಯುವ ಕೆಳದುಟಿ ಇವು ಪರಸ್ಪರವಾಗಿ ಸಾಮರ್ಥ್ಯದಿಂದ ತಿಳಿದವರು ವಿಚಾರಿಸಿದರೆ ದರ್ಪದಿಂದ ಒಂದು ಇನ್ನೊಂದನ್ನು ಮೀರಿಸುತ್ತದೆ ಎಂದಮೇಲೆ ಆ ವಿಚಿತ್ರಾಂಗಿಯ ರೂಪವನ್ನು ಏನೆಂದು ಹೊಗಳೋಣ. ವ॥ (ಆ ಏರುತ್ತಿರುವ ಯೌವನವುಳ್ಳ) ಆ ಪ್ರಾಯವೇರುತ್ತಿರುವ ಲಲನೆಯ ಸೌಭಾಗ್ಯ ರೂಪಾತಿಶಯವು ಅತ್ಯಾಶ್ಚರ್ಯಕರವಾಗಿದ್ದಿತು. ಅವಳು ವನ

ಕಾಂತಿಕಮನೀಯೆಯುಂ ಸರೋವರದಂತೆ ಹಂಸಕವಿಜೃಂಭಿತಪದಪ್ರಚಾರೆಯುಂ ರಾಮಕಟಕದಂತಂಗದಬಾಹು ಸಂರಂಭೆಯುಂ ಯೋಗಿನಿಯಂತೆ ಮುಕ್ತಾಹಾರ ಪ್ರಭಾವೆಯುಂ ವರ್ಷಾಗಮದಂತೆ ಪಯೋಧರ ಪರಿಪೂರ್ಣ ಯೌವನೆಯುಮೆನಿಸಿದೇಱುಂಜವ್ವನೆಯ ಸೌಭಾಗ್ಯರೂಪಾತಿಶಯಮತ್ಯಾಶ್ಚರ್ಯಮೆನಿಸಿದುದು ಅಂತುಮಲ್ಲದೆಯುಂ

ಚಂ॥ ತರುಣತಮಾಲಕುಂತಳೆ ಮನೋಹರಕಲ್ಪಲತಾಂಗಿ ಪಲ್ಲವಾ
ಧರೆ ಸರಸೀಜಕುಟ್ಮಲ ಕುಚದ್ವಯೆ ಕೋಕಿಲನಾದೆ ಹಂಸಮಂ
ಥರಗತಿ ಚಂಪಕಾಮಳತನುಪ್ರಭೆ ಕೈರವನೇತ್ರೆ ದಿಟ್ಟಿಗ
ಚ್ಚರಿವಡೆದಳ್ ಮನೋಭವನೃಪಾಲನ ಕೇಣಿಯ ತಾಣವೇಬಿನಂ ೬೫

ದೇವತೆ[1]ಯಂತೆ ಮಂಗಳಕರವಾದ ಪ್ರಮೋದವನ್ನುಂಟುಮಾಡುವ ಮುಖದಿಂದ ಪ್ರಕಾಶಿಸುತ್ತಿದ್ದಳು. ದಿನಲಕ್ಷ್ಮಿ[2]ಯ ಹಾಗೆ ಸುಂದರವಾದ ಶರೀರದ ವಿಲಾಸದಿಂದ ಕೂಡಿದ್ದಳು. ಮಳೆ[3]ಗಾಲದ ಹೆಣ್ಣು ನವಿಲಿನಂತೆ ಕೇಶ ಸಮೂಹದ ಕಾಂತಿಯಿಂದ ಸುಂದರಳಾಗಿದ್ದಳು. ಸರೋವರ[4]ದಂತೆ ನೂಪುರದಿಂದ ವಿಜೃಂಭಿಸುವ ಪಾದಗಳಿಂದ ನಡೆಯುತ್ತಿದ್ದಳು. ರಾಮನ ಸೇನಾ[5]ಶಿಬಿರದಂತೆ ತೋಳು ಬಳೆ ತೊಟ್ಟ ತೋಳಿನ ಸಂಭ್ರಮವುಳ್ಳವಳಾಗಿದ್ದಳು. ಯೋಗಿನಿ[6]ಯಂತೆ ಮುತ್ತಿನ ಹಾರದ ಪ್ರಭಾವದಿಂದ ಕೂಡಿದ್ದಳು. ಮಳೆಗಾಲ[7]ದಂತೆ ಸ್ತನಗಳಿಂದ ಪರಿಪೂರ್ಣವಾದ ಯೌವನದಿಂದ ಕೂಡಿ ಪ್ರಕಾಶಿಸುತ್ತಿದ್ದಳು. ೬೫. ಮನ್ಮಥ ರಾಜನ ಆಟದ ಸ್ಥಳದಂತೆ ಅವಳು ನೋಟಕ್ಕೆ ಆಶ್ಚರ್ಯಕರಳಾಗಿದ್ದಳು. ಅವಳ ತಲೆಗೂದಲು ಎಳೆ ಹೊಂಗೆಯೆಲೆಯಂತೆ ಕಪ್ಪಾಗಿ ಹೊಳೆಯುತ್ತಿತ್ತು. ಅಂಗವು ಮನೋಹರವಾದ ಕಲ್ಪಲತೆಯಂತಿತ್ತು. ತುಟಿ ಚಿಗುರಿನಂತೆ ಮೃದುವಾಗಿ ಕೆಂಪಗಿತ್ತು. ಮೊಲೆಗಳೆರಡು ಕಮಲದ ಮೊಗ್ಗುಗಳಂತೆ ಆಕರ್ಷಕವಾಗಿದ್ದುವು. ಕೋಗಿಲೆಯ ಧ್ವನಿಯಂತಿತ್ತು ಅವಳ ಧ್ವನಿ. ಹಂಸದ ಹಾಗೆ ಮಂದಗಮನೆಯಾಗಿದ್ದಳು. ಅವಳ ದೇಹದ ಕಾಂತಿಯು ಸಂಪಿಗೆಯ ನಿರ್ಮಲವಾದ ಕಾಂತಿ

1. ಮಂಗಳಕರವಾದ ಪ್ರಮೋದಕರವಾದ ಪುಷ್ಪಗಳೆಂಬ ಮುಖದಿಂದ ಪ್ರಕಾಶಿಸುತ್ತದೆ.
2. ಸೂರ್ಯನ ಮೂರ್ತಿಯಿಂದ ವಿಳಾಸಿ.
3. (ನವಿಲು) ಗರಿಗಳ ಸಮೂಹದ ಕಾಂತಿಯಿಂದ ಸುಂದರ.
4. ಹಂಸಗಳ ವಿಜೃಂಭಣೆಯುಳ್ಳ ಪದಪ್ರಚಾರ (ನಡಿಗೆ)ಯುಳ್ಳದು.
5. ಅಂಗದನ ಬಾಹುವಿನ ಸಂಭ್ರಮ.
6. ಉಪವಾಸದ ಪ್ರಭಾವ.
7. ಮೋಡಗಳ ಆಧಿಕ್ಯವುಳ್ಳುದು.

ವ|| ಅಂತು ಮನೋಹರಂಬಡೆದವಂತಿಸೌಂದರಿ ವನಮಧ್ಯದೊಳ್ ನಿಂದು

ಕಂ|| ತರತರದ ಪುಷ್ಪಲತಿಕೋ
ತ್ಕರವಂ ನೋಡುತ್ತವಂತಿಸೌಂದರಿ ವೇಣೀ
ಭರವನುಗುರ್ಚಲ್ ಬಿಂಬಾ
ಧರೆಯರ್ ಪುಷ್ಪಾಪಚಯವನೆಸಗಿದರಾಗಳ್ ೬೬

ಈ ಲತೆಯೆನಗೀಲತೆ ನಿನ
ಗೀಲತೆ ತನಗೆಂದು ಪೂತ ಲತೆಗಳ ಪೂವಂ
ಬಾಲೆಯರೆಲ್ಲರ್ ಮುದದಿಂ
ಕೇಳೀವನದಲ್ಲಿ ತಿಱಿಯುತಿರ್ದರಲಂಪಿಂ ೬೭

ವ|| ಅಂತಾಕೆಯರೆಲ್ಲರುಂ ಪೂದಿಱಿವುದಂ ಕಂಡವಂತಿಸೌಂದರಿ

ಕಂ|| ಪರಿಮಳಿಪ ಸಂಪಗೆಯ ಕಂ
ಪರಿ ಮಧುಕರವಿತತಿಗೆಂಬರದನಱಿವೆನೆನು
ತ್ತರುಣಾಧರೆ ತಿಱಿದಳ್ ತ
ತ್ತರುಣಾಳಿಸಮಾಳಕಕ್ಕೆ ಸಂಪಗೆಯರಲಂ ೬೮

ನನೆಜಾಜಿಯನರವಿಂದಾ
ನನೆ ಜಾಣೆಸೆಯಲ್ಕೆ ತಿಱಿದು ಕಾಮನೊಳುಱೆ ಕಾ
ಯ್ದನಿತೆ ನಡೆನೋಳ್ಪ ವಿಟರಂ
ವನಿತೆಗೆ ಪೊಡಮಡಿಪಳೆಸೆವ ತನ್ನಯ ಸೊಬಗಿಂ ೬೯

ಯಂತೆ ಸೊಗಸಿತು. ಕಂಗಳು ಕಮಲ ದಳಗಳಂತಿದ್ದುವು. ವ|| ಹೀಗೆ ಮನೋಹರಳಾದ ಅವಂತಿ ಸುಂದರಿಯು ಕಾಡಿನ ನಡುವೆ ನಿಂತು—೬೬. ವಿಧವಿಧವಾದ ಹೂಬಳ್ಳಿಗಳ ಗುಂಪನ್ನು ನೋಡಿ ತನ್ನ ಭಾರವಾದ ಜಡೆಯನ್ನು ಉಗುರಿನಿಂದ ಬಿಚ್ಚಿದಳು. ಆಗ ತೊಂಡೆ ಹಣ್ಣಿನಂಥ ತುಟಿಯುಳ್ಳ ಸಖಿಯರು ಹೂಬಿಡಿಸಿತೊಡಗಿದರು. ೬೭. ಈ ಬಳ್ಳಿ ನನಗೆ, ಈ ಬಳ್ಳಿ ನಿನಗೆ, ಈ ಬಳ್ಳಿ ತನಗೆ ಎಂದು ಕೂಗುತ್ತಾ ಹೂವರಳಿದ ಬಳ್ಳಿಗಳಿಂದ ಹೂವನ್ನು ಬಾಲೆಯರೆಲ್ಲರೂ ಹರ್ಷದಿಂದ ಆ ಉಪವನದಲ್ಲಿ ಬಿಡಿಸುತ್ತಿದ್ದರು. ವ|| ಹಾಗೆ ಅವರೆಲ್ಲರೂ ಹೂಗೊಯ್ಯುವುದನ್ನು ನೋಡಿ ಅವಂತಿ ಸುಂದರಿಯು ೬೮. "ಪರಿಮಳವನ್ನು ಬೀರುವ ಸಂಪಗೆಯ ವಾಸನೆಯು ದುಂಬಿಗಳಿಗೆ ಶತ್ರು ಎಂದು ಹೇಳುತ್ತಾರೆ. ಅದನ್ನು ಪರೀಕ್ಷಿಸುತ್ತೇನೆ" ಎನ್ನುತ್ತಾ ಆ ಚೆಂದುಟಿಯವಳು ಎಳೆ ದುಂಬಿಗಳಿಗೆ ಸಮನಾದ ತನ್ನ ಮುಂಗುರುಳಿಗೆ ಸಂಪಗೆಯ ಹೂವನ್ನು ಕೊಯ್ದು ಅಲಂಕರಿಸಿದಳು. ೬೯. ಆ ಕಮಲಮುಖಿಯು ಜಾಜಿಯ ಮೊಗ್ಗನ್ನು ವಿಲಾಸದಿಂದ ಕೊಯ್ಯುತ್ತಾ ಕಾಮನ ತಾಪಕ್ಕೊಳಗಾಗಿ ತಿರುಗಿ ನೋಡುವ ವಿಟರನ್ನೂ ಮನೋಹರವಾದ ತನ್ನ ಸೊಬಗಿನಿಂದ ವನಿತೆಗೆ ನಮಸ್ಕರಿಸುವಂತೆ ಮಾಡಿದಳು. (ಕಾಮಿಗಳ ಮನೋವಿಕಾರವು

ಕಂ॥ ಪದ್ಪಳಿಯು ಪೊಗಸಿ ಬರುತಿ
ರ್ಪದ್ಪಳಿಯಂ ಸೋವಿ ತಿಱಿದಳಾಪದ್ದಳಿಯೊಳ್
ದೊಡ್ಡಲರಂ ಕಾಂತೆ ಕನ
ಲ್ದೊಡ್ಡಲನಂಗಂ ವಿಟರ್ಕಳಂ ಗುಱಿಮಾಡಲ್ ೨೦

ಪುನ್ನಾಗದಲರ್ಗಳಂ ಪೆಂ
ಪುನ್ನಾಗವಿಳಾಸಗತಿಯುಮೊಪ್ಪವವಂತೀ
ಕನ್ನೆ ಗಣನೆಗಳ ಪೂವ
ಕ್ಕನ್ನೆಗವೆಂದೊಲ್ದು ತಿಱಿದಳಂದುಪವನದೊಳ್ ೨೧

ಬಿರಿಮುಗುಳೊಳ್ಳಿದುವೇಂದೆಂ
ಬಿರಿ ಮುದದಿಂ ಬನ್ನಿ ಕೊಯ್ವೆನೆಂದಖಿಳ ಕಲಾ
ಧರೆಯರೊಡಗೂಡಿ ಬಿಂಬಾ
ಧರೆಯನುವಿಂ ತಿಱಿದಳೆಸೆವ ಮೊಲ್ಲೆಯ ಮುಗುಳಂ ೨೨

ಗುರುಕುಚೆ ತನ್ನಯ ತೊಡವಿಂ
ಗುರುಕುಚದೊಳ್ ಕೊಯ್ದಳಂಗಜಂಗನುರಾಗಾಂ
ಕುರವಗ್ಗಲಿಸಲ್ ನಲವಿಂ
ಕುರವಕದಲರಂ ವಿಳಾಸಿನೀಜನಸಹಿತಂ ೨೩

ಹೆಚ್ಚಿ ಧೀರತೆಯನ್ನುಳಿದು ತಮ್ಮ ಕಾಂತೆಯರಿಗೆ ಶರಣಾದರೆಂದು ಅಭಿಪ್ರಾಯ) ೨೦. ಕಣಿಗಲೆಯ ಹೂವಿಗೆ ಆಶಿಸಿ ಅಡ್ಡಲಾಗಿ ನುಗ್ಗಿ ಬರುತ್ತಿದ್ದ ದುಂಬಿಯನ್ನು ಓಡಿಸಿ ಕಾಂತೆಯೊಬ್ಬಳು, ಮನ್ಮಥನು ಕಾಮಿಗಳನ್ನು ತನ್ನ ಬಾಣಕ್ಕೆ ಗುರಿ ಮಾಡುವನೆಂಬ ಕೋಪದಿಂದ ಒಂದು ಅಗಲವಾದ ಕಣಗಿಲೆ ಹೂವನ್ನು ಕೊಯ್ದಳು. (ಕಣಗಿಲೆ ಹೂ ಮನ್ಮಥನ ಬಾಣವೆಂಬ ಕಲ್ಪನೆ) ೨೧. ಹಿರಿಮೆಯೂ ಆನೆಯಂತೆ ವಿಲಾಸಗತಿಯೂ ಉಳ್ಳ ಅವಂತಿ ಸೌಂದರಿಯು ಅಂದು ಉಪವನದಲ್ಲಿ ಗಣ್ಯವಾದ ರೀತಿಯಲ್ಲಿ ಹೂಗಳು ಕೂಡಲಿ[1] ಎಂದು ನಾಗಸಂಪಗೆಯ ಹೂಗಳನ್ನು ಕೊಯ್ದಳು. ೨೨. 'ದಪ್ಪ ಮೊಗ್ಗುಗಳು ಒಳ್ಳೆಯವೆಂದು ಹೇಳುತ್ತೀರಿ. ಹರ್ಷದಿಂದ ಬನ್ನಿರಿ. ಹೂ ಬಿಡಿಸುವೆನು.' ಎಂದು ಹೇಳುತ್ತಾ ಕಲಾವತಿಯರೆಲ್ಲರೊಡನೆ ಆ ಬಿಂಬಾಧರೆಯು ಸುಂದರವಾದ ಮೊಲ್ಲೆಯ ಮೊಗ್ಗನ್ನು ಕಿತ್ತಳು. ೨೩. ಉನ್ನತವಾದ ಸ್ತನಗಳುಳ್ಳ ಅವಳು ತನ್ನ ಶ್ರೇಷ್ಠವಾದ ಕುಚಗಳ ಅಲಂಕಾರಕ್ಕಾಗಿ ವಿಲಾಸಿನಿಯರೊಡನೆ ನಲವಿನಿಂದ ಕೆಂಪು ಗೋರಂಟಿ ಹೂಗಳನ್ನು ಕೊಯ್ದಳು. ಅದು ಮನ್ಮಥನಿಗೆ ಅನುರಾಗಾಂಕುರವನ್ನು ವೃದ್ಧಿಗೊಳಿಸಿತು.

---

1. ಸಂಖ್ಯೆಯನ್ನು ಎಣಿಸುವುದಕ್ಕಾಗಿ–ಎಂಬ ಆಶಯವಿರಬಹುದು. ಲೆಕ್ಕ ಮಾಡಲು ವಿಲಾಸಿನಿಯರು ಹೂಗಳನ್ನು ಬಳಸುತ್ತಿದ್ದರೆಂದು ಕವಿಗಳ ವರ್ಣನೆಯುಂಟು (ರಂ).

ಕಂ॥ ಪಾದಪರಿಚರಿಯಶೋಕದ
ಪಾದಪದೊಳ್ ಕೊಯ್ದಳೊಪ್ಪೆ ಗೊಂಚಲ್ಗಳಂ
ಕಾದಲರಸಂಗನಿದಿರೊಳ್
ಕಾದಲವಳ್ ತನ್ನನೆನಗೆ ತನಗೆಂದಾಗಳ್ ೭೪

ಪಿಕಚಂಚನ್ನಾದೆ ಕಳಾ
ಪಿಕಚಂ ಮೆಱೆಯಲ್ಕೆ ಫಲವನಾಯ್ದಳ್ ವಿಟಜೀ
ವಕುಳಂ ತಲೆಗೇಱುತ್ತಿರೆ
ವಕುಳಂಗಳೊಳಲರ್ಗಳಂ ಮುದಂ ಮಿಗೆ ವನದೊಳ್ ೭೫

ಕಾಮಂಗಸಮಶರಂ ಕಳಿ
ಕಾಮುಕುಳವೆನಿಪ್ಪಮುಗುಳಲರ್ಗಳೆನುತ್ತುಂ [ತ್ತಾ]
ರಾಮಾಂತರ್ಗತೆ ನಲಿದಾ
ರಾಮಾಂತದೊಳಾಯ್ದಳೊಲ್ದು ಮಲ್ಲಿಗೆಯಲರಂ ೭೬

ನೆರಮೆನಗಾಯ್ತನ್ಯರನಿ
ನ್ನೆಱೆಪೆನದೇಕೆಂದು ಕಾಮನಲರಂಬೆಸೆಯಲ್
ತಿಱುವಂ ನೇವರಿಸಲ್ಕಾ
ತಿರುವಂತಿಗೆಯಲರನಬಲೆ ಬನದೊಳ್ ತಿಱಿದಳ್ ೭೭

ಪಾದರಿಯಲರ್ಗಳ ನಱುಗಂ
ಪಾದರಿಸಲ್ ತಕ್ಕುದೆಂದು ಕೊಯ್ದಳ್ ದಿವ್ಯಾ
ಮೋದವೆಸೆಯಲ್ಕೆ ನಿಜಸಂ
ಮೋದಮೆನಲ್ ಕಾಂತೆ ತದ್ವನಾಂತದೊಳೊಲವಿಂ ೭೮

೭೪. ಅವಳು ಕಾಲಿನಿಂದ ಒದ್ದು ಅಶೋಕ ವೃಕ್ಷದಲ್ಲಿ ಮೊಗ್ಗಿನ ಗೊಂಚಲುಗಳನ್ನು ಕೊಯ್ದಳು. ಅವಳನ್ನು ನೋಡಿ ಕಾಮುಕರು ಇವಳು ತನಗೆ ಬೇಕು ತನಗೆ ಬೇಕು ಎಂದು ಸ್ಪರ್ಧಿಸುತ್ತಿದ್ದರು. ೭೫. ಆ ವನದಲ್ಲಿ ಕೋಕಿಲವಾಣಿಯೊಬ್ಬಳು ನವಿಲುಗರಿಯಂತಿದ್ದ ತಲೆಗೂದಲನ್ನು ಪ್ರದರ್ಶಿಸುತ್ತಾ ಹಣ್ಣುಗಳನ್ನಾರಿಸಿದಳು. ಮತ್ತು ಮುದದಿಂದ ಪಗಡೆ ಮರದ ಹೂಗಳನ್ನು ಆರಿಸಿದಳು. ಇವಳನ್ನು ನೋಡಿ ವಿಟಪುರುಷರ ಜೀವಗಳು ಅವರ ತಲೆಗೇರಿದುವು. ಅವರಿಗೆ ಜೀವ ಹಿಡಿಯುವುದೇ ಕಷ್ಟಸಾಧ್ಯವಾಯಿತು. ೭೬. ಈ ಮೊಗ್ಗುಗಳೂ ಹೂಗಳೂ ಕಾಮನ ಸಮನಿಲ್ಲದ ಬಾಣಗಳಂತಿವೆ ಎಂದು ಭಾವಿಸಿ ಸುಂದರಿಯೊಬ್ಬಳು ಆ ವನದ ನಡುವೆ ನಲವಿನಿಂದ ಮಲ್ಲಿಗೆಯ ಹೂಗಳನ್ನು ಆರಿಸಿದಳು. ೭೭. ಅಬಲೆಯೊಬ್ಬಳು ಕಾಡಿನಲ್ಲಿ ಇರುವಂತಿಗೆ ಹೂಗಳನ್ನು ಕೊಯ್ದಳು. ಮನ್ಮಥನು 'ನನಗೆ ಆಶ್ರಯ ಈಗ ಸಿಕ್ಕಿದೆ. ಬೇರೆಯವರ ಆಶ್ರಯವೇನೂ ಬೇಕಾಗಿಲ್ಲ ಎಂಬಂತೆ ಮೆರೆಯುತ್ತಾ ಹೆದೆಯನ್ನು ಬಲ್ಪಿನಿಂದ ಏರಿಸಿದನು. ೭೮. ಪಾದರಿ ಹೂಗಳ ಪರಿಮಳವು ಅನುಭವಿಸಲು ಹಿತಕರವಾಗಿದೆ ಎಂದು ಕಾಂತೆಯು ಆ ವನದ ನಡುವೆ ದಿವ್ಯ

ಚಂ॥ ಮುಡಿ ಜಗುಳಲ್ ಕುರುಳ್ ಕವಿಯೆ ತುಂಗಕುಚದ್ವಯಮೊಡ್ಡುಗುಂದೆ ಕ
ರ್ಪಡರ್ದುದರು ಕಕ್ಷಮೊಪ್ಪೆಯಲರ್ಗಣ್ಮೊಗುಳೊಪ್ಪಮನೀಯೆ ಕಾಂಚಿ ಬಿ
ಟ್ಟುಪಡೆ ಸಡಿಲಲ್ ನಿತಂಬಯುಗಳಂ ನಡುಗಲ್ ವಳಿ ತೆಪ್ಪಿತೆಪ್ಪನೊ
ಳ್ನಡು ಸೆಡೆಯಲ್ಕೆ ಕೈನೆಗಪಿ ಪೂದಿಱಿದಳ್ ಸತಿ ಸೌಕುಮಾರ್ಯದಿಂ ೭೯

ವ॥ ಅಂತು ಪುಷ್ಪಾಪಚಯಮನೆಸಗಿಯನಂತರಂ

ಮ॥ ಸ್ರ॥ ನವಹಾರಂ ನೂಪುರಂ ಮೇಖಲೆ ಪೊಸಕಡಗಂ ಜಾಳೆಯಂ ಸೂಸಕಂ ಚಿ
ಲ್ವವತಂಸಂ ಜಂಪೆಯಂ ಮೂಕುತಿ ಚಳಕಿಗೆ ತೋಳ್ಬಂದಿ ಮಿಂಚೋಲೆ ಕೊಪ್ಪೊ
ಪ್ಪುವಿನಂ ಗ್ರೈವೇಯಕಂ ಪೊಂಜರಿಗೆಯೆನಿಪುವಂ ಪೂಗಳಿಂ ಮಾಡಿ ನಾನಾ
ಯುವತೀ ಸಂತಾನಕಂ ಸಿಂಗರಿಸೆ ಪದೆಪಿನಿಂ ಕಾಂತೆ ಕಣ್ಗೆಡ್ಡಮಾದಳ್ ೮೦

ವ॥ ಅಂತು ಕೆಳದಿಯರುಂ ತಾನುಂ ಶಿಂಗರಂಗೆಯ್ದು ಅವಂತಿ ಸೌಂದರಿ ಬಾಲ ಚಂದ್ರಿಕೆಯ ಪೆಗಲೊಳ್ ಕೆಯ್ಯನಿರಿಸಿ

ಚಂ॥ ಮಿಸುಗುವ ದುಂಡುಮಲ್ಲಿಗೆಯ ದಾರಮನೊಪ್ಪಿರೆ ತಾಳ್ದು ಮಾಲತೀ
ಕುಸುಮದ ಜಾಳೆಯಂದಳೆದು ಮೊಲ್ಲೆಯ ಕಂಕಣಮಿಕ್ಕಿ ಚಂಪಕ
ಪ್ರಸವದ ಕರ್ಣಪೂರಕಮನಾಂತು ವಿಲಾಸಮನೆಯ್ದೆ ಬೀಱುತ
ರ್ಚಿಸಿದ ಮನೋಜರಾಜನಧಿದೇವತೆ ಬರ್ಪವೊಲಾಕೆಯೊಪ್ಪಿದಳ್ ೮೧

ವಾದ ಸುಗಂಧವುಳ್ಳ ಪಾದರೀ ಹೂಗಳನ್ನು ಆನಂದದಿಂದ ಕೊಯ್ದಳು. ೭೯. ಸುಂದರಿಯು ಕೈಯ್ಯನ್ನು ಮೇಲಕ್ಕೆತ್ತಿ ಸೌಕುಮಾರ್ಯದಿಂದ ಹೂಕೊಯ್ದಳು. ಆಗ ಅವಳ ತಲೆಗೂದಲ ಗಂಟು ಬಿಚ್ಚಿಹೋಯಿತು. ಮುಂಗುರುಳು ಹಣೆಯ ಮೇಲೆ ಹರಡಿಕೊಂಡವು. ಉನ್ನತವಾದ ಕುಚಗಳೆರಡೂ ಸಡಿಲವಾದುವು. ಕಪ್ಪು ಬಣ್ಣವುಳ್ಳ ಕೌಂಕಳು ಕಾಣಿಸಿತು. ಅಲರ್ಗಣ್ಣುಗಳು ಮೊಗ್ಗುಗಳಂತೆ ಹೊಳೆದುವು. ಒಡ್ಯಾಣದಿಂದ ಉಟ್ಟ ಸೀರೆ ಜಾರಿತು. ನಿತಂಬಗಳೆರಡೂ ನಡುಗಿದುವು. ಹೊಟ್ಟೆಯ ಮೇಲಿನ ವಳಿಗಳು ಕಾಣದಂತೆ ಸೊಂಟವು ನೆಟ್ಟಗಾಯಿತು. ವ॥ ಹಾಗೆ ಹೂಗಳನ್ನು ಕೊಯ್ದು ಸಂಗ್ರಹಿಸಿದ ಮೇಲೆ ೮೦. ಆ ಹೂಗಳಿಂದ ತರುಣಿಯರು, ಹೊಸದಾದ ಹಾರ, ಕಾಲುಬಳೆ, ಒಡ್ಯಾಣ, ಬಳೆ, ತಿಲಕ, ಹಣೆಯ ಮೇಲೆ ಜೋತಾಡುವ ಹೂವಿನಗೊಂಡೆ, ಸುಂದರವಾದ ಕರ್ಣಾಭರಣ, ಜಂಪೆಯ, ಮೂಗುತಿ, ತೋಳ್ಬಂದಿ, ಮಿಂಚುವ ಓಲೆ, ಜಡೆಬಿಲ್ಲೆ, ಕಂಠಹಾರ, ಚಿನ್ನದ ಸರ ಮೊದಲಾದ ಆಭರಣಗಳನ್ನು ಮಾಡಿ ಅವಂತಿ ಸುಂದರಿಯನ್ನಲಂಕರಿಸಿದರು. ಇದರಿಂದ ಅವಳು ಕಂಗಳಿಗೆ ತುಂಬ ಅಂದವಾಗಿ ಕಾಣಿಸಿದಳು. ವ॥ ಹೀಗೆ ಗೆಳತಿಯರೂ ತಾನೂ ಮಾಡಿಕೊಂಡ ಅಲಂಕಾರದಿಂದ ಚೆಲುವೆಯಾದ ಅವಂತಿ ಸುಂದರಿಯು ಬಾಲ ಚಂದ್ರಿಕೆಯ ಹೆಗಲ ಮೇಲೆ ಕೈಯ್ಯನ್ನಿರಿಸಿ—೮೧. ಹೊಳೆಯುವ ದುಂಡುಮಲ್ಲಿಗೆಯ ಹಾರವನ್ನು ಹಾಕಿಕೊಂಡು, ಮಾಲತೀ ಹೂವಿನ ಹಣೆ ಬೊಟ್ಟನ್ನು ಧರಿಸಿ, ಮೊಲ್ಲೆ ಹೂವಿನ ಬಳೆಯನ್ನು ಹಾಕಿಕೊಂಡು, ಸಂಪಗೆ ಹೂವಿನ ಕರ್ಣಾಭರಣವನ್ನು ಹೊಂದಿ,

ವ॥ ಅಂತು ಪದವಿನ್ಯಾಸದಿಂದುಪವನಮಂ ಕೃತಾರ್ಥಂ ಮಾಡುತುಂ ಮಾಕಂದವೀಧಿಯೊಳ್ ಬರುತಿರ್ಪಾಗಳ್ ಮುಂದೆ

ಮ ಸ್ರ॥ ವಿಮಳಾರ್ಕಂ ವ್ಯೋಮಯಾತ್ರಾಗತಿಯಿನತಿಬಟಲ್ದಾತನೀ ಚೂತಭೂಜಾ
ತಮಧೂದ್ಯಚ್ಛಾಯೆಯೊಳ್ ಕಾಯದೊಳೊದಗಿದ ಸಂತಾಪಮಂಲೋಪಿಪ್ಪೊಂದು
ದ್ಯಮದಿಂ ಬಂದಿರ್ದನೋ ಪೇಟಿನಲವಯವ ಶೋಭಾಪ್ರಭಾಜಾಳದಿಂ ವಿ
ಶ್ವಮನಸ್ಸಂ ಪ್ರೀತಿಯಂ ಪೆರ್ಚಿಸುತನುನಯದಿಂದೊಪ್ಪಿದಂ ರಾಜಪುತ್ರಂ ೮೨

ವ॥ ಅಂತಾ ಮಾಮರದ ನೆಟಲೊಳ್ ಮಂಗಳಾಕಾರನಾಗಿರ್ದ ಮಾನನಿಧಾನನನವಂತಿಸೌಂದರಿ ಭೋಂಕನೆ ದೂರದೊಳ್ ಕಂಡು

ಚಂ॥ ಸ್ತನಕಲಶಂಗಳಿಂದಧರಪಲ್ಲವದಿಂ ಪುಲಕಾಕ್ಷತಂಗಳಿಂ
ವಿನುತಕಪೋಲದರ್ಪಣದಿನೂರ್ಜಿತನೂಪುರಶಬ್ದವಾದ್ಯದಿಂ
ಮನದನುರಾಗದಿಂ ನಯನದೀಧಿತಿಮಂಗಳರತ್ನದೀಪದಿಂ
ವನಿತೆ ವಿಳಾಸವೊಪ್ಪೆ ಯುವರಾಜನನಂದಿದಿರ್ಗೊಂಡಳಟಿಯಿಂ ೮೩

ವ॥ ಅಂತಿದಿರ್ಗೊಂಡು

ಉ॥ ಎತ್ತಣಿನೆಯ್ದಿದಂ ಮದನನಿಕ್ಷು ಧನುರ್ಲತೆಯಂ ಪ್ರಸೂನಕಾ
ಯತ್ತಶರಂಗಳಂ ಮಕರಕೇತನಮಂ ರತಿಯಂ ಸಮೀರನಂ
ಮತ್ತೆ ವಸಂತನಂ ಮಱಸಿಯೆಂದು ಕರಂ ಬೆರಗಾಗಿ ನೋಡಿದಳ್
ಚಿತ್ತದ ಸಂಭ್ರಮಂಬೆರಸು ಕಾಂತೆ ಕಲಾಧರನಂ ಕುಮಾರನಂ ೮೪

ವಿಲಾಸದಿಂದ ಬರುತ್ತಿದ್ದ ಅವಂತಿ ಸುಂದರಿಯು, ಮನ್ಮಥರಾಜನು ಪೂಜಿಸಿದ ಅಧಿದೇವತೆಯೋ ಬರುತ್ತಿರುವಂತೆ ಪ್ರಕಾಶಿಸಿದಳು. ವ॥ ಹಾಗೆ ಅಡಿಗಳನ್ನಿಡುತ್ತಾ ಉಪವನವನ್ನು ಕೃತಾರ್ಥವನ್ನಾಗಿ ಮಾಡುತ್ತಾ ಮಾಕಂದವೀಥಿಯಲ್ಲಿ ಬರುತ್ತಿರುವಾಗ ಮುಂದೆ—೮೨. ರಾಜಪುತ್ರನು ತನ್ನ ಅವಯವಗಳ ಸೌಂದರ್ಯದ ಕಾಂತಿಸಮೂಹದಿಂದ ಎಲ್ಲರ ಮನಸ್ಸಿನಲ್ಲಿಯೂ ಸಂಪ್ರೀತಿಯನ್ನು ಹೆಚ್ಚಿಸುತ್ತಾ ನಮ್ರತೆಯಿಂದ ಪ್ರಕಾಶಿಸಿದನು. ಅವನು, ಆಕಾಶದಲ್ಲಿ ಸಂಚರಿಸಿ ಆಯಾಸಗೊಂಡು ಅದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಈ ಮಾವಿನ ಮರದ ನೆರಳಿನಲ್ಲಿ ಶರೀರವನ್ನು ಧರಿಸಿ ಬಂದು ಕುಳಿತಿರುವ ಸೂರ್ಯನೋ ಎಂಬಂತೆ ಕಾಣಿಸಿದನು, ವ॥ ಹಾಗೆ ಆ ಮರದ ನೆರಳಿನಲ್ಲಿ ಕುಳಿತಿದ್ದ ಮಂಗಳಕರವಾದ ಆಕಾರವುಳ್ಳ ಮಾನನಿಧಿಯಾದ ರಾಜಪುತ್ರನನ್ನು ಅವಂತಿ ಸೌಂದರಿಯು ದೂರದಿಂದಲೇ ನೋಡಿ—೮೩. ಸ್ತನಗಳೆಂಬ ಕಲಶ, ಅಧರವೆಂಬ ಪಲ್ಲವ, ಪುಲಕವೆಂಬ ಅಕ್ಷತೆ, ಸುಂದರವಾದ ಕೆನ್ನೆಗಳೆಂಬ ಕನ್ನಡಿ, ಕಾಲಂದಿಗೆಗಳ ಧ್ವನಿಯೆಂಬ ವಾದ್ಯ, ಮನಸ್ಸಿನ ಅನುರಾಗ, ಕಂಗಳ ಕಾಂತಿಯೆಂಬ ಮಂಗಳಕರವಾದ ರತ್ನದೀಪ ಇವುಗಳಿಂದ ಆ ವನಿತೆಯು ಪ್ರೀತಿ ವಿಲಾಸಗಳಿಂದ ಯುವರಾಜನನ್ನು ಎದುರುಗೊಂಡಳು. ವ॥ ಹಾಗೆ ಎದುರುಗೊಂಡು ೮೪. ಧನುರ್ಲತೆಯನ್ನೂ ಹೂಬಾಣಗಳನ್ನೂ ಮಕರಕೇತನವನ್ನೂ ರತಿಯನ್ನೂ ವಾಯುವನ್ನೂ ವಸಂತನನ್ನೂ ಮರೆಸಿ ಮದನನೊಬ್ಬನೇ ಎಲ್ಲಿಂದ ಇಲ್ಲಿಗೆ ಬಂದಿದ್ದಾನೆ ?

ಕಂ॥ ಮದನನನನಂಗನೆಂಬವ
ರೆರ್ದೆಬಲ್ಲಿದರಕ್ಕ ಬಲ್ಲರಿನ್ನಾದೊಡೆ ನೋ
ಟ್ಟಪುದು ಸುಭಗಮೂರ್ತಿಯಂ ಕಾ
ಣದೆ ಕೇಳದೆ ಪುಸಿಯನುಸಿರುತಿರ್ಪುದು ಲೋಕಂ ೮೫

ವ॥ ಎಂದಾತನ ಸುಭಗತ್ವಮನೆವೆಯಿಕ್ಕದೆ ನೋಡುತ್ತಿರಲ್ ಬಾಲಚಂದ್ರಿಕೆ ರಾಜಪುತ್ರನಿದಿರ್ಗೆ ವಂದು

ಕಂ॥ ಭಾವನನೀಕ್ಷಿಸಲೆಮ್ಮಯ
ದೇವಿಯರೈತಂದರೆಂದು ತತ್ಕಾಮಿನಿ ತ
ದ್ಭಾವವನಱಿಪಲ್ ಕೇಳ್ದಂ
ದಾವಧುವನಿದಿರ್ಗೊಳಲ್ಕೆ ಭೂಪತಿಯೆಟ್ಟಂ ೮೬

ವ॥ ಅಂತೆಟ್ದು ಮುಟ್ಟೆವಂದವಂತಿಸೌಂದರಿಯಂ ಕಂಡು

ಕಂ॥ ಮೆಲ್ಲಡಿಗಳ್ ನೊಂದಪ್ಪುದೆ
ನ್ನಲ್ಲಿಗೆ ಬಪ್ಪೊಂದು ಭಾಗ್ಯಮಾಯ್ತೆನಗೆಂದು
ತ್ಫುಲ್ಲಾಸ್ಯನಾಗಿ ಧರಣೀ
ವಲ್ಲಭನುಪಚರಿಸಲೆಟ್ದನಾ ಕೆಯನಾಗಳ್ ೮೭

ವ॥ ಅಂತು ತನಗಿದಿರೇಟ್ದ ಯುವರಾಜನನವಂತಿದೇವಿ ಕಂಡು

ನಸುತಲೆವಾಗಿ ಕೆಯ್ಯ ಮಱಿಗೊಯ್ದು ಮುಖಾಬ್ಜಮನೊಯ್ಯನೊಯ್ಯನೀ
ಕ್ಷಿಸಿ ಕಡೆಗಣ್ಗಳಿಂ ತಡತಡಂ ಮಿಗೆ ಮೆಲ್ನುಡಿಯಿಂದಿಳೇಶ ಭಾ
ವಿಸದಿದಿರೇಟ್ದಪಿರ್ ಕಿಳದಿಯಂ ಪ್ರತಿಮಾಡಿಯೆನುತ್ತಮಂತಿ ಮ
ನ್ನಿಸಿ ಮೃದುಪಲ್ಲವಾಸನದೊಳೊಪ್ಪಿರೆ ಕುಳ್ಳಿರವೇಟ್ದಳಾತನಂ ೮೮

ಎಂದು ಬೆರಗಾಗಿ ಸಂಭ್ರಮದಿಂದ ಕುಮಾರನನ್ನು ಕಾಂತೆಯು ನೋಡಿದಳು. ೮೫. "ಅಕ್ಕ! ಮದನನನ್ನು ಅನಂಗನೆಂದು ತಿಳಿದವರು ಹೇಳುತ್ತಾರೆ. ಆ ಬಲ್ಲವರು ಈಗಲಾದರೂ ಇಲ್ಲಿ ಬಂದು ಈ ಸುಂದರ ಮೂರ್ತಿಯನ್ನು ನೋಡಲಿ. ಲೋಕವು ನೋಡದೆ ಕೇಳದೆ ಸುಳ್ಳು ಹೇಳುತ್ತಿದೆ!" ವ॥ ಎಂದು ಹೇಳಿ ಆತನ ಸೌಂದರ್ಯವನ್ನು ಎವೆಯಿಕ್ಕದೆ ನೋಡುತ್ತಿದ್ದಳು. ಆಗ ಬಾಲಚಂದ್ರಿಕೆಯು ರಾಜಪುತ್ರನ ಎದುರಿಗೆ ಬಂದು— ೮೬. "ಭಾವನನ್ನು ನೋಡಲು ನಮ್ಮ ದೇವಿಯರು ಬಂದಿದ್ದಾರೆ" ಎಂದು ಹೇಳಿದಳು. ಅದನ್ನು ಕೇಳಿ ಆ ವಧುವನ್ನು ಎದುರುಗೊಳ್ಳುವುದಕ್ಕಾಗಿ ಆ ರಾಜಕುಮಾರನು ಮೇಲಕ್ಕೆ ಎದ್ದನು. ವ॥ ಎದ್ದು ಹತ್ತಿರಕ್ಕೆ ಬಂದ ಅವಂತಿ ಸೌಂದರಿಯನ್ನು ನೋಡಿ. ೮೭. 'ನಿಮ್ಮ ಮೃದುವಾದ ಪಾದಗಳು ನೊಂದುವು. ನನ್ನಲ್ಲಿಗೆ ನೀವು ಬರುವುದು ನನ್ನ ಒಂದು ಮಹಾಭಾಗ್ಯ' ಎಂದು ಹೇಳುತ್ತಾ ನಗುನಗುತ್ತಾ ರಾಜನು ಅವಳನ್ನುಪಚರಿಸಲು ಮುಂದೆದ್ದು ಬಂದನು. ವ॥ ತನಗಿದಿರಾಗಿ ಎದ್ದು ಬಂದ ಯುವರಾಜನನ್ನು ಅವಂತಿ ದೇವಿಯು ನೋಡಿ—೮೮. ಸ್ವಲ್ಪ ತಲೆಯನ್ನು ಬಗ್ಗಿಸಿದಳು. ತನ್ನ ಮುಖ ಕಮಲವನ್ನು

ವ॥ ಅಂತು ಕುಳ್ಳಿರಲ್ವೇಟ್ಟು ಮತ್ತಂ

ಚಂ॥ ವನಿತೆಯರೆಲ್ಲರೊಳ್ ಸುಕೃತಮಂ ಮಿಗೆ ಮಾಡಿದಳಾವಳೆನ್ನವೋಲ್
ಮನಸಿಜಮೂರ್ತಿಯಂ ಸುಭಗನಂ ಮೃದುಕೋಮಲಕಾಯನಂ ಪ್ರಸ
ನ್ನನನಭಿರಾಮನಂ ಪಡೆದು ಕಾಣ್ಬನಿತರ್ಕೆ ಸಮಂತಿದೆಲ್ಲಮೊ
ಳ್ಪಿನ ಕಣಿ ಬಾಲಚಂದ್ರಿಕೆಯ ಕಾರಣದಿಂ ದೊರೆದತ್ತು ನಿಶ್ಚಯಂ ೮೯

ವ॥ ಎಂದು ಮತ್ತಂ ಬಾಲಚಂದ್ರಿಕೆಯೊಳಿಂತೆಂದಳ್

ಚಂ॥ ಅನುನಯಮಪ್ಪ ಚೆಲ್ವಹರೆಯಂ ಹರೆಯಕ್ಕಳವಟ್ಟ ರೂಪು ರೂ
ಪಿನ ಪೊಸದೇಸೆಗೊಪ್ಪುವ ಗುಣಂ ಗುಣಮಂ ಮಿಗುತಿರ್ಪ ನೂತ್ನ ಸ
ದ್ವಿನಯಮನಾರತಂ ವಿನಯಮಂ ಕೆಳೆಗೊಳ್ವ ಮೃದೂಕ್ತಿ ರಾಜಪು
ತ್ರನೊಳೆಸೆದಿರ್ಪಿನಂ ಕೆಳೆಯರಲ್ಲದರಾರೊ ಸರೋರುಹೇಕ್ಷಣೇ ೯೦

ವ॥ ಎಂದು ನುಡಿಯುತ್ತಿರ್ಪನ್ನೆಗಂ

ಕಂ॥ ಲೇಸಿಂಗೆ ವಿಘ್ನಸಂತತಿ
ಯಾಸುರಮೆನಿಸಿರ್ಪುದಲ್ತೆ ಕರ್ಣಕಠೋರಂ
ತ್ರಾಸಕರಂ ಘನದುಃಖಾ
ವಾಸಂ ಮಿಗೆ ಕೇಳಲಾಯ್ತು ಶಂಖಧ್ವಾನಂ ೯೧

ಕೈಯ್ಯಿಂದ ಮರೆಮಾಡಿಕೊಂಡಳು. ಕಡೆಗಣ್ಣುಗಳಿಂದ ನಿದಾನವಾಗಿ ನೋಡಿದಳು. ತಡೆದು ತಡೆದು ಮೃದುವಾದ ಮಾತಿನಿಂದ 'ರಾಜನೆ, ನನ್ನನ್ನು ಗೆಳತಿಯೆಂದು ಭಾವಿಸದೆ ಎದುರಾಗಿ ಎದ್ದು ನಿಂತಿದ್ದೀರಿ'' ಎಂದು ಗೌರವಿಸಿ ಮಾತನಾಡಿ ಅವನನ್ನು ಮೃದುವಾದ ಚಿಗುರಿನ ಆಸನದ ಮೇಲೆ ಕುಳಿತುಕೊಳ್ಳಲು ಹೇಳಿದಳು. ವ॥ ಹಾಗೆ ಕುಳಿತುಕೊಳ್ಳಲು ಹೇಳಿ ಮತ್ತೆ ೮೯. "ವನಿತೆಯರಲ್ಲಿ ನನ್ನ ಹಾಗೆ ಹೆಚ್ಚಾಗಿ ಪುಣ್ಯಮಾಡಿದವರು ಬೇರೆಯಾರಿದ್ದಾರೆ ? ಮನ್ಮಥನ ಹಾಗಿರುವ, ಸೌಭಾಗ್ಯಶಾಲಿಯಾದ, ಮೃದುಕೋಮಲ ಶರೀರವುಳ್ಳ ಪ್ರಸನ್ನನಾದ ಇವನ ದರ್ಶನಭಾಗ್ಯವು ಪುಣ್ಯವತಿಯಾದ ಈ ಬಾಲಚಂದ್ರಿಕೆಯ ಕಾರಣದಿಂದ ನನಗೆ ದೊರೆಕಿತು." ವ॥ ಎಂದು ಹೇಳಿ ಬಾಲಚಂದ್ರಿಕೆಗೆ ಮತ್ತೆ ಹೇಳಿದಳು—೯೦. "ನೀತಿಗೆ ಒಪ್ಪುವ ಸುಂದರವಾದ ಪ್ರಾಯ, ಪ್ರಾಯಕ್ಕೆ ತಕ್ಕ ರೂಪ, ರೂಪಕ್ಕೆ ತಕ್ಕಗುಣ, ಗುಣವನ್ನು ಮೀರಿಸುವ ಸದ್ವಿನಯ, ಎಡಬಿಡದೆ ವಿನಯದಿಂದ ಕೂಡಿದ ಮೃದುವಾದಮಾತು ಇವೆಲ್ಲವೂ ರಾಜಪುತ್ರನಲ್ಲಿರುವಾಗ, ಹೇ ಕಮಲಾಕ್ಷಿ, ಯಾರುತಾನೇ ಗೆಳೆಯರಾಗುವುದಿಲ್ಲ ?" ವ।। ಎಂದು ಹೇಳುತ್ತಿರುವಾಗ, ೯೧. ಶುಭಕ್ಕೆ ವಿಘ್ನಗಳು ಹೆಚ್ಚು. ಅದರಂತೆ ಕರ್ಣಕಠೋರವೂ, ಭಯಂಕರವೂ ದುಃಖಕರವೂ ಆದ ಶಂಖಧ್ವನಿಯು ಕೇಳಿಸಿತು. ವ।। ಆ ಶಂಖಧ್ವನಿಯನ್ನು ಕೇಳಿ ಗೆಳತಿಯರು– 'ಅವಂತಿರಾಜರು ಊಟಕ್ಕೆ ಕುಳಿತುಕೊಳ್ಳುವ ಸಮಯವಾಯಿತು. ಅಕ್ಕ, ನಿನ್ನನ್ನೀಗ ಹುಡುಕುತ್ತಿರಬಹುದು. ಏಳು, ಹೋಗೋಣ' ಎಂದು ವಿಜ್ಞಾಪಿಸಿದರು. ಆಗ ಹೇಗೋ

ವ॥ ಆ ಶಂಖಧ್ವನಿಯಂ ಕೇಳ್ದು ಕೆಳದಿಯರ್ ಅವಂತೀಶ್ವರನಾರೋಗಣೆಗೆ ಕುಳ್ಳಿರ್ಪ ಸಮಯಮಾಯ್ತು ಅಕ್ಕ ನಿನ್ನನಿನ್ನೆಗಮುಱಿಸುತಿರ್ಪರೇೞ್ ಪೋಪಮೆಂದನುವಿಸಲೆಂತಾನುಂ

ಮನಮಂ ಚೈತನ್ಯಮಂ ಚಿತ್ತಮನೆಸಪ ಸಮಸ್ತೇಂದ್ರಿಯವ್ಯಾಪ್ತಿಯಂ ಭಾ
ವನೆಯಂ ತಳ್ತಿರ್ದಹಂಕಾರಮನಱಿವನಿತಂ ಬುದ್ಧಿಯಂ ಕೂರ್ತುತದ್ಭೂ
ಪನ ಕೈಗಂದೊಪ್ಪುಗೊಟ್ಟಾಳಿಯರನುವಿಸಲೆಂತಾನುಮಲ್ಲಿಂ ತಳರ್ದಂ
ಗನೆ ಪೋಗುತ್ತೊಪ್ಪಿದಳ್ ಲೆಪ್ಪದ ಕರುವಿನವೋಲ್ ಮೂರ್ತಿವೈಚಿತ್ರ್ಯದಿಂದಂ ೯೨

ವ॥ ಅಂತಾಕೆಯತ್ತಲ್ ಪೋದಳ್ ಇತ್ತಲರಸಂ ಪುಷ್ಪೋದ್ಭವನ ಮೊಗಮಂ ನೋಡಿ

ಮ॥ ಅಲರಂಬಾಕೆಯ ಚೆಂದದಿಂ ಸುೞಿದುದೋ ಮಿಂಚಂಗನಾಭಂಗಿಯಿಂ
ನೆಲಸಿತ್ತೋ ತ್ರಿಜಗನ್ಮನೋಮಯಸುಖಂ ಸ್ತ್ರೀವೇಷದಿಂ ಬಂದು ಸಂ
ಚಲಿಸಿತ್ತೋ ಮಲಯಾನಿಲಂ ಸತಿಯರೂಪಂ ತಾಳ್ದಿದೋ ಕಾಮಿನೀ
ಛಲದಿಂ ಚಂದ್ರಿಕೆ ಮೂರ್ತಿವೆತ್ತುದೊ ದಿಟಂ ಪೇೞೆಂದನಾಭೂಭುಜಂ ೯೩

ವ॥ ಅದಲ್ಲದೆಯುಂ

ಚಂ॥ ಮಲಯಸಮೀರನೊಲ್ದು ಪಡೆದಂ ಮದನಂ ಪೊರೆದಂ ಸುಧಾಕರಂ
ತಳಿರಡಿ ರಜಿಸಲ್ ನಡೆಪಿದಂ ರತಿ ತನ್ನ ವಿಳಾಸದೇೞ್ಗೆಯಂ
ನಲವಿನೊಳಿತ್ತಳೊಲ್ದು ಮಧು ಮೆಲ್ನುಡಿಯಂ ಕಲಿಸಿಟ್ಟನಲ್ಲದಂ
ದೆಳೆಯಳ ಸೌಕುಮಾರ್ಯಮಿನಿಪ್ಪುದೆ ಭೂಮಿಯೊಳೆಂದನಾನೃಪಂ ೯೪

ಕಷ್ಟದಿಂದ—೯೨. ಅವಂತಿ ಸುಂದರಿಯು ತನ್ನ ಮನಸ್ಸನ್ನೂ ಚೈತನ್ಯವನ್ನೂ ಚಿತ್ತವನ್ನೂ ಸಮಸ್ತ–ಇಂದ್ರಿಯ ವ್ಯಾಪ್ತಿಯುಳ್ಳ ಭಾವನೆಯನ್ನೂ, ಅಹಂಕಾರವನ್ನೂ, ಅರಿವನ್ನೂ ಬುದ್ಧಿಯನ್ನೂ ಪ್ರೀತಿಸಿ ಆ ರಾಜನ ಕೈಯಲ್ಲಿ ಒಪ್ಪಿಸಿಬಿಟ್ಟಳು. ಸಖಿಯರ ಪ್ರಾರ್ಥನೆಯನ್ನು ಮನ್ನಿಸಲೆಂದು ಹೇಗೋ ಅಲ್ಲಿಂದ ಹೊರಟಳು. ಆಗವಳು ತನ್ನ ಶರೀರದಲ್ಲಿ ಕಂಡು ಬಂದ ವೈಚಿತ್ರ್ಯದಿಂದ ಎರಕಹೊಯ್ದ ಬೊಂಬೆಯಂತೆ ಕಂಡಳು, ಬೊಂಬೆಯಂತೆ ನಿಶ್ಚಲವಾಗಿ ಸಖಿಯರನ್ನನುಸರಿಸಿದಳು. ವ।। ಅಂತು ಆಕೆಯು ಅತ್ತ ಹೋದಳು. ಇತ್ತ ಅರಸನು ಪುಷ್ಪೋದ್ಭವನ ಮುಖವನ್ನು ನೋಡಿ—೯೩. "ಹೂಬಾಣವು ಅವಳ ರೂಪದಿಂದ ಸುಳಿಯಿತೋ, ಮಿಂಚು ಅಂಗನೆಯ ರೀತಿಯಿಂದ ನೆಲಸಿತ್ತೋ. ಮೂರು ಲೋಕಗಳ ಮನಸ್ಸಿನ ಸುಖವು ಸ್ತ್ರೀವೇಷದಿಂದ ಬಂದಿಲ್ಲಿ ಸಂಚರಿಸಿತೋ, ಮಲಯ ಮಾರುತವು ನಾರಿಯ ರೂಪವನ್ನು ಧರಿಸಿತೋ, ಕಾಮಿನಿಯ ವ್ಯಾಜದಿಂದ ಬೆಳುದಿಂಗಳ ಆಕಾರವನ್ನು ಪಡೆಯಿತೋ–ನಿಜಹೇಳು" ಎಂದನು. ವ।। ಅದೂ ಅಲ್ಲದೆ. ೯೪. "ಮಲಯ ಮಾರುತನು ಒಲವಿನಿಂದ ಆಕೆಯನ್ನು ಸೃಜಿಸಿದನು. ಮದನನು ಸಾಕಿ ಬೆಳೆಯಿಸಿದನು. ಚಂದ್ರನು ತಳಿರಡಿಯು ರಂಜಿಸುವಂತೆ ನಡೆಯಿಸಿದನು, ರತಿಯು ತನ್ನ ವಿಲಾಸಾಧಿಕ್ಯವನ್ನು ನಲವಿನಿಂದ ಕೊಟ್ಟಳು. ವಸಂತನು ಪ್ರೀತಿಯಿಂದ ತನ್ನ ಮೆಲ್ನುಡಿ

ಪ್ರಿಯಕೇಳ್ ಚಿತ್ತವಶೀಕೃತಂ ವಿಮಳಕಾಯಸ್ತಂಭನಂ ಲೋಚನೇಂ
ದ್ರಿಯಸಮ್ಮೋಹನಮತ್ಯಪೂರ್ವಮೃದುವಾಕ್ಯೋಚ್ಚಾಟನಂ ದುಷ್ಟ ಹೃ
ಚ್ಛಯವಿದ್ವೇಷಣಮಾಗಳಾಯ್ತೆನಗವಳ್ ಮೆಯ್ದೋಱಲಿನ್ನೇನನಾ
ಕೆಯ ಮಂತ್ರಂ ಕಡೆಯಲ್ಲಿ ಮಾಟ್ಪುದದನಿನ್ನಾರ್ ಬಲ್ಲವರ್ ಬಲ್ಲಿದರ್ ೯೫

ಇಂದುನಿಭಾಸ್ಯೆ ಪೋಗಲೆನಗಾಮ್ರದ ತಣ್ಪುರಿಯಾಯ್ತು ಕಾಮದೇ
ವಂ ದಯೆಗೆಟ್ಟನೆಯ್ದೆ ಪಗೆಯಾಯ್ತೆಲರಾದುರ್ದು ಪಿಕಂ ಕನಲ್ದುದಾ
ಚಂದನಮುಷ್ಣಮಾದುದಿಳೆ ಕಾದಪುದೆಣ್ದೆಸೆ ಕತ್ತಲಿಟ್ಟುದಿಂ
ತೊಂದಡಸಿರ್ದೊಡೇಟಡಸಿತೆಂಬುದನೆನ್ನೊಳೆ ಕಂಡೆನೀಕ್ಷಣಂ ೯೬

ವ॥ ಎಂದರಸಂಗೆ ಕಾಮಸಂತಾಪಂ ಪ್ರವೇಶಿಸಿದಾಗಳ್

ಖಗತತಿ ಗೂಡನೆಯ್ದೆ ಪೊಣರ್ವಕ್ಕಿಗಳಿಕ್ಕೆ[1]ಯನೆಯ್ದೆ ದಲಂಬುಜಂ
ದುಗುಡಮನೆಯ್ದೆ ದಲುತ್ಪಳಿನಿ ಹಾಸ್ಯಮನೆಯ್ದೆ ದಲೊಱಲ್ದು ಪಾಣ್ಬರೊ
ಯ್ಯಗೆ ನಿಜಸೂಚಿತಗೃಹಮನೆಯ್ದೆ ವಿಯೋಗಿಗಳಂಗಜಾಸ್ತ್ರದ
ಗ್ನಿಗೆ ಗುರಿಯಾಗಲೆಯ್ದೆ ಪದೆಪಿಂದಿನನೆಯ್ದಿದನಸ್ತಶೈಲಮಂ ೯೭

ಯನ್ನು ಕಲಿಸಿದನು. ಅಲ್ಲದಿದ್ದರೆ ಈ ತರುಣಿಯ ಸೌಕುಮಾರ್ಯವು ಭೂಮಿಯಲ್ಲಿ ಇಷ್ಟು ಉತ್ಕೃಷ್ಟವಾಗಿರುತ್ತಿತ್ತೆ ?" ಎಂದು ಆ ರಾಜನು ಹೇಳಿದನು. ೯೫. "ಪ್ರಿಯ ಮಿತ್ರನೆ, ಕೇಳು. ಅವಳ ದರ್ಶನವು ಈಗ ನನ್ನ ಚಿತ್ತವನ್ನು ವಶಪಡಿಸಿಕೊಂಡಿತು. ಶರೀರವನ್ನು ನಿಶ್ಚಲಗೊಳಿಸಿತು. ಕಣ್ಣುಗಳಿಗೆ ಮೋಹವನ್ನುಂಟುಮಾಡಿತು. ಅತ್ಯಪೂರ್ವವಾದ ಮೃದುವಾಕ್ಯಗಳನ್ನು ಬಾಯಿಂದ ಹೊರಡಿಸಿತು. (ದುಷ್ಟನಾದ ಮನ್ಮಥನೊಡನೆ ವೈರವು ಸಮನಿಸಿತು.) ಆಕೆಯ ಮಂತ್ರವು ಕಡೆಯಲ್ಲಿ ಇನ್ನೇನನ್ನುಮಾಡುವುದೋ ? ಯಾವ ಬಲ್ಲಿದರು ಅದನ್ನು ಅರಿಯಬಲ್ಲರು ? ೯೬. ಆ ಚಂದ್ರಮುಖಿಯು ಹೋಗಲು ನನಗೆ ಮಾವಿನಮರದ ತಂಪು ಬೆಂಕಿಯು ಉರಿಯಾಯಿತು. ಕಾಮದೇವನು ನನ್ನ ಮೇಲಿನ ದಯೆಯನ್ನು ತೊರೆದನು. ಗಾಳಿಯು ವಿಶೇಷವಾದ ಶತ್ರುವಾಯಿತು. ಕೋಗಿಲೆಯು ಕೋಪಿಸಿಕೊಂಡಿತು. ಚಂದನ ಲೇಪವು ಉಷ್ಣವಾಯಿತು. ನೆಲವು ಬಿಸಿಯಾಯ್ತು, ಎಂಟು ದಿಕ್ಕುಗಳಲ್ಲೂ ಕತ್ತಲೆಯು ಕವಿಯಿತು. ಹೀಗೆ "ಒಂದು ಕಷ್ಟವು ನುಗ್ಗಿ ಬಂದಾಗ ಹಲವು ಕಷ್ಟಗಳು ತುಂಬಿ ಬರುತ್ತವೆ" ಎಂಬ ಗಾದೆಯು ನನ್ನಲ್ಲಿ ನಿಜವಾಗಿರುವುದನ್ನೀಗ ನಾನು ಕಂಡೆನು. ವ॥ ಅರಸನಲ್ಲಿ ಹೀಗೆ ಕಾಮಸಂತಾಪವು ಪ್ರವೇಶಿಸಿದಾಗ—೯೭. ಸೂರ್ಯನು ಅಸ್ತಗಿರಿಯನ್ನು ಪ್ರವೇಶಿಸಿದನು. ಆಗ ಹಕ್ಕಿಗಳು ತಮ್ಮ ತಮ್ಮ ಗೂಡನ್ನು ಸೇರಿದುವು. ಚಕ್ರವಾಕಪಕ್ಷಿಗಳು ತಮ್ಮ ವಾಸ[1]ಸ್ಥಾನವನ್ನು ತಲಪಿದುವು. ಕಮಲಗಳು ದುಃಖಿಗೊಂಡುವು. ನೈದಿಲೆ ಹೂಗಳು ಅರಳಿ ನಕ್ಕುವು. ಕಾಮುಕರು ಮೆಲ್ಲನೆ

1. ಇಕ್ಕೆಲದ್ವೈದೆ–ಎಂದು ಪಾಠವಿರಬಹುದು. 'ಚಕ್ರವಾಕಗಳು ಅಗಲಿ ಬೇರೆ ಬೇರೆ ಕಡೆಗೆ ಹೋದವು' (ರಂ)

ಚಂ॥ ಪಗಲತಿಮಿತ್ರನೊಳ್ ಸುರತಗೋಷ್ಠಿ ಕರಂ ದ್ವಿಜರಾಜಪಾದದೊಳ್
ಪಗೆ ಮಧುಪಪ್ರಸಂಗಮನಿಶಂ ಜಡಸಂಗತಿ ಕಂಟಕತ್ವಮುಂ
ಬಗಣಿತದುರ್ಗುಣಕ್ಕೆ ನೆಲೆಯಾದ ಸರೋಜಿನಿ ಕೆಟ್ಟಳೆಂದಣಂ
ನಗುವವೊಲೇನರಲ್ದುವೊ ಸುಧಾಕರಸಂಗಮದಲ್ಲಸಿತೋತ್ಪಲಂ ಪಲಂ ೯೮

ಚಂ॥ ಮಿಡುಕುವ ಗಂಟಲಿರ್ದೆಸೆಗೆ ಜೋಲ್ದ ಮುರಳ್ಚಿದೆಱಂಕೆ ಬಿಟ್ಟ ಬಾ
ಯಡಸಿದ ಕಣ್ಣನೀರ್ಗಳರೆಮುಚ್ಚಿದ ಕಣ್ ಬಿಸುಸುಯ್ದ ಸುಯ್ಲಿನಿಂ
ಕಡುಬಡವಾದ ತಮ್ಮ ತನು ರಂಜಿಸೆ ಕೋಕಕುಳಂ ವಿಯೋಗದಿಂ
ಮಡದಿಯನೆಲ್ಲಿಯುಂ ತಿರುಗಿ ಕಾಣದೆ ನಿಂದುದದೊಂದು ತಾಣದೊಳ್ ೯೯

ಕಂ॥ ನೀಱೆಯನಂಬುಜದೊಳ್ ನೀ
ರೇಱಿದ ನೆಯ್ದಿಲ್ಗಳೊಳ್ ಕೊಳಂಗಳ ತಡಿಯೊಳ್
ಪಾಱಿ ಪರಿದಱಿಸಿ ಕಡುಬಾ
ಯಾಱುತ್ತಿರ್ದತ್ತು ಜಾತಶೋಕಂ ಕೋಕಂ ೧೦೦

ಪ್ರಣಯಿನಿಯರಿಂದ ಸೂಚಿತವಾದ ಮನೆಗಳಿಗೆ ಹೋದರು. ವಿರಹಿಗಳು ಮನ್ಮಥನ ಅಸ್ತ್ರಗಳ ಅಗ್ನಿಗೆ ಗುರಿಯಾದರು. ೯೮. ಹಗಲು ಮಿತ್ರನಲ್ಲಿ ಸುರತವ್ಯವಹಾರ. (ಸೂರ್ಯನಲ್ಲಿ ಅನುರಾಗ) ವಿಶೇಷವಾಗಿ ದ್ವಿಜರಾಜನ ಪಾದದಲ್ಲಿ ಹಗೆತನ (ಚಂದ್ರ ಕಿರಣಗಳಲ್ಲಿ ಅಸಹನೆ) ಮಧುಪ ಮದ್ಯಪಾಯಿಗಳ ಸಂಬಂಧ (ದುಂಬಿಗಳ ಸಂಗ) ಯಾವಾಗಲೂ ಜಡರ ಸಹವಾಸ (ನೀರಿನಲ್ಲಿವಾಸ) ಕ್ಷುದ್ರಶತ್ರುವಿನ ವ್ಯವಹಾರ (ಮುಳ್ಳು ಕೂಡಿರುವಿಕೆ) ಹೀಗೆ ಅಗಣಿತವಾದ ದುರ್ಗುಣಗಳಿಗೆ ಆಶ್ರಯವಾದ ಸರೋಜಿನಿಯು (–ಕಮಲವು) ಕೆಟ್ಟವಳೆಂದು ನೋಡಿ ನಗುವಂತೆ ನೈದಿಲೆ ಹೂಗಳು ಸುಧಾಕರನ ಸಂಗದಿಂದ ಅರಳಿ ಪ್ರಕಾಶಿಸಿದುವು. ೯೯. ಚಕ್ರವಾಕ ಪಕ್ಷಿಗಳು ಎಲ್ಲಕಡೆ ಅಲೆದಾಡಿ ತಮ್ಮ ಮಡದಿಯನ್ನು ಕಾಣದೆ, ಅಗಲಿಕೆಯ ದುಃಖದಿಂದ ಏನುಮಾಡಲೂ ತೋರದೆ, ಒಂದು ಜಾಗದಲ್ಲಿ ನಿಂತುಕೊಂಡುವು. ಅವುಗಳ ಗಂಟಲು ನಡುಗುತ್ತಿತ್ತು. ರೆಕ್ಕೆಗಳು ಎರಡು ಕಡೆಗೂ ಮಡಿಸಿಕೊಂಡು ಜೋಲು ಬಿದ್ದಿದ್ದುವು. ತೆರೆದ ಬಾಯಿ ತೆರದಂತೆಯೇ ಇದ್ದಿತು. ಕಂಗಳಲ್ಲಿ ನೀರು ತುಂಬಿದ್ದಿತು. ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡಿದ್ದುವು. ಬಿಚ್ಚುನೆಯ ಉಸಿರಿನಿಂದ ಶರೀರ ಬಡವಾಗಿದ್ದಿತು. ೧೦೦. ಅಗಲಿಕೆಯಿಂದ ದುಃಖಿತವಾದ ಚಕ್ರವಾಕವು ಕಮಲದಲ್ಲಿಯೂ, ನೀರಿನಲ್ಲಿ ಎದ್ದು ಬೆಳೆದ ನೆಯ್ದಿಲೆ ಹೂಗಳಲ್ಲಿಯೂ, ಕೊಳಗಳ ದಡದಲ್ಲಿಯೂ, ಹಾರಿ, ತಿರುಗಿ ತನ್ನ ರಮಣಿಯನ್ನು ಹುಡುಕಿ ಹುಡುಕಿ ಬಾಯಾರಿ

ಕಂ॥ ನಳಿನೀಬೀಜಮನೊಲ್ಲದೆ
ಕುಳಿರ್ವಕ್ಕಹ ಎಂಬದನಿಗಳೊಳ್ ಸಲ್ಲದೆ ಪೂ
ಗೊಳದಲ್ ನಿಲ್ಲದೆ ವಿರಹಾ
ನಳನಿಂ ತಿರುಗಿತ್ತು ಚಕ್ರವಾಕಾನೀಕಂ ೧೦೧

ವ॥ ಅಂತು ಸೂರ್ಯಾಸ್ತಮಾಗಲೊಡಂ

ಚಿತ್ತಜನೆಂಬ ಘಟ್ಟವಳನೊಪ್ಪುವ ಚಂದನಚರ್ಚೆಯಿಕ್ಕಿದಂ
ಕತ್ತುರಿಯುಂಡೆಯಂಘುಸೃಣಕೇಸರಮಂ ಶಶಿಕಾಂತಶಾಣದೊಳ್
ಬಿತ್ತರದಿಂದೆನಲ್ಕೆನಸುನುಣ್ಗಲೆಯಿಂ ಕಿಸುಸಂಜೆಗೆಂಪನಾ
ಳ್ದತ್ತುದಯಾದ್ರಿ ಮಸ್ತಕದೊಳುಣ್ಮುವ ಪೂರ್ಣಶಶಾಂಕಮಂಡಳಂ ೧೦೨

ಕೆಂದಳಿರ್ದೊಂಗಲಾಗೆ ಕಿಸುಸಂಜೆ ಸಿತಾಕ್ಷತೆಯಾಗೆ ತಾರಕಾ
ವೃಂದವಲಂಕೆ(?) ರಂಜಿಪುದಯಾದ್ರಿ ಕನತ್ಕಲಶಾಗ್ರದಲ್ಲಿ ಪೆಂ
ಪಿಂ ದೆಸೆವೆಣ್ಗಳರ್ಚಿಸಿದ ಕಾಮನ ಗೆಲ್ವೆಯ ರತ್ನದರ್ಪಣ
ಕ್ಕಂದೆಣೆಯಾಯ್ತು ಪರ್ಬಿದ ತಮಃ ಪರಿಖಂಡನಮಿಂದುಮಂಡಲಂ ೧೦೩

ಮ ಸ್ರ॥ ಸತತಂ ಸಂಧ್ಯಾಗ್ನಿನೇತ್ರಂ ಸುರಗಿರಿವೃಷಭಾರೋಹಣಂ ತಾರಕಾದೀ
ಧಿತಿ ಗಂಗಾಮಸ್ತಕಂ ಲಾಂಛನವಿಷಸಹಿತಂ ಪೂರ್ವದಿಕ್ಪಾರ್ವತೀಸಂ
ಯುತನುದ್ಯದ್ದಿವ್ಯಟ್ಟವೋ ಭಂಜಕನಭಿನವಶೀತಾಂಶು ಜೂಟೋತ್ತಮಾಂಗಾ
ವೃತಹಾಸಂ ಪರ್ವಿದಂತೇನೆಸೆದುದೊ ಪದೆಪಿಂ ಕೌಮುದೀಶ್ರೀವಿಲಾಸಂ ೧೦೪

ಬಸವಳಿದಿತ್ತು. ೧೦೧. ಚಕ್ರವಾಕಗಳು ವಿರಹಾಗ್ನಿಯಿಂದ ಒಂದು ಕಡೆ ನಿಲ್ಲದೆ ತಿರುಗುತ್ತಿದ್ದುವು. ತಾವರೆಬೀಜಗಳನ್ನು ತಿನ್ನಲಿಲ್ಲ. ಚಳಿಗೆ ಅಹ ಎಂದು ಧ್ವನಿಮಾಡಲಿಲ್ಲ. ಹೂವರಳಿದ ಕೊಳಗಳಲ್ಲಿ ನೆಲೆಯಾಗಿ ನಿಲ್ಲಲಿಲ್ಲ. ವಿರಹದ ಕಾವನ್ನೂ ತಡೆಯಲಾರದೆ ಅಶಾಂತಿಯಿಂದ ನಿಂತಲ್ಲಿ ನಿಲ್ಲದೆ ಅಲೆದಾಡಿತು. ವ॥ ಹಾಗೆ ಸೂರ್ಯನು ಮುಳುಗಲು. ೧೦೨. ಉದಯಾದ್ರಿಯ ಶಿಖರದಲ್ಲಿ ಪೂರ್ಣಚಂದ್ರಮಂಡಲವು ಉದಯಿಸಿತು. ಮನ್ಮಥನೆಂಬ ಗಂಧತೇಯುವವನು ಚಂದ್ರಕಾಂತ ಶಿಲೆಯ ಸಾಣೆಕಲ್ಲಿನ ಮೇಲೆ ಕಸ್ತೂರಿಯ ಉಂಡೆಯನ್ನಿಟ್ಟು ಕುಂಕುಮ ಕೇಸರಿಯನ್ನು ವಿಸ್ತಾರವಾಗಿ ಹರಡಿ, ಗಂಧವನ್ನು ತೇಯುವನೋ ಎಂಬಂತೆ, ಸುಂದರವಾದ ಕರೆಯಿಂದಲೂ ಸಂಜೆಗೆಂಪಿನಿಂದಲೂ ಚಂದ್ರಮಂಡಲವು ರಂಜಿಸಿತು. ೧೦೩. ಕೆಂಪಾದ ಸಂಜೆ ಚಿಗುರಿನ ಗೊಂಚಲಾಯಿತು. ನಕ್ಷತ್ರಗಳ ಸಮೂಹವು ಬಿಳಿಯ ಅಕ್ಷತೆಯಾಯಿತು. ಹರಡಿದ ಕತ್ತಲೆಯನ್ನು ಹೋಗಲಾಡಿಸುವ ಚಂದ್ರಮಂಡಲವು ಹೊಳೆಯುವ ಉದಯಾದ್ರಿಯೆಂಬ ಕಲಶಾಗ್ರದಲ್ಲಿ ವೈಭವದಿಂದ ದಿಗ್ವನಿತೆಯರು ಪೂಜಿಸಿದ ಕಾಮನ ಜಯಸೂಚಕವಾದ ರನ್ನಗನ್ನಡಿಯಂತೆ ಪ್ರಕಾಶಿಸಿತು. ೧೦೪. ಆಗ ಬೆಳದಿಂಗಳಿನ ಶೋಭಾವಿಲಾಸವು ಎಲ್ಲೆಲ್ಲಿಯೂ ಹರಡಿದಂತೆ ಶೋಭಿಸಿತು. ಅದು ಸಂಜೆಯೆಂಬ ಅಗ್ನಿಯೇ ನೇತ್ರವಾಗಿ ಉಳ್ಳದ್ದು. ಮೇರುವೆಂಬ ವೃಷಭವನ್ನು ಹತ್ತಿರುವುದು. ನಕ್ಷತ್ರ ಕಾಂತಿಯೆಂಬ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿದ್ದು. ಕಳಂಕವೆಂಬ

ಕಂ॥ ಕಿಸುಸಂಜೆ ಪಿಡಿದ ಜವನಿಕೆ
ಮಿಸುಗುವ ತಾರಾಳಿ ಪರೆದ ಪುಷ್ಪಾಂಜಲಿಯಾ
ಗಸಮೆಸೆವ ರಂಗಮಾಗಲ್
ಶಶಿಪ್ರಭಾನಾಟ್ಯಮೇಂ ಮನಂಗೊಳಿಸಿದುದೋ ೧೦೩

ವ॥ ಅಂತಳುಂಬಮಾದ ಕೌಮುದೀವಿಳಾಸದೊಳ್ ರಾಜವಾಹನಂ ಕಾಮಪರವಶನಾಗಿ

ಸ್ರ॥ ಇನ್ನೊರ್ಮೆಯ್ಯೆರ್ಪಳೋ ಬಾರಳೊ ಬನಕೆನುತುಂ ಸುಯ್ಯೆಸಂತಾಪದಿಂದಂ
ತನ್ನಂಗಂ ಕಾದು ಕಾಮಜ್ವರಮೊಗೆತರೆ ಬೆಂಡಾಗಿಯಾಹಾರಮಂ ಬಿ
ಟ್ಟಿನ್ನೊಳ್ ಮಾತೇಕೆನುತ್ತುಂ ನುಡಿಯನುಟಿದು ದಿಗ್ಭ್ರಾಂತಿ ಕೈಕೊಂಡು ಕಾಮಾ
ಸ್ತ್ರನ್ನಟ್ಟಿತ್ತಂದು ಮೂರ್ಛಾಗತಿಗೆ ತನುವನೊಲ್ದಿತ್ತನಾ ರಾಜಪುತ್ರಂ ೧೦೪

ವ॥ ಅಂತು ಮೂರ್ಛೆಗೊಳಗಾದುದಂ ಪುಷ್ಪೋದ್ಭವಂ ಕಂಡು

ಉ॥ ಪಲ್ಲವತಲ್ಪದೊಳ್ ಮಲಯಜದ್ರವಮಂ ತಳಿದುರ್ವರೇಶನಂ
ಮೆಲ್ಲನೆ ಸೈತು ಕುಳ್ಳಿರಿಸಿ ಕೋಮಳಬಾಳಮೃಣಾಳನಾಳಮಂ
ಮೆಲ್ಲೆರ್ದೆಯೊಳ್ ಪದಂಗೊಳಿಸಿಯುತ್ಪಲಪತ್ರದೊಳೊಲ್ದು ಬೀಸಿಯು
ತ್ಫುಲ್ಲಶರಾಗ್ನಿಯಂ ತವಿಸುವುಜ್ಜುಗಮಂ ತಳೆದಂ ಮನಃಪ್ರಿಯಂ ೧೦೫

ವಿಷದಿಂದ ಯುಕ್ತವಾದದ್ದು. ಪೂರ್ವದಿಕ್ಕೆಂಬ ಪಾರ್ವತಿಯೊಡನೆ ಸೇರಿದ್ದು. ಶತ್ರುವಾದ ಕತ್ತಲೆಯನ್ನು-ಅಂಧಕಾಸುರನನ್ನು ಸಂಹರಿಸಿದ್ದು. ಅಭಿನವಚಂದ್ರನನ್ನು ಶಿರಸ್ಸಿನ ಜಟೆಯಲ್ಲಿ ಮುಡಿದು ಅದರ ವಿಲಾಸದಿಂದ ಸಹಿತವಾದದ್ದು. (ಇಲ್ಲಿ ಶಿವನೊಡನೆ ಹೋಲಿಕೆಯುಂಟು) (ರಂ) ೧೦೩. ಕೆಂಪಾದ ಸಂಜೆಯು ತೆರೆಹಿಡಿದಂತಿತ್ತು, ಮಿನುಗುವ ನಕ್ಷತ್ರಗಳು ಹೂವಿನ ಬೊಗಸೆಯನ್ನು ಸುರಿದಂತೆ ಕಾಣಿಸಿದುವು. ಗಗನವೇ ಪ್ರಕಾಶಮಾನ ವಾದ ರಂಗಭೂಮಿಯಾಯಿತು. ಆಹಾ ! ನಡೆದ ಚಂದ್ರಪ್ರಭೆಯನಾಟ್ಯವು ಮನ ಸ್ಸನ್ನು ಸೂರೆಗೊಂಡಿತು ! ವ॥ ಹಾಗೆ ಅತಿಶಯವಾದ ಬೆಳುದಿಂಗಳ ವಿಲಾಸದಲ್ಲಿ ರಾಜವಾಹನನು ಕಾಮಪರವಶನಾದನು. ೧೦೪. ಇನ್ನೊಮ್ಮೆ ಕಾಡಿಗೆ ಬರುವಳೋ ಬರುವುದಿಲ್ಲವೋ ಎಂದು ಯೋಚಿಸಿ ನಿಟ್ಟುಸಿರುಬಿಟ್ಟನು. ಸಂತಾಪದಿಂದ ಅವನ ಶರೀರವು ಕಾಯ್ದು ಹೋಗಿ ಕಾಮಜ್ವರವು ಕಾಣಿಸಿಕೊಂಡಿತು. ಶಕ್ತಿಗುಂದಿತು. ಆಹಾರ ವನ್ನು ತೊರೆದನು. ನನಗೆ ಮಾತೇಕೆ ಬೇಕು ಎಂದು ಮಾತಾಡುವುದನ್ನೇ ಬಿಟ್ಟನು. ದಿಗ್ಭ್ರಾಂತನಾದ ಆ ರಾಜಪುತ್ರನು ಕಾಮನ ಅಸ್ತ್ರಕ್ಕೆ ಗುರಿಯಾಗಿ ಮೂರ್ಛೆಹೊಂದಿ ದನು. ವ॥ ಹೀಗೆ ಮೂರ್ಛೆಗೊಳಗಾದುದನ್ನು ಕಂಡು ಪುಷ್ಪೋದ್ಭವನು ೧೦೫. ರಾಜಪುತ್ರನನ್ನು ಗಂಧದ ನೀರನ್ನು ಚಿಮುಕಿಸಿದ ಚಿಗುರಿನ ಹಾಸಿಗೆಯಲ್ಲಿ ಕುಳ್ಳಿರಿಸಿ ದನು. ಕೋಮಲವಾದ ತಾವರೆ ದಂಟುಗಳನ್ನು ಮೃದುವಾದ ಎದೆಯ ಮೇಲೆ ಹರಡಿದನು. ಕಮಲದ ಎಲೆಯಿಂದ ಗಾಳಿ ಬೀಸಿದನು. ಹೀಗೆ ಆ ಪ್ರಿಯಮಿತ್ರನು ರಾಜವಾಹನನನ್ನು ಉಪಚರಿಸಿ ಕಾಮಾಗ್ನಿಯನ್ನು ಹೋಗಲಾಡಿಸಲು ಪ್ರಯತ್ನಿಸಿ

ವ॥ ಮತ್ತಂ ಪಲ್ಲವದ ಪಾಸಿಕೆಯಿಂ ಪನಿನೀರ ತುಷಾರದಿಂ ಲಾಮಂಚದ ಬಿಜ್ಜಣಿಗೆಯಿಂ ಮೃಣಾಲವಲಯಂಗಳಿಂ ಮಲಯೋದ್ಭವದ ಪಂಕದಿಂ ಸೇವಂತಿಗೆಯ ಸೌರಭ್ಯದಿಂ ಕಲ್ಹಾರದ ಕಂಠಿಕೆಯಿಂ ಕುಸುಮತತಿಯ ಮಕರಂದದಿಂ ಕರ್ಪೂರಪರಾಗದಿಂ ನೀರಜದ ಕೇಸರದಿಂ ಪೊಂಬಾಳೆಯ ತಿರಿದಾನದಿಂ ಪಾದರಿಯ ಪರ್ಯಂಕದಿಂ ಅಶೋಕದ ಪೊಸದಳಿರಿಂ ಶಿಶಿರೋಪಚಾರಮಂ ಮಾಡುತ್ತುಮಿರೆ

ಚಂ॥ ಯತಿಗಳ ಹೃತ್ಸರೋಜಮರಳಲ್ ಮಿಗೆ ಕೌಶಿಕಲೋಚನೋತ್ಪಲೋ
ನ್ನತಿಮುಗಿಯಲ್ ಜಗಜ್ಜನದ ಜಾಡ್ಯತಮಂ ಬಿಜಿತೋಡೆ ಸತ್ಕವಿ
ಪ್ರತತಿ ಮತಿ ಪ್ರಕಾಶಕಿರಣಂಮಿಗೆ ಸಜ್ಜನ ಚಕ್ರವಾಕದಾ
ಯತಿಸುಖಮಪ್ಪಲಂದುದಯಶೈಲಮನೇಱಿದನಂಬುಜಪ್ರಿಯಂ ೧೦೪

ವ॥ ಅಂತು ಸೂರ್ಯೋದಯಮಾಗಲೊಡಂ ರಾಜವಾಹನನೆಂತಾನುಂ ಸಂತೈಸಿಕೊಂಡು ಮೆಲ್ಲನೆಟ್ಟು ಕುಳ್ಳಿರ್ದು ಪುಷ್ಪೋದ್ಭವನೊಳವಂತಿ ಸೌಂದರಿಯ ರೂಪಾತಿಶಯಮಂ ಬಣ್ಣಿಸಿ ಕಾಮನ ಪಕ್ಷಪಾತಮಂ ನಿಂದಿಸಿ ಚಿಂತಿಸುತಿರ್ಪಾಗಳ್

ದನು. ವ।। ಮತ್ತು ಚಿಗುರಿನ ಹಾಸಿಗೆಯನ್ನು ಹಾಸಿದನು. ಹನಿ ಹನಿಯಾಗಿ ನೀರು ಚಿಮುಕಿಸಿ ಶೈತ್ಯವನ್ನುಂಟುಮಾಡಿದನು, ಲಾಮಂಚದ ಬೀಸಣಿಗೆಯಿಂದ ಬೀಸಿದನು ಕಮಳನಾಳಗಳನ್ನು ಬಳೆಯಂತೆ ಕೈಗಳಿಗೆ ಸುತ್ತಿದನು. ಗಂಧವನ್ನು ಮೈಗೆ ಹಚ್ಚಿ ಸೇವಂತಿಗೆ ಹೂವಿನ ಪರಿಮಳವನ್ನು ಹರಡಿ ಕಮಲದ ಕಂಠಹಾರವನ್ನು ಹಾಕಿ, ಹೂಗಳ ಮಕರಂದವನ್ನು ಪಾನಮಾಡಿಸಿದನು. ಪಚ್ಚಕರ್ಪೂರದ ಧೂಳನ್ನು ಚೆಲ್ಲಿ, ಕಮಲಗಳ ಕೇಸರಗಳನ್ನು ತಂದು ಹರಡಿ, ಚಿನ್ನದಂತೆ ಹೊಳೆಯುವ ಬಾಳೆಯ ಪಟ್ಟೆಗಳನ್ನು (?) ತಂದು ಹರಡಿದನು. ಪಾದರಿ ಹೂವಿನ ಮಂಚವನ್ನೇ ನಿರ್ಮಿಸಿದನು. ಅಶೋಕದ ಹೊಸದಾದ ತಳಿರನ್ನು ಹರಡಿದನು. ಇವೇ ಮೊದಲಾದ ರೀತಿಯಿಂದ ಶೈತ್ಯೋಪಚಾರವನ್ನು ಮಾಡಿದನು. ೧೦೪. ಅನಂತರ ಸೂರ್ಯನು ಉದಯಾದ್ರಿಯಲ್ಲಿ ಉದಯಿಸಿದನು. ಆಗ ಯತಿಗಳ ಹೃದಯ ಕಮಲಗಳು ಅರಳಿದುವು. ಗೂಬೆಗಳ ಕಂಗಳೆಂಬ ಕನ್ನೈದಿಲೆಗಳ ಉನ್ನತಿಯಡಗಿತು, ಅಂದರೆ ಅವುಗಳ ಕಂಗಳು ಕುರುಡಾದುವು. ಜಗತ್ತಿನ ಜನರ ಜಾಡ್ಯವೆಂಬ ಕತ್ತಲೆಯು (ಜಾಡ್ಯವೂ ಕತ್ತಲೆಯೂ) ಹೆದರಿ ಓಡಿತು. ಜನರೆಲ್ಲ ಎಚ್ಚತ್ತರು. ಸತ್ಕವಿಗಳ ಬುದ್ಧಿಯ ಪ್ರಕಾಶಮಾನವಾದ ಕಿರಣಗಳು ಹರಡಿದುವು. ಸಜ್ಜನರೆಂಬ ಚಕ್ರವಾಕಗಳ ಭವಿಷ್ಯತ್‌ಕಾಲ ಸುಖಮಯವಾಯಿತು. ವ॥ ಸೂರ್ಯನು ಉದಯಿಸಿದ ಕೂಡಲೆ ರಾಜವಾಹನನು ಹೇಗೋ ಕಷ್ಟದಿಂದ ತನ್ನನ್ನು ಸಮಾಧಾನ ಮಾಡಿಕೊಂಡು ನಿಧಾನವಾಗಿ ಎದ್ದು ಕುಳಿತುಕೊಂಡನು. ಅವಂತಿ ಸೌಂದರಿಯ ರೂಪಾತಿಶಯವನ್ನು ಪುಷ್ಪೋದ್ಭವನ ಮುಂದೆ ವರ್ಣಿಸಿದನು.

ಮ ಸ್ರ॥ ಉಗುರಿಂ ಕೀಱಿಟ್ಟಗಂಧಂ ನೊಸಲ ವಿಮಲ ಬದ್ಧಾಕ್ಷತಂ ಕುಂಡಲಂ ಪಾ
ವುಗೆ ತೋಳೊಳ್ ರಕ್ಷೆ ನುಣ್ಪಿದ ಮುಡಿ ಸುಲಿಪಲ್ ಕೈಯ್ಯ ಕುಂಚಂಕರಂ ಸೋ
ಜಿಗಮೆಂಬಂತೊಪ್ಪೆ ಮತ್ತೊಯ್ಯನೆ ಪದವಿಡುತುಂ ಸಿಂಗರಂದೋಱುತುಂ ದಿ
ಟ್ಟಿಗೆ ಮಾಯಾಜಾಲಮಂ ಬೀಸುತುಮನುನಯದಿಂದೊರ್ವಮಾಯಾವಿ ಬಂದಂ ೧೦೯

ವ॥ ಮತ್ತಂ

ಚಂ॥ ತೊಳಗುವ ಮಿಂಚುವಲ್ ಪಣೆಯ ಟಕ್ಕಿನಬೊಟ್ಟು ನಿಮಿರ್ದವೇಣಿ ಬೈ
ತಲೆಗಳವಟ್ಟ ಸಿಂದುರಮಳಂಕೆಯೊಳೆಚ್ಚಿದ ಕಜ್ಜಳಂ ತಳ
ತ್ತಳಿಸುವ ಶಂಖದೋಲೆ ಕುಚದೊಡ್ಡಿನ ಮೇಲುದು ನೀಳ್ದ ಸೆಳ್ಳುಗುರ್
ಚಲನಯನಂಗಳೊಪ್ಪೆ ನಟನಂಗೆಯೆ ಪಿಂದನೆ ಬಂದನಾಕ್ಷಣಂ ೧೧೦

ಕಂ॥ ಎಡಗಾಲ ತೊಡರ ಬಾವುಲಿ
ನಡೆಗೆಸೆವ ಡಿಡಾಯಿ ಜಗಮನಂಗೆಯ್ಯೊಳ್ ನೋ
ಟಿಪ್ಪೊಡೆ ತೋರ್ಪೆನೆಂಬ ನುಡಿ ನೇ
ರ್ಪಡೆದೊಪ್ಪಿರಲಿಂದ್ರಜಾಲಿಗಂ ಮಿಗೆಬಂದಂ ೧೧೧

ವ॥ ಅಂತದ್ಭುತಾಕಾರದಿಂದೊರ್ಬನಿಂದ್ರಜಾಲಿಗಂ ಬಂದು ರಾಜವಾಹನನಂ ಕಂಡು

ಕಾಮನಪಕ್ಷಪಾತವನ್ನು ನಿಂದಿಸಿದನು. ಹೀಗೆಯೇ ಯೋಚಿಸುತ್ತಿರುವಾಗ– ೧೦೯. ಒಬ್ಬ ಐಂದ್ರಜಾಲಿಕನು ಬಂದನು. ಅವನು ಹಣೆಯಲ್ಲಿ ಉಗುರಿನಿಂದ ಗೀರಿ ಅಡ್ಡಲಾಗಿ ಗಂಧವನ್ನೆಳೆದು ಅದರ ಮೇಲೆ ಅಕ್ಷತೆಯನ್ನು ಇಟ್ಟುಕೊಂಡಿದ್ದನು. ಕಿವಿಗಳಲ್ಲಿ ಕುಂಡಲ, ಕಾಲುಗಳಲ್ಲಿ ಮೆಟ್ಟು, ತೋಳಿನಲ್ಲಿ ರಕ್ಷೆಯದಾರ, ಸುಂದರವಾದ ತಲೆಗೂದಲ ಗಂಟು, ಬೆಳ್ಳಗೆ ಉಜ್ಜಿದಹಲ್ಲು, ಕೈಯ್ಯಲ್ಲಿ ಹಿಡಿದ ಕುಂಚ, ಇವುಗಳಿಂದ ಆಶ್ಚರ್ಯಕರವಾದ ರೂಪವನ್ನು ಪಡೆದಿದ್ದನು. ಇಂಥ ಮಾಯಾವಿಯೊಬ್ಬನು ನಿದಾನವಾಗಿ ಅಡಿಯಿಡುತ್ತಾ, ಶೃಂಗಾರವನ್ನು ತೋರುತ್ತಾ, ಕಣ್ಣಿಗೆ ಮಾಯಾಜಾಲವನ್ನು ಬೀಸುತ್ತಾ, ವಿನಯದಿಂದ ಅಲ್ಲಿಗೆ ಬಂದನು. ಮತ್ತು ೧೧೦. ಮಿಂಚಿನಂತೆ ಹೊಳೆಯುವ ಹಲ್ಲು, ಹಣೆಯ ಮೇಲೆ ತಿಲಕ, ಮೇಲಕ್ಕೆ ನಿಮಿರಿದ ಜಡೆ, ಬೈತಲೆಗೆ ಅಲಂಕರಿಸಿದ ಕುಂಕುಮ, ಕಂಗಳತುದಿಗೆ ಹಚ್ಚಿದಕಾಡಿಗೆ, ತಳತಳ ಎಂದು ಹೊಳೆಯುವ ಶಂಖದೋಲೆ, ಕುಚಗಳ ಮೇಲೆ ಸೆರಗು, ಉದ್ದವಾದ ತೆಳುವಾದ ಉಗುರು, ಚಂಚಲವಾದ ಕಣ್ಣುಗಳು–ಇವುಗಳಿಂದ ಆಕರ್ಷಕನಾಗಿದ್ದು ಇಂದ್ರಜಾಲಿಗನೊಬ್ಬನು ಆ ಕ್ಷಣದಲ್ಲಿ ನಟನೆಯನ್ನು ಮಾಡಲು ಹಿಂದಿನಿಂದಲೇ ಬಂದನು. ೧೧೧. ಎಡಗಾಲಿಗೆ ಬಳೆ, ಕಿವಿಗೆ ಬಾವುಲಿ, ಸೊಗಸಾದ ಆಡಂಬರದ ನಡಗೆ. 'ನೋಡುವುದಾದರೆ ಜಗತ್ತನ್ನು ಅಂಗೈಯಲ್ಲಿ ತೋರಿಸುವೆನು' ಎಂಬ ಮಾತು. ಇವುಗಳಿಂದ ಅಚ್ಚುಕಟ್ಟಾಗಿ ಪ್ರಕಾಶಿಸುವ ಇಂದ್ರಜಾಲಿಗನು ಬಂದನು. ವ॥ ಹೀಗೆ ಅದ್ಭುತಾಕಾರವುಳ್ಳ ಇಂದ್ರ ಜಾಲಿಗನೊಬ್ಬನು

ಕಂ॥ ತೇಜೋಮಯನಂ ಲಕ್ಷಣ
ಪೂಜಿತನಂ ಸಕಲಗುಣಗಣಾಲಂಕೃತನಂ
ರಾಜೀವನೇತ್ರನಂ ಯುವ
ರಾಜನನಾ ಧೂರ್ತನತಿಶಯಂ ಮಿಗೆ ಪೊಗೞ್ದಂ ೧೧೨

ವ॥ ಅಂತು ಪೊಗೞ್ದು ಕೊಂಡಾಡಿಯಿಂದ್ರಜಾಲಿಗನಂ ಮೃದುಸಂಭಾಷಣದಿಂ ಮನ್ನಿಸಿ ಯುವರಾಜಂ ಕುಳ್ಳಿರಲ್ವೇೞ್ಪುದುಂ

ಉ॥ ಚಿತ್ತವಧಾರು ರಾಜಪರಮೇಶ್ವರ ಲೋಕದೊಳುಳ್ಳ ಸೋಜಿಗಂ
ಬಿತ್ತರವಾಗಲೆನ್ನ ಹರಿಮೇಖಲ ವಿದ್ಯಮನಿಲ್ಲಿ ತೋರ್ಪೆನೊ
ಲ್ದಿತ್ತುದೆ ಕೋಟಿ ದೇವ ಪರಿಭಾವಿಪುದೆಂದೊಸೆದಿಂದ್ರಜಾಲಿಗಂ
ಬೆತ್ತದ ಕಾವಿನಿಂದೆಸೆವ ಕುಂಚಮನೊಯ್ಯನೆ ನೀವುತಿರ್ಪಿನಂ ೧೧೩

ಚಂ॥ ಜನಪತಿಯಿಂದ್ರಜಾಲಿಗನ ವಿದ್ಯೆಗೆ ಚಿತ್ತಮನೀಯದಾತನೊ
ಳ್ಪಿನ ಮೃದುಚಾಟು ವಾಕ್ಯತತಿಯಂ ಮಿಗೆ ಕೇಳದೆ ಸೋಪಚಾರದಿಂ
ವಿನಯಮನಾತನೊಳ್ ಮೆಱೆವುದರ್ಕೆ ಮನಂಬುಗದಿರ್ದನೆಂದೊಡೇ
ಕೆನಲತಿದುಃಖಿತೇಮನಸಿ ಸರ್ವಮಸಹ್ಯಮಃದೆಂಬ ಕಾರಣಂ ೧೧೪

ವ॥ ಅಂತಿರ್ದುಮತ್ತಂ

ಬಂದು ರಾಜವಾಹನನನ್ನು ಕಂಡು—೧೧೨. ಆ ಧೂರ್ತನಾದ ಇಂದ್ರ ಜಾಲಿಗನು ತೇಜೋಮಯನಾದ, ಸಲ್ಲಕ್ಷಣಗಳಿಂದ ಕೂಡಿದ, ಸಕಲ ಗುಣಗಣಗಳಿಂದಲೂ ಕೃತ ನಾದ ಕಮಲ ನಯನನಾದ ಯುವರಾಜನನ್ನು ಅತಿಶಯವಾಗಿ ಹೊಗಳಿದನು. ವ॥ ಹಾಗೆ ಹೊಗಳಿ ಕೊಂಡಾಡಿದ ಇಂದ್ರಜಾಲಿಗನನ್ನು ಮೃದುವಾದ ಸಂಭಾಷಣೆಯಿಂದ ಗೌರವಿಸಿ ಯುವರಾಜನು ಅವನಿಗೆ ಕುಳಿತುಕೊಳ್ಳಲು ಹೇಳಿದನು. ೧೧೩. "ರಾಜ ಪರಮೇಶ್ವರ ! ದಯೆಯಿಟ್ಟು ಕೇಳು. ಲೋಕದಲ್ಲಿರುವ ಆಶ್ಚರ್ಯಗಳನ್ನೆಲ್ಲ ವಿಸ್ತಾರ ವಾಗಿ ನನ್ನ ಇಂದ್ರಜಾಲ ವಿದ್ಯೆಯಿಂದ ಇಲ್ಲಿಯೇ ತೋರಿಸುವೆನು. ದೇವ ನೀನು ಒಲಿದು ಕೊಟ್ಟುದೇ ನನಗೆ ಕೋಟಿ ಹೊನ್ನು, ನೋಡು" ಎಂದು ಹೇಳುತ್ತಾ ಇಂದ್ರಜಾಲಿಗನು ಬೆತ್ತದ ಕಾವಿನಿಂದ ಪ್ರಕಾಶಿಸುವ ಕುಂಚವನ್ನು ನೆಟ್ಟಗೆ ಕೈಯ್ಯಿಂದ ನೀವಿದನು. ೧೧೪. ರಾಜನು ಇಂದ್ರಜಾಲಿಗನ ವಿದ್ಯೆಗೆ ಮನಸ್ಸುಕೊಡಲಿಲ್ಲ. ಆತನ ಮೃದುವಾದ ಪ್ರಿಯ ವಾದ ಮಾತುಗಳನ್ನು ಕೇಳಲು ಇಷ್ಟವಿರಲಿಲ್ಲ. ಉಪಚಾರದಿಂದ ಆತನಲ್ಲಿ ವಿನಯ ವನ್ನು ತೋರಿಸಲು ಮನಸ್ಸುಮಾಡಲಿಲ್ಲ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಅತಿ ದುಃಖವುಳ್ಳವರ ಮನಸ್ಸಿಗೆ ಯಾವುದೂ ಹಿಡಿಸುವುದಿಲ್ಲವಲ್ಲವೇ ? ವ॥ ಹಾಗಿದ್ದರೂ

ಕಂ॥ ಎರೆವರ್ ತಮ್ಮಯ ಬಡತನ
ದಿರವಿಂಗೆ ತೊೞಲ್ವರಲ್ಲದವರ್ಗಳ್ ಮತ್ತೆ
ಲ್ಲರ ಸುಖದುಃಖದ ಹದನಂ
ಪರಿಕಿಸಿದೊಡೆ ಸಂಮುದಂ ಧರಿತ್ರೀ ತಳದೊಳ್ ೧೧೫

ತೊಳತೊಳತೊಳಗುವ ಮುಕ್ತಾ
ವಳಿಯಿಂ ಮಾಣಿಕದಿನಿಳಿಗೆರಂಜಿಸುವೇಕಾ
ವಳಿಯಂ ಮಾಯಾವಿಗೆ ಭೂ
ತಳನಾಥಂ ಕೊಟ್ಟನವನ ಬಡತನಮುಡಗಲ್ ೧೧೬

ವ॥ ಅಂತು ಕುಡಲೊಡಂ

ಮ॥ ಅರರೇ! ದಾನವಿನೋದಿ ಜಾಗು! ಭಲರೇ! ಸನ್ಮಾನಮಾಂಧಾತ ಭಾ
ಪುರೆ! ವಿದ್ವಜ್ಜನ ಕಲ್ಪವೃಕ್ಷ ಮಝುಪೂತು! ಖ್ಯಾತನಿರ್ಧೂತಖೇ
ಚರ ಮಾಮಾ! ಕಲಿಕಾಲಕರ್ಣ ಎನುತುಂ ಮೆಯ್ವೆರ್ಚೆ ತಜ್ಜಾಲಿಕಂ
ಧರಣೀವಲ್ಲಭನಂ ಪೊಗೞ್ದನೊಲವಿಂ ಸಂತೋಷಮೇಗೆಯ್ಯದೋ ೧೧೭

ವ॥ ಅಂತು ಪೊಗೞ್ದು ಮಗುಳ್ದರಸನ ಮೊಗಮಂ ನೋಡಿ ಇಂದ್ರಜಾಲಿಗನಿಂತೆಂದಂ

ದೇವರ ಮೊಗದೊಳ್ ಚಿಂತಾ
ಭಾವಂ ನೆಲೆಗೊಂಡು ತೋಱಿದಪುದೆನ್ನೊಳಿದ
ಕ್ಕಾವುದು ಕಾರಣಮೆಂಬುದ
ನೋವದೆ ಬೆಸಸಲ್ಕೆ ವೇೞ್ಕುಮೆನಗನುನಯದಿಂ ೧೧೮

ಮತ್ತೆ. ೧೧೫. ದಾನಮಾಡುವವರು ತಮ್ಮ ಬಡತನದ ಸ್ಥಿತಿಗಾಗಿ ದುಃಖಿಸುತ್ತಾರೆ. ಆದರೆ ಅವರು ಉಳಿದೆಲ್ಲರ ಸುಖದುಃಖದ ವಿಚಾರಗಳನ್ನು ವಿಮರ್ಶಿಸಿದರೆ ಈ ಭೂಲೋಕದಲ್ಲಿ ಆನಂದವೇ ಇರುತ್ತದೆ. ೧೧೬. ಮಹಾರಾಜನು ವಿಶೇಷವಾಗಿ ಪ್ರಕಾಶಿಸುವ ಮುತ್ತಿನ ಎಳೆಗಳಿಂದಲೂ ಮಾಣಿಕ್ಯಗಳಿಂದಲೂ ರಂಜಿಸುವ ಒಂದು ಏಕಾವಳೀ ಹಾರವನ್ನು ಆ ಮಾಯಾವಿಗೆ ಕೊಟ್ಟನು. ಅದರಿಂದ ಅವನ ಬಡತನವು ತೊಲಗಿತು. ವ॥ ಹಾಗೆ ಕೊಡಲು ಕೂಡಲೇ ಇಂದ್ರಜಾಲಿಗನು. ೧೧೭. "ಅರರೇ ! ದಾನದಿಂದ ವಿನೋದ ಪಡೆಯುವವನೆ ! ವೃದ್ಧಿಯನ್ನು ಹೊಂದು ಭಲರೇ ! ಸನ್ಮಾನಮಾಡುವವರಲ್ಲಿ ಮಾಂಧಾತ ಮಹಾರಾಜ ಸದೃಶನೇ ! ಭಾಪುರೆ ! ವಿದ್ವಾಂಸರಿಗೆ ಬೇಡಿದುದನ್ನೀಯುವ ಕಲ್ಪವೃಕ್ಷ ! ಮಝು ! ಪೂತು ! ಪ್ರಸಿದ್ಧರಾದ ದೇವತೆಗಳನ್ನು ಮೀರಿಸಿದವನೆ ! ಕಲಿಯುಗದ ಕರ್ಣ !" ಹೀಗೆ ಆ ಇಂದ್ರಜಾಲಿಕನು ಹರ್ಷದಿಂದ ಉಬ್ಬಿ ಮಹಾರಾಜನನ್ನು ಪ್ರೀತಿಯಿಂದ ಹೊಗಳಿದನು. ಸಂತೋಷವು ಏನನ್ನು ತಾನೇ ಮಾಡಿಸದು ? ವ॥ ಹಾಗೆ ಹೊಗಳಿ ಮತ್ತೆ ಅರಸನ ಮುಖವನ್ನು ನೋಡಿ ಇಂದ್ರಜಾಲಿಕನು ಹೀಗೆಂದನು. ೧೧೮. "ಸ್ವಾಮಿಯ ಮುಖದಲ್ಲಿ ಒಂದು ಚಿಂತಾಭಾವವು ನೆಲೆನಿಂತು ತೋರುತ್ತಿದೆ. ಇದಕ್ಕೆ ಕಾರಣವು ಯಾವುದು' ಎಂಬುದನ್ನು ಸಂಕೋಚಪಡದೆ ನನಗೆ

ವ। ಎಂದೊಡರಸಂ ವಿಕಸಿತಮುಖಾರವಿಂದನಾಗಿ

ಕಂ॥ ಎನ್ನಿಂಗಿತಭಾವಮನಱಿ
ಪುನ್ನತಮತಿ ನಿನ್ನ ತೆಱದಿನಾವವನದಱಿಂ
ದಿನ್ನೆನಗೆ ಮಿತ್ರನೈಯೆನ
ಗನ್ನಿನಗಲ್ತೆಂದು ನೃಪಕುಮಾರಂ ಪೊಗೞ್ದಂ ೧೧೯

ವ॥ ಅಂತು ಮನೋಗತ ಭಾವಮನೆಂದ ಕಾರಣದಿಂ ಯುವರಾಜನಾತನಂ ಸ್ತೋತ್ರಂ ಮಾಡಿ ಎನ್ನ ಚಿಂತೆಯ ಕಾರಣಮಂ ಕೇಳೆಂದು

ಮ॥ ಅಲರ್ಗಣ್ ಬಿಂಬಾಧರಂ ನಿರ್ಮಲಮುಕುರಕಪೋಲಂ ಸುವೃತ್ತಸ್ತನಂ ಕ
ಲ್ಪಲತಾ ಬಾಹುದ್ವಯಂ ಬಂಧುರತರತನುಮಧ್ಯಂ ಸಮುದ್ಯನ್ನಿತಂಬ
ಸ್ಥಲಮುಭ್ರಾಕಾರವೇಣೀಭರಮತಿಮುದಮಂ ಕಣ್ಗೆ ಬೀರುತ್ತಿರಲ್ ಕೋ
ಮಲೆಯೊರ್ವಳ್ ನಿನ್ನೆ ಬಂದೆನ್ನಿದಿರೊಳ್ ಸೊಬಗಂ ತೋಱಿ ಪೋದಳ್
ಮನೋಜ್ಞಾ ೧೨೦

ವ॥ ಅಂತು ಸಾಭೌಗ್ಯಸಾರಮಂ ಸೂರೆಗೊಳ್ವ ನೀಱೆ ಸುೞಿವುದುಂ

ಕಂ॥ ಆ ವಧುವಂ ಕಾಣಲೊಡಂ
ಭಾವೋದ್ಭವನೆನ್ನನೆಯ್ದೆ ತನ್ನೊಲ್ಮೆಯ ಬಾ
ಣಾವಳಿಯೊಳ್ ಸುಡುತಿರ್ದಪ
ನೇವೆಂ ಚಿಂತಿಸಿ ಪೇೞ್ ಪರಾರ್ಥಚರಿತ್ರಾ ೧೨೧

ನ್ಯಾಯವಾಗಿ ತಿಳಿಸಬೇಕು.” ವ॥ ಎಂದು ಹೇಳಲು ರಾಜನ ಮುಖಕಮಲವು ಅರಳಿತು. ೧೧೯. ನನ್ನ ಮನಸ್ಸಿನಲ್ಲಿಡಗಿರುವ ಭಾವಗಳನ್ನು ತಿಳಿದುಕೊಳ್ಳಬಲ್ಲ ಉನ್ನತವಾದ ಮತಿಯುಳ್ಳ ನಿನ್ನಂಥವರು ಬೇರೆ ಯಾರಿದ್ದಾರೆ. ಇನ್ನು ನೀನು ನನಗೆ ಮಿತ್ರನು. ನನಗೂ ನಿನಗೂ ವ್ಯತ್ಯಾಸವಿಲ್ಲ” ಎಂದು ರಾಜಕುಮಾರನು ಅವನನ್ನು ಹೊಗಳಿದನು. ವ॥ ಮನೋಗತವಾದ ಭಾವವನ್ನು ಹೇಳಿದುದರಿಂದ ಯುವರಾಜನು ಆತನನ್ನು ಹೊಗಳಿ ತನ್ನ ಚಿಂತೆಗೆ ಕಾರಣವನ್ನು ಹೇಳಿದನು. ೧೨೦. “ಮನೋಜ್ಞನಾದ ಮಿತ್ರನೆ, ನಿನ್ನೆ ಕೋಮಲೆಯೊಬ್ಬಳು ನನ್ನಿದಿರಿನಲ್ಲಿ ಬಂದು ತನ್ನ ಸೊಬಗನ್ನು ತೋರಿಸಿ ಹೋದಳು. ಅವಳ ಕಂಗಳು ಹೂವಿನ ಹಾಗಿದ್ದುವು. ತುಟಿ ತೊಂಡೆಹಣ್ಣಿನಂತಿತ್ತು. ಅವಳ ಕೆನ್ನೆಯು ನಿರ್ಮಲವಾದ ಕನ್ನಡಿಯಂತೆ ಹೊಳೆಯುತ್ತಿತ್ತು ! ಸ್ತನಗಳು ದುಂಡಗಿದ್ದುವು. ತೋಳುಗಳೆರಡು ಕಲ್ಪಲತೆಗೆ ಸಮವಾಗಿದ್ದುವು. ಸೊಂಟ ಅತಿ ಸುಂದರವಾಗಿದ್ದಿತು, ನಿತಂಬಸ್ಥಳವು ಉನ್ನತವಾಗಿತ್ತು. ವೇಣೀಭಾರವು ಮೋಡದಂತೆ ಕಂಗಳಿಸಿತು. ಇವೆಲ್ಲವೂ ಕಂಗಳಿಗೆ ಆನಂದವನ್ನುಂಟುಮಾಡುತ್ತಿದ್ದುವು. ವ॥ ಹಾಗೆ ಸೌಭಾಗ್ಯದ ಪಾತವನ್ನು ಸೂರೆಗೊಳ್ಳುವ ರಮಣಿಯು ಸುಳಿದಳು. ೧೨೧. ಪರೋಪಕಾರಿಯೆ ! ಆ ವಧುವನ್ನು ನೋಡಿದ ಕೂಡಲೆ ಮನ್ಮಥನು ತನ್ನ ಪ್ರೀತಿಯ ಬಾಣ

ವ॥ ಎಂದರಸಂ ಪೇಳ್ವುದುಮಾ ಜಾಲಿಕನಿಂತೆಂದಂ

ಕಂ॥ ಸುರದನುಜ ಮನುಜ ಗಂಧ
ರ್ವರನೊರ್ವೆದಲೆಯ್ದೆ ಸೋಲಿಸುವ ಸತಿಯರನ
ಚ್ಚರಿಯಿನಲೆನ್ನಯ ವಿದ್ಯಾ
ಪರಿಣತೆಯಿಂ ಕ್ಷಣಕೆ ಮೋಹಿಪೆಂ ನೃಪತಿಲಕಾ ೧೨೨

ವ॥ ಎಂದು ಮತ್ತಂ

ಕಂ॥ ಇನಿತೊಂದು ಚಿಂತೆಯೇಕೆಂ
ದನುನಯದಿಂ ನನಗೆ ಮದುವೆಯಂ ಮಾಡುವೆನಾ
ವನಿತೆಯನೆನ್ನಯ ವಿದ್ಯಾ
ವಿನೋದಮಂ ನೋಡೆನುತ್ತೆ ಚಿತ್ತಂಬಡೆದಂ ೧೨೩

ಇವಳಳವೆ ದೇವಗಂಧ
ರ್ವ ವಿಳಾಸಿನಿಯರ್ಕಳಂ ಕ್ಷಣಾರ್ಧದಿನಿಂತೀ
ಭುವನಕ್ಕೆ ತಂದು ನಿನ್ನೊಳ್
ವಿವಾಹಮಂ ಮಾೞ್ಪೆನೆನ್ನ ವಿದ್ಯಾಬಲದಿಂ ೧೨೪

ವ॥ ಅದು ಮಾಣ್ದೊಡಮೀಯವಂತಿ ಸೌಂದರಿಯಂ ನಿನಗೆ ಮಾೞ್ಪುದರಿದಲ್ತೆಂಬ ಮಾತಂ ಕುಮಾರಂ ಕೇಳ್ದು ಸಚೇತನನಾಗಿ ಮತ್ತಮಿಂತೆಂದಂ

ಕಂ॥ ಮಣಿಮಾಡದೊಳಾಕೆ ಬಹಿ
ರ್ವಣದೊಳ್ ತಾನಿರ್ದು ಸಂಗಮಂ ದೊರಕುವ ಕಾ
ರಣಮೆಂತು ಪೇೞನಲ್ ಸ
ದ್ಗುಣಿಮಾಯಾಜಾಲಿಕಂ ನಗುತ್ತಿಂತೆಂದಂ ೧೨೫

ಗಳಿಂದ ನನ್ನನ್ನು ಸುಡುತ್ತಿದ್ದಾನೆ. ಚಿಂತಿಸಿದೆ ಏನುಮಾಡಲಿ ? ನೀನೇ ಹೇಳು. ವ॥ ಎಂದು ಅರಸನಿಗೆ ಇಂದ್ರಜಾಲಿಕನು ಹೀಗೆ ಉತ್ತರಗೊಟ್ಟನು, ೧೨೨. "ನೃಪತಿಲಕ, ದೇವತೆಗಳು ದನುಜರು, ಮನುಜರು, ಗಂಧರ್ವರು ಇವರನ್ನು ಸೋಲಿಸುವ ಸತಿಯರನ್ನೂ ಕೂಡ ಆಶ್ಚರ್ಯಕರವಾದ ರೀತಿಯಲ್ಲಿ ನನ್ನ ವಿದ್ಯಾತಿಶಯದಿಂದ ಮೋಹಗೊಳಿಸುವೆನು ! ವ॥ ಎಂದು ಹೇಳಿ ಮತ್ತೆ ೧೨೩. "ಇಷ್ಟು ಚಿಂತೆಯನ್ನೇಕೆ ಮಾಡಬೇಕು. ಉಪಾಯದಿಂದ ನಿನಗೂ ಆ ಹೆಂಗಸಿಗೂ ಮದುವೆಮಾಡಿಸುವೆನು. ನನ್ನ ವಿದ್ಯಾವಿನೋದವನ್ನು ನೋಡು ! ಎಂದು ಹೇಳಿ ಅದಕ್ಕೆ ಮನಸ್ಸುಮಾಡಿದನು. ೧೨೪. "ಇವಳೇನು ! ದೇವಗಂಧರ್ವ ಸ್ತ್ರೀಯರನ್ನೂ ಕೂಡ ಕ್ಷಣಾರ್ಧದಲ್ಲಿ ಈ ಭೂಲೋಕಕ್ಕೆ ತಂದು ನನ್ನ ವಿದ್ಯಾಬಲದಿಂದ ನಿನಗೆ ಮದುವೆಮಾಡಿಸುವೆನು. ವ॥ ಅದು ತಪ್ಪಿದರೂ ಈ ಅವಂತಿ ಸೌಂದರಿಯನ್ನು ನಿನಗೆ ಕೊಟ್ಟು ಮದುವೆ ಮಾಡುವುದೇನೂ ಕಷ್ಟವಲ್ಲ ! ಎಂಬ ಮಾತನ್ನು ಕೇಳಿ ಕುಮಾರನು ಎಚ್ಚೆತ್ತು ಮತ್ತೆ ಹೇಳಿದನು—೧೨೫. 'ಮಣಿಖಚಿತವಾದ ಭವನದಲ್ಲಿ ಅವಳು ! ನಗರದ ಬಹಿರುದ್ಯಾನದಲ್ಲಿ ನಾನು, ಹೀಗಿರುವಾಗ

ಕಂ॥ ಮಣಿ ಮಂತ್ರೌಷಧಿ ನಿಚಯದ
ಗುಣದಿಂದಂ ಸಾಧ್ಯವಾಗದಿರದಾವುದು ತತ್
ಕ್ಷಣದೊಳ್ ತೋರ್ಪೆಂ ನಿನಗೆ
ನ್ನಣಕದ ವಿದ್ಯಾ ವಿನೋದದೊಳ್ ಕಾಮಿನಿಯಂ ೧೨೬

ವ॥ ಎಂದಾಂ ನಾಳೆಯವಂತೀಶ್ವರನಂ ಕೇಳಿಸಲ್ ಪೋಪಲ್ಲಿ

ಕಂ॥ ಭೂನಾಥ ನೀನುಮೊಲವಿಂ
ದಾನೆರವಿಯೊಳಱಿಯದಂತು ಬಂದಿರ್ಪುದು ಮ
ತ್ತಾನಾಗಳೇನನೆಸಗುವೆ
ನೇನತಿಶಯಮಂ ನೆಗಳ್ಚುವೆಂ ನೀಂ ಕಾಣ್ಬೈ ೧೨೭

ವ॥ ಎಂದಿಂದ್ರಜಾಲಿಗಂ ಕಳಿಪಿಸಿಕೊಂಡು ಅವಂತೀಶ್ವರನರಮನೆಗೆ ಪೋಗಿ ಬಾಗಿಲೊಳಿರ್ದು ಅರಸಂಗೆ ಪೇಳ್ದಟ್ಟುವುದುಂ ಆತನಾ ಮಱುದಿವಸಂ ಕಾರಾಗೃಹ ನಿರ್ಬಂಧದಾಲಸ್ಯಂ ಪರಿಹರಿಸಲೆಂದವನಂ ಬರಿಸೆಂದಂ ಇತ್ತಲ್

ಕಂ॥ ಅಮರ್ದಿಂದ್ರಜಾಲವಿದ್ಯಾ
ಕ್ರಮಮನಪೂರ್ವಂ ದಲೆನಿಸುವಾಶ್ಚರ್ಯ ವಿನೋ
ದಮನೊಸೆದು ನೋಡಲೊಪ್ಪುವ
ಕುಮಾರಿಯಂ ಕರೆಯಿಮೆಂದನಾ ಭೂಪಾಲಂ ೧೨೮

ವ॥ ಅಂತವಂತೀಶ್ವರನವಂತಿ ಸೌಂದರಿಯುಂ ಕರೆಯಿಸಲೊಡಂ

ನಮ್ಮಿಬ್ಬರಿಗೂ ಸಂಗಮವು ಆಗುವ ಪರಿ ಹೇಗೆ ? ಹೇಳು.' ಇದನ್ನು ಕೇಳಿ ಗುಣಶಾಲಿಯಾದ ಮಾಯಾಜಾಲಿಕನು ನಗುತ್ತ ಹೀಗೆ ಹೇಳಿದನು. ೧೨೬. ಮಣಿ ಮಂತ್ರ ಔಷಧಿ ಇವುಗಳ ಸಹಾಯದಿಂದ ಆಗದೇ ಇರುವ ಕೆಲಸವೇನಿದೆ ? ಈ ಕೂಡಲೆ ನನ್ನ ಮಾಯಾ ವಿದ್ಯೆಯ ಪ್ರಭಾವದಿಂದ ಕಾಮಿನಿಯನ್ನು ತೋರಿಸುವೆನು. ವ॥ ನಾನು ನಾಳೆ ಅವಂತೀ ರಾಜನನ್ನು ವಿಚಾರಿಸಲು ಹೋಗುವೆನು. ಅಲ್ಲಿ ೧೨೭. ಭೂನಾಥ ! ನೀನೂ ಪ್ರೀತಿಯಿಂದ ಯಾರಿಗೂ ತಿಳಿಯದಂತೆ ಬಂದು ಆ ಗುಂಪಿನಲ್ಲಿ ಸೇರಿಕೊಂಡಿರು. ಆಗ ನಾನು ಏನು ಮಾಡುವೆನು ? ಏನೇನು ಆಶ್ಚರ್ಯಗಳನ್ನು ನಡೆಸುವೆನು ಎಂಬುದನ್ನು ನೀನೇ ನೋಡುವೆ." ವ॥ ಎಂದು ಹೇಳಿ ಇಂದ್ರಜಾಲಿಗನು ಯುವರಾಜನನ್ನು ಬೀಳ್ಕೊಂಡನು. ಆಮೇಲೆ ಅವಂತೀಶ್ವರನ ಮನೆಗೆ ಹೋಗಿ ಬಾಗಿಲಿನಲ್ಲಿ ನಿಂತು ಒಳಕ್ಕೆ ಹೇಳಿ ಕಳುಹಿಸಿದನು. ಆತನು ಮಾರನೆಯ ದಿವಸ ಕಾರಾಗೃಹದ ಬಂಧನದಿಂದಾದ ಆಲಸ್ಯವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಅವನನ್ನು ಒಳಕ್ಕೆ ಕರೆಯಿಸಿದನು. ಇತ್ತ— ೧೨೮. "ಅಪೂರ್ವವಾದ ಆಶ್ಚರ್ಯಕರವಾದ ಇಂದ್ರಜಾಲ ವಿದ್ಯೆಯ ರೀತಿಯನ್ನು ನೋಡಿ ವಿನೋದಗೊಳ್ಳಲು ರಾಜಕುಮಾರಿಯನ್ನು ಕರೆಯಿರಿ" ಎಂದು ಅವಂತಿ ಭೂಪಾಲನು ಹೇಳಿದನು. ವ॥ ಅವಂತಿರಾಜನು ಹೀಗೆ ಹೇಳಿ ಅವಂತಿ ಸೌಂದರಿ

ಉ॥ ಅಂಗಜತಾಪದಿಂ ಕೊಱಗಿದಬ್ಜಮುಖಂ ಪರೆದಿರ್ದ ನುಣ್ಗೊರಲ್
ತುಂಗ ಕುಚಂಗಳೊಳ್ ತೆಗಳಿಗೊಂಡ ಲಸನ್ಮಳಯೋದ್ಭವಂ ಬೆಳ
ರ್ದಂಗಮುರೋಂತದೊಳ್ ತಳಿದ ಕರ್ಪುರದಣ್ಮೆಯ ರೇಣು ರಂಜಿಸಿ
ರ್ದಂಗನೆ ಕಾಮದೇವನೆಡೆಯಾಡಿಪ ಪುತ್ರಿಕೆಯಂತಿರೆಯ್ದಿದಳ್ ೧೨೯

ವ॥ ಅಂತು ವಿರಹಾನಳದಂದಹ್ಯಮಾನ ಹೃದಯೆಯಾದ ಕುಮಾರಿ ಬಂದು ತನ್ನ ತೊಡೆಯ ಮೇಲೆ ಕುಳ್ಳಿರ್ಪುದುಂ

ಕಂ॥ ಪುಲಿದೊವಲ ಜೋಗವಟ್ಟಿಗೆ
ತೊಳಗುವ ಸೆಳ್ಳುಗುರು ಮಿಂಚು ಮಾಯದ ಕುಂಚಂ
ನೆಲನನಲೆವುಡಿಗೆ ರಂಜಿಸೆ
ನಲವಿಂ ಮಾಯಾವಿಯೆಯ್ದಿದಂ ನೃಪಸಭೆಯಂ ೧೩೦

ತ್ರಿಜಗನ್ಮೋಹನ ತಿಲಕಂ
ನಿಜದಿಂ ಬಲಗಿವಿಯೊಳುಲಿವ ಬಾವುಲಿ ಕೈಯೊಳ್
ವಿಜಯಕ್ಕೆ ನೆಗಪಿದುದ್ಯ
ದ್ಧ್ವಜವೊಪ್ಪಲ್ ಬಂದನಲ್ಲಿಗಾಕಾಪಟಿಕಂ ೧೩೧

ವ॥ ಅಂತು ಬಂದು

ಯನ್ನು ಕರೆಯಿಸಿದನು. ೧೨೯. ಆಗ ಕಾಮತಾಪದಿಂದ ರಾಜಕುಮಾರಿಯ ಕಮಲಮುಖವು ಬಾಡಿದೆ. ಅಂದವಾದ ಕೊರಳು ಕೃಶವಾಗಿದೆ. ಶ್ರೀಗಂಧದ ಲೇಪವು ಎತ್ತರವಾದ ಸ್ತನಗಳ ಮೇಲೆ ಹರಡಿದೆ. ಮೈಬಿಳಿಚಿಕೊಂಡಿದೆ. ಹೊಟ್ಟೆಯ ಸುತ್ತಲೂ ಹಚ್ಚಿದ ಕರ್ಪೂರದ ಲೇಪದ ರೇಣುಗಳು ರಂಜಿಸುತ್ತವೆ. ಇವುಗಳಿಂದ ರಂಜಿಸುವ ರಾಜಕುಮಾರಿಯು ಕಾಮದೇವನು ಆಡಿಸುವ ಬೊಂಬೆಯಂತೆ ಬಂದಳು. ವ॥ ಹೀಗೆ ವಿರಹಾಗ್ನಿಯಿಂದ ಹೃದಯವು ಸುಡುತ್ತಿದ್ದ ರಾಜಕುಮಾರಿಯು ಬಂದು ತಂದೆಯ ತೊಡೆಯ ಮೇಲೆ ಕುಳಿತುಕೊಂಡಳು. ಅರಸನು ಇಂದ್ರಜಾಲಿಗನನ್ನು ಆಸ್ಥಾನಕ್ಕೆ ಕರೆಯಿಸಿದನು. ೧೩೦. ಹುಲಿಯ ತೊಗಲನ್ನು ಹೊದ್ದುಕೊಂಡು ಯೋಗದಂಡವನ್ನು ಹಿಡಿದುಕೊಂಡು, ಹೊಳೆಯುವ ನೀಳವಾದ ಉಗುರು, ಮಿಂಚುವ ಮಾಯದಕುಂಚ, ನೆಲದ ಮೇಲೆಳೆಯುವ ಉಡಿಗೆ–ಇವುಗಳಿಂದ ರಂಜಿಸುವ ಮಾಯಾವಿಯು ರಾಜಸಭೆಗೆ ಬಂದನು. ೧೩೧. ಮೂರು ಲೋಕಗಳನ್ನೂ ಮೋಹಿಸುವವರಲ್ಲಿ ಬಲ್ಲಿದನಾದ ಮಾಯಾವಿಯು ಅಲ್ಲಿಗೆ ಬಂದನು. ಅವನ ಬಲಗಿವಿಯಲ್ಲಿ ಸದ್ದುಮಾಡುವ ಬಾವುಲಿಯು ರಂಜಿಸಿತು. ಕೈಯಲ್ಲಿ ವಿಜಯಗಳಿಸಲು ಮೇಲೆತ್ತಿದ ಧ್ವಜವನ್ನು ಹಿಡಿದಿದ್ದನು. ವ॥ ಹಾಗೆ

ಕಂ॥ ಅಂದಂಬಡೆದಾರ್ಭಟೆಯಿಂ
ನಿಂದುಗುರ್ಗಳ ಬೆಳಗು ದೆಸೆಗೆ ಪಸರಿಸೆ ಕರಮಂ
ಚಂದಂ ಬಡೆದಿರಲೆತ್ತಿದ
ನಂದು ಮಹೇಂದ್ರಪ್ರಸಾದಮೆಂದಾಧೂರ್ತಂ ೧೩೨

ವ॥ ಅಂತೆಂದು ಮತ್ತಂ

ಧಿಗಧಿಪರಂ ಸರೋಜಭವನಂ ಹರನಂ ಹರಿಯಂ ಸುರೇಂದ್ರನೋ
ಲಗಮನಿಂತೆಂದು ಮೂರ್ತಿಗಳನಷ್ಟ ವಸುಸ್ಥಿತಿಯಂ ಗ್ರಹಂಗಳಂ
ಗಗನ ತರಂಗಿಣೀ ವಿಭವಮಂ ಸುರಕಾಂತೆಯರಂ ನಿರೀಕ್ಷಿಸಿ
ಲ್ಲಿಗೆ ತರಲಾರ್ಪೆನೆನ್ನಧಿಕ ವಿದ್ಯೆಯನೆಂದನೊಜಿಲ್ದು ಜಾಲಿಕಂ ೧೩೩

ವ॥ ಎಂಬುದುಮವಂತೀಶ್ವರಂ ವಿಸ್ಮಯಂಬಟ್ಟು—ಆದೊಡೆ ನಿನ್ನ ವಿದ್ಯಾ ವಿನೋದಮಂ ಪ್ರಕಟಿಸೆಂಬುದುಂ

ಕಂ॥ ಅಲರ್ಗಣ್ಮುಗಿದಾಕಾಶಮ
ನೊಲೆದೊಯ್ಯನೆ ನೋಡಿ ತುಟಿಗಳಂ ಮಿಡುಕುತೆ ದಿ
ಗ್ವಲಯಕ್ಕೆ ಕಯ್ಗಳಂ ಮುಗಿ
ದೊಲವಿಂ ಪೊಡೆಮಟ್ಟು ಬೀಸಿದಂ ಚಾಮರಮಂ ೧೩೪

ವ॥ ಅಂತು ಚಾಮರಮಂ ಬೀಸಿ

ಮಕುಟಂ ಕೇಯೂರಕಂ ಕುಂಡಲಮೆಸೆವ ಸಹಸ್ರಾಕ್ಷನೈರಾವತಂ ದೇ
ವಕುಲಂ ವಜ್ರಾಯುಧಂ ದಿಕ್ಪತಿತತಿ ಶಚಿರಂಭಾದಿ ದೇವಾಂಗನಾಜಾ
ಲಕಮುಷ್ಪಾಶೀತಿಋಷ್ಯಾವಳಿ ಸುರುಚಿರ ಗಂಧರ್ವ ಗೀತಾಮೃತಂ ಕೌ
ತುಕಮಾಗಿರ್ಪಿಂದ್ರನೊಡ್ಡೋಲಗಮನೆಸಗಿದಂ ಧೂರ್ತಮಾಯಾಭುಜಂಗಂ ೧೩೫

ಬಂದು—೧೩೨. ಆ ಧೂರ್ತನು ಆಗ ಮಹೇಂದ್ರನ ಪ್ರಸಾದವೆಂದು ಹೇಳುತ್ತಾ ಅಂದವಾದ ರೀತಿಯಲ್ಲಿ ಕೈಯನ್ನು ಮೇಲೆತ್ತಿದನು. ಅಂದವಾಗಿ ಗರ್ಜಿಸಿದನು. ಆಗ ಅವನ ಕೈಯುಗುರುಗಳ ಕಾಂತಿಯು ಸುತ್ತ ಹರಡಿತು. ವ॥ ಹಾಗೆ ಹೇಳಿ ಮತ್ತೆ—೧೩೩. "ದಿಕ್ಪಾಲಕರು ಬ್ರಹ್ಮ, ಹರ, ಹರಿ, ಇಂದ್ರನ ಸಭೆ, ಅಷ್ಟವಸುಗಳು, ಗ್ರಹಗಳು, ಆಕಾಶ ಗಂಗೆಯ ವೈಭವ, ಅಪ್ಸರಸ್ತ್ರೀಯರು ಇವರೆಲ್ಲರನ್ನೂ ನನ್ನ ವಿಶೇಷವಾದ ಮಾಯಾ ವಿದ್ಯೆಯ ಬಲದಿಂದ ಇಲ್ಲಿಗೆ ತರಬಲ್ಲೆನು' ಎಂದು ಜಾಲಿಕನು ಘೋಷಿಸಿದನು. ವ॥ ಇದನ್ನು ಕೇಳಿ ಅವಂತಿರಾಜನು ಆಶ್ಚರ್ಯಪಟ್ಟನು. ಹಾಗಾದರೆ ನಿನ್ನ ವಿದ್ಯಾ ವಿನೋದ ವನ್ನು ಪ್ರಕಟಿಸು ಎಂದು ಹೇಳಿದನು. ೧೩೪. ಆಗ ಇಂದ್ರಜಾಲಿಗನು ಕಂಗಳನ್ನು ಮುಚ್ಚಿಕೊಂಡು ಆಕಾಶವನ್ನು ನೋಡುತ್ತಾ ತುಟಿಗಳನ್ನದಿರಿಸುತ್ತಾ ಎಲ್ಲ ದಿಕ್ಕುಗಳಿಗೂ ಕೈಮುಗಿದು ಒಲವಿನಿಂದ ನಮಸ್ಕರಿಸಿ ಚಾಮರವನ್ನು ಬೀಸಿದನು. ವ॥ ಹಾಗೆ ಚಾಮರವನ್ನು ಬೀಸಿ—೧೩೫. ಕಿರೀಟ ತೋಳು ಬಳೆ ಕುಂಡಲಗಳಿಂದ ಪ್ರಕಾಶಿಸುವ ಇಂದ್ರ, ಐರಾವತವೆಂಬ ಆನೆ, ಇಂದ್ರನರಮನೆ, ವಜ್ರಾಯುಧ, ದಿಕ್ಪಾಲಕರ ಸಮೂಹ,

ವಿಲಸದ್ಭಾಲವಿಲೋಚನಂ ಶಶಿಕಲಾಜೂಟಂ ಮರುದ್ವಾಹಿನೀ
ಲಲಿತೋತ್ತುಂಗ ಜಟಾಧರಂ ಗರಳಕಂಠಂ ಸರ್ಪಹಾರಂ ಶಿವಾಂ
ಗಲತಾಲಂಕೃತ ವಾಮಭಾಗ ನಿಭಚರ್ಮಾಚ್ಛಾದನಂ ರಂಜಿಪು
ಜ್ಜ್ವಲ ತೇಜೋಮಯಮೂರ್ತಿ ರುದ್ರನವನಂ ತಾರಾಧ್ವದೊಳ್
ತೋಱಿದಂ ೧೩೬

ಶ್ರೀವತ್ಸಂ ಕೌಸ್ತುಭಂ ಪೇರುರದೊಳೆಸೆದಿರಲ್ ಕಂಬುಚಕ್ರಂಗದಾರಾ
ಜೀವಂ ಹಸ್ತಂಗಳೊಳ್ ತಳ್ತಿರೆ ಜಘನದೊಳೊಪ್ಪಲ್ಕೆ ಪೀತಾಂಬರಂ ಸ
ದ್ಭಾವಂಬೆತ್ತಬ್ಜನೇತ್ರಂ ವಿಕಸಿತವದನಂ ರತ್ನಕೋಟೀರಕಂ ಭೃಂ
ಗೀವರ್ಣಂ ಮೆಯ್ಗೆ ಚೆಲ್ವಾದ ಸುರವಿಜಯಿಯಂ ತೋಱಿದಂ ಜಾಲಗಾಱಂ
೧೩೭

ಪರೆಯದ ಜವ್ವನಂ ತೊಲಗದಾಭರಣಂ ಸಲೆ ಮಾಸದಂಬರಂ
ತೆರಳದ ಕಾಂತಿ ಕುಂದದನುಲೇಪನಮಾಱದಲಕ್ತಕದ್ರವಂ
ಪರಿಮಳಮೋಡಿ ಬಾಡಿರದ ಪೂಮುಡಿಯೊಪ್ಪುವ ದೇವಲೋಕ ಸುಂ
ದರಿಯರನಿಂದ್ರಜಾಲಿಕನತೀವ ಮನೋಹರಮಾಗೆ ತೋಱಿದಂ ೧೩೮

ಶಚೀದೇವಿ, ರಂಭೆ ಮೊದಲಾದ ದೇವಾಂಗನೆಯರ ಗುಂಪು, ಎಂಭತ್ತೆಂಟು ಋಷಿಗಳ ಗುಂಪು, ಅತಿಸುಂದರವಾದ ಗಂಧರ್ವದ ಸಂಗೀತಾಮೃತ, ಇವುಗಳಿಂದ ಆಶ್ಚರ್ಯಕರವಾಗಿದ್ದ ಇಂದ್ರನ ಆಸ್ಥಾನವನ್ನು ಆ ಧೂರ್ತನಾದ ಮಾಯಾವಿಯಾದ ಇಂದ್ರಜಾಲಿಕನು ತೋರಿಸಿದನು. ೧೩೬. ಪ್ರಕಾಶಿಸುವ ಹಣೆಗಣ್ಣು, ಜಟೆಯ ಮೇಲೆ ಚಂದ್ರಕಲೆ, ಎತ್ತರವಾದ ಜಟಾಭಾರದ ಮೇಲೆ ಆಕಾಶಗಂಗೆಯ ವಿಲಾಸ, ಕೊರಳಿನಲ್ಲಿ ವಿಷ, ಹಾವಿನ ಹಾರ, ಎಡಭಾಗದಲ್ಲಿ ಪಾರ್ವತಿ, ಆನೆಯ ಚರ್ಮದ ಹೊದಿಕೆ, ಇವುಗಳಿಂದ ರಂಜಿಸುವ ಉಜ್ಜ್ವಲ ತೇಜೋಮಯ ಮೂರ್ತಿಯಾದ ರುದ್ರನನ್ನು ಆಕಾಶದಲ್ಲಿ ತೋರಿಸಿದನು. ೧೩೭. ಜಾಲಗಾರನು ಸುಂದರನಾದ ಅಸುರನನ್ನು ಗೆದ್ದ ಮಹಾವಿಷ್ಣುವನ್ನು ತೋರಿಸಿದನು. ಶ್ರೀವತ್ಸ ಚಿಹ್ನೆಯೂ ಕೌಸ್ತುಭ ರತ್ನವೂ ಅವನ ವಿಶಾಲವಾದ ಎದೆಯನ್ನಲಂಕರಿಸಿದ್ದಿತು. ನಾಲ್ಕು ಕೈಗಳಲ್ಲಿಯೂ ಶಂಖಚಕ್ರ ಗದೆ ಕಮಲಗಳನ್ನು ಹಿಡಿದಿದ್ದನು. ಸೊಂಟದಲ್ಲಿ ಪೀತಾಂಬರವನ್ನು ಉಟ್ಟಿದ್ದನು. ಸದ್ಭಾವದಿಂದ ಕೂಡಿದ್ದನು. ಅವನ ಮುಖವರಳಿತ್ತು. ರತ್ನಕಿರೀಟವನ್ನು ಧರಿಸಿದ್ದನು. ಅವನ ಮೈಬಣ್ಣ ದುಂಬಿಯ ಶ್ಯಾಮಲ ವರ್ಣ. ೧೩೮. ಇಂದ್ರಜಾಲಿಕನು ಅತಿ ಮನೋಹರವಾದ ರೀತಿಯಲ್ಲಿ ದೇವಲೋಕದ ಸುಂದರಿಯರನ್ನು ತೋರಿಸಿದನು. ಅವರದು ಸ್ಥಿರವಾದ ಯೌವನ, ಒಡವೆಗಳು ಸದಾ ಶರೀರದಲ್ಲಿಯೇ ಇರುತ್ತವೆ. ಬಟ್ಟೆಗಳು ಎಂದೂ ಮಾಸವು. ದೇಹದ ಕಾಂತಿ ಕಳೆದು ಹೋಗುವುದಿಲ್ಲ. ಹಚ್ಚಿದ ಗಂಧ ಕುಂದದು. ಹಚ್ಚಿದ ಅರಗಿನ ರಸ ಇದ್ದ ಹಾಗೆಯೇ ಇರುತ್ತದೆ. ಮುಡಿದ ಹೂ ಬಾಡಿ ಪರಿಮಳವನ್ನು ಕಳೆದುಕೊಳ್ಳುವುದಿಲ್ಲ;

ಸಲೆ ನಾಲ್ಕುಂ ಮೊಗದೊಳ್ ಶ್ರುತಿಪ್ರತತಿ ಪೊಣ್ಮಲ್ ಸುತ್ತಲುಂ ಸತ್ಕಳಾ
ವಲಿಗಳ್ ಕೈವಡೆದೊಪ್ಪೆಯೋಲಗದೊಳಿಂದ್ರಾದ್ಯಗ್ನ್ಯಕಂ ರಾಕ್ಷಸಂ
ಜಲಧೀಶಂ ಪವನಂ ಕುಬೇರನಹಿಭೂಷಂ ರಂಜಿಸಲ್ ಪೆಂಪುವೆ
ತ್ತೊಲವಿಂದೊಪ್ಪುವಪೂರ್ವಪದ್ಮಭವನಂ ಮಾಯಾವಿಕಂ ತೋಱಿದಂ ೧೪೯

ವ॥ ಅಂತಹಿತುಂಡಿಕನಂತೆ ಕೌಶಿಕ ವಿಳಾಸದಿಂ ಅರಣ್ಯಸ್ಥಳದಂತೆ ಸ್ಥಾಣು ಪರಿಪೂರ್ಣ ದಿಂ ಪದ್ಮಿನೀ ಜನದಂತಂಬುಜನೇತ್ರಾಭಿರಾಮದಿಂ ಸರೋವರದಂತೆ ಕಮಲಜಾತ ಸಂಪೂರ್ಣ ದಿಂ ಮಾನಸ ಸರಸಿಯಂತೆ ರಾಜಹಂಸ ಪ್ರಚಾರದಿಂ ರಣಭೂಮಿಯಂತೆ ವಿಗ್ರಹವಿತಾನದಿಂ ರೋಹಣಾದ್ರಿಯಂತೆ ವಸುವಿಸ್ತಾರದಿಂ ಪುಣ್ಯಕ್ಷೇತ್ರದಂತೆ ಪುಷ್ಕರವಾಹಿನೀವಿಭವದಿಂ ರಾಜ ಭವನದಂತೆ ನಾನಾ ಮರ್ತ್ಯಕಾಮಿನೀ ಕಮನೀಯತೆಯಿಂ ಮೆಱೆವಾಕಾಶದೊಳ್ ಭೂಲೋಕಮಂ ನೆನೆಯಿಸುತ್ತೆ ದೇವಸಂಕುಳಮಂತೋಱೆ

ಕಡೆಯೊಳ್ ತನ್ನ ನೃಪನಾರ್ತು ನೋಡುವ ಪಿತೃಭ್ರಾತೃವ್ರಜಂ ಕುಳ್ಳಿರಿ
ರ್ಪೆಡೆಯುಂ ಶಕ್ರಸಮೀಪದೊಳ್ ಪದೆಪಿನಿಂ ತೋಱಲ್ಕೆ ಸಂತೋಷವಿ
ರ್ಮಡಿಸುತ್ತಂತವರಂ ನಿರೀಕ್ಷಿಸಿ ನೃಪಂ ಹಾರೈಸುತುಂ ಮೆಚ್ಚಿ ಸಾ
ಲಿಡೆ ಕರ್ಪೂರದ ವೀಳೆಯಂಗುಡುವೆನೆಂದೆಂದಾತನಂ ನೋಡಿದಂ ೧೫೦

ಹೀಗವರು ತುಂಬ ಸುಂದರಿಯರಾಗಿದ್ದರು—೧೪೯. ಮಾಯಾವಿಯು ಅಪೂರ್ವವಾದ ಬ್ರಹ್ಮನನ್ನು ತೋರಿಸಿದನು. ಅವನ ನಾಲ್ಕು ಮುಖಗಳಿಂದ ವೇದಗಳ ಧ್ವನಿ ಬರುತ್ತಿತ್ತು. ಸುತ್ತಲೂ ಸತ್ಕಲೆಗಳ ಗುಂಪು ಕೈಕಟ್ಟಿ ನಿಂತಿದ್ದುವು. ಓಲಗದಲ್ಲಿ ಇಂದ್ರ ಅಗ್ನಿ ಯಮ ನಿಋತಿ ವರುಣ ವಾಯು ಕುಬೇರ ಈಶಾನ ಎಂಬ ದಿಕ್ಪಾಲಕರು ರಂಜಿಸುತ್ತಿದ್ದರು. ವ॥ ಹಾವಾಡಿಗನಂತೆ ಕೌಶಿಕ ವಿಲಾಸವುಳ್ಳದು-[1 ಹಾವು ಹಿಡಿಯುವ ವಿಲಾಸ 2 ಇಂದ್ರನ ವಿಲಾಸ] ಅರಣ್ಯ ಸ್ಥಳದ ಹಾಗೆ ಸ್ಥಾಣು ಪರಿಪೂರ್ಣವಾಗಿದೆ. [1 ಮೋಟುಮರ 2 ಶಿವ] ಪದ್ಮಿನೀ ಜಾತಿಯ ಸ್ತ್ರೀಜನರಂತೆ ಅಂಬುಜ ನೇತ್ರಗಳಿಂದ ಸುಂದರವಾಗಿದೆ. [1 ಕಮಲದಂಥ ಕಂಗಳು 2 ವಿಷ್ಣು] ಸರೋವರದ ಹಾಗೆ ಕಮಲ ಜಾತನಿಂದ ಪೂರ್ಣ ವಾಗಿದೆ [1 ಕಮಲಜಾತ=ಕಮಲ-ನೀರಿನಲ್ಲಿ ಹುಟ್ಟಿದ್ದು ತಾವರೆ ; ಬ್ರಹ್ಮ] ಮಾನಸ ಸರೋವರದ ಹಾಗೆ ರಾಜಹಂಸಗಳ ಸಂಚಾರವುಳ್ಳದು [1 ರಾಜಹಂಸ 2 ಚಂದ್ರ ಸೂರ್ಯ] ರಣಭೂಮಿಯ ಹಾಗೆ ವಿಗ್ರಹ ವಿತಾನದಿಂದ ಕೂಡಿದೆ [1 ಯುದ್ಧವಿಸ್ತಾರ 2 ವಿವಿಧ ಗ್ರಹಗಳ ಸಮೂಹ] ರೋಹಣ ಗಿರಿಯ ಹಾಗೆ ವಸುವಿಸ್ತಾರವುಳ್ಳದು [1 ಧನ 2 ಅಷ್ಟವಸುಗಳು] ಪುಣ್ಯಕ್ಷೇತ್ರದ ಹಾಗೆ ಪುಷ್ಕರವಾಹಿನೀ ವಿಭವವುಳ್ಳದು [1 ನೀರು ತುಂಬಿದ ನದಿ 2 ಆಕಾಶಗಂಗಾ ವಿಭವ] ರಾಜಭವನದ ಹಾಗೆ ನಾನಾ ರೀತಿಯ ಮರ್ತ್ಯ ಕಾಮಿನಿಯರ ಸೌಂದರ್ಯದಿಂದ ಕೂಡಿದೆ [1 ಮನುಷ್ಯ ಸ್ತ್ರೀಯರು 2 ಅಮರ್ತ್ಯ ಕಾಮಿನಿಯರ ಎಂದರೆ ದೇವಾಂಗನೆಯರು] ಇಂಥ ಆಕಾಶದಲ್ಲಿ ಭೂಲೋಕದ ನೆನಪು ಬರುವಂತೆ ದೇವತೆಗಳ ಗುಂಪನ್ನು ತೋರಿಸಿದನು. ೧೫೦. ಕೊನೆಯಲ್ಲಿ ಜಾಲಿಕನು ಇಂದ್ರನ ಹತ್ತಿರ ರಾಜನನ್ನು ಪ್ರೀತಿಯಿಂದ ನೋಡುತ್ತ ಕುಳಿತಿದ್ದ ಪಿತೃಭ್ರಾತೃಗಳ

ವ|| ಅಂತವಂತೀಶ್ವರಂ ತನಗೆ ವೀಳೆಯಂಗುಡುವೆನೆಂಬಾಗಳಾ ಜಾಲಿಕಂ ಮಗುಳ್ದು ಕುಂಚವಂ ಬೀಸಲ್ ನೆಱೆದ ದೇವಸಭೆಯೆಲ್ಲಂ ಪರೆದು ಪೋಗಲದರ್ಕಂ ವಿಸ್ಮಯಂಬಡುತಿರ್ದರಸನಂ ಮಾಯಾವಿಕನಿಂತೆಂದಂ

ಕಂ|| ಇನ್ನೊಂದತಿಶಯಮಂ ಪೆಂ
ಪಿನ್ನೋಡೆಲೆದೇವ ಮಾೞ್ಪೆನೆಂದು ಕಳಾಸಂ
ಪನ್ನಂಮಾಯಾಭುಜಗಂ
ಬಿನ್ನವಿಸಿದನೊಂದು ಕಾರ್ಯಮಂ ನಲವಿಂದಂ ೧೪೧

ವ|| ಅದೆಂತೆನೆ

ಕಂ|| ಕಡೆಯೊಳ್ ಮಂಗಳಕಾರ್ಯಮ
ನೊಡರ್ಚುವೆಂ ದೇವ ಕೇಳಿದೆಂತೆನೆ ನಿನ್ನೀ
ತೊಡೆಯೊಳಿಮೆಱೆವ ಕುಮಾರಿಗೆ
ಕಡುಚೆಲ್ವಪ್ಪೊಂದು ಮದುವೆಯಂ ನಯದಿಂದಂ ೧೪೨

ವ|| ಅದೊಡಂತೆಗೆಯ್ಯೆಂದರಸಂ ಪೇೞ್ದುದುಂ
ಎನ್ನ ವಿನೋದಮಂ ಪದೆದು ಚಿತ್ತವಿಸೆಂದತಿ ವೇಗದಿಂದವಂ
ತನ್ನಯ ಕುಂಚಮಂ ತಿರುಪಲಾಕ್ಷಣದೊಳ್ ಪಱೆಕಾಳೆ ತಾಳದಿಂ
ಚೆನ್ನನೆ ಮಾಯದಾಕೃತಿಯ ಪುತ್ತಳಿಗಳ್ ನೆರೆದಿರ್ದುವಂದನೇ
ಕನ್ನಟನಾಜ್ಞೆಯಿಂ ಸಭೆ ಕರಂ ಬೆಱಗಾಗಿ ಮಗುಳ್ದು ನೋೞ್ಪಿನಂ ೧೪೩

ಗುಂಪನ್ನು ತೋರಿಸಿದನು. ಅವರನ್ನು ನೋಡಿದ ಕೂಡಲೆ ರಾಜನ ಸಂತೋಷವು ಇಮ್ಮಡಿಸಿತು. ಕೂಡಲೇ ಮೆಚ್ಚಿಕೊಂಡು ಕರ್ಪೂರ ಮಿಶ್ರವಾದ ವೀಳೆಯವನ್ನು ಕೊಡಬೇಕೆಂದು ಆ ಜಾಲಿಕನನ್ನು ನೋಡಿದನು. ವ|| ಅವಂತೀಶ್ವರನು ತನಗೆ ವೀಳೆಯವನ್ನು ಕೊಡಬಯಸಿರುವದನ್ನರಿತು ಆ ಜಾಲಿಕನು ಮತ್ತೆ ಕುಂಚವನ್ನು ಬೀಸಿದನು. ಕೂಡಲೆ ನೆರೆದಿದ್ದ ದೇವಸಭೆಯೆಲ್ಲ ಮಾಯವಾಯಿತು. ಅದನ್ನು ನೋಡಿ ವಿಸ್ಮಯ ಪಡುತ್ತಿದ್ದ ಅರಸನಿಗೆ ಮಾಯಾವಿಕನು ಹೀಗೆ ಹೇಳಿದನು. ೧೪೧. "ದೇವ, ಇನ್ನೊಂದತಿಶಯವನ್ನು ವಿಶೇಷವಾದ ರೀತಿಯಲ್ಲಿ ಮಾಡಿ ತೋರಿಸುವೆನು, ನೋಡು." ಹೀಗೆ ಆ ಕಲಾಸಂಪನ್ನನಾದ ಐಂದ್ರಜಾಲಿಕನು ನಲವಿನಿಂದ ಒಂದು ಕಾರ್ಯವನ್ನು ವಿಜ್ಞಾಪಿಸಿಕೊಂಡನು. ವ|| ಅದು ಹೇಗೆಂದರೆ. ೧೪೨. "ದೇವ, ಕೊನೆಯಲ್ಲಿ ಮಂಗಳಕಾರ್ಯವೊಂದನ್ನು ನಡೆಯಿಸುವೆನು. ಅದೇನೆಂಬುದನ್ನು ಕೇಳು. ನಿನ್ನ ತೊಡೆಯ ಮೇಲೆ ಕುಳಿತಿರುವ ನಿನ್ನ ಈ ಕುಮಾರಿಗೆ ಅತಿ ಸುಂದರವಾದ ರೀತಿಯಲ್ಲಿ ಮದುವೆಯನ್ನು ಮಾಡಿಸುವೆನು." ವ|| "ಹಾಗೆಯೇ ಮಾಡು" ಎಂದು ಅರಸನು ಹೇಳಿದನು. ೧೪೩. ನನ್ನ ವಿನೋದವನ್ನು ಪ್ರೀತಿಯಿಂದ ನೋಡು ಎಂದು ಹೇಳಿ ಅವನು ಅತಿ ವೇಗದಿಂದ ತನ್ನ ಕುಂಚವನ್ನು ತಿರುಗಿಸಿದನು. ಆಕ್ಷಣದಲ್ಲಿ ಹರೆಕಹಳೆತಾಳಗಳಿಂದ ಸುಂದರವಾದ ಮಾಯದ ಬೊಂಬೆಗಳು ಕಾಣಿಸಿಕೊಂಡವು. ತಮ್ಮ ಅನೇಕ ನಟನೆಗಳಿಂದ ಸಭೆಯು ಬೆರಗಾಗಿ ಮತ್ತೆ

ವ॥ ಅಂತುಪುತ್ತಳಿಗಳನೇಕಮಂ ನಿರ್ಮಿಸಿ ಮತ್ತಮಿಂತೆಂದಂ

ಇದನೊರ್ಬರ್ ಕಂಡೆವೊರ್ಬರ್ ಮದುವೆಯನೆನಸುಂ ಕಾಣೆವೆಂದೆ
ನ್ನದೆಲ್ಲರ್ ಪದೆಪಿಂದಂ ನೋಟ್ಪುದೆಂದಾನೆರವಿಯ ಮೊಗಮಂ ನೋಡಿ ಪೇಟ್ದಂ
ತೆ ಮಾಯಾ
ಸದನಂ ತಜ್ಜಾಲಿಕಂ ಮಾಗಧ ನೃಪಸುತನಂ ಕಂಡು ಕಣ್ಣೆತ್ತಿ ಬಾಯೆಂ
ಬುದುಮಾತಂ ಗೆಂಟಱೊಳ್ ಬಂದಿರೆ ಕಳಕಳಮಂ ಮಾಡಿದಂ ಜಾಲಗಾಱಂ ೧೪೪

ಕಂ॥ ಸುದತಿಯನೆನಗಾಗಿಪೆನೆಂ
ಬುದು ಪುಸಿಯೋ ದಿಟಮೋ ಎಂಮ ಮಾಯಾವಿಯ ವಾ
ಕ್ಯದ ನೆಲೆಯನಱಿದು ಬರ್ಪೆಂ
ಪದುಳದೆನೀಂ ಚಂಪೆಯಲ್ಲಿ ಪೋಗಿರು ಕೆಳೆಯಾ ೧೪೫

ವ॥ ಎಂದು ಪುಷ್ಪೋದ್ಭವನಂ ಕಳಿಪಿ ನೆರವಿಯೊಳಿರ್ದು ತನ್ನ ಸಮೀಪಕ್ಕೆ ಬಂದ ಯುವರಾಜನಂ ಜಾಲಿಕಂ ನೋಡಿ

ಕಂ॥ ಜಾಜಾಕಾಮಾಕ್ಷಿ ಎನು
ತ್ತಾ ಜೋಗಿ ವಿಚಿತ್ರವೆನಿಪ ಮದವಣಿಗಂ ಬಂ
ದೀಜನದ ಬಗೆಗೆ ಬೆಱಗಂ
ಸೋಜಿಗಮನೆ ಮಾಟ್ಪುದೆಂದು ಚಿಟುಕಿಸಲಾಗಲ್ ೧೪೬

ಮತ್ತೆ ನೋಡುವಂತೆ ಮಾಡಿದುವು. ವ॥ ಹಾಗೆ ಅನೇಕ ಬೊಂಬೆಗಳನ್ನು ನಿರ್ಮಿಸಿ ಮತ್ತೆ ಹೀಗೆ ಹೇಳಿದನು ೧೪೪. ಈ ಮದುವೆಯನ್ನು ಒಬ್ಬರು ನೋಡಿದೆವು ಇನ್ನೊಬ್ಬರು ನೋಡಲಿಲ್ಲವೆಂದು ಆಮೇಲೆ ಹೇಳಬೇಡಿರಿ. ಎಲ್ಲರೂ ಚೆನ್ನಾಗಿ ನೋಡಿರಿ." ಎಂದು ಮಾಯಾವಿಯು ಆ ಗುಂಪನ್ನು ನೋಡಿ ಹೇಳಿದನು. ಮತ್ತು ಮಗಧ ರಾಜಕುಮಾರನಿಗೆ ಎಲ್ಲರಿಗೂ ಕಾಣುವಂತೆ ಹತ್ತಿರಕ್ಕೆ ಬಾಯೆಂದು ಹೇಳಿದನು. ಕೂಡಲೆ ಅವನು ಹತ್ತಿರಬಂದು ನಿಂತನು. ದೊಡ್ಡ ಕೋಲಾಹಲವೇ ಆಯಿತು. ೧೪೫. "ರಮಣಿಯನ್ನು ನನ್ನವಳನ್ನಾಗಿ ಮಾಡುವೆನೆಂಬ ಮಾಯಾವಿಯ ಮಾತುಗಳು ನಿಜವೋ ಸುಳ್ಳೋ ಎಂದು ತಿಳಿದು ಬರುವೆನು. ಗೆಳೆಯನೆ ನೀನು ಅಲ್ಲಿಯವರೆಗೆ ಚಂಪಾನಗರದಲ್ಲಿ ಹೋಗಿರು." ವ॥ ಎಂದು ಹೇಳಿ ಪುಷ್ಪೋದ್ಭವನನ್ನು ರಾಜವಾಹನನು ಕಳುಹಿಸಿದನು. ಜಾಲಿಕನು ಗುಂಪಿನಲ್ಲಿದ್ದು ತನ್ನ ಹತ್ತಿರಕ್ಕೆ ಬಂದ ಯುವರಾಜನನ್ನು ನೋಡಿ—೧೪೬. 'ಕಾಮಾಕ್ಷಿ ಜಾ, ಜಾ (ಹೋಗು) ವಿಚಿತ್ರನಾದ ಮದವಣಿಗನು ಬಂದು ಈ ಜನರ ಮನಸ್ಸಿಗೆ ಸೋಜಿಗವನ್ನುಂಟುಮಾಡಲಿ' ಎಂದು ಹೇಳುತ್ತಾ ಆ ಜೋಗಿಯು ಚಿಟಕಿಯನ್ನು

ಅಗಲಂ ಬೆತ್ತುರುವಕ್ಷದಿಂದುರುಲಸದ್ರಕ್ತಾಂಬುಜಾತಾಕ್ಷಿಯಿಂ
ಪೊಗರಿಂ ರಂಜಿಪ ವಕ್ತ್ರದಿಂ ಮಹಿಮೆಯಿಂ ತಾಳ್ದೊಪ್ಪುವಾ ಜಾನುಬಾ
ಹುಗಳಿಂದುನ್ನತ ಕಂಠದಿಂ ಕರಿರಿಪುಪ್ರೋನ್ಮಧ್ಯದಿಂದೆಲ್ಲರ
ಕ್ಷಿಗೆ ಚೆಲ್ವಂ ಕಱೆಯುತ್ತಿಳಾಪತಿಸುತಂ ಬಂದಿರ್ದನಾಸ್ಥಾಯಿಯೊಳ್ ೧೪೭

ವ॥ ಅಂತು ಮಂಗಳಾಕಾರನಾಗಿ ಕುಮಾರಂ ಬಂದು ನಿಲೆ

ಕಂ॥ ನೋಡೆಲೆಕುಮಾರಿನಿನ್ನೊಡ
ಗೂಡಲ್ ತಕ್ಕಾತನೆಂದು ನೃಪಸುತನಂ ಕೊಂ
ಡಾಡಿ ನಟನೊಲ್ದು ತೋಱಲ್
ನೀಡುಂ ಭೋಂಕೆನಲವಂತಿ ಸೌಂದರಿ ಕಂಡಳ್ ೧೪೮

ಕಾಣಲೊಡಂ ಜುಂ ಜುಮ್ಮೆನೆ ಬೆಮರ್ ಪೊಱಪೊಣ್ಮೆ ಶರೀರಕಂಪದಿಂ
ನಾಣೞಿಯಲ್ ಮನಂಬೆಱಗಿನಿಂ ಮರವಟ್ಟಿರೆ ವಕ್ತ್ರಪಂಕಜಂ
ಕೂಣಿತದೃಷ್ಟಿಯಿಂದೆಸೆಯೆ ಚಿತ್ತಭವಂ ಕುಸುಮಾಸ್ತ್ರಜಾಲಮಂ
ಮಾಣದೆ ಸೂಸೆ ಕಾಂತೆಗೆ ಕರಂ ಎಗಿಲಾದುವು ಕಾಮಚೇಷ್ಟೆಗಳ್ ೧೪೯

ವ॥ ಅಂತಾಚೇಷ್ಟೆಯುಂ ಕಂಡು ಮಾಯಾವಿಕನವಂತೀಶ್ವರಂಗಿಂತೆಂದಂ

ನಿನ್ನಳಿಯನೀತನೊಲ್ದೀ
ಕನ್ನಿಕೆಯುಂ ತತ್ಕುಮಾರ ಪಾಣಿಗ್ರಹಣ
ಕ್ಕಿನ್ನೆೞ್ಬಿಸೆಂದು ಪೇೞ
ಲ್ಕಂ ನಗುತೇೞಿಂದನಾಕೆಯುಂ ಭೂಪಾಲಂ ೧೫೦

ಬಾರಿಸಿದನು. ಆಗ—೧೪೭. ರಾಜಕುಮಾರನು ಎಲ್ಲರ ಕಂಗಳಿಗೂ ಚೆಲುವನ್ನು ಸೂಸುತ್ತಾ ಅಲ್ಲಿ ಬಂದು ನಿಂತನು. ಅವನ ವಕ್ಷಸ್ಥಲವು ವಿಶಾಲವಾಗಿದ್ದಿತು. ಕಂಗಳು ಕೆಂದಾವರೆಯಂತೆ ರಂಜಿಸುತ್ತಿದ್ದುವು. ಮುಖವು ಕಾಂತಿಯಿಂದ ಹೊಳೆಯುತ್ತಿತ್ತು. ಮಹಿಮೆಯಿಂದ ಕೂಡಿದ ಆಜಾನುಬಾಹುವಾಗಿದ್ದನು. ಕಂಠವು ಉನ್ನತವಾಗಿದ್ದಿತು. ಸೊಂಟವು ಸಿಂಹದ ಸೊಂಟದಂತಿದ್ದಿತು. ವ॥ ಹಾಗೆ ಮಂಗಳಾಕಾರನಾಗಿ ಕುಮಾರನು ಬಂದು ನಿಂತನು.—೧೪೮. 'ಕುಮಾರಿ, ನೋಡು. ಇವನು ನಿನ್ನೊಡನೆ ಸೇರಲು ತಕ್ಕವನು' ಎಂದು ರಾಜಕುಮಾರನನ್ನು ಜಾಲಿಕನು ಹೊಗಳಿ ತೋರಿಸಿದನು. ಕೂಡಲೆ ಅವಂತಿ ಸುಂದರಿಯು ರಾಜಕುಮಾರನನ್ನು ನೋಡಿದಳು. ೧೪೯. ಆಗ ಮನ್ಮಥನು ಕುಮಾರಿಯ ಮೇಲೆ ಕುಸುಮಾಸ್ತ್ರಗಳನ್ನು ಪ್ರಯೋಗಿಸಿದನು. ಕೂಡಲೆ ಅವಳಲ್ಲಿ ಅದರಿಂದ ಕಾಮಚೇಷ್ಟೆಗಳು ಕಂಡು ಬಂದವು. ನೋಡಿದ ಕೂಡಲೆ ಮೈಜುಂ ಎಂದಿತು. ಬೆವರು ಹರಿಯಿತು. ಶರೀರದಲ್ಲಿ ನಡುಕವು ಹುಟ್ಟಿತು; ನಾಚಿಕೆ ಮಾಯವಾಯಿತು. ಮನಸ್ಸು ಬೆರಗಾಗಿ ಮರವಟ್ಟಿತು. ಮುಖ ಕಮಲವು ಕಡೆಗಣ್ಣೋಟದಿಂದ ರಂಜಿಸಿತು. ವ॥ ಹಾಗೆ ಅವಳ ಕಾಮಚೇಷ್ಟೆಗಳನ್ನು ನೋಡಿ ಮಾಯಾವಿಕನು ಅವಂತಿ ರಾಜನಿಗೆ ಹೇಳಿದನು. ೧೫೦. 'ಇವನು ನಿನ್ನಳಿಯ. ಪ್ರೀತಿಯಿಂದ ಆ ಕುಮಾರನ ಪಾಣಿಗ್ರಹಣಕ್ಕಾಗಿ

ವ॥ ಅಂತವಂತೀಶ್ವರನಿಂದುವೊಂದು ವಿನೋದಮಂ ನೋಟ್ಪೆನೆಂದು ನಗುತ್ತುಂ ಕುಮಾರಿಯನೆಬ್ಬಿಸೆ

ನಸುನಗೆ ವಕ್ತ್ರದೊಳ್ ಮಿನುಗೆ ಚಿತ್ತದೊಳಿರ್ದನುರಾಗಮಂಗದೊಳ್
ಪಸರಿಸೆ ತೋಳ್ಗಳುನ್ನತಕುಚಂ ಲಲಿತಾಧರಮೆಯ್ದೆ ಕೆತ್ತೆ ಕಂ
ಪಿಸೆ ನಲವಿಂ ನಿತಂಬಯುಗಳಂ ಪುಳಕಂ ತಲೆದೋಱೆ ಕಾಮನಾ
ರ್ದಿಸುವುದನೊಯ್ಯನೊಯ್ಯನೆ ನಿಲಲ್ ನೃಪನಂದನೆಯೆಟ್ದಳಟ್ತಿಯಿಂ ೧೫೧

ವ॥ ಅಂತು ಕುಮಾರಿಯೆಟು ನಿಂದಿರೆ ಜಾಲಿಕಂ ಪುತ್ತಳಿಗಳಿಂ ವಾದ್ಯಮೇಳಾಪಮಂ ಮಾಡಿಸಿ ಮಾಯಾ ಮೌಹೂರ್ತಿಕನಿಂ ಲಗ್ನಮಾಸನ್ನಮೆನ್ನಿಸಿ ಕುಮಾರನಂ ಕುಮಾರಿಯ ಪಾಣಿಗ್ರಹಣಂ ಮಾಡಲ್ವೇಟ್ದುದುಂ

ನಾನಾವಾದ್ಯಂಗಳುಣ್ಮಲ್ ಪಲವು ದೆಸೆಗಳೊಳ್ ಮಂಗಳಾಚಾರಮೊಪ್ಪಲ್
ಗಾನಂ ಕೈಗಣ್ಮೆ ಮೌಹೂರ್ತಿಕರತಿಶುಭಲಗ್ನಂ ಕರಂ ಲೇಸೆನಲ್ ತದ್ಭೂ
ತನಾಥಂ ನೋಡಿ ಚೋದ್ಯಂಬಡುವಿನಮೊಲವಿಂ ಸರ್ವಸಂತೋಷದಿಂದಂ
ದಾ ನಾರೀರತ್ನಮಂ ಕೈವಿಡಿದುನಲವಿನಿಂದೊಪ್ಪಿದಂ ರಾಜಪುತ್ರಂ ೧೫೨

ವ॥ ಅಂತು ಪಾಣಿಗ್ರಹಣಂ ಮಾಡಿದನಂತರಂ ಮದುಮಕ್ಕಳಂ ಮನೆಯಂ ತುಂಬಿಸ ವೇಟ್ಕೆಂದು

ನಿನ್ನ ಮಗಳನ್ನು ಎಬ್ಬಿಸು' ಕೂಡಲೆ ರಾಜನು ನಗುತ್ತಾ ಅವಳಿಗೆ 'ಏಳು' ಎಂದು ಹೇಳಿದನು. ವ॥ ಅವಂತೀಶ್ವರನು 'ಇಂದು ಒಂದು ವಿನೋದವನ್ನು ನೋಡುವೆನು' ಎಂದು ಯೋಚಿಸಿ ನಗುತ್ತಾ ಕುಮಾರಿಯನ್ನು ಎಬ್ಬಿಸಿದನು. ೧೫೧. "ಮುಖದಲ್ಲಿ ನಸುನಗೆಯು ಮಿನುಗಿತು. ಚಿತ್ತದಲ್ಲಿದ್ದ ಅನುರಾಗವು ಶರೀರದಲ್ಲೆಲ್ಲ ಪ್ರಸರಿಸಿತು. ತೋಳುಗಳು, ಉನ್ನತವಾದ ಕುಚ, ಮನೋಹರವಾದ ತುಟಿ—ಇವು ಅದುರಿದುವು. ನಿತಂಬಗಳೆರಡೂ ನಲವಿನಿಂದ ಕಂಪಿಸಿದುವು. ರೋಮಾಂಚವು ಕಾಣಿಸಿಕೊಂಡಿತು. ಕಾಮನು ಗರ್ಜಿಸಿಬಾಣ ಬಿಡಲು ಮೇಲೆ ಹೇಳಿದ ಕಾಮ ವಿಕಾರಗಳಿಂದ ಕೂಡಿ ರಾಜಕುಮಾರಿಯು ನಿಧಾನವಾಗಿ ಪ್ರೀತಿಯಿಂದ ಎದ್ದಳು. ವ॥ ಹಾಗೆ ಕುಮಾರಿಯು ಎದ್ದು ನಿಂತ ಕೂಡಲೆ ಜಾಲಿಕನು ಬೊಂಬೆಗಳಿಂದ ವಾದ್ಯಘೋಷ ಮಾಡಿಸಿದನು. ಮಾಯಾಮೌಹೂರ್ತಿಕನಿಂದ ಮುಹೂರ್ತವು ಹತ್ತಿರವಾಯಿತೆಂದು ಹೇಳಿಸಿ ಕುಮಾರನಿಗೆ ಕುಮಾರಿಯ ಪಾಣಿಗ್ರಹಣ ಮಾಡುವಂತೆ ಹೇಳಿದನು—೧೫೨. ಹಲವು ದಿಕ್ಕುಗಳಲ್ಲಿ ನಾನಾವಿಧವಾದ ಮಂಗಳವಾದ್ಯಗಳು ಭೋರ್ಗರೆದುವು. ಮಂಗಳ ಕಾರ್ಯಗಳು ನಡೆದುವು. ಹಾಡುಗಳು ಕೇಳಿಸಿದುವು. ಜೋಯಿಸರು ಶುಭಲಗ್ನವು ಕೂಡಿ ಸಕಾಲವಾಗಿದೆಯೆಂದರು. ರಾಜನು ಇದನ್ನೆಲ್ಲ ನೋಡಿ ಸಂತೋಷದಿಂದ ಆಶ್ಚರ್ಯದಲ್ಲಿ ಮುಳುಗಿದನು. ಆಗ ರಾಜಪುತ್ರನು ಹರ್ಷದಿಂದ ನಾರೀರತ್ನವನ್ನು ಕೈಹಿಡಿದು ಪ್ರಕಾಶಿಸಿದನು. ವ॥ ಪಾಣಿಗ್ರಹಣವಾದ ಮೇಲೆ ಮದು

ಕಂ॥ ಪುತ್ತಳಿಗಳ್ ದಿಬ್ಬಣಿಗರ್
ಪುತ್ತಳಿಗಳ್ ಸಕಲವಸ್ತುಗಳ ಪೆಟ್ಟಿಗೆಯಂ
ಪೊತ್ತೊಡನೆ ಪೋಪರಾಗಿರೆ
ಬಿತ್ತರದಿಂ ಮನೆಗೆ ಕಳುಪಿದಂ ದಂಪತಿಯಂ ೧೫೩

ವ॥ ಅಂತು ಮದವಕ್ಕಳನನೇಕ ಪುತ್ತಳಿಗಳಂ ಕೂಡಿಯರಮನೆಗೆ ಕಳಿಪಿ ಇಂದ್ರಜಾಲಿಗ ನರಸಂಗೆ ಕೈಮುಗಿದಿರ್ಪುದುಮರಸಂ ಮೆಚ್ಚಿ

ಕಟಕಂಕುಂಡಲಮಂಗದಂ ಪದಕಮುದ್ಯದ್ವಾಹನಂ ಚಿತ್ರ ಕ
ರ್ಪಟಮಾನಂದಿತವಸ್ತುವಂ ಪದೆಪಿನಿಂ ಭೂಪಾಲಕಂ ಕೂರ್ತಿಕಾ
ಪಟಿಕಂಗೀಯಲವಂ ಕರಂ ತಣಿದು ತನ್ನುತ್ಸಾಹದಿಂ ಸಂತತಾ
ರ್ಭಟೆಯಿಂದಂ ಪೊಗಟುತ್ತದೇಂ ತಳರ್ದನೋ ಕೋಲಾಹಲಂ ಮಾಡುತುಂ ೧೫೪

ವ॥ ಅಂತಾ ಜಾಲಿಕಂಗವಂತೀಶ್ವರಂ ಬೇಟ್ಟನಿತು ವಸ್ತುವಂ ಕೊಟ್ಟು ಬೀಳ್ಕೊಂಡ ವನತ್ತಲ್ ಪೋದಂ ಇತ್ತಲ್

ಮನದನುರಾಗಮಂ ತಳೆದು ಜಾಲಿಗನೋಜೆಗೆ ಮೆಚ್ಚಿ ನಲ್ಮೆಯಿಂ
ತನು ಪುಳಕಂಗಳುಣ್ಮುತಿರೆ ಕಾಮನಿದಾನಮೆ ಕೈಗೆ ಸಾರ್ದವೋಲ್
ವನಿತೆಯ ಕೋಮಳಾಂಗುಲಿಯನೊಪ್ಪಿರೆ ಬಲ್ಪಿಡಿದಂಗನಾ ನಿಕೇತ
ತನವನಲಂಪಿನಿಂ ಸುಖದೊಳೊಯ್ಯನೆ ಪೊಕ್ಕನಿಳಾಧಿನಾಯಕಂ ೧೫೫

ಮಕ್ಕಳನ್ನು ಮನೆತುಂಬಿಸಿಕೊಳ್ಳಬೇಕೆಂದು ಏರ್ಪಾಡು ಮಾಡಿದನು. ೧೫೩. ಪುತ್ತಳಿಗಳೇ ದಿಬ್ಬಣಿಗರಾದರು. ಪುತ್ತಳಿಗಳು ಸಕಲವಸ್ತುಗಳಿಂದ ತುಂಬಿದ ಪೆಟ್ಟಿಗೆಗಳನ್ನು ಹೊತ್ತು ಜೊತೆಯಲ್ಲಿ ನಡೆದರು. ಹೀಗೆ ಸಂಭ್ರಮದಿಂದ ದಂಪತಿಯನ್ನು ಜಾಲಿಗನು ಮನೆಗೆ ಕಳುಹಿಸಿದನು. ವ॥ ಹೀಗೆ ಮದುಮಕ್ಕಳನ್ನು ಅನೇಕ ಪುತ್ತಳಿಗಳ ಜೊತೆಯಲ್ಲಿ ಅರಮನೆಗೆ ಕಳುಹಿಸಿ ಇಂದ್ರಜಾಲಿಕನು ರಾಜನಿಗೆ ಕೈಮುಗಿದು ನಿಂತನು. ಅರಸನು ತುಂಬ ಮೆಚ್ಚಿಕೊಂಡು- ೧೫೪. ಕೈಬಳೆ, ಕುಂಡಲ, ತೋಳುಬಳೆ, ಪದಕ, ಶ್ರೇಷ್ಠವಾದ ವಾಹನ, ಆಶ್ಚರ್ಯಕರವಾದ ಬಟ್ಟೆ-ಇವೇ ಮೊದಲಾದ ಆನಂದಕರಗಳಾದ ವಸ್ತುಗಳನ್ನು ಭೂಪಾಲನು ಪ್ರೀತಿಯಿಂದ ಜಾಲಿಕನಿಗೆ ಕೊಟ್ಟನು. ಅವನು ಅವನ್ನೆಲ್ಲ ತೆಗೆದುಕೊಂಡು ತೃಪ್ತನಾಗಿ ಅರ್ಭಟೆಯಿಂದ ಕೋಲಾಹಲ ಮಾಡುತ್ತಾ ಹೊರಟನು. ವ॥ ಹಾಗೆ ಆ ಜಾಲಿಕನಿಗೆ ಅವಂತೀಶ್ವರನು ಬೇಡಿದ ವಸ್ತುಗಳನ್ನೆಲ್ಲ ಕೊಟ್ಟು ಕಳುಹಿಸಿದನು. ಅವನು ಅತ್ತ ಹೋಗಲು ಇತ್ತ- ೧೫೫. ರಾಜವಾಹನನು ಮನಸ್ಸಿನಲ್ಲಿ ಅನುರಾಗವನ್ನು ತಳೆದನು. ಜಾಲಿಗನ ಪ್ರೌಢಿಮೆಯನ್ನು ಕಂಡು ಮೆಚ್ಚಿದನು. ಪ್ರೀತಿಯಿಂದ ದೇಹದಲ್ಲಿ ರೋಮಾಂಚವುಂಟಾಯಿತು. ಕಾಮದ ಮೂಲಕಾರಣವೇ ಕೈ ಸೇರಿದಂತೆ ತರುಣಿಯ ಕೋಮಲವಾದ ಬೆರಳನ್ನು ಬಿಗಿಯಾಗಿ ಹಿಡಿದುಕೊಂಡು ರಾಜಕುಮಾರನು ಅತಿಶಯವಾದ ಸುಖವನ್ನನುಭವಿಸುತ್ತಾ ಅರಮನೆಯ ಅಂತಃಪುರವನ್ನು

ವ॥ ಅಂತು ಪುಗಲೊಡಮವಂತಿ ಸುಂದರಿ

ಕಂ॥ ಬಯಸಿರ್ದವಸ್ತು ಕೂರ್ತೆ
ನ್ನಯ ಕೆಯ್ಗೆಯ್ದಿತ್ತೆನುತ್ತವಂತೀ ವಧು ಲೀ
ಲೆಯುನರಸನನಪ್ಪಿ ಸುಧಾ
ಮಯುವೆನಿಸಿರ್ದಧರರತ್ನಮಂ ಚುಂಬಿಸಿದಳ್ ೧೫೬

ಪೊಸತೆನಿಪೊಲ್ಮೆಯುಗ್ಗಡಿಸೆ ಕಣ್ಬೆಳಗೋಪನ ವಕ್ತ್ರ ಪದ್ಮದೊಳ್
ಪಸರಿಸೆ ಸಣ್ಣ ಸುಯ್ಲು ನಱುಗಂಪು ಪೊದಟ್ಟಿರೆ ನುಣ್ಗೊರಲ್ ವಿರಾ
ಜಿಸೆ ಜಲಪಕ್ಷಿಯಂ ಜಱಿದು ನಾಣ್ನೞಿ ಡಿಳ್ಳಮನ್ನೈದೆ ನಲ್ಮೆಯಿಂ
ಮಿಸುಪಧರಾಗ್ರಮಂ ಸವಿದಳಂಗನೆ ಜಾಣ್ ಮಿಗೆ ತನ್ನೃಪಾಲನಾ ೧೫೭

ವ॥ ಅಂತಧರಗ್ರಹಣಂಗೆಯ್ದನಂತರಂ

ಸ್ಥಿರಗಾಢಾಲಿಂಗನಂ ಹೂಂಕೃತಿಗಳರವಮನ್ಯೋನ್ಯ ಸಂಲಾಪವಾದಂ
ಕರಘಾತಂ ಚುಂಬನಂ ಸ್ವೀಕೃತ ಕುಟಿಲಕಚಾಕರ್ಷಣಂ ನೂತಜಿಹ್ವಾ
ವಿರುತಂ ಚಿತ್ತಾನುಮೋದಂ ಪರಿವಿಡಿಯೆ ಮನೋರಾಗದಿಂ ಕಾಮಕೇಳೀ
ತರುಣ ಪ್ರಾರಂಭಮಂ ಕೂರ್ತೆಸಗಿದಳೊಲವಿಂ ಕಾಂತೆಯಾತ್ಯಾರ್ತದಿಂದಂ ೧೫೮

ಹೊಕ್ಕನು. ವ॥ ಹಾಗೆ ಪ್ರವೇಶಿಸಲು ಕೂಡಲೆ ಅವಂತಿ ಸುಂದರಿಯು– ೧೫೬. 'ನಾನು ಬಯಸಿದ್ದ ವಸ್ತುವಿಂದು ಸ್ನೇಹದಿಂದ ನನ್ನ ಕೈಸೇರಿದೆ.' ಎಂದು ತಿಳಿದು ಅವಂತೀಕುಮಾರಿಯು ಲೀಲೆಯಿಂದ ಅರಸನ್ನು ತಬ್ಬಿಕೊಂಡು ಸುಧಾಮಯವಾದ ಅವನ ಅಧರ ರತ್ನವನ್ನು ಚುಂಬಿಸಿದಳು. ೧೫೭. ಹೊಸಬಗೆಯಾದ ಪ್ರೀತಿಯು ಮಿತಿಮೀರಿ ಉಕ್ಕಿತು. ಕಂಗಳಕಾಂತಿಯು ಕಾಂತನ ಮುಖಕಮಲದ ಮೇಲೆ ಹರಡಿತು. ನಿಧಾನವಾಗಿ ಬಿಡುವ ಉಸಿರಿನ ಸುಗಂಧವು ಎಲ್ಲೆಡೆ ಹರಡಿತು. ಇಂಪಾದ ಕೊರಳ ಧ್ವನಿಯು ಜಲಪಕ್ಷಿಯನ್ನು ಮೀರಿಸಿ ವಿರಾಜಿಸಿತು? (ಅಥವಾ ಸುಂದರವಾದ ಕೊರಳು ಹಂಸವನ್ನು ಮೀರಿಸಿ ಪ್ರಕಾಶಿಸಿತು?) ನಾಚಿಕೆಯ ನಿರಿಗೆಯು ಸಡಿಲವಾಯಿತು. ರಾಜಕುಮಾರಿಯು ಜಾಣತನದಿಂದ ಆ ರಾಜನ ಮಿರುಗುವ ಅಧರಾಗ್ರವನ್ನು ಪ್ರೀತಿಯಿಂದ ಸವಿದಳು. ವ॥ ಹಾಗೆ ಅಧರಪಾನ ಮಾಡಿದ ಮೇಲೆ– ೧೫೮. ಸ್ಥಿರವಾಗಿ ಬಿಗಿಯಾಗಿ ಮಾಡಿಕೊಂಡ ಆಲಿಂಗನ, ಹೂಂಕಾರ ಶಬ್ದ, ಕೊರಳ ದನಿ, ಪರಸ್ಪರ ಸಂಭಾಷಣೆ, ಕೈಗಳಿಂದ ಹೊಡೆಯುವುದು, ಚುಂಬನ, ವಕ್ರವಾದ ತಲೆಗೂದಲನ್ನು ಹಿಡಿದೆಳೆಯುವುದು, ಪ್ರಶಸ್ತವಾದ ನಾಲಗೆಯ ಶಬ್ದ, ಮನಸ್ಸಿನಹ್ಲಾದ ಆನಂದ, ಇವುಗಳಿಂದ. ಕ್ರಮವಾಗಿ ಉಂಟಾದ ಮನೋರಾಗದಿಂದ ಕೂಡಿ ಕಾಂತೆಯು ಅತ್ಯಾಸಕ್ತಿಯಿಂದ ಪ್ರೀತಿಸಿ

ಬಿಸುಪೆಮಱಿಂಗುವಂತಗಲ್ವ ಮತ್ತಮದರ್ಪುವ ಮಾಣ್ದು ಮಾಣ್ದು ಚುಂ
ಬಿಸಿಯಧರೋಷ್ಠಮಂ ಸವಿದ ಸಾಮ್ಯಸುಖಂ ತಲೆದೋಱೆ ಮೂರ್ಛೆಯಿಂ
ದೆಸೆವ ಮನೋಮುದಂ ಮಿಗುವ ಕೂಟದ ತೋಟಿಗೆ ಮೇಲೆನಲ್ ಕರಂ
ಮಿಸುಪ ಮನೋಜ ಕೇಳಿಯನದೇನೆಸೆದಿರ್ದರೊ ನಿತ್ಯಕಾಮಿಗಳ್ ೧೫೯

ವ॥ ಮತ್ತಂ

ಅಡಿಗಡಿಗಪ್ಪಿಕೊಳ್ವ ಚುಬುಕಾಗ್ರಮನೊತ್ತಿ ಸುಧಾಧರೋಷ್ಠಮಂ
ಪಿಡಿದೊಲವಿಂದೆ ಚುಂಬಿಸುವ ಗಾಸಿಗೆ ಸೂಸಿದ ಕೇಶಪಾಶಮಂ
ಮುಡಿಸುವ ನಾಣ್ಗೆ ನಾಣ್ಚದೆ ವಿಚಿತ್ರ ವಿನೋದದ ಕೂಟದಿಂ ಸುಖಂ
ಬಡೆವ ಲತಾಂಗಿ ಮನ್ಮಥನ ಮಂದಿರ ಮಂಗಳ ಲಕ್ಷ್ಮಿಯಲ್ಲಳೇ ೧೬೦

ಮಲ್ಲಿಗೆ ಚೊಲ್ಲೆಯಂ ಕುಣಿಯೆ ಕುಂಡಲಮಂಡಲಮಾಡೆ ಕಂಕಣಂ
ಮೆಲ್ಲುಲಿಯಿಂ ಪಳಂಚೆ ಮೃದುಕಂಠರವಂ ಪೊಸತಾಗೆ ಮಾತುಗಳ್
ಲಲ್ಲೆಯನಪ್ಪುಕೈಯ್ಯೆ ಬೆಮರುಣ್ಮೆ ಸುಖಂ ತಲೆದೋಱೆನುಣ್ಬುದಂ
ಚೆಲ್ಲನೆಪಾಯ್ದು ಚೆಲ್ಲೆ ಪುರುಷಾಯಿತಮೇನತಿ ಚಿತ್ರಮಾದುದೋ ೧೬೧

ಕಾಮಕೇಳಿಯನ್ನು ಪ್ರಾರಂಭಿಸಿದಳು. ೧೫೯. ಬೆಚ್ಚಗಾದ ಬೆವರು ಇಂಗುವ ಹಾಗೆ ಮಧ್ಯೆ ಮಧ್ಯೆ ಬೇರೆಯಾಗುತ್ತಿದ್ದರು. ಮತ್ತೆ ಬಿಗಿಯಾಗಿ ತಬ್ಬಿಕೊಳ್ಳುತ್ತಿದ್ದರು. ಬಿಟ್ಟುಬಿಟ್ಟು ಚುಂಬಿಸಿ ಅಧರೋಷ್ಠಗಳನ್ನು ಸವಿಯುತ್ತಿದ್ದರು. ಇಬ್ಬರಿಗೂ ಸಾಮ್ಯ ಸುಖವು ತಲೆದೋರಿ ಮೂರ್ಛೆಯುಂಟಾಯಿತು. ಆ ನಿತ್ಯಕಾಮಿಗಳು ಮನಸ್ಸಿನಲ್ಲಿ ಮುದವು ಹೆಚ್ಚುವ ರತಿಕ್ರೀಡೆಯನ್ನು ಆಶ್ಚರ್ಯಕರವಾದ ರೀತಿಯಲ್ಲಿ ನಡೆಯಿಸಿದರು. ವ॥ ಮತ್ತು ೧೬೦. ಅವಂತಿಸುಂದರಿಯು ಬಾರಿಬಾರಿಗೆ ಅಪ್ಪಿಕೊಳ್ಳುತ್ತಿದ್ದಳು. ಗಲ್ಲದ ತುದಿಯನ್ನದುಮಿ ಸುಧಾಮಯವಾದ ಅಧರೋಷ್ಠಗಳನ್ನು ಹಿಡಿದು ಪ್ರೀತಿಯಿಂದ ಚುಂಬಿಸುತ್ತಿದ್ದಳು. ಗಾಸಿಗೆ ಬಿಚ್ಚಿ ಚದರಿದ ಕೇಶಪಾಶವನ್ನು ಕಟ್ಟಿಕೊಳ್ಳುತ್ತಿದ್ದಳು. ನಾಚಿಕೆಯನ್ನು ತೊರೆದ ವಿಚಿತ್ರವಾದ ವಿನೋದಕರವಾದ ಕೂಡಿಕೆಯಿಂದ ಸುಖವನ್ನು ಹೊಂದುತ್ತಿದ್ದಳು. ಇಂಥ ಲತಾಂಗಿಯು ಮನ್ಮಥನ ಮಂದಿರದ ಮಂಗಳ ಲಕ್ಷ್ಮಿಯಾಗಳೇ ? ೧೬೧. ಮಲ್ಲಿಗೆ ಹೂಮುಡಿದ ತುರುಬು ಕುಣಿಯಿತು. ದುಂಡಾದ ಕುಂಡಲಗಳು ಅಲ್ಲಾಡಿದುವು. ಬಳೆಗಳು ಇಂಪಾದ ಧ್ವನಿಯನ್ನು ಸೂಸಿದುವು. ಮೃದುವಾದ ಕಂಠರವವು ಹೊಸಬಗೆಯದಾಯಿತು. ಲಲ್ಲೆಯ ಮಾತುಗಳು ಹೊರಟುವು. ಬೆವರು ಉಕ್ಕಿತು. ಸುಖವು ತಲೆದೋರಿತು, (ಸುಂದರವಾದ ಪಾದವು ಜಿಲ್ ಎಂದು ವೇಗದಿಂದ ಮೇಲೆ ಕೆಳಗೆ ಚಲಿಸಲು ?) ಆ ಲತಾಂಗಿಯು ಪುರುಷಾಯಿತ

ತವೆಯದ ನಲ್ಮೆ ತೋರ್ಕೆಗಿಡದಾಸೆ ಮಗುೞ್ದುಸೆವಾರ್ತಮಿಚ್ಚೆಪೆ
ರ್ಚುವ ಮನದೇೞ್ಗೆ ಕೂಡಿ ತಣಿವಿಲ್ಲದ ಕೂರ್ಮೆ ನವೀನವಾಗಿ ನು
ಣ್ಪವಿರಳಮಪ್ಪಿನಂ ನಲಿದು ಕೂಡಿ ಸುಖಾಂಬುಧಿಯೊಳ್ ಮುೞುಂಗಿ
ಯೊಪ್ಪುವರವರಾವಗಂ ಸುರತಕಾಲಮೆನಿಪ್ಪ.......ಮಾೞ್ಕೆಯಿಂ ೧೬೨

ವ॥ ಅಂತು ನಾನಾ ಪ್ರಕಾರದ ಕರಣಂಗಳನೊಡರ್ಚಿ ಕೂಡಿದ ಕಡೆಯೊಳ್

ಕೆದಱಿದ ಕುಂತಳಂ ಪರೆದ ಕಜ್ಜಳಮುಣ್ಮುವ ನುಣ್ಬೆಮರ್ ಮದಂ
ಪುದಿದ ವಿಲೋಚನಂ ಬಱಿಯುನಟ್ಟುವ ಸುಯ್ ಕಡುಜೋಲ್ವವೇಣಿ ಬ
ತ್ತಿದ ಬೆಳರ್ಪಾಯ್ ಬೞಲ್ದಲುಳಿತಾಂಬರವೊಪ್ಪೆ ರತಾಂತದೊಳ್ ಸುಖಾ
ಸ್ಪದಮನೊಡರ್ಚುವಂಗನೆಯ ರೂಪು ವಿಚಿತ್ರಮನುಂಟುಮಾಡದೆ ೧೬೩

ವ॥ ಅಂತಾದ ರತ್ಯಂತದೊಳವಂತೀ ಸೌಂದರಿ ರಾಜವಾಹನನ ಮುಖಾರವಿಂದಮಂ ನೋಡಿ

ಕಂ॥ ಆವಾವದೇಶಮಂ ಸ
ದ್ಭಾವಂ ಮಿಗೆ ತೊೞಲುತಿರ್ದರಸರ್ ನಲವಿಂ
ಭಾವಿಸೆ ಬೆಸಸಲ್ವೇೞ್ಪುದು
ದೇವರ್ ಪದೆದೆನಗೆ ಕರ್ಣಕೌತುಕಮಾಗಲ್ ೧೬೪

ರತಿಯು ಅತಿ ವಿಚಿತ್ರವಾಯಿತು. ೧೯೨. ಕಡಿಮೆಯಾಗದ ಪ್ರೀತಿ, ವ್ಯತ್ಯಾಸಹೊಂದದ ಆಸೆ, ಮತ್ತೆ ಮತ್ತೆ ಹೆಚ್ಚುವ ಆತುರ, ಇಚ್ಛೆಯು ಹೆಚ್ಚುವ ಮನಸ್ಸಿನ ಉನ್ನತಿ, ಕೂಡಿದರೂ ತೃಪ್ತಿಯಾಗದ ಸ್ನೇಹ–ಹೀಗೆ ನೂತನ ರೀತಿಯಿಂದ ಎಲ್ಲ ಕಾಲವೂ ಸುರತಕ್ಕ ಕಾಲವು ಎಂಬಂತೆ ಆ ದಂಪತಿಗಳು ಎಡೆಬಿಡದೆ ನಯವಾಗಿ ನಲಿದು ಕೂಡಿ ಸುಖಸಾಗರದಲ್ಲಿ ಮುಳುಗಿ ಪ್ರಕಾಶಿಸಿದರು. ಹೀಗೆ ನಾನಾ ಪ್ರಕಾರದ ರತಿವಿಧಾನಗಳಿಂದ ಕೂಡಿ ಕಡೆಯಲ್ಲಿ ೧೯೩. ಕೆದರಿದ ತಲೆಗೂದಲು, ಹರಡಿಕೊಂಡ ಕಾಡಿಗೆ, ಹೊರಬರುವ ಕಿರುಬೆವರು, ಮದ ತುಂಬಿದ ಕಣ್ಣು, ಮತ್ತು ತಗಲುವ ಉಸಿರು ಹೆಚ್ಚಾಗಿ ಜೋತುಬಿದ್ದ ಜಡೆ, ಬತ್ತಿಹೋದ ತುಟಿ. ಅಸ್ತವ್ಯಸ್ತವಾದ ಬಟ್ಟೆ–ಇವುಗಳಿಂದ ಶೋಭಿಸುವ ದಣಿದ ಸುಖಶ್ರಯಳಾದ ಆ ಅಂಗನೆಯ ರೂಪವು ವಿಚಿತ್ರಭಾವವನ್ನುಂಟು ಮಾಡುತ್ತದೆಯಲ್ಲವೇ ! ವ॥ ರತಿಕ್ರೀಡೆಯ ಕೊನೆಯಲ್ಲಿ ಅವಂತೀ ಸೌಂದರಿಯು ರಾಜವಾಹನನ ಮುಖಕಮಲವನ್ನು ನೋಡಿ ೧೯೪. 'ಅರಸರು ಯಾವ ಯಾವ ದೇಶದಲ್ಲಿ ಸದ್ಭಾವದಿಂದ ಸಂಚರಿಸುತ್ತಿದ್ದಿರಿ? ದೇವರು ನಲವಿನಿಂದ ಆಲೋಚಿಸಿ ನನ್ನ ಕಿವಿಗಳಿಗೆ ಕೌತುಕವನ್ನುಂಟುಮಾಡುವಂತೆ ವಿಸ್ತಾರವಾಗಿ ಹೇಳಬೇಕು'

ವ॥ ಎಂದು ಬೆಸಗೊಳಲೊಡಂ

ವನಿತೆಯ ಬಿನ್ನಪಕ್ಕೆ ಕಡುಮೆಚ್ಚಿ ನೃಪಾಲಕನೊಪ್ಪಲುರ್ವರಾ
ಜನಿತವಿಶೇಷವಂ ಭುವನಕೋಶಮನಾಕೆಯ ಕರ್ಣಕೌತುಕಂ
ಮನದನುರಾಗಮುರ್ಕೆ ಮಿಗೆ ಪೇಟಲೊಡರ್ಚಿದನಂಗನಾ ಘನ
ಸ್ತನನವ ಮೌಕ್ತಿಕಾಭರಣನಪ್ರತಿಯಾಗಲಭಂಗವಿಕ್ರಮಂ ೧೬೫

ಇದು ನಿಖಿಳಬುಧಜನ ಮನೋವನಜವನ ದಿವಾಕರ ಕಿರಣ ಪ್ರತಿಮಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರಚರಿತೆಯೊಳ್ ಅವಂತೀ ಸೌಂದರೀ ದರ್ಶನವರ್ಣನಂ

## ಷಷ್ಠಾಶ್ವಾಸಂ

ವ॥ ಎಂದು ಕೇಳಿದಳು ಆಗ ೧೯೫. ಅಂಗನೆಯ ಘನಸ್ತನಗಳಿಗೆ ನೂತನ ಮೌಕ್ತಿಕಾಭರಣನಾದ ಅಭಂಗವಿಕ್ರಮನಾದ ರಾಜವಾಹನನು ಕಾಂತೆಯ ಪ್ರಾರ್ಥನೆಯನ್ನು ಮೆಚ್ಚಿಕೊಂಡನು. ಮತ್ತು ಭೂವಿಮಂಡಲದಲ್ಲಿ ನಡೆದ ವಿಶೇಷ ವೃತ್ತಾಂತಗಳನ್ನೂ ಭುವನಕೋಶದ ವೃತ್ತಾಂತವನ್ನೂ ಅವಳ ಕಿವಿಗಳಿಗೆ ಕೌತುಕವೂ ಮನಸ್ಸಿನಲ್ಲಿ ಅನುರಾಗವೂ ಹೆಚ್ಚುವಂತೆ ಹೇಳತೊಡಗಿದನು. ಇದು ನಿಖಿಲ ವಿದ್ವಾಂಸರ ಮನಸ್ಸೆಂಬ ಕಮಲವನಕ್ಕೆ ಸೂರ್ಯನ ಕಿರಣಕ್ಕೆ ಸಮನಾದ ಪ್ರಸನ್ನನಾದ ಶ್ರೀಮದಭಂಗವಿಟ್ಠಲನ ಪಾದಕಮಲಗಳಲ್ಲಿನ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನು ಬರೆದ ಅಭಿನವ ದಶಕುಮಾರ ಚರಿತೆಯಲ್ಲಿ ಅವಂತಿ ಸೌಂದರೀ ದರ್ಶನದ ವರ್ಣನಂ ಎಂಬ ಆರನೆಯ ಆಶ್ವಾಸ.

# ಸಪ್ತಮಾಶ್ವಾಸಂ

ಕಂ॥ ಶ್ರೀ ಮಗಧೇಶನವಂತೀ
ಕೋಮಳೆಗೆ ನೆಗಟ್ದ ಭುವನಕೋಶವನಧಿಕ
ಪ್ರೇಮದೆ ಪೇೞಲೊಡರ್ಚಿದ
ನೇ ಮಾತೋ ಪದೆದಭಂಗವಿಟ್ಠಲಭೃತ್ಯಂ ೧

ವ॥ ಅದೆಂತೆನೆ

ಚಂ॥ ನಿರುಪಮಸತ್ತ್ವದಿಂ ಕಮಲಜಾಂಡ ಕಟಾಹಮನಾದಿಶಕ್ತಿ ತಾ
ಳ್ದಿದಳದಱಾಶ್ರಯಂಬಿಡಿದು ಕೂರ್ಮನಿರಲ್ ತದನೂನಖರ್ಪರೋ
ಪರಿಯೊಳನಂತನಿರ್ದು ನಿಜಮಸ್ತಕದೊಳ್ ಸಲೆಭೂಮಿಯುಂ ಚರಾ
ಚರಸುಖಭೂಮಿಯುಂ ತಳೆದನಲ್ತೆ ಸರೋರುಹ ಪತ್ರಲೋಚನೇ ೨

ಕಂ॥ ಅತಳಂ ವಿತಳ ರಸಾತಳ
ಸುತಳಂ ಪಾತಾಳಮಾತಳಾತಳಮಧಿಕ
ಪ್ರತಳಂಗಳಧೋಲೋಕ
ಪ್ರತತಿಗಳೆಸೆದಿರ್ಪುವಲ್ತೆ ಕಮಲದಳಾಕ್ಷೀ ೩

ಭೂಲೋಕ ಭುವರ್ಲೋಕ ತ
ಪೋಲೋಕಂ ಸ್ವರ್ಗಲೋಕಜನಲೋಕಂ ಕೇಳ್
ಬಾಲೆಮಹರ್ಲೋಕಂ ಸ
ಲ್ಲೀಲೆಯೊಳಾ ಸತ್ಯಲೋಕಮುಂದೂರ್ಧ್ವಜಗಂ ೪

೧. ಶ್ರೀ ಮಗಧರಾಜನು ಅವಂತೀ ರಾಜಕುಮಾರಿಗೆ ಅಧಿಕ ಪ್ರೇಮದಿಂದ ಭುವನ ಕೋಶದ ಸ್ವರೂಪವನ್ನು ವಿವರಿಸಿದನು. ಅಭಂಗ ವಿಟ್ಠಲನ ಸೇವಕನಾದ ಕವಿಯು ಅದನ್ನು ಮೆಚ್ಚಿ ವಿವರಿಸುತ್ತಾನೆ. ವ॥ ಅದು ಹೇಗೆಂದರೆ–ಕಮಲಾಕ್ಷಿಯೇ ಕೇಳು— ೨. ಆದಿಶಕ್ತಿಯು ತನ್ನ ಅನುಪಮ ಶಕ್ತಿಯಿಂದ ಬ್ರಹ್ಮಾಂಡವೆಂಬ ಕೊಪ್ಪರಿಗೆಯನ್ನು ಧರಿಸಿದ್ದಾಳೆ. ಕೂರ್ಮನು ಅದರ ಆಶ್ರಯದಲ್ಲಿದ್ದಾನೆ. ಅದರ ಶ್ರೇಷ್ಠವಾದ ಬೆನ್ನೋಡಿನ ಮೇಲೆ ನಿಂತು ಅನಂತನು ತನ್ನ ತಲೆಯ ಮೇಲೆ ಚರಾಚರಗಳಿಗೆ ಸುಖಾ ಶ್ರಯವಾದ ಭೂಮಿಯನ್ನು ತಳೆದಿದ್ದಾನೆ. ೩. ಕಮಳದಳಾಕ್ಷಿಯೇ ಕೇಳು. ಅತಳ, ವಿತಳ, ರಸಾತಳ, ಸುತಳ, ಪಾತಾಳ, ತಳಾತಳ, ಪ್ರತಳ ಎಂದು ಅಧೋಲೋಕಗಳು ಪ್ರಸಿದ್ಧಗಳಾಗಿವೆ. ೪. ಬಾಲೆ, ಕೇಳು, ಭೂಲೋಕ, ಭುವರ್ಲೋಕ, ತಪೋಲೋಕ, ಸ್ವರ್ಗಲೋಕ, ಜನಲೋಕ, ಮಹರ್ಲೋಕ, ಸತ್ಯಲೋಕ ಎಂದು ಊರ್ಧ್ವಲೋಕಗಳು

ಕಂ॥ ರವಿಮಂಡಲದಿಂ ಮೇಲಾ
ಯ್ತು ವಿಧುವ ಮಂಡಲಮುದತ್ತ ತಾರಾಗತಿ ಮೇಣ್
ವಿವಿಧಂ ವಾಯುಸ್ಕಂಧಂ
ನವೀನಮೆನಿಸಿರ್ಪುದಲ್ತೆ ಭುವನಾಧಾರಂ ೫

ಇಂತು ಚತುರ್ದಶಭುವನಂ
ತಿಂತಿಣಿಯಿಂದಿರ್ಕುಮಿದಱೊಳೊಪ್ಪಿರ್ಪ ಧರಾ
ಕಾಂತೆಯಮೇಲೆಸೆಗುಂ ನಿ
ಶ್ಚಿಂತಂ ಪರಿಭಾವಿಸಲ್ಕೆ ನಾನಾದೇಶಂ ೬

ವ॥ ಮತ್ತಮಾ ಭೂಮಿಗೆ ಸೀಮೆಯಾಗಿ

ಮ ಸ್ರ॥ ಪೃಥುಸತ್ತ್ವರ್ ದೇವದೈತ್ಯರ್ ತಮಗಭಿಮತಮಾಗಲ್ಕೆ ಸಂರಂಭದಿಂದಂ
ಮಥಿಸಲ್ ಮಾಂಗಲ್ಯವಸ್ತು ಪ್ರಕರಮನಮೃತಾಹಾರಮಂ ಕೊಟ್ಟುಮತ್ತಂ
ವ್ಯಥೆತಾಂಪುಟ್ಟಲ್ಕೆ ಹಾಲಾಹಲಮನುಗುಳ್ವ ಗಂಭೀರಸಾಮರ್ಥ್ಯತೇಜಃ
ಪ್ರಥಿತಪ್ರಖ್ಯಾತಿವೆತ್ತಂ ಸಲೆಜಲಚರ ಸಂಘಾತ ರೌದ್ರಂ ಸಮುದ್ರಂ ೭

ಚಂ॥ ಅತಿಲವಣೇಕ್ಷುವಾರುಣಿ ಘೃತಂದಧಿದುಗ್ಧಮಗಾಧವಾರಿ ಪೇ
ಳತುಲಸಮುದ್ರಮೊಂದಱಿನದೊಂದಧಿಕಂ ಪಡೆದಲ್ಲಿ ಸಪ್ತಸಂ
ಮಿತವೆನೆ ದೀವಿಯಂತವಱಮಧ್ಯದೊಳಿರ್ಪುದು ಚಕ್ರಮಧ್ಯದಾ
ಯತಿ ಮಣಿಕೇವಣಂಬೊಲನಿಶಂ ಸುಖಮಂ ತಳೆದಂಬುಜಾನನೇ ೮

ಪ್ರಸಿದ್ಧವಾಗಿವೆ. ೫. ಸೂರ್ಯಮಂಡಲದ ಮೇಲೆ ಚಂದ್ರಮಂಡಲವಿದೆ. ಅದರ ಮೇಲೆ ತಾರೆಗಳ ಸಂಚಾರ, ಮತ್ತು ಭುವನಗಳಿಗಾಧಾರವಾದ ವಿವಿಧ ವಾಯುಸ್ಕಂಧಗಳ ಸಂಚಾರ. ೬. ಹೀಗೆ ಹದಿನಾಲ್ಕು ಲೋಕಗಳು ಸಾಲಾಗಿವೆ. ಇವುಗಳಲ್ಲಿ ಪ್ರಕಾಶಮಾನವಾದ ಭೂಮಿಯ ಮೇಲೆ ನಾನಾ ದೇಶಗಳು ಒಪ್ಪಿವೆ. ವ॥ ಮತ್ತೆ ಆ ಭೂಮಿಗೆ ಎಲ್ಲೆಯಾಗಿ—೭. ಸಮುದ್ರವು ಮಹಾಪರಾಕ್ರಮಿಗಳಾದ ದೇವತೆಗಳೂ ದೈತ್ಯರೂ ಒಪ್ಪಿ ವೇಗದಿಂದ ಕಡೆಯಲು ಮಂಗಳಕರವಾದ ವಸ್ತುಗಳನ್ನೂ ಅಮೃತವನ್ನೂ ಕೊಟ್ಟಿತು. ಅನಂತರ ಅದರಿಂದ ದುಃಖಿಗೊಂಡು ಹಾಲಾಹಲವಿಷವನ್ನು ಹೊರ ಚೆಲ್ಲಿತು. ಇಂಥ ಸಾಮರ್ಥ್ಯ ಮತ್ತು ತೇಜಸ್ಸುಳ್ಳ ಪ್ರಖ್ಯಾತವಾದ ಸಮುದ್ರವು ಜಲಚರ ಸಮೂಹದಿಂದ ರೌದ್ರವಾಗಿ ಕಂಗೊಳಿಸುತ್ತದೆ. ೮. ಲವಣ, ಇಕ್ಷು, (ಕಬ್ಬಿನಹಾಲು) ವಾರುಣಿ (ಹೆಂಡ) ಘೃತ, ದಧಿ, ದುಗ್ಧ, ವಾರಿ (ನೀರು) ಈ ಹೆಸರಿನ ಏಳು ಸಮುದ್ರಗಳಿವೆ. ಇವು ಒಂದಕ್ಕಿಂತ ಇನ್ನೊಂದು ದೊಡ್ಡದು. ಇವುಗಳ ನಡುವೆ ಏಳು ದ್ವೀಪಗಳು ಚಕ್ರಮಧ್ಯದಲ್ಲಿ (ಗುಂಬದಲ್ಲಿ?) ಮಣಿಗಳನ್ನು ಪೋಣಿಸಿದಂತೆ ಕಾಣುತ್ತವೆ, ಕಮಲ

ಕಂ॥ ಸಲೆಜಂಬೂಪ್ಲಕ್ಷಂ ಶಾ
ಲ್ಮಲಿ ಕುಶವಾಕ್ರೌಂಚಪುಷ್ಕರಂ ಶಾಖಿಂಗಳ್
ತಿಳಿಯಲ್ ಸಪ್ತದ್ವೀಪಂ
ಜಳಜಾನನೆ ಸಕಲ ರತ್ನಬೀಜಾವಾಪಂ ೯

ವ॥ ಮತ್ತಮಾ ಸಮುದ್ರಮುದ್ರಿತ ಭೂಮಧ್ಯದಲ್ಲಿ

ಸುರನಿಕರಂ ಪುಳಿಂದರಮರಾಂಗನೆಯರ್ ಶಬರೀಚಯಂ ದಿಶಾ
ಕರಿಮೃಗರಾಜಿ ಸಿದ್ಧರಸಮೊಜ್ಜರಮೊಪ್ಪುವ ಹೇಮಕಾಂತಿ ಭಾ
ಸುರದವವಹ್ನಿ ರತ್ನನಿಚಯಂ ತಿರಿಕಲ್ಲೆನೆ ಪದ್ಮಜಂಧರಾ
ತರುಣಿಗೆ ರಂಜಿಸಿಟ್ಟ ಕೃತಕಾದ್ರಿವೊಲಿರ್ದುದು ಮೇರುಪರ್ವತಂ ೧೦

ವ॥ ಮತ್ತಮದು ಗಾಂಗೇಯ ತೇಜೋರಂಜಿತಮಾಗಿಯುಂ ಭಾರತಸಂಬಂಧಮಲ್ತು ಕುಲಗೋತ್ರಪರಿವೇಷ್ಟಿತಮಾಗಿಯುಂ ಸಂಸಾರಿಯಲ್ತು ಸುರಾಧಿವಾಸಮಾಗಿಯುಂ ಜನನಿಂದ್ಯ ಮಲ್ತು ಧರಣೀಧರಮಾಗಿಯುಂ ವರಾಹಾವತಾರಮಲ್ತು ಶೃಂಗಾನ್ವಿತಮಾಗಿಯುಂ ಮೃಗರೂಪ ಮಖಿಲ ರತ್ನಕಟಕರಂಜಿತಮಾಗಿಯುಂ ಹಸ್ತನ್ಯಸ್ತಮಲ್ತೆನಿಸಿರ್ಪುದು ಅಂತುಮಲ್ಲದೆಯುಂ

ಮುಖಿಯೇ ಕೇಳು. ೯. ಜಲಜಮುಖಿ. ಕೇಳು, ಜಂಬು ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಪುಷ್ಕರ, ಶಾಖ ಎಂಬ ಏಳು ದ್ವೀಪಗಳಿವೆ. ಇವು ಸಕಲರತ್ನ ಬೀಜಗಳಿಗೂ ಆಶ್ರಯ ಸ್ಥಾನವಾಗಿವೆ—ವ॥ ಆ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಧ್ಯ ದಲ್ಲಿ ೧೦. ದೇವತೆಗಳೇ ಬೇಡರು, ದೇವನಾರಿಯರೇ ಬೇಡಿತಿಯರು. ದಿಗ್ಗಜಗಳೇ ಮೃಗಗಳ ಸಾಲು, ಸಿದ್ಧರಸವೇ ಚಿಲುಮೆ, ಹೊಳೆಯುವ ಚಿನ್ನದ ಕಾಂತಿಯೇ ಪ್ರಕಾಶ ಮಾನವಾದ ಕಾಳ್ಕಿಚ್ಚು, ರತ್ನಗಳ ಸಮೂಹವೇ ಆಟದ ಕಲ್ಲು ಎಂಬುವಂತೆ ಬ್ರಹ್ಮನು ಭೂಮಿಯೆಂಬ ತರುಣಿಗೆ ಏರ್ಪಡಿಸಿದ ಕೃತಕವಾದ ಕ್ರೀಡಾಪರ್ವತವೋ ಎಂಬಂತೆ ಮೇರುಪರ್ವತವು ಪ್ರಕಾಶಿಸುತ್ತದೆ. ವ॥ ಮತ್ತೆ ಅದು ಗಾಂಗೇಯ ತೇಜಸ್ಸಿನಿಂದ ರಂಜಿತವಾಗಿದ್ದರೂ ಭಾರತದ ಸಂಬಂಧವನ್ನು ಹೊಂದಿಲ್ಲ (ಗಾಂಗೇಯ=1 ಚಿನ್ನ 1 ಭೀಷ್ಮ) ಕುಲಗೋತ್ರಗಳಿಂದ ಕೂಡಿಕೊಂಡಿದ್ದರೂ ಸಂಸಾರಿಯಲ್ಲ. (ಕುಲಗೋತ್ರ =ಕುಲಪರ್ವತ 3 ಜಾತಿ ಮತ್ತು ವಂಶ) ಸುರಾಧಿವಾಸವಾಗಿದ್ದರೂ ಜನರನಿಂದೆಗೆ ಗುರಿಯಾಗಿಲ್ಲ. (ಸುರಾಧಿವಾಸ=1 ದೇವತೆಗಳಿಗೆ ವಾಸಸ್ಥಳ. 2 ಮದ್ಯಕ್ಕೆ ಆಶ್ರಯ) ಧರಣೀಧರವಾಗಿದ್ದರೂ ವರಾಹಾವತಾರವಲ್ಲ. (ಧರಣೀಧರ=1 ಪರ್ವತ 2 ಭೂಮಿ ಯನ್ನು ಧರಿಸಿರುವ) ಶೃಂಗಾನ್ವಿತವಾಗಿದ್ದರೂ ಮೃಗ ರೂಪವನ್ನು ಹೊಂದಿಲ್ಲ (ಶೃಂಗ=1 ಶಿಖರ, 2 ಕೊಂಬು) ರತ್ನ ಕಟಕದಿಂದ ರಂಜಿತವಾಗಿದ್ದರೂ ರತ್ನಕಟಕ ವನ್ನು ಕೈಯಲ್ಲಿ ತೊಟ್ಟಿರುವುದಲ್ಲ. (ರತ್ನಕಟಕ=1 ರತ್ನಗಳು ತುಂಬಿದ ತಪ್ಪಲು

ಕಂ॥ ಅದಱಿಂದಪ್ಪುವ ತೆಂಕಲ್ ಪೆ
ರ್ಚಿದ ಹಿಮವಾನ್ ಹೇಮಕೂಟನಿಷಧಂ ಬಡಗಲ್
ಸದಮಳನೀಲಶ್ವೇತಂ
ಪದೆಪಿಂ ಶೃಂಗಿಗಳೆನಲ್ಕೆ ವರ್ಷಗಿರೀಂದ್ರಂ ೧೧

ಅದಱಿಂ ಮೂಡಲ್ ಮಂದರ
ಮದು ತೆಂಕಲ್ ಗಂಧಮಾದನಂ ಪಡುವಲ್ ಪೆ
ರ್ಚಿದ ನಿಷಧಮದಱ ಬಡಗಲ್
ಪದೆದು ಸುಪಾರ್ಶ್ವಂ ಸುರಾದ್ರಿಗೆಸೆದಪುದಬಲೇ ೧೨

ಈ ವಿವಿಧಗಿರಿಗಳೊಳ್ ಸ
ದ್ಭಾವಕಿಕೇಳ್ ಕಡವು ಜಂಬು ಪಿಪ್ಪಲವಾಲಂ
ತೀವಿರ್ಕುಂ ಮತ್ತವಱಿಂದೊಳ್
ಭಾವಿಸಿ ಕೇಳ್ ಪೇೞ್ವೆನವಱ ನಂದನವನಮಂ ೧೩

ಕ್ರಮದಿಂ ಚೈತ್ರರಥಂ ಗಂ
ಧಮಾದ ವೈಭ್ರಾಜ ನಂದನಂಗಳೆನಿಪುವಂ
ಕಮಳನಿಭಾಸನೆ ಕೇಳ್ ಮ
ತ್ತೆಮುಂದಂ ವಿಗ ಪೇೞ್ವೆನೆಸೆವ ಸುರಸರಸಿಗಳಂ ೧೪

ಅರುಣೋದ ಮಹಾಭದ್ರಂ
ಸ್ಫುರಿಸಿದೊಡಾ ಅಗ್ರಮಾನಸಂ ಸರಸಿಗಳಾ
ಗಿರಿಗಳಮೇಲೆಸೆದಿರ್ಕುಂ
ಗುರುಕುಚೆಕೇಳ್ ಮತ್ತೆ ಪೇೞ್ವೆನಱು ಕುಲಗಿರಿಯಂ ೧೫

2 ರತ್ನಖಚಿತವಾದ ಬಳೆ). ಅಷ್ಟೇ ಅಲ್ಲದೆ—೧೧. ಆ ಮೇರು ಪರ್ವತದ ದಕ್ಷಿಣಕ್ಕೆ ಹಿಮವಂತ, ಹೇಮಕೂಟ, ನಿಷಧ ಎಂಬ ಪರ್ವತಗಳಿವೆ. ಉತ್ತರಕ್ಕೆ ಅಮಲವಾದ ನೀಲಿ ಮತ್ತು ಬಿಳಿಬಣ್ಣದ ಶಿಖರಗಳುಳ್ಳ ವರ್ಷವೆಂಬ ಗಿರೀಂದ್ರವಿದೆ. ೧೨. ಅದರ ಪೂರ್ವಕ್ಕೆ ಮಂದರ ಪರ್ವತ, ದಕ್ಷಿಣಕ್ಕೆ ಗಂಧಮಾದನ ಪರ್ವತ, ಪಶ್ಚಿಮಕ್ಕೆ ಎತ್ತರವಾದ ನಿಷಧ ಪರ್ವತ, ಅದರ ಉತ್ತರಕ್ಕೆ ಸುಪಾರ್ಶ್ವಪರ್ವತವು. ಸುರಾದ್ರಿಗೆ ಸಮವಾಗಿ ಪ್ರಕಾಶಿಸುತ್ತದೆ. ೧೩. ಸುಧ್ಭಾವನೆಯುಳ್ಳವಳೆ ಕೇಳು, ಈ ವಿವಧ ಗಿರಿಗಳಲ್ಲಿ ತಾಳೆ, ನೇರಳೆ, ಅರಳಿ, ಆಲ ಮೊದಲಾದ ಮರಗಳು ತುಂಬಿವೆ. ಅವುಗಳಿಗೆ ಸಂಬಂಧಿಸಿದ ನಂದನವನಗಳನ್ನು ಹೇಳುತ್ತೇನೆ ಗಮನಿಸಿ ಕೇಳು. ೧೪. ಕಮಲಮುಖಿಯೆ ಕೇಳು, ಅವುಗಳಿಗೆ ಕ್ರಮವಾಗಿ ಚೈತ್ರರಥ, ಗಂಧಮಾದನ, ವೈಭ್ರಾಜ, ನಂದನ ಎಂಬ ಹೆಸರಿನ ನಂದನವನಗಳಿವೆ. ಮತ್ತೆ ಅವುಗಳಿಗೆ ಸೇರಿದ ದೇವ ಸರೋವರಗಳನ್ನು ಹೇಳುತ್ತೇನೆ. ೧೫. ಗುರುಕುಚೆಯೆ. ಕೇಳು : ಆ ಗಿರಿಗಳ ಮೇಲೆ, ಅರುಣೋದ, ಮಹಾಭದ್ರ, ಮಾನಸ ಎಂದು ಪ್ರಕಾಶಮಾನವಾದ ಸರೋವರಗಳಿವೆ. ಮತ್ತೆ ಆರು ಕುಲಪರ್ವತಗಳನ್ನು ಹೇಳುತ್ತೇನೆ.

ವ॥ ಅವಾವುವೆಂದೊಡೆ

ಕಾದಲೆ ಕೇಳ್ ಮಹೇಂದ್ರ ಮಲಯಾಚಲ ಸಹ್ಯಗಿರೀಂದ್ರ ಶುಕ್ತಿಮಾನ್
ಭೇದಿಸೆ ಯಕ್ಷಪರ್ವತ ಸುವಿಂಧ್ಯ ಮಹೀಧರ ಪಾರಿಯಾತ್ರಮೆಂ
ದಾದುವು ಗೋತ್ರಶೈಲಮಿಳೆಗಬ್ಜಭವಂ ಮಿಗೆ ಕೊಟ್ಟ ಕೀಲ್ಗಳಿಂ
ದಾದಿ ಜಗಂಗಳಾಂಕೆಯೆನೆ ರಂಜಿಸುಗುಂ ಧವಳಾಬ್ಜಲೋಚನೇ ೧೬

ವ॥ ಮತ್ತಂ

ಕಂ॥ ಸುರುಚಿರ ಭಾರತ ಕಿಂಪುರು
ಷ ರಮ್ಯ ಹರಿವರ್ಷಮೆಂಬುವಿವು ವರ್ಷಂ ತ
ದ್ಗಿರಿಯೆಸೆವ ತೆಂಕಲಿರ್ಕುಂ
ತೆರಳದಿಳಾವೃತಮದಂ ಕರಂ ಬಳಸಿರ್ಕುಂ ೧೭

ವ॥ ಅದಲ್ಲದೆಯುಂ

ಕಂ॥ ಜಂಬೂಫಲವೊಂದಾಶಾ
ಸ್ತಂಬೇರಮದಂತುಟಲ್ಲಿ ಬೀೞಲ್ಕದಱಿಂ
ಜಂಬೂದ್ವೀಪಮದಾದುದು
ಬಿಂಬಾಧರೆ ಕೇಳ್ ಪ್ರಸಿದ್ಧಮುರ್ವೀತಳದೊಳ್ ೧೮

ಆ ಜಂಬೂಫಲರಸಮು
ವ್ಯಾಜದಿನಿಳೆಯಲ್ಲಿ ಪರಿಯಲದಱಿಂ ಜನಿಸಿ
ತ್ತೀ ಜಗದೊಳ್ ಹೇಮಂ ನಾ
ನಾಜನ ಸುಕ್ಷೇಮಮಂಬುಜಾಯತನೇತ್ರೇ ೧೯

ಅವು ಯಾವುವು ಎಂದರೆ ೧೬. ಬೆಳ್ದಾವರೆಯಂತೆ ಕಣ್ಣುಳ್ಳವಳೆ, ಪ್ರಿಯಳೆ, ಕೇಳು. ಮಹೇಂದ್ರವಲಯ, ಸಹ್ಯ, ಶುಕ್ತಿಮಾನ್, ಯಕ್ಷ, ವಿಂಧ್ಯ, ಪಾರಿಮಾತ್ರ ಎಂದು ಏಳು ಕುಲಪರ್ವತಗಳಿವೆ. ಇವು ಬ್ರಹ್ಮನು ಭೂಮಿಗೆ ಆಧಾರವಾಗಿ ಕೊಟ್ಟ, ಆದಿಜಗತ್ತುಗಳಿಗೆ ಆನಿಸಿದ ಊರುಗೋಲುಗಳಂತೆ ರಂಜಿಸುತ್ತವೆ. ವ॥ ಮತ್ತು—೧೭. ಸುಂದರವಾದ ಭಾರತವರ್ಷ, ಕಿಂಪುರುಷವರ್ಷ, ಹರಿವರ್ಷ ಎಂಬ ವರ್ಷಗಳು ಆ ಗಿರಿಯ ದಕ್ಷಿಣಕ್ಕಿವೆ. ಇಳಾವೃತವರ್ಷವು ಅದನ್ನು ಎಡೆಬಿಡದೆ ಬಳಸಿಕೊಂಡಿದೆ. ವ॥ ಅದೂ ಅಲ್ಲದೆ ೧೮. ತೊಂಡೆವಣ್ಣು ತುಟಿಯುವಳೆ, ಕೇಳು, ಅಲ್ಲಿ ದಿಗ್ಗಜದಂತಿದ್ದ ಒಂದು ಜಂಬೂ ಫಲವು ಬಿದ್ದಿತು. ಅದರಿಂದ ಭೂಮಂಡಲದಲ್ಲಿ ಅದು ಜಂಬೂ ದ್ವೀಪವೆಂದು ಪ್ರಸಿದ್ಧವಾಯಿತು. ೧೯. ಕಮಲದಂತೆ ಅಗಲವಾದ ಕಣ್ಣುಳ್ಳವಳೇ, ಕೇಳು, ಆ ಜಂಬೂ ಫಲದ ರಸವು ನೆವವಿಲ್ಲದೆ ಭೂಮಿಯ ಮೇಲೆ ಹರಿಯಿತು. ಅದರಿಂದ ಈ ಜಗದಲ್ಲಿ ಎಲ್ಲ

ವ॥ ಮತ್ತಮಾ ಮೇರುಗಿರಿಯೊಳ್

ಕಂ॥ ಜ್ಯೋತಿಶ್ಚಕ್ರಂ ತುದಿಯೊಳ್
ಮಾತೇಂ ಜಲಘಟಿಕದ ತೆಱದೆ ತಿರುಗುತ್ತಿರ್ಕುಂ
ಖ್ಯಾತಿಯ ಮೇರುವಿನೊಳ್ ನಿ
ರ್ಣೀತಂ ತದ್ಭ್ರಮಣಮುದಯಮಸ್ತಮಯಂಗಳ್ ೨೦

ಗ್ರಹಚಾರ ಸ್ಥಿತಿಯಿಂದಂ
ಗ್ರಹಣಮನಾವೃಷ್ಟಿಗಳೀ...
ಮಹಿಯೊಳ್ ತೋಱುಗುಮದಱಿಂ
ಸಹಜದೊಳಿರೆ ಸಕಲದೇಶದೊಳ್ ಸುಕ್ಷೇಮಂ ೨೧

ವ॥ ಅದಲ್ಲದೆಯುಂ

ಸ್ರ॥ ಪಂಚಾಶತ್ಕೋಟಿ ವಿಸ್ತೀರ್ಣದೊಳೆಸೆವ ಧರಾದೇವಿಗೊಪ್ಪಿರ್ಪುದೆಂದುಂ
ಕಾಂಚೀದಾಮಂಬೊಲುದ್ಯಚ್ಛರನಿಧಿ ನೆಗಱ್ದ ಭೂಮಿ ನೋಡಲ್ಕೆ ಮತ್ತಂ
ಚಂಚದ್ಭಾಗಾಂತರಂ ಭಾವಿಸಲದುನವಖಂಡಂ ಮಹಾಹೇಮ ರತ್ನೋ
ದಂಚದ್ಗರ್ಭಂ ನಿತಾಂತಂ ಸಕಲಧಾನ್ಯಪ್ರಭೂತಪ್ರದೇಶಂ ೨೨

ಕಂ॥ ಹಿಮಸೇತುಮಧ್ಯಭೂಮಿಯೊ
ಳಮರನದೀ ತತಿಗಳಿರ್ಪ ವಸುಸಂಕುಳದು
ರ್ಗಮ ಕಾನನ ದಾವಾಗ್ನಿಗ
ಳಮರ್ತ್ಯ ಲೋಕಪ್ರಸಿದ್ಧಿಗಳ್ ತರಳಾಕ್ಷೀ ೨೩

ಜನರಿಗೂ ಕ್ಷೇಮವನ್ನುಂಟುಮಾಡುವ ಚಿನ್ನವುಂಟಾಯಿತು. ವ॥ ಮತ್ತೆ ಆ ಮೇರು ಗಿರಿಯಲ್ಲಿ ೨೦. ಅದರ ತುದಿಯಲ್ಲಿ ಜ್ಯೋತಿಶ್ಚಕ್ರವು ರಾಟೆಯಂತೆ ತಿರುಗುತ್ತಿರುತ್ತದೆ. ಪ್ರಸಿದ್ಧವಾದ ಮೇರು ಪರ್ವತದಲ್ಲಿ ಅದರ ಭ್ರಮಣವು ನಿಯತವಾಗಿ ಉದಯಾಸ್ತ ಗಳನ್ನುಂಟುಮಾಡುತ್ತದೆ. ೨೧. ಗ್ರಹಗತಿಗಳಿಂದ ಈ ಭೂಮಿಯ ಮೇಲೆ ಗ್ರಹಣವೂ ಅನಾವೃಷ್ಟಿಯೂ ತೋರುತ್ತವೆ. ಅದರಿಂದ (ಗ್ರಹಗತಿಗಳು) ಸಹಜವಾಗಿದ್ದರೆ ಸಕಲ ದೇಶಗಳಲ್ಲಿ ಕ್ಷೇಮವುಂಟಾಗುತ್ತದೆ. ವ॥ ಅದೂ ಅಲ್ಲದೆ–೨೨. ಭೂದೇವಿಯು ಐವತ್ತು ಕೋಟಿ (ಯೋಜನ)ವು ವಿಸ್ತೀರ್ಣವಾಗಿ ಪ್ರಕಾಶಿಸುತ್ತದೆ. ಸಮುದ್ರವು ಆಕೆಯ ಒಡ್ಯಾಣ ದಂತೆ ಕಂಗೊಳಿಸುತ್ತದೆ. ಪ್ರಸಿದ್ಧವಾದ ಆ ಭೂಮಂಡಲ ಅನೇಕ ಭಾಗಗಳಿಂದ ಕೂಡಿದೆ, ಅದು ಒಂಭತ್ತು ಖಂಡಗಳುಳ್ಳುದು. ಸುವರ್ಣ ರತ್ನಗಳಿಂದಲೂ ವಿವಿಧ ಸಕಲ ಧಾನ್ಯ ಗಳಿಂದಲೂ ತುಂಬಿದೆ. ೨೩. ತರಳಾಕ್ಷಿ ಹಿಮಾಲಯ ಮತ್ತು ಸೇತು ತೀರ್ಥಗಳ ನಡು ವಿನ ಭೂಮಿಯಲ್ಲಿರುವ, ದೇವನದಿಗಳು, ನಿಧಿಗಳು, ದಟ್ಟವಾದ ಕಾಡುಗಳು, ಕಾಳ್ಕಿಚ್ಚು

ಚಂ॥ ಸುರನದಿ ಗಂಗೆ ಗೌತಮಿ ಸರಸ್ವತಿ ನರ್ಮದೆ ಕೃಷ್ಣವೇಣಿ ಭೀ
ಮರಥಿ ಪಯೋಷ್ಣಿಕಾದ್ರಿ ಯಮುನಾನದಿ ಸಿಂಧು ಕವೇರಕನ್ಯೆ ಭಾ
ಸುರತರ ತುಂಗಭದ್ರೆಯೆನಿಪುತ್ತಮತೀರ್ಥಮನೇಕಮುರ್ವಿಯೊಳ್
ಪರಿವಿಡಿದಿರ್ಪುವಲ್ತೆ ದುರಿತಕ್ಷಯಕಾರಣ ಪುಣ್ಯಮೂರ್ತಿಗಳ್ ೨೪

ವ॥ ಮತ್ತಂ

ಉ॥ ಮಾಳವಗೌಳ ಘೂರ್ಜರ ವರಾಳ ಕಳಿಂಗ ತುರಷ್ಕ ಸಿಂಧು ನೇ
ಪಾಳ ಸುಪಾಂಡ್ಯ ಕೇರಳ ಮಹಾಂಧ್ರ ಸುರಾಷ್ಟ್ರಮಿಮಾದಿಯಾದ ಸ
ಲ್ಲೀಲೆಯ ದೇವಸಂತತಿಯನೇಕಮೆನಲ್ ಮೆಱೆದಿರ್ಪುವಲ್ತೆ ಕೇಳ್
ಬಾಲಕಿ ನೋಡಲಲ್ಲಿ ಸುಖಸಂತತಿ ಸಂದೆಸೆಗುಂ ನಿರಂತರಂ ೨೫

ಶಾ॥ ಈ ದೇಶಂಗಳೊಳುಳ್ಳ ನಾರಿಯರೊಳೊಂದೊಂದತ್ಯಪೂರ್ವಂ ಕಳಾ
ಭೇದಂ ಕೂರ್ಮೆಯೊಳಾದಸಂಗಮವಿನೋದಂ ರೂಪಲಾವಣ್ಯಸಂ
ಮೋದಂ ಪೆಂಪಿನೊಳೊಪ್ಪುತಿರ್ಪವನಿತಾ ಸಲ್ಲಕ್ಷಣಂ ಕೇಳವಂ
ತೀದೇವೀ ವಿವರಕ್ಕಗೋಚರಮೆಲೇ ಶುಂಭ (ಶುಭ್ರ ?) ತ್ಪ್ರವಾಳಾಧರೇ ೨೬

ಕಂ॥ ಇದು ಕರ್ಮಭೂಮಿಯಿದಱೊಳ್
ಸದಮಳ ಧರ್ಮಾರ್ಥಕಾಮಮಂ ಸಾಧಿಸದು
ಬರ್ದ ದುಷ್ಕರ್ಮಮನೆಸಗುವ
ಮದಮುಖರಿಹಪರಸುಖಕ್ಕೆ ಬಾಹಿರರಲ್ತೇ ೨೭

ಇವು ದೇವಲೋಕದಲ್ಲಿಯೂ ಹೆಸರುವಾಸಿಯಾಗಿವೆ. ೨೪. ದೇವನದಿಯಾದ ಗಂಗೆ, ಗೌತಮಿ, ಸರಸ್ವತಿ, ನರ್ಮದೆ, ಕೃಷ್ಣವೇಣಿ, ಭೀಮರಥಿ, ಪಯೋಷ್ಣಿ, ಯಮುನೆ, ಸಿಂಧು, ಕಾವೇರಿ, ತುಂಗಭದ್ರೆ ಮೊದಲಾದ ಉತ್ತಮ ತೀರ್ಥಗಳು ಈ ಭೂಮಿಯಲ್ಲಿ ಕ್ರಮವಾಗಿ ಇವೆ. ಇವು ಪಾಪನಾಶಕವಾದ ಪುಣ್ಯ ಮೂರ್ತಿಗಳು. ವ॥ ಮತ್ತು— ೨೫. ಬಾಲಕಿ, ನೋಡು. ಈ ಭೂಮಿಯಲ್ಲಿ ಮಾಳವ, ಗೌಳ, ಘುರ್ಜರ, ವರಾಳ, ಕಳಿಂಗ, ತುರುಷ್ಕ, ಸಿಂಧು, ನೇಪಾಳ, ಪಾಂಡ್ಯ, ಕೇರಳ, ಆಂಧ್ರ, ಸುರಾಷ್ಟ್ರ ಮೊದಲಾದ ಸುಂದರವಾದ ದೇಶಗಳು ಅನೇಕವಾಗಿವೆ. ಈ ದೇಶಗಳಲ್ಲಿ ಸುಖ ಸಮೂಹವು ನಿರಂತರವಾಗಿ ತುಂಬಿದೆ. ೨೬. ಹೊಳೆಯುವ ಹವಳದಂತೆ ತುಟಿಯುಳ್ಳ ಅವಂತೀದೇವಿ ! ಈ ದೇಶಗಳಲ್ಲಿರುವ ನಾರಿಯರಲ್ಲಿ ಒಬ್ಬೊಬ್ಬರಲ್ಲಿ ಒಂದೊಂದು ಬಗೆಯ ಕಳೆಗಳಿವೆ. ಸ್ನೇಹದಿಂದಾದ ಸಂಗಮವು ವಿನೋದಕರವಾಗಿದೆ. ರೂಪ ಲಾವಣ್ಯಗಳು ಸಂಮೋದಕರವಾಗಿದೆ. ಸ್ತ್ರೀಯರಲ್ಲಿರಬೇಕಾದ ಒಳ್ಳೆಯ ಲಕ್ಷಣಗಳು ಹಿರಿಮೆಯಿಂದ ಪ್ರಕಾಶಿಸುತ್ತವೆ. ಅವನ್ನು ವಿವರಿಸುವುದು ತುಂಬ ಕಷ್ಟ. ೨೭. ಇದು ಕರ್ಮ ಮಾಡಬೇಕಾದ ಭೂಮಿ ಇದರಲ್ಲಿ ಅಮಲವಾದ ಧರ್ಮ ಅರ್ಥ ಕಾಮಗಳನ್ನು ಸಾಧಿಸಿದೆ. ಕೊಬ್ಬಿದ, ದುಷ್ಕರ್ಮಗಳನ್ನು ಮಾಡುವ ಮತ್ತರು ಇಹಲೋಕ ಮತ್ತು ಪರಲೋಕದ ಸುಖಗಳಿಗೆ ಹೊರತಾದವರು. ಅಂಥವರಿಗೆ ಇಹಪರ ಸುಖಗಳಾವುವೂ ಇಲ್ಲ."

ವ॥ ಎಂದನಂತರಂ

ಇದಱ ವಿಶೇಷಮಂ ನಿನಗೆ ಪೇೞ್ವುದದಗ್ಗಳಮೆನ್ನ ಬಲ್ಲವೋಲ್
ಪದೆದಱಿವಂತುಟಂ ನಿನಗೆ ಪೇೞ್ವೆನೆನಲ್ ಸುಕುಮಾರನಂ ಮನೋ
ಮುದದಿನವಳ್ ವಿಳಾಸಮೆನಲಪ್ಪಿ ತದೋಷ್ಠಮನೀಳ್ದು ಚುಂಬಿಸಲ್
ಸದಮಳರಾಗಮಂ ತಳೆದು ತಾಂ ಮಗುಳ್ದಪ್ಪಿದನುರ್ವರಾಧಿಪಂ ೨೮

ವ॥ ಅಂತಾ ಭುವನಕೋಶಮಂ ರಾಜವಾಹನನಿಂ ಸೂಚನಮಾತ್ರದಿಂದಱಿದ ಅವಂತೀ ಸೌಂದರಿ

ಉ॥ ಶ್ರೀಮದಶೇಷ ಸದ್ಭುವನಕೋಶಮನೆಯ್ದಯುವಂತಿ ಸೌಂದರೀ
ಕಾಮಿನಿ ರಾಜವಾಹನನೃಪನಿಂ ಸಲೆಕೇಳ್ದಲೆ ಭೂಪಮನ್ಮನಃ
ಪ್ರೇಮಮೆನಿಪ್ಪ ನಿನ್ನ ನುಡಿ ಕರ್ಣರಸಾಯನಮಾಯ್ತನಂತ ಸೌ
ಖ್ಯಾಮೃತಮಂ ಸಮಂತು ಪಡೆದೆಂ ಸಕಲೇಂದ್ರಿಯ ಸೌಖ್ಯಸಾರಮಂ ೨೯

ವ॥ ಆವೊಡಮಾಂ ನಿನಗೆ ಮಾೞ್ಪ ಪ್ರತ್ಯುಪಕಾರಮಾವುದುಮಿಲ್ಲದೊಡಂ

ಉ॥ ಶಾರದೆ ರಂಜಿಸಿರ್ಪ ಮುಖಪಂಕಜಮಂ ಸಲೆ ಲಕ್ಷ್ಮಿಯೊಪ್ಪುವೀ
ಪೇರುರಮಂ ಸಪತ್ನಿಯರ ಯತ್ನದೆ ಸೋಂಕಿದ ತಾಣಮೆಂಬ ಲ
ಜ್ಜಾರಯಮಿಲ್ಲದಾಂ ಮಗುಳ್ದು ಚುಂಬಿಸಿಯಪ್ಪುವ ಧೈರ್ಯಮಂ ಮಹೋ
ದಾರದೊಳೀಕ್ಷಿಸೊಲ್ದು ನೃಪನಂದನ ನಿನ್ನ ಗುಣಾತಿರೇಕದಿಂ ೩೦

ವ॥ ಎಂದು ಹೇಳಿ ಅನಂತರ—೨೮. 'ಇದರ ವಿಶೇಷವನ್ನು ನಿನಗೆ ಹೇಳುವುದು ಕಷ್ಟ. ನನಗೆ ತಿಳಿದಿರುವಂತೆ ಹೇಳುವೆನು' ಎಂದು ಅವನು ಹೇಳಿದನು. ಇದನ್ನು ಕೇಳಿ ಅವಳು ಆ ಸುಕುಮಾರನನ್ನು ಹರ್ಷದಿಂದ ಬೆಡಗನ್ನು ತೋರುತ್ತಾ ತಬ್ಬಿಕೊಂಡಳು. ಅವನ ತುಟಿಯನ್ನು ಚುಂಬಿಸಿದಳು. ಅದರಿಂದ ಅನುರಾಗವು ಹೆಚ್ಚಿ ರಾಜಕುಮಾರನು ಮತ್ತೆ ಅವಳನ್ನು ತಬ್ಬಿಕೊಂಡನು. ವ॥ ಹಾಗೆ ಭುವನ ಕೋಶ ವಿಚಾರವನ್ನು ರಾಜವಾಹನದಿಂದ ಸಂಗ್ರಹವಾಗಿ ತಿಳಿದು ಅವಂತೀ ಸೌಂದರಿಯು—೨೯. "ರಾಜನೆ! ನನ್ನ ಮನಸ್ಸಿನ ಪ್ರೇಮರೂಪವಾದ ಭುವನಕೋಶ ವಿಚಾರವಾದ ನಿನ್ನ ಮಾತು ನನ್ನ ಕರ್ಣಗಳಿಗೆ ರಸಾಯನವಾಯಿತು. ಸಕಲೇಂದ್ರಿಯಗಳ ಸೌಖ್ಯಸಾರವಾದ ಅನಂತವಾದ ಸೌಖ್ಯಾಮೃತವನ್ನು ಪಡೆದೆನು. ವ॥ ನಾನು ನಿನಗೆ ಮಾಡುವ ಪ್ರತ್ಯುಪಕಾರವು ಯಾವುದೂ ಇಲ್ಲ. ಆದರೂ—೩೦. ನಿನ್ನ ಮುಖ ಪಂಕಜದಲ್ಲಿ ಶಾರದೆಯು ರಂಜಿಸುತ್ತಾಳೆ. ನಿನ್ನ ಈ ವಿಶಾಲವಾದ ಎದೆಯಲ್ಲಿ ಲಕ್ಷ್ಮಿಯು ಪ್ರಕಾಶಿಸುತ್ತಾಳೆ. ಸವತಿಯರು ಪ್ರಯತ್ನವಿಲ್ಲದೆ ಈ ಸ್ಥಾನಗಳನ್ನು ಸ್ಪರ್ಶಿಸಿದ್ದಾರೆ ಎಂಬುದನ್ನು ನಾನು ಮರೆತು ಸ್ವಲ್ಪವೂ ನಾಚಿಕೆಯಿಲ್ಲದೆ ನಿನ್ನ ಗುಣ ವಿಶೇಷಗಳಿಗೆ ಮಾರುಹೋಗಿ ಮತ್ತೆ ನಿನ್ನ ಮುಖವನ್ನು ಚುಂಬಿಸುತ್ತೇನೆ. ಎದೆಯನ್ನು ತಬ್ಬಿಕೊಳ್ಳುತ್ತೇನೆ.

ವ॥ ಅಂತೆಂದು

ಕಂ॥ ಈತನ ಸೌಖ್ಯಾಮೃತಸಂ
ಪಾತಕ್ಕಿದು ತಾಣಮೆಂದು ತಾಮ್ರಾಧರಮಂ
ಪ್ರೀತಿಯಿನೊಪ್ಪಿರೆ ಚುಂಬಿಸಿ
ನೂತನ ಸೌಖ್ಯಕ್ಕೆ ತಾನೆ ನೆಲೆಯಿಸಿರ್ದಳ್ ೩೧

ಚಂ॥ ಕುಡಿಯಿಡುತಿರ್ಪ ಕಲ್ಪಲತೆ ಕಲ್ಪಕುಜಾಗ್ರಮನಪ್ಪುವಂತೆ ನಾಣ್
ಸಡಿಲೆ ಕುಮಾರನಂ ಭುಜಲತಾದ್ವಯದಿಂ ಬಿಗಿಯಪ್ಪಿ ಪೆಂಪಿನಿಂ
ಪಿಡಿದಧರಾಗ್ರಮಂ ಸವಿದು ಮತ್ತೆ ರತೋತ್ಸವದಿಚ್ಛೆಯಾಗೆ ನಾ
ಣ್ಡುಡುಕುವ ಕಾಂತೆಯಂ ಮಗುಳ್ದು ತಾನಮರ್ದಪ್ಪಿದನುರ್ವರಾಧಿಪಂ ೩೨

ವ॥ ಅಂತು ಮಗುಳ್ದು ಮಗುಳ್ದನೇಕ ಕರಣಂಗಳಿಂ ಕಾಮಕಲಹಮನೊಡರ್ಚಿ

ನೆಗೆದ ಕುಚಂಗಳೊಡ್ಡಟಿದು ಚಪ್ಪಲರ್ದಿರ್ಪಿನಮಂಗಮಂಗದೊಳ್
ಸೊಗಸುವಿನಂ ಪೊಗರ್ ಮಿಗುವ ತೋಳ್ನಳಿತೋಳೊಳಮರ್ಕಿವೆತ್ತಿರಲ್
ಬಿಗಿದಮರ್ದಪ್ಪಿಕೊಂಡು ಸುರತಶ್ರಮದಿಂ ಸುಖನಿದ್ರೆಗೈದು ಕಾ
ಮಿಗಳೆಸೆದರ್ ಮನೋಭವನ ನಾಟಕದೀಬಿನ ಬೊಂಬೆಯೆಂಬಿನಂ ೩೩

ಈ ನನ್ನ ಧೈರ್ಯವನ್ನು ಹೆಚ್ಚಾದ ಔದಾರ್ಯದಿಂದ ವೀಕ್ಷಿಸು.” ವ॥ ಹೀಗೆ ಹೇಳಿ— ೩೧. ಈತನ ಸೌಖ್ಯವೆಂಬ ಅಮೃತಾಸಾರಕ್ಕೆ ಇದು ಸ್ಥಾನವೆಂದು ಅವನ ಕೆಂಪಾದ ತುಟಿಯನ್ನು ಪ್ರೀತಿಯಿಂದ ಚುಂಬಿಸಿ ನೂತನವಾದ ಸೌಖ್ಯಕ್ಕೆ ತಾನೆ ನೆಲೆಯೆನಿಸಿದಳು. ೩೨. ಹಬ್ಬುವ ಕಲ್ಪಲತೆಯು ಕಲ್ಪವೃಕ್ಷಕ್ಕೆ ಸುತ್ತಿಕೊಳ್ಳುವಂತೆ ನಾಚಿಕೆಯನ್ನು ತೊರೆದು ಕುಮಾರನನ್ನು ಎರಡು ಭುಜಲತೆಗಳಿಂದಲೂ ಆಲಿಂಗಿಸಿಕೊಂಡಳು. ಹಿರಿದಾದ ಉತ್ಸಾಹದಿಂದ ಅವನ ಅಧರಾಗ್ರವನ್ನು ಸವಿದಳು. ಮತ್ತೆ ರತಿ ಕೇಳಿಯ ಆಶೆಯಾದರೂ ನಾಚಿಕೆಯು ಅಡ್ಡ ಬಂತು. ಆಗ ಕಾಂತೆಯನ್ನು ರಾಜಕುಮಾರನು ತಾನು ಮತ್ತೆ ಬಿಗಿಯಾಗಿ ಅಪ್ಪಿಕೊಂಡನು. ವ॥ ಮತ್ತೆ ಮತ್ತೆ ಅನೇಕ ವಿಧಾನಗಳಿಂದ ಕಾಮ ಕಲಹವನ್ನು ನಡೆಯಿಸಿದರು—೩೩. ಎತ್ತರವಾದ ಕುಚಗಳು ಒತ್ತಡವನ್ನು ಕಳೆದುಕೊಂಡು ಅದುಮಿ ಚಪ್ಪಟೆಯಾಗಿ ಅಗಲವಾಗುವಂತೆ ಕುಮಾರನ ಅಂಗವು ರಾಜಕುಮಾರಿಯ ಅಂಗದಲ್ಲಿ ಸೇರಿಕೊಂಡಿತು. ಸೊಗಸಾದ ಹೊಳೆಯುವ ಅವನ ತೋಳುಗಳು ಅವಳ ನಳಿ ತೋಳುಗಳಲ್ಲಿ ಬಿಗಿಯಾಗಿ ಹೆಣೆದುಕೊಂಡವು, ಬಿಗಿಯಾಗಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಸುರತ ಕೇಳಿಯ ಶ್ರಮದಿಂದ ಸುಖವಾಗಿ ನಿದ್ರಿಸಿದರು. ಹೀಗೆ ಕಾಮಿಗಳಾದ ಕುಮಾರ ಕುಮಾರಿಯರು ಮದನನ ನಾಟಕದ ಸುಂದರವಾದ ಬೊಂಬೆಗಳೋ ಎಂಬಂತೆ ಪ್ರಕಾಶಿ

ವ॥ ಅಂತು ಕಂದರ್ಪ ಕೇಳೀ ಕಲಹದೊಳ್ ಬಳಲ್ದು ಸುಖನಿದ್ರೆಯಿಂದಿರ್ಪಾಗಳ್

ಕಂ॥ ಜರಠ ಕಲಹಂಸ ಚರಣಾಂ
ತರದೊಳ್ ತಾವರೆಯನೂಲಸಂಕಲೆಯಿಕ್ಕಿ
ರ್ಪಿರವಿನ ಕನಸಂ ಕಂಡರ್
ನರಪತಿಯುಮವಂತಿ ಸೌಂದರಿಯುಮಾಕ್ಷಣದೊಳ್ ೩೪

ವ॥ ಅಂತು ದುಸ್ವಪ್ನಮಂ ಕಂಡು

ಕಂ॥ ಅರುಣೋದಯ ಕಾಲದೊಳಿ
ರ್ಬರುಮೊರ್ಮೊದಲೆೞ್ದು ನೋಡೆ ಭೂಪಾಲನ ಸ
ಚ್ಚರಣಾಗ್ರದೊಳಿರ್ದುದು ಭೀ
ಕರಮೆನಿಸುವ ಬೆಳ್ಳಿವೆಸೆದ ಸಂಕಲೆಯಾಗಳ್ ೩೫

ಚಂ॥ ಉಡುಗಣಮಂ ನಿಜಾಂಘ್ರಿನಖದೀಧಿತಿಯಿಂ ಸೆಱೆಗೆಯ್ದೆಯಿನ್ನವಂ
ಬಿಡುವುದೆನುತ್ತೆ ಪೂರ್ಣಶಶಿಕಾಲ್ವಿಡಿದಿರ್ದನೊ ಪೇೞೆನಲ್ಕೆ ಬೆ
ಳ್ಪಿಡೆವಿಡಿದಿರ್ಪ ರೂಪ್ಯಮಯಶೃಂಖಲೆ ರಾಜಕುಮಾರನಂಘ್ರಿಯೊಳ್
ತೊಡರ್ದಿರೆ ಕಂಡವಂತಿವಧು ಬಾಯೞಿದತ್ತಳತೀವ ಖೇದದೊಳ್ ೩೬

ವ॥ ಅಂತಶ್ರೀಕರಮಪ್ಪ ಸಂಕಲೆಯಂ ಕುಮಾರನ ಕಾಲೊಳ್ ಭೋಂಕೆನಲವಂತೀ ಸೌಂದರಿ ಕಂಡು

ಿದರು. ವ॥ ಕಾಮ ಕೇಳಿಯ ಕಲಹದಿಂದ ಬಳಲಿ ಸುಖನಿದ್ರೆಯಲ್ಲಿ ಮುಳುಗಿರುವಾಗ—೩೪. ಆ ಕ್ಷಣದಲ್ಲಿ ರಾಜನೂ ಅವಂತಿ ಸೌಂದರಿಯೂ 'ಮುದಿಯಾದ ಕಲಹಂಸದ ಕಾಲುಗಳಿಗೆ ತಾವರೆಯ ನೂಲಿನ ಸಂಕೋಲೆಯನ್ನು ತೊಡಿಸಿರುವಂತೆ' ಒಂದು ಕನಸನ್ನು ಕಂಡರು, ವ॥ ಹಾಗೆ ಕೆಟ್ಟ ಕನಸನ್ನು ಕಂಡು—೩೫. ಅರುಣೋದಯ ಕಾಲದಲ್ಲಿ ಇಬ್ಬರೂ ಮೊಟ್ಟಮೊದಲು ಎಚ್ಚೆತ್ತು ನೋಡಿದರು. ಭೂಪಾಲನ ಕಾಲುಗಳಿಗೆ ಭೀಕರವಾದ ಸಂಕೋಲೆಯನ್ನು ತೊಡಿಸಲಾಗಿದ್ದಿತು. ೩೬. 'ನಕ್ಷತ್ರಗಳನ್ನು ನಿನ್ನ ಪಾದಗಳ ಉಗುರಿನ ಕಾಂತಿಯಿಂದ ಸೆರೆಹಿಡಿದಿರುವೆ. ಇನ್ನು ಅವನ್ನು ಸೆರೆಯಿಂದ ಬಿಡು' ಎಂದು ಕೇಳಲು ಪೂರ್ಣಚಂದ್ರನು ಕಾಲು ಹಿಡಿದಿರುವನೋ ಎಂಬಂತೆ, ರಾಜಕುಮಾರನ ಕಾಲುಗಳಲ್ಲಿ ಬೆಳ್ಳಗೆ ಹೊಳೆಯುವ ಬೆಳ್ಳಿಯ ಸಂಕೋಲೆಯು ಕಾಣಿಸುತ್ತಿತ್ತು. ಅದನ್ನು ನೋಡಿ ಅವಂತಿ ಸೌಂದರಿಯು ತುಂಬ ದುಃಖದಿಂದ ಗೋಳಾಡಿದಳು. ವ॥ ಅಮಂಗಳಕರವಾದ ಸಂಕೋಲೆಯನ್ನು

ಪಾಪಿವಿಧಾತ್ರನಿಂ ಕುಸುಮಕೋಮಲದೇಹನ ಕಾಲ್ಗೆ ಬಂಧನಂ
ಪ್ರಾಪಿಸಲಕ್ಕುಮೇ ಎನುತೆ ಶೋಕಮನೈದೆ ಕುಮಾರಿ ತನ್ನ ಕಾಂ
ತಾ ಪರಿವಾರಮುಂ ಬೆರಸು ಬೇಡಲೆವಲ್ಲಭೆ ಶೋಕಮೆಂದು ಧಾ
ತ್ರೀಪತಿ ಪೇಟ್ದನೊಂದೆರಡು ತಿಂಗಳ ಬಂಧನಮೆಂದು ಕಾಂತೆಯೊಳ್ ೩೭

ಕಂ॥ ಆಂ ಪೂರ್ವಭವದೊಳೆರಡು ದಿ
ನಂ ಪಿಡಿತಂದೊಂದು ಹಂಸಿಯಂಘ್ರಿದ್ವಯಮಂ
ತಂಪಿನತಾವರೆ ನೂಲಿಂ
ಪೆಂಪಿಂ ಕಟ್ಟಿರ್ದೆನಂಬು ಕೇಳಿಯೊಳಬಲೇ ೩೮

ವ॥ ಅಂತಾ ಪೂರ್ವಭವದೊಳ್ ಶಾಂಭವನೆಂಬರಸಾಗಿರ್ದಲ್ಲಿ ಜಲಕ್ರೀಡಾ ಸಮಯದೊಳ್ ಒಂದು ಹಂಸಿಯನೆರಡುದಿನಂ ನಿರ್ಬಂಧಿಸಿದ ಕಾರಣದಿಂದೆನಗೀ ಜನ್ಮದೊಳಿಂತೀಬಂಧನಂ ಬಂದುದೆಂಬುದಂ ಕೇಳ್ದಱಿವೆನೆಂದೊಡಂ ಮಾಣದೆ

ಉ॥ ಇಂದುವ ಬಿಂಬದಿಂದಮೃತಬಿಂದುಗಳೊಕ್ಕಪುವೆಂಬವೋಲ್ ಮಹಾ
ಕ್ರಂದನವೇಗದಿಂದೆ ಸುರಿವಶ್ರುಜಲಂ ಪೊನಲಾಗೆ ಮತ್ತಮೆಂ
ಟುದೆಸೆ ತೀವುವಂತೆ ಮಿಗುವಾರ್ತರವಂ ಪೊಸತಾಗೆ ದುಃಖದಿಂ
ಮುಂದುಗೆಡುತ್ತೆ ಶೋಕಿಸುವ ಕಾಂತೆಗೆ ಮತ್ತಿನಭೀತಿಯೊಪ್ಪದೇ ೩೯

ಕುಮಾರನ ಕಾಲಿನಲ್ಲಿ ಅಕಸ್ಮಾತ್ ಅವಂತೀ ಸೌಂದರಿಯು ನೋಡಿ—೩೭. 'ಪಾಪಿಯಾದ ವಿಧಾತ್ರನು ಕುಸುಮದಂತೆ ಕೋಮಲವಾದ ಶರೀರವುಳ್ಳ ಈ ರಾಜನ ಕಾಲಿಗೆ ಬಂಧನವನ್ನುಂಟುಮಾಡಬಹುದೇ ? ಎಂದು ಹೇಳುತ್ತಾ ಆ ರಾಜಕುಮಾರಿಯು ಶೋಕಿಸಿದಳು. ಆಗ ರಾಜವಾಹನನು 'ಎಲೆವಲ್ಲಭೆ! ಶೋಕ ಪಡಬೇಡ. ನಿನ್ನ ಗೆಳತಿಯರೊಡನೆ ಇರು. ಈ ಬಂಧನವು ಒಂದೆರಡು ತಿಂಗಳಲ್ಲಿ ಹೋಗುವುದು' ಎಂದು ಹೇಳಿ ಕುಮಾರನು ಕಾಂತೆಯನ್ನು ಸಾಂತ್ವನಗೊಳಿಸಿದನು. ೩೮. "ಅಬಲೆ, ಕೇಳು, ನಾನು ಹಿಂದಿನ ಜನ್ಮದಲ್ಲಿ ಜಲಕ್ರೀಡೆಯಲ್ಲಿರುವಾಗ ಒಂದು ಹಂಸಿಯನ್ನು ಹಿಡಿದು ತಂದು ಎರಡು ದಿನಗಳ ಕಾಲ ತಾವರೆಯ ನೂಲಿನಿಂದ ಎರಡು ಕಾಲುಗಳನ್ನೂ ಬಿಗಿದು ಕಟ್ಟಿದ್ದೆನು. ವ।। ನಾನು ಹಿಂದಿನ ಜನ್ಮದಲ್ಲಿ ಶಾಂಭವನೆಂಬ ರಾಜನಾಗಿದ್ದೆನು, ಒಂದುದಿನ ಜಲಕ್ರೀಡೆಯ ಸಮಯದಲ್ಲಿ ಒಂದು ಹಂಸಿಯನ್ನು ಎರಡು ದಿನಗಳು ಕಟ್ಟಿಹಾಕಿದೆ. ಅದರಿಂದ ನನಗೆ ಈ ಜನ್ಮದಲ್ಲಿ ಈ ಬಂಧನವು ಬಂದಿದೆ. ಇದನ್ನು ನಾನು (ತಿಳಿದವರಿಂದ) ಕೇಳಿ ತಿಳಿದಿದ್ದೇನೆ," ಎಂದು ಎಷ್ಟು ಸಮಾಧಾನ ಹೇಳಿದರೂ ಕುಮಾರಿಯು ಶೋಕವನ್ನು ಬಿಡಲಿಲ್ಲ. ೩೯. ಚಂದ್ರನ ಬಿಂಬದಿಂದ ಅಮೃತದ ಹನಿಗಳು ಸುರಿಯುತ್ತಿವೆಯೋ ಎಂಬಂತೆ ಗಟ್ಟಿಯಾಗಿ ಅಳುವುದರಿಂದ ಅವಳ ಮುಖದ ಮೇಲೆ ಕಣ್ಣೀರು ಹೊನಲಾಗಿ ಹರಿಯಿತು. ಅವಳ ಗೋಳಾಟದ ಧ್ವನಿಯು ಎಂಟು ದಿಕ್ಕುಗಳನ್ನೂ ತುಂಬಿತು. ದುಃಖದಿಂದ ಏನು

ವ॥ ಅಂತು ಕಟ್ಟಾಸುರದಿಂದವಂತೀ ಸೌಂದರಿ ಕನ್ಯಾವ್ರತದ ಭೀತಿಯಂ ಬಗೆಯದೆ ಶೋಕಿಸುವ ಧ್ವನಿಯನಂತರ್ವಾಸಿಕರ್ ಕೇಳ್ದು ಬಂದು ನೋಟ್ಪಿನಂ

ಕಂ॥ ಕೋಮಳ ದೇಹನನತ್ಯಭಿ
ರಾಮನನದ್ಭುತ ಗಭೀರಮೂರ್ತಿಯನತುಳೋ
ದ್ದಾಮ ಭುಜನಂ ಮನೋಹರ
ಭೂಮೀಶ್ವರಸುತನನಂತವರ್ ಪಿಂಗೆ ಕಂಡರ್ ೪೦

ವ॥ ಅಂತಿರ್ದ ಕುಮಾರನಂ ಕಂಡು

ಶಾ॥ ಕನ್ಯಾಂತಃಪುರಮಂ ವಿಚಾರರಹಿತಂ ನಿರ್ಭೀತಿಯಿಂ ಪೊಕ್ಕನ
ತ್ಯನ್ಯಾಯಂ ಬಿಗಿಕಟ್ಟುಕಳ್ಳನನೆನುತ್ತುದ್ರೇಕಿಸಲ್ ಚಿತ್ತಕಾ
ಠಿಣ್ಯಂ ಮಿಕ್ಕವನೊರ್ವಕಿಂಕರವರಂ ತದ್ಭೂಪನಂ ಕಂಡಿವಂ
ಮಾನ್ಯಂ ದಂಡಿಸಲಣ್ಮೆನೊಲ್ವಱಿಪುವೆಂ ಶ್ರೀ ಚಂಡವರ್ಮಾಖ್ಯನೊಳ್ ೪೧

ವ॥ ಎಂದು ಚಂಡವರ್ಮಂಗವಂ ಪೋಗಿ ಪೇೞಲವನಂ ಬೇಗದಿಂ ತನ್ನಿಮೆನಲೊಡಂ

ಕಂ॥ ಬೆಳ್ಳಯಸಂಕಲೆಯೊಡನಾ
ಬಲ್ಲಾಳ್ಗಳ್ ಕೆಯ್ಯನಾರ್ಪಿನಿಂ ಪಿಡಿದು ಧರಾ
ವಲ್ಲಭನಂ ತಂದರ್ ಸಭೆ
ಯೆಲ್ಲಂ ಬೆಱಗಾಗಿ ನೋಟ್ಪಿನಂ ಕಡುವೇಗಂ ೪೨

ಮಾಡಲೂ ತೋರದೆ ಶೋಕಿಸುವ ಕಾಂತೆಗೆ ಉಳಿದ ಭಯವು ತೋರುತ್ತದೆಯೇ ? ಯಾವ ಭಯವೂ ತೋರಲಿಲ್ಲ. ವ॥ ಹೀಗೆ ಮಿತಿ ಮೀರಿದ ಕಠಿಣ ಪರಿಸ್ಥಿತಿಗೆ ಸಿಕ್ಕಿ ಅವಂತೀ ಸೌಂದರಿಯು ಕನ್ಯಾವ್ರತಭಂಗದ ಹೆದರಿಕೆಯನ್ನೂ ಯೋಚಿಸದೆ ಗೋಳಾಡಿದಳು. ಅವಳ ಆ ಧ್ವನಿಯನ್ನು ಕೇಳಿ ಅಂತಃಪುರದವರು ಬಂದು ನೋಡಿದರು—೪೦. ಅಲ್ಲಿ ಅವರು ಮನೋಹರನಾದ ರಾಜಕುಮಾರನನ್ನು ಕಂಡರು. ಅವನ ಶರೀರ ಕೋಮಲವಾಗಿದ್ದಿತು. ಅತಿ ಸುಂದರನಾಗಿದ್ದನು. ಗಂಭೀರವಾದ ಆಕಾರವವನದು. ಅಸಮವಾದ ಉದ್ದವಾದ ತೋಳುಳ್ಳವನಾಗಿದ್ದನು. ವ॥ ಹಾಗಿದ್ದ ಕುಮಾರನನ್ನು ನೋಡಿ—೪೧. "ಇವನು ವಿಚಾರರಹಿತನು. ನಿರ್ಭೀತಿಯಿಂದ ಕನ್ಯೆಯರ ಅಂತಃಪುರವನ್ನು ಪ್ರವೇಶಿಸಿದ್ದಾನೆ. ಬಹಳ ಅನ್ಯಾಯ. ಈ ಕಳ್ಳನನ್ನು ಬಿಗಿ ಕಟ್ಟು" ಎಂದು ಅವರು ಉದ್ರೇಕದಿಂದ ಕೂಗಾಡಿದರು. ಆಗ ಚಿತ್ತಕಾಠಿಣ್ಯವಿಲ್ಲದ ಒಬ್ಬ ಉತ್ತಮನಾದ ಸೇವಕನು ಆ ರಾಜನನ್ನು ಕಂಡು 'ಇವನು ಮಾನ್ಯನು, ದಂಡಿಸಬಾರದು. ಚಂಡವರ್ಮನಿಗೆ ತಿಳಿಸುವೆನು' ವ॥ ಎಂದು ನುಡಿದು ಚಂಡವರ್ಮನಿಗೆ ಅವನು ಹೋಗಿ ಹೇಳಿದನು. ಅವನು 'ಅವನನ್ನು ಬೇಗ ಕರೆದುಕೊಂಡು ಬನ್ನಿ' ಎಂದನು. ೪೨. ಬಲಶಾಲಿಗಳಾದ ಆಳುಗಳು ರಾಜನನ್ನು ಬೆಳ್ಳಿಯ ಸಂಕೋಲೆಯೊಡನೆ ಕೈಯನ್ನು ಹಿಡಿದುಕೊಂಡು ಸಭೆಗೆ ಕರೆತಂದರು.

ವ॥ ಅಂತು ಪಿಡಿತಂದು ರಾಜಕುಮಾರನಂ ಚಂಡವರ್ಮನ ಮುಂದೆ ನಿಲಿಸಲಾತಂ ನೋಡಿ

ಮ॥ ಇವನೇ ಅಂತವನೊಪ್ಪುವೆನ್ನನುಜನಂ ಕನ್ಯಾರ್ಥದಿಂ ಕೊಂದ ಕೈ
ತವಪುಷ್ಪೋದ್ಭವಮಿತ್ರನೀತನಸುವಂ ವೈವಸ್ವತಂಗೊಪ್ಪಿಸೆಂ
ಬ ವಿಶೇಷೋಕ್ತಿಯುಮಂತಿದೇವನ ಕಳಾಸಂಪನ್ನೆ ಮಾದೇವಿಯಾ
ಶ್ರವಣಕ್ಕೆಯ್ತರೆ ಚಂಡವರ್ಮ ಸಚಿವಂಗಿಂತೆಂದು ಪೇಟ್ದಟ್ಟಿದಳ್ ೪೩

ವ॥ ಅದೆಂತೆನೆ

ಮ॥ ಅವನಂ ಕೊಂದೊಡವಂತಿದೇವಿ ಮೊದಲೊಳ್ ತೀರ್ಗುಂ ದಿಟಂತೀರ್ದೊಡೇ
ನವಳಿಂ ಪಿಂದಿರವೆಮ್ಮ ಜೀವಮೆರಡೆಂಬೀ ನಿಶ್ಚಯಕ್ಕಲ್ಲಿ ತ
ನ್ನ ವಿಚಾರಕ್ರಮಮೆಂತುಟಂತೆಸಗುಗೆಂಬೀ ವಾರ್ತೆಯುಂ ಕೇಳ್ದುಮಂ
ತ್ರಿವರಂ ಕೊಲ್ಲದೆ ಭೂಪನಂ ಕಳಿಪಿದಂ ಕಾರಾಗೃಹಕ್ಕಾಕ್ಷಣಂ ೪೪

ವ॥ ಅಂತಾತನಂ ಸೆಱೆಯಿಡಲ್ ಬಱಿಕ್ಕಿತ್ತಲ್

ಕಂ॥ ಮರುಳಾಗಿಯುಮಂತೀಶ್ವರ
ನರಸಿ ಮಹಾದೇವಿಯಿರ್ವರುಂ ಕನ್ಯಾಂತ
ಪುರದೊಳ್ ಸಿಕ್ಕಿದ ಕಳ್ಳನ
ನೊರಸಲ್ವೇಡೆಂದಪರ್ ಮಗುಳ್ದೀಗೆಯ್ವಂ ೪೫

ಸಭೆಯಲ್ಲಿದ್ದವರೆಲ್ಲ ಅವನನ್ನು ಬೆರಗಾಗಿ ನೋಡಿದರು. ವ।। ಹೀಗೆ ಹಿಡಿದು ತಂದು ರಾಜಕುಮಾರನನ್ನು ಚಂಡವರ್ಮನ ಮುಂದೆ ನಿಲ್ಲಿಸಿದರು. ಆಗ ಅವನು ಆತನನ್ನು ನೋಡಿ ೪೩. 'ಇವನೇ ಅವನು. ನನ್ನ ತಮ್ಮನನ್ನು ಕನ್ಯೆಗಾಗಿ ಕೊಂದ ಮೋಸಗಾರನಾದ ಪುಷ್ಪೋದ್ಭವನ ಮಿತ್ರನು. ಈತನ ಪ್ರಾಣಗಳನ್ನು 'ಯಮನಿಗೊಪ್ಪಿಸು' ಎಂದು ಹೇಳಿದನು. ಈ ಮಾತು ಅವಂತಿ ರಾಜನ ಹೆಂಡತಿ ಮಾದೇವಿಯ ಕಿವಿಗೆ ಬಿದ್ದಿತು. ಆಗ ಅವಳು ಚಂಡವರ್ಮನ ಸಚಿವನಿಗೆ ಹೀಗೆ ಹೇಳಿ ಕಳುಹಿಸಿದಳು. ವ।। ಅದೇನೆಂದರೆ. ೪೪. 'ಅವನನ್ನು ಕೊಂದರೆ ಮೊದಲು ಅವಂತೀ ದೇವಿಯು ಪ್ರಾಣ ಕಳೆದುಕೊಳ್ಳುತ್ತಾಳೆ. ಇದು ನಿಜ. ಅನಂತರ ನಮ್ಮಿಬ್ಬರ (ನನ್ನ ಮತ್ತು ಅವಂತಿ ದೇವನ) ಜೀವಗಳೂ ಇರಲಾರವು, ಇದು ನಿಶ್ಚಯ, ಈ ವಿಷಯದಲ್ಲಿ ಯೋಚಿಸಿ ಹೇಗೆ ಉಚಿತವೋ ಹಾಗೆ ಮಾಡುವುದು ? ಎಂದು ಹೇಳಿ ಕಳುಹಿಸಿದ್ದಳು. ಆ ಮಾತನ್ನು ಕೇಳಿ ಮಂತ್ರಿವರನು ಕೊಲ್ಲದೆ ಕೂಡಲೆ ರಾಜವಾಹನನನ್ನು ಕಾರಾಗೃಹಕ್ಕೆ ಕಳುಹಿಸಿದನು. ವ।। ಹೀಗೆ ಆತನನ್ನು ಸೆರೆಯಲ್ಲಿಟ್ಟರು. ಬಳಿಕ ಇತ್ತ—೪೫. 'ಅವಂತಿರಾಜನೂ ಮಹಾದೇವಿಯೂ ಮರುಳು ತನದಿಂದ ರಾಣಿ ವಾಸದಲ್ಲಿ ಸಿಕ್ಕಿದ ಕಳ್ಳನನ್ನು ಕೊಲ್ಲಬೇಡವೆನ್ನುತ್ತಾರೆ. ಮತ್ತೆ

ವ॥ ಎಂದು ಮಹೇಂದ್ರಾಚಲದೊಳ್ ತಪಂಬಡುತಿರ್ದ ದರ್ಪಸಾರಂಗೋಲೆಯಂ ಕಳಿಪಿ ಕುಳ್ಳಿರ್ದಾಗಳ್

ಕಂ॥ ಚಂಪಾಪುರಪತಿಯೆನಿಸುವ
ಪೆಂಪಂ ಪಡೆದಿರ್ಪ ಸಿಂಹವರ್ಮನ ಮಗಳಂ
ತಾಂ ಪೂರ್ವದೊಳೆರೆದಟ್ಟಿದ
ಪೆಂಪಿನದೂತಂ ಕನಲ್ದು ಮಗುಳ್ದೆಯ್ತಂದಂ ೪೬

ವ॥ ಅಂತಾದೂತಂ ಬಂದೋಲಗದೊಳಿರ್ದ ಚಂಡವರ್ಮಂಗೆ ಪೊಡೆವಟ್ಟಿಂತೆಂದಂ

ಉ॥ ಎಲ್ಲಿಯ ಚಂಡವರ್ಮನವನಂ ಬಗೆಗೊಳ್ವವನಾವನುರ್ವರಾ
ವಲ್ಲಭನಾದವಂಗೆ ಕುಡುವೆಂ ಮಗಳಂ ಬಡಮಂತ್ರಿಗೀಯೆನೆಂ
ದೆಲ್ಲರ ಮುಂದೆ ಧಿಕ್ಕರಿಸಿ ನೂಂಕಿದನೆನ್ನನೆ ಸಿಂಹವರ್ಮನೀ
ಪೊಲ್ಲಮೆಯಂ ವಿಚಾರಿಸುವುದೆಂದುಸಿರ್ದಂ ಚರನುಕ್ತಿ ಭೀಕರಂ ೪೭

ವ॥ ಇಂತಾದೂತಂ ಪೇಟಲೊಡಂ

ಉ॥ ಭಂಗುರಭೀಷಣಭ್ರುಕುಟಿ ಕೆಂಪಡರ್ದಕ್ಷಿಯುಗಂ ವಿವರ್ಣಮಾ
ದಂಗಮುಗುರ್ವಿನಿಂ ಕುಣಿವ ಮೀಸೆ ಕನಲ್ವಮುಖಂ ವಿರೋಧಿಯಂ
ನುಂಗಿಯುಗುಟ್ವೆನೆಂಬನುಡಿ ಲೋಕಭಯಂಕರಮಾಗೆ ಚಂಡವ
ರ್ಮಂಗಡಿಗೆಟ್ಟು ಕೋಪದೊದವಿಂ ದಳಮುಖ್ಯನನಂದು ನೋಡಿದಂ ೪೮

ನಾನೇನು ಮಾಡಲಿ.' ವ॥ ಎಂದು ಮಹೇಂದ್ರ ಪರ್ವತದಲ್ಲಿ ತಪಸ್ಸುಮಾಡುತ್ತಿದ್ದ ದರ್ಪಸಾರನಿಗೆ ಪತ್ರಬರೆದು ಕಳುಹಿಸಿ ಕುಳಿತನು. ಆಗ ೪೬. ಚಂಪಾಪುರದ ಅರಸನೆಂದು ಹಿರಿಮೆಯನ್ನು ಹೊಂದಿದ ಸಿಂಹವರ್ಮನ ಮಗಳನ್ನು ತನಗೆ ಕೊಡುವಂತೆ ಚಂಡವರ್ಮನು ಒಬ್ಬ ದೂತನೊಡನೆ ಹೇಳಿ ಕಳಿಸಿದ್ದನು. ಆ ದೂತನು ಕೋಪಗೊಂಡು ಹಿಂದಕ್ಕೆ ಮರಳಿದನು. ವ॥ ಬಂದ ಆ ದೂತನು ಸಭೆಯಲ್ಲಿದ್ದ ಚಂಡವರ್ಮನಿಗೆ ನಮಸ್ಕಾರಮಾಡಿ ಹೀಗೆ ಹೇಳಿದನು. ೪೭. "ಚಂಡವರ್ಮನು ಎಲ್ಲಿಯವನು ? ಅವನ ಮನಸ್ಸಿಗೆ ಸಂತೋಷವುಂಟುಮಾಡುವವನಾವನು? ಭೂಮಿಪಾಲನಿಗೆ ಹೆಣ್ಣನ್ನು ಕೊಡುವೆನು. ಬಡಮಂತ್ರಿಗೆ ಕೊಡುವುದಿಲ್ಲ." ಎಂದು ಎಲ್ಲರ ಮುಂದೆ ಧಿಕ್ಕರಿಸಿ ಮಾತನಾಡಿ ಸಿಂಹವರ್ಮನು ನನ್ನನ್ನು ಸಭೆಯಿಂದ ಹೊರಕ್ಕೆ ನೂಕಿದನು. ಈ ಅಕೃತ್ಯಕ್ಕೆ ಸರಿಯಾದ ಶಾಸ್ತಿಯಾಗಬೇಕು" ಎಂದು ದೂತನು ಉಗ್ರವಾಗಿ ಹೇಳಿದನು!—ವ॥ ಹೀಗೆ ಆ ದೂತನು ಹೇಳಲು ಕೂಡಲೆ—೪೮. ಚಂಡವರ್ಮನ ಹುಬ್ಬುಗಳು ಭಯಂಕರವಾದ ರೀತಿಯಲ್ಲಿ ಗಂಟು ಕಟ್ಟಿದವು. ಕಂಗಳೆರಡೂ ಕೆಂಪಾದುವು. ಶರೀರವು ಬೇರೆ ಬಣ್ಣವನ್ನು ತಳೆಯಿತು. ಮೀಸೆ ಭಯ ಹುಟ್ಟಿಸುವಂತೆ ಕುಣಿಯಿತು. ಮುಖದಲ್ಲಿ ಕೋಪವೇರಿತು, ಶತ್ರುವನ್ನು ನುಂಗಿ ಉಗುಳುವೆನು ಎಂದು ಕೂಗಾಡಿದನು. ಚಂಡವರ್ಮನ ಹಲ್ಲೆಮೀರಿದ ಕೋಪವು ಲೋಕ ಭಯಂಕರವಾಯಿತು. ಕೂಡಲೆ ದಳಪತಿಯನ್ನು ನೋಡಿದನು.

ವ॥ ಅಂತು ದಳಮುಖ್ಯನಂ ನೋಡಿ ಚತುರಂಗಬಲಮಂ ಬರಿಸೆಂಬುದುಂ

ಉ॥ ಸಿಂಗದಸಂಗಮಂತಕನ ತಿಂತಿಣಿ ಮಾರಿಯಮೂರಿ ಕಾಲರು
ದ್ರಂಗನುಸಾರಿ ಭೈರವನಭಾರಣೆ ರಕ್ಕಸರುರ್ಕುಮಿಟ್ತು ಮೊ
ತ್ತಂ ಗಣನಾತಿರೇಕಮೆನಲೊಪ್ಪುವವೋಲ್ ನೆರೆದಿರ್ದುದಾಕ್ಷಣಂ
ಸಂಗರದುಜ್ಜುಗಕ್ಕೆ ಚತುರಂಗಬಲಂ ನಸುತಗ್ಗೆ ಭೂತಳಂ ೪೯

ವ॥ ಅಂತು ಚತುರಂಗಬಲಂ ನೆರೆದು ಬರೆ ಕಂಡು

ಕಂ॥ ಮಾರಿಮಸಗಿತ್ತೆನಲ್ ಸಂ
ಹಾರಂ ಮಾಡುವೆನರಾತಿಬಲಮಂ ಪಿಡಿದಾಂ
ಕೂರಸಿಯನೆಂದು ಭಾಷೆಯು
ನೋರಂತಿರಲಿತ್ತು ಘೂರ್ಮಿಸಿತ್ತಾಸ್ಥಾನಂ ೫೦

ವ॥ ಅಲ್ಲಿ

ಕಂ॥ ಎನ್ನಾನೆಯಿಂದೆ ಪಗೆಗಳ
ಬೆನ್ನೆಲ್ವಂ ಮೆಟ್ಟಿ ಮುಱಿಸಿ ಸಪ್ತಾಂಗದ ಸೊಂ
ಪನ್ನಿನಗೆ ತಂದು ಕುಡದೊಡೆ
ನಿನ್ನಹಿತನ ಮನೆಗೆತೊಟ್ತು ಮಾಡುವುದೆನ್ನಂ ೫೧

ವ॥ ಹಾಗೆ ದಳಪತಿಯನ್ನು ನೋಡಿ 'ಚತುರಂಗಬಲವನ್ನು ಬರಿಸು' ಎಂದು ಹೇಳಲು ೪೯. ಸಿಂಹಗಳ ಗುಂಪು, ಯಮನ ಸಮೂಹ, ಮಾರಿಯ ಗುಂಪು, ಪ್ರಳಯ ಕಾಲದ ರುದ್ರನ ಸೇನೆ, ಭೈರವನ ಗುರುತ್ವ, ರಾಕ್ಷಸರ ಶೌರ್ಯ, ಮೃತ್ಯು ಸಮೂಹ, ಇವೆಲ್ಲ ಲೆಕ್ಕಕ್ಕೆ ಮೀರಿ ಬಂದು ಸೇರಿವೆ ಎಂಬಂತೆ ಕೂಡಲೆ ಚತುರಂಗ ಸೇನೆಯು ಯುದ್ಧಕ್ಕೆ ಸಿದ್ಧವಾಗಿ ಬಂದು ಸೇರಿತು. ಭಾರಕ್ಕೆ ನೆಲ ತಗ್ಗಿತು. ವ॥ ಹೀಗೆ ಚತುರಂಗಬಲವು ಕೂಡಿ ಬರಲು ಅದನ್ನು ಕಂಡು—೫೦. 'ಮಾರಿಯು ವಿಜೃಂಭಿಸಿತು ಎನ್ನುವಂತೆ ನಾನು ಹರಿತವಾದ ಕತ್ತಿಯನ್ನು ಹಿಡಿದು ಶತ್ರುಸೈನ್ಯವನ್ನು ಸಂಹರಿಸುವೆನು' ಎಂದು ಭಾಷೆಯನ್ನಿತ್ತು ಆಸ್ಥಾನವು ಗರ್ಜಿಸಿತು. ವ॥ ಅಲ್ಲಿ ೫೧. "ನನ್ನ ಆನೆಯಿಂದ ಹಗೆಗಳ ಬೆನ್ನೆಲುಬುಗಳನ್ನು ಮೆಟ್ಟಿ ಮುರಿಸಿ ಸಪ್ತಾಂಗದ ಸೊಂಪನ್ನು ನಿನಗೆ ತಂದು ಕೊಡದೆ ಹೋದರೆ ನಿನ್ನ ಶತ್ರುವಿನ ಮನೆಯ ಗುಲಾಮನನ್ನಾಗಿ ನನ್ನನ್ನು ಮಾಡು" [1 ಟಿಪ್ಪಣಿ ಸ್ವಾಮಿ ಅಮಾತ್ಯ ಸುಹೃತ್ ಕೋಶ ರಾಷ್ಟ್ರ ದುರ್ಗ ಬಲ ಇವು ಸಪ್ತಾಂಗಗಳು.] ವ॥ ಎಂದು

ವ॥ ಎಂದು ನಿಷಾದಿಗಳ್ ಭಾಷೆಯುಂ ಕುಡುವುದುಂ

ಕಂ॥ ತುರಗಖುರಪುಟದೊಳರಿಗಳ
ಶಿರಂಗಳಂ ಚಿಗುಳಿದುಳಿಸಿ ವಿಜಯ ಶ್ರೀಯುಂ
ನೆರೆಯುದೆ ಮಾಣ್ದಪೆವಾದೊಡೆ
ಧುರದೊಳ್ ಪಗೆವಂಗೆ ಮಾಱುವೋಪೆವಿಳೇಶಾ ೫೨

ವ॥ ಎಂದಶ್ವಾರೂಢರುಂ ಪ್ರತಿಜ್ಞೆಗೆಯ್ದುರಪ್ಪಿನಂ

ಕಂ॥ ರಥದುರವಣೆಯಿಂ ರಿಪು ಸಾ
ರಥಿಯುಂ ತದ್ರಥಮುನದಱಕುದುರೆಯುನಾಶಾ
ಪಥಮುಂ ಪತ್ತಿಸಿದಪೆವವಿ
ತಥಮೆನ್ನದೆ ನೋಳ್ಪುದೆಮ್ಮ ಕಾಳೆಗದನುವಂ ೫೩

ವ॥ ಎಂದು ರಥಿಕರ್ ನುಡಿದು ನಿಟ್ಟೆಯಿಂ ನಿಲ್ವುದುಂ

ಕಂ॥ ಸಂಹಾರರುದ್ರನಂತಿರ
ಲಾಹವದೊಳ್ ನಡೆದು ಪಗೆಗಳಂ ಕಾಣಲೊಡಂ
ಬಾಹಾಬಲದಿಂ ಮರ್ದಿಸಿ
ಸಾಹಸಮಂ ಮೆಱೆವೆವೆಂದರುದ್ಧತವೀರರ್ ೫೪

ಸಿಡಿಲೆಱಗುವಂತೆ ಪಗೆಗಳ
ನಡುನೆತ್ತಿಯನೆಱಗಿ ಪಾಯ್ವ ನೆತ್ತರ್ವೊನಲಂ
ಕಡಲಾಯ್ತೆನಿಸುವೆನಾಹವ
ದೆಡೆಯನೆನುತೊರ್ವ ಲೌಡಿಗಾಱಂ ಮೆಱೆದಂ ೫೫

ಮಾವುತರು ಪ್ರತಿಜ್ಞೆ ಮಾಡಿದರು. ೫೨. "ರಾಜನೆ ! ಯುದ್ಧದಲ್ಲಿ ಕುದರೆಗಳ ಗೊರಸುಗಳ ಹತಿಯಿಂದ ಅರಿಗಳ ತಲೆಗಳನ್ನು ಚಿಗುಳಿಯಂತೆ (ಎಳ್ಳುಂಡೆಯಂತೆ) ತುಳಿಸಿ ವಿಜಯಲಕ್ಷ್ಮಿಯನ್ನು ಗೆದ್ದು ತರುವೆವು. ಹಾಗೆ ಮಾಡದೇ ಹೋದರೆ ಶತ್ರುಗಳಿಗೆ ಸೇವಕರಾಗುತ್ತೇವೆ." ವ।। ಎಂದು ಕುದುರೆ ಸವಾರರು ಪ್ರತಿಜ್ಞೆ ಮಾಡಿದರು. ೫೩. "ರಥಗಳ ವೇಗದಿಂದ ಶತ್ರುಸಾರಥಿಯನ್ನೂ ಶತ್ರುರಥವನ್ನೂ ಅದರ ಕುದುರೆಯನ್ನೂ ದಿಕ್ಕು ದಿಕ್ಕುಗಳಿಗೆ ಓಡಿಸುವೆವು, ಇದು ಸುಳ್ಳಲ್ಲ. ನಮ್ಮ ಕಾಳೆಗದ ರೀತಿಯನ್ನು ನೋಡಬೇಕು." ವ|| ಎಂದು ಹೇಳಿ ರಥಿಕರು ನಿಷ್ಠೆಯಿಂದ ನಿಂತರು. ೫೪. "ಪ್ರಳಯಕಾಲದ ರುದ್ರನಂತೆ ಯುದ್ಧದಲ್ಲಿ ಮುನ್ನುಗ್ಗಿ ಹಗೆಗಳನ್ನು ಕಂಡ ಕೂಡಲೆ ತೋಳ್ಬಲದಿಂದ ಕೊಂದು ನಮ್ಮ ಸಾಹಸವನ್ನು ಮೆರೆಯುವೆವು" ಎಂದು ಉದ್ಧತರಾದ ವೀರರು ಹೇಳಿದರು. ೫೫. "ಸಿಡಿಲೆರಗುವಂತೆ ಹಗೆಗಳ ನಡುನೆತ್ತಿಯ ಮೇಲೆ ಬಿದ್ದು ತಲೆಗಳಿಂದ ಹರಿಯುವ ರಕ್ತದ ಕಾಲುವೆಗಳಿಂದ ಯುದ್ಧಭೂಮಿಯನ್ನು ಸಮುದ್ರವನ್ನಾಗಿ ಪರಿವರ್ತಿಸುತ್ತೇನೆ" ಎಂದು ಒಬ್ಬ ಶೂರನು ಘೋಷಿಸಿದನು.

ಕೋಲಿಂ ರಿಪುಗಳಪಂದಲೆ
ಸಾಲಂ ರಣಭೂಮಿಯಲ್ಲಿ ತೋಱಿದೊಡೆಲೆ ಭೂ
ಪಾಲ ಗುಱಿಮಾಡುವುದೆನ್ನಂ
ಸೂಲಕ್ಕಾಹವದೊಳೆಂದರಾ ಬಿಲ್ಲಾಳ್ಗಳ್ ೫೬

ಸಬಳಂಬಿಡಿದನಿತಂ ಕೊಂ
ದು ಬಾನ್ಗವಂ ಕೆತ್ತಿ ದೇವತತಿಗಂಜಿಕೆಯಂ
ನಿಬಿಡವೆನೆ ಮಾಡದೊಡೆ ನರ
ಕ ಬಾಧೆಗೊಳಗಪ್ಪೆನರಸ ನಿನ್ನಯ ಕೆಯ್ಯೊಳ್ ೫೭

ಆನೆ ಬರಲೆನ್ನ ಹರಿಗೆಯೊ
ಳಾನದೆ ಹೆಱಿಮೆಟ್ಟನಿಂದೆನಾದೊಡೆ ಪಗೆಗಾಂ
ಮಾನಿನಿಯಾದಪೆನೆಂದಸ
ಮಾನದ ಬಿರುದೆಸೆವ ಹರಿಗೆಕಾಱರ್ ಮೊಱೆದರ್ ೫೮

ವ॥ ಅಂತು ಸುಭಟನಿಕರಂ ಸಂರಂಭದಿಂದಿರಲದಂ ಚಂಡವರ್ಮಂ ಕಂಡು

ಸಾಮಂ[1] ಪಾರ್ವಂಗೆ ಭೇದಂ ನಿಗಮನಿಕರ ಶೂನ್ಯರ್ಗೆ ದಾನಂ ಮದೇಭ
ಸ್ತೋಮಕ್ಕಾರಯ್ಯೆ ಮುಖ್ಯಂ ನೃಪತಿಗೆ ಬಗೆಯೊಳ್ ದಂಡಮೇ ಮುಖ್ಯಮೆಂದಾ
ಭೂಮೀಶಂ ಚಂಡವರ್ಮಂ ನಿಜ ಭುಜಬಲದಿಂ ವೈರಿ ಭೂಪಾಲ ರಾಜ್ಯ
ಶ್ರೀಮಾನ್ಯಶ್ರೀಯ ಪಾಣಿಗ್ರಹಣಮನೊಲವಿಂಮಾಟ್ಪೆನೆಂದೆಟ್ಟಿದನಾಗಳ್ ೫೯

೫೬. "ಬಾಣಗಳಿಂದ ಕತ್ತರಿಸಿ ಶತ್ರುಗಳ ಹಸಿತಲೆಗಳ ಸಾಲನ್ನು (ರಕ್ತಸೋರುವ ತಲೆಗಳ) ರಣಭೂಮಿಯಲ್ಲಿ ತೋರಿಸುತ್ತೇನೆ. ಹಾಗೆ ಮಾಡದೆ ಹೋದರೆ 'ಎಲೆ ಭೂಪಾಲ ನನ್ನನ್ನು ಯುದ್ಧದಲ್ಲಿ ಶೂಲಕ್ಕೆ ಹಾಕಿಸು." ಎಂದು ಹೇಳಿದರು, ಆ ಬಿಲ್ಗಾರರು. ೫೭. "ಈಟಿಯನ್ನು ಹಿಡಿದು ಶತ್ರುಗಳನ್ನು ಇರಿದು ಮೇಲಕ್ಕೆ ಆಗಸದಲ್ಲೆತ್ತಿ ದೇವತೆಗಳಿಗೂ ಅಂಜಿಕೆಯನ್ನುಂಟುಮಾಡುವೆನು. ಅರಸ, ನಾನು ಹಾಗೆ ಮಾಡದಿದ್ದರೆ ನಿನ್ನ ಕೈಯಲ್ಲಿ ನರಕ ಹಿಂಸೆಗೆ ಒಳಗಾಗುವೆನು ೫೮. 'ಆನೆಯು ನುಗ್ಗಿ ಬಂದರೆ ಅದನ್ನು ನನ್ನ ಗುರಾಣಿಯಿಂದ ತಡೆದು ನಿಲ್ಲಿಸುತ್ತೇನೆ. ಹಾಗೆ ತಡೆಯದೆ ಹಿಂಜರಿದೆನಾದರೆ ನಾನು ಶತ್ರುವಿನ ಹೆಂಡತಿಯಾಗುತ್ತೇನೆ (ಆಳಾಗುತ್ತೇನೆ)' ಎಂದು ಅಸಮಾನವೀರರಾದ ಗುರಾಣಿ ಹಿಡಿದವರು ಗರ್ಜಿಸಿದರು. ವ॥ ಹೀಗೆ ಸುಭಟರು ಸಂಭ್ರಮವನ್ನು ಪ್ರದರ್ಶಿಸಿದರು. ಅದನ್ನು ಚಂಡವರ್ಮನು ನೋಡಿ ೫೯. ಬ್ರಾಹ್ಮಣನಿಗೆ ಸಾಮೋಪಾಯ.[1] ವೇದಶೂನ್ಯನಿಗೆ ಭೇದೋಪಾಯ. ಸೊಕ್ಕಿದಾನೆಗಳ ಗುಂಪಿಗೆ ದಾನೋಪಾಯ. ವಿಚಾ

---

[1] ಬ್ರಾಹ್ಮಣನಿಗೆ ಸಾಮ (ವೇದ), ವೇದಾದಿ ಶಾಸ್ತ್ರಹೀನನಿಗೆ ಭೇದಮಾರ್ಗ, ಆನೆಗೆ ದಾನ (ಮದೋದಕ) ಎಂಬುದೇ ವಿವಕ್ಷಿತವಾದ ಅರ್ಥ. ಸಾಮದಾನ ಭೇದಗಳು ತನಗೆ ಅಲ್ಲ ಎಂಬುದನ್ನು ಫಲೋಕ್ತಿಯಿಂದ ಹೇಳಲಾಗಿದೆ (ರಂ).

ವ॥ ಅಂತೆಟ್ಟಿದ್ದು ಚಂಪಾಪುರಕ್ಕಭಿಮುಖನಪ್ಪುದುಂ

ಮ॥ ಕಡಲೇಟುಂ ಕದಡಲ್ ದಿಶಾವಿತತಿಗಳ್ ಬೆಂಡಾಗೆ ಸರ್ವೋರ್ವಿ ಬಾ
ಯ್ವಿಡೆ ಗೋತ್ರಾದ್ರಿನಿಕುಂಜದೊಳ್ ಪ್ರತಿರವಂ ಪೊಣ್ಮಲ್ಕೆ ವಿದ್ವೇಷಿಗಳ್
ನಡುಗಲ್ ಭೀಕರಮಪ್ಪಿನಂ ಪದೆಪಿನಿಂ ಶ್ರೀಚಂಡವರ್ಮಂ ಬೆಸಂ
ಗುಡೆ ಪೊಣ್ಮಿತ್ತು ಸುವರ್ಣಕೋಣಹತಿಯಿಂ ಪ್ರಸ್ಥಾನ ಭೇರೀರವಂ ೬೦

ವ॥ ಅಂತು ಪ್ರಸ್ಥಾನಭೇರಿಯಂ ಪೊಯ್ಸಿ

ಕಂ॥ ಅಂತಃಪುರದೊಳ್ ಸಿಕ್ಕಿದ
ನಂತಾತನನೆನ್ನ ಕೂಡೆ ಕೊಂಡುಯ್ವೆಂ ನಿ
ಶ್ಚಿಂತಮೆನಗಪ್ಪುದೆಂದು ದು
ರಂತಮೆನಿಪ್ಪಧಿಕ ಕೋಪದಿಂ ತರವೇಟ್ದಂ ೬೧

ವ॥ ಅಂತು ಕೋಪಂ ಕೈಮಿಕ್ಕು ಚಂಡವರ್ಮಂ ಕಾರಾಗೃಹದೊಳಿರ್ದ ರಾಜವಾಹನನಂ ತರಿಸಿ

ಕಂ॥ ಕುಂಜರನ ಕೈಯೊಳಿವನಂ
ಕಂಜಮನೀಡಾಡುವಂತೆ ಕೊಲಿಸುವೆನಿವನಾ
ರ್ಗಂಜುವನಲ್ಲಂ ಬಂಡಿಯು
ಪಂಜರದೊಳಗಿಕ್ಕಿಮೆಂದು ಪುಗಿಸಿದನಾಗಳ್ ೬೨

ರಿಸಿದರೆ ರಾಜನ ವಿಷಯದಲ್ಲಿ ದಂಡೋಪಾಯವೇ ಮುಖ್ಯವಾದುದು ಎಂದು ಯೋಚಿಸಿ ಚಂಡವರ್ಮಭೂಪಾಲನು ತನ್ನ ತೋಳಬಲದಿಂದ ಶತ್ರುರಾಜರ ರಾಜ್ಯಲಕ್ಷ್ಮಿಯು ಕೈಹಿಡಿಯುವೆನೆಂದು ಯುದ್ಧಕ್ಕಾಗಿ ಎದ್ದನು. ವ॥ ಹಾಗೆ ಎದ್ದು ಚಂಪಾಪುರದ ಕಡೆ ಹೊರಟನು – ೬೦. ಶ್ರೀ ಚಂಡವರ್ಮ ಭೂಪಾಲನು ಅಪ್ಪಣೆಯನ್ನು ಕೊಡಲು ಪ್ರಯಾಣಕಾಲದಲ್ಲಿ ಚಿನ್ನದ ಕೋಣಗಳಿಂದ ನಗಾರಿಗಳನ್ನು ಹೊಡೆದರು. ಅದರಿಂದ ಹೊರಟ ಶಬ್ದವು ಸುತ್ತ ಹರಡಿತು. ಅದರಿಂದ ಏಳು ಸಮುದ್ರಗಳು ಕದಡಿದುವು. ದಿಕ್ಕುಗಳೆಲ್ಲ ಬೆಂಡಾದುವು. ಇಡೀ ಭೂಮಿಯು ಬಿರಿಯಿತು. ಕುಲಪರ್ವತಗಳ ನಿಕುಂಜವಲ್ಲಿ ಪ್ರತಿಧ್ವನಿಯುಂಟಾಯಿತು. ಶತ್ರುಗಳು ನಡುಗಿದರು. ಹೀಗೆ ಭೇರೀರವವು ಭಯಂಕರವಾಗಿದ್ದಿತು. ವ॥ ಹಾಗೆ ಪ್ರಯಾಣಕಾಲದಲ್ಲಿ ಭೇರಿಗಳನ್ನು ಹೊಡೆಯಿಸಿ – ೬೧. 'ಅಂತಃಪುರದಲ್ಲಿ ಸಿಕ್ಕಿದವನನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುವೆನು. ಇದರಿಂದ ನನಗೆ ಯಾವ ಚಿಂತೆಯೂ ಇರುವುದಿಲ್ಲ.' ಎಂದು ಅಧಿಕ ಕೋಪದಿಂದ ರಾಜವಾಹನನನ್ನು ಕರೆತರಹೇಳಿದನು. ವ॥ ಹೀಗೆ ಮಿತಿ ಮೀರಿದ ಕೋಪದಿಂದ ಚಂಡವರ್ಮನು ಕಾರಾಗೃಹದಲ್ಲಿದ್ದ ರಾಜವಾಹನನನ್ನು ಕರೆತರಿಸಿದನು – ೬೨. "ಈತನನ್ನು ಆನೆಯ ಸೊಂಡಲಿನಿಂದ, ಕಮಲವನ್ನೆಳೆದಾಡುವಂತೆ, ಎಳೆದಾಡಿಸಿ ಕೊಲ್ಲಿಸುವೆನು. ಈ ನಾನು ಯಾರಿಗೂ ಹೆದರುವವನಲ್ಲ. ಬಂದಿಯ ಪಂಜರ

ವ॥ ಅಂತು ಕುಮಾರನನೊಂದು ಪಂಜರದೊಳ್ ಪುಗಿಸಿ ಕವಾಟಮಂ ಬಂಧಿಸೆ

ಕಂ॥ ಪರಿವೇಷದ ನಡುವೆ ಮನೋ
ಹರ ಪೂರ್ಣ ಶಶಾಂಕನಿರ್ಪತೆಱದಿಂದಾ ಪಂ
ಜರದೊಳಗೆ ತೇಜದಿಂದು
ರ್ವರೇಶತನಯಂ ವಿಲಾಸದಿಂ ಕಣ್ಗೆಸೆದಂ ೬೩

ಕೇಸರಿಯೊಂದುಮನಾರ್ಪಿಂ
ದಾಸುರಮೆನಿಪೊಂದು ಪಂಜರಾಂತದೊಳಿಟ್ಟಂ
ತಾ ಸಿಂಹವಿಕ್ರಮಂ ಸವಿ
ಳಾಸದಿನಿರ್ದಂ ವಿಧಾತೃವಶಮೆನುತಾಗಳ್ ೬೪

ಚೂಡಾಮಣಿಯಿಂದೆ ತೃಪಾ
ಪೀಡೆಯುನಗ್ಗಳದ ಪಸಿವನಾರ್ತವನೊಡನೀ
ಡಾಡಿ ಬಡವಾಗದಿರ್ದಂ
ಪಾಡೞಿಯದೆ ನೃಪಕುಮಾರಕಂ ಪಂಜರದೊಳ್ ೬೫

ವ॥ ಅಂತು ಮಾತಂಗಕಂ ಕೊಟ್ಟ ಮಾಣಿಕ್ಯದ ಬಲದಿಂ ಕ್ಷುತ್ಪಿಪಾಸೆಯುಂ ಬಗೆಯುದಿರ್ಪ ಕುಮಾರನಂ ಪಂಜರದೊಳಿಟ್ಟು ಚಂಪಾಪುರಕ್ಕೆ ಚಂಡವರ್ಮಂ ನಡೆವಾಗಳ್

ದಲ್ಲಿ ಸೇರಿಸಿ" ಎಂದು ಹೇಳುತ್ತಾ ಅವನನ್ನು ಪಂಜರದಲ್ಲಿ ಹೊಗಿಸಿದನು. ವ॥ ಹಾಗೆ ರಾಜಕುಮಾರನನ್ನು ಒಂದು ಪಂಜರದಲ್ಲಿ ಸೇರಿಸಿ ಬಾಗಿಲನ್ನು ಹಾಕಿಸಿದನು. ೬೩. ಆ ಪಂಜರದೊಳಗಿದ್ದ ತೇಜಸ್ವಿಯಾದ ರಾಜಕುಮಾರನು ಪರಿವೇಷದ ನಡುವೆ ಇದ್ದ ಮನೋಹರನಾದ ಪೂರ್ಣಚಂದ್ರನಂತೆ ಪ್ರಕಾಶಿಸಿದನು. ೬೪. ಪರಾಕ್ರಮಿಯಾದ ಸಿಂಹವೊಂದನ್ನು ಪಂಜರದಲ್ಲಿಟ್ಟಂತೆ ಸಿಂಹವಿಕ್ರಮನಾದ ರಾಜಕುಮಾರನು ಪಂಜರದಲ್ಲಿದ್ದನು. ಇದು ಹಣೆಯ ಬರಹವೆಂದು ಬಗೆದು ಆ ರಾಜಕುಮಾರನು ವಿಲಾಸದಿಂದಲೇ ಇದ್ದನು. ೬೫. ಪಂಜರದಲ್ಲಿದ್ದರೂ ರಾಜಕುಮಾರನು ಚೂಡಾಮಣಿರತ್ನದ ಬಲದಿಂದ ಹಸಿವು ಬಾಯಾರಿಕೆಗಳ ಪೀಡೆಯನ್ನು ಹೊಂದದೆ ಬಡವಾಗದೇ ಇದ್ದನು. ಚೆಲುವನ್ನು ಕಳೆದುಕೊಳ್ಳಲಿಲ್ಲ. ವ॥ ಹಾಗೆ ಮಾತಂಗನು ಕೊಟ್ಟ ಮಾಣಿಕ್ಯದ ಬಲದಿಂದ ಹಸಿವು ಬಾಯಾರಿಕೆಗಳನ್ನೂ ಲೆಕ್ಕಿಸದೆ ಇದ್ದ ಕುಮಾರನನ್ನು ಪಂಜರದಲ್ಲಿಟ್ಟು ಚಂಪಾಪುರಕ್ಕೆ ಚಂಡವರ್ಮನು ಕರೆದುಕೊಂಡು ಹೋದನು. ಆಗ

ಚಂ॥ ಕರಿತುರಗಂ ರಥಂ ನಿಜಪದಾತಿ ಕೋಪದಿಂದಮೆ
ಯ್ದಿರೆ ಪದಘಾತದಿಂ ನೆಗೆದ ಧೂಳಿಕರಂ ಪುದಿದಂತರಿಕ್ಷದೊಳ್
ಪರಿಪಡೆದಿರ್ದುದೆಯ್ದೆ ಗಗನಂ ಬಯಲೆಂಬರ ಮಾತದೇಕೆ ಕಂ
ಡಿರೆ ಗಗನಸ್ಥಳ ಸ್ಥಿತಿಯನೆಂದುಱತೋರ್ಪವೊಲೆಲ್ಲಿ ನೋಟಿಸ್ಪಡಂ 66

ಉ॥ ಬೆಟ್ಟುಗಳೆದ್ದೆನುರ್ಗಿ ಪಟವಟ್ಟೆವೊಲಾಗೆ ನದೀನದಂ ಪದೋ
ದ್ಘಟ್ಟನೆಯಿಂ ಮಣಲ್ಮಸಗೆ ದಿಗ್ವಿಪರಂ ಚತುರಂಗಸೇನೆಗಂ
ದಿಟ್ಟಿಡೆಯಾಗೆ ಭೂಮಿ ದಳಭಾರಣೆಯಿಂ ನಸುನೆರ್ಗೆ ವೈರಿಮುಂ
ಗೆಟ್ಟಿರೆ ಚಂಡವರ್ಮನರಸಂ ನಡೆಗೊಂಡನತೀವ ಕೋಪದಿಂ 62

ವ॥ ಅಂತತಿ ಸಂಭ್ರಮಂಬೆರಸು ಚಂಡವರ್ಮಂ ನಡೆತರ್ಪುದಂ ಸಿಂಹವರ್ಮಂ ಕೇಳ್ದು

ಮ॥ ಮಗಳನೀಗಳ್ ಚಂಡವರ್ಮಂ ತನಗೆ ಮಗಳನಾನೀಯೆನೆಂಬುಗ್ರ ಕೋಪಾ
ನಳನಿಂ ಮೇಲೆತ್ತಿಬಂದೆನ್ನಯ ಮಗಳೊಡನೀ ರಾಜ್ಯಮಂ ಕೊಳ್ವಬಾಹಾ
ಬಳದಿಂದೇಟ್ಪರ್ಪನೇಟ್ಪರ್ಪುದು ಪಡಿಬಲಮಪ್ಪಂತಿರೆನ್ನೊಳ್ ನೃಪರ್ ತೋ
ಳ್ವಳದಿಂದೆಂದೋಲೆಯಂ ನಾಲ್ದೆಸೆಗೆ ಕಳುಪಿದಂ ಕೂರ್ಮೆಯಿಂ ಸಿಂಹವರ್ಮಂ
68

66. ಆನೆ, ಕುದುರೆ, ತೇರು, ಕಾಲಾಳುಗಳು ಭಯಂಕರವಾದ ಕೋಪದಿಂದ ಹೋಗು ತ್ತಿದ್ದವು. ಅವುಗಳ ಪಾದಾಘಾತದಿಂದ ಧೂಳು ಮೇಲಕ್ಕೆ ನೆಗೆದು ಆಕಾಶವಲ್ಲೆಲ್ಲ ವ್ಯಾಪಿಸಿತು. ಆಕಾಶವು ಶೂನ್ಯ ಎಂದು ಹೇಳುವವರ ಮಾತು ನಿಜವಲ್ಲ. 'ಆಕಾಶ ಪ್ರದೇಶದ ಸ್ವರೂಪವನ್ನು ನೋಡಿರಿ' ಎಂದು ವಿಶೇಷವಾಗಿ ತೋರಿಸುವಂತೆ ಆ ಧೂಳು ಕಾಣಿಸುತ್ತಿತ್ತು. 62. ಚತುರಂಗ ಸೇನೆಯ ಕಾಲುಗಳ ಘಟ್ಟಣೆಯಿಂದ ಬೆಟ್ಟ ಗಳೆಲ್ಲ ನೆಗ್ಗಿ ಪುಡಿಯಾಗಿ ಹಳೆಯ ದಾರಿಯಂತಾಯಿತು. ನದೀ ನದಗಳಲ್ಲಿ ಮರಳು ಮೇಲೆ ಉಬ್ಬಿ ಕಾಣಿಸಿಕೊಂಡಿತು. ದಿಕ್ಕುಗಳ ವಿಸ್ತಾರವೂ ಚತುರಂಗಸೈನ್ಯಕ್ಕೆ ಇಕ್ಕಟ್ಟಾ ಯಿತು. ಭೂಮಿಯು ಸೇನೆಯ ಭಾರದಿಂದ ತಗ್ಗಿತು. ವೈರಿಗೆ ಮುಂದೇನುಮಾಡ ಬೇಕೆಂದು ತಿಳಿಯಲಿಲ್ಲ. ಈ ರೀತಿಯಲ್ಲಿ ಚಂಡವರ್ಮ ರಾಜನು ಅತಿಕೋಪದಿಂದ ನಡೆ ದನು. ವ॥ ಹಾಗೆ ಅತಿ ಸಂಭ್ರಮದಿಂದ ಚಂಡವರ್ಮನು ಬರುತ್ತಿರುವುದನ್ನು ಸಿಂಹ ವರ್ಮನು ಕೇಳಿ – 68. "ನಾನು ಅವನಿಗೆ ಮಗಳನ್ನು ಕೊಡಲಿಲ್ಲವೆಂದು ಕ್ರುದ್ಧನಾಗಿ ಚಂಡವರ್ಮನು ಕೋಪಾಗ್ನಿಯಿಂದ ಉರಿಯುತ್ತಾ ನನ್ನ ಮೇಲೆ ದಂಡೆತ್ತಿ ಬರುತ್ತಿ ದ್ದಾನೆ. ನನ್ನ ಮಗಳೊಡನೆ ಈ ರಾಜ್ಯವನ್ನೂ ತೆಗೆದುಕೊಳ್ಳಬೇಕೆಂದು ತೋಳ್ಬಲ ವನ್ನು ತೋರಿಸಲು ಬರುತ್ತಿದ್ದಾನೆ. ಅದಕ್ಕೆ ತಕ್ಕ ಸೇನಾಬಲದೊಡನೆ ಬಂದು ನೀವೆ ಲ್ಲರೂ ನನ್ನ ಪಕ್ಷವನ್ನು ವಹಿಸಿ ಎದುರಿಸಬೇಕು" ಎಂದು ಸಿಂಹವರ್ಮನು ನಾಲ್ಕು

ವ॥ ಅಂತು ತನಗೆ ಮಿತ್ರರಪ್ಪರಸುಗಳಂ ಪಡಿಬಲವಾಗಿ ಬರಲ್ವೇಟ್ಟು ಸಿಂಹವರ್ಮಂ ತನ್ನುಳ್ಳ ಸೈನ್ಯಮಂ ಕೂಡಿಕೊಂಡು ಚಂಡವರ್ಮಂಗಿದಿರಾಗಿ ಬಿಡಲ್

ಕಂ॥ ಆರೀಸೈನ್ಯವನಾಂಪರ್
ಧಾರಿಣಿಯೊಳೆನಲ್ಕೆ ಚಂಡವರ್ಮಂ ಸಲೆದು
ರ್ವಾರಿತ ಸಂರಂಭದಿನಂ
ತೋರಂತಿರೆ ಬಿಟ್ಟನಲ್ಲಿ ಚಂಪೆಯಗಡಿಯೊಳ್ ೬೯

ವ॥ ಅಂತು ಭಯಬಲಮತ್ಯಾಸನ್ನಮಾಗಿ ಬಿಡುವುದುಂ ಚಂಡವರ್ಮನ ಸುಭಟರ್ ಮುಂದುವರಿದು

ಮ ಸ್ರ॥ ಕಡುಪುಳ್ಳರ್ ಬಂದು ಕೈದೋಱದೆ ಮಱೆದಿರೆವೆಂದಿರ್ದೊಡಂ ಚಂಡವರ್ಮಂ
ಬಿಡನೆಂತುಂ ಸಿಂಹವರ್ಮಾತ್ಮಜೆಯುಮವನಿಯುಂ ಕೊಳ್ಳದೆಂದಾರ್ದು ಸೈನ್ಯಂ
ನಡೆಯಲ್ ಬೊಬ್ಬಿಟ್ಟುಕೋಲಾತುಡುಕೆ ಮುಳಿಸಿನಿಂ ಮಾರ್ಬಲಂ ಚೂಣಿಯೊಳ್ಪ್ಯ
ಗಿಡಿಸಿತ್ತಂದಾಂಪ ವೈರಿಕ್ಷಿತಿಪರಭಟರಂ ದಿಂಡುಮಾಯ್ದೆಚ್ಚು ಬೇಗಂ ೭೦

ಉ॥ ವೈರಿಶಿರೋಜರಕ್ತಮಧುವಂ ತವೆಪೀರ್ವ ಶಿಲೀಮುಖಂಗಳಾ
ಕಾರದೊಳಂಬುಗಳ್ ಗಗನದೊಳ್ಮಿಗೆಪಾಱೆ ವಿರೋಧಿ ಮೌಳಿಯೊಳ್
ಘೋರೆನಲಾರ್ಪಿನಿಂದೆಱಗೆ ತೊಟ್ಟು ಕಟಿಲ್ಚಿದ ಪೂವಿನಂದದಿಂ
ಧಾರಿಣಿಯಲ್ಲಿ ಬಿಟ್ಟುವುಶಿರಂ ಪೊಸತಾಗೆ ಧನುರ್ಧರಾಹವಂ ೭೧

ದಿಕ್ಕಿಗೂ ಮಿತ್ರರಾದ ರಾಜರಿಗೆ ಓಲೆಯನ್ನು ಕಳುಹಿಸಿದನು. ವ॥ ಹೀಗೆ ತನಗೆ ಮಿತ್ರರಾದ ಅರಸುಗಳಿಗೆ ಎದುರಿಸುವುದಕ್ಕಾಗಿ ಬರಬೇಕೆಂದು ಸಿಂಹವರ್ಮನು ಹೇಳಿಕಳುಹಿಸಿದನು ಮತ್ತು ತನ್ನ ಸೈನ್ಯವನ್ನು ಕೂಡಿಹಾಕಿಕೊಂಡು ಚಂಡವರ್ಮನ ಸೈನ್ಯಕ್ಕೆದಿರಾಗಿ ಬೀಡುಬಿಟ್ಟನು. ೬೯. "ಈ ಭೂಮಿಯಲ್ಲಿ ಈ ಸೈನ್ಯವನ್ನು ಯಾರೂ ಎದುರಿಸಲಾರರು." ಎಂಬಂತಿದ್ದ ತಡೆಯಲಾಗದ ವೇಗವುಳ್ಳ ತನ್ನ ಸೇನೆಯನ್ನು ಚಂಡವರ್ಮನು ಚಂಪಾನಗರದ ತನ್ನ ಗಡಿಯಲ್ಲಿ ಬೀಡುಬಿಟ್ಟನು. ವ॥ ಹಾಗೆ ಎರಡು ಕಡೆಯ ಸೇನೆಗಳು ತುಂಬ ಹತ್ತಿರ ಎದುರು ಬದರಾಗಿ ಬೀಡುಬಿಟ್ಟವು. ಆಗ ಚಂಡವರ್ಮನ ಸೈನಿಕರು ಮುನ್ನುಗ್ಗಿ ೭೦. "ಪರಾಕ್ರಮಿಗಳಾದ ಸೈನಿಕರು ಬಂದು ತಮ್ಮ ಪರಾಕ್ರಮವನ್ನು ತೋರಿಸದೆ ಮರೆತು ಇರುವುದಿಲ್ಲ. ಆದರೂ ಚಂಡವರ್ಮನು ಸಿಂಹವರ್ಮನ ಮಗಳನ್ನೂ ರಾಜ್ಯವನ್ನೂ ವಶಪಡಿಸಿಕೊಳ್ಳದೆ ಇರುವುದಿಲ್ಲ" ಎಂದು ಅಬ್ಬರಿಸಿದರು. ಸೇನೆಯು ಕೋಪದಿಂದ ಬಾಣಗಳನ್ನು ಹೂಡಿತು. ಆಗ ಸೇನೆಯ ಮುಂಭಾಗದಲ್ಲಿದ್ದ ಪ್ರತಿಬಲವು ಎದುರಿಸಿದ ಶತ್ರುಸೈನಿಕರ ಮೇಲೆ ನುಗ್ಗಿ ವೇಗದಿಂದ ಬಾಣಗಳನ್ನು ಬಿಟ್ಟು ಅವರು ಕೂಗುವಂತೆ ಮಾಡಿತು. ೭೧. ಬಿಲ್ಲುಗಾರರ ಕಾಳಗವು ಹೊಸ ರೀತಿಯಲ್ಲಿ ನಡೆಯಿತು. ಶತ್ರುಗಳ ತಲೆಗಳಿಂದ ಹರಿಯುವ ರಕ್ತವೆಂಬ ಜೇನನ್ನು ತೃಪ್ತಿಯಾಗಿ ಕುಡಿಯುವ (ಶಿಲೀ ಮುಖಗಳು) ದುಂಬಿಗಳು ಬಾಣಗಳ ಆಕಾರದಿಂದ ಆಕಾಶದಲ್ಲಿ ಹಾರಿದುವು.

ಉ॥ ಮುತ್ತಿನ ಬಯ್ಕೆಯುಂತೆಗೆವೊಡಂಜನಮಲ್ತೆ ಮದೀಯ ಖಡ್ಗಮೆಂ
ದೆತ್ತಿದ ದಾಯದಿಂ ಗಜದ ಮಸ್ತಕಮಂ ಕಡುಕೆಯ್ದು ಪೊಯ್ದೊಡಾ
ನೆತ್ತಿಯಮುತ್ತು ಝಲ್ಲೆನೆ ರಣಾಂಗಣದೊಳ್ ಕೆದಱಲ್ಕೆ ಜಾಗು ವೀ
ರೋತ್ತಮ ಎಂದು ವೀರತತಿ ಬಣ್ಣಿಸೆ ಖಂಡೆಯಕಾಱರೊಪ್ಪಿದರ್ ೭೨

ಉ॥ ಭಾವಿಸೆ ಹಿಂದೆಮುಂದೆಡಬಲಂಗಳೊಳಂಬಿನ ಸೋನೆಯಿಂದಣಂ
ತೀವೆ ವಿರೋಧಿರಕ್ತಜಲದಿಂ ರಥಿಕರ್ ಕಡುಪಿಂ ರಥಂಗಳಿಂ
ಡಾವರಿಸುತ್ತೆ ತೋಳ್ದಣಿಯಲೆಚ್ಚು ವಿರೋಧಿ ಭಟರ್ಕಳೆಯ್ದೆ ನಿ
ರ್ಜೀವನರೆಂಬಿನಂ ಪೊಣರ್ದದೇಂ ಪೆಸರ್ವೆತ್ತರೊ ದೋರ್ಬಲಂಗಳಿಂ ೭೩

ವ॥ ಅಂತುಭಯ ಬಲಕ್ಕಂ ಸಮಯುದ್ಧಮಪ್ಪುದುಂ ಚಂಡವರ್ಮಂ

ಮ ಸ್ರ॥ ಇನಿತೇಕೀ ಸಿಂಹವರ್ಮಂಗೆನುತತಿ ಛಲದಿಂ ಚಂಡವರ್ಮಂ ಪ್ರತಾಪಾ
ರ್ಜುನನಾಗಳ್ ಸೇನೆಯಂ ಮುಂ ಕವಿಕವಿಯದಟಿಂ ನೂಂಕುನೂಂಕೆಂದು ಯುದ್ಧ
ಕ್ಕನುವಾದಂ ತಾನೆ ಜಾತ್ಯಶ್ವಮನನುನಯದಿಂದೇಱಿ ಕೌಕ್ಷೇಯಮಂ ಕಿ
ಬ್ಬಿನಿತಂ ಸಂಹಾರಮಂ ಮಾಡುವ ಬಗೆಯೊದವಂ ತಾಳ್ದಿ ಸಂಗ್ರಾಮ ಭೀಮಂ
೭೪

ಅವು ಶತ್ರುಗಳ ತಲೆಯ ಮೇಲೆ ಭೋರೆಂದು ಶಬ್ದ ಮಾಡುತ್ತಾ ವೇಗವಾಗಿ ಎರಗಿದುವು. ಅದರಿಂದ ಕತ್ತರಿಸಿದ ಶತ್ರು ಶಿರಸ್ಸುಗಳು ತೊಟ್ಟು ಕಳಚಿದ ಹೂಗಳಂತೆ ನೆಲದ ಮೇಲೆ ಉದುರಿದುವು. ೭೨. 'ನನ್ನ ಕತ್ತಿಯು ಮುತ್ತಿನ ನಿಕ್ಷೇಪವನ್ನು ಹೊರಕ್ಕೆ ತೆಗೆಯಲು ಸಹಾಯ ಮಾಡಬಲ್ಲ ಅಂಜನವಾಗಿದೆ' ಎಂದು ಹೇಳುತ್ತಾ ಕತ್ತಿಯಿಂದ ಆನೆಯ ತಲೆಗೆ ಗುರಿಯಿಟ್ಟು ಹೊಡೆದನೊಬ್ಬ ವೀರನು. ಅದರಿಂದ ಅದರ ನೆತ್ತಿಯಲ್ಲಿದ್ದ ಮುತ್ತುಗಳು ಝಲ್ ಎಂದು ರಣಭೂಮಿಯಲ್ಲಿ ಉದುರಿ ಕೆದರಿದುವು. ಉಳಿದ ವೀರರು ಅವನನ್ನು 'ಭಲೇ, ವೀರೋತ್ತಮ !' ಎಂದು ಹೊಗಳಿದರು. ಹೀಗೆ ಕತ್ತಿಗಾರರು ಯುದ್ಧ ಮಾಡುತ್ತಾ ಮೆರೆದರು. ೭೩. ರಥಿಕರು ರಥಗಳಿಂದ ನುಗ್ಗಿ ಕಾಡಿದರು. ತೋಳು ಸೋಲುವವರೆಗೂ ಬಾಣಗಳನ್ನು ಬಿಟ್ಟು ಶತ್ರು ಸೈನಿಕರು ನಿರ್ಜೀವರಾಗುವವರೆಗೂ ಯುದ್ಧ ಮಾಡಿದರು. ಹಿಂದೆ ಮುಂದೆ ಎಡಬಲ ಎಲ್ಲ ಕಡೆಗಳಿಂದಲೂ ಬಾಣಗಳ ಮಳೆ ಸುರಿಸಿ ಶತ್ರುಗಳ ರಕ್ತವು ತುಂಬಿ ಹರಿಯುವಂತೆ ಮಾಡಿದರು. ಹೀಗೆ ಅವರು ತಮ್ಮ ಬಾಹುಬಲದಿಂದ ಹೆಸರುವಾಸಿಯಾದರು. ಅಚ್ಚರಿಯಾಯ್ತು. ವ॥ ಹೀಗೆ ಎರಡು ಸೇನೆಗಳಿಗೂ ಯುದ್ಧ ಸಮವಾಯಿತು. ಚಂಡವರ್ಮನದನ್ನು ನೋಡಿ – ೭೪. 'ಸಿಂಹವರ್ಮನಿಗೆ ಇಷ್ಟು ಪರಾಕ್ರಮವು ಹೇಗೆ ಬಂದಿತು?' ಎಂದು ಕ್ರುದ್ಧನಾದನು ಚಂಡವರ್ಮ. ಪ್ರತಾಪಾರ್ಜುನನೂ ಸಂಗ್ರಾಮದಲ್ಲಿ ಭಯಂಕರನೂ ಆದ ಅವನು 'ಶತ್ರು ಸೇನೆಯ ಮೇಲೆ ನುಗ್ಗಿರಿ ನುಗ್ಗಿರಿ.

ಉ॥ ಮಾರಿ ಕನಲ್ದು ಸಂಗರಕೆ ಪೊಗ್ಗ ರವಾಯ್ದು ಪೊಲಾರ್ದು ವಾಜಿಯಂ
ಧಾರೆಲಯಾದಿಗಳ್ ಮೆಱೆಯೆ ವೈರಿ ಪತಾಕಿನಿಯಂ ನಿಜಾಸಿಯಿಂ
......ಕಡೆಗನ್ನೆಗಮಂ ಪೊಡೆಸೆಂಡನಾಡಿ ಸಂ
ಹಾರಮನೆಯ್ದಿಸುತ್ತಧಿಕ ಸಾಪಸಮಂ ತಳೆದಂ ನೃಪಾಲಕಂ ೭೫

ವ॥ ಅಂತು ಚಂಡವರ್ಮನುರವಣೆಪುದುಂ ಸಿಂಹವರ್ಮನ ಭಟರ್ ಕಂಡು

ಮ॥ ವೃಕಶಾಬಂ ಮತ್ತಮಾತಂಗದ ಬಿದುವನವಷ್ಟಂಭದಿಂದೇಱೆ ಶೌರ್ಯಾ
ಧಿಕನಪ್ಪೆಂ ಧಾತ್ರಿಗೆಂದೋವದೆ ಬಯಸುವವೋಲ್ ಪೆಂಪುವೆತ್ತೊಪ್ಪುವಂ ಬಾ
ಲಿಕೆಯಂ ಸ್ತ್ರೀ ರತ್ನಮಂ ಕೂಡುವ ಬಯಕೆಯೊಳೈತಂದನೀ ಕಾಳೆಗಕ್ಕಂ
ದುಕನಲ್ದಾ ಸಿಂಹವರ್ಮ ಕ್ಷಿತಿಪನ ಸುಭಟರ್ ಬಲ್ಪಿನಿಂದೆಚ್ಚರಾಗಳ್ ೭೬

ವ॥ ಅಂತು ಸಿಂಹವರ್ಮನ ಸುಭಟರ್ ಮುಂದುಗಿಡಿಸಲದಂ ಚಂಡವರ್ಮಂ ಕಂಡು

ಮ॥ ಪ್ರಳಯಾಗ್ನಿಜ್ವಾಲೆಯಂ ಕಣ್ ಕೆದಱುವಿನಮುಗುರ್ವ್ವಪ್ಪಿನಂ ಕೋಪಮುಣ್ಮಲ್
ಮುಳಿಸಿದಂ ಸಿಂಹವರ್ಮೋರ್ವಿಪನ ಬಲಮನೆಚ್ಚಟ್ಟಿ ತದ್ಭೂಪನಂ ತೋ
ಳ್ವಲದಿಂ ಮೇಲ್ವಾಯ್ದು ಬೇಗಂ ಪಿಡಿದು ನಡೆದು ಚಂಪಾಪುರಾವಾಸಮಂ ನಿ
ಶ್ಚಲಸತ್ವಂ ಪೊಕ್ಕು ಬಾಹಾಬಲದ ಸೊಬಗಿನಿಂದಿರ್ದನಾ ಚಂಡವರ್ಮಂ ೭೭

ಶೌರ್ಯದಿಂದ ಅವರನ್ನು ಹೊಡೆದು ತಳ್ಳಿರಿ ತಳ್ಳಿರಿ" ಎಂದು ತನ್ನ ಸೈನ್ಯಕ್ಕೆ ಪ್ರೋತ್ಸಾಹಿಸಿದನು. ತಾನೇ ಜಾತಿಯ ಕುದುರೆಯನ್ನೇರಿ ಕತ್ತಿಯನ್ನು ಹಿರಿದು ಕೊಂಡು ಶತ್ರು ಸಂಹಾರ ಮಾಡಲು ಸಿದ್ಧನಾದನು. ೭೫. ಚಂಡವರ್ಮರಾಜನು, ಮಾರಿಯು ಕೋಪಿಸಿಕೊಂಡು ನುಗ್ಗುವಂತೆ ನುಗ್ಗಿ ಗರ್ಜಿಸಿದನು. ಕುದುರೆಯನ್ನು ಧಾರೆ ಲಯ ಮೊದಲಾದ ಗತಿಗಳಿಂದ ಓಡಿಸಿ ಶತ್ರು ಸೈನಿಕರ ತಲೆಗಳನ್ನು ತನ್ನ ಕತ್ತಿಯಿಂದ ಪುಟ ಚೆಂಡನಾಡುವಂತೆ ಮೇಲಕ್ಕೆ ಹಾರಿಸಿದನು. ಶತ್ರು ಸಂಹಾರ ಮಾಡುತ್ತಾ ಅತಿಸಾಹಸವನ್ನು ಮೆರೆದನು. ವ॥ ಹಾಗೆ ಚಂಡವರ್ಮನ ವೇಗದ ಪ್ರಹಾರವನ್ನು ಸಿಂಹವರ್ಮನ ಸೈನಿಕರು ನೋಡಿ – ೭೬. 'ತೋಳದ ಮರಿಯು ಮದ್ದಾನೆಯ ಕುಂಭ ಸ್ಥಳದ ಮೇಲೆ ಜಂಭದಿಂದ ಹತ್ತಿ ಕುಳಿತು ತಾನು ಭೂಮಿಯಲ್ಲಿ ದೊಡ್ಡ ಶೂರನೆಂದು ತಿಳಿಯುವಂತೆ ಹಿರಿಮೆಯುಳ್ಳವನಿವನು. ಸ್ತ್ರೀರತ್ನವಾದ ಬಾಲಿಕೆಯನ್ನು ಮದುವೆಯಾಗುವ ಬಯಕೆಯಿಂದ ಕಾಳಗ ಮಾಡಲು ಬಂದಿದ್ದಾನೆ. ಎಂದು ಹೇಳುತ್ತಾ ಸಿಂಹವರ್ಮನ ಸುಭಟರು ಚಂಡವರ್ಮನ ಮೇಲೆ ಪರಾಕ್ರಮದಿಂದ ಬಾಣಬಿಟ್ಟರು. ವ॥ ಹೀಗೆ ಸಿಂಹವರ್ಮನ ಸೈನಿಕರು ಮುಂದೆ ಬರದಂತೆ ತಡೆಯಲು, ಅದನ್ನು ಚಂಡವರ್ಮನು ನೋಡಿ, ೭೭. ಪ್ರಳಯಕಾಲದ ಅಗ್ನಿಜ್ವಾಲೆಯನ್ನು ಕಣ್ಣುಗಳಿಂದ ಹೊರಸೂಸಿದನು. ಭಯಂಕರವಾದ ರೀತಿಯಲ್ಲಿ ಕೋಪವು ಉಕ್ಕಿತು. ಕೋಪದಿಂದ ಸಿಂಹವರ್ಮರಾಜನ ಸೇನೆಯನ್ನು ಹೊಡೆದೋಡಿಸಿದನು. ಮೇಲೆ ನುಗ್ಗಿ ತನ್ನ ತೋಳ್ಬಲದಿಂದ ಆ ರಾಜನನ್ನು ಸೆರೆಹಿಡಿದು ಚಂಪಾಪುರಕ್ಕೆ ಕರೆದುಕೊಂಡು ಹೋದನು. ಹೀಗೆ ನಿಶ್ಚಲಸತ್ವನು ಆ ನಗರವನ್ನು ಹೊಕ್ಕು ತನ್ನ ಬಾಹುಬಲದ ಸೊಬಗಿನಿಂದ

ವ॥ ಅಂತು ಸಿಂಹವರ್ಮನಂ ಪಿಡಿದು ಚಂಪಾಪುರಕ್ಕೆ ಬಂದು ಅರಮನೆಯಂ ಪೊಕ್ಕು ಮಱುದೆವಸಂ

ಮ ಸ್ರ॥ ಬರವೇೞಿನ್ನಿಲ್ಲಿಗಂಬಾಲಿಕೆಯನಿದು ಮುಹೂರ್ತಂ ವಿವಾಹಕ್ಕೆನುತ್ತಾ
ದರದಿಂ ಮಾಂಗಲ್ಯ ವಸ್ತುಪ್ರಕರಮನೊಲವಿಂದಾಕ್ಷಣಂ ಮಾಡಿ ತತ್ಸುಂ
ದರಿಯುಂ ಕೈಗೈದು ಬೇಗಂಬರಿಸಿ ಮದುವೆಯೊಳ್ ನಿಲ್ವ ಸಂರಂಭದಿಂ ನಿ
ರ್ಭರ ಸಂತೋಷಾತಿರೇಕಂ ಮಿಗುವಿನಮೆಸೆದಂ ರಾಗದಿಂ ಚಂಡವರ್ಮಂ ೭೮

ವ॥ ಅಂತು ಬಾಲಿಕೆಯಂ ಹಸೆಗೆ ಬರಿಸಿ ಮದುವೆಯಪ್ಪೆನೆಂಬ ಸಮಯದೊಳ್

ಮ ಸ್ರ॥ ನಸುಕೆಂಪಾದಕ್ಷಿ ಕೆಂದೂಳಡರ್ದ ಪದಯುಗಂ ಬಲ್ಬೆಮರ್ ಸೋರ್ವಭಾಳಂ
ಬಿಸುಸುಯ್ಲಿಂ ತೇಂಕುವಂಗಂ ಬಱತೊಣಗಿದ ಗಂಟಲ್ ಕರಂ ಕಂದಿದಾಸ್ಯಂ
ಪೊಸತಪ್ಪಾಟೋಪವೊಪ್ಪಲ್ ಸರಭಸಗತಿಯಿಂ ಬಂದನುದ್ದಂಡ ಸತ್ವಾ
ವಸಥಂ ದೂತಪ್ರಸಿದ್ಧಂ ಹರಿಣಚರಣನೆಂಬಂ ಮನೋವೇಗದಿಂದಂ ೭೯

ವ॥ ಅಂತು ಹರಿಣಚರಣನೆಂಬ ದೂತಂ ಬಂದು ಚಂಡವರ್ಮಂಗೋಲೆಯಂ ಕುಡಲ ದಱಿೊಳ್

ಪ್ರಕಾಶಿಸಿದನು. ವ॥ ಹಾಗೆ ಚಂಡವರ್ಮನು ಸಿಂಹವರ್ಮನನ್ನು ಹಿಡಿದುಕೊಂಡು ಚಂಪಾಪುರಕ್ಕೆ ಬಂದು ಅರಮನೆಯನ್ನು ಪ್ರವೇಶಿಸಿದನು. ಮಾರನೆಯದಿವಸ– ೭೮. "ಇನ್ನು ಅಂಬಾಲಿಕೆಯನ್ನು ಇಲ್ಲಿಗೆ ಬರಹೇಳು. ಇದು ಮದುವೆಗೆ ಸರಿಯಾದ ಮುಹೂರ್ತ ಎಂದು ಹೇಳಿ ಆಕ್ಕರೆಯಿಂದ ಮಾಂಗಲ್ಯವೇ ಮೊದಲಾದ ವಿವಾಹಕ್ಕೆ ಬೇಕಾದ ವಸ್ತುಗಳನ್ನು ಆ ಕ್ಷಣದಲ್ಲಿ ಮಾಡಿಸಿದನು. ಆ ಸುಂದರಿಯನ್ನು ಬೇಗ ಅಲಂಕರಿಸಿ ಬರಿಸಿದನು. ಹೀಗೆ ಚಂಡವರ್ಮನು ಮದುವೆಯಾಗುವ ಸಂಭ್ರಮದಿಂದ ಅತಿಸಂತೋಷವನ್ನು ಹೊಂದಿ ಪ್ರೀತಿಯಿಂದ ಸಿದ್ಧನಾದನು. ವ॥ ಹೀಗೆ ಆ ಬಾಲಿಕೆಯನ್ನು ಹಸೆಮಣೆಗೆ ಬರಮಾಡಿ ಮದುವೆಯಾಗುವೆನೆಂದಿರುವಾಗ – ೭೯. ಅತಿಶಯವಾದ ಪರಾಕ್ರಮವುಳ್ಳ ಹರಿಣಚರಣನೆಂಬ ಪ್ರಸಿದ್ಧನಾದ ದೂತನು ಮನೋವೇಗದಿಂದ ಅಲ್ಲಿಗೆ ಬಂದನು. ಅವನ ಕಂಗಳು ಕೆಂಪಾಗಿದ್ದುವು. ಎರಡು ಕಾಲುಗಳೂ ಕೆಂಧೂಳಿನಿಂದ ಮುಚ್ಚಿದ್ದುವು. ಹಣೆಯಿಂದ ಹೆಚ್ಚಾಗಿ ಬೆವರು ಹರಿಯುತ್ತಿತ್ತು. ಬಿಸಿಯುಸಿರಿನಿಂದ ಅಳ್ಳೆಯು ಹೊಡೆದುಕೊಳ್ಳುತ್ತಿತ್ತು. ಗಂಟಲು ನೀರು ಇಂಗಿ ಒಣಗಿಹೋಗಿದ್ದಿತು. ಮುಖವು ತುಂಬ ಕಂದಿ ಹೋಗಿದ್ದವು. ಹೊಸರೀತಿಯ ಆಟೋಪದಿಂದ ರಭಸ ಗತಿಯಿಂದ ಬಂದನು. ವ॥ ಹೀಗೆ ಹರಿಣಚರಣನೆಂಬ ದೂತನು ಬಂದು ಚಂಡ

ಮ॥ ಧರೆಯೊಳ್ ನೀತಿವಿದಂ ವಿಚಾರಪರನೆಂದಾ ರಾಜ್ಯದಾರೈಕೆಗೆಂ
ದಿರಿಸಲ್ ಮುಪ್ಪಿನ ತಂದೆ ತಾಯ ನುಡಿಯಂ ಕೇಳ್ದಲ್ಲಿ ಕನ್ಯಾಗೃಹಾಂ
ತರದೊಳ್ ಸಿಲ್ಕಿದ ಕಳ್ಳನಂ ಸೆಱೆಯೊಳಿಟ್ಟುಂ ಕೊಲ್ಲನೇಕೀಗಳೆ
ಚ್ಚರದಿಂ ಕೊಲ್ವುದನೇಕ ಚಿತ್ರವಧೆಯಿಂದೀವೋಲೆಗಂಡಾಕ್ಷಣಂ ೮೦

ವ॥ ಎಂದಿರಲದಂ ಕಂಡು

ಕಂ॥ ಕಡುಲೇಸಾಯ್ತೀ ಮದುವೆಯೊ
ಳೊಡಗೂಡಿ ಬೞಿಕ್ಕಮವನನಾನೆಯ ಕೈಯಿಂ
ಪೊಡೆಸಿ ರದನಾಗ್ರದಿಂದಿ
ರ್ಕಡಿಯಂ ಮಾಡಿಸುವೆನೆಲ್ಲರುಂ ನೋೞ್ಪಿನೆಗಂ ೮೧

ವ॥ ಎಂದು ಮಾವತಿಗನ ಮೊಗಮಂ ನೋಡೆ

ಮದಮೊಸರ್ವ ಚಂಡಪೋತನ
ನದಟಂ ಸಿಂಗರಿಸಿ ತಂದು ಬಾಗಿಲೊಳಿರಿಸೆಂ
ಬುದುಮಾತನಾಕ್ಷಣಂ ಪೆ
ರ್ಚಿದಗಜಮಂ ತಂದು ಬಾಗಿಲೊಳ್ ನಿಲಿಸಿರ್ದಂ ೮೨

ವ॥ ಅದೆಂತೆನೆ

ಶಾ॥ ಗಂಡಸ್ಥಾನದೊಳುರ್ಕಿ ಸೋರ್ವಮದದಿಂ ಮುಂಗಾಣದುದ್ರೇಕದಿಂ
ಶುಂಡಾದಂಡಮನೆತ್ತಿ ತನ್ನ ನೆೞಲಂ ಮಾಱಾನೆಯೆಂದಟ್ಟುವು
ದ್ದಂಡ ಕ್ರೋಧದಿನೊಂದಿ ನಿಂದುದು ನಗಂ ಮಾತಂಗಮಾದಂತೆ ವೇ
ತಂಡಂ ಬಂದುದು ಚಂಡಪೋತಮೆಸರಿಂ ರಾಜಾಲಯ ದ್ವಾರದೊಳ್ ೮೩

ಮರ್ಮನಿಗೆ ಪತ್ರವನ್ನು ಕೊಟ್ಟನು. ೮೦. ಅದರಲ್ಲಿ "ಭೂಮಿಯಲ್ಲಿ ರಾಜ ನೀತಿಯನ್ನು ಬಲ್ಲವನು. ವಿಚಾರಪರನು. ಎಂದು ತಿಳಿದು ರಾಜ್ಯದ ರಕ್ಷಣೆಗಾಗಿ ಇಟ್ಟೆನು. ಮುದುಕರಾದ ತಾಯಿ ತಂದೆಗಳ ಮಾತನ್ನೂ ಕೇಳದೆ ಅಂತಃಪುರದಲ್ಲಿ ಸಿಕ್ಕಿದ ಕಳ್ಳನನ್ನು ಸೆರೆಯಲ್ಲಿಟ್ಟಿದ್ದರೂ ಏತಕ್ಕೆ ಕೊಲ್ಲಲಿಲ್ಲ? ಈಗ ಈ ಪತ್ರವನ್ನು ನೋಡಿದ ಕೂಡಲೆ ಎಚ್ಚರಿಕೆಯಿಂದ ಚಿತ್ರವಧೆಯಿಂದ ಕೊಲ್ಲಬೇಕು," ವ॥ ಎಂದು ಬರೆದಿರಲು ಅದನ್ನು ನೋಡಿ – ೮೧. "ಬಹಳ ಒಳ್ಳೆಯದಾಯ್ತು. ಈ ಮದುವೆಯಾದ ಕೂಡಲೆ ಅವನನ್ನು ಆನೆಯ ಸೊಂಡಿಲಿನಿಂದ ಹೊಡೆಯಿಸಿ ಎಲ್ಲರ ಮುಂದೆ ಅದರ ದಂತಗಳಿಂದ ಎರಡು ತುಂಡು ಮಾಡಿಸುವೆನು". ವ॥ ಎಂದು ಹೇಳಿ ಮಾವಟಿಗನ ಮುಖವನ್ನು ನೋಡಿ – ೮೨. 'ಮದದ ನೀರು ಹರಿಯುವ ಭಯಂಕರವಾದ ಆನೆಯನ್ನು ಅಲಂಕರಿಸಿ ಬಾಗಿಲಿಗೆ ತಂದು ನಿಲ್ಲಿಸು' ಎಂದು ಹೇಳಿದನು. ಕೂಡಲೇ ಆತನು ಕೊಬ್ಬಿದಾನೆಯನ್ನು ತಂದು ಬಾಗಿಲಲ್ಲಿ ನಿಲ್ಲಿಸಿದನು. ವ॥ ಅದು ಹೇಗಿದ್ದಿತೆಂದರೆ, ೮೩. ಕೆನ್ನೆಗಳಲ್ಲಿ ಮದೋದಕವು ಉಕ್ಕಿ ಹರಿಯುತ್ತಿತ್ತು. ಅದರಿಂದ ಮುಂದುಗಾಣದ ಉದ್ರೇಕದಿಂದ ಉದ್ದವಾದ ಸೊಂಡಿಲನ್ನು ಮೇಲಕ್ಕೆ ಎತ್ತಿಕೊಂಡಿತ್ತು. ತನ್ನ ನೆಳಲನ್ನು ಮತ್ತೊಂದು

ಮ॥ ಧೃತಪದ್ಮಾಸುನಯಂ ಸುಗೋತ್ರಜನನಂ ಭದ್ರಾನ್ವಯಂ ದಾನವಾ
ರಿತನಂ ಕೌತುಕಕೀರ್ತನಂ ನೆಲಸಿದತ್ತೆನ್ನಲ್ಲಿ ಪಂಚಾಸ್ಯ ದೂ
ಷಿತಮಾತಂಗವೆಸರ್ಗೆನೋಂತೆನೆನುತುಂ ಕೈವೆರ್ಚಿಸುಯ್ವಂತೆ ಘೂ
ತ್ಕೃತಿಯಿಂ ರಂಜಿಸುತಿರ್ದುದುನ್ಮದಗಜಂ ರಾಜಾಲಯದ್ವಾರದೊಳ್ ೮೪

ವ॥ ಅಂತು ರಾಜವಾಹನವಧಾರ್ಥಂ ಚಂಡಪೋತಗಜಮಂ ಸಿಂಗರಿಸಿ ಬಾಗಿಲೊಳಿರಿಸಿ ಚಂಡವರ್ಮಂ ಪಸೆಯಂ ನಿಲ್ವುದರ್ಕೊಳಗಂ ಪುಗಲಿತ್ತಲ್

ಚಂ॥ ಚಳದುರುಕುಂಡಲಂ ಘನತರತ್ರಿಸರಂ ಮಣಿಕಂಕಣಂ ಲಸ
ತ್ಕಲಶಕುಚಂ ಕಳಾಪನವ ಕಿಂಕಿಣಿ ನೂಪುರಕಾಂಚಿ ಸಿಂಗರ
ಕ್ಕಳವಡೆ ರಾಜವಾಹನನೃಪಾಲನ ಕಾಲ್ಗಳೊಳಿರ್ದ ರೂಪ್ಯ ಶೃಂ
ಖಳೆ ಸತಿಯಾಗಿ ಕೈಮುಗಿದು ನಿಂದುದದೊಂದು ಮಹಾವಿಲಾಸದಿಂ ೮೫

ವ॥ ಅಂತು ಕೈಮುಗಿದು ನಿಂದ ವಿಳಾಸಿನಿಯಂ ರಾಜವಾಹನಂ ನೋಡಿ

ಕಂ॥ ನೀನಾರ್ಗೆ ಬಂದ ಕಾರ್ಯಮ
ದೇನಿಲ್ಲಿಗೆ ಮತ್ಪದಕ್ಕೆ ಶೃಂಖಲೆಯಾಗಲ್
ಮಾನಿನಿ ಕಾರಣವೇನೆಂ
ದಾ ನರಪತಿ ಕೇಳೆ ಪೇಟಲುದ್ಯತೆಯಾದಳ್ ೮೬

ಎದುರಿಸುವ ಆನೆಯೆಂದು ತಿಳಿದು ಓಡಿಸುತ್ತಿತ್ತು. ವಿಪರೀತವಾದ ಕೋಪದಿಂದ ಬೆಟ್ಟವೇ ಆನೆಯಾದಂತೆ ಉಗ್ರರೂಪದ ಚಂಡಪೋತವೆಂಬ ಹೆಸರಿನ ಆನೆಯು ಅರಮನೆಯ ಬಾಗಿಲಲ್ಲಿ ಒಂದು ನಿಂತಿತು. ೮೪. "ನಾನು ಪದ್ಮಾ=ಲಕ್ಷ್ಮೀದೇವಿಯ ವಿಶ್ವಾಸವನ್ನು ಗಳಿಸಿದವನು-ಪದ್ಮಗಳೆಂಬ ಚಿಹ್ನೆಗಳನ್ನು ಧರಿಸಿದವನು, ಉತ್ತಮ ಗೋತ್ರದಲ್ಲಿ ಜನಿಸಿದವನು-ಪರ್ವತದಲ್ಲಿ ಹುಟ್ಟಿದವನು, ಉತ್ತಮವಂಶಜನು-ಭದ್ರ ಎಂಬ ಗಜಲಕ್ಷಣಧಾರಿ, ದಾನವಾರಿತನ=ವಿಷ್ಣುಸ್ವರೂಪ-ಮದೋದಕವನ್ನು ಸುರಿಸುವಿಕೆ, ಕೌತುಕದಲ್ಲಿ=ಮಂಗಳ ವಸ್ತುಗಳಲ್ಲಿ ಕೀರ್ತನ ಮತ್ತು ಆಶ್ಚರ್ಯಕರವಾದ ಕೀರ್ತನ-ಇವು ನನ್ನಲ್ಲಿ ನೆಲೆಸಿವೆ. ಆದರೂ ಪಂಚಾಸ್ಯದೂಷಿತ=ಶಿವನಿಂದ ಮತ್ತು ಸಿಂಹದಿಂದ ದೂಷಿತವಾದ, ಮಾತಂಗ=ಆನೆ ಮತ್ತು ಚಂಡಾಲ ಎಂಬ ಹೆಸರನ್ನು ಪಡೆಯಲು ಅದೇನು ಪುಣ್ಯಮಾಡಿದೆನೋ! (ಪಾಪ ಮಾಡಿದೆನೋ ಎಂದು ಅಭಿಪ್ರಾಯ) - ಎಂದು ಕೈಬೀಸಿ ನಿಟ್ಟುಸಿರು ಬಿಡುವಂತೆ ಆ ಮದ್ದಾನೆಯು ಅರಮನೆಯ ಬಾಗಿಲಲ್ಲಿ ಶೋಭಿಸಿತು. (ರಂ) ವ॥ ಹೀಗೆ ರಾಜವಾಹನನನ್ನು ಕೊಲ್ಲುವುದಕ್ಕಾಗಿ ಚಂಡಪೋತವೆಂಬ ಆನೆಯನ್ನು ಅಲಂಕರಿಸಿ ಬಾಗಿಲಲ್ಲಿ ನಿಲ್ಲಿಸಿ ಚಂಡವರ್ಮನು ಹಸೆಯ ಮೇಲೆ ಕುಳಿತುಕೊಳ್ಳಲು ಒಳಕ್ಕೆ ಹೋದನು. ಇತ್ತ- ೮೫. ಇದ್ದಕ್ಕಿದ್ದ ಹಾಗೆ ರಾಜವಾಹನನ ಕಾಲುಗಳಲ್ಲಿದ್ದ ಬೆಳ್ಳಿಯ ಸಂಕೋಲೆಯು ಹೆಣ್ಣಿನ ರೂಪಧರಿಸಿ ಮಹಾವಿಲಾಸದಿಂದ ಎದುರಾಗಿ ನಿಂತಿತು. ಅವಳ ಶ್ರೇಷ್ಠವಾದ ಕುಂಡಲಗಳು ಅಲು

ವ॥ ಅದೆಂತೆನೆ

ಶಾ॥ ಮಾಂಡವ್ಯಾತ್ರಿವಸಿಷ್ಠ ಗೌತಮಮುನಿಖ್ಯಾತಂ ಮಹಾಂಭೋಜಗ
ರ್ಭಾಂಡಂ ಕೋಟಿಯುಗಂಗಳೆಯ್ದುಱಿದೊಡಂ ನಿಶ್ಚಿತದಿಂದಿರ್ಪಮಾ
ರ್ಕಂಡೇಯಂ ಪದೆದೊಂದು ಪುಣ್ಯನದಿಯಂ ಮೀಯಲ್ಕೆ ಬಂದಿರ್ದನು
ದ್ದಂಡ ಸ್ಥೈರ್ಯ ಶರೀರನೊಂದುದೆವಸಂ ಭೂಪಾಲ ವಿದ್ಯಾಧರಾ ೮೭

ವ॥ ಅಂತಾ ಮಹರ್ಷಿ ಸ್ನಾನಂಗೆಯ್ವಾಗಳ್

ಉ॥ ಚಿತ್ತದ ಸಂಭ್ರಮಂಬೆರಸು ಖೇಚರ ಮಾರ್ಗದೊಳಾಂ ಬರುತ್ತಿರಲ್
ಮುತ್ತಿನಹಾರಮೆನ್ನ ಕೊರಲಿಂ ಪಱಿದಾತನ ಚೆಲ್ವುವೆತ್ತ ನು
ಣ್ಣೆತ್ತಿಯ ಮೇಲೆ ಬೀೞೆ ಕಡುನೊಂದು ಶಿರಸ್ತಟಮಂ ಕರಂಗಳಿಂ
ದೊತ್ತಿಕೊಳುತ್ತೆ ಮೇಲೆ ಸುೞಿವೆನ್ನನೊಸಲ್ದು ಕನಲ್ದು ನೋಡಿದಂ ೮೮

ಕಂ॥ ಎಲೆಪಾತಕಿ ಯೌವನಮದ
ವಿಲಾಸದಿಂ ಪೆರ್ಚುತೇತಕಘಮರ್ಷಣ ನಿ
ಶ್ಚಲಚಿತ್ತನೆನಿಪ್ಪೆನ್ನಂ
ತಿಳಿಯದೆ ಪೇೞ್ ಲೋಹಜಾತಿಯೊಳ್ ನೋಯಿಸಿದೋ ೮೯

ಗುತ್ತಿದುವು. ಅವಳು ಮೂರೆಳೆ ಸರ ಧರಿಸಿದ್ದಳು. ರತ್ನಖಚಿತವಾದ ಬಳೆತೊಟ್ಟಿದ್ದಳು. ಅವಳ ಕುಚಗಳು ಕಲಶಗಳಂತೆ ಮನೋಹರವಾಗಿದ್ದುವು. ಗೆಜ್ಜೆಗಳುಳ್ಳ ಒಡ್ಯಾಣ ಮತ್ತು ನೂಪುರಗಳನ್ನು ಧರಿಸಿದ್ದಳು. ಹೀಗೆ ಶೃಂಗರಿಸಿಕೊಂಡು ಸುಂದರಳಾಗಿ ವ॥ ಕೈ ಮುಗಿದುಕೊಂಡು ನಿಂತಿದ್ದ ರಮಣಿಯನ್ನು ರಾಜವಾಹನನು ನೋಡಿ ೮೬. “ನೀನು ಯಾರು ? ಇಲ್ಲಿಗೆ ಬಂದ ಕೆಲಸವೇನು? ಮಾನಿನಿ ! ನನ್ನ ಕಾಲಿಗೆ ಸಂಕೋಲೆಯಾಗಲು ಕಾರಣವೇನು ?” ಎಂದು ಕೇಳಿದನು. ಅವಳದಕ್ಕೆ ಉತ್ತರ ಕೊಡಲು ಸಿದ್ಧಳಾದಳು. ವ॥ ಅದು ಹೇಗೆಂದರೆ-೮೭. “ಭೂಪಾಲ ವಿದ್ಯಾಧರ ! ಅತಿಶಯವಾದ ಸ್ಥೈರ್ಯವುಳ್ಳ ಮಾರ್ಕಂಡೇಯ ಮಹಾಮುನಿಯೊಂದು ದಿನ ಒಂದು ಪುಣ್ಯನದಿಗೆ ಸ್ನಾನಮಾಡಲು ಬಂದಿದ್ದನು. ಅವನು ಮಾಂಡವ್ಯ, ಅತ್ರಿ, ವಸಿಷ್ಠ, ಗೌತಮ ಮೊದಲಾದ ಮಹರ್ಷಿಗಳಿಂದ ಸ್ತುತಿಸಲ್ಪಟ್ಟವನು. ದೊಡ್ಡ ಬ್ರಹ್ಮಾಂಡವು ಕೋಟಿ ಯುಗಗಳಾಗಿ ನಾಶವಾದರೂ ನಿಶ್ಚಿಂತೆಯಿಂದ ಇರತಕ್ಕನವನು. ವ॥ ಆ ಮಹರ್ಷಿಯು ಸ್ನಾನಮಾಡುತ್ತಿರುವಾಗ–೮೮. ಮನಸ್ಸಿನಲ್ಲಿ ಯಾವುದೋ ಆನಂದ (ಉದ್ವೇಗ)ವನ್ನು ತುಂಬಿಕೊಂಡು ನಾನು ಆಕಾಶಮಾರ್ಗದಲ್ಲಿ ಬರುತ್ತಿದ್ದೆ. ಆಗ ನನ್ನ ಕೊರಳಿನಿಂದ ಮುತ್ತಿನಹಾರವು ಕಿತ್ತುಹೋಗಿ ಅವನ ಸುಂದರವಾದ ಹಣೆಯಮೇಲೆ ಬಿತ್ತು. ಅದರಿಂದ ತುಂಬ ನೋವನ್ನು ಪಡೆದು ಅವನು ಕೈಗಳಿಂದ ಹಣೆಯನ್ನು ಒತ್ತಿಕೊಳ್ಳುತ್ತಾ ಮೇಲೆ ಹೋಗುತ್ತಿದ್ದ ನನ್ನನ್ನು ಅತಿಕೋಪದಿಂದ ನೋಡಿದನು. ೮೯. “ಎಲೆ ಪಾತಕಿ ! ಅಘಮರ್ಷಣ ಮಂತ್ರವನ್ನು ಜಪಿಸುತ್ತಾ ನಿಶ್ಚಲಚಿತ್ತನಾದ ನನ್ನನ್ನು ಯೌವನಮದದಿಂದ ಮೈಮರೆತು

ವ॥ ಎಂದು ಮತ್ತಂ

ಸ್ರ॥ ಕೋಪಂ ಕೈಗಣ್ಮೆ ಚಿತ್ರವ್ಯಥೆಯಿನೊಱಲ್ದು ಪೋ ಲೋಹವಾಗೆಂದು ತೇಜೋ
ರೂಪಂ ಕೊಟ್ಟಂ ಮಹಾಶಾಪಮನದನಱಿದಾಂ ಸ್ತೋತ್ರಮಂ ಮಾಡೆ ಶಾಪಂ
ಲೋಪಂತಾನಕ್ಕೆರೞ್ತಿಂಗಳೊಳನವರತಂ ರಾಜವಾಹಂಘ್ರಿ ಸೇವಾ
ವ್ಯಾಪಾರಂ ನಿನ್ಗೊಳಾಗಲ್ ಸುದತಿ ತೊದಳಿದಲ್ತೆಂದು ಬೀೞ್ಕೊಟ್ಟನೆನ್ನಂ ೯೦

ವ॥ ಅಂತು ಬೀೞ್ಕೊಡಲೊಡಂ

ಕಂ॥ ಅಂತಾ ಮುನಿಪನ ಶಾಪದಿ
ನಂತಸ್ತಾಪದೆ ಕರಂ ಕೊರಂಗಿ ಮನ
ಶ್ಚಿಂತಾಹತಿಯಿಂ ಕಣ್ಬನಿ
ಯಿಂ ತವೆನೀರುಂಡು ರೂಪ್ಯಶೃಂಖಲೆಯಾದೆಂ ೯೧

ವ॥ ಅಂತಾಂ ಸುರಮಂಜರಿಯೆಂಬ ಖೇಚರ ಸ್ತ್ರೀ ಶಾಪದಿಂ ಬೆಳ್ಳಿಯ ಸಂಕಲೆಯಾಗಿ ಮಹೇಂದ್ರಾಚಲದ ಕೆಲದೊಳ್ ಬಿೞ್ದಿರಲ್

ಕಂ॥ ಖೇಚರಲೋಕದಿನೊರ್ವಂ
ಖೇಚರನೆಯ್ತಂದು ದರ್ಪಸಾರ ನೃಪಾಲಂ
ಗಾಚಾರಮನೆಸಗಿ ಬೞಿ
ಕ್ಕಾ ಚಾತುರ್ಯೋಕ್ತಿಯಿಂದವಂಗಿಂತೆಂದಂ ೯೨

ಲೋಹ ವಸ್ತುವಿನಿಂದ ಏಕೆ ನೋಯಿಸಿದೆ? ಹೇಳು" ವ॥ ಎಂದು ಕೇಳಿದನು. ಮತ್ತೆ ೯೦. ಕೋಪವು ಮಿತಿಮೀರಲು, ಮನೋವ್ಯಥೆಯಿಂದ ದುಃಖಿಸುತ್ತಾ 'ಬೆಳ್ಳಿಯ ಲೋಹವಾಗು' ! ಎಂದು ಶಾಪಕೊಟ್ಟನು. ನಾನು ಅದನ್ನರಿತು ಅವರನ್ನು ಸ್ತೋತ್ರಮಾಡಿದೆನು. 'ಎಡೆಬಿಡದೆ ರಾಜವಾಹನನ ಪಾದಸೇವೆಯನ್ನು ಎರಡು ತಿಂಗಳಕಾಲ ಮಾಡುವುದರಿಂದ 'ಸುದತಿ, ಈ ಶಾಪವು ಬಿಟ್ಟುಹೋಗುತ್ತದೆ. ನನ್ನ ಈ ಮಾತು ಸುಳ್ಳಲ್ಲ' ಎಂದು ಹೇಳಿ ಹೋದನು. ವ॥ ಹೀಗೆ ಅವನು ಬೀಳ್ಕೊಡಲು—೯೧. ಆ ಮುನಿಯ ಶಾಪದಿಂದ ಮನಸ್ಸಿನಲ್ಲಿ ದುಃಖವುಂಟಾಯಿತು. ಅದರಿಂದ ತುಂಬ ಕೊರಗಿದೆನು. ಮನಸ್ಸಿನ ಚಿಂತೆಯ ಆಘಾತದಿಂದ ಕಂಬನಿಗರೆದು ಬೆಳ್ಳಿಯ ಸಂಕೋಲೆಯಾದೆನು. ವ॥ ಹೀಗೆ ಸುರಮಂಜರಿಯೆಂಬ ಅಪ್ಸರಸ್ತ್ರೀಯಾದ ನಾನು ಶಾಪದಿಂದ ಬೆಳ್ಳಿಯ ಸಂಕೋಲೆಯಾಗಿ ಮಹೇಂದ್ರಾಚಲದ ಪಕ್ಕದಲ್ಲಿ ಬಿದ್ದಿರಲು—೯೨. ಸ್ವರ್ಗಲೋಕದಿಂದ ಒಬ್ಬ ಗಗನಚಾರಿಯು ಬಂದು ದರ್ಪಸಾರಮಹಾರಾಜನಿಗೆ ನಮಸ್ಕಾರಾದಿಗಳನ್ನು ಸಲ್ಲಿಸಿ ಚಾತುರ್ಯದಿಂದ ಈ

**ಕಂ॥ ಎನ್ನೊಡನೊರ್ವಂ ಖೇಚರ**
**ನುನ್ನತಿಯಿಂ ತೊಡರ್ದೊಡಪನೊಳಾಂ ಸೋಲ್ತೆಂ ನಾ**
**ನಿನ್ನೆನಗೆ ವಿಜಯಸಿದ್ಧಿಯ**
**ನುನ್ನತಮಪ್ಪಂತೆ ಮಾಳ್ಪುದತಿದೋರ್ವಲದಿಂ** ೯೩

**ವ॥ ಎಂದಾ ವೀರಸೇನನೆಂಬ ಖೇಚರಂ ಮಿತ್ರಭಾವದಿಂ ಮಹೇಂದ್ರಾಚಲದೊಳ್ ತಪಂಗೆಯ್ಯುತ್ತಿರ್ದ ದರ್ಪಸಾರಂಗೆ ಪೇೞ್ದೊಡಾತನಿಂತೆಂದಂ**

**ಕಂ॥ ನಿನಗಾಂ ಸಹಾಯನಪ್ಪೆಂ**
**ನಿನಗೆ ಜಯಾಭ್ಯುದಯಮಪ್ಪವೊಲ್ ಮಿಗೆ ಮಾೞ್ಪೆಂ**
**ನಿನಗೆನ್ನನುಜೆಯನಿತ್ತಪೆ**
**ನನುನಯದಿಂದಿನ್ನು ಸಂದೆಯಂ ಪೆಱತುಂಟೇ** ೯೪

**ವ॥ ಎಂದು ದರ್ಪಸಾರಂ ಖೇಚರಂಗೆ ಪೇೞ್ದೊಡಾ ಖೇಚರಂ ವಿಜಯಸಿದ್ಧಿಯಿಂ ಕನ್ಯಾಸಿದ್ಧಿಯಗ್ಗಳಮೆಂದು ಭಾವಿಸಿ ತನಗೆ ಕೊಟ್ಟ ಕನ್ನಿಕೆಯಂ ನೋೞ್ಪೆನೆಂದು ಬರುತ್ತೆನ್ನಂ ಕಂಡು**

**ಕಂ॥ ಈ ಸಂಕಲೆಯಂ ಕೊಂಡು**
**ಯ್ದಾಸುರಮೆನಲೆನ್ನ ಪಗೆಯ ಕಾಲ್ಗಿಕ್ಕುವೆನೆಂ**
**ದಾ ಸುಭಟ ಖೇಚರೇಶ್ವರ**
**ನೋಸರಿಸದೆ ತೆಗೆದನಲ್ತೆ ನೃಪಕುಲತಿಲಕಾ** ೯೫

ಮಾತನ್ನು ಹೇಳಿದನು ೯೩. "ಒಬ್ಬ ಖೇಚರನು ಪರಾಕ್ರಮದಿಂದ ನನ್ನೊಡನೆ ಯುದ್ಧ ಮಾಡಿದನು. ನಾನವನಿಗೆ ಸೋತೆನು. ನೀನು ನಿನ್ನ ತೋಳ್ಬಲದಿಂದ ನನಗೆ ವಿಜಯವು ಸಿದ್ಧಿಸುವಂತೆ ಮಾಡು" ವ॥ ಎಂದು ಆ ವೀರಸೇನನೆಂಬ ಖೇಚರನು ಮಿತ್ರಭಾವದಿಂದ ಮಹೇಂದ್ರಪರ್ವತದಲ್ಲಿ ತಪಸ್ಸುಮಾಡುತ್ತಿದ್ದ ದರ್ಪಸಾರನಿಗೆ ಹೇಳಿಕೊಂಡನು. ಅದನ್ನು ಕೇಳಿ ಅವನು ಹೀಗೆ ಹೇಳಿದನು.—೯೪. "ನಿನಗೆ ನಾನು ಸಹಾಯಮಾಡುತ್ತೇನೆ. ನಿನಗೆ ಜಯವು ಸಿದ್ಧಿಸುವಂತೆ ವಿಶೇಷವಾಗಿ ಪ್ರಯತ್ನಿಸುತ್ತೇನೆ. ನಿನಗೆ ನನ್ನ ತಂಗಿಯನ್ನು ಕೊಡುವೆನು. ಇನ್ನು ಬೇರೆ ಸಂದೇಹಬೇಕಾಗಿಲ್ಲ" ವ॥ ಎಂದು ದರ್ಪಸಾರನು ಖೇಚರನಿಗೆ ಹೇಳಿದನು. ಆಗ ಖೇಚರನು ವಿಜಯಸಿದ್ಧಿಗಿಂತ ಕನ್ಯಾಸಿದ್ಧಿಯೇ ಶ್ರೇಷ್ಠವೆಂದು ತಿಳಿದನು ಮತ್ತು 'ತನಗೆ ಕೊಟ್ಟ ಕನ್ನೆಯನ್ನು ನೋಡುವೆನು' ಎಂದು ಬರುತ್ತಾ ನನ್ನನ್ನು ನೋಡಿ–೯೫. ಈ 'ಸಂಕೋಲೆಯನ್ನು ತೆಗೆದುಕೊಂಡು ಹೋಗಿ ಅತಿಶಯವಾದ ರೀತಿಯಲ್ಲಿ ನನ್ನ ಶತ್ರುವಿನ ಕಾಲಿಗೆ ತೊಡಿಸುವೆನು' ಎಂದು ಯೋಚಿಸಿ ಆ ವೀರನಾದ ಖೇಚರನು 'ನೃಪಕುಲತಿಲಕ' ಹಿಂದೆ ಮುಂದೆ ನೋಡದೆ ಮೇಲಕ್ಕೆತ್ತಿದನು.

ವ॥ ಅಂತು ಸಂಕಲೆಯಂ ಕೊಂಡು ಬಂದು ಕನ್ನಿಕೆಯಿರ್ದ ಕರುಮಾಡಮಂ ಪುಗು ವುದುಂ

ಶಾ॥ ನೀನುಂ ನಚ್ಚಿನವಂತಿದೇವಿಯುಮನಂಗ ಕ್ರೀಡೆಯಿಂದಂ ಬೞ
ಲ್ದಾನಂದಾಂಬುಧಿಯೊಳ್ ಮುೞುಂಗಿ ಸುಖನಿದ್ರಾಸಕ್ತರಾಗಿರ್ದುದಂ
ತಾನುಂ ನೋಡಿಯೆ ಖೇಚರಂ ನಿಗಳಮಂ ನಿನ್ನಂಘ್ರಿಯೊಳ್ ಸಾರ್ಚಿದಂ
ಭೂನಾಥಂ ತನಗೀವೆನೆಂಬ ಸತಿಯೊಳ್ ಕೂಡಿರ್ದಪೆಂಬೀರ್ಷ್ಯೆಯಿಂ ೯೬

ಮ॥ ಇದುಮಚ್ಛಾಪಪ್ರಪಂಚಂ ನಿನಗೆ ರಿಪುಜಯಂ ರಾಜ್ಯಸಂಸಿದ್ಧಿಯಕ್ಕಿ
ನ್ನುದಯಂಗೆಯ್ ಮಾೞ್ಪುದಂ ನೀಂ ಬೆಸಸುವುದೆನಗೆಂದಪ್ಸರ ಸ್ತ್ರೀವಿಳಾಸಾ
ಸ್ಪದದಿಂದಂ ಪೇೞ್ದು ಕೆಯ್ಯಂಮುಗಿದು ವಿನಯವಾಕ್ಪ್ರೀತಿಯಿಂ ರಾಜವಾಹಂ
ಮುದದಿಂದಾ ಖೇಚರಸ್ತ್ರೀಗನುನಯಮೆಸೆಯಲ್ಕಾತನಿಂತೆಂದನಾಗಳ್ ೯೭

ಕಂ॥ ಈ ವೃತ್ತಾಂತಮನೆನ್ನಮ
ಮನೋವಲ್ಲಭೆಯಪ್ಪವಂತೀದೇವಿಗೆ ಪೇೞ್ದಿಂ
ದ್ರಾವಾಸಮನೆಯ್ದುವುದೆಂ
ದಾ ವಧುವಿಂಗರಸನುಸಿರ್ದ ಸಮಯಾಂತರದೊಳ್ ೯೮

ಅತಿ ಕೋಳಾಹಳಮಪ್ಪೂ
ರ್ಜಿತ ಘನತರಮಪ್ಪ ಸಂಗವಿಲ್ಲದೆ ದಿಕ್ಸಂ
ತತಿಯೊಳ್ ಬಳೆದುದು ಬೇಗಂ
ಹತೋಹತಶ್ಚಂಡವರ್ಮ ಎಂಬೀವಾಕ್ಯಂ ೯೯

ವ॥ ಅನಂತರ ಸಂಕೋಲೆಯನ್ನು ಎತ್ತಿಕೊಂಡುಬಂದು ಕನ್ನಿಕೆಯಿದ್ದ ರಾಣಿವಾಸವನ್ನು ಹೊಕ್ಕನು. ಆಗ ೯೬. ನೀನೂ ನಿನ್ನ ಪ್ರೀತಿಯ ಅವಂತಿದೇವಿಯೂ ಸುರತ ಕ್ರೀಡೆಯಿಂದ ಬಳಲಿ ಆನಂದ ಸಾಗರದಲ್ಲಿ ಮುಳುಗಿ ಸುಖದಿಂದ ನಿದ್ರಿಸುತ್ತಿದ್ದಿರಿ. ಆ ಖೇಚರನು ಅದನ್ನು ಕಂಡು ರಾಜನು ತನಗೆ ಕೊಡುವೆನೆಂದು ಹೇಳಿದ್ದ ಸತಿಯಲ್ಲಿ ನೀನು ಕೂಡಿರುವೆಯೆಂಬ ಈರ್ಷ್ಯೆಯಿಂದ ನಿನ್ನ ಕಾಲುಗಳಲ್ಲಿ ಸಂಕೋಲೆಯನ್ನು ತೊಡಿಸಿದನು. ೯೭. ಇದು ನನ್ನ ಶಾಪದ ವಿವರ. ನಿನಗೆ ರಿಪುಗಳ ಮೇಲೆ ಜಯವೂ ರಾಜ್ಯಸಿದ್ಧಿಯೂ ಆಗಲಿ. ಇನ್ನು ಎದ್ದೇಳು. ನನಗೇನಾದರೂ ಮಾಡುವ ಕೆಲಸವಿದ್ದರೆ ಹೇಳು" ಎಂದು ಆ ಅಪ್ಸರಸ್ತ್ರೀಯು ವಿಲಾಸದಿಂದ ಹೇಳಿ ಕೈಯ್ಮುಗಿದಳು. ಅವಳ ವಿನಯದಿಂದಲೂ ಪ್ರಿಯವಾಕ್ಯದಿಂದಲೂ ರಾಜವಾಹನನು ಸಂತೋಷಪಟ್ಟನು. ಮತ್ತು ವಿಶ್ವಾಸದಿಂದ ಅವಳಿಗೆ ಹೇಳಿದನು. ೯೮. 'ಈ ಸಮಾಚಾರವನ್ನು ನನ್ನ ಪ್ರಿಯೆ ಅವಂತೀದೇವಿಗೆ ಹೇಳಿ ಆಮೇಲೆ ನೀನು ಇಂದ್ರಲೋಕಕ್ಕೆ ಹೋಗು' ಎಂದು ರಾಜವಾಹನನು ಆ ವಧುವಿಗೆ ಹೇಳಿದನು. ಆ ಸಮಯದಲ್ಲಿ ೯೯. ಚಂಡವರ್ಮನು ಕೊಲ್ಲಲ್ಪಟ್ಟನು' ಎಂಬ ಒಂದು ಅತಿಕೋಲಾಹಲಕರವಾದ ಗಟ್ಟಿಯಾದ ಒಂದು ವಾಕ್ಯವು ದಿಕ್ಕುಗಳಲ್ಲೆಲ್ಲ ಹರಡಿತು.

ಕಂ॥ ಆರೆಂದಱಿಯೆನದೊರ್ವಂ
ವೀರಂ ಪರಿಣಯನ ಕಳಕಳಂ ಮಿಗುವಾಗಳ್
ಕೂರಸಿಯಂ ಕಿಱ್ತಾಗಳ್
ಪೇರುರವಂ ತಿವಿಯೆ ಚಂಡವರ್ಮಂ ಮಡಿದಂ ೧೦೦

ವ॥ ಅಂತು ಹತೋಹತಶ್ಚಂಡವರ್ಮಾ ಎಂಬ ಧ್ವನಿಯಂ ರಾಜವಾಹನಂ ಕೇಳ್ದು

ಮ॥ ಭರದಿಂ ಗರ್ಜಿಸಿ ಕೇಸರಂಗೆದಱಿ ಸಿಂಹಂ ಕೋಪದಿಂದದ್ರಿಗ
ಹ್ವರದಿಂದಂ ಪೊಱಮಟ್ಟುದೆಂಬತೆಱದಿಂ ಬಾಹಾಬಲಂ ಪೆರ್ಚಿಪಂ
ಜರದಿಂದಂ ಪೊಱಮಟ್ಟು ಮಾಗಧ ಧರಿತ್ರೀಪಾಲಪುತ್ರಂ ಮದ
ದ್ವಿರದಂ ಬಾಗಿಲೊಳೊಪ್ಪಿರಲ್ ಪದೆಪಿನಂ ಕಂಡಂತದರ್ಕೆಯ್ದಿದಂ ೧೦೧

ವ॥ ಅಂತು ಮುನ್ನಮೆ ತನ್ನಂ ಕೊಲಲ್ ಸಿಂಗರಿಸಿಬಂದ ಚಂಡಪೋತಗಜಮಂ ಕಂಡು

ಕಂ॥ ಮಾವತಿಗನ ಕಾಲಂ ಪಿಡಿ
ದೋವದೆ ಸೆಳೆದವನನಿಕ್ಕಿಯಂಕುಸಮಂ ಕೊಂ
ಡಾವರಣಮಸ್ತಕದಿನಿ
ಳಾವಲ್ಲಭನಿರ್ದನತುಳಸತ್ತ್ವ ಸಮಗ್ರಂ ೧೦೨

ಉದಯಗಿರಿಗಲಸಿ ರವಿ ಮೇ
ಣುದಿಸಿದನೋ ನೀಲಗಿರಿಯೊಳೆನೆ ಮದಮಾತಂ
ಗದ ಮಸ್ತಕದೊಳ್ ಕುಳ್ಳಿ
ರ್ದದಟಂಮಿಗೆ ರಾಜವಾಹನಂ ಕಣ್ಗೆಸೆದಂ ೧೦೩

೧೦೦. ಯಾರೆಂದು ತಿಳಿಯದು. ಯಾವನೋ ಒಬ್ಬ ವೀರನು ಮದುವೆಯ ಕಲಕಲ ಧ್ವನಿಯ ನಡುವೆ ಹರಿತವಾದ ಕತ್ತಿಯನ್ನು ಹಿರಿದು ವಿಶಾಲವಾದ ಎದೆಗೆ ಚುಚ್ಚಿದನು. ಕೂಡಲೇ ಚಂಡವರ್ಮನು ಸತ್ತನು. ವ॥ 'ಹತೋಹತಶ್ಚಂಡವರ್ಮಾ' ಎಂಬ ಧ್ವನಿಯನ್ನು ಕೇಳಿ ೧೦೧. ಮಗಧರಾಜಕುಮಾರನಾದ ರಾಜವಾಹನನು, ಗಿರಿಗುಹೆಯಿಂದ ಕೋಪಗೊಂಡು ಕೇಸರವನ್ನು ಕೆದರಿಕೊಂಡು ಗರ್ಜಿಸುತ್ತಾ ವೇಗದಿಂದ ಸಿಂಹವು ಹೊರಕ್ಕೆ ನುಗ್ಗುವಂತೆ ಹೆಚ್ಚಾದ ಬಾಹುಬಲದಿಂದ ಪಂಜರದಿಂದ ಹೊರಕ್ಕೆ ಬಂದನು. ಅರಮನೆಯ ಬಾಗಿಲಿನಲ್ಲಿದ್ದ ಮದ್ದಾನೆಯನ್ನು ಕಂಡನು. ಮತ್ತು ಅದರ ಕಡೆಗೆ ನುಗ್ಗಿದನು. ವ॥ ಮೊದಲೇ ತನ್ನನ್ನು ಕೊಲ್ಲಲು ಸಿದ್ಧವಾಗಿ ಬಂದಿದ್ದ ಚಂಡ ಪೋತವೆಂಬ ಆನೆಯನ್ನು ನೋಡಿ—೧೦೨. ಅಸಮಪರಾಕ್ರಮಿಯಾದ ರಾಜವಾಹನನು ಮಾವಟಿಗನ ಕಾಲನ್ನು ಹಿಡಿದು ಕೆಳಕ್ಕೆಳೆದು ಕೊಂದನು. ಅವನಿಂದ ಅಂಕುಶವನ್ನು ಕಿತ್ತುಕೊಂಡು ಆನೆಯ ತಲೆಯ ಮೇಲೆ ಹತ್ತಿ ಕುಳಿತನು. ೧೦೩. ಮದ್ದಾನೆಯ ಕುಂಭ ಸ್ಥಳದಲ್ಲಿ ಕುಳಿತಿದ್ದ ಮಹಾವೀರನಾದ ರಾಜವಾಹನನು. ಉದಯಾದ್ರಿಯಲ್ಲಿ ಬೇಸರಗೊಂಡು

ವ॥ ಅಂತು ಗಜಸ್ಕಂಧದೊಳಿರ್ದು

ಕಂ॥ ಪ್ರಜೆಯೊಳ್ಕೂಡೆ ನಿತಾಂತಂ
ಗಜಬಜೆ ಮಿಗುತಿರಲದಂ ನೃಪಾಲಂ ಕಂಡಾ
ಗಜದಿಂ ಪಲರಂ ಸೀಳಿಸಿ
ವಿಜಯೋದ್ಯೋಗಕ್ಕೆ ದಾರಿದೆಗೆದನಲಂಪಿಂ ೧೦೪

ಮ॥ ಜಗದೊಳ್ ದುರ್ಬಲ ಚಂಡವರ್ಮನನದಾವಂ ಕೊಂದನಾ ವೀರನಿ
ಲ್ಲಿಗವಂ ಬಂದೊಡೆ ದೇವದಾನವರೊಳಾವಂ ಕೊಲ್ವೊಡಂ ಕಾವೆನೆಂ
ಬ ಗಭೀರಧ್ವನಿಯಂ ನೃಪಾಲತಿಲಕಂ ಸಂಗ್ರಾಮದೊಳ್ ಬೀಱಿ ಮ
ತ್ತಗಜಕ್ಕಂಕುಶಮಿಕ್ಕಿ ನೂಂಕಿ ನಡೆದಂ ಸಾಮರ್ಥ್ಯ ದಿಕ್ಕುಂಜರಂ ೧೦೫

ವ॥ ಅಂತಾತನ ಗಂಭೀರ ಧ್ವನಿಯಂ ಕೇಳ್ದು

ಕಂ॥ ಕರದೊಳ್ಕಿಟ್ಟ ಕಠಾರಂ
ಬೆರಸದಟಂ ಬೀದಿವರಿಯುತಿರ್ಕೆಲನಂ ಸಂ
ಹರಿಸುತ್ತಾದನಿವಟ್ಟೆಯಿಂ
ದರಸನಿದಿರ್ಗೊರ್ವ ವೀರನೆಯ್ದಿದನಾಗಲ್ ೧೦೬

ಬಂದಾ ವೀರನನಾನೆಯು
ಪಿಂದೇಱಿಸುತುಂ ತದಾಸ್ಯಮಂ ಕಾಣುತೆ ನ
ಣ್ಪಿಂದಮುಪಹಾರವರ್ಮನೆ
ಎಂದರಸಂ ಪಿಂದು ಗೆಯ್ದು ತಳ್ಕಿಸಿಕೊಂಡಂ ೧೦೭

ನೀಲಗಿರಿಯಲ್ಲಿ ಉದಯಿಸಿದ ಸೂರ್ಯನೋ ಎಂಬಂತೆ ಪ್ರಕಾಶಿಸಿದನು. ವ॥ ಹಾಗೆ ಆನೆಯ ಹೆಗಲಿನ ಮೇಲೆ ಕುಳಿತು—೧೦೪. ಇದರಿಂದ ಪ್ರಜೆಗಳಲ್ಲಿ ವಿಶೇಷವಾದ ಅಶಾಂತಿಯುಂಟಾಗಲು ಆ ಆನೆಯಿಂದಲೇ ಹಲವರನ್ನು ಸೀಳಿಸಿದನು ಮತ್ತು ಸಂತೋಷ ದಿಂದ ವಿಜಯ ಪ್ರಯತ್ನಕ್ಕೆ ದಾರಿಮಾಡಿದನು. ೧೦೫. 'ಜಗತ್ತಿನಲ್ಲಿ ದುರ್ಬಲವಾದ ಚಂಡವರ್ಮನನ್ನು ಕೊಂದವನಾವನು ? ಆ ವೀರನು ಇಲ್ಲಿಗೆ ಬಂದರೆ ದೇವದಾನವರಲ್ಲಿ ಯಾರೂ ಕೊಲ್ಲಲು ಬಂದರೂ ರಕ್ಷಿಸುತ್ತೇನೆ' ಎಂದು ನೃಪತಿಲಕನಾದ ರಾಜವಾಹ ನನು ಯುದ್ಧ ಭೂಮಿಯಲ್ಲಿ ಗಂಭೀರ ಧ್ವನಿಯಿಂದ ಘೋಷಿಸಿದನು. ಸಾಮರ್ಥ್ಯದಿಂದ ದಿಗ್ಗಜವಾಗಿದ್ದ ಅವನು ಅಂಕುಶದಿಂದ ಚುಚ್ಚುತ್ತಾ ಆನೆಯನ್ನು ಮುಂದಕ್ಕೆ ನಡೆಯಿ ಸುತ್ತಾ ಬಂದನು. ವ॥ ಹಾಗೆ ಆತನ ಗಂಭೀರ ಧ್ವನಿಯನ್ನು ಕೇಳಿ ೧೦೬. ಕೈಯ್ಯಲ್ಲಿ ಹಿಡಿದ ಕಠಾರಿಯನ್ನು ಹಾಗೆಯೇ ಹಿಡಿದುಕೊಂಡು ಶೌರ್ಯದಿಂದ ಬೀದಿ ಗಳಲ್ಲಿ ನುಗ್ಗುತ್ತಾ ಎರಡು ಕಡೆಯಿದ್ದವರನ್ನು ಸಂಹರಿಸುತ್ತಾ ಆ ಧ್ವನಿಯು ಬಂದ ದಾರಿಯನ್ನು ಹಿಡಿದು ವೀರನೊಬ್ಬನು ಅರಸನಿಗೆ ಇದಿರಾಗಿ ಬಂದನು. ೧೦೭. ರಾಜ ವಾಹನನು ಬಂದ ಆ ವೀರನನ್ನು ಆನೆಯ ಹಿಂದೆ ಏರಿಸಿಕೊಂಡನು. ಮುಖವನ್ನು ನೋಡಿದ ಕೂಡಲೆ ಅವನು ಅಪಹಾರವರ್ಮನೆಂದು ತಿಳಿದನು. ಕೂಡಲೆ ಪ್ರೀತಿಯಿಂದ

ವ॥ ಅಂತು ಬಂದಾತಂ ತನ್ನ ತಮ್ಮನಪ್ಪಪಹಾರವರ್ಮನಾದುದಱಿಂ ರಾಜವಾಹನಂ ತಳ್ಕಿಸಿಕೊಳಲೊಡಂ

ಕಂ॥ ಈತಂ ಮದಗ್ರಜಂ ಧಾ
ತ್ರೀ ತಳಪತಿ ರಾಜವಾಹನಂ ತಪ್ಪದೆನು
ತ್ತ್ರೀತೆಱಗಿ ಹರ್ಷಪುಳಕ
ವ್ರಾತಮನಪಹಾರವರ್ಮನಾಂತೆಸೆದಿರ್ದಂ ೧೦೮

ವ॥ ಅಂತೊರ್ವರೊರ್ವರನಱಿದು ಸಂತೋಷಮಂ ತಳೆದಾನೆಯಂ ಮುಂದಗ್ಗೆ ನೂಂಕೆ

ಕಂ॥ ಪರಿಪರಿಯ ಚಂಡವರ್ಮನ
ಪರಿವಾರಮನೆಯ್ದೆ ಮತ್ತಗಜದಿಂ ಮಿಗೆ ಸಂ
ಹರಿಸೆ ವಿಜಯಾಂಗನಾ ನಿಜ
ವರನಾದಂ ರಾಜವಾಹನ ಕ್ಷಿತಿನಾಥಂ ೧೦೯

ಚಂ॥ ಕರಿಕರಘಾತದಿಂ ಕೆಲಂಬರಂ ಕೆಲರಂ ಕರಖಡ್ಗಘಾತದಿಂ
ದೊಱಸಿ ಬಿಸುಟ್ಟು ಭೀತಶರಣಾಗತರಂ ತಪೆಕಾದು ತತ್ಪುರೇ
ಶ್ವರ ಪರಿಖೇದಮಂ ಕಳೆದು ನಾಲ್ದೆಸೆಯೊಳ್ ಪರೆದಿರ್ದ ವಸ್ತುವಂ
ತರಿಸಿ ಭುಜಪ್ರತಾಪದೊದವಿಂದೆಸೆವಂ ನೃಪರಾಜವಾಹನಂ ೧೧೦

ವ॥ ಅಂತು ಸಿಂಹವರ್ಮನಂ ಬಿಡಿಸಿ ಪರೆದಿರ್ದ ವಸ್ತುವಂ ನೆರಪುವ ಸಮಯದೊಳ್

ಹಿಂದಿರುಗಿ ಅವನನ್ನು ತಬ್ಬಿಕೊಂಡನು. ವ॥ ಹಾಗೆ ಬಂದವನು ತನ್ನ ತಮ್ಮನಾದ ಅಪಹಾರವರ್ಮನಾದುದರಿಂದ ರಾಜವಾಹನನು ಅವನನ್ನು ಆಲಿಂಗಿಸಿಕೊಂಡನು–ಕೂಡಲೆ ೧೦೮. "ಈತನು ನನ್ನ ಅಣ್ಣನು. ಭೂಮಿಗೊಡೆಯನಾದ ರಾಜವಾಹನನು. ಸಂದೇಹ ವಿಲ್ಲ." ಎಂದು ತಿಳಿದಕೂಡಲೇ ಅಪಹಾರವರ್ಮನು ಪ್ರೀತಿಯಿಂದ ಅಣ್ಣನಿಗೆ ನಮಸ್ಕಾರ ಮಾಡಿದನು. ಹರ್ಷದಿಂದ ರೋಮಾಂಚಗೊಂಡನು. ವ॥ ಈ ರೀತಿಯಲ್ಲಿ ಒಬ್ಬರು ಇನ್ನೊಬ್ಬರನ್ನು ಗುರುತು ಹಿಡಿದು ಸಂತೋಷವನ್ನು ಹೊಂದಿದರು. ಹಾಗೆಯೇ ಆನೆ ಯನ್ನು ಮುಂದಕ್ಕೆ ನಡೆಯಿಸಿದರು. ೧೦೯. ರಾಜವಾಹನ ಮಹಾರಾಜನು ಚಂಡ ವರ್ಮನ ಪರಿವಾರದವರನ್ನು ನುಗ್ಗಿಸಿ ನುಗ್ಗಿಸಿ ಮದ್ದಾನೆಯಿಂದ ಕೊಲ್ಲಿಸಿದನು. ಮತ್ತು ವಿಜಯಾಂಗನೆಗೆ ವರನಾದನು. (ವಿಜಯವನ್ನು ಗಳಿಸಿದನು.) ೧೧೦. ಆನೆಯ ಸೊಂಡಲಿನಿಂದ ಕೆಲವರನ್ನು ಕೊಂದನು. ಕೈಯಲ್ಲಿ ಹಿಡಿದ ಕತ್ತಿಯಿಂದ ಕೆಲವರನ್ನು ಒರಸಿ ಹಾಕಿದನು. ಹೆದರಿ ಶರಣಾಗತರಾದವರನ್ನು ರಕ್ಷಿಸಿದನು. ಆ ಪುರದೊಡೆಯ ನಾದ ಸಿಂಹವರ್ಮನ ಕಷ್ಟವನ್ನು ಹೋಗಲಾಡಿಸಿದನು. ನಾಲ್ಕು ದಿಕ್ಕುಗಳಿಗೂ ಚದರಿ ಹೋಗಿದ್ದ ವಸ್ತುಗಳನ್ನು ತರಿಸಿದನು. ಈ ರೀತಿಯಾಗಿ ರಾಜವಾಹನನು ತನ್ನ ಭುಜ ಪ್ರತಾಪದ ಆಧಿಕ್ಯದಿಂದ ಪ್ರಕಾಶಿಸಿದನು. ವ॥ ಹಾಗೆ ಸಿಂಹವರ್ಮನನ್ನು ಬಿಡಿಸಿ

ಚಂ॥ ಕದಪನಮರ್ವ ಕುಂಡಲಮುಮುನ್ಮಣಿ ಕಂಕಣಮಾಂತ ಕೈಯ್ಯ ಬೆ
ತ್ತದ ಸೆಳೆ ತೊಟ್ಟ ಪೊಚ್ಚ ಪೊಸ ಕುಪ್ಪಸಮೊಪ್ಪಮನಾನೆ ಮಂದಿಯುಂ
ಕೆದಱಿಸು ತಂದು ಬಂದು ಜನಪಂಗೊಲವಿಂ ಪೊಡೆಮಟ್ಟು ನಿಂದನಂ
ಬುದರಪದಿಂದಮೊರ್ವನುರುವೇತ್ರಧರಂ ಜನತಾ ಮನೋಹರಂ ೧೧೧

ವ॥ ಅಂತು ಬಂದಾತನಂ ಕಂಡೀತನಾರೆಂದಪಹಾರವರ್ಮನಂ ರಾಜವಾಹನಂ ಕೇಳ್ವುದುಂ

ಕಂ॥ ದೇವರ್ಗೆನ್ನಿಂದಧಿಕಂ
ಕೋವಿದನತಿ ನೀತಿವಂತನಾಪ್ತ ಸಹಾಯಂ
ಭೂವಿನುತಿವೆತ್ತವೆಸರಿಂ
ಭಾವಿಸೆ ಧನಮಿತ್ರನೆನಗೆ ನಚ್ಚಿನ ಮಿತ್ರಂ ೧೧೨

ವ॥ ಎಂದೊಡಾತನಂ ಮನ್ನಿಸಲಾ ಧನಮಿತ್ರನಿಂತೆಂದಂ

ಮ॥ ಸಕಳೋರ್ವೀನಾಥರೀ ಚಂಪೆಯ ನೃಪತಿಗೆ ಸಾಹಾಯ್ಯಮಂ ಮಾಡಲೆಟ್ಟಂ
ದುಕರಂ ಮಾರ್ಗಶ್ರಮಂ ಪೆರ್ಚಿದೊಡನುಪಮ ಗಂಗಾನದೀ ತೀರದೊಳ್ ಸೈ
ನಿಕಯುಕ್ತರ್ ದೇವ ಬಿಟ್ಟಿರ್ದಪರನುನಯದಿಂ ಪೋಗಿ ಸಂತೋಷದಿಂ ಕಾ
ಣಿಕೆಯಂ ಕೈಕೊಳ್ವುದೆಂದಟ್ಟಿಱುಮಿಗೆ ನಲವಿಂ ಬಿನ್ನಪಂಗೆಯ್ವನಾಗಳ್ ೧೧೩

ಚೆದುರಿಹೋದ ವಸ್ತುಗಳನ್ನು ತರಿಸಿ ಸೇರಿಸುವ ಸಮಯದಲ್ಲಿ—೧೧೧. ಜನತಾ ಮನೋಹರನಾದ ಬೆತ್ತ ಹಿಡಿದವನೊಬ್ಬನು ಬಂದು ರಾಜನಿಗೆ ಪ್ರೀತಿಯಿಂದ ನಮಸ್ಕರಿಸಿ ನಿಂತನು. ಕೆನ್ನೆಗೆ ತಗಲುವ ಕುಂಡಲ, ಮಣಿಖಚಿತವಾದ ಕಂಕಣ, ಕೈಯ್ಯಲ್ಲಿ ಬೆತ್ತ, ಹೊಸಅಂಗಿ, ಇವುಗಳಿಂದ ಅಲಂಕೃತನಾದ ಅವನು ಜನರ ಮಧ್ಯದಲ್ಲಿ ದಾರಿ ಬಿಡಿಸಿ ಕೊಳ್ಳುತ್ತಾ ಬಂದನು. ವ॥ ಹಾಗೆ ಬಂದ ಅವನನ್ನು ನೋಡಿ 'ಇವನು ಯಾರು ?' ಎಂದು ರಾಜವಾಹನನು ಅಪಹಾರವರ್ಮನನ್ನು ಕೇಳಿದನು. ೧೧೨. ಅತನು "ಇವನು ನನಗಿಂದ ಹೆಚ್ಚೆಂದು ಸ್ವಾಮಿಯು ತಿಳಿಯಬಹುದು. ಎಲ್ಲವನ್ನೂ ತಿಳಿದವನು. ನೀತಿ ಗಳನ್ನು ಚೆನ್ನಾಗಿ ಬಲ್ಲವನು ಆಪ್ತರಿಗೆ ಸಹಾಯಕನು. ಇವನ ಹೆಸರು ಭೂಮಿಯಲ್ಲಿ ಪ್ರಸಿದ್ಧವಾಗಿದೆ. ಹೆಸರು ಧನಮಿತ್ರ, ನನ್ನ ನಚ್ಚಿನ ಗೆಳೆಯ." ವ॥ ಎಂದು ಹೇಳಿದನು. ಅದನ್ನು ಕೇಳಿ ರಾಜವಾಹನನು ಅವನನ್ನು ಗೌರವಿಸಿದನು. ಆಗ ಆ ಧನಮಿತ್ರನು ಹೀಗೆ ಹೇಳಿದನು. ೧೧೩. "ಸಕಲ ಭೂಮಿಗೆ ಒಡೆಯರಾದ ನಮ್ಮರಸರು ಈ ಚಂಪಾ ಪುರದ ರಾಜರಿಗೆ ಸಹಾಯ ಮಾಡುವುದಕ್ಕಾಗಿ ಹೊರಟುಬಂದರು. ದಾರಿಯಲ್ಲಿ ಮಾರ್ಗ ಶ್ರಮವು ಹೆಚ್ಚಾಗಿ ಅತ್ಯಾಯಾಸದಿಂದ ಗಂಗಾ ನದಿಯ ದಡದಲ್ಲಿ ತಮ್ಮ ಸೈನ್ಯ ದೊಡನೆ ಬೀಡು ಬಿಟ್ಟಿರುತ್ತಾರೆ. ನೀನು ಪ್ರೀತಿಯಿಂದ ಅಲ್ಲಿಗೆ ಹೋಗಿ ಅವರಿಂದ ಕಾಣಿಕೆಯನ್ನು ತೆಗೆದುಕೋ" ಎಂದು ಅವನು ಪ್ರೀತಿಯಿಂದ ವಿಜ್ಞಾಪಿಸಿಕೊಂಡನು,

ವ॥ ಅಂತು ಬಿನ್ನಪಂಗೆಯ್ಯಲಾಗಳರಮನೆಗೆ ಬಂದು

ಕಂ॥ ಆ ಪೊೞ್ತಿನೊಳಾಪಸೆಯೊಳ
ಮಾ ಪಂದರೊಳಾಕುಮಾರಿಯುಂ ನಲವಿಂ ತ
ದ್ಭೂಪನಪಹಾರವರ್ಮಂ
ಗೋಪಳಿನಲ್ ಪದೆದು ಮದುವೆಯುಂ ವಿರಚಿಸಿದಂ ೧೧೪

ಏಗೆಯ್ದೊಡಮೆಲ್ಲಿರ್ದೊಡ
ಮೇಗಳ್ ಸಾಹಸಮನೆಸಗಿದೊಡಮಧಿಕಮೆನಿ
ಪ್ಪಾಗುಂ ಚೇಗಿಯುಮೆಂಬಿವು
ಭೋಗಾದೃಷ್ಟಾನು ಸಾರಿಯೆಂಬುದು ಪುಸಿಯೇ ೧೧೫

ವ॥ ಅಂತುನ್ನತಿಕೆಯನಂಬಾಲಿಕೆಯನಪಹಾರವರ್ಮಂಗೆ ಸಿಂಹವರ್ಮನಿಂ ಧಾರೆಯ ನೆಱೆಯಿಸಿ ಸಿಂಹವರ್ಮನಂ ಪ್ರತಿಷ್ಠಿಸಿ

ಮ॥ ವಿಲಸನ್ಮುಕ್ತ್ಯವತಾರಮಂ ಸಕಲಪುಣ್ಯಾಧಾರಮಂ ಪಾಪಸಂ
ಕುಲ ಸಂಹಾರಮನುರ್ವಿಚಾರಮನಿಳಾ ವಿಸ್ತಾರಮಂ ನಿತ್ಯ ನಿ
ರ್ಮಲಿನಾಕಾರಮನುದ್ಧಸಾರಮನದೃಷ್ಟದ್ವಾರಮಂ ಜ್ಞಾನಕ
ಲ್ಪಲತಾಗಾರಮನೆಯ್ದಿದಂ ನೃಪವರಂ ಶೋಭಾನದೀ ತೀರಮಂ ೧೧೬

ವ॥ ಹಾಗೆ ವಿಜ್ಞಾಪಿಸಲು ಆಗ ಅರಮನೆಗೆ ಬಂದು—೧೧೪. ಅದೇ ಮುಹೂರ್ತದಲ್ಲಿ ಅದೇ ಹಸೆಯ ಮೇಲೆ, ಅದೇ ಚಪ್ಪರದಲ್ಲಿ ಆ ಕುಮಾರಿಯೊಡನೆ ಸಂತೋಷದಿಂದ ರಾಜವಾಹನನು ಅಪಹಾರವರ್ಮನಿಗೆ ಮದುವೆಯನ್ನು ಮಾಡಿಸಿದನು. ೧೧೫. ಏನು ಮಾಡಿದರೂ, ಎಲ್ಲಿದ್ದರೂ, ಎಷ್ಟೇ ಸಾಹಸವನ್ನು ಮಾಡಿದರೂ ಭವಿಷ್ಯವೂ ಹಿತವೂ ಭೋಗಾದೃಷ್ಟವನ್ನು ಅನುಸರಿಸುತ್ತದೆ ಎಂಬುದು ಸುಳ್ಳಾದೀತೆ ? ವ॥ ಹಾಗೆ ಶ್ರೇಷ್ಠಳಾದ ಅಂಬಾಲಿಕೆಯನ್ನು ಅಪಹಾರವರ್ಮನಿಗೆ ಸಿಂಹವರ್ಮನಿಂದ ಧಾರೆಯೆರೆಯಿಸಿದನು ಮತ್ತು ಸಿಂಹವರ್ಮನನ್ನು ಅವನ ರಾಜ್ಯದಲ್ಲಿ ಪ್ರತಿಷ್ಠಿಸಿದನು. ೧೧೬. ರಾಜಶ್ರೇಷ್ಠನಾದ ರಾಜವಾಹನನು ಶೋಭಾ ನದೀತೀರಕ್ಕೆ ಹೋದನು. ಅದು ಪ್ರಕಾಶಮಾನವಾದ ಮುಕ್ತಿಯ ಅವತಾರ ಅಂದರೆ ಮುಕ್ತಿಯನ್ನು ಕೊಡತಕ್ಕುದು. ಸಕಲ ಪುಣ್ಯಗಳಿಗೆ ಆಶ್ರಯ. ಪಾಪಸಮೂಹವನ್ನು ಸಂಹಾರಮಾಡತಕ್ಕುದು. (ದೇವಲೋಕದಿಂದ ಇಳಿದು ಭೂಲೋಕದಲ್ಲಿ ಹರಿಯುತಕ್ಕದ್ದು, ಭೂಮಿಯಲ್ಲಿ ವಿಸ್ತಾರವಾಗಿ ಹರಿಯುವುದು. ಸರ್ವದಾ ಪರಿಶುದ್ಧವಾದ ಆಕಾರವುಳ್ಳುದು. ಶ್ರೇಷ್ಠವಾದ ಸಾರವುಳ್ಳುದು. ಜ್ಞಾನ

ಚಂ॥ ಲಳಿತತರಂಗವೊಳ್ಪಿಱಿ ಲಸತ್ಪುಳಿನ ಸ್ಥಳಿ ಸತ್ಕಟೀತಟಂ
ಸುೞಿ ಸುೞಿನಾಭಿ ಕೋಕಯುಗಳಂ ಕುಚಮಾಡುವಮೀಂಗಳಕ್ಷಿಯು
ಜ್ಜ್ವಳ ಮಯುವಾರಿ ಯೌವನರಸಂ ದಲೆನಿಪ್ಪ ವಿಯತ್ತರಂಗಿಣೀ
ಲಳನೆಯ ನೀಳ್ದ ತೋಳೆನಿಪ ಕೂಲಮನೆಯ್ದಿದನಾ ನೃಪಾಲಕಂ ೧೧೭

ಚಂ॥ ಮದಗಜಮಂ ವಿಲಾಸಮೆನಲೇಱಿ ಸಮಸ್ತ ನೃಪಾಲಸೈನ್ಯಮಂ
ಪದೆಪಿನೊಳೊಲ್ದು ಕಾಣಿಸಿಕುಡಲ್ ನಡೆತಂದನತೀವಮಂಗಳಾ
ಭ್ಯುದಯ ಸಮನ್ವಿತಂ ನೃಪಶಿರೋಮಣಿ ಕೂರ್ತಪಹಾರವರ್ಮ ಸ
ಮ್ಮದ ಸಹಿತಂ ನದೀ ಪರಿಸರಕ್ಕಭಿಧೇಯನಭಂಗ ವಿಕ್ರಮಂ ೧೧೮

ಇದು ನಿಖಿಳಬುಧ ಜನಮನೋವನಜವನ ದಿವಾಕರ ಕಿರಣ ಪ್ರತಿಮಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ರಾಜವಾಹನ ಕಥಾವೃತ್ತಾಂತಂ

## ಸಪ್ತಮಾಶ್ವಾಸಂ

ವೆಂಬ ಕಲ್ಪವೃಕ್ಷಕ್ಕೆ ಆಶ್ರಯವಾದುದು. ೧೧೭. ಅಂದವಾದ ಅಲೆಗಳು ಸುಂದರವಾಗಿ ಸೇರಿಸಿಕಟ್ಟಿದ ಸೀರೆಯನಿರಿಗೆ ಹೊಳೆಯುವ ಮರಳರಾಶಿಯಿರುವ ಸ್ಥಳವು ಸುಂದರವಾದ ಸೊಂಟ. ಸುಳಿಯೇ ಹೊಕ್ಕಳು. ಚಕ್ರವಾಕ ಪಕ್ಷಿಗಳ ಜೋಡಿಯು ಕುಚಗಳು. ನೀರಿನಲ್ಲಿ ಪರಿದಾಡುವ ಮೀನುಗಳು ಕಣ್ಣು. ಉಜ್ಜ್ವಲವಾದ ನೀರು ಯೌವನರಸ ಎನಿಸುವ ಶೋಭಾ ನದಿಯೆಂಬ ಲಲನೆಯ ನೀಳವಾದ ತೋಳೋ ಎಂಬಂತೆ ಕಾಣಿಸುವ ನದೀ ತೀರವನ್ನು ರಾಜನು ತಲಪಿದನು. ಟಿ. ಶೋಭಾ ನದಿ=ಗಂಗಾನದಿ ೧೧೮. ಅತಿಶಯವಾದ ಮಂಗಳಾಭ್ಯುದಯದಿಂದ ಕೂಡಿದ, ರಾಜರಲ್ಲಿ ಶ್ರೇಷ್ಠನಾದ ರಾಜವಾಹನನು ಮದ್ದಾನೆಯನ್ನು ವಿಲಾಸದಿಂದ ಏರಿದನು. ಮತ್ತು ಅಭಂಗ ವಿಕ್ರಮನಾದ ಅವನು ಸ್ನೇಹವುಳ್ಳ ಅಪಹಾರವರ್ಮನೊಡನೆ ಹರ್ಷ ಪ್ರೀತಿಗಳಿಂದ ಕೂಡಿ ನೃಪಾಲನ ಸೈನ್ಯವನ್ನು ಕಾಣಿಸಿಕೊಳ್ಳುವುದಕ್ಕಾಗಿ ಸಡಗರದಿಂದ ನದೀತೀರದ ಪರಿಸರಕ್ಕೆ ಬಂದನು. ಇದು ಸಮಸ್ತ ವಿದ್ವಾಂಸರ ಮಾನಸ್ಸೆಂಬ ತಾವರೆಯ ವನಕ್ಕೆ ಸೂರ್ಯನ ಕಿರಣಗಳಿಗೆ ಸಮನಾದ, ಪ್ರಸನ್ನನಾದ ಶ್ರೀಮದಭಂಗ ವಿಟ್ಠಲನ ಪಾದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನು ವಿರಚಿಸಿದ ಅಭಿನವ ದಶಕುಮಾರ ಚರಿತೆಯಲ್ಲಿ ರಾಜವಾಹನ ಕಥಾ ವೃತ್ತಾಂತ ಏಳನೆಯ ಆಶ್ವಾಸ ಮುಗಿಯಿತು.

# ಅಷ್ಟಮಾಶ್ವಾಸಂ

## ಅಪಹಾರವರ್ಮನ ಕಥೆ

ಕಂ॥ ಶ್ರೀಮದ್ಗಂಗಾತೀರ
ಕ್ಕಾ ಮಹಿಮಂ ಬಂದದೊಂದು ಪುಳಿನಸ್ಥಳದೊಳ್
ಪ್ರೇಮದಿನಿರ್ದಂ ಗುಣ ನಿ
ಸ್ಸೀಮಂ ನಲವಿಂದಭಂಗವಿಟ್ಠಲಭೃತ್ಯಂ ೧

ವ॥ ಅಂತು ಬಂದಪಹಾರವರ್ಮನಿಂ ಮಾಡಲ್ಪಟ್ಟ ಸೈಕತ ಸಿಂಹಾಸನಮನಲಂಕರಿಸಿರ್ಪಿನಂ

ಆಂದಣಮುಂ ಮದೇಭತತಿಯುಂ ತುರಗಂಗಳನೇಱಿ ಭೂಪರಾ
ನಂದದೆ ಛತ್ರಚಾಮರದ ತಿಂತಿಣಿಯೊಳ್ ನಡೆತಂದು ಚಿತ್ರದು
ಬ್ಬೊಂದಿರೆ ರಾಜವಾಹನ ನೃಪಾಲಕನಂ ಮಿಗೆ ಕಾಣಲತ್ಯಪೂ
ರ್ವಂ ದಲೆನಲ್ಕವರ್ ನಿಜಸಹೋದರರಾದರಿದಲ್ತೆ ವಿಸ್ಮಯಂ ೨

ವ॥ ಅಂತು ಧನಮಿತ್ರಂ ತಂದು ಕಾಣಿಸಿದರಸುಗಳೆಲ್ಲರರಸಂಗೆ ತಮ್ಮಂದಿರಾದರ್ ಅದೆಂತೆನೆ

ಕಂ॥ ತನಗೆ ಕೃತಪುಣ್ಯಮಿಲ್ಲದ
ದಿನವೇನಂ ಮಾಡಲದು ನಿರರ್ಥಕಮಕ್ಕುಂ
ತನಗಧಿಕ ಪುಣ್ಯಮೊದವುವ
ದಿನಮಿರ್ದೆಡೆಗೆಯ್ದುಗುಂ ನಿಜಾಭೀಷ್ಟ ಫಲಂ ೩

೧. ಎಲ್ಲೆಯಿಲ್ಲದ ಸದ್ಗುಣಗಳಿಂದ ತುಂಬಿದ, ಅಭಂಗವಿಠ್ಠಲನ ಸೇವಕನಾದ ಆ ಮಹಾಮಹಿಮನು ಪ್ರಕಾಶಮಾನವಾದ ಗಂಗಾನದಿಯ ತೀರಕ್ಕೆ ಬಂದನು. ಅಲ್ಲಿ ಒಂದು ಮರಳು ದಿಣ್ಣೆಯ ಮೇಲೆ ಪ್ರೀತಿಯಿಂದಲೂ ಸಂತೋಷದಿಂದಲೂ ಕುಳಿತನು. ವ॥ ಹಾಗೆ ಬಂದು ಅಪಹಾರವರ್ಮನಿಂದ ಮಾಡಲ್ಪಟ್ಟ ಮರಳಿನ ಸಿಂಹಾಸನವನ್ನು ಅಲಂಕರಿಸಿದ್ದನು. ಆಗ ೨. ರಾಜರು ಪಲ್ಲಕ್ಕಿಗಳನ್ನೂ ಮದಿಸಿದ ಆನೆಗಳನ್ನೂ ಕುದುರೆಗಳನ್ನೂ ಏರಿ ಆನಂದದಿಂದ ರಾಜವಾಹನ ಮಹಾರಾಜನನ್ನು ಬಂದು ಕಂಡರು. ಅವರ ಜೊತೆಯಲ್ಲಿ ಛತ್ರ ಚಾಮರಗಳ ಗುಂಪೇ ಬಂದಿತು. ಇದೊಂದು ಅಪೂರ್ವವಾದ ಘಟನೆಯೆಂಬಂತೆ ಅವರೆಲ್ಲರೂ ಸಹೋದರರೆಂದು ತಿಳಿದರು. ಇದು ಅಚ್ಚರಿ. ವ॥ ಹಾಗೆ ಧನ ಮಿತ್ರನು ಕರೆತಂದು ಭೇಟಿ ಮಾಡಿಸಿದ ಅರಸರೆಲ್ಲರೂ ರಾಜವಾಹನನಿಗೆ ತಮ್ಮಂದಿರಾದರು–ಅದು ಹೇಗೆಂದರೆ— ೩. ತನಗೆ ಪೂರ್ವ ಪುಣ್ಯವಿಲ್ಲದ ದಿವಸ ಯಾವ ಕೆಲಸವನ್ನು ಮಾಡಿದರೂ ಅದು ವ್ಯರ್ಥವಾಗುತ್ತದೆ. ಅಧಿಕ ಪುಣ್ಯವುಂಟಾಗುವ ದಿನ ನಿಜಾಭೀಷ್ಟಫಲವು ಇದ್ದೆಡೆಗೆ

ಅಂತವರೆಲ್ಲರುಂ ನೃಪನನೀಕ್ಷಿಸಿಯುಮ್ಮವೋಲಾರ್ ಕೃತಾರ್ಥರೆ
ಮ್ಮಂತತಿ ಭಾಗ್ಯಮಂ ಪಡೆದರಾರೆನುತುಂ ನೃಪನಂಘ್ರಿ ಪದ್ಮಮಂ
ತಂತವುಗಪ್ಪಿ ಕೆಯ್ಮುಗಿದು ದೇವರೆ ನಿಮ್ಮಯ ಪಾದ ಬಂದ ವೃ
ತ್ತಾಂತಮನೆಮ್ಮೊಳೊಲ್ದು ಪೆಸಸಲ್ ದಯೆಗೆಯ್ ನೃಪರೂಪಮನ್ಮಥಾ ೪

ವ॥ ಎಂಬವರ್ ಬಿನ್ನಪಂಗೆಯ್ಯಲರಸಂ ತನ್ನ ವೃತ್ತಾಂತಮಂ ಪುಷ್ಪೋದ್ಭವ ಸೋಮದತ್ತರ ಪ್ರಪಂಚಮಂ ಪೇೞ್ದು ಅನಂತರಮುಪಹಾರವರ್ಮನ ಮೊಗಮಂ ನೋಡಿ ನೀನೆಸಗಿದ ಬಿಸವಂದವಂ [1]ಪೇೞ್ದನಲಾತಂ ಕೈಯ್ಗಳಂ ಮುಗಿದಿಂತೆಂದಂ

ಕಂ॥ ಎಲ್ಲರ ತೆರದಿಂ ನಿಜಪದ
ಪಲ್ಲವಮಂ ಭಕ್ತಿಪೂರ್ವಮರಸುವ ಬಗೆಯಿಂ
ದಲ್ಲಲ್ಲಿ ತೊೞಲುತುಂ ಚಿ
ತ್ತೋಲ್ಲಾಸದೊಳಂಗದೇಶಮಂ ಮಿಗೆ ಪೊಕ್ಕೆಂ ೫

ಏಪೊಗೞ್ವೆಂಗರಾಜ ವಿಷಯಾಂತರದೊಳ್ ಬುಧ ಕಾವ್ಯಮಂಗಳ
ಶ್ರೀಪದದಿಂ ಲಸತ್ತ್ರಿದಿವಮಂ [2]ಪದೆದೊಗ್ಗಿನನಂತ ಭೋಗಶೋ
ಭಾ ಪರಿಪೂರ್ಣದಿಂ ಭುಜಂಗ ಮಂದಿರಮಂ ಮಿಗೆ ಪೋಲ್ತು ಚೆಲ್ವಚಂ
ಪಾಪುರವೊಪ್ಪುಗುಂ ಸಕಳಸಂಪದ ಸೌಖ್ಯವಿಳಾಸದೇೞ್ಗೆಯಿಂ ೬

ತಾನಾಗಿಯೇ ಬಂದು ಸೇರುವುದು. ೪. ಅವರೆಲ್ಲರೂ ರಾಜನನ್ನು ನೋಡಿ ನಮ್ಮ ಹಾಗೆ ಕೃತಾರ್ಥರು ಬೇರೆ ಯಾರಿದ್ದಾರೆ ? ಭಾಗ್ಯವಂತರು ಯಾರಿದ್ದಾರೆ' ಎಂದು ಹರ್ಷದಿಂದ ನುಡಿದರು. ರಾಜನ ಪಾದ ಕಮಲಗಳಿಗೆ ನಮಸ್ಕರಿಸಿ ಕೈಮುಗಿದರು. 'ದೇವರೆ ! ರಾಜರೂಪದ ಮನ್ಮಥನೆ ! ನೀವು ಇಲ್ಲಿಯುವರೆಗೆ ಬಂದ ವೃತ್ತಾಂತವನ್ನು ದಯೆಯಿಟ್ಟು ಹೇಳಿ' ಎಂದು ಪ್ರಾರ್ಥಿಸಿದರು. ವ॥ ಹೀಗೆ ಅವರು ಪ್ರಾರ್ಥಿಸಲು ರಾಜನು ತನ್ನ ವೃತ್ತಾಂತವನ್ನೂ ಪುಷ್ಪೋದ್ಭವ ಮತ್ತು ಸೋಮದತ್ತನ ವೃತ್ತಾಂತವನ್ನೂ ಹೇಳಿದನು. ಅನಂತರ ಅಪಹಾರವರ್ಮನ ಮುಖವನ್ನು ನೋಡಿ 'ನೀನು ಮಾಡಿದ ಆಶ್ಚರ್ಯಗಳನ್ನು ಹೇಳು' ಎಂದನು. ಅವನಾಗ ಕೈಮುಗಿದುಕೊಂಡು ಹೀಗೆ ಹೇಳಿದನು. ೫. "ಎಲ್ಲರ ಹಾಗೆ ನಾನೂ ಭಕ್ತಿಯಿಂದ ನಿಮ್ಮನ್ನು ಹುಡುಕುತ್ತಾ ಅಲ್ಲಲ್ಲಿ ಅಲೆದಾಡಿದೆನು. ಅನಂತರ ಸಂತೋಷದಿಂದ ಅಂಗ ದೇಶವನ್ನು ಹೊಕ್ಕೆನು. ೬. ಏನೆಂದು ಹೊಗಳಲಿ ! ಅಂಗ ರಾಜನ ದೇಶದ ನಡುವೆ ಸಕಲ ಸಂಪತ್ತುಗಳ ಸೌಖ್ಯಗಳ ವಿಲಾಸದ ಉನ್ನತಿಯುಳ್ಳ ಸುಂದರವಾದ ಚಂಪಾಪುರವು ಪ್ರಕಾಶಿಸುತ್ತದೆ. ಅದು ಬುಧಕಾವ್ಯ ಮಂಗಳರ ಕಾಂತಿಯಿಂದ ಕೂಡಿ ಸ್ವರ್ಗದಂತೆ ಕಾಣುತ್ತದೆ. (ಬುಧ ಶುಕ್ರ ಕುಜ ಗ್ರಹಗಳು ಮತ್ತು ವಿದ್ವಾಂಸರ ಕಾವ್ಯಗಳ ಮಂಗಳಕರವಾದ ಕಾಂತಿಗೆ ಆಶ್ರಯವಾಗುವುದು) ಅನಂತ

---

[1]. ಪ್ರೀತಿಸಿ [2]. ವಿಸ್ಮಯ

ವ॥ ಅಂತಾ ಪಟ್ಟಣದ ಪೊಱಪೊಱಲೊಳ್ ತ್ರಿಕಾಲಜ್ಞಾನಿಯಪ್ಪ ಮರೀಚಿಮಹರ್ಷಿಯಿರ್ಪನೆಂದು ಕೇಳ್ದಾತನಿಂ ದೇವರ ವೃತ್ತಾಂತಮಂ ಕೇಳ್ವೆನೆಂದು ಪೋಗಿ ನೋೞ್ಪಿನಮಲ್ಲಿ

ಪಸುರ್ದಳಿರ್ದೊಂಗಲಿಂ ಪುದಿದ ಬಲ್ನನೆಯಿಂ ಮುಗುಳಿಂದಲರ್ಗಳಿಂ
ಪಸುಮಿಡಿಯಿಂ ಬೆಳರ್ತೊಲೆವ ಕಾಯ್ಗಳಿನೊಪ್ಪುವ ಪಣ್ಗಳಿಂ ಕರಂ
ಪಸರಿಸಿ ಗುಜ್ಜುಗೊಂಡು ಮಧುಪಾವಳಿ ಸಂಗತಮಾಗಿಯುಂ ಹರಂ
ಗೆಸೆವುದದೊಂದು ಬಿಲ್ವಕುಜಮೆನ್ನಿದಿರೊಳ್ ಮೆಱೆದಿರ್ದುದುರ್ವಿಪಾ ೭

ಕಂ॥ ಅದಱ ಮೊದಲೊಳ್ ಮಲೀಮಸ
ಹೃದಯಂ ನಿರ್ವಿಣ್ಣಚಿತ್ತನಭಿನವ ಚಿಂತಾ
ಸದನಂ ತಾಪಸಜನವೇ
ಷದೊಳಿರ್ದನದೊರ್ವನಾತನಾರೆಂದಱಿಯೆಂ ೮

ಇಲ್ಲಿ ಮರೀಚಿಯೆಂಬ ಋಷಿಯಿರ್ದಪನಲ್ತೆ ಮಹಾನುಭಾವನೆಂ
ದೆಲ್ಲರುಸಿರ್ವರಾತನ ಪದಾಬ್ಜಮನೀಕ್ಷಿಸಲೆಂದು ಬಂದೆನಿಂ
ದೆಲ್ಲಿಗೆ ಪೋದನೆಂದು ಪದೆದಾಂ ಬೆಸಗೊಳ್ವನಮಾತನಕ್ಕಱಿಂ
ಮೆಲ್ಲನೆ ಕಣ್ಗಳಂ ತೆಱೆದು ನೋಡಿದನೆನ್ನನಿಳಾಧಿನಾಯಕಾ ೯

ಭೋಗ ಶೋಭಾ ಪರಿಪೂರ್ಣತೆಯಿಂದ ನಾಗಲೋಕವನ್ನು ಹೋಲುತ್ತದೆ. (ಮಿತಿಯಿಲ್ಲದ ಭೋಗವಸ್ತುಗಳಿಂದ ಪೂರ್ಣವಾದುದು ಮತ್ತು ಅನಂತನ ಹೆಡೆಗಳ ಶೋಭೆಯಿಂದ ಪೂರ್ಣವಾದುದು.) ವ॥ ಆ ನಗರದ ಹೊರಭಾಗದಲ್ಲಿ ತ್ರಿಕಾಲಜ್ಞಾನಿಯಾಗಿ ಮರೀಚಿ ಮಹರ್ಷಿಯಿರುವನೆಂದು ಕೇಳಿದೆನು. ಆತನಿಂದ ಸ್ವಾಮಿಯ ವೃತ್ತಾಂತವನ್ನು ಕೇಳಿ ತಿಳಿಯಬೇಕೆಂದು ಅಲ್ಲಿಗೆ ಹೋಗಿ ನೋಡಿದೆನು. ಆಗ ಅಲ್ಲಿ. ೭. ರಾಜನೆ ! ನನ್ನ ಎದುರಿನಲ್ಲಿ ಒಂದು ಬಿಲ್ವಪತ್ರೆ ಮರವು ಪ್ರಕಾಶಿಸಿತು. ಅದು ಹಸುರಾದ ಚಿಗುರಿನ ಗೊಂಚಲುಗಳಿಂದಲೂ, ಸಣ್ಣ ಮತ್ತು ದೊಡ್ಡ ಮೊಗ್ಗುಗಳಿಂದಲೂ ಹೂವುಗಳಿಂದಲೂ ತುಂಬಿದ್ದಿತು. ಅದರಲ್ಲಿ ಹಸುರಾದ ಸಣ್ಣ ಸಣ್ಣ ಕಾಯಿಗಳೂ, ಬಿಳುಪಾದ ಗಾಳಿಗಾಡುವ ಕಾಯ್ಗಳೂ ಹಣ್ಣುಗಳೂ ತುಂಬಿದ್ದುವು. ಕುಳ್ಳಾಗಿ ದುಂಬಿಗಳಿಂದ ಕೂಡಿದ ಆ ಮರವು ಹರನಿಗೆ ಪ್ರಿಯವಾಗಿದ್ದಿತು. ೮. ಆ ಮರದ ಕೆಳಗೆ ತಪಸ್ವಿಯ ವೇಷದಲ್ಲಿ ಒಬ್ಬನು ಕುಳಿತಿದ್ದನು. ಅವನ ಹೃದಯವು ಮಲಿನವಾಗಿತ್ತು. ಮನಸ್ಸಿನಲ್ಲಿ ನಿರ್ವೇದವು ತುಂಬಿತ್ತು. ಹೊಸದಾದ ಚಿಂತೆಗೆ ಆಶ್ರಯನಾಗಿದ್ದನು. ಅವನು ಯಾರೆಂದು ತಿಳಿಯಲಿಲ್ಲ. ೯. "ಇಲ್ಲಿ ಮಹಾನುಭಾವನಾದ ಮರೀಚಿಯೆಂಬ ಋಷಿಯು ಇದ್ದನಲ್ಲವೆ ? ಹೀಗೆ ಎಲ್ಲರೂ ಹೇಳುತ್ತಾರೆ. ಆತನ ಪಾದಕಮಲಗಳ ಸಂದರ್ಶನಕ್ಕಾಗಿ ಬಂದಿರುತ್ತೇನೆ. ಇಂದವನೆಲ್ಲಿಗೆ ಹೋಗಿದ್ದಾನೆ?" ಎಂದು ನಾನು ಪ್ರೀತಿಯಿಂದ ಕೇಳಿದೆನು. ಮಹಾರಾಜನೆ, ನನ್ನ ಮಾತನ್ನು ಆಕ್ಕರೆಯಿಂದ ಕೇಳಿ ಅವನು ನಿಧಾನವಾಗಿ ಕಂಗಳನ್ನು ತೆರೆದು ನನ್ನನ್ನು

ಕಂ॥ ಒಸೆದೆನ್ನ ಮೊಗಮನಂದೀ
ಕ್ಷಿಸಿ ಚಿತ್ತದೊಳೊಗೆದ ಚಿಂತೆ ತನ್ನಾನನದೊಳ್
ಪಸರಿಸುವಂತಿರೆ ಭೋಂಕೆನೆ
ಬಿಸುಸುಯ್ದಿಂತೆಂದನಾತನೆನ್ನೊಡನಾಗಳ್ ೧೦

ಗುರುಕುಚೆ ಕಾಮಮಂಜರಿಯೆನಿಪ್ಪವಳಿಲ್ಲಿಗೆ ಬಂದು ತನ್ಮುನೀ
ಶ್ವರಚರಣಾಂಬುಜಕ್ಕೆಱಗಿ ದೇವರೆ ದೀಕ್ಷೆಯನೀವುದೆಂದು ಸ
ತ್ಕರ ಕಮಳಂಗಳಂ ಮುಗಿದು ಬಿನ್ನವಿಸುತ್ತಿರಲೆಯ್ದಿದತ್ತು ತ
ತ್ತರುಣಿಯ ಪಿಂದುಗೊಂಡಖಿಳ ಬಂಧುಜನಂ ಪಿತೃಮಾತೃ ಸೋದರರ್ ೧೧

ವ॥ ಅದಲ್ಲದೆಯುಂ

ನರೆದಲೆ ಬೇರ್ಬಲ್ದ ಪಲ್ವಲ್ ಕಲೆಗಳ್ ತುಱುಗಿರ್ದ ಮೆಯ್ಯಗ
ಲ್ದುರಮೆವೆಯಿಲ್ಲದಕ್ಷಿ ಬಸಿಱೊಳ್ ಮಿಗೆ ನೇಲ್ವ ಕುಚದ್ವಯಂ ಮಹೋ
ದರಮೆಸೆಯಲ್ಕೆ ಶೋಕಿಸುತೆ ಪಿಂದನೆ ಬಂದಳೊಱಲ್ದು ಕಾಮಮಂ
ಜರಿಯಬಲಿಂ ಬಳಾರಿಯವೊಲೊಪ್ಪುವ ಮಾಧವಸೇನೆಯೆಂಬವಳ್ ೧೨

ವ॥ ಅಂತವಳ ತಾಯಪ್ಪ ಮಾಧವಸೇನೆ ಬರಲೊಡಂ ಕಾಮಮಂಜರಿ ಕೆಯ್ಗಳಂ ಮುಗಿದಿಂತೆಂದಳ್

ನೋಡಿದನು.) ೧೦. ಅವನು ಪ್ರೀತಿಯಿಂದ ನನ್ನ ಮುಖವನ್ನು ನೋಡಿದನು. ಮನಸ್ಸಿನಲ್ಲಿದ್ದ ಚಿಂತೆಯು ಮುಖದಲ್ಲಿ ತೋರುತ್ತಿತ್ತು. ನಿಟ್ಟುಸಿರು ಬಿಡುತ್ತಾ ಆತನು ನನ್ನೊಡನೆ ಆಗ ಹೀಗೆ ಹೇಳಿದನು. ೧೧. "ಒಂದು ದಿನ ಗುರುಕುಚೆಯಾದ ಕಾಮಮಂಜರಿಯೆಂಬುವಳೊಬ್ಬಳು ಇಲ್ಲಿಗೆ ಬಂದಳು. ಆ ಮುನಿಯ ಪಾದಕಮಲಗಳಿಗೆ ನಮಸ್ಕರಿಸಿದಳು. 'ಸ್ವಾಮಿ ! ನನಗೆ ದೀಕ್ಷೆಯನ್ನು ಕೊಡಿರಿ' ಎಂದು ತನ್ನ ಕರಕಮಲಗಳನ್ನು ಜೋಡಿಸಿ ಪ್ರಾರ್ಥಿಸಿಕೊಂಡಳು. ಅದೇ ಸಮಯದಲ್ಲಿ ಅವಳ ಬಂಧುಗಳೂ ತಂದೆ ತಾಯಿ ಸೋದರರೂ ಆ ಯುವತಿಯನ್ನು ಹಿಂಬಾಲಿಸಿಕೊಂಡು ಬಂದರು. ವ॥ ಅದೂ ಅಲ್ಲದೆ—೧೨. ತಲೆಯೆಲ್ಲ ನೆರತಿದ್ದಿತು ಬೇರು ಸಡಿಲವಾಗಿ ಹಳೆಯ ಹಲ್ಲುಗಳು ಅಲ್ಲಾಡುತ್ತಿದ್ದುವು. ಮೈಯೆಲ್ಲಾ ಕಲೆಗಳು ತುಂಬಿದ್ದುವು. ಎದೆಯಗಲವಾಗಿದ್ದಿತು (ತೆರೆದಿದ್ದಿತು). ಕಣ್ಣುರೆಪ್ಪೆಗಳಲ್ಲಿ ಕೂದಲು ಉದುರಿ ಹೋಗಿದ್ದವು. ಹೊಟ್ಟೆಯ ಮೇಲೆ ಎರಡು ಸ್ತನಗಳು ನೇತಾಡುತ್ತಿದ್ದುವು. ಹೊಟ್ಟೆ ದೊಡ್ಡದಾಗಿದ್ದಿತು–ಇಂಥ ಬಳಾರಿಯಂತೆ (ಮಾರಿಯಂತೆ) ಕಾಣುವ ಮಾಧವಸೇನೆಯೆಂಬುವಳೊಬ್ಬಳು ಅವಳ ಹಿಂದೆಯೇ ಗೋಳಾಡುತ್ತಾ ಬಂದಳು. ವ॥ ಅವಳ ತಾಯಿ ಮಾಧವಸೇನೆಯು ಬರಲು

ಕಂ॥ ಎಲೆಮುನಿಯೈಹಿಕದೀ ಕೋ
ಟಲೆಯೆನಗಿಂ ಸಾಲ್ಗು ಪೆರ್ಚಿದಾಮುಷ್ಮಿಕದೊಳ್
ನೆಲೆಗೊಳಿಸಲ್ ವೇಟ್ಕಿನ್ನಂ
ಲಲಿತಭವತ್ಪಾದಪದ್ಮಮಂ ಪ್ರಾರ್ಥಿಸುವೆಂ ೧೩

ವ॥ ಎಂದು ಮುನಿನಾಥಂಗೆ ಕಾಮಮಂಜರಿ ಬಿನ್ನಪಂಗೆಯ್ಯಲದಂ ಕೇಳ್ದು ಮಾಧವಸೇನೆಯಿಂತೆಂದಳ್

ಕಂ॥ ಬಿನ್ನಪವಂ ಚಿತ್ತೈಸಿವ
ಳೆನ್ನಯ ದೋಷಂಗಳಂ ಕರಂ ಪ್ರಕಟಿಸಲೆಂ
ದೆನ್ನೊಡನೆ ಮುನಿದು ಬಂದಳ್
ನಿನ್ನಾಣೆ ಮುನೀಂದ್ರ ತನಗೆ ತಪಕಿದು ದಿನಮೇ ೧೪

ವ॥ ಎಂದು ಮತ್ತಂ

ನೋಡಿರೆ ಹುಟ್ಟಿದೈದು ಬರಿಸಂಬರಮೀ ಕಡುಧೂರ್ತೆಯಂಗವಂ
ಗಾಡಿ ಮಿಗಲ್ ಪಿತಂಗೆ ಮೊದಲಾಗಿಯುಮೊರ್ಮೆಯೆ ತೋಱದಿ
ಚ್ಚಿಕೈಗೂಡುವ ಲಜ್ಜೆಪಜ್ಜಳಿಸುವನ್ನೆಗಮೊಪ್ಪಿರೆ ಸಾಕಿದೆನ್ನೊಳ್!
ಜೋಡೆ[1]ಕನಲ್ದುಬಂದು ತಪಮಂ ತಳೆವಳ್ ಗಡ ಕೇಳತಕ್ಕುಮೇ ೧೫

ಕಾಮಮಂಜರಿಯು ಕೈಜೋಡಿಸಿಕೊಂಡು ಹೇಳಿದಳು—೧೩. "ಎಲೆ ಮುನಿಯೇ ! ಇಹಲೋಕದ ಕೋಟಲೆಗಳು ನನಗಿನ್ನು ಸಾಕಾಗಿವೆ. ಶ್ರೇಷ್ಠವಾದ ಪರಲೋಕದಲ್ಲಿ ಸುಖವನ್ನು ಪಡೆಯುವ ದಾರಿಯಲ್ಲಿ ನನ್ನನ್ನು ನೆಲೆಗೊಳಿಸು. ಸುಂದರವಾದ ನಿನ್ನ ಪಾದಕಮಲಗಳನ್ನು ಪ್ರಾರ್ಥಿಸುತ್ತೇನೆ". ವ॥ ಕಾಮಮಂಜರಿಯು ಹೀಗೆ ಮುನೀಶ್ವರನನ್ನು ಪ್ರಾರ್ಥಿಸಿದುದನ್ನು ಕೇಳಿ ಮಾಧವಸೇನೆಯು ಹೇಳಿದಳು. ೧೪. "ಮುನಿಯೇ, ನನ್ನ ಪ್ರಾರ್ಥನೆಯನ್ನು ಕೇಳು. ಇವಳು ನನ್ನ ದೋಷಗಳನ್ನು ಪ್ರಕಟಪಡಿಸುವುದಕ್ಕಾಗಿಯೇ ನನ್ನ ಮೇಲೆ ಕೋಪಿಸಿಕೊಂಡು ಬಂದಿದ್ದಾಳೆ ! ಮುನೀಂದ್ರ ನಿನ್ನಾಣೆ ! ಇದು ಇವಳಿಗೆ ತಪಸ್ಸು ಮಾಡುವ ಕಾಲವೇ ? ಹೇಳು. ವ॥ ಎಂದು ಹೇಳಿ ಮತ್ತೆ—೧೫. "ನೋಡಿರಿ. ಈ ಕಡುಧೂರ್ತೆಯು ತಾನು ಹುಟ್ಟಿದಂದಿನಿಂದ ಐದು ವರ್ಷಗಳವರೆಗೆ ತನ್ನ ಸುಂದರವಾದ ಅಂಗವನ್ನು ತಂದೆ ಮೊದಲಾದವರಿಗೂ ತೋರಿಸಲಿಲ್ಲ. (ನಾನೊಬ್ಬಳೇ ಸಾಕಿದೆನೆಂದು ಭಾವ) ಇಚ್ಛೆಯು ಕೈಗೂಡುವ ನಾಚಿಕೆಯಿಂದ ಈಗ ಪ್ರಜ್ವಲಿಸುತ್ತಿದ್ದಾಳೆ. ಇಲ್ಲಿಯುವರೆಗೂ ಸಾಕಿದವಳು ನಾನು. ಈಗ ಈ ಜಾರಿಣೆಯು ನನ್ನೊಡನೆ ಜಗಳವಾಡಿ

---

1. ಜೋಡೆ–ಜಾರಿಣಿ

ಅವಯವ ಶೋಭೆಯಂ ಪಸಿನೆಗೆಯ್ವ ಮಿತಾಶನಮಿಕ್ಕೆ ಧಾತು ದೋ
ಷವನೊಡವೆರ್ಚದಂತೆಸಗುವಾಪ್ತ ಜನಂಗಳಿನೆಮ್ಮ ವಿದ್ಯೆಯಂ
ನವವಿಧವಾಗೆ ಕಲ್ಪಿಸುವ ಜೋಯಿಸರಿಂ ನಿಜಲಕ್ಷಣಂಗಳಂ
ಭುವನದೊಳೆಯ್ದೆ ಸಾಱಿಸುವ ಬಲ್ಪಗೆ ಸೂಳೆಯರಬ್ಬೆಗೊಪ್ಪುಗುಂ ೧೬

ಕಂತುಮಹೋತ್ಸವಂ ರತಿಯನೋಂಪಿ ವಸಂತ ನೃಪಾಲ ಪೂಜೆಯೊ
ಡ್ಡಂತಿಯ ಪೂರ್ವದಾನತಿಥಿ ಮಾಲಿಗೆವುಂಟಗೆ(?) ಜನ್ಮತಾರೆಯೆಂ
ದಿಂತಿ ಕೀರ್ತಿಯಂ ಪ್ರತಿದಿನಂ ತನಗಾಂ ಮಿಗೆ ಮಾಡಿದಳ್ಗೆ ದುಃ
ಖಂ ತಲೆದೋರ್ಪವೋಲ್ ಮುನಿದುಬಂದಪಳಿಲ್ಲಿಗೆ ದೀಕ್ಷೆಗೋಸುಗಂ ೧೭

ದೇವಿಯ ಯಾತ್ರೆಯೆಂದು ಮಿಗೆ ಸಾಱಿಸಿ ಸಂಭ್ರಮದಿಂದನಂತವೇ
ಶ್ಯಾವಧು ನಾಗರೀಕತತಿ ಸೈವೆಱಗಿಂ ನಡೆನೋಟ್ಟಿನಂ ತುರಂ
ಗಾವಳಿ ಮಧ್ಯದೊಳ್ ಮಿಸುನಿಯಂದಳವೇಱಿಸಿ ದಟ್ಟಮುಟ್ಟಿ ಶೋ
ಭಾವಹಮಂ ನೆಗೞ್ಚುವುದು ಸೂಳೆಯರಬ್ಬೆಗೆ ತಕ್ಕುದಲ್ಲವೇ ೧೮

ಕೊಂಡು ಬಂದಿದ್ದಾಳೆ. ಇದು ಇವಳಿಗೆ ಸರಿಯೇ ? ೧೬. ಅವಯವಗಳ ಶೋಭೆಯನ್ನು ಹೆಚ್ಚಿಸುವ ಹಾಗೆ ಮಿತಾಹಾರವನ್ನು ಸೇವಿಸಬೇಕು. ಧಾತು ದೋಷಗಳು ಹೆಚ್ಚದಂತೆ ಎಚ್ಚರಿಕೆ ವಹಿಸಬೇಕು. ಆಪ್ತರಾದ ಜನರಿಂದ ನಮ್ಮ ವಿದ್ಯೆ (ವೇಶ್ಯಾಕಲೆ) ಯನ್ನು ನೂತನವಾದ ರೀತಿಯಲ್ಲಿ ಕಲ್ಪಿಸಬೇಕು. ಜೋಯಿಸರಿಂದ ತನ್ನಲ್ಲಿರುವ ಸಲ್ಲಕ್ಷಣಗಳನ್ನು ಪ್ರಪಂಚದಲ್ಲೆಲ್ಲಾ ಸಾರಿಸಬೇಕು—ಈ ರೀತಿಯಾದ ಉತ್ತಮ ಮಾರ್ಗವು ಸೂಳೆಯರ ತಾಯಿಗೆ ಒಪ್ಪುತ್ತದೆ. ೧೭. ಮದನನ ಮಹೋತ್ಸವ, ರತಿಯ ವ್ರತ, ವಸಂತ ರಾಜನ ಪೂಜೆ, ವರ್ಧಂತಿ (ಹುಟ್ಟಿದ ಹಬ್ಬ), ಅಪೂರ್ವವಾದ ದಾನಮಾಡುವ ತಿಥಿ, ಮಾಲಿಗೆವುಂಟಿಗೆ (?), ಜನ್ಮ ನಕ್ಷತ್ರ ಹೀಗೆ ದಿನವೂ ಉತ್ಸವ (ಹಬ್ಬ)ಗಳನ್ನು ನಡೆಯಿಸಿ ಇವಳಿಗೆ ಹೆಚ್ಚು ಕೀರ್ತಿಯನ್ನು ತಂದೆನು. ಎಲ್ಲೆಲ್ಲೂ ಹೆಸರುವಾಸಿಯಾಗುವಂತೆ ಮಾಡಿದೆನು. ಅಂಥ ನನಗೆ ದುಃಖವನ್ನುಂಟುಮಾಡಿ ಕೋಪಿಸಿಕೊಂಡು ದೀಕ್ಷೆಯನ್ನು ಪಡೆಯಲು ಇಲ್ಲಿಗೆ ಬಂದಿದ್ದಾಳೆ. ೧೮. ದೇವಿಯ ಜಾತ್ರೆಯೆಂದು ಸಾರಿಸುವುದು. ಅನಂತರ ಸಂಭ್ರಮದಿಂದ ಅನಂತ ವೇಶ್ಯಾ ಸ್ತ್ರೀಯರೂ, ನಾಗರಿಕ ಸಮೂಹವೂ ಆಶ್ಚರ್ಯದಿಂದ ನಡೆದು ನೋಡುವಂತೆ ಕುದುರೆಗಳ ಸಾಲಿನ ನಡುವೆ ಚಿನ್ನದ ಪಲ್ಲಕ್ಕಿಯನ್ನೇರಿಸಿ ಮೆರವಣಿಗೆ ಮಾಡಿಸಿ ಶೋಭೆಯನ್ನುಂಟುಮಾಡಬೇಕು. ಇದು ಸೂಳೆಯರ

ವ॥ ಅದಲ್ಲದೆಯುಂ

ನಯದಿಂದರ್ಥಮನೀವವಂಗೆ ನಲವಿಂ ಕೂರ್ತಿರ್ಪುದುದ್ದಂಡ ಲೋ
ಭಿಯೊಳರ್ಥಂ ದೊರೆಕೊಳ್ಳದಿರ್ದೊಡಮನುಂ ಕೊಟ್ಟಂತೆ ಸಂತೋಷ ಶು
ದ್ಧಿಯನುಂಟಾಗಿಪುದೀಯದಾರ್ಪಿನದಟಂ ತೋರ್ಪಾತನಂ ಸೂಳೆಗೇ
ರಿಯೊಳೆಲ್ಲರ್ ನಡೆನೋಟ್ಪಿನಂ ತೆಗೆವುದಾಂ ಮಾಡಲ್ಕೆ ತಕ್ಕುಜ್ಜುಗಂ ೧೯

ಕುಡುವನಿತರ್ಥಮುಳ್ಳ ವಿಟನೊಳ್ ಮಿಗೆ ಕೂರ್ಪುದು ವಿತ್ತಹೀನನಂ
ಬಿಡುವುದು ಮಾತನಾಡೆ ಕಡು ಮೆಲ್ಲಿದಳಪ್ಪುದು ಚಿತ್ತವೃತ್ತಿಯಂ
ಮೃಡನೊಳಗಾಗೆ ಕಾಣದವೊಲಿರ್ದೆಣೆಯೊಳ್ ಗಣಿಕಾಧಿಪತ್ಯಮಂ
ಪಡೆವುದು ಸೂಳೆಯರ್ಗುಚಿತಮೆಂದುೞ ಪೇೞ್ದೊಡಿದೊಂದು ದೋಷಮೇ ೨೦

ಕಂ॥ ಕಡೆಗಣ್ಣೊಳ್ ಮಾತಾಡುವು
ದೆಡೆ ನುಡಿಯೊಳ್ ಮೆಚ್ಚುದೋರ್ಪುದನ್ಯರ್ಗೊಲವಂ
ಪಡೆದವೊಲಿರ್ಪುದು ವಿಟರ್ಗ
ಳ್ಕೊಡಮೆಯನೀೞ್ಕೊಳ್ವುದಿದುವೆ ವೇಶ್ಯಾಧರ್ಮಂ ೨೧

ತಾಯಿಗೆ ತಕ್ಕ ಕಾರ್ಯ. ವ॥ ಅದೂ ಅಲ್ಲದೆ—೧೯. ನ್ಯಾಯವಾಗಿ ಹಣವನ್ನು ಕೊಡುವವನಲ್ಲಿ ಸಂತೋಷದಿಂದ ಸ್ನೇಹವನ್ನು ತೋರಿಸಬೇಕು. ಕಡುಲೋಭಿಯಾಗಿದ್ದು ಸಾಕಷ್ಟು ಹಣವು ದೊರೆಯದೇ ಇದ್ದರೂ ಅವನಿಗೂ ಅವಕಾಶವಿತ್ತಂತೆ ತೋರಿಸಿ ಸಂತೋಷವನ್ನುಂಟುಮಾಡಬೇಕು. ಹಣ ಕೊಡದೆ ದರ್ಪವನ್ನು ತೋರಿಸುವವನನ್ನು ಸೂಳೆಗೇರಿಯಲ್ಲಿ ಎಲ್ಲರೂ ನೋಡುವಂತೆ ಅಪಮಾನಗೊಳಿಸುವುದು. ಇದು ನಾನು ಮಾಡಲು ತಕ್ಕ ಉದ್ಯೋಗ! ೨೦. ಕೊಡುವಷ್ಟು ಹಣವುಳ್ಳ ವಿಟನಲ್ಲಿ ಹೆಚ್ಚಾಗಿ ಸ್ನೇಹವನ್ನು ತೋರಿಸಬೇಕು. ಹಣವಿಲ್ಲದವನನ್ನು ಬಿಟ್ಟು ಬಿಡಬೇಕು. ಮೃದುವಾಗಿ ಮೆಲ್ಲಗೆ ಮಧುರವಾಗಿ ಮಾತನಾಡಬೇಕು. ಮನಸ್ಸನ್ನು ಶಿವನಲ್ಲಿರಿಸಬೇಕು. ಅದನ್ನು ತೋರಿಸಿಕೊಳ್ಳದಿರಬೇಕು. ಹೀಗೆ ಸೂಳೆಯರ ರಾಜ್ಯದ ಒಡೆತನವನ್ನು ಹೊಂದಬೇಕು. ಇದು ಸೂಳೆಯರಿಗೆ ಉಚಿತ ಎಂದು ಹೇಳಿದರೆ ಅದೇನು ದೋಷವಾಗುತ್ತದೆಯೇ ?—೨೧. ಕಣ್ಣ ತುದಿನೋಟದಿಂದ ಮಾತನಾಡಬೇಕು, ನಡುನಡುವೆ ಮಾತಿನಲ್ಲಿ ಮೆಚ್ಚಿಗೆಯನ್ನು ತೋರಿಸಬೇಕು. ಉಳಿದ ವಿಟರಿಗೆ ಪ್ರೀತಿಯಿರುವಂತೆ ತೋರಿಸಿಕೊಳ್ಳಬೇಕು. ವಿಟರಲ್ಲಿ

ನಗೆ ಬಗೆಯೊಲ್ಮೆ ನಲ್ಮೆ ಪೊಸ ಜಾಣ್ನುಡಿ ಪುರ್ಬುರ್ ಜರ್ಬುರ್ ಕೆ
ಮ್ಮಗೆ ಮಿಗೆ ಕೆಲ್ಲೆನೋಟವೊಡಗೂಟಮಗಲ್ಚದ ಕೂರ್ಮೆ ಪೋರ್ಮೆಪೊ
ರ್ದುಗೆಯೊಗೆವಿಚ್ಚ ಮಚ್ಚು ವಿಟರಂ ಕೊಱಚಾಡುವ ಪಾಡುವ ಗಾಡಿಯಿಂ
ದಗಣಿತ ಚೇಷ್ಟೆಗಳ್ ಮೆಱೆದಿರಲ್ ತಱಿಸಲ್ವುದು ಸೂಳೆವಿಜ್ಜೆಯೊಳ್ ೨೨

ಮುಳಿಸಂ ಮಾಣ್ ಮಾಣೆನೊರ್ವಂಗನೆ ನಡೆ ನಡೆಯೆಂ ಪೇೞ್ದುದಂ ಮಾಡು ಮಾಡೆಂ
ಛಲವೆನ್ನೊಳ್ ಬೇಡ ಬೇೞ್ಕೆನ್ನಯ ನುಡಿಯಿನಿತಂ ಮೀಱದಿರ್ ಮೀಱುವೆಂ ಮ
ತ್ಕುಲಮಂ ಕೀೞ್ಮಾಡದಿರ್ ಮಾಡುವೆನಧಿಕ ತಪಂಗೆಯ್ಯದಿರ್ ಗೆಯ್ವೆನೆಂದ
ಗ್ಗಳವಾಗಳ್ ತನ್ನ ತಾಯಂ ತೊರೆದು ಜಱೆದು ವೈರಾಗ್ಯಮಂ ತಾಳ್ದು ನಿಂದಳ್ ೨೩

ವ॥ ಅಂತೆಂತಾನುಂ ತಿಳಿಪಿದೊಡಂ ತಿಳಿಯದಂತಿರ್ದ ಕಾಮಮಂಜರಿಯಂ ಕಂಡು ಕೈಯ್ಗಳಂ ಮುಗಿದು ಮತ್ತಿಂತೆಂದಳ್

ಬೆಸಸಲ್ವೇೞ್ಪುದು ಕಾಮಮಂಜರಿಗೆಲೇ ಯೋಗೀಂದ್ರ ವೈರಾಗ್ಯಮಂ
ಬಿಸುಡೆಂದಲ್ಲದೊಡಿಲ್ಲಿ ಬಂದಿನಿಬರೀಗಳ್ ತೀರ್ಗುಮಿತ್ತಂಪದಾ
ಬ್ಜಸಮೀಪಂ ದೊರಕಿತ್ತು ಪುಣ್ಯಮೆನುತುಂ ಮೈಯಿಕ್ಕಿದಳ್ ತನ್ನ ಬಂ
ಧು ಸಹಸ್ರಂ ಬೆರಸಂತವಳ್ ಮುನಿದರಂಗೇೞೇೞೆಮೆಂಬನ್ನೆಗಂ ೨೪

ರುವ ಒಡವೆಯನ್ನು ಕಿತ್ತುಕೊಳ್ಳಬೇಕು. ಇದೇ ಸೂಳೆಯರಧರ್ಮ. ೨೨. ನಗುವುದು, ಮನಃ ಪ್ರೀತಿ, ಸ್ನೇಹ, ಹೊಸ ಜಾಣತನದ ಮಾತು, ಹುಬ್ಬುಕೊಂಕಿಸಿ ಗದರಿಸುವುದು, ನಿಷ್ಕಾರಣವಾದ ಹೃದಯಕ್ಕೆ ಚುಚ್ಚುವ ಕಡೆಗಣ್ಣೋಟ, ಅಗಲದೆ ಜೊತೆಗೂಡುವುದು, ಪ್ರೇಮ ಕಲಹ, ಪರಸ್ಪರ ಕೂಡುವ ಇಚ್ಛೆ, ಮೆಚ್ಚಿಗೆ, ವಿಟರನ್ನು ಅಣಕಿಸುವ, ಚುಚ್ಚಿ ಹೇಳುವ, ಹಾಡುವ ಅಂದ–ಇವೇ ಮೊದಲಾದ ಅಗಣಿತ ಚೇಷ್ಟೆಗಳಿಂದ ಮೆರೆಯುವ ವೇಶ್ಯಾವಿದ್ಯೆಯಲ್ಲಿ ನಿಶ್ಚಿತವಾದ ಅನುಭವವನ್ನು ಪಡೆಯಬೇಕು. ೨೩. ಆದರೆ ಇವಳಾದರೋ ಕೋಪವನ್ನು ಬಿಡು-ಬಿಡುವುದಿಲ್ಲ ! ಹೆಂಗಸರಂತೆ ವಿನಯದಿಂದ ನಡೆ (?)- ೨೩. ನಡೆಯುವುದಿಲ್ಲ ! ಹೇಳಿದಂತೆ ಮಾಡು–ಮಾಡುವುದಿಲ್ಲ ! ನನ್ನಲ್ಲಿ ಛಲ ತೋರಿಸಬೇಡ–ಛಲ ಮಾಡುತ್ತೇನೆ ! ನನ್ನ ಮಾತನ್ನು ಮೀರಬೇಡ–ಮೀರುವೆನು ! ನಮ್ಮ ಕುಲಕ್ಕೆ ಕೆಟ್ಟ ಹೆಸರು ತರಬೇಡ-ತರುವೆನು ! ಅಧಿಕ ತಪಸ್ಸನ್ನು ಮಾಡಬೇಡ–ಮಾಡುವೆನು !—ಹೀಗೆ ಹೇಳುತ್ತ ಈ ಕಾಮಮಂಜರಿಯು ತನ್ನ ತಾಯನ್ನು ಜರೆದು ತೊರೆದು ವೈರಾಗ್ಯವನ್ನು ಪಡೆದು ನಿಂತಳು ! ವ॥ ಎಷ್ಟು ತಿಳಿಯ ಹೇಳಿದರೂ ತಿಳಿಯದವಳಂತಿದ್ದ ಕಾಮ ಮಂಜರಿಯನ್ನು ನೋಡಿ ಕೈಗಳನ್ನು ಜೋಡಿಸಿಕೊಂಡು ಮತ್ತೆ ಹೀಗೆ ಹೇಳಿದಳು—೨೪. 'ಎಲೈ ಯೋಗೀಂದ್ರನೆ ! ವೈರಾಗ್ಯವನ್ನು ಬಿಡಬೇಕೆಂದು ಕಾಮಮಂಜರಿಗೆ ಹೇಳು. ಹಾಗೆ ಮಾಡದಿದ್ದರೆ ನಾವೆಲ್ಲರೂ ಇಲ್ಲಿಯೇ ಇದ್ದು ಬಿಡುವೆವು. ಹೇಗಿದ್ದರೂ ತಮ್ಮ ಪಾದಕಮಲಗಳ ಸಾಮೀಪ್ಯವು ದೊರೆತಂತಾಗುವುದು. ಅದು

ವ॥ ಅಂತನೇಕಬಂಧುಜನಂಬೆರಸು ದಂಡಪ್ರಣತೆಯಾದ ಮಾಧವಸೇನೆಯ ದೀನಭಾವಮಂ ಮುನೀಶ್ವರಂ ಕಂಡು ಕಾಮಮಂಜರಿಗಿಂತೆಂದಂ

ಕಂ॥ ಎಲೆಮರುಳೆಯುಗ್ರ ತಪದಿಂ
ಫಲವೇಂ ನಿಜಬಂಧುವರ್ಗಮಂ ನಲವಿಂದಂ
ಸಲಹುವುದೆ ಕೋಟಿತಪದಿಂ
ದಿಳೆಯೊಳ್ ಮಿಗಿಲಲ್ತೆ ಸಕಲಶಾಸ್ತ್ರಕ್ರಮದಿಂ ೨೫

ವ॥ ಎಂಬುದುಂ ಕಾಮಮಂಜರಿ

ಕಳಿದ ಸುಖಂಗಳಂ ಪಡೆದ ಜವ್ವನಮಂ ದೊರೆಕೊಳ್ಳದರ್ಥಮಂ
ಅಳಿಸಿದ ರಾಜ್ಯಮಂ ಸವೆದಸಂಪದಮಂ ಮಗುಳಾಸೆಮಾಡಿಯು
ಮ್ಮಳಿಸುವರೇಕೆ ದುರ್ಮತಿಗಳಾಗದುದಾಗದಪ್ಪುದಪ್ಪುದೆಂ
ದಳವಡೆ ಚಿತ್ತಮಂ ಪಿಡಿದು ನಿಲ್ಲದೆ ತಲ್ಲಟಿದಿಂ ಧರಿತ್ರಿಯೊಳ್ ೨೬

ವ॥ ಎಂದು ತನ್ನಾಸೆಯ ದೆಸೆಯುಂ ಮಾಧವಸೇನೆಗೆ ಬಿಡಿಸಿ ಮತ್ತಂ ಮುನಿಗಿಂತೆಂದಳ್

ಕಂ॥ ಅವರಿವರಮಾತು ನಿನ್ನಯ
ಕಿವಿವೊಕ್ಕೆನ್ನಂ ಮಗುಳ್ದು ಕಳಿಪುವೊಡಾಂ ಜೀ
ವವನಿಲ್ಲಿ ತೊಱೆವೆನೇದಾ
ಕೆ ಯಥಾರ್ಥಂ ಮುನಿಯ ಕೆಯ್ಗ ಡಾಯುಧಮಿತ್ತಳ್ ೨೭

ಪ್ರಣ್ಯ !' ಎಂದು ಹೇಳಿ ಅವಳು ತನ್ನ ಸಾವಿರಾರು ಬಂಧುಗಳೊಡನೆ ಆ ಮುನಿವರನಿಗೆ ನಮಸ್ಕಾರ ಮಾಡಿದಳು. ಮುನಿಯು 'ಏಳು ಏಳು ಏಳು' ಎಂದು ಹೇಳುವವರೆಗೂ ನಿಲ್ಲಿಸಲಿಲ್ಲ. ವ॥ ಹಾಗೆ ಅನೇಕ ಬಂಧುಜನರೊಡನೆ ಅಡ್ಡಬಿದ್ದ ಮಾಧವಸೇನೆಯ ದೈನ್ಯವನ್ನು ಕಂಡು ಮುನೀಶ್ವರನು ಕಾಮಮಂಜರಿಗೆ (ಹೀಗೆ) ಹೇಳಿದನು ೨೫. "ಎಲೆ ಮರುಳೆ ! ಉಗ್ರವಾದ ತಪಸ್ಸಿನಿಂದ ಫಲವೇನು ? ತಮ್ಮ ತಮ್ಮ ಬಂಧುಗಳನ್ನು ಪ್ರೀತಿಯಿಂದ ಸಲಹುವುದೇ ಭೂಮಿಯಲ್ಲಿ ಕೋಟಿ ತಪಸ್ಸಿಗಿಂತ ಮೇಲಲ್ಲವೆ ? ಸಕಲ ಶಾಸ್ತ್ರಗಳೂ ಇದನ್ನೇ ಹೇಳುತ್ತವೆ." ವ॥ [ಎಂದು ಹೇಳಲು ಕಾಮಮಂಜರಿಯು–] ೨೬. "ಕಳೆದು ಹೋದ ಸುಖಗಳಿಗೂ, ಯೌವನಕ್ಕೂ, ಸಿಕ್ಕದ ಹಣಕ್ಕೂ, ತಪ್ಪಿಹೋದ ರಾಜ್ಯಕ್ಕೂ, ವ್ಯಯವಾದ ಸಂಪತ್ತಿಗೂ, ಮತ್ತೆ ಆಸೆ ಮಾಡಿ ದುರ್ಮತಿಗಳು ದುಃಖವನ್ನನುಭವಿಸುತ್ತಾರೆ. ಇದರಿಂದೇನು ಲಾಭ ? ಆಗದೇ ಇರುವುದು ಆಗುವುದಿಲ್ಲ. ಆಗಬೇಕಾದುದು ಆಗಿಯೇ ಆಗುವುದು ಎಂದು ತಿಳಿದು ಮನಸ್ಸನ್ನು ಈ ಧರಿತ್ರಿಯಲ್ಲಿ ಹಿಡಿದು ನಿಲ್ಲಿಸಬೇಕು." ವ॥ ಹೀಗೆ ಹೇಳಿ ಅವಳು ತಾನು ಹಿಂದಿರುಗುವ ಆಸೆಯನ್ನು ಮಾಧವಸೇನೆಗೆ ಬಿಡಿಸಿದಳು. (ಮತ್ತೆ ಮುನಿಗೆ ಹೇಳಿದಳು–) ೨೭. 'ಅವರಿವರ ಮಾತನ್ನು ಕೇಳಿಕೊಂಡು ನನ್ನನ್ನು ಹಿಂದಕ್ಕೆ ಕಳುಹಿಸಬೇಡ. ಕಳುಹಿಸಿದರೆ ನಾನಿಲ್ಲಿಯೇ ಪ್ರಾಣ ಬಿಡುವೆನು.' ಎಂದು ಹೇಳಿ ಅವಳು

ವ॥ ಅಂತು ತನ್ನಂ ಪರಿಚ್ಛೇದಿಸಿದ ಕಾಮಮಂಜರಿಯ ಮಾತಂ ಮುನಿನಾಥಂ ಕೇಳ್ದು ಮಾಧವಸೇನೆಗಿಂತೆಂದಂ

ಕಂ॥ ಈ ವನವಾಸಾಯಾಸದ
ಬೇವಸದಿಂ ತಾನೆ ಬರ್ಪಳಯ್ದಾಱುದಿನ
ಕ್ಕಾವೆಡೆಗೆ ಪೋದಪಳ್ ಸಲೆ
ನೀವೆಲ್ಲರ್ ಪೋಗಿ ನಿಜನಿವಾಸಕ್ಕೀಗಳ್ ೨೮

ವ॥ ಎಂಬುದುಂ ಮಾಧವಸೇನೆ ತನ್ನ ಮಗಳ ಮೊಗಮಂ ನೋಡಿ

ಮಳಯಜ ಚರ್ಚೆಯುಂ ತಳೆದ ದೇಹದೊಳೆಂತು ವಿಭೂತಿಯಾಂಪೆಯು
ಜ್ಜ್ವಳಮಣಿಕಾಂಚಿಯಿಂದೆಸೆವ ಮಧ್ಯದೊಳೆಂತುಗೆ ನಾಱ ಸೀರೆಯಂ
ತಳೆವೆ ಸುಗಂಧಕುಂತಳದೊಳೊಪ್ಪುವ ಮೌಳಿಯೊಳೆಂತು ತಾಳ್ವೆ ಕೋ
ಮಳಜಡೆಯಂ ರಸಾಯನಮನೊಲ್ಲದೆ ಮೆಲ್ವೆಯದೆಂತು ಕಂದಮಂ ೨೯

ಕಂ॥ ಹಾಸುಗಳಿಲ್ಲದೊಡೆಂತುಗೆ
ಪಾಸಱೆಯೊಳ್ ಪಡುವೆ ದಂಬುದೊಱವೆಯದೆಂತ
ಭ್ಯಾಸಿಸುವೆಯಣಲೆಯಿಂ(?) ಮ
ತ್ತೋಸರಿಸಲ್ಕೆಂತು ತಾಳ್ವೆ ರುದ್ರಾಕ್ಷಿಗಳಂ ೩೦

ತನ್ನನ್ನು ಕೊಲ್ಲುವುದಕ್ಕಾಗಿ ಮುನಿಯ ಕೈಗೆ ಆಯುಧವೊಂದನ್ನಿತ್ತಳು. ವ॥ ಹಾಗೆ ತನ್ನನ್ನು ಪರೀಕ್ಷಿಸಲು ನುಡಿದ ಕಾಮಮಂಜರಿಯ ಮಾತನ್ನು ಕೇಳಿ ಮುನೀಶ್ವರನು ಮಾಧವಸೇನೆಗೆ ಹೇಳಿದನು—೨೮. "ಈ ವನವಾಸದ ಆಯಾಸ ಮತ್ತು ಕಷ್ಟಗಳಿಗೆ ಹೆದರಿ ಐದಾರು ದಿನಗಳಲ್ಲಿ ತಾನಾಗಿಯೆ ಮನೆಗೆ ಹಿಂದಿರುಗಿ ಬರುವಳು. ಮತ್ತೆಲ್ಲಿಗೆ ಹೋದಾಳು ? ಈಗ ನೀವೆಲ್ಲರೂ ನಿಮ್ಮ ಮನೆಗೆ ಹೋಗಿ". ವ॥ ಎಂದು ಹೇಳಲು ಮಾಧವಸೇನೆಯು ತನ್ನ ಮಗಳ ಮುಖವನ್ನು ನೋಡಿ—೨೯. "ಶ್ರೀಗಂಧವನ್ನು ಹಚ್ಚಿ ಕೊಳ್ಳುತ್ತಿದ್ದ ಶರೀರಕ್ಕೆ ವಿಭೂತಿಯನ್ನು ಹೇಗೆ ತಾನೆ ಹಚ್ಚಿಕೊಳ್ಳುವೆ ? ಪ್ರಕಾಶ ಮಾನವಾದ ಒಡ್ಯಾಣದಿಂದ ಹೊಳೆಯುವ ಸೊಂಟದಲ್ಲಿ ಹೇಗೆ ತಾನೆ ನಾರ ಸೀರೆಯನ್ನು ಡುವೆ ? ಸುಗಂಧ ಸೂಸುವ ಕೂದಲಿನಿಂದ ಪ್ರಕಾಶಿಸುವ ತಲೆಯ ಮೇಲೆ ಹೇಗೆ ತಾನೆ ಕೋಮಲವಾದ ಜಡೆಯನ್ನು ಧರಿಸುವೆ ? ತಿನ್ನುತ್ತಿದ್ದ ರಸಾಯನವನ್ನು ತೊರೆದು ಗೆಡ್ಡೆಗಳನ್ನು ಹೇಗೆ ತಾನೆ ತಿನ್ನುವೆ ? ೩೦. ಹಾಸಿಗೆಯಿಲ್ಲದೆ ಹೇಗೆ ತಾನೆ ಬಂಡೆಯ ಮೇಲೆ ಮಲಗುವೆ ? ವ್ರತ ನಿಯಮಗಳನ್ನು ಹೇಗೆ ಅಭ್ಯಾಸ ಮಾಡುವೆ (?) ಆಭರಣ ಗಳನ್ನು ತೆಗೆದು (?) ರುದ್ರಾಕ್ಷಿಯನ್ನು ಹೇಗೆ ತಾನೆ ಧರಿಸುವೆ ? [ಅಣಲೆ= ಅರಳೆ

ಕಂ॥ ಕೆಳದಿಯರನುೞಿದು ಪೇೞ್ದೊ
ರ್ಬಳೆಂತು ಕಾನನದೊಳಿರ್ಪೆ ಋಷಿ ಪರಿಚರ್ಯಾ
ಬಳವೆಂತಪ್ಪುದು ನಿನಗು
ಜ್ಜ್ವಳಾಕ್ಷಿ ಬಿಡುಮುಳಿಸನೂರ್ಗೆ ನಡೆ ಪೊಡೆಮಡುವೆಂ ೩೧

ವ॥ ಎಂದೊಡವಳೆಂತುಂ ಬಾರದಿರ್ದುದಂ ಕಂಡು ಶೋಕಾನಳದಂದಹ್ಯಮಾನೆಯಾಗಿ ಬಂಧುಜನಂಬೆರಸು ಮಾಧವಸೇನೆ ನಿಜನಿವಾಸಕ್ಕೆ ಪೋದಳ್ ಇತ್ತಲಾದಿನಂ ಮೊದಲಾಗಿ ಕಾಮಮಂಜರಿ

ಪೂಗಿಡುಗಳ್ಗೆ ನೀರೆೞೆವ ಪುಷ್ಪವನೊಪ್ಪಿರೆ ತರ್ಪ ತತ್ತ್ವ ವಿ
ದ್ಯಾಗಮಮಂ ಮನಂಬಡೆದು ಕೇಳ್ವ ಯತೀಂದ್ರ ಪದಾಬ್ಜ ಸೇವೆಯಂ
ಬೇಗದೆ ಮಾೞ್ಪ ವಲ್ಕವಸನಂಗಳನೋವುವ ಸೋಪಚಾರದಿಂ
ದಾ ಗಣಿಕಾಪುರಂಧ್ರಿ ಕೆಲವುಂ ದಿನಮಿರ್ದಳತೀವ ಭಕ್ತಿಯಿಂ ೩೨

ಕಮಲದಳಾಕ್ಷಿ ತನ್ಮುನಿವರೇಣ್ಯನ ಪಾವನದೇವತಾರ್ಚನಾ
ಸಮಯದೊಳಂಗಹಾರ ಕರಣಾಯುತ ಹಸ್ತ ಸರೋಜದೃಷ್ಟಿ ವಿ
ಭ್ರಮವನೊಡರ್ಚಿ ಲಾಸ್ಯರಸದಿಂ ಮರುಳಾಗಿಸುವಳ್ ವನಾಂತದು
ದ್ಭ್ರಮ ಮೃಗಪಕ್ಷಿಸಂಕುಳಮನೀಪರಿಯಿಂದೆಸೆದಿರ್ಪಳಾವಗಂ ೩೩

ಅಳಲೆಕಾಯಿ ಈ ಆಕಾರದ ಒಡವೆ ?] ೩೧. ಗೆಳತಿಯರಿಲ್ಲದೆ ಒಬ್ಬಳೆ ಕಾಡಿನಲ್ಲಿ ಹೇಗೆ ಇರುವೆ ? ಹೇಳು. ನಿನಗೆ ಋಷಿಯ ಸೇವೆ ಮಾಡುವ ಶಕ್ತಿಯಿದೆಯೋ ? ಹೊಳೆಯುವ ಕಣ್ಣಿನವಳೆ ! ಕೋಪವನ್ನು ಬಿಡು. ಊರಿಗೆ ನಡೆ. ಕಾಲಿಗೆ ಬೀಳುತ್ತೇನೆ !". ವ|| ಹೀಗೆ ಎಷ್ಟು ಹೇಳಿದರೂ ಅವಳು ಬರಲು ಒಪ್ಪಲಿಲ್ಲ. ಅದನ್ನು ನೋಡಿ ಮಾಧವಸೇನೆಯು ಶೋಕಾಗ್ನಿಯಿಂದ ತಪಿಸುತ್ತ ಬಂಧುಗಳೊಡನೆ ತನ್ನ ಮನೆಗೆ ಹೋದಳು. ಇತ್ತ ಆ ದಿನ ಮೊದಲು ಮಾಡಿಕೊಂಡು ಕಾಮಮಂಜರಿಯು—೩೨. ಹೂಗಿಡಗಳಿಗೆ ನೀರೆರೆಯು ತ್ತಿದ್ದಳು. ಹೂಗಳನ್ನು ಕೊಯ್ದು ತರುತ್ತಿದ್ದಳು. ತತ್ತ್ವೋಪದೇಶಗಳನ್ನು ಮನಸ್ಸಿಟ್ಟು ಕೇಳುತ್ತಿದ್ದಳು. ಯತೀಂದ್ರನ ಪಾದಕಮಲಗಳ ಸೇವೆಯನ್ನು ಬೇಗ ಮಾಡು ತ್ತಿದ್ದಳು. ನಾರುಮಡಿಗಳನ್ನು ಶುದ್ಧಗೊಳಿಸಿ ರಕ್ಷಿಸುತ್ತಿದ್ದಳು. ಇವೇ ಮೊದಲಾದ ಉಪಚಾರಗಳನ್ನು ಮಾಡುತ್ತಾ ಆ ವೇಶ್ಯೆಯು ಕೆಲವು ದಿನಗಳ ಕಾಲ ಭಕ್ತಿಯಿಂದ ಇದ್ದಳು. ೩೩. ಆ ಮುನಿ ಶ್ರೇಷ್ಠನು ಪವಿತ್ರವಾದ ದೇವತಾರ್ಚನೆಯನ್ನು ಮಾಡು ತ್ತಿದ್ದಾಗ, ಆ ಕಮಲಾಕ್ಷಿಯು ಅಂಗಹಾರ, ಕರಣ, ಆಯುತಹಸ್ತ, ಕಮಲದ ನೋಟ ಇವುಗಳಿಂದ ವಿಲಾಸಗಳನ್ನು ಪ್ರದರ್ಶಿಸಿ ಲಾಸ್ಯ (ಮಧುರ ನೃತ್ಯ) ರಸದಿಂದ ಕಾಡಿನ ಅಂಚಿನಲ್ಲಿ ಸಂಚರಿಸುವ ಮೃಗ ಪಕ್ಷಿಗಳನ್ನು ಮರುಳು ಮಾಡುವಳು. ಅವಳು ಯಾವ ಗಲೂ ಈ ರೀತಿಯಿಂದ ನಡೆದುಕೊಳ್ಳುತ್ತಿದ್ದಳು. [ಅಂಗಹಾರ ಮೊದಲಾದುವು ನಾಟ್ಯ

ಉಪಹಾರಕ್ಕೆ ಸಮಸ್ತ ಭಕ್ಷ್ಯತತಿಯಂ ಮಾಧುರ್ಯಮಪ್ಪಂತು ಮಾ
ಡಿ ಪದಾರ್ಥಂಗಳನಿತ್ತು ತನ್ನ ಕರನೈಪುಣ್ಯಗಳಿಂ ಯೋಗಿಯೊಳ್
ಕೃಪೆಯಂ ಪೆತ್ತು ನಿರಂತರಂ ಪ್ರತಿದಿನಂ ಶುಶ್ರೂಷೆಯಂ ಮಾಳ್ಪಳ
ನ್ಯಪಥಂ ದುಷ್ಪಥಮೆಂದು ದೇಹಸುಖಮಂ ತಾನಾವಗಂ ಲೆಕ್ಕಿಸಳ್ ೩೪

ವ॥ ಇಂತನೇಕ ಪರಿಚರ್ಯೆಯಂ ಮಾಡುತುಂ

ಕಂ॥ ಎಂದಿನತೆಱದಿಂ ಸತಿ ಮುನಿ
ವೃಂದಾರಕನಂಘ್ರಿಯಂ ಕರಾಬ್ಜದಿನೊತ್ತು
ತ್ತೊಂದು ಕಾರಣಮಿಲ್ಲದೆ
ಮಂದಸ್ಮಿತಮೆಸೆಯಲಂತವಳ್ ನಸುನಕ್ಕಳ್ ೩೫

ವ॥ ಅಂತವಳ ನಸುನಕ್ಕುದಂ ಮುನಿನಾಥಂ ಕಂಡು

ಕಂ॥ ಏನುಂ ಕಾರಣಮಿಲ್ಲದೆ
ಮಾನಿನಿ ನಸುನಕ್ಕೆಯೇಕೆಯೆಂದಾ ಮುನಿಪಂ
ತಾನೊಸೆದು ಕೇಳ್ದೊಡಾಕೆ ನಿ
ಜಾನನಮಂ ಬಾಗಿ ಬಾಗಿ ಮತ್ತೆ ಮತ್ತಿಂತೆಂದಳ್ ೩೬

ಲೋಕಂ ತ್ರಿವರ್ಗಮಂ ಸಮ
ಮೇಕೆಂಬುದು ಧರ್ಮಮಧಿಕಮೆನ್ನದೆ ದೇವಾ
ನೀಕಕ್ಕೆ ಮರ್ತ್ಯರಂನಿ
ರ್ವ್ಯಾಕುಳದಿಂ ಸಮನೆನಿಪ್ಪತೆಱದಿಂದೀಗಳ್ ೩೭

ಭೇದಗಳು] ೩೪. ಉಪಹಾರಕ್ಕೆ ಬೇಕಾದ ಎಲ್ಲ ವಿಧವಾದ ಭಕ್ಷ್ಯಗಳನ್ನೂ ಮಧುರವಾಗಿರುವಂತೆ ತಯಾರಿಸಿ ಕೊಟ್ಟು, ತನ್ನ ಕರ ಕೌಶಲವನ್ನು ತೋರಿಸಿ ಯೋಗಿಯ ಮೆಚ್ಚಿಗೆಯನ್ನು ಪಡೆದಳು. ಪ್ರತಿದಿನ ಎಡೆಬಿಡದೆ ಅವನ ಶುಶ್ರೂಷೆಯನ್ನು ಮಾಡುತ್ತಿದ್ದಳು. ಇದಕ್ಕೆ ಬೇರೆಯಾದ ದಾರಿಯು ತಪ್ಪು ದಾರಿಯೆಂದು ತಿಳಿದು ತನ್ನ ದೇಹ ಸುಖವನ್ನು ಲೆಕ್ಕಿಸಲಿಲ್ಲ. ವ॥ ಹೀಗೆ ಅನೇಕ ವಿಧವಾಗಿ ಸೇವೆಯನ್ನು ಮಾಡಿದಳು—೩೫. ಆ ತರುಣಿಯು ಒಂದು ದಿನ ಎಂದಿನ ಹಾಗೆ ಮುನಿಶ್ರೇಷ್ಠನ ಪಾದಗಳನ್ನು ತನ್ನ ಕರಕಮಲಗಳಿಂದ ಒತ್ತುತ್ತಿದ್ದಳು. ಆಗ ಒಂದು ಕಾರಣವೂ ಇಲ್ಲದೆ ಅವಳು ನಸುನಕ್ಕಳು. ಮುಖದಲ್ಲಿ ಮುಗುಳು ನಗೆ ತಲೆದೋರಿತು. ವ॥ ಹಾಗೆ ಅವಳು ನಸು ನಕ್ಕುದನ್ನು ಮುನಿರಾಜನು ನೋಡಿ—೩೬. "ಯಾವ ಕಾರಣವೂ ಇಲ್ಲದೆ, 'ಮಾನಿನಿ ನೀನು ಏಕೆ ನಕ್ಕೆ ?" ಎಂದು ಆಕೆಯನ್ನು ಕೇಳಿದನು. ಅದಕ್ಕೆ ಅವಳು ತನ್ನ ಮುಖವನ್ನು ಬಗ್ಗಿಸಿ ಹೀಗೆ ಹೇಳಿದಳು. ೩೭. ಲೋಕವು ಧರ್ಮವನ್ನು ಅಧಿಕವೆಂದು ಹೇಳದೆ ಧರ್ಮಾರ್ಥಗಳ ತ್ರಿವರ್ಗವನ್ನು ಸಮವೆಂದು ಏಕೆ ಹೇಳುತ್ತದೆ ? ಇದೀಗ ಮನುಷ್ಯರು ದೇವತೆಗಳಿಗೆ

**ಸತತಂ ಪೂಜ್ಯಮನಾತ್ಮದೇಹಹಿತಮಂ ಸ್ವರ್ಗಾಪವರ್ಗೈಕ ಪ**
**ದ್ಧತಿಯಂ ಪಾವನವಸ್ತುವಂ ಪರಮರಕ್ಷಾಸಿದ್ಧಿಯಂ ದೋಷ ವ**
**ರ್ಜಿತಮಂ ಜ್ಞಾನಲತಾಭಿವೃದ್ಧಿಯನಶೇಷ ಪ್ರೀತಿಯಂ ಲೋಕವಿ**
**ಶ್ರುತಮಂ ಧರ್ಮಮನೇಕೆ ಮಿಕ್ಕ ಪುರುಷಾರ್ಥಕ್ಕಂ ಸಮಂ ಮಾಳ್ಪರೋ** ೩೮

**ಗಾಡಿಯೊಳರ್ಥಕಾಮಮೆರಡಂ ಗಳಿಸಲ್ ಬಗೆದಂದು ಧರ್ಮಮಂ**
**ನೋಡಿದೊಡಂತದೆಲ್ಲಿಯದು ಸಂತತನಿರ್ಮಳಮಪ್ಪ ಧರ್ಮಮಂ**
**ಮಾಡುವೊಡರ್ಥ ಕಾಮಮೆರಡುಂ ಕಿಡವೆಂದರಿದಿರ್ದು ಧರ್ಮದೊಳ್**
**ಕೂಡುವರೇಕೆ ಮಿಕ್ಕ ಪುರುಷಾರ್ಥಮನಜ್ಞರೆನಿಪ್ಪ ಮಾನವರ್** ೩೯

**ತಿಳಿವೊಡಿದಲ್ತೆ ತತ್ತ್ವದ ತಿರುಳ್ಮಿಗೆ ಧರ್ಮದ ಧರ್ಮವಾಶ್ರಮಂ**
**ಗಳ ವಿವರಪ್ರತಿಷ್ಠೆ ಪರಮಾರ್ಥದ ಸಾರವನೇಕದರ್ಶನಂ**
**ಗಳ ಮತವಲ್ತೆ ಲೌಕಿಕದ ಸೀಮೆಯೆನಿಪ್ಪುದು ಕಾಮಮಂಜರೀ**
**ಲಳನೆಯವಾಕ್ಯದೋಜೆ ಪರಿಭಾವಿಸೆ ಪೂರ್ಣರಸಾತಿರೇಕದಿಂ** ೪೦

**ವ॥ ಎಂದ ಕಾಮಮಂಜರಿಯೋಜೆಗೆ ಮುನಿನಾಥಂ ಪರಿತೋಷಂಬಡುವುದುಂ ಮತ್ತಮವಳಿಂತೆಂದಳ್**

ಸಮವೆಂದು ಯೋಚಿಸದೆ ಹೇಳಿದಂತಿದೆ. ೩೮. ಯಾವಾಗಲೂ ಪೂಜ್ಯವಾದ, ತನ್ನ ದೇಹಕ್ಕೆ ಹಿತವಾದ, ಸ್ವರ್ಗಕ್ಕೂ ಮೋಕ್ಷಕ್ಕೂ ಮುಖ್ಯ ಮಾರ್ಗವಾದ, ಪವಿತ್ರ ವಸ್ತುವಾದ, ಪರಮ ರಕ್ಷಣೆಯನ್ನು ಸಿದ್ಧಿಸಿ ಕೊಡುವ, ದೋಷವಿಲ್ಲದ, ಜ್ಞಾನವೆಂಬ ಬಳ್ಳಿಯನ್ನು ಬೆಳೆಯಿಸುವ ಎಲ್ಲರಿಗೂ ಪ್ರೀತಿಕರವಾದ, ಲೋಕದಲ್ಲಿ ಪ್ರಸಿದ್ಧವಾದ ಧರ್ಮವನ್ನು ಉಳಿದ ಪುರುಷಾರ್ಥಗಳಿಗೆ ಸಮಮಾಡಿ ಏತಕ್ಕೆ ವರ್ಣಿಸುತ್ತಾರೆಯೋ ? (ತಿಳಿಯದು.) ೩೯. ಮನೋಹರವಾದ ರೀತಿಯಲ್ಲಿ ಅರ್ಥಕಾಮಗಳೆರಡನ್ನೂ ಸಂಪಾದಿಸಲು ಯೋಚಿಸಿ ಧರ್ಮವನ್ನು ಆಚರಿಸತೊಡಗಿದರೆ, ಅದು ಎಂತು ಸಹಾಯಕವಾದೀತು ? ಧರ್ಮವನ್ನು ಮಾಡುವಾಗ ಅರ್ಥಕಾಮಗಳೆರಡೂ ಕೆಡುವುದಿಲ್ಲ ಎಂದರೆ ತಾನಾಗಿ ಒದಗುತ್ತದೆ. ಇದನ್ನು ತಿಳಿದಿದ್ದರೂ ಅಜ್ಞರಾದ ಮಾನವರು ಉಳಿದ ಅರ್ಥಕಾಮರೂಪ ಪುರುಷಾರ್ಥಗಳನ್ನು ಧರ್ಮದೊಡನೆ ಏಕೆ ಸಮಮಾಡಿ ಹೇಳುತ್ತಾರೋ ? ೪೦. ವಿಚಾರ ಮಾಡಿದರೆ ಇದೇ ತತ್ತ್ವದ ತಿರುಳು. ಧರ್ಮ ಅಧರ್ಮ ಆಶ್ರಮಗಳ ವಿವರವಾದ ಸ್ವರೂಪ. ಪರಮಾರ್ಥದ ಸಾರ. ಅನೇಕ ದರ್ಶನ ಶಾಸ್ತ್ರಗಳ ಮತ. ಲೌಕಿಕ ವ್ಯವಹಾರದ ಎಲ್ಲೆಯಾಗಿದೆ. ಈ ಕಾಮಮಂಜರೀ ತರುಣಿಯ ವಾಕ್ಯದ ಪ್ರೌಢಿಮೆಯನ್ನು ಪೂರ್ಣರಸಾವೇಶದಿಂದ ವಿಚಾರಿಸಿದರೆ ಮೇಲಿನಂಶಗಳು ತಿಳಿದು ಬರುತ್ತವೆ."
ವ॥ ಕಾಮಮಂಜರಿಯ ಮಾತಿನ ಪ್ರೌಢಿಮೆಗೆ ಮುನಿನಾಥನಂ ಸಂತೋಷಪಟ್ಟನು. ಮತ್ತೆ

ಸುರಪಂ ತಾಪಸಕಾಂತೆಯೊಳ್ ಶಶಿ ಗುರುಸ್ತ್ರೀಯೊಳ್ ಮುಕುಂದಂ ನಿರಂ
ತರ ಗೋಪೀಜನದೊಳ್ ಸರೋರುಹಭವಂ ತತ್ಪುತ್ರಿಯೊಳ್ ಮಾರುತಂ
ಭರದಿಂ ಕೇಶಿಯನಾರಿಯೊಳ್ ಬಡಬೆಯೊಳ್ ಚಂಡಾಂಶುವೀಶಂ ಸಮ
ಸ್ತರುಷಿ ಸ್ತ್ರೀಯರೊಳೊಪ್ಪಿನಿಂ ಬೆರಸಲುಂ ದೇವತ್ವಮೇಂ ಪೋದುದೇ ೪೧

ವ॥ ಎಂದು ಕಾಮಮಂಜರಿ ಅರ್ಥಕಾಮಂಗಳನೆಸಗಲ್ ಧರ್ಮಕ್ಕೆ ಹಾನಿಯಿಲ್ಲೆಂಬು
ದುಂ ಋಷಿಯಿಂತೆಂದಂ

ಕಂ॥ ಸುಲಲಿತ ಧರ್ಮಮನಱಿವೆಂ
ತಿಳಿಯೆನು ಕೇಳರ್ಥಕಾಮಮವಱಭಿರೂಪಂ
ಫಲಮಂ ಪೇೞ್ ಬಲ್ಲೊಡೆ ಕೋ
ಮಳೆ ಕೇಳ್ವೆಂ ಪ್ರಿಯದಿನೆಂದನಾ ಮುನಿಮುಖ್ಯಂ ೪೨

ವ॥ ಎಂಬುದುಂ

ಪಶುಗಳನೋವಿಯೊಲ್ದು ಕೃಷಿಯೊಳ್ ವ್ಯವಹಾರಮನೊಲ್ದು ಮಾಡಿಯಾ
ರ್ಜಿಸುವುದು ವಿತ್ತಮಂ ಪಡೆದು ಸದ್ವ್ಯಯದೊಳ್ ಸಲಿಪಿಟ್ಟು ಕೂರ್ತು ಸಾ
ಧಿಸುವುದು ಧರ್ಮಮಂ ಧರೆಯೊಳೀ ಕ್ರಮಮರ್ಥದ ಸಿದ್ಧಿರಕ್ಷೆ ಭಾ
ವಿಸು ಮುನಿನಾಥ ಧರ್ಮದೆಣೆಯಪ್ಪುದು ಲೋಕದೊಳುಂಟೆ ಸಂತತಂ ೪೩

ಅವಳು ಹೀಗೆಂದಳು—೪೧. "ಇಂದ್ರನು ಮುನಿ ಪತ್ನಿ ಅಹಲ್ಯೆಯನ್ನು ಕೂಡಿದನು, ಚಂದ್ರನು ಗುರುವಿನ ಹೆಂಡತಿಯಲ್ಲಿಯೂ, ಕೃಷ್ಣನು ಎಡಬಿಡದೆ ಗೋಪಿಯರಲ್ಲೂ ಬ್ರಹ್ಮನು ತನ್ನ ಮಗಳಲ್ಲಿಯೂ ಕೂಡಿದರು. ವಾಯುವು ಕೇಶಿಯ (ಕೇಸರಿಯ) ಹೆಂಡತಿ ಅಂಜನೆಯನ್ನು ಭೋಗಿಸಿದನು. ಸೂರ್ಯನು ಬಡಬೆಯೊಡನೆಯೂ, ಈಶ್ವರನು ಋಷಿ ನಾರಿಯರೊಡನೆಯೂ ಬೆರೆತರು. ಇದರಿಂದ ಅವರ ದೇವತ್ವವೇನಾದರೂ ಹೋಯಿತೆ ?" ವ॥ ಹೀಗೆ ಕಾಮಮಂಜರಿಯು ಅರ್ಥಕಾಮಗಳನ್ನು ಸೇವಿಸುವುದರಿಂದ ಧರ್ಮಕ್ಕೆ ಹಾನಿಯಿಲ್ಲವೆಂದು ವಿವರಿಸಿದಳು. ಅದನ್ನು ಕೇಳಿ (ಋಷಿಯು ಹೇಳಿದನು.) ೪೨. "ಸುಲಲಿತವಾದ ಧರ್ಮದ ಸ್ವರೂಪವನ್ನು ನಾನು ಬಲ್ಲೆ. ಅರ್ಥಕಾಮಗಳನ್ನು ನಾನರಿಯೆನು. ನಿನಗೆ ಗೊತ್ತಿದ್ದರೆ ಅವುಗಳ ಸ್ವರೂಪವನ್ನೂ ಫಲವನ್ನೂ ಕೋಮಲೆ, ವಿವರಿಸಿ ಹೇಳು. ನಾನು ಪ್ರೀತಿಯಿಂದ ಕೇಳುವೆನು." ಎಂದು ಆ ಮುನಿ ಶ್ರೇಷ್ಠನು ಹೇಳಿದನು. (ಎಂದು ಹೇಳಲು—)೪೩. "ಮುನಿನಾಥ ! ಕೇಳು. ಹಸುಗಳನ್ನು ಸಾಕಿ ವ್ಯವಸಾಯದಲ್ಲಿ ಅವನ್ನು ವಿನಿಯೋಗಿಸಿ ಹಣವನ್ನು ಸಂಪಾದಿಸಬೇಕು. ಪಡೆದ ಹಣವನ್ನು ಸರಿಯಾದ ರೀತಿಯಲ್ಲಿ ವೆಚ್ಚಮಾಡಿ ಧರ್ಮವನ್ನು ಆಸಕ್ತಿಯಿಂದ ಸಾಧಿಸಬೇಕು. ಲೋಕದಲ್ಲಿ ಧರ್ಮಾರ್ಥ ಸಾಧನೆಗೆ ಇದೇ ಕ್ರಮ. ಲೋಕದಲ್ಲಿ ಧರ್ಮಕ್ಕೆ ಸಮನಾದುದು ಬೇರೊಂದಿದೆಯೆ ?

ವ॥ ಎಂಬುದುಮರ್ಥ ಸ್ವರೂಪ ಸಿದ್ಧಿಯುಱಿಯಲ್ ಬಂದುದು ಕಾಮಮೆಂತಿರ್ಪುದು ಎಂಬುದುಂ

ನಿರುಪಮ ಕಾಮಮಂ ಪೆಸರ್ಗೊಳಲ್ ಫಲವಂ ತಿಳಿಯಲ್ಕೆ ಬಾರದ
ಚ್ಚರಿಯೆನೆ ದೃಷ್ಟಮಲ್ಲದೆ ಶ್ರುತಕ್ಕದು ಗೋಚರಮಲ್ತು ಸಂತತಂ
ಪರಿಕಿಸಲಂತರಂಗ ಬಹಿರಂಗ ಸುಖಂ ತನಿವೆರ್ಚೆ ಯೋಗಮು
ಬ್ಬರಿಸೆಯನೂನಧರ್ಮವೊದಗಿಪ್ಪುದು ತಪ್ಪದೆಲೇ ಮುನೀಶ್ವರಾ ೪೪

ನಿತ್ಯಂಚಿತ್ತಪ್ರಸನ್ನಂ ನಿರತಿಶಯಸುಖಂ ಜಾಡ್ಯವಿದ್ರಾವಣಂ ಮೇ
ಣತ್ಯಂತ ಪ್ರೀತಿಕಾಂತಿ ಪ್ರದಮಭಯಮನಂಗೋತ್ಸವಂ ಸರ್ವಲೋಕ
ಸ್ತುತ್ಯಂ ಚಾತುರ್ಯಪೂರ್ವಂ ನಿರುಪಮ ವಿಭವಂ ಕಾಮಕೇಳೀವಿಲಾಸಂ
ಸತ್ಯಂ ಕೇಳ್ ಯೋಗಿ ವೃಂದಾರಕ ಪಶುಮೃಗ ಪಕ್ಷಿ ಪ್ರತಾನಕ್ಕೆ ಸಾಧ್ಯಂ ೪೫

ವ॥ ಎಂಬುದುಮೀ ಪುರುಷಾರ್ಥದ ಫಲಮೆನಗೆ ಸಿದ್ಧಿಸುವುಪಾಯಮಂ ಮಾಡೆಂಬುದುಂ

ಮೆಲ್ಲನೆ ಪೊರ್ದಿ ಕಾಮಕಳೆಯಂ ಪಡೆದೋಷ್ಠಮನೀಂಟೆ ಮೌಂಜಿಯಂ
ಪಲ್ಲವ ಹಸ್ತದಿಂ ಸೆಳೆದು ಕುಂಭಕುಚಂಗಳೊಳೌಂಕಲಪ್ಪಿಮೆ
ಲ್ಚೆಲ್ಲದೊಳಾಕೆ ನಾಣ್ಬುಡುಕಿ ನುಣ್ಗೊರಲಿಂ ದನಿಪೊಣ್ಮೆ ಚುಂಬಿಸು
ತ್ತೆಲ್ಲ ಸುಖಕ್ಕೆ ಸೀಮೆಯೆನಲಂಗಜ ಕೇಳಿಯನುಂಟುಮಾಡಿದಳ್ ೪೬

ಇಲ್ಲ." ವ॥ ಹೀಗೆನ್ನಲು "ಅರ್ಥದ ಸ್ವರೂಪವೂ ಅದರ ಸಿದ್ಧಿಯ ಬಗೆಯೂ ಅರ್ಥವಾಯಿತು. ಕಾಮದ ಸ್ವರೂಪವೇನು ?" ಎಂದು ಕೇಳಿದನು. ೪೪. ಅನುಪಮವಾದ ಕಾಮವನ್ನು ಹೆಸರಿನಿಂದ ಹೇಳಿದರೆ ಅದರ ಫಲವನ್ನು ತಿಳಿಯಲು ಸಾಧ್ಯವಿಲ್ಲ. ಅದು ಆಶ್ಚರ್ಯಕರವಾದುದು. ಅನುಭವಿಸಿ ತಿಳಿಯಬೇಕಲ್ಲದೆ ಕೇಳುವುದರಿಂದ ತಿಳಿಯತಕ್ಕದ್ದಲ್ಲ ! ಎಲೆ ಮುನೀಶ್ವರನೆ ! ಬಿಡದೆ ಪರೀಕ್ಷಿಸಲು (ಅನುಭವಿಸಲು) ಅಂತರಂಗ ಬಹಿರಂಗ ಸುಖವು ಹೆಚ್ಚಿ ಯೋಗವು ವೃದ್ಧಿಯಾಗಿ ಶ್ರೇಷ್ಠವಾದ ಧರ್ಮವನ್ನು ತಪ್ಪದೆ ಉಂಟು ಮಾಡುತ್ತದೆ. ೪೫. ಅನಂಗೋತ್ಸವವು ನಿತ್ಯವೂ ಮನಸ್ಸನ್ನು ಪ್ರಸನ್ನಗೊಳಿಸುತ್ತದೆ. ನಿರತಿಶಯವಾದ ಸುಖವನ್ನು ಕೊಡುತ್ತದೆ. ಜಡತ್ವವನ್ನು ಓಡಿಸುತ್ತದೆ. ಮತ್ತು ಅತ್ಯಂತ ಪ್ರೀತಿಯನ್ನೂ ಕಾಂತಿಯನ್ನೂ ಕೊಡುತ್ತದೆ. ಭಯರಹಿತವಾದುದು. ಸರ್ವಲೋಕಗಳಲ್ಲಿ ಪ್ರಶಂಸೆಗೆ ಪಾತ್ರವಾಗಿದೆ. ಚಾತುರ್ಯದಿಂದ ಕೂಡಿದುದು. ಅಸಮವಾದ ವೈಭವವುಳ್ಳುದು. ಯೋಗಿವರನೇ ಕೇಳು. ಈ ಕಾಮ ಕೇಳೀ ವಿಲಾಸವು ಪಶು ಮೃಗ ಪಕ್ಷಿಗಳಿಗೂ ಸಾಧ್ಯ. ಇದು ನಿಜ." ವ॥ ಎಂದು ಹೇಳಲು 'ಈ ಪುರುಷಾರ್ಥದ ಫಲವು ಸಿದ್ಧಿಸುವ ಉಪಾಯವನ್ನು ಮಾಡು' ಎಂದು ಮುನಿಯು ಹೇಳಿದನು. ೪೬. ಮೆಲ್ಲಗೆ ಹತ್ತಿರ ಸಾರಿದಳು. ಕಾಮೋದ್ರೇಕವನ್ನುಂಟುಮಾಡಿದಳು. ತುಟಿಯನ್ನು ಚುಂಬಿಸಿದಳು. ಸೊಂಟದಲ್ಲಿದ ಮೌಂಜಿಯನ್ನು (ನೊದೆ ಹುಲ್ಲಿನ ದಾರ) ತನ್ನ ಚಿಗುರಿನಂಥ ಕೈಗಳಿಂದ ಕಿತ್ತು ಹಾಕಿದಳು. ಕುಂಭ ಕುಚಗಳಿಂದ ಬಿಗಿಯಾಗಿ ತಬ್ಬಿಕೊಂಡಳು.

ವ॥ ಅನಂತರಂ

ಜಡೆಗೆದಱಲ್ ವಿಭೂತಿ ಪರಿಯಲ್ ಪೊಸಕೌಪಟಿಯಲ್ ಸಮಾಧಿಮುಂ
ಗಿಡಲುಪವೀತಮೆಯ್ದೆ ಪಱಿಯಲ್ ತಪಮೋಡೆ (ವಿನಿಶ್ಚಲಂ) ಮನಂ
ಸಡಿಲಲನಂತರಂ ಮುನಿವರಂ ಸವಿಗಂಡವೊಲಂದು ತಾನೆ ಕೂ
ರ್ತೊಡರಿಸಿದಂ ಕರಂ ಸ್ಮರತ ಕೇಳಿಯನಾಕೆಯೊಳತ್ಯಪೂರ್ವಮಂ ೪೭

ವ॥ ಮತ್ತಂ

ಪರ್ಣಕುಟೀರದೊಳ್ ತಳಿರತಳ್ಪದೊಳಿರ್ದು ಲಸತ್ಕರಾಗ್ರದಿಂ
[ಸ್ವರ್ಣದ ಕಾಂತಿಯಂ] ಮಿಗುವ ಕೆಂಜೆಡೆಯಂ ಪಿಡಿದೋಷ್ಠಮಂ ಶುಭಾ
ಕೀರ್ಣಮೆನಲ್ಕೆ ಚುಂಬಿಸಿ ಕರಂಬಿಗಿಯಪ್ಪಿದ ಕಾಮಮಂಜರೀ
ಪೂರ್ಣಕುಚಾದ್ರಿಯೊಳ್ ಸುಖಸಮಾಧಿಯನಾಂತೆಸೆದಂ ಮುನೀಶ್ವರಂ ೪೮

ಸುರತಸ್ವೇದಾಂಬುವಿಂ ಮಜ್ಜನ ಕೆಯ್ದೊಡನೀಡಾಡಿ ಲಜ್ಜಾಪ್ರಸೂನೋ
ತ್ಕರಮಂ ಧೈರ್ಯಾದಿ ನಾನಾಗುಣ ಸಮುದಯನೈವೇದ್ಯಮಂ ತೀವಿ ಕಾಂತಾ
ಗುರು ವಕ್ಷೋಜಾತಲಿಂಗಕ್ಕೆಱಗಿ ಪದೆದಲರ್ಗಣ್ಗಳಂ ಮುಚ್ಚಿ ಯೋಗಂ
ಬೆರಸೊಪ್ಪಿರ್ದಂ ಮಯೂರಾಸನಮೆಸೆಯೆ ಮರೀಚಿ ವ್ರತೀಂದ್ರಂ ನಿತಾಂತಂ ೪೯

ಮೃದುವಾದ ಚೆಲ್ಲಾಟದಲ್ಲಿ ನಸುನಾಚಿದಳು. ನುಣುಪಾದ ಕೊರಳಿನಿಂದ ಧ್ವನಿಮಾಡಿದಳು. ಚುಂಬಿಸಿದಳು. ಇದೇ ಎಲ್ಲ ಸುಖಗಳ ಎಲ್ಲೆ ಎನ್ನುವಂತೆ ರತಿ ವಿಲಾಸವನ್ನು ನಡೆಯಿಸಿದಳು. ವ॥ ಅನಂತರ ೪೭. ಮುನಿಯ ಜಡೆಯು ಕೆದರಿತು. ವಿಭೂತಿಯು ಅಳಿಸಿ ಹೋಯಿತು. ಹೊಸಕೋಪೀನ (ಲಂಗೋಟಿ) ತೊಲಗಿತು. ಸಮಾಧಿ ಕೆಟ್ಟು ಹೋಯಿತು ಜನಿವಾರವು ಕಳಚಿಬಿದ್ದಿತು. ತಪಸ್ಸು ಓಡಿತು. ಮನಸ್ಸು ಬಿಗಿ ತಪ್ಪಿತು. ಈ ಸ್ಥಿತಿಗೊಳಗಾಗಿ ಮುನಿವರನು ರತಿಸುಖದ ಸವಿಯನ್ನರಿತವನಂತೆ ತಾನಾಗಿಯೇ ಪ್ರೇಮಿಸಿ ಆಕೆಯಲ್ಲಿ ಅತ್ಯಪೂರ್ವವಾದ ರೀತಿಯಿಂದ ಸುರತ ಕೇಳಿಯನ್ನು ನಡೆಯಿಸಿದನು. ಮತ್ತು– ೪೮. ಎಲೆವನೆಯಲ್ಲಿ ಹರಡಿದ ಚಿಗುರಿನ ಹಾಸಿಗೆಯಲ್ಲಿ ಮಲಗಿದರು. ಸುಂದರವಾದ ತನ್ನ ತುದಿ ಕೈಗಳಿಂದ ಚಿನ್ನದ ಕಾಂತಿಯನ್ನು ಮೀರಿಸಿ ಹೊಳೆಯುವ (ಮುನಿಯ) ಕೆಂಜೆಡೆಗಳನ್ನು ಹಿಡಿದುಕೊಂಡು ಅವಳು ಅವನ ಶುಭಕರವಾದ ತುಟಿಯನ್ನು ಚುಂಬಿಸಿದಳು. ಚೆನ್ನಾಗಿ ಬಿಗಿಯಾಗಿ ತಬ್ಬಿಕೊಂಡಳು. ಮುನೀಶ್ವರನು ಇಂಥ ಕಾಮಮಂಜರಿಯ ಘನಕುಚಗಳೆಂಬ ಬೆಟ್ಟದ ಮೇಲೆ ಸುಖದ ಸಮಾಧಿಯನ್ನು ಪಡೆದು ಪ್ರಕಾಶಿಸಿದನು! ೪೯. ಕಾಂತೆಯ ಗುರುಕುಚವೆಂಬ ಲಿಂಗಕ್ಕೆ ಸುರತದಿಂದುಂಟಾದ ಬೆವರಿನ ನೀರಿನಿಂದ ಅಭಿಷೇಕ ಮಾಡಿದನು. ನಾಚಿಕೆಯೆಂಬ ಹೂಗಳನ್ನು ಚೆಲ್ಲಿದನು. ಧೈರ್ಯವೇ ಮೊದಲಾದ ಗುಣಸಮೂಹವನ್ನು ನೈವೇದ್ಯವಾಗಿ ಅರ್ಪಿಸಿದನು. ಅದಕ್ಕೆ ನಮಸ್ಕರಿಸಿ ತನ್ನ ಹೂವಿನಂಥ ಕಣ್ಣುಗಳನ್ನು ಮುಚ್ಚಿಕೊಂಡು ಮರೀಚಿ ಮುನೀಂದ್ರನು ಮಯೂರಾಸನ

ವ॥ ಅಂತು ಪರಿವಡೆದ ಕಾಮಪುರುಷಾರ್ಥ ಫಲಸಿದ್ಧಿಯುಂ ಪಡೆದು ಮತ್ತಂ

ಕಂ॥ ಎಲೆ ಸತಿಯೆ ಕಾಮಮೆಂಬುದು
ತಿಳಿಯಿತ್ತದರುಳ್ಳ ಪರಿಕರಂಗಳವೇನಂ
ದಳವಡೆ ಪೇಟಿಂದೊಡೆ ಕೋ
ಮಳೆ ಪದೆದಾಯತಿವರಂಗೆ ಮತ್ತಿಂತೆಂದಳ್ ೫೦

ಕುಸುಮಂ ಕರ್ಪೂರ ತಾಂಬೂಲಕಮನುಮಮ ಕಸ್ತೂರಿಕಾ ಚಂದನಂ ಸ
ದ್ವಸನಂಗಳ್ ಕಾಮ ಸಂದೀಪನ ಕರಮವು ಚಂಪಾಪುರ ಸ್ಥಾನದೊಳ್ ನಾ
ಡೆ ಸಮಗ್ರಂ ದೇವನೀಮಲ್ಲಿಗೆ ಪದೆದು ಬರಲ್ ತೋರ್ಪೆನೆಂದಂತವಳ್ ತಾ
ಪಸನಂ ಬೇಳ್ಮಾಡಿ ಬೇಗಂ ನಲವಿನೊಳೊಡಗೊಂಡುಯ್ದುಳಾಶ್ಚರ್ಯಮಾಗಳ್ ೫೧

ವ॥ ಅದೆಂತೆನೆ

ಮುದದೊದವಂ ದುರಾಶೆ ಗುಣಮುಂ ಧನಲೋಭಮ ಸಮಾನವಿದ್ಯೆಯುಂ
ಮದಮನುರಾಗಮುಂ ಬಹಳ ಚಿಂತೆ ಪರಾಕ್ರಮಮುಂ ದರಿದ್ರಮ
ಭ್ಯುದಯಮನೆಯ್ದೆ ದುರ್ಗುಣ ಚಯುಂ ಕಿಡಿಪಂತೆ ಮುನೀಂದ್ರ ಚಿತ್ತಮುಂ
ಕದಡಿಸಿ ತನ್ನ ಬೆಂಬಟಿಯೊಳುಯ್ದಳದೋಷನನಾ ಮುನೀಶನಂ ೫೨

ದಲ್ಲಿ ಯೋಗಾಭ್ಯಾಸ ಮಾಡುತ್ತಾ ಪ್ರಕಾಶಿಸಿದನು. ವ॥ ಹೀಗೆ ಮುನಿಯು ಪ್ರವಾಹವಾಗಿ ಹರಿದ ಕಾಮ ಪುರುಷಾರ್ಥದ ಫಲ ಸಿದ್ಧಿಯನ್ನು ಪಡೆದನು. ಮತ್ತು ೫೦. 'ಎಲೆ ಸತಿಯೆ ! ಕಾಮವೆಂಬ ಪುರುಷಾರ್ಥದ ಸ್ವರೂಪವು ತಿಳಿಯಿತು. ಅದಕ್ಕೆ ಬೇಕಾದ ಸಹಾಯಕ ಸಾಮಗ್ರಿಗಳನ್ನು ವಿವರಿಸು' ಎಂದು ಮುನಿಯು ಕಾಮಮಂಜರಿಯನ್ನು ಕೇಳಿದನು. ಅದಕ್ಕೆ ಆ ಕೋಮಲೆಯು ಪ್ರೀತಿಯಿಂದ ಮತ್ತೆ ಉತ್ತರವನ್ನಿತ್ತಳು. ೫೧. "ಹೂವು, ಪಚ್ಚಕರ್ಪೂರ ಮಿಶ್ರವಾದ ತಾಂಬೂಲ, ಶ್ರೇಷ್ಠವಾದ ಕಸ್ತೂರಿಯಿಂದ ಕೂಡಿದ ಗಂಧ, ಒಳ್ಳೆಯ ಬಟ್ಟೆಗಳು—ಇವು ಕಾಮವನ್ನು ಉದ್ದೀಪನಗೊಳಿಸುವ ಸಾಮಗ್ರಿಗಳು. ಅವು ಚಂಪಾಪುರ ಪ್ರದೇಶದಲ್ಲಿ ವಿಶೇಷವಾಗಿ ತುಂಬಿವೆ. ಸ್ವಾಮಿ, ನೀವು ಅಲ್ಲಿಗೆ ನನ್ನ ಮೇಲಿನ ಪ್ರೀತಿಯಿಂದ ಬಂದರೆ ತೋರಿಸುವೆನು". ಹೀಗೆ ಹೇಳಿ ಅವಳು ಆ ತಾಪಸನನ್ನು ಮರುಳು ಮಾಡಿ ಹರ್ಷದಿಂದ ಬೇಗ ಜೊತೆಯಲ್ಲಿ ಕರೆದುಕೊಂಡು ಹೋದಳು. ಎಲ್ಲರಿಗೂ ಆಶ್ಚರ್ಯವಾಯಿತು. ೫೨. ದುರಾಶೆಯು ಆನಂದಾಧಿಕ್ಯವನ್ನು ಕೆಡಿಸುತ್ತದೆ, ಹಣದಾಸೆಯು ಗುಣವನ್ನು ಕೆಡಿಸುತ್ತದೆ, ಅಸಮಾನ್ಯವಾದ ವಿದ್ಯೆಯನ್ನು ಮದವು ನಾಶಗೊಳಿಸುತ್ತದೆ. ಅನುರಾಗವನ್ನು ಎಡೆಬಿಡದ ಚಿಂತೆಯು ಹಾಳುಮಾಡುತ್ತದೆ. ಬಡತನವು ಪರಾಕ್ರಮವನ್ನು ಕೆಡಿಸುತ್ತದೆ. ದುರ್ಗುಣವು ಅಭ್ಯುದಯವನ್ನು ಕೆಡಿಸುತ್ತದೆ. ಹೀಗೆ ಮುನೀಂದ್ರನ ಮನಸ್ಸನ್ನು ಕಾಮದಿಂದ ಕದಡಿಸಿ ದೋಷರಹಿತನಾದ ಆ ಮುನೀಶನನ್ನು ತನ್ನ ಹಿಂದೆ ಕರೆದು

ತಲೆಯಂ ಬೋಳಿಸಿ ಪೂಗಳಂ ಕಿವಿಗಳೊಳ್ ಸೆಕ್ಕಿಟ್ಟು ಕಣ್ಗಳ್ಗೆ ಕ
ಜ್ಜಳಮಂ ತೀವಿ ಪರಿದ್ರವಂ ತೊಡೆದು ಮೆಯ್ಯೊಳ್ ಧೌತ ಕೌಪೀನದೊಳ್
ಬಟಿಕಂದೊಪ್ಪುವ ಭಂಡಿಯೊಳ್‌ನಿಱಿಸಿ ತನ್ನೂರ್ಗಾಕೆ ಕೊಂಡುಯ್ಯಲಾ
ಗಳಿದಿರ್ವಂದುದನೇಕ ಪೌರನಿಕರಂ ನೋಡಲ್ಕೆ ಯೋಗೀಂದ್ರನಂ ೫೩

ವ॥ ಅಂತಾ ಮುನಿಯುಂ ತಂದು ಚಂಪಾಪುರದೊಳಗಣ್ಗಂ ಕೊಂಡು ಪೋಗಿ

ಕಂ॥ ಆ ಮುನಿನಾಥ ಸಮೇತಂ
ಕೋಮಳೆ ಸಲೆ ಸಿಂಹವರ್ಮನಾಸ್ಥಾನಮನು
ದ್ದಾಮವೆಸೆಯಲ್ಕೆ ಪೊಕ್ಕು ಸ
ಭಾ ಮಧ್ಯದೊಳಾಕೆ ನಿಂದಿರಲ್ ನಲವಿಂದಂ ೫೪

ಚೇರಂ ವಾರುವಕೋಟಿಯಂ ಗಜಘಟಾ ಸಂತಾನಮಂ ಪಾಂಡ್ಯನೆ
ಲ್ಲಾ ರತ್ನಾಭರಣಂಗಳಂ ಪದೆದು ಚೋಳಂ ಸಿಂಹಳಂ ಪದ್ಮಿನೀ
ನಾರೀ ಸಂತತಿಯಂ ನಿಜಂ ಕಳಿಪಿದಂ ಚಿತ್ತೈಸು ನೀನೆಂಬ ತ
ತ್ಸಾರಂಭಂ ಮಿಗೆ ಸಂಧಿ ವಿಗ್ರಹಿಗಳಿಂದೊಪ್ಪಿರ್ದುದೊಡ್ಡೋಲಗಂ ೫೫

ವ॥ ಅಂತಿರ್ದೊಡ್ಡೋಲಗದೊಳ್ ಕಾಮಮಂಜರಿ ಮುನಿಪನ ಪೆಗಲೊಳ್ ಕೆಯ್ಯ ನಿಟ್ಟಿರ್ದಳಂತದಂ ನೃಪಂ ಕಂಡು

ಕೊಂಡು ಹೋದಳು. ೫೩. ತಲೆಯನ್ನು ಬೋಳಿಸಿದಳು. ಕಿವಿಗಳಿಗೆ ಹೂಗಳನ್ನು ಸಿಕ್ಕಿಸಿದಳು. ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿದಳು. ಮೈಗೆಲ್ಲಾ ಅರಿಸಿನ ಹಚ್ಚಿದಳು. ಒಗೆದ ಶುದ್ಧವಾದ ಕೌಪೀನವನ್ನುಡಿಸಿದಳು. ಬಳಿಕ ಚೆನ್ನಾಗಿ ಅಲಂಕರಿಸಿದ ಬಂಡಿಯಲ್ಲಿ ಕುಳ್ಳಿರಿಸಿ ತನ್ನ ಊರಿಗೆ ಕರೆದುಕೊಂಡು ಹೋದಳು. ಆಗ ಆ ಊರಿನ ಜನರೆಲ್ಲರೂ ಆ ಯೋಗೀಂದ್ರನನ್ನು ನೋಡಲು ಎದುರುಗೊಂಡು ಬಂದರು. ವ॥ ಹಾಗೆ ಆ ಮುನಿಯನ್ನು ಕರೆದುಕೊಂಡು ಬಂದು ಚಂಪಾಪುರದೊಳಕ್ಕೆ ಪ್ರವೇಶಮಾಡಿಸಿದಳು—೫೪. ಆ ಕೋಮಲೆಯು ಆ ಮುನಿಯೊಡನೆ ವಿಶೇಷವಾಗಿ ಪ್ರಕಾಶಿಸುವ ಸಿಂಹವರ್ಮನ ಆಸ್ಥಾನವನ್ನು ಪ್ರವೇಶಿಸಿ ಸಭಾಮಧ್ಯದಲ್ಲಿ ಹರ್ಷದಿಂದ ನಿಂತಳು. ೫೫. "ಚೇರರಾಜನು ಕೋಟಿಕುದುರೆಗಳನ್ನು ಕಳುಹಿಸಿದ್ದಾನೆ. ಪಾಂಡ್ಯರಾಜನು ಆನೆಗಳ ಸಮೂಹವನ್ನು ಕಳುಹಿಸಿದ್ದಾನೆ. ಚೋಳರಾಜನು ಅಸಂಖ್ಯ ರತ್ನಾಭರಣಗಳನ್ನು ಕಳುಹಿಸಿದ್ದಾನೆ. ಸಿಂಹಳರಾಜನು ಪದ್ಮಿನೀ ಜಾತಿಯ ನಾರಿಯರ ಗುಂಪನ್ನು ಕಳುಹಿಸಿದ್ದಾನೆ. ದಯೆಯಿಟ್ಟು ಸ್ವೀಕರಿಸು." ಎಂದು ಸಂಭ್ರಮದಿಂದ ಸಂಧಿ ವಿಗ್ರಹಿಗಳು ವಿಜ್ಞಾಪಿಸುತ್ತಿದ್ದರು. ಹೀಗೆ ರಾಜನ ಒಡ್ಡೋಲಗವು ಪ್ರಕಾಶಿಸುತ್ತಿತ್ತು. ವ॥ ಹಾಗಿದ್ದ ಒಡ್ಡೋಲಗದಲ್ಲಿ ಕಾಮಮಂಜರಿಯು ಮುನಿರಾಜನ ಹೆಗಲ ಮೇಲೆ ಕೈಯನ್ನಿಟ್ಟು

ಕಂ॥ ನಸುನಗುತೆ ನೃಪವರಂ ತಾ
ಪಸಸಹಿತಂ ಕುಳ್ಳಿರಬಲೆಯೆನಲವಳಭಿವಂ
ದಿಸಿ ರುಷಿಯ ತೊಡೆಯಮೇಲೊ
ಪ್ಪಿಸೆಯಲ್ ಕುಳ್ಳಿರ್ದಳಿರ್ದ ಸಮಯಾಂತರದೊಳ್ ೫೬

ನೆರೆದಾಸ್ಥಾನದೊಳೆಟ್ದು ಬಂದು ಪೊಡೆವಟ್ಟಾಂ ಸೋಲ್ತೆನೀ ಕಾಮಮಂ
ಜರಿಗೆಲ್ದಳ್ ಕಡುಭಾಷೆಗೈದ ತೆಱದಿಂ ತೊೞ್ತಾದೆ ನಾನೀಕೆಗೆಂ
ದರಸಂಗೊರ್ಬ ವಿದಗ್ಧೆ ಕೈಮುಗಿದು ಪೋಗಲ್ ಮತ್ತೆ ತದ್ಭೂಪನಾ
ದರದಿಂ ಮನ್ನಿಸಿ ಕಾಮಮಂಜರಿಯನಿಂ ಪೋಗೆಂದನಾನಂದದಿಂ ೫೭

ವ॥ ಅಂತರಸಂ ಕಾಮಮಂಜರಿಗೆ ಗಣಿಕಾಧಿಪತ್ಯಮಂ ಕೊಟ್ಟು ಕಳಿಪಲಾ ಕಾಂತೆಯಾಸ್ಥಾನದಿಂ ಪೊಱಮಟ್ಟು ತನ್ಮುನಿಯ ಮುಖಾರವಿಂದಮಂ ನೋಡಿ

ಕಂ॥ ಮುನಿಗೆ ಕರಕಮಳಂ ಮುಗಿ
ದಿನಿತಾಯಾಸಕ್ಕೆ ತಂದೆ ನಾಂ ನಿನ್ನಂ ಮೆ
ಲ್ಲನೆ ನಿನ್ನ ಪರ್ಣಶಾಲೆಗೆ
ಮುನಿ ಬಿಜಯಂಗೆಯ್ಯೆನುತ್ತೆ ಕಾಲ್ಗೆಱಗಿರ್ದಳ್ ೫೮

ಆ ನುಡಿ ಕರ್ಣಶೂಲಮೆರ್ದೆಯಂ ಬಗಿದುರ್ಚುವ ವಜ್ರಂ ಅಂತ್ಯ ಕಾ
ಲಾನಲನೇೞ್ಗೆಯೆಂಬ ತೆಱನಾಗಿರೆ ಸುಜ್ಜನೆಸುಯ್ದು ಪೂರ್ವಮಂ
ಜಾನಿಸಿ ಚೇಷ್ಟೆಗುಂದಿ ಮತಿಗೆಟ್ಟು ಮನಃ ಪರಿತಾಪದಿಂ ಸರೋ
ಜಾನನಮೆಯ್ದೆ ಬಾಡೆ ಬೆಱಗಂ ಪಿಡಿದಂ ಮುನಿಮುಖ್ಯನಾಕ್ಷಣಂ ೫೯

ಕೊಂಡಿದ್ದಳು. ಅದನ್ನು ರಾಜನು ನೋಡಿದನು. ೫೬. ರಾಜನು ನಸುನಗುತ್ತಾ 'ಅಬಲೆ ! ನೀನು ಮುನಿಯೊಡನೆ ಕುಳಿತುಕೋ' ಎಂದು ಅವಳಿಗೆ ಹೇಳಿದನು. ಆಗ ಅವಳು ಋಷಿಯ ತೊಡೆಯ ಮೇಲೆ ಸೊಗಸಾಗಿ ಕುಳಿತಳು. ಆ ಸಮಯದಲ್ಲಿ—೫೭. ಆ ತುಂಬಿದ ಸಭೆಯಲ್ಲಿ ಒಬ್ಬಳು ಪ್ರೌಢ ಸ್ತ್ರೀಯು ಎದ್ದು ಬಂದಳು. ನಮಸ್ಕರಿಸಿ 'ಭಾಷೆ ಮಾಡಿದ್ದಂತೆ ಈ ಕಾಮಮಂಜರಿಯು ಗೆದ್ದಳು. ನಾನು ಸೋತೆನು. ನಾನಿವಳಿಗೆ ದಾಸಿಯಾದೆನು.' ಎಂದು ಹೇಳಿ ಕೈಮುಗಿದು ಹೋದಳು. ಮತ್ತೆ ರಾಜನು ಕಾಮಮಂಜರಿಯನ್ನು ಗೌರವಿಸಿ ಆನಂದದಿಂದ 'ಹೋಗು' ಎಂದನು. ವ॥ ರಾಜನು ಕಾಮಮಂಜರಿಗೆ ಗಣಿಕೆಯರ ಆಧಿಪತ್ಯವನ್ನು ಕೊಟ್ಟು ಕಳುಹಿಸಿದನು. ಅವಳು ಆಸ್ಥಾನದಿಂದ ಹೊರಟುನಿಂತಾಗ ಆ ಮುನಿಯ ಮುಖ ಕಮಲವನ್ನು ನೋಡಿ—೫೮. ಕರಕಮಲಗಳನ್ನು ಜೋಡಿಸಿದಳು. 'ಮುನಿಯೆ ! ನಾನು ನಿನ್ನನ್ನು ತುಂಬ ಆಯಾಸಗೊಳಿಸಿದೆನು. ಇನ್ನು ಮೆಲ್ಲಗೆ ನಿನ್ನ ಪರ್ಣಶಾಲೆಗೆ ಹೋಗಿ ಸೇರಿಕೋ !' ಎಂದು ಹೇಳಿ ಕಾಲಿಗೆಬಿದ್ದಳು. ೫೯. ಅವಳ ಮಾತು ಮುನಿಯ ಕಿವಿಗೆ ಶೂಲವಾಯಿತು. ಎದೆಯನ್ನು ಬಗೆದು ಚುಚ್ಚಿಕೊಳ್ಳುವ ವಜ್ರಾಯುಧವಾಯಿತು. ಪ್ರಳಯಕಾಳದ ಅಗ್ನಿಯಂತೆ ಹತ್ತಿಕೊಂಡು ಉರಿಯಿತು. ಮುನಿಯು ಸುರ್ ಎಂದು ನಿಟ್ಟುಸಿರುಬಿಟ್ಟನು. ತನ್ನ ಹಿಂದಿನ

ವ॥ ಅಂತು ಬೆಱಗಾಗಿ

ಕಂ॥ ಎಲೆ ಸೊಬಗೆ ನಿನ್ನ ದೆಸೆಯಿಂ
ತೊಲಗಲ್ ಕಾಲೇಟವೇವೆನೇ ಕಾರಣಮೆ
ನ್ನೊಲವಂ ಕಿಡಿಸಿಕ್ಕಿರಂ ಕೋ
ಟಲೆಗೊಳಗಾಗಿಸುವೆ ಪೇೞ್ ಸರೋಜದಳಾಕ್ಷೀ ೬೦

ಎನ್ನೊಡನೊರ್ವಳ್ ಮಚ್ಚರ
ದಿನ್ನಾಣುಳ್ಳಾಕೆಯಾ ಮರೀಚಿವ್ರತಿಯಂ
ತನ್ನಯ ಸೊಬಗಿಂ ತಂದಪ
ಳೆನ್ನಯ ದೊರೆಯೆಂದೊಡಾನೆ ತಂದಪೆನೆಂದೆಂ ೬೧

ವ॥ ಎಂದೊಡೆನ್ನ ವಿರೋಧಿಯಪ್ಪ ಮದನಮಂಜರಿ ಮತ್ತಮಿಂತೆಂದಳ್—

ಕಂ॥ ಸುಂದರಿ ಮರೀಚಿಯಂ ನೀಂ
ತಂದೊಡೆಯಾಂ ನಿನಗೆ ದಾಸಿಯಾದಪೆನಿದು ಮಾ
ಣ್ದಂದೆನಗೆ ದಾಸಿ ನೀನೆನ
ಗೆಂದೊಡೆ ಬಂದೆಂ ನಿಜಾಶ್ರಮಕ್ಕಾದರದಿಂ ೬೨

ಸ್ಥಿತಿಯನ್ನು ನೆನೆಸಿಕೊಂಡನು. ಅವಯವಗಳ ಚಲನೆ ಕುಂದಿತು. ಬುದ್ಧಿಗೆಟ್ಟನು. ಮನಸ್ಸಿನ ಸಂತಾಪದಿಂದ ಮುಖಕಮಲವು ಬಾಡಿತು. ಆ ಮುನಿವರನು ಆ ಕ್ಷಣ ಬೆರಗಾಗಿ ಹೀಗೆಂದನು—೬೦. "ಎಲೆ ಸುಂದರಿ ! ನಿನ್ನನ್ನು ಬಿಟ್ಟು ಹೋಗಲು ಕಾಲುಗಳು ಏಳುತ್ತಿಲ್ಲ ! ಏನುಮಾಡಲಿ ? ಸರೋಜದಳಾಕ್ಷಿ ! ಯಾವ ಕಾರಣಕ್ಕಾಗಿ ನನ್ನ ಪ್ರೀತಿಯನ್ನು ಹಾಳುಮಾಡಿ ನನ್ನನ್ನು ಸಂಕಟಕ್ಕೆ ಗುರಿಪಡಿಸುತ್ತಿರುವೆ ? ಹೇಳು," ೬೧. ಅದಕ್ಕೆ ಕಾಮಮಂಜರಿಯು "ಮರ್ಯಾದೆಯುಳ್ಳವಳೊಬ್ಬಳು ಮಾತ್ಸರ್ಯದಿಂದ ಆ ಮರೀಚಿ ಮುನಿಯನ್ನು ತನ್ನ ಸೌಂದರ್ಯದಿಂದ ಕರೆತರುವವಳು ತನಗೆ ಸಮ" ಎಂದು ನನ್ನೊಡನೆ ಮೆ ಲಾಟಮಾಡಿದಳು. ಆಗ ನಾನು 'ನಾನೇ ಆ ಮುನಿಯನ್ನು ಕರೆ ತರುವೆನು' ಎಂದು ಹೇಳಿದೆನು. ವ॥ ಹೀಗೆ ನಾನು ಹೇಳಲು ನನ್ನ ಶತ್ರುವಾದ ಮದನಮಂಜರಿಯು ಮತ್ತೆ ಹೇಳಿದಳು. ೬೨. 'ಸುಂದರಿ, ಮರೀಚಿ ಮುನಿಯನ್ನು ನೀನು ಕರೆತಂದರೆ ನಾನು ನಿನಗೆ ದಾಸಿಯಾಗುವೆನು. ಇದಕ್ಕೆ ತಪ್ಪಿದರೆ ನೀನು ನನಗೆ ದಾಸಿಯಾಗಬೇಕು.' ಎಂದು ಅವಳು ನನಗೆ ಹೇಳಿದಳು. ಅದಕ್ಕಾಗಿ ನಾನು ನಿಮ್ಮ

ವ॥ ಅಂತು ಬಂದು ನಿಮ್ಮಡಿಯನೆಂತಾನುಮೊಂದುಪಾಯದಿಂ ತಂದು

ಕಂ॥ ನಿನ್ನದೆಸೆಯಿಂದಿಳೇಶನ
ಮನ್ನಣೆಯಂ ಪಡೆದೆನೆನ್ನ ಪಗೆಯಂ ಗೆಲ್ದೆಂ
ನಿನ್ನ ಪದಸೇವೆ ಭಾವಿಸ
ಲೆನ್ನರುಮಂ ರಕ್ಷೆಗೆಯ್ವುದೆಲೆ ಮುನಿಮುಖ್ಯಾ ೬೩

ವ॥ ಎಂದು ಕೆಯ್ಗಳಂ ಮುಗಿದನುಷ್ಠಾನಂಗೆಟ್ಟಪುದಾಶ್ರಮಕ್ಕೆ ಬಿಜಯಂಗೆಯ್ಯೆ ಮೆಂಬುದುಂ

ಕಂ॥ ಜಡೆಗಳ್ ಪೋದುವು ತನುವಿನೊ
ಳಡರ್ದರಿಸಿನಮಾಜಿದೆನ್ನ ಕೌಪೀನಂ ಪೋ
ಯ್ತಡಿ ನಡೆಯುವತ್ತಲಿನ್ನಾ
ವೆಡೆಯೊಳ್ ಪೋಗಿರ್ಪೆನಬಲೆ ಪೇಟ್ ದಯೆಯಿಂದಂ ೬೪

ಬಗೆಗೆರವಾದೆನೆನ್ನ ನಿಜವೃತ್ತಿಗೆ ಸಲ್ಲದೆ ಪೋದೆನೆಲ್ಲರಾ
ನಗೆಗೆಡೆಯಾದೆನಲ್ಪ ಸುಖಮೆಂದು ವಿಚಾರಿಸದಾದೆನೆಯ್ದೆ ಲ
ಜ್ಜೆಗೆ ಪೊಜಗಾದೆನಂಗಜನ ಬಾಣದ ಕೋಳ್ಗೊಳಗಾದೆನಾಸೆ ಕೈ
ಮಿಗೆ ಲಘುವಾದೆನಿನ್ನುಸಿರ್ವುದೇನೆಲೆ ಕಾಮಿನಿ ನಿನ್ನ ದೂಸಜಿಂ ೬೫

ವ॥ ಎಂದೊಡಂ ಮಱು ಮಾತುಗುಡದಿರ್ಪುದುಂ

ಆಶ್ರಮಕ್ಕೆ ಆದರದಿಂದ ಬಂದೆನು. ವ॥ ಬಂದು ತಮ್ಮನ್ನು ಯಾವುದೋ ಒಂದು ಉಪಾಯದಿಂದ ಇಲ್ಲಿಗೆ ಕರೆತಂದು ೬೩. ನಿನ್ನ ದೆಸೆಯಿಂದ ರಾಜನ ಮನ್ನಣೆಯನ್ನು ಪಡೆದೆನು. ನನ್ನ ಶತ್ರುವನ್ನು ಗೆದ್ದೆನು. ಎಲೆ ಮುನಿಶ್ರೇಷ್ಠನೆ ! ನಿನ್ನ ಪಾದ ಸೇವೆಯು ನನ್ನಂಥವರನ್ನೂ ರಕ್ಷಿಸುವುದೆಂದು ಯೋಚಿಸಿದರೆ ತಿಳಿದುಬರುತ್ತದೆ." ವ॥ ಎಂದು ಹೇಳಿ ಕೈಗಳನ್ನು ಜೋಡಿಸಿಕೊಂಡು 'ಅನುಷ್ಠಾನಕ್ಕೆ ತೊಂದರೆಯಾಗುತ್ತದೆ. ಆಶ್ರಮಕ್ಕೆ ದಯಮಾಡಿಸಿ' ಎಂದು ಹೇಳಿದಳು. ೬೪. ಮುನಿಯು "ನನ್ನ ಜಡೆಗಳು ಹೋದುವು. ಮೈಯಲ್ಲಿ ಹಚ್ಚಿದ ಅರಿಸಿನವು ಹೋಗಿಲ್ಲ. ನನ್ನ ಕೌಪೀನವೂ ಹೋಯಿತು. ಕಾಲಿರ ಹೋದೆಡೆ ಹೋಗಿ ಯಾವ ಸ್ಥಳದಲ್ಲಿರಲಿ ಹೇಳು. ೬೫. ನನ್ನ ಮನಸ್ಸೇ ನನಗೆ ಶತ್ರುವಾಯಿತು. ನನ್ನ ಮುನಿವೃತ್ತಿಗೆ ಅನುಸಾರವಾಗಿ ನಡೆಯದೆ ಹೋದೆನು. ಎಲ್ಲರ ಹಾಸ್ಯಕ್ಕೆ ಗುರಿಯಾದೆನು. ಇದು ಅಲ್ಪವಾದ ಸುಖವೆಂದು ಯೋಚಿಸಲಿಲ್ಲ. ನಾಚಿಕೆಯನ್ನು ತೊರೆದೆನು. ಕಾಮನಬಾಣದ ತುದಿಗೆ ಸಿಕ್ಕಿಕೊಂಡೆನು. ಎಲೆ ಕಾಮಿನಿ, ಆಸೆ ಮಿತಿಮೀರಿ ನನ್ನ ದೆಸೆಯಿಂದ ನಾನು ಹಗುರವಾದೆನು. ಇನ್ನು ಹೇಳುವುದೇನಿದೆ ?" ವ॥ ಎಂದು ಹೇಳಿದನು. ಅದಕ್ಕವಳು ಉತ್ತರಕೊಡಲಿಲ್ಲ.

ಕುಲದುಂ ಚಾರಿತ್ರಮುಂ ಸುವ್ರತನಿಯತಮುಮಾಚಾರಮುಂ ಧರ್ಮಮುಂ ಮೆ
ಯ್ಯೊಲವುಂ ಸನ್ಮಾರ್ಗಮುಂ ಭಾವಿಸಲಿಹ ಪರಲೋಕಂಗಳಂ ನೀತಿಯುಂ ನಿ
ರ್ಮಲಯೋಗ ಧ್ಯಾನಮುಂ ತತ್‌ಕ್ಷಣದೊಳೆ ಕಿಡಿಸಿತ್ತದ್ಭುತಂ ನೋಡಲಿಂತೀ
ಲಲನಾ ಸಂಸರ್ಗಮೆಂದುಮ್ಮಳಿಸಿ ಕಡುಬಟಲ್ದಂ ಮರೀಚಿ ವ್ರತೀಂದ್ರಂ ೬೬

ವ|| ಅಂತು ವಿಹ್ವಲೀಭೂತ ಹೃದಯನಾಗಿ

ಮದಮುೞಿದಾನೆಯಂತೆ ವಿಷಮೋಡಿದ ಪನ್ನಗದಂತೆ ಬಲ್ಪು ಗುಂ
ದಿದ ಮೃಗವೈರಿಯಂತೆ ಕಡುಪಾಱಿದ ಭಾಸ್ಕರನಂತೆ ಕಾಂತಿ ಬ
ತ್ತಿದ ಸಸಿಯಂತೆ ಬೇರುಡಿದ ಪಾದಪದಂತೆ ಕುಲಪ್ರಸಿದ್ಧಿ ಪಿಂ
ಗಿದ ಬುಧನಂತೆ ಸತ್ವಮುೞಿದಾಯೆಡೆಯಿಂ ತಳರ್ದಂ ಮುನೀಶ್ವರಂ ೬೭

ವ|| ಎಂದು ಬಿಲ್ವಕುಜದ ಮೊದಲೊಳಿರ್ದ ಮಲೀಮಸತಾಪಸಂ ಕಡೆಯೊಳಿಂತೆಂದಂ

ಕಂ|| ಆ ಪಾತಕಕೊಳಗಾದನು
ತಾಪಂ ತನಿವೆರ್ಚೆ ಮತ್ತೆ ಪೂರ್ವಾಶ್ರಮದಿಂ
ರೂಪಂ ಪಡೆದಪೆನೆಂಬಾ
ಪಾಪಿಷ್ಠ ಮರೀಚಿಯೋಗಿ ತಾನೆಂದೆಂದಂ ೬೮

ವ|| ಎಂದಾತಂ ಪೇೞ್ದೊಡಾಂ ವಿಸ್ಮಯಸ್ವಾಂತನಾಗಿರ್ಪುದುಂ ಮಗುೞ್ದು ಮಹರ್ಷಿಯಿಂತೆಂದಂ

ಆಗ—೬೬. "ಕುಲವನ್ನೂ, ನಡವಳಿಕೆಯನ್ನೂ, ನಿಯತವಾದ ಸುವ್ರತಗಳನ್ನೂ ಆಚಾರವನ್ನೂ, ಧರ್ಮವನ್ನೂ, ಶರೀರದ ಪ್ರೀತಿಯನ್ನೂ, ಸನ್ಮಾರ್ಗವನ್ನೂ ಇಹಪರ ಲೋಕಗಳನ್ನೂ, ನೀತಿಯನ್ನೂ, ನಿರ್ಮಲವಾದ ಯೋಗಧ್ಯಾನವನ್ನೂ ಈ ನಾರೀ ಸಂಪರ್ಕವು ತತ್ಕ್ಷಣದಲ್ಲಿ ಕೆಡಿಸಿತ್ತು. ಇದು ಅದ್ಭುತ !" ಎಂದು ಯೋಚಿಸಿ ಆ ಮರೀಚಿ ಮುನಿವರನು ದುಃಖಿಸಿ ವಿಶೇಷವಾಗಿ ಬಳಲಿದನು. ವ|| ಹೀಗೆ, ಅವನ ಹೃದಯವು ತುಂಬ ನೋವಿಗೀಡಾಯಿತು—೬೭. ಮದವು ತಗ್ಗಿದ ಆನೆಯಂತೆ, ವಿಷವು ಕಳೆದುಹೋದ ಹಾವಿನಂತೆ, ಪರಾಕ್ರಮವು ಕಡಿಮೆಯಾದ ಸಿಂಹದ ಹಾಗೆ ಕಾವು ಆರಿಹೋದ ಸೂರ್ಯನ ಹಾಗೆ, ಕಾಂತಿಯು ಮಾಯವಾದ ಚಂದ್ರನಂತೆ, ಬೇರು ಕಿತ್ತುಹೋದ ಮರದಂತೆ, ಕುಲದ ಕೀರ್ತಿಯು ಮಾಸಿದ ವಿದ್ವಾಂಸನಂತೆ, ಮುನೀಶ್ವರನು ತನ್ನ ಶಕ್ತಿಯನ್ನು ಕಳೆದುಕೊಂಡು ಆ ಜಾಗದಿಂದ ಹೊರಟನು ವ|| ಎಂಬುದಾಗಿ ಹೇಳಿ ಬಿಲ್ಲಪತ್ರೆ ಮರದ ಕೆಳಗಿದ್ದ ಕೊಳಕನಾದ ಆ ತಾಪಸನು ಕೊನೆಯಲ್ಲಿ ಹೀಗೆ ಹೇಳಿದನು—೬೮. "ಆ ಪಾಪಕ್ಕೆ ಅವಕಾಶವಿತ್ತುದರಿಂದ ಪಶ್ಚಾತ್ತಾಪವು ತುಂಬ ಹೆಚ್ಚಿತು. ಆ ಪಾಪಿಷ್ಠನಾದ ಮರೀಚಿ ಯೋಗಿಯೇ ನಾನು ! ಮತ್ತೆ ಪೂರ್ವಾಶ್ರಮಕ್ಕೆ ಹಿಂದಿರುಗಿ ಹಿಂದಿನ ರೂಪವನ್ನು ಪಡೆಯುವೆನು" ಎಂದು ಆತನು ಹೇಳಿದನು. ವ|| ಅವನ ಹೇಳಿಕೆಯನ್ನು ಕೇಳಿ ನನ್ನ (ಅಪಹಾರವರ್ಮನ) ಮನಸ್ಸಿನಲ್ಲಿ ತುಂಬ ಆಶ್ಚರ್ಯವುಂಟಾಯಿತು. ಇದನ್ನು ನೋಡಿ

ಕಂ॥ ದುಸ್ಸಂಗದಿಂ ಮದೀಯತ
ಪಸ್ಸಾಮರ್ಥ್ಯಂ ಸಡಿಲ್ದುದೊಲವಿಂಪೇೞ್ವೆಂ
ನಿಸ್ಸಂದೇಹಮೆನಲ್ಕೆ ಪು
ನಸ್ಸಂಧಾನದೊಳೊಱಲ್ದೆನೆನ್ನಭಿಮತಮಂ ೬೯

ವ॥ ಅನ್ನೆಗಮೀ ಚಂಪಾಪುರದೊಳ್ ಕತಿಪಯ ದಿನಂಗಳಂ ಕಳೆಯೆಂಬುದುಮಾಂ ಮಹಾಪ್ರಸಾದಮೆಂದೆಂಬ ಸಮಯದೊಳ್

ಎನ್ನಿಂದಂ ದ್ವಿಜರಾಜ ಸತ್ಕುಲ ಮಹಾತೇಜಂ ಕರಂ ಕಂದಿದ
ತ್ತೆನ್ನಿಂದಂ ಕುಮುದಂ ಮುಸುಳ್ದು ಕೊರಗಿತ್ತಾದೋಷಮಂತಿರ್ಕೆ ಮ
ತ್ತೆನ್ನಿಂ ವಿಷ್ಣುಪದಕ್ಕೆ ಕಾಯ್ಪೊದಗಿದತ್ತೆಂದಬ್ಜಿನೀವಲ್ಲಭಂ
ತನ್ನುದ್ಯೋಗದೊಳೆಯ್ದಿದಂ ತಪಮಿರಲ್ ತತ್ಪಶ್ಚಿಮಾಶಾದ್ರಿಯಂ ೭೦

ವ॥ ಅಂತು ಪಗಲೊಡೆಯನ ಮರೀಚಿ ಮರೀಚಿಯೊಡನಂತರ್ಮುಖವಾಗಲೊಡಂ

ಮೃಗಗಣಮಿಕ್ಕೆಯಂ ಖಗಕುಲಂ ನಿಜಕೋಟರಮಂ ಬಟಲ್ಕೆಯು
ಧ್ವಗತತಿಯೂರ್ಗಳಂ ವಿಟಜನಂ ಗಣಿಕಾಜನದಾಲಯಂಗಳಂ
ಗಗನಮನುರ್ವಿಯಂ ತಿಮಿರಪಙ್ಕ್ತಿಗಳಂ ಸುಖನಿದ್ರೆ ಸಾರ್ದಿರಲ್
ಖಗನಪರಾದ್ರಿಯಂ ಪದೆದು ಸಾರ್ದನನಂಗನೊಳೋಜೆ ಕೈಮಿಗಲ್ ೭೧

ಮತ್ತೆ ಆ ಮಹರ್ಷಿಯು ಹೀಗೆ ಹೇಳಿದನು. ೬೯. ಕೆಟ್ಟಸಹವಾಸದಿಂದ ನನ್ನ ತಪಶ್ಶಕ್ತಿಯು ಸಡಿಲವಾಯಿತು. ಪ್ರೀತಿಯಿಂದ ಹೇಳುತ್ತಿದ್ದೇನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ ಪೂರ್ವಾಶ್ರಮಕ್ಕೆ ಹಿಂದಿರುಗುವುದೆಂದು ನನ್ನ ಅಭಿಪ್ರಾಯವನ್ನು ತಿಳಿಸಿದೆನು. ಆಗ ಮುನಿಯು ವ॥ "ಈ ಚಂಪಾಪುರದಲ್ಲಿ ಕೆಲವು ದಿವಸಗಳನ್ನು ಕಳೆ" ಎನ್ನಲು ನಾನು ಅದನ್ನು ದೊಡ್ಡ ಅನುಗ್ರಹವೆಂದು ತಿಳಿದೆನು. ಆ ಸಮಯದಲ್ಲಿ, ೭೦. ನನ್ನಿಂದ ದ್ವಿಜರಾಜನ ಸತ್ಕುಲದ ಮಹಾತೇಜಸ್ಸು ತುಂಬ ಕಂದಿ ಹೋಯಿತು. (1 ಬ್ರಾಹ್ಮಣ ಶ್ರೇಷ್ಠನ ತೇಜಸ್ಸು, 2 ಚಂದ್ರನ ಕಾಂತಿ) ನನ್ನಿಂದ ಕುಮುದವು ಬಾಡಿಕೊರಗಿತು. (1 ಭೂಮಿಯ ಸಂತೋಷ 2 ನೈದಿಲೆ ಹೂ) ಆ ದೋಷವೆಲ್ಲ ಹಾಗಿರಲಿ. ನನ್ನಿಂದ ವಿಷ್ಣುಪದಕ್ಕೆ ತಾಪವುಂಟಾಯಿತು. (1 ವಿಷ್ಣುಲೋಕ 2 ಆಕಾಶ) ಎಂದು ಸೂರ್ಯನು ತನ್ನ ಉದ್ಯೋಗವನ್ನು ನಡೆಯಿಸುತ್ತಾ ತಪಸ್ಸುಮಾಡುವುದಕ್ಕಾಗಿ ಪಶ್ಚಿಮಾದ್ರಿಯನ್ನು ಸೇರಿದನು. ವ॥ ಹಾಗೆ ಸೂರ್ಯನ ಕಿರಣಗಳು ಮರೀಚ ಋಷಿಯ ಜೊತೆಯಲ್ಲಿಯೇ ಅಂತರ್ಮುಖವಾದುವು. ಆಗ—೭೧. ಸೂರ್ಯನು ಅಸ್ತಮಿಸಿದನು. ಮನ್ಮಥನ ಪರಾಕ್ರಮವು ವೃದ್ಧಿಯಾಯಿತು. ಆಗ ಮೃಗಗಳು ತಮ್ಮ ವಾಸಸ್ಥಾನವನ್ನು ಸೇರಿದುವು. ಹಕ್ಕಿಗಳು ತಮ್ಮ ಗೂಡನ್ನು ಸೇರಿದವು. ಬಳಲಿದ ದಾರಿಗರು ತಮ್ಮ ತಮ್ಮ ವಾಸಸ್ಥಾನವನ್ನು ಸೇರಿದುವು. ಹಕ್ಕಿಗಳು ತಮ್ಮ ಗೂಡನ್ನು ಸೇರಿದುವು. ಬಳಲಿದ ಊರು ಸೇರಿದರು. ವಿಟಪುರುಷರು ವೇಶ್ಯಾ ಗೃಹಗಳನ್ನು ಸೇರಿದರು. ಕತ್ತಲೆಯು

ವ॥ ಅಂತೊಂದೆಡೆಯನೊಂದೊಂದು ಸಾರ್ದಿರಲ್ ಮರೀಚಿ ಎನ್ನಂ ತನ್ನಾಶ್ರಮದೊಳಿರುಳಂ ಕಳಿಯಲ್ವೇಟ್ಕೊಡಂತೆಗೆಯ್ವೆನೆಂದಾ ಮಹಾರಾತ್ರಿಯನಲ್ಲಿ ಕಳೆದುದಯವಾಗಲೊಡನಾತನಿಂ ಬೀಳ್ಕೊಂಡು ಚಂಪಾಪುರದೊಳಗನೆ ಬರ್ಪಾಗಳ್

ಅವನತಕಂಧರಂ ಘನಮಲೀಮಸದೇಹನತೀವದುಃಖ ಸಂ
ಭವ ಮುಖನಶ್ರುವಾರಿ ಪರಿಲಗ್ನ ನಿಜಾವಯವಂ ದುರಂತಮಾ
ದವಿರಳಖೇದಚಿಹ್ನನತಿ ಚಿಂತೆಯೊಳಿರ್ದನನೂರುಜಾಡ್ಯ ವೇ
ಷವನೊಳಕೊಂಡದೊರ್ಬನಭಿಮಾನವನೊಕ್ಕು ದಿಗಂಬರತ್ವದಿಂ ೭೨

ವ॥ ಅಂತಿರ್ದಾತನಂ ಕಂಡು ನೀನಾರೀ ದುಃಖಭಾಜನನಪ್ಪ ತಪಕ್ಕೆ ಕಾರಣವೇಂ ನಿನ್ನ ಪೆಸರೇನೆಂಬುದುಮಾತನಿಂತೆಂದಂ

ಕಂ॥ ಎನ್ನ ಪೆಸರ್ ಸೌಂದರಕಂ
ಮುನ್ನಂ ಬಟಕಂ ವಿರೂಪಕಂ ನೀನೆಂದಿಂ
ತೆನ್ನನತಿಧೂರ್ತರೆಲ್ಲರ್
ಬನ್ನಂ ಬಡಿಸಿದೊಡಮೀ ತಪಕ್ಕೊಳಗಾದೆಂ ೭೩

ವ॥ ಎಂದೊಡಾಧೂರ್ತನಿಕರಂ ನಿನ್ನಂ ನಿಷ್ಕಾರಣಂ ಬಂಗಬಡಿಸಿದ ತೆಱನೆಂತೆಂದಾಂ ಕೇಳಲಾತನೆನ್ನೊಳಿಂತೆಂದಂ

ಆಗಸವನ್ನೂ ನೆಲವನ್ನೂ ಆವರಿಸಿತು. ಕಂಗಳಿಗೆ ಸುಖ ನಿದ್ರೆಯು ಬಂದು ಸೇರಿತು. ವ॥ ಹೀಗೆ ಒಂದೊಂದು ಒಂದೊಂದು ಸ್ಥಳವನ್ನು ಸೇರಲು ಮರೀಚಿಯು ನನ್ನನ್ನೂ ತನ್ನ ಆಶ್ರಮದಲ್ಲಿ ರಾತ್ರಿಯನ್ನು ಕಳೆಯಬೇಕೆಂದು ಹೇಳಿದನು. ಹಾಗೆಯೇ ಆಗಲೆಂದು ನಾನು ಆ ರಾತ್ರಿಯನ್ನು ಅಲ್ಲಿಯೇ ಕಳೆದೆನು. ಬೆಳಗಾದಾಗ ಆತನಿಗೆ ಹೇಳಿ ಹೊರಟು ಚಂಪಾಪುರದಲ್ಲಿ ಬರುತ್ತಾ ಇದ್ದೆನು. ಆಗ—೭೨. ವೈಶ್ಯ ದಾರಿಗನ ವೇಷವನ್ನು ಧರಿಸಿ ಬರುತ್ತಿದ್ದ ಅಭಿಮಾನಿಯಾದ ದಿಗಂಬರನೊಬ್ಬನನ್ನು ನೋಡಿದೆನು. ಅವನ ಕುತ್ತಿಗೆಯು ಬಗ್ಗಿತ್ತು. ಅವನ ಶರೀರವು ತುಂಬ ಕೊಳಕಾಗಿದ್ದಿತು ಮುಖದಲ್ಲಿ ತುಂಬ ದುಃಖವು ತೋರುತ್ತಿತ್ತು. ಅಂಗಗಳು ಕಂಬನಿಯಿಂದ ತೊಯ್ದಿದ್ದುವು ದುರಂತವನ್ನು ಸೂಚಿಸುವ ಅತಿಶಯವಾದ ಆಯಾಸದ ಚಿಹ್ನೆಗಳಿದ್ದುವು, ಅತಿಚಿಂತೆಯಲ್ಲಿ ಮುಳುಗಿದ್ದನು. ವ॥ ಹಾಗಿದ್ದ ಅವನನ್ನು ನೋಡಿ 'ನೀನಾರು ? ಈ ದುಃಖಕರವಾದ ತಪಸ್ಸಿಗೆ ಕಾರಣವೇನು ? ನಿನ್ನ ಹೆಸರೇನು ?' ಎಂದು ಕೇಳಿದೆನು. ಅದಕ್ಕೆ ಅವನು ಹೇಳಿದನು. ೭೩. ಸೌಂದರಕನೆಂದು ನನ್ನ ಹೆಸರು. ಈ ಧೂರ್ತರೆಲ್ಲರೂ ಸೇರಿ ನನ್ನನ್ನು 'ನೀನು ವಿರೂಪಕನೆಂದು' ಹಾಸ್ಯಮಾಡಿ ಅಪಮಾನಗೊಳಿಸಿದರು. ಆದರಿಂದಾಗಿ ನಾನು ಈ ತಪಸ್ಸಿಗೆ ಒಳಗಾಗಿದ್ದೇನೆ. ಎಂದು ಹೇಳಿದನು, 'ಆ ಧೂರ್ತರು ನಿನ್ನನ್ನು ಕಾರಣವಿಲ್ಲದೆ ಕಾಡಿಸಿದ ಬಗೆಯೆಂಥದು' ಎಂದು ನಾನು ಕೇಳಿದೆನು. ಅದಕ್ಕೆ ಅವನು ನನಗೆ ಹೀಗೆ

ಕಂ॥ ಸಂದಧನಮಿತ್ರನೆಂಬಂ
ಸೌಂದರ್ಯ ಶರೀರನಪ್ಪನಾತನೊಳೆನ್ನೊಳ್
ಕುಂದದಮಚ್ಚರವಂ ಕಡು
ಪಿಂದೆಸಗಿತ್ತಿಲ್ಲಿಸುಟಿವ ಧೂರ್ತ ಸಮೂಹಂ ೭೪

ಧನಹೀನಂ ಧನಮಿತ್ರಂ
ಧನಮುಳ್ಳವನಾವನ ಸ್ವರೂಪಂ ಚಿದೂ್ರ
ಪನಿವಾಸಿಯಾನದರ್ಕಂ
ದೆನಗಮುವಂಗಂ ವಿದೂಷಕರ್ ಪಗೆವೊಯ್ದರ್ ೭೫

ರೂಪು ಗುಣಶೀಲಂ ವಿ
ದ್ಯಾ ಪರಿಣತಿ ಸೌಕುಮಾರ್ಯಮತಿ ಚಾತುರ್ಯಾ
ಳಾಪಮಿವುಳ್ಳೊಡೆ ಧನಕುಪ
ತಾಪಮದೇವುದೊ ನರರ್ಗೆ ವಸುಧಾತಳದೊಳ್ ೭೬

ಮನಸಿಜರೂಪಂ ಕುಲಜಂ
ವಿನಯಯುವಿದಂ ಸುಭಗಮೂರ್ತಿ ವಿದ್ಯಾಧಾರಂ
ವನಿತಾ ಜನಪ್ರಿಯಂ ಬಹು
ಧನಮುಳ್ಳವನಲ್ತೆ ಲೋಕನೀತಿಕ್ರಮದಿಂ ೭೭

ವ॥ ಎಂದರ್ಥ ಪಕ್ಷಪಾತದಿಂದೆನ್ನಂ ಸ್ವರೂಪ ಪಕ್ಷಪಾತದಿಂ ಧನಮಿತ್ರನಂ ಕೋಡು ಕೊನೆದಿರ್ವರ್ಗಂ ವೈರಮಂ ಬಳೆಸೆ ವೈರಂ ಕೈಗಟ್ಟಿಯಾಂ ಮಿಗಿಲ್ ತಾಂ ಮಿಗಿಲೆಂಬುದುಂ ಧೂರ್ತಜನಂಗಳ್ ಕೇಳ್ದಿಂತೆಂದರ್

ಹೇಳಿದನು. ೭೪. ಹಸರುವಾಸಿಯಾದ ಧನಮಿತ್ರನೆಂಬುವನು ಸುಂದರವಾದ ಶರೀರವುಳ್ಳವನು. ಈ ಧೂರ್ತರ ಗುಂಪು ಆತನಲ್ಲಿಯೂ ನನ್ನಲ್ಲಿಯೂ ಅತಿಶಯವಾದ ಮಾತ್ಸರ್ಯವನ್ನು ತೋರಿಸಿತು. ೭೫. ಧನಮಿತ್ರನು ಧನವಿಲ್ಲದವನಾಗಿದ್ದನು, ನಾನು ಧನವಂತನು ಆದರೆ ರೂಪಶಾಲಿಯಲ್ಲ. ಮತ್ತು ಭಗವಂತನಲ್ಲಿ ಭಕ್ತಿಯುಳ್ಳವನು, ಆದುದರಿಂದ ಆ ಧೂರ್ತರು ನನಗೂ ಅವನಿಗೂ ಜಗಳ ತಂದು ಹಾಕಿದರು. ೭೬. ರೂಪ ಗುಣ ಶೀಲ ವಿದ್ಯೆಗಳಲ್ಲಿ ಪರಿಣತಿ, ಸೌಕುಮಾರ್ಯ, ಅತಿ ಚಾತುರ್ಯದಿಂದ ಕೂಡಿದ ಮಾತುಕತೆ–ಇವುಗಳಿದ್ದರೆ ಈ ಲೋಕದಲ್ಲಿ ಮನುಷ್ಯನಿಗೆ ಹಣದ ತೊಂದರೆಯು ಬರುತ್ತದೆಯೇ ? ೭೭. ಲೋಕವ್ಯವಹಾರದ ದೃಷ್ಟಿಯಿಂದ ಬಹುಧನವುಳ್ಳವನೇ ಮನ್ಮಥನ ರೂಪವನ್ನುಳ್ಳವನು. ಸತ್ಕುಲದಲ್ಲಿ ಹುಟ್ಟಿದವನು. ವಿನಯವುಳ್ಳವನು. ಸುಂದರವಾದ ಶರೀರವುಳ್ಳವನು. ವಿದ್ಯೆಗೆ ಆಧಾರ, ಸ್ತ್ರೀಯರಿಗೆ ಪ್ರಿಯಕರನು. ಅಲ್ಲವೇ ?—

ಕಂ॥ ನಿಮ್ಮಿರ್ಬರ ಸೌಭಾಗ್ಯದ
ಹಮ್ಮುಗೆಯಂ ಸುಭಗೆ ಕಾಮಮಂಜರಿ ಪದಿಪಿಂ
ದೊರ್ವೆ ಪರೀಕ್ಷಿಸಿ ಪೇೞ್ದೊಡೆ
ನಿಮ್ಮಯ ಹೀನಾಧಿಕತ್ವಮತಿನುತಿವಡೆಗುಂ ೭೮

ವ॥ ಎಂದೊಡಾವಿರ್ಬರುಂ ಕಾಮಮಂಜರಿಯೆಡೆಗೆ ಧೂರ್ತ ದೂತರಂ ಕಳುಪಲುಂ

ಧನಮುಳ್ಳಾತಂ ದಿಟಂ ಜಾಣೊಡೆಯನಧಿಕನುರ್ವೀಶ್ವರಂ ಮನ್ಮಥಂ ಸ
ಜ್ಜನನೆಲ್ಲಾ ವಿದ್ಯೆಯೊಳ್ ಬಲ್ಲವನತಿ ಸುಭಗಂ ಭೋಗಿಲೋಕಪ್ರಿಯಂ ಮೋ
ಹನ ರೂಪಂ ಸತ್ಕಳಾಪಂ ಸಕಲಗುಣಯುತಂ ಸತ್ಕುಲೀನಂ ಜಗತ್‌ಖ್ಯಾ
ತನಿಳಾಸಂಪ್ರೀತನುತ್ಪಾದಿತ ಶುಭಚರಿತಂ ಸಂತತಾಕಾರಪೂಜ್ಯಂ ೭೯

ವ॥ ಎಂದವಳೆನ್ನಂ ಪರಿಗ್ರಹಿಸಿ ಧನಮಿತ್ರನನುದಾಸೀನಂ ಗೆಯ್ದುದಱಿನಾನವಳೊಳ್ ಪ್ರೀತಿಯಿಂ ಪುದುವಾೞ್ಕೆಯಿಂದಿರಲ್ ಕೆಲವು ದಿನದಿಂ ಮೇಲೆ

ಕಂ॥ ಗಳಿಸಿದರ್ಥವನವಳೀ
ಟ್ಕುಳಗೊಂಡಾ ಕಾಮಮಂಜರೀ ಸತಿಯೆನ್ನಂ
ಕಳಿವೂವನುೞಿವ ತುಂಬಿವೊ
ಲಳಿ ಕುಂತಳೆ ಪೊಱಗೆ ನೂಂಕಿ ಕಳೆದಳ್ ಬೇಗಂ ೮೦

ವ॥ ಹೀಗೆ ಧನಪಕ್ಷಪಾತದಿಂದ ನನ್ನನ್ನೂ ರೂಪಪಕ್ಷಪಾತದಿಂದ ಧನಮಿತ್ರನನ್ನೂ (ವ್ಯಂಗ್ಯವಾಗಿ) ಹೊಗಳಿ ಇಬ್ಬರಿಗೂ ದ್ವೇಷವನ್ನುಂಟುಮಾಡಿದರು. ಹಾಗೆಯೇ ವೈರವು ಬೆಳೆದು 'ನಾನು ಶ್ರೇಷ್ಠ! ನಾನು ಶ್ರೇಷ್ಠ' ಎಂದು ನಾವಿಬ್ಬರೂ ಜಗಳವಾಡಿದೆವು. ಅದನ್ನು ಕೇಳಿ ಧೂರ್ತರು ಹೀಗೆ ಹೇಳಿದರು. ೭೮. "ನಿಮ್ಮಿಬ್ಬರ ಸೌಭಾಗ್ಯದ ಗರ್ವವನ್ನು ಸುಂದರಿಯಾದ ಕಾಮಮಂಜರಿಯು ಒಂದುಸಲ ಪರೀಕ್ಷಿಸಿ ಹೇಳಲಿ ! ಆಗ ನಿಮ್ಮ ಕೀಳು ಮೇಲುಗುಣಗಳು ಚೆನ್ನಾಗಿ ಸ್ಪಷ್ಟವಾಗುವುವು." ವ॥ (ಎಂದು ಹೇಳಿದರು.) ಅದನ್ನು ಕೇಳಿ ನಾವಿಬ್ಬರೂ ಕಾಮಮಂಜರಿಯ ಹತ್ತಿರಕ್ಕೆ ಆ ಧೂರ್ತರನ್ನೇ ದೂತರನ್ನಾಗಿ ಕಳ ಹಿಸಿದೆವು, ೭೯. "ಧನವುಳ್ಳವನೇ ನಿಜವಾಗಿ ಜಾಣರಲ್ಲಿ ಮಿಗಿಲಾದವನು. ಶ್ರೇಷ್ಠನು. ಭೂಮಿಗೆ ಒಡೆಯನು. ಮನ್ಮಥನು. ಸಜ್ಜನನು. ವಿದ್ಯೆಗಳನ್ನೆಲ್ಲ ಬಲ್ಲವನು, ಅತಿ ಸುಂದ ರನು. ಭೋಗಿಗಳಾದ ಜನರಿಗೆಲ್ಲ ಪ್ರಿಯನು. ಎಲ್ಲರನ್ನೂ ಮೋಹಿಸುವ ರೂಪವನ್ನುಳ್ಳ ವನು. ಕಾಂತಿಯುಳ್ಳವನು. ಸಕಲಗುಣಗಳಿಂದ ತುಂಬಿದವನು. ಸತ್ಕುಲದಲ್ಲಿ ಹುಟ್ಟಿ ದವನು. ಜಗತ್ತಿನಲ್ಲಿಯೇ ಪ್ರಸಿದ್ಧನಾದವನು. ಭೂಮಿಯಲ್ಲಿ ಎಲ್ಲರ ಪ್ರೀತಿಗೆ ಪಾತ್ರ ನಾದವನು. ಶುಭಚರಿತಗಳನ್ನುಂಟುಮಾಡಿದವನು. ಯಾವಾಗಲೂ ಸುಂದರವಾದ ಆಕಾರ ದಿಂದ ಎಲ್ಲರಿಗೂ ಪೂಜ್ಯನಾದವನು." ವ॥ ಎಂದು ಹೇಳಿ ಅವಳು ನನ್ನನ್ನು ಸ್ವೀಕರಿಸಿ ಧನಮಿತ್ರನನ್ನು ಉಪೇಕ್ಷೆ ಮಾಡಿದಳು. ನಾನು ಅವಳೊಡನೆ ಪ್ರೀತಿಯಿಂದ ಸುಖವಾಗಿ ಜೀವನ ನಡೆಯಿಸುತ್ತಿದ್ದೆನು. ಕೆಲವು ದಿನಗಳಾದ ಮೇಲೆ,—೮೦. ಆ ಕಾಮಮಂಜರಿಯು ನಾನು ಗಳಿಸಿದ್ದ ಹಣವನ್ನೆಲ್ಲ ಸೆಳೆದುಕೊಂಡಳು. ಅನಂತರ ಆ ಅಳಿಕುಂತಳೆಯು (ದುಂಬಿ

ವ॥ ಅಂತವಳ್ ನೂಂಕಿದೆನ್ನಂ ಕಂಡು ಧೂರ್ತರ್ ವಿರೂಪಕನೆಂದು ಪೆಸರಂಕೊಟ್ಟುಪ ಹಾಸ್ಯಂ ಗೆಯ್ಯಲೊಡಂ ಖಿನ್ನನಾಗಿ ದಿಗಂಬರತ್ವಮಂ ಪಡೆದೆನೆಂಬುದುಮಾತನನಾಶ್ವಾಸಿಸಿ ಅಲ್ಲಿಂತಳರ್ದು ಪುರದೊಳಗೆ ಬರ್ಪಾಗಳ್

ರಾಜಕುಮಾರಕರ್ ನಿಜವಿನೋದಿಗಳಂಗ ವಿಕಾರಿಗಳ್ ಕಳಾ
ಯೋಜಕರರ್ಥಿಗಳ್ ಸುಭಗಮೂರ್ತಿಗಳೊಪ್ಪುವ ನಾಗರೀಕ ನಾ
ನಾಜನಮಂದು ಪೆಂಪೆಸೆವಮಂತೆಯುದೊಳ್ ನೆರೆದುತ್ಸವಂ ಮಿಗಲ್
ಜೂಜುಗಳಂ ಸಮಗ್ರಮೆನುತಾಡುತಿರಲ್ ಪದೆದಲ್ಲಿಗೆಯ್ದಿದೆಂ ೮೧

ಕಂ॥ ಸಂದಿ ಕಳಂತಿ ಗಜಾಗರ
ವೆಂದಚ್ಚಂಕೊಂಡು ಕವಡೆಯಂ ತೂಗಿಯಿನಿ
ತ್ತೆಂದು ಕೈಚಳಕಂ ಮಿಗೆ
ಚೆಂದಮೆನಲ್ ಲಗ್ಗೆದೋಜಲಾಡುತ್ತಿರ್ದರ್ ೮೨

ವ॥ ಅದಲ್ಲದೆಯುಂ

ಸದರದೆ ದಾಯಮಂ ಪಿಡಿವ ವಿತ್ತಮನೊಡ್ಡುವ ಜೊತ್ತುಗಾಱರಿಂ
ದಿದಿರವರಂಕೆರಳ್ಚಿಸುವ ಥಾಳಿಸಿಮೆಯ್ಯುಟಿದಕ್ಷಮಂ ಕರಾ
ಗ್ರದಿನುಱೆ ದಂಡೆಗೊಳ್ವ ತೆಗೆಯಾಗಳೆತಾಗಿತೆನಲ್ಕೆ ಸಾರಿಯಂ
ಕೆದಱುವ ನೆತ್ತಗಾಱರವಿನೋದಮನೀಕ್ಷಿಸುತಿರ್ದೆನುರ್ವಿಪಾ ೮೩

ಗಳಂತೆ ಕಪ್ಪಾದ ಕೇಶವುಳ್ಳವಳು) ಬಾಡಿದ ಹೂವನ್ನು ದುಂಬಿಯು ತೊರೆಯುವಂತೆ ನನ್ನನ್ನು ಬೇಗ ಹೊರಕ್ಕೆ ತಳ್ಳಿದಳು. ವ॥ 'ಹಾಗೆ ಅವಳು ತಳ್ಳಿದ ನನ್ನನ್ನು ನೋಡಿ ಧೂರ್ತರು ವಿರೂಪಕನೆಂದು ಪೆಸರಿಟ್ಟು ಹಾಸ್ಯ ಮಾಡಿದರು. ಇದರಿಂದ ಖೇದಗೊಂಡು ದಿಗಂಬರ ರೂಪವನ್ನು ಪಡೆದೆನು' ! ಎಂದು ಹೇಳಿದನು. ನಾನು ಅವನಿಗೆ ಸಮಾಧಾನ ಹೇಳಿ ಅಲ್ಲಿಂದ ಹೊರಟು ಪುರದಲ್ಲಿ ಬರುತ್ತಿದ್ದೆನು. ಆಗ ೮೧. ರಾಜಕುಮಾರರು, ಹಾಸ್ಯಕಾರರು, ಅಂಗ ವಿಕಾರಿಗಳು, ಕಲಾವಿದರು, ಭಿಕ್ಷಕರು, ಸುಂದರ ಶರೀರರು. ನಾಗ ರೀಕರು ಮೊದಲಾದವರು ಅಲಂಕರಿಸಿದ ಜಗಲಿಗಳಲ್ಲಿ (ಮಂಟಪ) ಸೇರಿ ಜೂಜುಗಳನ್ನು ಆಡುತ್ತಿದ್ದ ಸ್ಥಳಕ್ಕೆ ಹೋದೆನು. ೮೨. ಅಲ್ಲಿ ಜೂಜುಗಾರರು ಸಂದಿ ಕಳಂತಿ ಗಜಾಗರ ಎಂದು ಕೂಗುತ್ತಾ ದಾಳಗಳನ್ನು ತೆಗೆದುಕೊಂಡು ಕವಡೆಯನ್ನು ತೂಗಿ ಇಷ್ಟು ಎಂದು ಕೈಚಳಕವನ್ನು ತೋರಿಸುತ್ತಾ ತುಂಬ ಅಂದವಾದ ರೀತಿಯಲ್ಲಿ ದಾಳಿ ಮಾಡುತ್ತಾ ಜೂಜಾಡುತ್ತಿದ್ದರು. ವ॥ ಅದೂ ಅಲ್ಲದೆ—೮೩. ಕೆಲವರು ಸಲೀಸಾಗಿ ದಾಯವನ್ನು ಹಾಕುತ್ತಿದ್ದರು. ಕೆಲವರು ಹಣವನ್ನು ಪಣವಾಗಿ ಒಡ್ಡುತ್ತಿದ್ದರು. ಕೆಲವರು ತಮ್ಮ ಜೊತೆಗಾರರಿಂದ ಎದುರಾಳಿಗಳನ್ನು ರೇಗಿಸುತ್ತಿದ್ದರು. ಕೆಲವರು ಚಾತುರ್ಯದಿಂದ

ಟಿಪ್ಪಣಿ : ಸಂದಿ, ಕಳಂತಿ, ಗಜಾಗರ–ಇವು ಕವಡೆ ಜೂಜಿನ ವರಸೆಗಳು.

ವ॥ ಅಂತಾ ವಿನೋದಮಂ ನೋಡುವೆನೆಂದು ಕುಳ್ಳಿರ್ಪಾಗಳ್

ಸಾರಿಯುಮಂಟುಮಾಡಿ ನೆನೆದೊಡ್ಡಿದ ದಾಯವೆ ಬೀೞಲಾರ್ದುದ ವಿ
ಸ್ತಾರಮನೊಯ್ವೆ ನೀ ದ್ವಿಗುಣದಿಂ ದಶದಾಯುವನೊಯ್ವೆಲೇಸು ಕೈ
ವಾರದೊಳಕ್ಷಮಂ ಪಿಡಿದು ಥಾಳಿಪನಾವವನೆನ್ನ ಮುಂದೆನು
ತ್ತೂರಿಗದಿಟ್ಟನೊರ್ವನತಿಭಾಷೆಯುನಗ್ಗಳಮಾಗಲಾಡಿದಂ ೮೪

ವ॥ ಅಂತವನುಚ್ಚಳಿಂ ಖಲವಾಗ್ಜಾಲಮಂ ಬೆಱೆತಾಡುವುದುಂ ಕಂಡಾನಿಂತೆಂದೆಂ

ಬೇಡಿದು ಭಾಷೆಯೇಕೆಪಿಡಿದಾಯುವನಾಜಿರದೊಡೇೞಸುತ್ತಲಾ
ನೇಡಿಸಲಂತವಂ ಜರೆದು ಕೋಪಿಸಿ ಬಲ್ಲೊಡೆಬಂದು ಕುಳ್ಳಿರಾ
ನಾಡುವೆನೆನ್ನ ನಿನ್ನ ಧನವುಳ್ಳನಿತಕ್ಕೆನಲೆೞ್ದು ಸಾರಿಯಂ
ಪೂಡಿದೆನಕ್ಷಮಂ ಪಿಡಿದು ಹಾವುಗೆ ಯಾವವನೆಂದು ನೋಡಿದೆಂ ೮೫

ವ॥ ಎಂಬುದುಂ ಮತ್ತಮವನಿಂತೆಂದಂ

ಸಂದರ್ಭವನ್ನರಿತು ದಾಳಗಳನ್ನು ಅಂಗೈಯಲ್ಲಿ ಅಡಗಿಸಿ ಹಿಡಿದುಕೊಳ್ಳುತ್ತಿದ್ದರು. 'ತೆಗೆ, ಆಗಲೇ ತಗಲಿತು' ಎನಲು ಕೆಲವರು ಪಗಡೆಕಾಯಿಗಳನ್ನು ಕೆದರುತ್ತಿದ್ದರು. ಮಹಾರಾಜನೆ 'ನಾನು ಅಲ್ಲಿ ಈ ರೀತಿಯ ನೆತ್ತಗಾರರ ವಿನೋದವನ್ನು ನೋಡುತ್ತಿದ್ದೆನು. ವ॥ ಆ ವಿನೋದವನ್ನು ನೋಡುವೆನೆಂದು ಆಗ ಅಲ್ಲಿ ಕುಳಿತೆನು, ಆಗ—೮೪. ಒಬ್ಬ ನಾಗರಿಕನು ಪಗಡೆಕಾಯನ್ನಿಟ್ಟು ಒಂದು ದಾಯುವನ್ನು ನೆನೆಸಿಕೊಂಡು ದಾಳಬೀಸಿದನು. ಅದೇ ದಾಯುವೇ ಬಿದ್ದಿತು. ಆಗ ಅವನು ಅಬ್ಬರಿಸಿದನು. 'ಇದನ್ನು ವಿಸ್ತರಿಸುವೆನು, ಎರಡರಷ್ಟು ಹತ್ತರಷ್ಟು ದಾಯ ಹಾಕುವೆನು !' ಎಂದು ಹೊಗಳಿಕೊಳ್ಳುತ್ತಾ ದಾಳವನ್ನು ಹಿಡಿದುಕೊಂಡು 'ನನ್ನ ಮುಂದೆ ಆಟದಲ್ಲಿ ದಾಳಿಮಾಡುವವನಾವನಿದ್ದಾನೆ ?' ಎಂದು ಧೈರ್ಯದಿಂದ ಭಾಷೆಯಿಟ್ಟು ಮಾತನಾಡಿದನು. ವ॥ ಅವನ ಈ ರೀತಿಯ ತಡೆ ಬಡೆಯಿಲ್ಲದ ಮಾತುಗಳನ್ನು ಕೇಳಿ ನಾನು ಹೀಗೆ ಹೇಳಿದೆನು, ೮೫. 'ಈರೀತಿ ಭಾಷೆಯ ಮಾತುಬೇಕಾಗಿಲ್ಲ. ದಾಳವನ್ನು ಹಿಡಿದು ದಾಯುವನ್ನು ಹಾಕು. ಆಗದಿದ್ದರೆ ಎದ್ದು ಹೋಗು.' ಎಂದು ನಾನು ಅವನನ್ನು ಹಾಸ್ಯಮಾಡಿದೆನು. ಅವನು ಅದನ್ನು ಕೇಳಿ ಜರೆಯುತ್ತಾ ಕೋಪಿಸುತ್ತಾ 'ಕೈಲಾಗುವುದಾದರೆ ಬಾ. ಕುಳಿತುಕೋ ! ನಾನು ಆಡುವೆನು. ನನ್ನಲ್ಲಿ ನಿನ್ನಲ್ಲಿ ಹಣವಿರುವವರೆಗೂ ಆಡುವೆನು.' ಎಂದು ಹೇಳಿದನು. ನಾನು ಕೂಡಲೆ ಎದ್ದು ಪಗಡೆಕಾಯಿಗಳನ್ನು ಹೂಡಿದೆನು. ದಾಳಗಳನ್ನು ಹಿಡಿದು ಈ ದ್ಯೂತಕಾರನು ಯಾರು ?' ಎಂದು ನೋಡಿದೆನು. (ಹಾವುಗೆ=ಪಾದುಕೆ, ದ್ಯೂತಗೃಹ.) ವ॥ ಮತ್ತೆ

ಆರಿದಿರಾದೊಡಾಡಿದಪೆನೆಕ್ಕಡಿಯುಂ ಪಡೆ ಪಂಚದಾಯುಮುಂ
ವೀರವಿಳಾಸಮುಂ ತಗರಸನ್ನೆಯುನೈದೆರಡಂ ನೆಗಟ್ಟೆಚೌ
ಸಾರಿಯುನಾಱುಂ ಪನ್ನೆರಡನೊಪ್ಪುವ ರಾಜಕುಮಾರನಂ ಮಹೋ
ದಾರವನೊಡ್ಡಿದೊಡ್ಡನೆನುತೆನ್ನನವಂ ಕಡುಪಿಂ ಕೆರಳ್ಚಿದಂ ೮೬

ವ॥ ಇತ್ತಮೊದಲಾಗಿ ಪತ್ತುವಿಧದ ನೆತ್ತವನಾಡುವೆನೆಂದೆನ್ನಂ ಕೆರಳ್ಚಲಾಂ ವಿಮರ್ದಕ ನೆಂಬ ಹಾವುಗೆಕಾಱನಮೊಗಮಂ ನೋಡಲಾತಂ ಅರ್ಥಮನೊಡ್ಡೆಂಬುದುಂ

ಕಂ॥ ಹಲಗೆಯಂ ನಳವಱಿದಿಟ್ಟಾ
ಗಳೆ ಮೈಯ್ಯಱಿದಕ್ಷಯುಗಳಮಂ ಢಾಳಿಸಿ ಮೇ
ಲೆನಿಸುವೊಡ್ಡುವಂ ನುಡಿ
ದಳುಪಿಲ್ಲದೆ ಜೂಜುಗಾಱರಂ ಕೆಳೆಗೊಂಡೆಂ ೮೭

ವ॥ ಅಲ್ಲಿಂ ಬೞಿಯಂ

ತಾಗುವದಾಯುಮಂ ತಡೆವತಪ್ಪಿದ ಸಾರಿಯನೊಡ್ಡಿಕೊಳ್ವ ಗೆ
ಲ್ವಾಗಱಿದೊಡ್ಡನೇಱಿಸುವ ಮೈಯ್ಯಱಿದಕ್ಷಮನೊಯ್ಯನೆತ್ತಿ ಕೈ
ವೇಗದೊಳಾರ್ದು ಢಾಳಿಸುವ ಹಾವುಗೆ ಸಾಕೆನಲೇಟ್ವ ಬಿನ್ನಣ
ಕ್ಕಾಗರವಾಗಲಾಂ ಪದೆದು ನೆತ್ತಮನಾಡಿದೆನುರ್ವರಾಧಿಪಾ ೮೮

ಅವನು ಹೇಳಿದನು—೮೬. ಯಾರು ಇದಿರಾದರೂ ನಾನು ಆಡುವೆನು. ಎಕ್ಕಡಿ, ಪಡೆ ಪಂಚದಾಯ, ? ವೀರವಿಳಾಸ ತಗರಸನ್ನೆ, ಐದೆರಡು, ಪ್ರಸಿದ್ಧವಾದ ಚಾಸಾರಿ, ಆರು ಪನ್ನೆರಡು, ಒಪ್ಪುವ ರಾಜಕುಮಾರ, ಮಹೋದಾರವು ಬಡ್ಡಿದೊಡ್ಡು–ಮೊದಲಾದ ವಿಧವಿಧ ಆಟಗಳನ್ನಾಡುವೆನು ಎಂದು ಹೇಳಿ ನನ್ನನ್ನು ರೇಗಿಸಿದನು. ಇವೇ ಮೊದಲಾದ ಹತ್ತು ವಿಧಗಳಾದ ಪಗಡೆಯಾಟವಾಡುವೆನು. ಎಂದು ಹೇಳಿ ನನ್ನನ್ನು ಕೆರಳಿಸಿದನು. ಆಗ ನಾನು ವಿಮರ್ದಕನೆಂಬ ಜೂಜುಗಾರನ ಮುಖವನ್ನು ನೋಡಿದೆನು. ಆತನು ಹಣ ವನ್ನು ಒಡ್ಡು ಎಂದು ಹೇಳಿದನು. ೮೭. ಆಟದ ಹಲಗೆಯನ್ನು ಸರಿಯಾಗಿಇಟ್ಟು, ಸಂದರ್ಭವನ್ನರಿತು ದಾಳಗಳನ್ನಾಡಿ, ತುಂಬ ಹೆಚ್ಚಾಗಿ ಪಂದ್ಯದ ಹಣವನ್ನು ಹೆದರದೆ ಒಡ್ಡಿ ಜೂಜುಗಾರರನ್ನು ಸ್ನೇಹಮಾಡಿಕೊಂಡೆನು. ವ॥ ಅಲ್ಲಿಂದ ಮುಂದೆ---೮೮. ದಾಯವನ್ನೆದುರಿಸುವುದು. ದಾಯವನ್ನು ತಡೆಯುವುದು, ತಪ್ಪಿಹೋದ ಕಾಯಿಯನ್ನು ಮತ್ತೆ ಗೆದ್ದು ಒಡ್ಡುವುದು. ಗೆಲ್ಲುವ ಸಮಯವನ್ನರಿತುಕೊಂಡು ಪಣವನ್ನೂ ಹೆಚ್ಚಿ ಸುವುದು, ಸಂದರ್ಭವನ್ನು ತಿಳಿದು ದಾಳವನ್ನು ಸರಕ್ಕನೆ ಮೇಲಕ್ಕೆತ್ತಿ ಕೈ ವೇಗದಿಂದ ಅಬ್ಬರಿಸುತ್ತಾ ಉರುಳಿಸುವುದು. ಜೂಜು ಸಾಕು ಎಂದು ಹೇಲಕ್ಕೇಳುವುದು. ಇವೇ

ಕಂ॥ ಷೋಡಶ ಸಹಸ್ರವಿತ್ತ
ಕ್ರೀಡಿಯುದಂ ಗೆಲ್ದು ಹಾವುಗೆಗೆ ಕಿಱಿದಂ ಕೊಂ
ಡಾಡುವವರ್ಗಂ ಕಿಱಿದುಮ
ನೀಡಾಡಿ ಬೞಿಕ್ಕ ಮಿಕ್ಕುದಂ ಕೊಂಡೆೞ್ದೆಂ ೮೯

ವ॥ ಅಂತೇೞಲೊಡಂ

ಕಂ॥ ಹಾವುಗೆಯಾದ ವಿಮರ್ದಕ
ನಾವಾಸಕ್ಕೆನ್ನನೞ್ತಿಯಿಂ ಕೊಂಡುಯ್ದು ರಸಂ
ತೀವಿದ ಭೋಜನದಿಂ ಸಂ
ಭಾವಿಸೆ ಬೞಿಕವನೊಳಾಯ್ತು ಮಿತ್ರಸ್ನೇಹಂ ೯೦

ವ॥ ಅಂತಾ ವಿಮರ್ದಕಂಗವೆಂನಗಮತ್ಯಂತ ಸ್ನೇಹಂ ಮಿಗಲಾತನಿಂ ಪುರದೊಳಗಣ ಲಂಬ್ಧಕಗೃಹಂಗಳ ವೃತ್ತಾಂತಮೆಲ್ಲಮಂ ತಿಳಿದಾ ಮಱುದಿವಸಂ

ಕಮಲಭವಾಂಡದೋವರಿಯ ಭಾಸ್ಕರದೀಪಿಕೆ ನಂದೆ ವಸ್ತು ಭೇ
ದವನಱಿಯಲ್ಕೆ ಬಾರದವೊಲುರ್ಬಿದ ಕೞ್ತಲೆ ಪರ್ಬಿದಿಕ್ಕನಾ
ಕ್ರಮಿಸಿ ಕೞಿಂಗಿ ಕೞ್ತಲಿಸಿ ಸೂಚಿಗಭೇದ್ಯಮೆನಲ್ಕೆ ಮರ್ತ್ಯ ದೃ
ಕ್ಕಮಳ ನಿರೋಧಮಂ ಪಡೆದುದೇವೋಗೞ್ವಿಂ ತಿಮಿರಾತಿರೇಕಮಂ ೯೧

ಮೊದಲಾದ ಚಾತುರ್ಯಗಳಿಂದ 'ಮಹಾರಾಜನೆ' ನಾನು ನೆತ್ತವನ್ನಾಡಿದೆನು ೮೯. ಹದಿನಾರುಸಾವಿರ ಹೊನ್ನುಗಳನ್ನು ಆಟದಲ್ಲಿ ಗೆದ್ದು ಸ್ವಲ್ಪ ಹಣವನ್ನು ಜೂಜಿನ ಮನೆಗೆ ಕೊಟ್ಟೆನು, ಸ್ವಲ್ಪ ಹಣವನ್ನು ಹೊಗಳಿದವರಿಗೂ ಕೊಟ್ಟೆನು, ಬಳಿಕ ಉಳಿದ ಹಣವನ್ನು ಕೊಂಡು ಅಲ್ಲಿಂದ ಎದ್ದೆನು. ವ॥ ಹಾಗೆ ಎದ್ದ ಕೂಡಲೆ—೯೦. ಜೂಜುಗಾರನಾದ ವಿಮರ್ದಕನು ನನ್ನನ್ನು ತನ್ನ ಮನೆಗೆ ಪ್ರೀತಿಯಿಂದ ಕರೆದುಕೊಂಡು ಹೋದನು, ರಸ ಭರಿತವಾದ ಭೋಜನ ಮಾಡಿಸಿ ಸತ್ಕರಿಸಿದನು, ಬಳಿಕ ಇಬ್ಬರಿಗೂ ಸ್ನೇಹ ಬೆಳೆಯಿತು, ವ॥ ಹೀಗೆ ಆತನಿಗೂ ನನಗೂ ಸ್ನೇಹವು ಬೆಳೆಯಿತು. ಅವನಿಂದ ನಾನು ಆ ಊರಿನಲ್ಲಿದ್ದ ಜಿಪುಣರಮನೆಗಳ ಸಮಾಚಾರಗಳನ್ನು ತಿಳಿದೆನು–ಮರುದಿನ—೯೧. ಬ್ರಹ್ಮಾಂಡದ ಮನೆಯೊಳಗಣ ಸೂರ್ಯನೆಂಬ ದೀಪವು ಆರಿಹೋಯಿತು. ವಸ್ತುಗಳಿಗಿರುವ ಪರಸ್ಪರ ಭೇದವು ತಿಳಿಯದ ಹಾಗೆ ಕತ್ತಲೆಯು ಒತ್ತಾಗಿ ಹಬ್ಬಿತು. ದಿಕ್ಕುಗಳನ್ನಾಕ್ರಮಿಸಿಕೊಂಡು ಕತ್ತಲೆಯು ಸೂಜಿಗೂ ಭೇದಿಸಲು ಆಗದಂತೆ ದಟ್ಟವಾಗಿ ಹರಡಿ ಮನುಷ್ಯರ ಕಂಗಳೆಂಬ ತಾವರೆಗಳಿಗೆ ತಡೆಯನ್ನುಂಟುಮಾಡಿತು. (ನೋಡಲು–ಅರಳಲು) ಕತ್ತಲೆಯು

ಕಂ॥ ಇದು ಕೃಷ್ಣಪಕ್ಷಮಾಗಿಯುಂ
ಮೊದವಿದ ಕಮಳಾನುಮೋದಮಂ ಪಡೆಯದು ಚ
ಕ್ರದೊಳನುರಾಗಂ ಪಿಂಗಿ
ರ್ಪುದು ಚೋದ್ಯಮೆನಿಪ್ಪ ಮರ್ಬನೊಲ್ದೀಕ್ಷಿಸಿದೆಂ ೯೨

ವ॥ ಅಂತು ಪರ್ಬಿದ ಮರ್ಬಂ ಕಂಡು

ವಿಳಸಿತ ಯೋಗಚೂರ್ಣಶತಿ ಕರ್ಕಟರಜ್ಜು ಸುದೀಪವರ್ತಿಗಳ್
ಶಳಭ ಕರಂಡಕಂ ಮರದ ಮಾಟದ ಪೆರ್ದಲೆ ಮಾನಸೂತ್ರಕಂ
ಪಳಹಮೆನಿಪ್ಪುಪಾಯಶತಮುಂ ತಳೆದುರ್ಚಿದಮರ್ಬಿನೊಳ್ ನಿರಾ
ಕುಳಮೆನೆ ಕನ್ನಗತ್ತಿಸಹಿತಂ ಪೊಱಮಟ್ಟೆನಿಳಾಧಿನಾಯಕಾ ೯೩

ವ॥ ಅಂತು ನಿದ್ರೆಯುಂ ಮಿಗಿಲಾಗಿಸುವ ಯೋಗಚೂರ್ಣಮುಂ ಮ (ಮು)ಗಿಲೊಳ್ ಸಿಕ್ಕಿಸಿ ಪಿಡಿದೇಱುವೇಱಿವರ್ಗಮುಂ ಸಜ್ಜರಸವನೂಡಿದ ದೀಪವರ್ತಿಯುಂ ಒಳಗಿರ್ದ ದೀವಿಗೆಯುಂ ನಂದಿಸುವ ಪತಂಗದ ಕರಡಗೆಯುಂ ಕನ್ನದೊಳ್ ನೀಡಿಯೊಳಗಣೆಚ್ಚಱಿಕೆಯಱಿವ ಮರದ ತಲೆಯುಂ ಒಳಗಣುಗ್ರಾಣಮನರಿಯಲಟ್ಟಿ ಮಾನಸೂತ್ರಮುಂ ಕನ್ನದಿಂ ಗಾಳಿ ಬಾರದಂತೆ ಮುಚ್ಚುವ ಪಳಹಮುಂ ಕನ್ನದೊಳ್ ಸಂದಿಸಿದ ಕಲ್ಲಂ ತೆಗೆವಿರ್ಕುಟಂ ಮತ್ತಮನೇಕಚೌರ್ಯ ಸಾಧನಂಗಳಂ ಕೊಂಡು

ಆಧಿಕ್ಯವನ್ನು ಏನೆಂದು ಹೊಗಳಲಿ ?. ೯೨. ಇದು ಕೃಷ್ಣನ ಪಕ್ಷವಾಗಿದ್ದರೂ ಕಮಳೆಯಿಂದುಂಟಾಗುವ (ಲಕ್ಷ್ಮಿಯಿಂದುಂಟಾಗುವ) ಹರ್ಷವನ್ನು ಹೊಂದದು. ಚಕ್ರದಲ್ಲಿ ಅನುರಾಗವು ಹಿಂಗಿಹೋಗಿದೆ ಇದು ಆಶ್ಚರ್ಯ ಎಂದು ತೋರುವ ಕತ್ತಲೆಯನ್ನು ಅಕ್ಕರೆಯಿಂದ ನೋಡಿದೆನು. (ಕೃಷ್ಣಪಕ್ಷದ ರಾತ್ರಿಯಾದುದರಿಂದ ಕಮಲಗಳು ಅರಳಿ ಆನಂದವನ್ನುಂಟುಮಾಡುತ್ತಿಲ್ಲ. ಚಕ್ರವಾಗಳು ಅಗಲಿ ಅನುರಾಗವನ್ನು ತೋರಿಸುತ್ತಿಲ್ಲವೆಂದು ಇನ್ನೊಂದರ್ಥ) ವ॥ ಹಾಗೆ ಹರಡಿದ ಕತ್ತಲೆಯನ್ನು ನೋಡಿ—೯೩. ಹೊಳೆಯುವ ಯೋಗ ಚೂರ್ಣ, ಕರ್ಕಟಕ (ಇಕ್ಕಳ ?), ಹಗ್ಗ, ದೀಪದ ಬತ್ತಿಗಳು, ದೀಪದ ಹುಳಗಳ ಭರಣಿ, ಮರದ ಮಾಟವಾಗಿ ಮಾಡಿದ ದೊಡ್ಡ ತಲೆ, ಅಳತೆಯ ದಾರ, ತಮಟೆ (ಡೋಲು) ಮೊದಲಾದ ನೂರಾರು ಸಹಾಯಕ ಸಾಮಗ್ರಿಗಳನ್ನು ತೆಗೆದುಕೊಂಡೆನು, ಮತ್ತು ಮಹಾರಾಜನೆ ! ಆ ದಟ್ಟವಾಗಿ ಹರಡಿದ ಕತ್ತಲೆಯಲ್ಲಿ ಕನ್ನಗತ್ತಿಯನ್ನು ಹಿಡಿದು ಯಾವತಡೆಯೂ ಇಲ್ಲದೆ ಹೊರಟೆನು. ವ॥ ನಿದ್ದೆಯನ್ನು ಹೆಚ್ಚಿಸುವ ಯೋಗಚೂರ್ಣ, ಮನೆಯ ಸೂರಿಗೆ ಸಿಕ್ಕಿಸಿ ಹಿಡಿದುಕೊಂಡು ಮೇಲಕ್ಕೇರುವ ಹಗ್ಗದ ಏಣಿಗಳು, ಸಜ್ಜರಸದಲ್ಲಿ (ಅರಗು) ನೆನೆಯಿಸಿದ ದೀಪದಬತ್ತಿ, ಒಳಗಿರುವ ದೀಪಗಳನ್ನು ಆರಿಸಲು ಸಹಾಯಕವಾದ ಪತಂಗ ಹುಳಗಳ ಭರಣಿ, ಕನ್ನದ ರಂಧ್ರಗಳಲ್ಲಿ ತೂರಿಸಿ ಒಳಗಿನ ಜನರ ಎಚ್ಚರಿಕೆಯನ್ನು ತಿಳಿಯಲು ಸಹಾಯಕವಾದ ಮರದ ತಲೆ, ಒಳಗಿರುವ ಉಗ್ರಾಣಗಳನ್ನು ತಿಳಿಯಲು ಅಳೆಯುವ ಅಳತೆಯ ದಾರ, ಕನ್ನದಿಂದ ಗಾಳಿಯು ಬರದ ಹಾಗೆ ಮುಚ್ಚುವ

ಸೊಗಸೆಸೆಯಲ್ಕೆ ಪೊಚ್ಚ ಪೊಸ ಕಾಗಿನ ಕಚ್ಚೆಯುಮನುಟ್ಟು ಕನ್ನಗ
ತ್ತಿಗೆಯುಮನಲಂಪಿನಿಂ ಪಿಡಿದು ಕೞ್ತಲೆಯೊಳ್ ಪೊಱಮಟ್ಟು ಮೆಲ್ಲಮೆ
ಲ್ಲಗೆ ನಡೆಗೊಂಡು ಮುಂದೆಡಬಲಂಗಳನಾಲಿಸುತುಂ ನೆೞಲ್ಗೆ ಮೆ
ಯ್ದೆಗೆಯುಂತುವಮಾರ್ಗಿನಿಂ ನಗರವೀಧಿಯೊಳ್ಬರುತಿರ್ದೆನುರ್ವಿಪಾ ೯೪

ವ॥ ಅಂತು ಬರ್ಪಾಗಲ್ ಮುಂದೆ

ಕಂ॥ ನಗರಾಧಿದೇವತೆಯ ಮೆ
ಲ್ನಗೆಯೋ ಬೆಳ್ದಿಂಗಳಗೆಯೋ ರನ್ನದ ಕೈದೀ
ವಿಗೆಯೋ ಮಿಂಚಿನ ಗೊಂಚಲ
ಬಗೆಯೋ ಎನಲೊಂದು ಬೆಳಗು ತೋಱಿತ್ತಾಗಳ್ ೯೫

ವ॥ ಅಂತಾ ಬೆಳಗಂ ಭಾವಿಸಿ ನೋೞ್ಪನ್ನೆಗಂ

ಸುಲಿಪಲ್ಲೊಳ್ಪೆಳಗಿಂ ಕಟಾಕ್ಷರುಚಿಯಿಂ ಚಂಚನ್ನಖಜ್ಯೋತ್ಸ್ನೆಯಿಂ
ವಿಲಸದ್ಭೂಷಣ ರತ್ನದೀಧಿತಿಗಳಿಂದುರ್ಬೆೞ್ದು ಪರ್ಬಿರ್ದ ಕ
ೞ್ತಲೆಯಂ ಮಾಂಕರಿಸುತ್ತನೂನ ಶಿಶಿರೇಖಾವಿಭ್ರಮಂ ಕೂರ್ತುಕೋ
ಮಲೆಯಾಯ್ತೆಂಬಿನಮೊಪ್ಪಿ ಬರ್ಪ ಸತಿಯಂ ಕಂಡೆಂ ಕಳಾವಲ್ಲಭಾ ೯೬

ಚರ್ಮದ ತಮಟೆ, ಕನ್ನದಲ್ಲಿ ಸಿಕ್ಕಿಕೊಂಡ ಕಲ್ಲನ್ನು ಹೊರಕ್ಕೆ ತೆಗೆಯುವ ಇಕ್ಕಳ, ಹೀಗೆ ಅನೇಕ ವಿಧಗಳಿಂದ ಕಳ್ಳತನದ ಸಾಧನಗಳನ್ನು ತೆಗೆದುಕೊಂಡೆನು. ೯೪. ಮಹಾರಾಜನೆ ! ಸೊಗಸಾಗಿ ಹೊಚ್ಚ ಹೊಸ ಕಪ್ಪು ಬಟ್ಟೆಯಿಂದ ಕಚ್ಚೆಯನ್ನು ಬಿಗಿದೆನು. ಕನ್ನಗತ್ತಿಯನ್ನು ಸಂತೋಷದಿಂದ ಕೈಯಲ್ಲಿ ಹಿಡಿದೆನು. ಕತ್ತಲೆಯಲ್ಲಿ ಹೊರಟೆನು, ಮೆಲ್ಲಮೆಲ್ಲನೆ ನಡೆಯುತ್ತ ಮುಂದೆ ಎಡಬಲಗಳನ್ನು ನೋಡುತ್ತಾ ನೆಳಲಿಗೆ ಸರಿಯುತ್ತಾ ನಗರದ ಬೀದಿಯಲ್ಲಿ ಬರುತ್ತಿದ್ದೆನು. ವ॥ ಹಾಗೆ ಬರುತ್ತಿರುವಾಗ ಮುಂದೆ—೯೫. ಇದ್ದಕ್ಕಿದ್ದ ಹಾಗೆ ಒಂದು ಬೆಳಕು ಕಾಣಿಸಿತು. ಅದು ನಗರದ ಅಧಿದೇವತೆಯ ಮಂದಹಾಸವೋ ! ಬೆಳದಿಂಗಳ ಬಟ್ಟಲೋ ! ರತ್ನದ ಕೈ ದೀಪಿಗೆಯೋ ಮಿಂಚಿನ ಗೊಂಚಲೋ ! ಎಂಬಂತೆ ತೋರಿತು. ವ॥ ಹಾಗೆ ಆ ಬೆಳಕನ್ನು ಮನವಿಟ್ಟು ನೋಡಿದಾಗ—೯೬. ಕಳಾವಲ್ಲಭನೇ ! ಅಲ್ಲಿ ಬರುತ್ತಿದ್ದ ನಾರಿಯೊಬ್ಬಳನ್ನು ಕಂಡೆನು. ಅವಳು ತೊಳೆದ ಹಲ್ಲಿನ ಹೊಳೆಯುವ ಬೆಳಗಿನಿಂದಲೂ, ಕಡೆಗಣ್ಣೋಟಗಳ ಕಾಂತಿಯಿಂದಲೂ, ಚಲಿಸುವ ಉಗುರುಗಳಿಂದ ಹೊಮ್ಮುವ ಪ್ರಕಾಶದಿಂದಲೂ (ಬೆಳುದಿಂಗಳು) ಹೊಳೆಯುವ ಒಡವೆಗಳ ರತ್ನಗಳ ಕಿರಣಗಳಿಂದಲೂ, ದಟ್ಟವಾಗಿ ಹರಡಿದ್ದ ಕತ್ತಲೆಯನ್ನು ತಿರಸ್ಕರಿಸುತ್ತಾ ಶ್ರೇಷ್ಠವಾದ ಚಂದ್ರಲೇಖೆಯ ವಿಭ್ರಮವು ಬಯಸಿ ಈ ಕೋಮಲ ರಮಣಿಯ ರೂಪವನ್ನು

ಕಂ॥ ಮತ್ತುಂ ಪಲ್‌ಗಲ್ಲುಂ ನಡೆ
ಮುತ್ತಿನ ಕನ್ನಡಿಯು ಪಡಿಯೆ ಕಾಂತಿಯ ಚೆ
ಲ್ವೆತ್ತಳಕಂ ಭ್ರೂ ಮಧ್ಯಂ
ಬಿತ್ತರವೆನಿಪಂತು ಘನ ಧನುರ್ಗುಣದಿಂದಂ ೯೭

ವ॥ ಅಂತಿರ್ದ ಕಾಂತೆಯಂ ಕಂಡವಳಂ ವಿಚಾರಿಸುವೆನೆಂದವಳಿದಿರ್ಗೆ ವಂದು ಪೋಗದಿರೆಂಬುದುಂ

ಕಂ॥ ನೀನಾರಾಂ ಕಳ್ಳನೆನ
ಲ್ಕೇನಂ ಮಾಡಲ್ಕೆವೇಟ್ಪುದೆಂದಾಗಳ್ ಚಂ
ದ್ರಾನನೆ ತೊಡವಿನ ಪಟ್ಟಿಯ
ನಾನಂದದಿನೀಯಲಾಂ ಬಳಿಕ್ಕಿಂತೆಂದೆಂ ೯೮

ಆರಮಗಳ್ ನೀಂ ಪೆಸರೇ
ನೀ ರಾತ್ರಿಯೊಳಲ್ಲಿಗೆಯ್ದುದಪೆಯೊರ್ಬಳೆ ನೀ
ರೇರುಹಲೋಚನೆ ಪೇಳ್ ವಿ
ಸ್ತಾರದೊಳೆನಗೆಂದೊಡಾಕೆ ಮಗುಳ್ದಿಂತೆಂದಳ್ ೯೯

ನೆಗಳ್ದ ಕುಬೇರದತ್ತನ
ಮಗಳಾಂ ಕುಲಪಾಲಿಕಾಖ್ಯೆಯೆನ್ನಂ ಮುನ್ನಂ
ಬಗೆವಿಂಗೆ ಧನಮಿತ್ರಂಗಿ
ತ್ತುಗಡೀಗಳ್ ಕುಡುವನಲ್ತೆ ಪೆಱರ್ಗೆಮ್ಮಯ್ಯಂ ೧೦೦

ಧರಿಸಿತೋ ಎಂಬಂತೆ ಕಾಣಿಸಿದಳು. ೯೭. ಆ ಕಾಂತೆಯ ಹಲ್ಲೂ ಗಲ್ಲವೂ ನಡೆಯುತ್ತಿರುವ ಮುತ್ತಿನ ಕನ್ನಡಿಗೆ ಸಮನಾಗಿದ್ದುವು. ಅವಳ ಚೆಲುವಾದ ಮುಂಗುರುಳೂ ಹುಬ್ಬಿನ ಮಧ್ಯವೂ ಬಿಲ್ಲಿನ ನಾರಿಗಿಂತ ಮಿಗಿಲಾಗಿ ಕಂಡುವು. ವ॥ ಹಾಗಿದ್ದ ಕಾಂತೆಯನ್ನು ನೋಡಿ ಅವಳನ್ನು ವಿಚಾರಿಸಬೇಕೆಂದು ಅವಳೆದುರಿಗೆ ಹೋಗಿ ‘ಮುಂದೆ ಹೋಗಬೇಡ !’ ಎಂದು ಹೇಳಿದೆನು—೯೮. ‘ನೀನು ಯಾರು ?’ ‘ನಾನು ಕಳ್ಳನು.’ ಏನುಮಾಡಬೇಕು ? ಎನ್ನುತ್ತಾ ಆ ಚಂದ್ರಮುಖಿಯು ಒಡವೆಯ ಪೆಟ್ಟಿಗೆಯನ್ನು ಆನಂದದಿಂದ ಕೊಟ್ಟಳು, ಬಳಿಕ ನಾನು ಹೀಗೆ ಹೇಳಿದೆನು. ೯೯. “ನೀನು ಯಾರ ಮಗಳು ? ನಿನ್ನ ಹೆಸರೇನು ! ನೀನೊಬ್ಬಳೇ ಈ ರಾತ್ರಿಯಲ್ಲಿ ಎಲ್ಲಿಗೆ ಹೋಗುತ್ತಿರುವೆ ? ಕಮಲಾಕ್ಷಿ ! ವಿಸ್ತಾರವಾಗಿ ಎಲ್ಲವನ್ನೂ ಹೇಳು,” ಅದಕ್ಕೆ ಅವಳು ಹೀಗೆಂದಳು. ೧೦೦. ನಾನು ಪ್ರಸಿದ್ಧನಾದ ಕುಬೇರದತ್ತನ ಮಗಳು. ನನ್ನ ಹೆಸರು ಪಾಲಿಕೆ, ನನ್ನ ತಂದೆಯು ಮೊದಲು ನನ್ನನ್ನು ಧನಮಿತ್ರನಿಗೆ ಕೊಡುವುದಾಗಿ ಮಾತನ್ನಿತ್ತು ಈಗ

ಕಂ॥ ಧನಮಿತ್ರನರ್ಥಮಂ ಮಂ
ದಿನಿಕಾಯಕ್ಕಿತ್ತು ಬಡವನಾಗಲೊಡಂ ಭೂ
ಜನ ಮೊಲ್ದುದಾರಕಂ ನಿ
ನ್ನ ನಾಮಮೆಂದಾತನಂ ಪೊಗೞ್ದಪರೀಗಳ್ ೧೦೧

ವ॥ ಅಂತಾತಂ ತ್ಯಾಗಶೀಲದಿಂ ಬಡಪಟ್ಟುದಾರಕನೆಂಬ ಪೆಸರಂ ಪಡೆಯೆ

ಕಂ॥ ಪೆಱನೊರ್ವನರ್ಥಪತಿಯೆಂ
ಬಱಿಕೆಯ ವೈಶ್ಯೇಂದ್ರನಿರ್ಪನಾತಂಗೆನ್ನಂ
ಮಱುಮಾತಿಲ್ಲದೆ ತಾಂ ಪೊ
ೞ್ತಱ್ ಕೊಟ್ಟಪನೆಂಬ ಮಾತನೀಗಳ್ ಕೇಳ್ದೆಂ ೧೦೨

ವ॥ ಅದಂ ಕೇಳ್ದು

ಕಂ॥ ಇಂತಿರೆಯಮಂಗಲವನಾ
ನೆಂತನುಭವಿಸಿದಪೆನೆನ್ನನಯ್ಯಂ ಮುನ್ನೊ
ಲ್ದೆಂತಾವಂಗಿತ್ತನವಂ
ಕಾಂತನೆನುತ್ತವನ ಮನೆಗೆ ಪೋದಪೆನೀಗಳ್ ೧೦೩

ಕುಡುವೆಡೆಯೊಳ್ ಸಂಪದಮಂ
ಬಡತನಮಂ ಕುಲಮನಾದಿಯೊಳೆ ತಿಳಿದೊಲವಿಂ
ಕುಡುವುದು ಕೊಟ್ಟ ಬೞಿಕ್ಕಂ
ಪಡಿಮಾತಾಡುವುದು ನೀತಿಧರ್ಮವಿರೋಧಂ ೧೦೪

ಬೇರೆಯವರಿಗೆ ಕೊಡಲು ಮನಸ್ಸು ಮಾಡಿದ್ದಾನೆ. ೧೦೧. ಧನಮಿತ್ರನು ಹೊಗಳಿದವರಿಗೆಲ್ಲ ಹಣವನ್ನು ಕೊಟ್ಟು ಬಡವನಾದನು. ಜನರೆಲ್ಲರೂ ಅವರನ್ನು ಉದಾರಕನೆಂದು ಕರೆದು ಪ್ರೀತಿಸಿ ಈಗ ಹೊಗಳುತ್ತಾರೆ. ವ॥ ಹೀಗೆ ತ್ಯಾಗಶೀಲನಾದ ಅವನು ಬಡವನಾಗಿ ಉದಾರಕನೆಂಬ ಹೆಸರನ್ನು ಪಡೆಯಲು—೧೦೨. ಅರ್ಥಪತಿಯೆಂಬ ಹೆಸರಿನ ಮತ್ತೊಬ್ಬ ಸಾಹುಕಾರನಾದ ವೈಶ್ಯ ಶ್ರೇಷ್ಠಿಗೆ ನನ್ನನ್ನು ನಾಳೆ ಬೆಳಿಗ್ಗೆ ನನ್ನ ತಂದೆಯು ವಿಚಾರಿಸದೆ ಕೊಡುವರೆಂಬ ಮಾತನ್ನು ಕೇಳಿದೆನು. ವ॥ ಅದನ್ನು ಕೇಳಿ—೧೦೩. ಈ ಸ್ಥಿತಿಯಲ್ಲಿ ನಾನು ಈ ಅಮಂಗಳವನ್ನು ಅನುಭವಿಸಲಾರೆನು. 'ನನ್ನ ತಂದೆಯು ಮೊದಲು ಪ್ರೀತಿಯಿಂದ ಯಾವನಿಗೆ ನನ್ನನ್ನು ಕೊಟ್ಟನೋ ಅವನೇ ನನ್ನ ಪತಿ' ಎಂದು ತಿಳಿದುಕೊಂಡು ನಾನೀಗ ಅವನ ಮನೆಗೆ ಹೋಗುತ್ತಿದ್ದೇನೆ. ೧೦೪. ಹೆಣ್ಣು ಕೊಡುವುದಕ್ಕೆ ಮೊದಲೇ ಸಿರಿತನವನ್ನೂ ಬಡತನವನ್ನೂ ಕುಲವನ್ನೂ ವಿಚಾರಿಸಬೇಕು. ಆದರೆ ಕೊಟ್ಟಮೇಲೆ ಮಾತು ತಪ್ಪುವುದು ನೀತಿ ಧರ್ಮಕ್ಕೆ ವಿರುದ್ಧವಾದ

ವ॥ ಎಂದಾಂ ಧನಮಿತ್ರನ ಮನೆಗೆ ಪೋದಪೆಂ ನಿನಗೆ ಬೇಟ್ಪಿರ್ಥಮಾಯಿತ್ತು ಪೋಗೆಂಬುದುಮಾನಾಕುಲಪಾಲಕಿಗಿಂತೆಂದೆಂ

ಕಂ॥ ನಿನ್ನೊಡನೆ ಬಂದು ಪದೆಪಿಂ
ನಿನ್ನಧಿಪನ ಮಂದಿರಕ್ಕೆ ಕಳಿಪುವೆನೊಲವಿಂ
ಕನ್ನೆ ನಡೆಯೆಂದು ಸತಿಯುಂ
ಬೆನ್ನಿಕ್ಕಿ ಬಟಿಕ್ಕವೊರ್ವೊದಲ್ ನಡೆಗೊಂಡೆಂ ೧೧೫

ವ॥ ಅಂತು ನಡೆಗೊಳಲ್ ಮುಂದೆ

ಜಡಿವರವಂಗಳಿಂ ಸೆಳೆದ ಕೈದುಗಳಿಂ ಕರದೀಪ ಕೋಟಿಯಿಂ
ದೊಡನೆಯೆ ವೀರರಿಂ ಪೊಡೆವ ಜೇಗಟೆಯಿಂ ಕಡುಕೆಯ್ವ ಡೌಡೆಯು
ಗ್ಗಡಣೆಗಳಿಂ ಮಹಾಧ್ವನಿಯ ಕೊಂಬುಗಳಿಂ ಭಯಮಂ ನೆಗಟ್ಚುತಿ
ರ್ದಡೆಯೊಳೆ ಮುಂದೆ ಸಂದಣಿಸಿದರ್ ಪುರರಕ್ಷಕರರ್ಧರಾತ್ರಿಯೊಳ್ ೧೧೬

ವ॥ ಅಂತು ಘೋರಾಕಾರದ ಕಾರಿರುಳೊಳ್ ಭೋರೆನೆ ಬರ್ಪ ತಳಾಱರಬ್ಬರಮಂ ಕೇಳ್ದು

ಕಂ॥ ಮೃಗಶಾಬಂಮಿಗೆ ಶಾರ್ದೂ
ಲಗರ್ಜಿತಕ್ಕಂಜುವಂತೆ ತದ್ರಾತ್ರಿಯೊಳಾ
ಮೃಗಶಾಬನೇತ್ರೆ ಬೆರ್ಚಿದ
ಳಗಣಿತಪುರ ರಕ್ಷಕರ್ಕಳಬ್ಬರಕಾಗಳ್ ೧೧೭

ನಡತೆ—ವ॥ ಹೀಗೆ ಯೋಚಿಸಿ ನಾನು ಧನಮಿತ್ರನ ಮನೆಗೆ ಹೋಗುತ್ತಿದ್ದೇನೆ. ನಿನಗೆ ಬೇಕಾದ ಹಣ ಸಿಕ್ಕಹಾಗಾಯಿತು. ಇನ್ನು ಹೋಗು" ಎಂದು ಅವಳು ಹೇಳಿದಳು. ಬಳಿಕ ನಾನು ಆ ಕುಲಪಾಲಿಕೆಗೆ (ಹೀಗೆ) ಹೇಳಿದೆನು—೧೧೫. 'ಕನ್ನೆ ನಿನ್ನ ಜೊತೆಯಲ್ಲಿ ಬಂದು ನಿನ್ನನ್ನು ನಿನ್ನ ಗಂಡನ ಮನೆಗೆ ಕಳುಹಿಸಿ ಕೊಡುವೆನು. ಸಂತೋಷದಿಂದ ಮುಂದೆ ನಡೆ' ಎಂದು ಹೇಳಿ ಅವಳನ್ನು ಹಿಂಬಾಲಿಸಿ ನಡೆದೆನು. ವ॥ ಹಾಗೆ ಹೋಗುತ್ತಿರುವಾಗ ಮುಂದೆ—೧೧೬. ಆ ಅರ್ಧ ರಾತ್ರಿಯಲ್ಲಿ ಪುರರಕ್ಷಕರು ಗುಂಪಾಗಿ ಬರುತ್ತಿದ್ದರು. ಭಯಂಕರವಾಗಿ ಕೂಗುತ್ತಿದ್ದರು. ಆಯುಧಗಳನ್ನು ಹಿಡಿದಿದ್ದರು. ಕೋಟಿ ಕೈದೀವಿಗೆಗಳನ್ನು ಹಿಡಿದಿದ್ದರು. ಜೊತೆಯಲ್ಲಿಯೇ ವೀರರು ಜಾಗಟೆಗಳನ್ನು ಹೊಡೆಯುತ್ತಿದ್ದರು. ಜೋರಾಗಿ ಹೊಡೆಯುವ ನಗಾರಿಗಳ ಬಿರುದನಿಗಳು ಕೇಳಿಸುತ್ತಿದ್ದವು. ಕೊಂಬುಗಳ ಮಹಾಧ್ವನಿ ಬರುತ್ತಿತ್ತು. ಇವೆಲ್ಲ ಧ್ವನಿಗಳಿಂದ ಇದ್ದಲ್ಲಿಯೇ ಭಯವನ್ನುಂಟುಮಾಡುತ್ತಿದ್ದರು. ವ॥ ಹಾಗೆ ಭಯಂಕರವಾಗಿ ಕಾಣಿಸುತ್ತಿದ್ದ ಪುರರಕ್ಷಕರ ಅಬ್ಬರವನ್ನು ಕೇಳಿ— ೧೧೭. ಜಿಂಕೆಯ ಮರಿಯು ಹುಲಿಯ ಗರ್ಜನೆಯನ್ನು ಕೇಳಿ ಹೆದರುವಂತೆ ಆ ರಾತ್ರಿಯಲ್ಲಿ ಆ ಹರಿಣಾಕ್ಷಿಯು ಲೆಕ್ಕಕ್ಕೆ ಸಿಕ್ಕದ ಆ ಪುರರಕ್ಷಕರ ಅಬ್ಬರ

ವ॥ ಅಂತಾಕೆಯಂಜಿಕೆಯುಮಂ ಕಂಡಾಂ ಪೋಗದಿಲ್ಲಿಗೊಂದುಪಾಯಮಂ ಬಗೆಯಲೆಂದನಾಕೆಯೊಳಿಂತೆಂದೆಂ

ಉರಗಂಪಿಡಿದೋಜೆಯನನು
ಕರಿಸಿಬಟಲ್ದಂತೆ ಪೞೆಯಮಂಟಪದೊಳ್ ದು
ರ್ಮರಣಾಕಾರದೊಳಿರ್ಪೆಂ
ಪರವಶನಾದಂತಿರೊಱಗಿಯುಸಿರ್ದೆಗೆದೀಗಳ್ ೧೦೮

ವ॥ ಎಂದವಳ್ಗೆ ಪೇೞ್ದು

ನೊರೆಬಾಯೊಳ್ ಸುತ್ತಿಕಣ್ಗಳ್ ಮುಗಿದುಸಿರೆನಸುಂ ಭೇದಿಸಲ್ಬಾರದಂತು
ಬ್ಬರಿಸಲ್ ಬಣ್ಪಂಬಸಿಗೊರ್ಣಾಱಗಿ ತನು ಬಟಲ್ದಂತಿರಿರ್ಪೊಂದು ವೇಷಾಂ
ತರಮಂ ಕೈಕೊಂಡು ನೋೞ್ಪರ್ಗಕಟ ಭುಜಗದಷ್ಟಾಂಗನಾಗಿರ್ದನೆಂಬಂ
ತಿರಲಿರ್ದೆಂ ರಾತ್ರಿಯೊಳ್ ಶೋಕಿಸೆ ಸತಿಕೆಲದೊಳ್ ಧೂರ್ತಿನಿಂ ರಾಜಪುತ್ರಾ ೧೦೯

ವ॥ ಅಂತಿರ್ಪ ಸಮಯದೊಳ್ ತಳವಾಱರ್ ಮುಟ್ಟೆವಂದು ಕುಸುಮಕೋಮಳೆಯಪ್ಪ ಕೋಮಳೆಯ ಕೆಲದೊಳಿರ್ದ ಪೆಟ್ಟಗೆಯುಮಂ ಬಿೞ್ದಿರ್ದೆನ್ನುಮಂ ಕಂಡಿದೇನೆಂಬುದುಂ

ವನ್ನು ಕೇಳಿ ಬೆಚ್ಚಿದಳು. ವ॥ ಆ ರೀತಿ ಯಾವ ಅವಳ ಭಯವನ್ನು ನೋಡಿ ನಾನು ಅಲ್ಲಿಂದ ಹೋಗದೆಯೇ (ತಪ್ಪಿಸಿಕೊಳ್ಳಲು) ಒಂದು ಉಪಾಯವನ್ನು ಆಲೋಚಿಸಬೇಕೆಂದು ಆಕೆಗೆ ಹೇಳಿದೆನು—೧೦೮. "ಹಾವು ಕಚ್ಚಿದವನ ರೀತಿಯನ್ನು ಅನುಸರಿಸಿ ಬಳಲಿದವನಂತೆ ಹಳೆಯ ಮಂಟಪದಲ್ಲಿ ದುರ್ಮರಣ ಪಡೆದವನಂತೆ ಪರವಶನಾಗಿ ಉಸಿರುಕಟ್ಟಿ ಮಲಗುತ್ತೇನೆ." ವ॥ ಎಂದು ಅವಳಿಗೆ ಹೇಳಿದೆನು. ಆಮೇಲೆ—೧೦೯. ನನ್ನ ಬಾಯಲ್ಲಿ ನೊರೆ ಸುರಿಯುತ್ತಿತ್ತು. ಕಂಗಳು ಮುಚ್ಚಿಕೊಂಡುವು. ಮಾತನಾಡಲಿಲ್ಲ. ಉಸಿರಾಡುತ್ತಿರಲಿಲ್ಲ. ಹೊಟ್ಟೆಯುಬ್ಬರಿಸಿ ಭಾರವಾಯಿತು. ಕುತ್ತಿಗೆಯು ಪಕ್ಕಕ್ಕೆ ತಿರುಗಿತು. ಶರೀರವು ಬಳಲಿದಂತಾಯಿತು. ಈ ರೀತಿಯ ವೇಷಾಂತರವನ್ನು ಹೊಂದಿದೆನು. ನೋಡುವವರಿಗೆ ಅಯ್ಯೋ ಹಾವು ಕಚ್ಚಿದವನು ಎಂದು ತೋರುತ್ತಿತ್ತು. ರಾಜಪುತ್ರನೆ, ಹೀಗೆ ನಾನು ರಾತ್ರಿಯೆಲ್ಲ ಧೂರ್ತತನದಿಂದ ಅಭಿನಯಿಸಿದೆನು, ಆ ತರುಣಿಯು ಪಕ್ಕದಲ್ಲಿಯೇ ನಿಂತು ಶೋಕಿಸುತ್ತಿದ್ದಳು. ವ॥ ಆ ಸಮಯದಲ್ಲಿ ಆ ಪುರರಕ್ಷಕರು ಹತ್ತಿರಬಂದು ಕುಸುಮದಂತೆ ಕೋಮಲೆಯಾದ ತರುಣಿಯ ಪಕ್ಕದಲ್ಲಿದ್ದ ಪೆಟ್ಟಿಗೆಯನ್ನೂ ಕೆಳಗೆ ಬಿದ್ದಿದ್ದ ನನ್ನನ್ನೂ ನೋಡಿ 'ಇದೇನು ?' ಎಂದು ಕೇಳಿದರು.

ಕಡುಪೆಂಪೊಪ್ಪುವ ರಾಜಧಾನಿಯಿದಱೊಳ್ ಮದ್ವಿದ್ಯೆಯಿಂದರ್ಥಮಂ
ಪಡೆವೊಂದಾಸೆಯೊಳಿಲ್ಲಿ ಬಿಟ್ಟಿರಲದೊಂದುಗ್ರೋರಗಂ ಬಲ್ಪಿನಿಂ
ಪಿಡಿಯಲ್ ನಾಯಕನಿಂತು ಶೀರ್ದನಸುವಂ ಕಾರುಣ್ಯದಿಂದಣ್ಣ ಗಾ
ರುಡಮಂ ಬಲ್ಲವರೆತ್ತಿಮೆಂದು ಕೆಡೆದಳ್ ತತ್ಕಾಂತೆ ಭೂಭಾಗದೊಳ್ ೧೧೦

ವ॥ ಅಂತು ಪೊರಳ್ದು ಕಾಂತೆಯಾರ್ತರವಮಂ ಸಂತೈಸಿಯವರೊಳ್

ಕಂ॥ ಮಿಗೆ ಗರುಡಮುದ್ರೆಯಂ ಪಿಡಿ
ದಗಣಿತ ಪಂಚಾಕ್ಷರಾದಿಮಂತ್ರಂಗಳನಾ
ವಗಮೋದಿ ಯಂತ್ರಮಂ ಬರೆ
ದು ಗಾರುಡಂ ಕೊಳ್ಳದೆಂದು ತೊಲಗಿದನೊರ್ವಂ ೧೧೧

ಈ ತೆಱದಿಂ ಗಾರುಡಿಸಲ್
ಚೈತನ್ಯಂ ತೋಱದಂತು ಬೆಱೆತಿರೆ ಕಂಡಂ
ತಾ ತಳವಾಱರ್ ಬೇಸ
ತ್ತೀತಂಗಿದು ಕಾಲಮೆಂದು ಸತಿಗಿಂತೆಂದರ್ ೧೧೨

ಉದಯದೊಳೀತನ ಸಂಸ್ಕಾ
ರದ ದೆಸೆಗಿಂಧನವನೀವೆವೆಂದವರಲ್ಲಿಂ
ದೊದಱುತ್ತೆ ಪೋದರಿತ್ತಲ್
ಪದುಳದಿನಾನೆೞ್ದು ಪೋದೆನಲ್ಲಿಂದಾಗಳ್ ೧೧೩

೧೧೦. “ತುಂಬ ಹಿರಿದಾದ ರಾಜಧಾನಿಯಿದು. ಇದರಲ್ಲಿ ನಮ್ಮ ವಿದ್ಯೆಯಿಂದ ಹಣವನ್ನು ಸಂಪಾದಿಸಬೇಕೆಂಬ ಆಸೆಯಿಂದ ಇಲ್ಲಿ ತಂಗಿದ್ದೆವು. ಒಂದು ಭಯಂಕರವಾದ ಸರ್ಪವು ಬಲವಾಗಿ ಕಚ್ಚಲು ನನ್ನ ನಾಯಕನು ಹೀಗೆ ಪ್ರಾಣ ಕಳೆದುಕೊಂಡು ಮಲಗಿದ್ದಾನೆ. ಅಣ್ಣ, ಯಾರಾದರೂ ಗಾರುಡ ವಿದ್ಯೆಯನ್ನು (ವಿಷವೈದ್ಯ) ಬಲ್ಲವರು ಬದುಕಿಸಿರಿ ಎಂದು ಹೇಳಿಕೊಂಡು ಗೋಳಾಡುತ್ತಾ ಆ ಕಾಂತೆಯು ನೆಲದ ಮೇಲೆ ಬಿದ್ದಳು. ವ॥ ಹಾಗೆ ಹೊರಳಾಡಿದ ಕಾಂತೆಯ ಗೋಳಾಟವನ್ನು ಸಮಾಧಾನಮಾಡಿ ನಿಲ್ಲಿಸಿ ಅವರಲ್ಲಿ ಒಬ್ಬನು—೧೧೧. ಗರುಡ ಮುದ್ರೆಯನ್ನು ತೋರಿಸಿ ಅಗಣಿತವಾದ ಪಂಚಾಕ್ಷರಿಯೇ ಮೊದಲಾದ ಮಂತ್ರಗಳನ್ನು ಪಠಿಸಿ ಯಂತ್ರವನ್ನು ಬರೆದು ಕಟ್ಟಿದನು. ಕಡೆಗೆ ಗಾರುಡ ವಿದ್ಯೆಯು ಫಲಿಸುವುದಿಲ್ಲವೆಂದು ಹೇಳಿ ಹೋದನು. ೧೧೨. ಹೀಗೆ ಗಾರುಡ ವಿದ್ಯೆಯಿಂದ ಈತನಲ್ಲಿ ಚೈತನ್ಯವು ಬರದೇ ಇರುವುದನ್ನು ನೋಡಿ ತಳವಾರರು ಬೇಸತ್ತು, ಇವನಿಗೆ ಸಾವುಬಂದಿದೆಯೆಂದು ನಿಶ್ಚಯಿಸಿ ಆ ಸತಿಗೆ ಹೇಳಿದನು. ೧೧೩. ‘ಬೆಳಿಗ್ಗೆ ಈತನ ಸಂಸ್ಕಾರಕ್ಕೆ ಬೇಕಾದ ಸೌದೆಯನ್ನು ಕೊಡುವೆವು’ ಎಂದು ಹೇಳಿ ಅವರೆಲ್ಲರೂ ಕೂಗುತ್ತಾ ಹೋದರು. ಇತ್ತ ನಾನು ಕ್ಷೇಮದಿಂದ ಎದ್ದು ಅಲ್ಲಿಂದ

ವ॥ ಅಲ್ಲಿಂ ತಳರ್ದು ಕುಲಪಾಲಿಕೆವೆರಸು ಧನಮಿತ್ರನ ಮನೆಗೆಯ್ದಿ ಪದಿಯರಂ ತೆಱೆಯಿಸಿ ಪುಗಲೊಡಂ

ಬೆಱಂಕೆನಲಾಗಳಾಕೆ ಸಹಿತಾಂ ಬರಲಾಧನಮಿತ್ರನೊರ್ಮೊದಲ್
ಶಂಕಿಸಿದಂ ಮಗುಳ್ದು ಮುದಮಂ ತಳೆದಂ ಕಡುಲಜ್ಜೆ ತನ್ನೊಳೊ
ಳ್ದಂಕುರಿಸಲ್ ಕರಂ ತಲೆಯನೊಯ್ಯನೆ ಬಾಗಿದನಾಪ್ತ ಬಂಧು ಮೀ
ತಂ ಕೆಳೆಯಂ ದಿಟಂ ಪೆಱದನಲ್ತೆನುತೆನ್ನನೊಱಲ್ದು ನೋಡಿದಂ ೧೧೪

ವ॥ ಅಂತಾತಂ ಪಲವುಭಾವಂ ಬೆರಸೆನ್ನಂ ನೋಡಲೊಡಂ

ಕಂ॥ ನಿನ್ನರಸಿಯೀಕೆಯೀಕೆಯ
ರನ್ನದ ತೊಡವುಗಳ ಪೆಟ್ಟಿಯಿದೆಕೊಳ್ಳೆಂದು
ತ್ತನ್ನಮತಿಗಿತ್ತೆ ನೀಯಲ್
ತನ್ನುತ್ಸಾಹದೊಳವಂ ಮಗುೞ್ದಿಂತೆಂದಂ ೧೧೫

ನಿನಗೇನಂ ಮಾೞ್ಪೆನೀ ಪೊೞ್ತಿಸಗಿದುಚಿತ ಕಾರ್ಯಕ್ಕೆ ಭಾವಿಪ್ಪೊಡಿಂತೀ
ತನುಜೀವಂ ನಿನ್ನದಾವೆಂದಱಿವನಿತೆನಿಪ ಸ್ತೋತ್ರದಿಂ ಭಕ್ತಿಯಿಂ ವಂ
ದನೆಯಂ ಮಾೞ್ಪಂದಮೊಂದಂತತಿ ಲಲಿತ ನದೀವಾರಿಯಂ ತನ್ನದೀಜೀ
ವನದೊಳ್ ಕೂರ್ತರ್ಘ್ಯಮೀವೊಂಗುಣಕಮುವನಿಯೊಳ್ ಮಾೞ್ಪವೊಲ್
ತೋರ್ಪುದೆನ್ನೊಳ್ ೧೧೬

ಮುಂದೆ ಹೋದೆನು. ವ॥ ಅಲ್ಲಿಂದ ಹೊರಟು ಕುಲಪಾಲಿಕೆಯೊಡನೆ ಧನಮಿತ್ರನ ಮನೆಗೆ ಹೋದೆನು. ಬಾಗಿಲನ್ನು ತೆಗೆಯಿಸಿ ಒಳಕ್ಕೆ ಹೋದೆನು. ಆಗ—೧೧೪. ಇದ್ದಕ್ಕಿದ್ದ ಹಾಗೆ ನಾನು ಆಕೆಯೊಡನೆ ಬರಲು ಧನಮಿತ್ರನು ಮೊದಲು ಸಂದೇಹಪಟ್ಟನು. ಮತ್ತೆ ಸಂತೋಷವನ್ನು ಹೊಂದಿದನು. ತನ್ನಲ್ಲಿ ತನಗೇ ತುಂಬ ನಾಚಿಕೆಯಾಯಿತು. ಅದರಿಂದ ತಲೆಯನ್ನು ಬಗ್ಗಿಸಿದನು. ಆಮೇಲೆ 'ಈತನು ಆಪ್ತಬಂಧು, ಗೆಳೆಯ, ನಿಜವು. ಬೇರೆಯವನಲ್ಲ! ಎನ್ನುತ್ತಾ ಪ್ರೀತಿಯಿಂದ ನನ್ನನ್ನು ನೋಡಿದನು. ವ॥ ಹಾಗೆ ಅವನು ಹಲವು ತೆರನಾದ ಭಾವಗಳಿಂದ ಕೂಡಿ ನನ್ನನ್ನು ನೋಡಿದನು, (ಆಗ)—೧೧೫. 'ಇವಳು ನಿನ್ನ ಹೆಂಡತಿ. ಇದು ಇವಳ ರತ್ನಾಭರಣಗಳ ಪೆಟ್ಟಿಗೆ, ತೆಗೆದುಕೋ' ಎಂದು ಹೇಳಿ ಆ ಬುದ್ಧಿವಂತನಿಗೆ ಕೊಟ್ಟೆನು. ಆಗವನು ಉತ್ಸಾಹದಿಂದ ಮತ್ತೆ ಹೇಳಿದನು. ೧೧೬. "ಈ ಹೊತ್ತಿನಲ್ಲಿ ನೀನು ಮಾಡದಂಥ ಈ ನ್ಯಾಯವಾದ ಕಾರ್ಯಕ್ಕೆ ನಾನೇನು ತಾನೇ ನಿನಗೆ ಕೊಡಬಲ್ಲೆನು ? ಈ ನನ್ನ ಶರೀರ ಜೀವ ಎಲ್ಲವೂ ನಿನಗೇ ಸೇರಿದುವೆಂದು ಅರಿತು ಸ್ತುತಿಸಿ ಭಕ್ತಿಯಿಂದ ನಿನಗೆ ವಂದನೆಯನ್ನು ಮಾಡುವೆನು. ಆದರೆ ಇದು ಈ ಲೋಕದಲ್ಲಿ ನದಿಯ ನೀರನ್ನೇ ತೆಗೆದುಕೊಂಡು ಆ ನದಿಯ ನೀರಿಗೆ ಸ್ನೇಹದಿಂದ ಅರ್ಘ್ಯವನ್ನು ಕೊಡುವಂತೆ ಹಾಸ್ಯಾಸ್ಪದವಾಗಿ ನನಗೆ ತೋರುತ್ತದೆ.

ಕಂ॥ ಮತ್ತಗಜಗಮನೆ ತಡೆದಳೆ
ನುತ್ತಸು ತನುವಿಂದಗಲ್ದುದೀವಧುವಂ ತಂ
ದಿತ್ತುದಱಿಂ ತನು ಜೀವಂ
ವಿತ್ತಂ ನೀನಿತ್ತ ವಸ್ತುವೆಂಬುದು ಪುಸಿಯೇ ೧೧೭

ಇನಿತಂ ಮಾಳ್ಪವರಾರೊ ಕೇಳ್ ಮನುಜರೊಳ್ ಸ್ತ್ರೀರತ್ನವಂ ರತ್ನವಂ
ಧನಮಂ ನಿರ್ನೆರವಿಂತು ತಂದು ಪೆಱರೊಳ್ ಪ್ರತ್ಯರ್ಪಣಾಕಾಂಕ್ಷೆಗೆ
ಟ್ಟೆನಸುಂ ಕೊಟ್ಟಿಹಲೋಕದೊಳ್ಪು ಪರಲೋಕಶ್ರೀ ನಿತಾಂತಂ ಕರಂ
ನಿನಗಪ್ಪಂತಿರೆ ಚಿತ್ತದುತ್ತಮಿಕೆಯುಂ ಕೇಳ್ ಮಿತ್ರಕಲ್ಪದ್ರುಮಾ ೧೧೮

ಕಂ॥ ಎನ್ನಯ ನುಡಿಯುಂ ಕೊಂಡೀ
ಕನ್ನೆಯನೊಲ್ದಿತ್ತೆಯೆಂಬುದದು ವಿಕ್ರಯದೋ
ಪನ್ನಿನಗೆ ಬರ್ಕುಮೆಂತೆನೆ
ರನ್ನಮನಳೆಗಿತ್ತರೆಂಬ ನಾಣ್ಣುಡಿನವೋಲ್ ೧೧೯

ವ್ಯರ್ಥಾಳಾಪದೊಳೇಂ ಧನ
ಮರ್ಥಂ ಪ್ರಾಣಂ ನಿಜಕ್ಕೆ ನಿನ್ನದು ನಿಜಕಾ
ತೀರ್ಥಂ ನೀಂ ಪದೆಪಿಂ ಮ
ತ್ಪ್ರಾರ್ಥನೆಯಿದು ರಕ್ಷಿಸೆಂದು ಚರಣಂಬಿಡಿದಂ ೧೨೦

೧೧೭. ಮದ್ದಾನೆಯಂತೆ ನಡೆಯುವ ಇವಳು ಬರಲು ತಡಮಾಡಿದಳೆಂದು ಈ ನನ್ನ ಪ್ರಾಣಗಳು ದೇಹದಿಂದ ಅಗಲುವುದರಲ್ಲಿದ್ದುವು. ಈಗ ನೀನು ಈ ವಧುವನ್ನು ತಂದು ಕೊಟ್ಟುದರಿಂದ ಬದುಕಿದೆನು. ಆದುದರಿಂದ ಈ ಶರೀರ, ಪ್ರಾಣ, ಧನ ಎಲ್ಲವೂ ನೀನು ಕೊಟ್ಟ ವಸ್ತುಗಳೇ ! ಸುಳ್ಳಲ್ಲ. ೧೧೮. ಮಿತ್ರ ರೂಪಿಯಾದ ಕಲ್ಪವೃಕ್ಷವೇ ! ಕೇಳು. ಮನುಷ್ಯರಲ್ಲಿ ಇಂಥ ಕೆಲಸವನ್ನು ಮಾಡುವವರಾರಿದ್ದಾನೆ ? ಸ್ತ್ರೀ ರತ್ನವನ್ನೂ ರತ್ನವನ್ನೂ ಧನವನ್ನೂ ಯಾವ ಲಾಭವೂ ಇಲ್ಲದೆ ಯಾವ ಆಸೆಯೂ ಇಲ್ಲದೆ ಬೇರೆಯವರಿಗೆ ತಂದುಕೊಟ್ಟು ಇಹಲೋಕದ ಪುಣ್ಯ ಮತ್ತು ಪರಲೋಕದ ಸುಖವನ್ನು ತಂದು ಕೊಡುವ ಮನಸ್ಸಿನ ಉದಾತ್ತತೆಯನ್ನು ತೋರಿಸಿದ್ದೀಯೆ. ನಿನ್ನಂಥವರು ಬೇರೆ ಯಾರಿದ್ದಾರೆ ? ಹೇಳು. ೧೧೯. ನನ್ನ ನುಡಿಯನ್ನು ತೆಗೆದುಕೊಂಡು ನನಗೆ ನೀನು ಈ ಕನ್ನೆಯನ್ನು ಪ್ರೀತಿಯಿಂದ ಕೊಟ್ಟೆ. ಇದರಿಂದ ನಿನಗೆ ರತ್ನವನ್ನು ಮಜ್ಜಿಗೆಗೆ ಕೊಟ್ಟರು ಎಂಬ ನಾಣ್ಣುಡಿಯಂತೆ ವಿಕ್ರಯ ದೋಷವುಂಟಾಗುತ್ತದೆ. ೧೨೦. ಫಲವಿಲ್ಲದ ಮಾತುಗಳಿಂದೇನು ? ನಿಜವಾಗಿ ನನ್ನ ಹಣ ಪ್ರಾಣ ಎಲ್ಲವೂ ನಿನಗೆ ಸೇರಿದುವು. ನಿಜವಾಗಿ ಪ್ರಸಿದ್ಧವಾದ ಪುಣ್ಯಕ್ಷೇತ್ರವೂ ನೀನೇ ; ಇದು ನನ್ನ ಪ್ರಾರ್ಥನೆ. ಅದನ್ನು ನಡೆಯಿಸಿಕೊಡು, ಎಂದು ಹೇಳಿ ನನ್ನ ಕಾಲುಗಳನ್ನು

ವ॥ ಅಂತಾ ಧನಮಿತ್ರನೆನ್ನನರ್ಥವಾದದಿಂ ತುಷ್ಟಿವಡಿಸಿ ಕಡೆಯೊಳಿಂತೆಂದಂ

ಕಂ॥ ಪರಿಕಿಸುವೊಡರ್ಥಪತಿ ಕಡು
ಸಿರಿವಂತಂ ಬಡವನಾಂ ನೆಗಬ್ದಾತನ ಮ
ಚ್ಚರದಿಂದಿಲ್ಲಿರ್ಪುದು ತನ
ಗೆ ರಕ್ಷೆಯಲ್ತೆಂದನಟ್ಕಱಿಂ ಧನಮಿತ್ರಂ ೧೨೧

ವ॥ ಎಂದೊಡಾತಂಗಭಯಮಂ ಕೊಟ್ಟು ಸಂತಮಿಡಲ್ ಮತ್ತಮಿಂತೆಂದಂ

ಕಂ॥ ಈ ಕನ್ನಿಕೆಯಂ ತತ್ಪಿತೃ
ಲೌಕಿಕವಿಧಿಯಿಂ ವಿವಾಹಮಂ ಮಾಡಿದೊಡ
ವ್ಯಾಕುಳದಿಂ ನಿನಗೆಲ್ಲಾ
ಲೋಕದೊಳೆಸೆಗುಂ ಜಸಂ ಫಲಂ ನಿಜವಂಶಂ ೧೨೨

ವ॥ ಎಂದೊಡಾಂ ಕುಬೇರದತ್ತನಿಂ ನಿನಗೆ ಕನ್ಯೆಯಂ ಕೊಡಿಸುವುಪಾಯಮಂ ಮಾಳ್ಪೆಂ ಅನ್ನೆಗಮೀ ಕುಮಾರಿಯಂ ನಿಜವಾಸಕ್ಕೆ ಕಳಿಪಿಪೆರ್ವೆಂದಾನುಂ ಧನಮಿತ್ರನುಮ ವಳಂ ಕುಬೇರದತ್ತನ ಮನೆಯಂ ಪುಗಿಸೆ

ಕಂ॥ ಎನಸುಂ ಕುಬೇರದತ್ತನ
ಮನೆಯರ್ಥಮನೊಡೆದಮಡಕೆ ಪೊಱಗಾಗೆ ತದಂ
ಗನೆ ಪೊಕ್ಕ ಬಾಗಿಲೊಳ್ ಪೊ
ಕ್ಕನಿತಂ ಕಳ್ದೊಂದು ತಿಪ್ಪೆಯೊಳ್ ಪೂಟ್ದಿಟ್ಟೆಂ ೧೨೩

ಒಡಿದನು. ವ॥ ಹೀಗೆ ಧನಮಿತ್ರನು ನನ್ನನ್ನು ಹೊಗಳಿಕೆಯಿಂದ ತೃಪ್ತಿಗೊಳಿಸಿ ಕೊನೆಯಲ್ಲಿ ಹೀಗೆ ಹೇಳಿದನು. ೧೨೧. ವಿಚಾರಿಸಿದರೆ ಅರ್ಥ ಪತಿಯು ತುಂಬ ದೊಡ್ಡ ಹಣಗಾರನು. ನಾನು ಬಡವನು (ಬಲಶಾಲಿಯಾದ) ಪ್ರಸಿದ್ಧನಾದ ಆತನು ಮಾತ್ಸರ್ಯ ತೋರುವುದರಿಂದ ಇಲ್ಲಿರುವುದು ತನಗೆ ಸುರಕ್ಷೆಯಲ್ಲ" ಎಂದು ಧನಮಿತ್ರನು ಅಕ್ಕರೆಯಿಂದ ಹೇಳಿದನು. ವ॥ ಹಾಗೆನ್ನಲು ನಾನು ಅವನಿಗೆ ಅಭಯವನ್ನು ಕೊಟ್ಟು ಸಮಾಧಾನ ಹೇಳಿದೆನು. ಅವನು ಮತ್ತೆ ಹೀಗೆ ಹೇಳಿದನು. ೧೨೨. "ಈ ಕನ್ನಿಕೆಯನ್ನು ಅವಳ ತಂದೆಯು ಲೋಕರೀತಿಯಿಂದ ಯಾವ ಅಡ್ಡಿಯೂ ಇಲ್ಲದೆ ನನಗೆ ಮದುವೆ ಮಾಡಿಕೊಡುವಂತಾಗಬೇಕು. ಇದರಿಂದ ಎಲ್ಲಾ ಲೋಕಗಳ ಲ್ಲಿಯೂ ನಿನ್ನ ಕೀರ್ತಿಯೂ, ಫಲವೂ, ವಂಶವೂ ಬೆಳಗುತ್ತದೆ." ವ॥ ಆಗ ನಾನು 'ನಾನು ನಿನಗೆ ಕುಬೇರದತ್ತನಿಂದ ಈ ಕನ್ನಿಕೆಯನ್ನು ಕೊಡಿಸುವ ಉಪಾಯವನ್ನು ಮಾಡುವೆನು. ಅದುವರೆಗೂ ಈ ಕುಮಾರಿಯನ್ನು ಅವಳ ಮನೆಗೆ ಕಳಿಸಿ ಬರೋಣ' ಎಂದು ಹೇಳಿದೆನು. ನಾನೂ ಧನ ಮಿತ್ರನೂ ಅವಳನ್ನು ಕುಬೇರದತ್ತನ ಮನೆಗೆ ಸೇರಿಸಿ ದೆವು. ೧೨೩. ಆ ಅಂಗನೆಯು ಹೊಕ್ಕ ಬಾಗಿಲಿನಿಂದಲೇ ಒಳಕ್ಕೆ ನುಗ್ಗಿ ಒಡೆದ ಮಡಕೆ ಯೊಂದನ್ನು ಬಿಟ್ಟು ಉಳಿದ ಧನವನ್ನೆಲ್ಲ ಕದ್ದು ಒಂದು ತಿಪ್ಪೆಗುಂಡಿಯಲ್ಲಿ ಹೂತಿಟ್ಟೆವು.

ವ॥ ಅಂತದೆಲ್ಲಮಂ ಪೂೞ್ದಿರ್ಬರುಂ ಮಗುಟ್ದು ಬರ್ಪಾಗಳ್ ಮುಂದೆ

ಸ್ಥೂಳಾಗಾರಂಗಳಂ ನಿರ್ಗಮದೊಳೆ ಕಿೞ್ತಿತ್ತಿ ಮೆಯ್ಬಲ್ಮೆಯಿಂ ಕಿ
ೞ್ತಾಳಾನಸ್ತಂಭಮಂ ಮೇಣ್ ಮದದೊದವು ಮಿಗಲ್ ಕೊರ್ಬಿ ಕೋೞ್ಕುಟ್ಟಿ ರೌದ್ರಾ
ಭೀಳಂಬೆತ್ತೊಂದು ಮಾಧ್ಯದ್ಗಜಪತಿ ರಜನೀಮಧ್ಯದೊಳ್ ಬರ್ಪುದಂ ಕಂ
ಡಾಳಾಪಂದೋಱಿ ಭೈಭೈಪಡಿ ಪಡಿಯೆನುತಾರ್ದೇಱಿದೆಂ ಸಾರ್ವಭೌಮಾ ೧೨೪

ವ॥ ಅಂತು ರಾಜಾಲಯಮುಮಂ ಪೊೞಿಮಟ್ಟು ಮುಂಡಾಸನದಿಂ ಮದಮುರ್ಕಿಬರ್ಪ ಆನೆಯಂ ಪಾಗಂಕುಶಪ್ರಘಾತದಿಂ ಮಟ್ಟಕ್ಕೆತಂದು ಮಸ್ತಕಕ್ಕೆ ಬಂದು ಪಿಂದೆ ಧನಮಿತ್ರನನೇಱಿಸಿ ವಜ್ರನಖಾಂಕುಶದಿಂದಮುಂಕಿ ಬಿಟ್ಟೆಳ್ಕುವ ಸಮಯದೊಳ್ ತಳವಾಱರ್ ಬಂದು ಮುತ್ತೆ

ಕಂ॥ ರದನಾಗ್ರದಿಂ ಕೆಲಂಬರ
ನೊದೆಯಿಸಿ ಮೆಟ್ಟಿಸಿ ಪಲಂಬರಂ ಕರಸಂಘಾ
ತದಿನನಿಬರನಾಗಳೆ ಯಮ
ಸದನಕ್ಕೊಪ್ಪಿಸಿದೆನಿರ್ದರಳವೞಿದೋಡಲ್ ೧೨೫

ವ॥ ಅಂತು ಮಿಕ್ಕವರೆಲ್ಲರರಮನೆಯಾನೆ ಮದಮುರ್ಕಿ ಕೊಲುತಿರ್ದಪುದೆಂದೋಡಿ ಪೋಗೆ ಬೞಿಯಂ

ವ॥ ಹಾಗೆ ಅವೆಲ್ಲವನ್ನೂ ಹೂಳಿಟ್ಟು ಇಬ್ಬರೂ ಹಿಂದಿರುಗಿ ಬರುವಾಗ ಮುಂದೆ— ೧೨೪. ಅರ್ಧರಾತ್ರಿಯಲ್ಲಿ ಬಂದು ಮದಿಸಿದ ಗಜರಾಜನು ದೊಡ್ಡ ದೊಡ್ಡ ಮನೆಗಳನ್ನು ಬಾಗಿಲಲ್ಲಿಯೇ ಕಿತ್ತು ಮೇಲಕ್ಕೆ ಎಸೆಯುತ್ತಾ ದೇಹಬಲದಿಂದ ಕಟ್ಟುವ ಗೂಟವಾದ ಕಂಭವನ್ನು ಕಿತ್ತುಹಾಕುತ್ತಾ ಮಿತಿಮೀರಿದ ಮದದಿಂದ ಕೋರೆ ಹಲ್ಲುಗಳನ್ನು ಕುಟ್ಟುತ್ತಾ ರೌದ್ರಾಕಾರದಿಂದ ಬರುತ್ತಿತ್ತು. ನಾನು ಅದನ್ನು ಕಂಡು 'ಭೈ ಭೈ, ಪಡಿ ಪಡಿ !' ಎಂದು ಮಾತನಾಡಿಸಿ ಕರೆದು ಗರ್ಜಿಸುತ್ತಾ ಅದರ ಮೇಲೆ ಏರಿ ಕುಳಿತೆನು. ವ॥ ಹಾಗೆ ಅರಮನೆಗೆ ಹೊರಟೆನು. ಮುಂಡಾಸನದಿಂದ (ಕೆನ್ನೆಗಳಿಂದ-ತಲೆಯಿಂದ ?) ಮದವು ಉಕ್ಕಿ ಹರಿಯುತ್ತಿದ್ದ ಆನೆಯನ್ನು ಮಾತೆಂಬ ಅಂಕುಶದಿಂದ ಹೊಡೆದು ವಶಪಡಿಸಿಕೊಂಡು ಅಂಕುಶದಂತೆ ಹರಿತವಾದ ಬಿಗಿಪಾತುಗಳಿಂದ) ಅದರ ತಲೆಯ ಮೇಲಕ್ಕೆ ಬಂದೆನು. ಧನಮಿತ್ರನನ್ನು ಹಿಂದುಗಡೆ ಏರಿಸಿಕೊಂಡೆನು. ವಜ್ರಾಯುಧದಂತೆ ಹರಿತವಾದ ಉಗುರುಗಳ ಅಂಕುಶದಿಂದ ಅದುಮಿ ಓಡಿಸುವ ಸಮಯದಲ್ಲಿ ನಗರ ರಕ್ಷಕರು ಬಂದು ಮುತ್ತಿದರು. ೧೨೫. ಆ ಆನೆಯ ದಂತಗಳ ತುದಿಯಿಂದ ಕೆಲವರನ್ನೂ. ಕಾಲುಗಳಿಂದ ಒದೆಯಿಸಿ ತುಳಿಸಿ ಹಲವರನ್ನು ಕೊಂದೆನು. ಮತ್ತೆ ಕೆಲವರನ್ನು ಸೊಂಡಿಲಬಡಿತದಿಂದ ಯಮನ

'ಗಂಡಸ್ಥಳದಿಂ' ಎಂದು ಪಾಠವಿರಬಹುದು (ರಂ)

ಕಂ॥ ಆಳೆನಿಸುವರ್ಥಪತಿಯು ನಿ
ಜಾಲಯಮಂ ತದ್ಗಜೇಂದ್ರನಿಂ ನುರ್ಗಿಸಿ ಸ
ಲ್ಲೀಲೆಯಿನಲ್ಲಿಂ ತಳರ್ದು ವಿ
ಶಾಲಮೆನಿಪ್ಪೊಂದು ಚೆಲ್ವ ಕುಜಮಂ ಕಂಡೆಂ ೧೨೬

ವ॥ ಅಂತಾಕುಜಕ್ಕಾನೆಯಂ ನೂಂಕಿ ಅದಱ ಮೇಲ್ಕೊಂಬಂ ಪಿಡಿದಾನೆಯಂ ಬಿಡಲದತ್ತಲ್ಪೋದುದು ಆನುಂ ಧನಮಿತ್ರನುಂ ಬಳಿಕ್ಕಾ ಮರದಿಂದಿೞಿವನ್ನೆಗಂ

ಅಳಿಗಳ್ ಪಾಡುವಿನಂ ಸರೋಜಿನಿ ನಗುತ್ತುಂ ನೋಡುತ್ತಿಪ್ಪಿನಂ ಕೂಡೆ ಪಾಂ
ಸುಳೆಯರ್ ಬೆರ್ಚುವಿನಂ ರಥಾಂಗಯುಗಳಂ ಪಾರೈಸಿನಂ ತೆಂಬೆರಲ್
ಕಳಿಪೂವಂ ಬಲಿಗೆಯ್ವಿನಂ ರವಿನಟಂ ಬಂದಾಡುವಾಗಳ್ ಸುಪಾ
ಟಳವಸ್ತ್ರಂ ತೆರೆಯಾದವೋಲ್ ಮೆಱೆದುದಾಪೂರ್ವಾಶೆ ನುಣ್ಗೆಂಪಿನಿಂ ೧೨೭

ನಗೆಯಂ ಪಂಕಜವಕ್ತ್ರದೊಳ್ ದುಗುಡಮಂ ನೈದಿಲ್ಗಳೊಳ್ ಲಲ್ಲೆಯು
ಪ್ಪಗೆಯಂ ಕೋಕಯುಗಂಗಳೊಳ್ ಪದೆಪಿನಿಂ ಕಣ್ಬೇನೆಯಂ ಗೂಗೆಯೊಳ್
ಸೊಗಸಂ ದಿಕ್ತಟದೊಳ್ ಪೊದಟ್ಟ ಭಯಮಂ ಜಾರಾಂಗನಾನೀಕದೊಳ್
ಮಿಗೆ ಮಾಡುತ್ತುದಯಾದ್ರಿಯೊಳ್ ನೆಲಸಿದಂ ಪಂಕೇಜಿನೀವಲ್ಲಭಂ ೧೨೮

ಪಟ್ಟಣಕ್ಕೆ ಕಳುಹಿಸಿದೆನು. ಉಳಿದವರು ಬಲಗುಂದಿ ಓಡಿ ಹೋದರು. ವ॥ ಅರಮನೆಯ ಆನೆಯು ಉಕ್ಕಿದ ಮದದಿಂದ ಕೊಲ್ಲುತ್ತಿದೆಯೆಂದು ಹೆದರಿ ಹಾಗೆ ಉಳಿದವರೆಲ್ಲರೂ ಓಡಿಹೋದರು. ಬಳಿಕ ೧೨೬. ಸಮರ್ಥನೆನಿಸಿದ ಅರ್ಥಪತಿಯ ಮನೆಯನ್ನು ಆ ಗಜರಾಜನಿಂದ ಸಲೀಸಾಗಿ ನುಗ್ಗುನುರಿ ಮಾಡಿಸಿದೆನು. ಅಲ್ಲಿಂದ ಹೊರಟು ಮುಂದೆ ಒಂದು ಸುಂದರವಾದ ವಿಶಾಲವಾದ ಮರವನ್ನು ಕಂಡೆನು. ವ॥ ಆ ಮರದ ಕಡೆ ಆನೆಯನ್ನು ನೂಕಿ ಮರದ ಮೇಲಿನ ಕೊಂಬೆಯನ್ನು ಹಿಡಿದುಕೊಂಡು ಆ ಆನೆಯನ್ನು ಬಿಟ್ಟು ಬಿಟ್ಟೆನು. ಅದು ಬೇರೆ ಕಡೆಗೆ ಹೊರಟು ಹೋಯಿತು. ನಾನೂ ಧನ ಮಿತ್ರನೂ ಬಳಿಕ ಆ ಮರದಿಂದ ಇಳಿದೆವು. ಆಗ—೧೨೭. ರವಿಯೆಂಬ ನಟನು ಹೊರ ಬಂದು ಆಡಿದನು. ಆಗ ದುಂಬಿಗಳು ಹಾಡಿದುವು. ಕಮಲಿನಿಯು ನಗುತ್ತ ನೋಡುತ್ತಿತ್ತು. ಜಾರಸ್ತ್ರೀಯರು ಕೂಡಲೇ ಬೆಳಗಾಯಿತೆಂದು ಬೆಚ್ಚಿದರು ! ಚಕ್ರವಾಕಗಳ ಜೋಡಿಯು ಪರಸ್ಪರ ಕೂಡಿಕೊಂಡುವು. ದಕ್ಷಿಣಮಾರುತವು (ತೆಂಗಾಳಿ) ಕಳಿತ ಹೂಗಳ ಪೂಜೆಯನ್ನು ನಡೆಯಿಸಿತು. ಕೆಂಪುಬಣ್ಣದ ಪೂರ್ವದಿಕ್ಕು ಕೆಂಪುಬಣ್ಣದ ವಸ್ತ್ರದಿಂದಾದ ತೆರೆಯ ಹಾಗೆ ಕಾಣಿಸಿತು. ೧೨೮. ಕಮಲಿನೀ ನಾಯಕನಾದ ಸೂರ್ಯನು ಉದಯಾದ್ರಿಯಲ್ಲಿ ಉದಯಿಸಿದನು. ಆಗ ಅವನು ಕಮಲದ ಮುಖದಲ್ಲಿ ನಗೆಯನ್ನು ಮೂಡಿಸಿದನು. ನೈದಿಲೆ ಹೂಗಳಿಗೆ ದುಃಖವನ್ನುಂಟುಮಾಡಿದನು. ಚಕ್ರವಾಕದ ಜೋಡಿಗಳು ಸಂತೋಷದಿಂದ ಪರಸ್ಪರ ತಬ್ಬಿಕೊಳ್ಳುವಂತೆ ಮಾಡಿದನು. ಗೂಬೆಗಳ ಕಂಗಳಿಗೆ ಬೇನೆಯನ್ನುಂಟುಮಾಡಿದನು. ದಿಗಂತಗಳಿಗೆ ಒಂದು ಅಂದವನ್ನುಂಟುಮಾಡಿದನು. ಜಾರೆಯರ ಗುಂಪಿನಲ್ಲಿ ಭಯ

ಕಂ॥ ಅಮೃತಕರಸಂಗಮಂ ಮಾ
ಡಿ ಮಗುೞ್ದಿಂತುಷ್ಣಕರಕೆ ಮೆಯ್ಯೊಡ್ಡುವೆನೆಂ
ಬಮಳಿನಸುಕುಮಾರತೆಯಿಂ
ಕುಮುದಿನಿ ತಲೆವಾಗಿ ದುಗುಡಮಂ ತಳೆದಿರ್ದಳ್ ೧೨೯

ವ॥ ಅಂತು ಸೂರ್ಯೋದಯಮಾಗಲೊಡಂ ಮನೆಗೆ ಪೋದೆಂ ಅತ್ತಲ್

ಕಂ॥ ಎನಸುಂ ಕುಬೇರದತ್ತನು
ಮನುತಾಪದಿನರ್ಥಪತಿಯುಮಿರ್ಬರ್ ತಂತ
ಮ್ಮ ನಿಕೇತನಂಗಳಂ ನೋ
ಡಿ ನೋಡಿ ಕಡುನೊಂದು ಚಿಂತೆಯೊಳ್ ಮುೞುಗಿರ್ದರ್ ೧೩೦

ವ॥ ಅಂತವರಿರ್ವರ್ ತಂತಮ್ಮ ಮನೆಯಾದವಸ್ಥೆಯಂ ಕಂಡಪಶಕುನವಾದುದೆಂದಾ ಲಗ್ನಮಂ ಬಿಟ್ಟು ಮತ್ತೊಂದು ಲಗ್ನದೊಳ್ ಮದುವೆಯಂ ಮಾೞ್ಪೆವೆಂದೊಂದು ತಿಂಗಳ್ ಅರ್ಥಪತಿಯ ಮದುವೆ ನಿಲಲಾನಿತ್ತಲ್

ಹುಸಿಯುಂ ವಂಚನೆಯುಂ ನಿರರ್ಥಕವನತ್ಯಾಶ್ಚರ್ಯಮಂ ನವ್ಯಸಾ
ಹಸಮಂ ಪೂರ್ಣದುರಾಶೆಯುಂ ಸಕಲಮಿಥ್ಯಾವಾದಮಂ ಕೂಡೆ ತಂ
ತ್ರಿಸಿದಂತೊಪ್ಪುವ ಚರ್ಮಭಸ್ತ್ರಿಕೆಯನೊಂದಂ ಚೆಂದಮಪ್ಪಂತು ನಿ
ರ್ಮಿಸಿದೆಂ ಲಕ್ಷಸುವರ್ಣಮಂ ಕಱೆವುದೆಂಬೀಸುದ್ದಿಯಂ ಬಿತ್ತಿದೆಂ ೧೩೧

ವನ್ನುಂಟುಮಾಡಿದನು. ೧೨೯. (ಚಂದ್ರನ) ಅಮೃತಮಯವಾದ ಕಿರಣಗಳ ಸಂಗದಿಂದ ಸುಖಿಸಿದ ನಾನೀಗ, (ಸೂರ್ಯನ) ಬಿಸಿಯಾದ ಕಿರಣಗಳಿಗೆ ಹೇಗೆ ತಾನೆ ಮೈಯೊಡ್ಡಲಿ ? ಎಂದು ಅತಿ ಸೌಕುಮಾರ್ಯವುಳ್ಳ ಕುಮುದಿನಿಯು ತಲೆಯನ್ನು ಬಗ್ಗಿಸಿಕೊಂಡು ದುಃಖದಲ್ಲಿ ಮುಳುಗಿದ್ದಳು. [ಸೂರ್ಯನ ಬಿಸಿಕಿರಣಗಳ ಕಾವಿನಿಂದ ನೈದಿಲೆಯು ಬಾಡಿ ಬಗ್ಗಿಕೊಂಡಿತು. ಮೊದಲು ಅಮೃತಮಯವಾದ ಚಂದ್ರನ ಕಿರಣಗಳ ಸುಖವನ್ನನುಭವಿಸಿ ಈಗ ಸೂರ್ಯನ ಬಿಸಿಕಿರಣಗಳ ಶಾಖವನ್ನು ಸುಕುಮಾರವಾದ ತಾನು ತಡೆಯಲಾರೆನಲ್ಲ ಎಂಬ ದುಃಖವನ್ನದು ತೋರಿಸಿತು.] ವ॥ ಹಾಗೆ ಸೂರ್ಯೋದಯವಾಗಲು ನಾನು ಮನೆಗೆ ಹೋದೆನು. ಅತ್ತ—೧೩೦. ಕುಬೇರದತ್ತನೂ ಅರ್ಥಪತಿಯೂ ಇಬ್ಬರೂ ತಮ್ಮ ತಮ್ಮ ಮನೆಗಳನ್ನು ನೋಡಿ ನೋಡಿ ತುಂಬ ದುಃಖಿಸಿ ಚಿಂತೆಯಲ್ಲಿ ಮುಳುಗಿದ್ದರು. ವ॥ ಹಾಗೆ ಅವರಿಬ್ಬರೂ ತಮ್ಮ ತಮ್ಮ ಮನೆಯ ಅವಸ್ಥೆಯನ್ನು ನೋಡಿ ಅಪಶಕುನವಾಯಿತೆಂದು ಆ ಲಗ್ನವನ್ನು ಬಿಟ್ಟರು. ಮತ್ತೊಂದು ಲಗ್ನದಲ್ಲಿ ಮದುವೆಯನ್ನು ಮಾಡುವುದೆಂದು ನಿಶ್ಚಯಿಸಿ ಅರ್ಥಪತಿಯ ಮದುವೆಯನ್ನು ಒಂದು ತಿಂಗಳ ಕಾಲ ನಿಲ್ಲಿಸಿದರು. ಆಗ ನಾನು ಇತ್ತ—೧೩೧. ಸುಳ್ಳು, ವಂಚನೆ, ನಿರರ್ಥಕತೆ, ಅತ್ಯಾಶ್ಚರ್ಯ, ನೂತನ ವಿಧವಾದ ಸಾಹಸ, ಅತಿಶಯವಾದ ದುರಾಶೆ, ಮಿಥ್ಯಾವಾದಗಳು-ಇವೆಲ್ಲವನ್ನೂ ಒಟ್ಟಿಗೆ ಸೇರಿಸಿ ಮಾಡಿದಂತೆ ತೋರುವ ಒಂದು ಸುಂದರವಾದ ಚರ್ಮದ

ವ॥ ಅಂತೊಂದು ತೊಗಲಚೀಲವಂ ನಿರ್ಮಿಸಿ ಧನಮಿತ್ರನಂ ಕರೆದು ನೀನೀ ಚಂಪಾವತಿಯ ಸಮೀಪಕ್ಕೆ ಪೋಗಿ ಚರ್ಮಭಸ್ತ್ರಿಕೆ ಬಂದ ಕ್ರಮಮಂ ತನ್ನ ಮಾಹಾತ್ಮ್ಯಮಂ ನಿನ್ನ ದರಿದ್ರಘನತೆಯುಂ ಬಾಯೆಂದೊಡಾನಿಂತೆಂದು ಪೇೞ್ದೆಂ

ಅನಿಶಂ ದುಃಖಮನೇಕಗೋಷ್ಠಿಯೊಳತಿದ್ವೇಷಂ ಮಹಾಪಾಪದೊಳ್
ಮನಮತ್ಯಾಶೆ ಕರಂ ಕ್ಷುಧಾಭಯಮನಾಚಾರಂ ಮತಿಭ್ರಾಂತಿ ಜೀ
ವನಚಿಂತಾತತಿ ನಿಚ್ಚ ಪೆರ್ಚಿದ ದರಿದ್ರಕ್ಕೆಯ್ದೆ ಬೇಸತ್ತು ಕಾ
ನನದೊಳ್ ಬೆಂದ ಶರೀರಮಂ ಕೊಳೆವೆನೆಂಬುದ್ಯೋಗದಿಂದೆಯ್ದಿದೆಂ ೧೩೨

ದಾರಿದ್ರ್ಯಂ ಪೆರ್ಚಿದ ಸಂ
ಸಾರಮಿದೇಕೆಂದು ಚಿತ್ರದುಮ್ಮಳದಿಂ ಕಾಂ
ತಾರಕ್ಕೆ ಪೋಗಿ ನಿಜತರ
ವಾರಿಯೊಳೊಲ್ದೆನ್ನ ಶಿರವನಾನಱಿವಾಗಳ್ ೧೩೩

ನಿಡುಜಡೆ ಕರ್ಣದೊಳ್ ಪಳಿಕಿನೊಪ್ಪುವ ಕುಂಡಲಮಂಗದೊಳ್ ನೆಯುಂ
ಬಡೆದ ವಿಭೂತಿ ಮೆಲ್ಲಗೆ ತುಳುಂಕುವ ಮುದ್ದುಮೊಗಂ ಕರಾಗ್ರದೊಳ್
ಪಿಡಿದ ವಿಪಂಚಿ ತನ್ನೊಳತಿಕೌತುಕಮಾಗಿರೆ ಭೋಂಕೆನಲ್ಲಿಗೊ
ಳ್ಪಡರ್ದಿರೆ ಬಂದನೊರ್ವ ನವಪಾಶುಪತಾಸ್ತ್ರಧಾರಿ ತಾಪಸಂ ೧೩೪

ಚೀಲವನ್ನು ನಿರ್ಮಿಸಿದೆನು. ಈ ಚೀಲವು ಒಂದುಲಕ್ಷ ಚಿನ್ನದ ನಾಣ್ಯಗಳನ್ನು ಕೊಡುತ್ತದೆ ಎಂಬ ಸುದ್ದಿಯನ್ನು ಹರಡಿದೆನು. ವ॥ ಹೀಗೆ ಒಂದು ತೊಗಲಿನ ಚೀಲವನ್ನು ನಿರ್ಮಿಸಿ ಧನಮಿತ್ರನನ್ನು ಕರೆದು ಹೇಳಿದೆನು. "ನೀನು ಚಂಪಾಪತಿಯ ಹತ್ತಿರಕ್ಕೆ ಹೋಗಿ ಈ ತೊಗಲ ಚೀಲವು ಬಂದ ರೀತಿಯನ್ನೂ ಅದರ ಮಾಹಾತ್ಮ್ಯವನ್ನೂ ನಿನ್ನ ಅತಿಶಯವಾದ ಬಡತನವನ್ನೂ (ಅಲ್ಲಿಯ ರಾಜನಿಗೆ*1) ಹೇಳಿ ಬಾ ಎಂದು ತಿಳಿಸಿ, ಅವನಿಗೆ ಈ ರೀತಿ ಹೇಳೆಂದು ಹೇಳಿ ಕೊಟ್ಟೆನು. ಏನೆಂದರೆ ೧೩೨. "ಯಾವಾಗಲೂ ದುಃಖ, ಅನೇಕ ಗುಂಪುಗಳೊಡನೆ ಅತಿದ್ವೇಷ, ಮಹಾ ಪಾಪಮಾಡಲು ಆಶಿಸುವ ಮನಸ್ಸು, ಅತಿಯಾದ ಆಶೆ, ಹೆಚ್ಚಾದ ಹಸಿವಿನ ಭಯ, ದುರಾಚಾರ, ಬುದ್ಧಿಭ್ರಾಂತಿ, ಜೀವಿಕೆಗಾಗಿ ವಿಶೇಷವಾದ ಚಿಂತೆ, ಹೆಚ್ಚಿದ ಬಡತನ.–ಇವುಗಳಿಂದ ಬೇಸತ್ತು ಕಾಡಿನಲ್ಲಿ ಬೆಂಕಿಯಲ್ಲಿ ಬಿದ್ದು ಸಾಯುವ ಪ್ರಯತ್ನದಿಂದ ಕಾಡಿಗೆ ಹೋದೆನು. ೧೩೩. 'ಮಿತಿ ಮೀರಿದ ಬಡತನವುಳ್ಳ ಈ ಸಂಸಾರವು ಬೇಡ' ಎಂದು ದುಃಖದಿಂದ ಕಾಡಿಗೆ ಹೋಗಿ ನನ್ನ ಕತ್ತಿಯಿಂದ ತಲೆಯನ್ನು ಕತ್ತರಿಸಿಕೊಳ್ಳಲು ಯತ್ನಿಸಿದಾಗ. ೧೩೪. ನೂತನವಾದ ಪಾಶುಪತಾಸ್ತ್ರವನ್ನು ಹಿಡಿದ ತಾಪಸನೊಬ್ಬನು ಅಲ್ಲಿಗೆ ಬಂದನು. ಅವನ ಜಡೆ ನೀಳವಾಗಿದ್ದಿತು, ಕಿವಿಗಳಲ್ಲಿ ಹೊಳೆಯುವ ಸ್ಫಟಿಕ ರತ್ನದ ಕುಂಡಲಗಳಿದ್ದುವು. ಮೈಗೆಲ್ಲ ನಯವಾಗಿ ವಿಭೂತಿಯನ್ನು ಹಚ್ಚಿಕೊಂಡಿದ್ದನು. ಮುದ್ದಾದ ಮುಖದಲ್ಲಿ ಮಂಸ

---

.1* ಈ ಮಾತಿನ ಅಧ್ಯಾಹಾರ ಇಲ್ಲಿ ಆವಶ್ಯಕ (ರಂ)

ವ॥ ಅಂತು ಬಂದಾತಪೋಧನನೆನ್ನಂ ಕಂಡು

ಕಂ॥ ಈ ಸಾಹಸಮಂ ಮಾಡಲ
ದೇಸುಂ ಮನವೇಕೆ ರಂಜಿಪಾತ್ಮದ್ರೋಹಾ
ಭ್ಯಾಸಮನೆಸಗುವೆ ಪೇೞಾ
ಶ್ವಾಸಿಸುವೆಂ ಪದೆದು ನಿನ್ನನೆಲೆ ದುರ್ಬೋಧಾ ೧೩೫

ವ॥ ಎಂದಾ ತಪೋಧನಂ ಪೇೞ್ದೊಡಾನಿಂತೆಂದೆಂ

ಕಂ॥ ಅತಿದಾರಿದ್ರ್ಯಂ ಮಾನ
ಚ್ಯುತಿ ದುಃಖಂ ಪೆರ್ಚಲೆನ್ನೊಳೀ ಜೀವನ ದು
ರ್ಗತಿಯಿಂ ಮರಣಂ ಸುಖಮೆಂ
ದತಿವೇಗದಿನಿಲ್ಲಿಗೆಯ್ದಿ ತೀರ್ದಪೆನೀಗಳ್ ೧೩೬

ವ॥ ಎಂಬುದುಂ

ಕಂ॥ ಬಿಡು ಮರುಳೆ ಮರಣವಾರ್ತೆಯ
ನೊಡವೆಯನೆಂತಾನುಮೊಂದುಪಾಯದಿನಿನಿತಂ
ಪಡೆಯಲ್ಬರ್ಕುಂ ಮರಣಂ
ಬಡೆಯಲ್ಬರ್ಕುಮೆ ನೆಗೞ್ದುಪಾಯಕ್ರಮದಿಂ ೧೩೭

ಹಾಸವು ಉಕ್ಕುತ್ತಿತ್ತು. ಕೈಗಳಲ್ಲಿ ವೀಣೆಯನ್ನು ಹಿಡಿದಿದ್ದನು. ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಇದಕ್ಕಿದ್ದ ಹಾಗೆ ಆ ಸಾಧುಸ್ವಭಾವದವನು ಅಲ್ಲಿಗೆ ಬಂದನು. ವ॥ ಹಾಗೆ ಬಂದ ಆ ತಪಸ್ವಿಯು ನನ್ನನ್ನು ನೋಡಿ—೧೩೫. "ಈ ಸಾಹಸ ಕೃತ್ಯವನ್ನೆಸಗಲು ಏಕೆ ಮನಸ್ಸು ಮಾಡಿದ್ದೀಯೆ ? ನೋಡಲು ಮಾತ್ರ ಚೆನ್ನಾಗಿ ಕಾಣಿಸುವ ಈ ಆತ್ಮದ್ರೋಹವನ್ನು ಏಕೆ ಅಭ್ಯಾಸ ಮಾಡುತ್ತಿದ್ದೀಯೆ ? ಹೇಳು. ಎಲೈ ಬುದ್ಧಿಗೇಡಿ, ನಿನಗೆ ನಾನು ಆಶ್ವಾಸನೆಯನ್ನು ಕೊಡುತ್ತೇನೆ. ಹೆದರದೆ ಹೇಳು." ವ॥ ಎಂದು ಆ ತಪಸ್ವಿಯು ನುಡಿಯಲು ನಾನು ಹೀಗೆ ಹೇಳಿದೆನು—೧೩೬. ಮಿತಿಮೀರಿದ ಬಡತನ ಮತ್ತು ಮಾನಹಾನಿಯಿಂದ ನನ್ನ ದುಃಖವು ಹೆಚ್ಚಿತು. ಈ ಬಾಳಿನ ದುರ್ಗತಿಗಿಂತ ಸಾವು ಉತ್ತಮ, ಅದೇ ಸುಖ ಎಂದು ಯೋಚಿಸಿ ಇಲ್ಲಿಗೆ ಬಂದು ಈಗ ಅದನ್ನೇ ಮಾಡಲು ಯತ್ನಿಸಿದ್ದೇನೆ." ವ॥ ಎಂದು ಹೇಳಲು ೧೩೭. "ಮರುಳನೆ, ಸಾವಿನ ಸುದ್ದಿಯನ್ನೆತ್ತಬೇಡ. ಐಶ್ವರ್ಯವನ್ನು ಯಾವುದಾದರೊಂದು ಉಪಾಯದಿಂದ ಹೊಂದಬಹುದು. ಹೀಗೆ ಪ್ರಯತ್ನ ಪೂರ್ವಕವಾಗಿ ಮರಣವನ್ನು ಪಡೆಯಬಹುದೇ !"

ವ॥ ಎಂಬುದುಮಾನಿಂತೆಂದೆಂ

ಕಂ॥ ಭಾವಿಸೆ ದರಿದ್ರನನಿಶಂ
ಸೇವಕನತಿ ಮೂರ್ಖನಪ್ರವಾಸಿ ಮಹಾರೋ
ಗಾವಿಷ್ಟನೆಂಬ ಮನುಜಂ
ಜೀವನ್ಮೃತನಲ್ತೆ ದೇವ ನೀವಱಿಯದುದೇ ೧೩೮

ವ॥ ಎಂಬುದುಮಾತಪೋಧನನೆನಗೆ ಕರುಣಿಸಿ

ಕಂ॥ ಅಕ್ಷಯನಿಧಿಯೆನಲೊಪ್ಪಿರೆ
ಲಕ್ಷಸುವರ್ಣಪ್ರವಾಹಮಂ ಕಱೆವುದಿದಂ
ರಕ್ಷಿಸಿಕೊಳ್ಳೆಂದಿತ್ತಂ ಮು
ಮುಕ್ಷುವರಂ ಚರ್ಮಭಸ್ತ್ರಿಕಾಖ್ಯಮನೊಂದಂ ೧೩೯

ಕುಡೆನನ್ಯರ್ಗಾಂ ತಪದಿಂ
ಪಡೆದೆಂ ನಾಂ ಪೂರ್ವಕಾಮದೇಶದೊಳೊಲವಿಂ
ಮೃಡನ ವರದಿಂದೆ ನಿನ್ನೀ
ಬಡತನಮಂ ಕಂಡು ಕೊಟ್ಟೆನಿಲ್ಲದೊಡೀಯೆಂ ೧೪೦

ವ॥ ಎಂದು ಲಕ್ಷಸುವರ್ಣಮಂ ಕಱೆವ ಚರ್ಮಭಸ್ತ್ರಿಕೆಯಂ ಕೊಟ್ಟು ಮತ್ತಮಿಂತೆಂದಂ

ವ॥ ಎಂದು ಹೇಳಲು ನಾನು ಹೀಗೆ ಹೇಳಿದೆನು.—೧೩೮. "ವಿಚಾರ ಮಾಡಿದರೆ ಕಡು ಬಡವ. ಸದಾಸೇವಕ, ಅತಿಮೂರ್ಖ, ಪ್ರವಾಸ ಮಾಡದವನು ? (ಚಿರಪ್ರವಾಸಿಯೆಂಬ ಪಾಠಾಂತರವುಂಟು) ಮಹಾರೋಗಿ, ಇಂಥ ಮನುಷ್ಯರು ಬದುಕಿದ್ದರೂ ಸತ್ತ ಹಾಗೆಯೇ ಅಲ್ಲವೇ ? ಸ್ವಾಮಿ ! ನಿಮಗೆ ಈ ವಿಷಯ ತಿಳಿಯದೇ ?" ವ॥ ಎಂದು ಹೇಳಲು ಈ ತಪೋಧನನು ನನ್ನ ಮೇಲೆ ಕರುಣೆದೋರಿ—೧೩೯. ಇದು ಅಕ್ಷಯವಾದ ನಿಧಿಯಾಗಿದೆ. ಇದು ಲಕ್ಷ ಚಿನ್ನದ ನಾಣ್ಯಗಳನ್ನು ಕರೆಯುವುದು. ಇದನ್ನು ಭದ್ರವಾಗಿ ಕಾಪಾಡಿಕೋ ಎಂದು ಹೇಳಿ ಆ ಮುನಿಶ್ರೇಷ್ಠನು ಒಂದು ತೊಗಲಿನ ಚೀಲವನ್ನು ಕೊಟ್ಟನು. ೧೪೦. ಅಲ್ಲದೆ ಆ ತಪಸ್ವಿಯು "ನಾನಿದನ್ನು ಬೇರೆಯವರಿಗೆ ಕೊಡುವುದಿಲ್ಲ. ಪೂರ್ವಕಾಮ ದೇಶದಲ್ಲಿ ತಪಸ್ಸುಮಾಡಿ ಶಿವನ ವರದಿಂದ ಇದನ್ನು ಪಡೆದೆನು. ನಿನ್ನ ಈ ಭಯಂಕರವಾದ ಬಡತನವನ್ನು ನೋಡಿ ನಿನಗೆ ದಯೆಯಿಂದ ಕೊಟ್ಟಿದ್ದೇನೆ. ಹಾಗಿಲ್ಲದಿದ್ದರೆ ಕೊಡುತ್ತಿರಲಿಲ್ಲ." ವ॥ ಎಂದು ಹೇಳಿ ಲಕ್ಷ ಚಿನ್ನದ ನಾಣ್ಯಗಳನ್ನು ಕರೆಯುವ

ಕಂ॥ ಇದಱ ವಿಧಾನಂ ವೇಶ್ಯಾ
ಸುದತಿಯರ್ಗೆ ವಣಿಗ್ವರರ್ಗೆ ಕಱೆವುದು ಮಿಕ್ಕ
ರ್ಗಿದು ಕಾಣೆಯರ್ಥವಂ ಕಱೆ
ಯದೆಂದು ಮುನಿನಾಥನುಸಿರ್ದು ಮತ್ತಿಂತೆಂದಂ ೧೪೧

ಮುನ್ನಾವನರ್ಥಮಂ ಮುಳಿ
ದನ್ನಯದಿಂ ಕೊಂಡೊಡವರೊಳಾಧನಮಂ ಪೆಂ
ಪಿಂ ನಯದಿಂದೀವುದು ಮಿಗೆ
ತನ್ನರ್ಥಮನೀವುದಾಗಳಧನರ್ಗೊಲವಿಂ ೧೪೨

ವ॥ ಎಂದು ಪೇೞ್ದು

ಕಂ॥ ಆ ತಾಪಸಂ ಬೞಿಕ್ಕಂ
ಪಾತಾಳಸ್ವರ್ಗಭೋಗಮಂ ಭೋಗಿಸಲೆಂ
ದಾತಂ ಬಿಲದೊಳಗಿೞಿದಂ
ಭೂತಳಪತಿಕೇಳ್ ಪ್ರಸಾದದಿಂದಿನ್ನೊಂದಂ ೧೪೩

ವ॥ ಅದೇನೆಂದರಸಂ ಕೇಳ್ವುದುಂ

ವಸುಧೇಶ ಚರ್ಮರತ್ನದ
ದೆಸೆಯಿಂದೀವರ ಪುರಾಂತದೊಳ್ ಪದೆಪಿಂ ಜೀ
ವಿಸಿದಪೆನದಱಕ್ಷೇಮಂ
ನಿಸದಂ ನಿಮ್ಮಡಿಯದೆಂದು ಪೇೞ್ ಪೋಗೆಂದೆಂ ೧೪೪

ತೊಗಲಿನ ಚೀಲವನ್ನು ನನಗೆ ಕೊಟ್ಟನು. ಮತ್ತೆ ಹೀಗೆ ಹೇಳಿದನು. ೧೪೧. "ವೇಶ್ಯಾ ಸ್ತ್ರೀಯರಿಗೂ ಶ್ರೇಷ್ಠರಾದ ವೈಶ್ಯರಿಗೂ ಮಾತ್ರ ಇದು ಚಿನ್ನದ ನಾಣ್ಯಗಳನ್ನು ಕರೆಯುವುದು. ಉಳಿದವರಿಗೆ ಇದು ಒಂದು ಕಾಸಿನಷ್ಟೂ ಹಣವನ್ನು ಕೊಡದು. ಇದು ಈ ಚೀಲದ ವಿಧಾನ" ಎಂದು ಮುನಿನಾಥನು ಹೇಳಿದನು. ಮತ್ತೆ ಹೀಗೆ ಹೇಳಿದನು. ೧೪೨. "ಮೊದಲು ಯಾರದಾದರೂ ಹಣವನ್ನು ಕೋಪದಿಂದ ಅಥವಾ ಅನ್ಯಾಯದಿಂದ ತೆಗೆದುಕೊಂಡಿದ್ದರೆ, ಅವರಿಗೆ ಆ ಹಣವನ್ನು ಔದಾರ್ಯದಿಂದ ವಿನಯದಿಂದ ಹಿಂದಿರುಗಿಸಬೇಕು. ಮತ್ತು ಬಡವರಿಗೆ ಪ್ರೀತಿಯಿಂದ ನಿನ್ನ ಹಣವನ್ನು ದಾನ ಮಾಡಬೇಕು." ವ॥ ಎಂದು ಹೇಳಿ, ೧೪೩. ಆ ತಾಪಸನು ಪಾತಾಳ ಸ್ವರ್ಗದ ಸುಖಗಳನ್ನು ಅನುಭವಿಸುವುದಕ್ಕಾಗಿ ಬಿಲದಲ್ಲಿ ಇಳಿದನು. ಮಹಾರಾಜನೆ, ಆಗ ಆತನು ನನ್ನ ಮೇಲಿನ ಅನುಗ್ರಹದಿಂದ ಇನ್ನೊಂದು ಮಾತನ್ನು ಹೇಳಿದನು." ಎಂದು ತಿಳಿಸಲು ವ॥ 'ಅದೇನು' ಎಂದು ಅರಸನು ಕೇಳುತ್ತಾನೆ. ಆಗ ೧೪೪. "'ಮಹಾರಾಜನೆ ! ಈ ಶ್ರೇಷ್ಠವಾದ ತೊಗಲಿನ ಚೀಲದ ದೆಸೆಯಿಂದ ಈ ಮಹಾನಗರದ ಪಕ್ಕದಲ್ಲಿ ಸುಖವಾಗಿ ಜೀವಿಸುತ್ತಿದ್ದೇನೆ. ಇದರ ರಕ್ಷಣೆಯು ನಿಜವಾಗಿ ನಿಮ್ಮ ಪಾದಗಳಿಗೆ ಸೇರಿದುದು' ಎಂದು

ವ॥ ಎಂದೊಡಾತನುಮಂತೆಪೋಗಿ

ಕಂ॥ ಜನಪತಿಗೆ ತತ್ಪ್ರಪಂಚಮ
ನನಿತಂ ಧನಮಿತ್ರನೊಲ್ದು ಪೇೞಲ್ಕೇಳ್ದು
ತನದರ್ಕೆ ಕೂರ್ತುಂ ಕರುಣಿಸಿ
ನಿನಗತಿಸುಖಮಪ್ಪತೆಱದಿನಿರು ಪೋಗೆಂದಂ ೧೪೫

ವ॥ ಅಂತರಸನಿಂ ಧನಮಿತ್ರಂ ಬೀೞ್ಕೊಂಡು ಬಂದು ಕಾರ್ಯದ ಪದನನೆನ್ನೊಳ್ ಪೇೞಲನಂತರಂ

ಕಂ॥ ಭರದಿಂ ವಿಮರ್ದಕನನಾ
ದರದಿಂದೊಲ್ದರ್ಥಪತಿಯನೋಲಗಿಸೆಂದಿ
ಲ್ಲಿರಿಸಿದೆನುತ್ಸವದಿಂ ನಿ
ರ್ಭರಬಂಧುರ ಮಂತ್ರಭಿನ್ನವಾಗದ ತೆಱದಿಂ ೧೪೬

ವ॥ ಅಂತೆನಗೆ ಜೂಜಿಂ ಮಿತ್ರನಾದ ವಿಮರ್ದಕನರ್ಥಪತಿಯನೋಲಗಿಸಿರ್ದು ಧನಮಿತ್ರನೊಳ್ ಟಕ್ಕಿನ ಜಗಳವನಂದಂದಿಂಗೆಸಗೆಂದು ಪೇೞ್ದು ಬೞಿಯಂ

ಕಂ॥ ಸಕಳ ನಿಶೀಥಿನಿಯೊಳ್ ಲು
ಬ್ಧಕನಿಕರದ ಮನೆಯ ಧನಮನನಿತಂಮಲಮ
ಲ್ಲಕಶೇಪನಾಗಿ ನಾಂ ನಿ
ಚ್ಚಕನ್ನಗಳನಿಕ್ಕಿ ಕಳಲೊಡರ್ಚಿದೆನರಸಾ ೧೪೭

ಹೇಳು, ಹೋಗು" (ಎಂದು ನಾನು ಹೇಳಿದೆನು.) ವ॥ ಎಂದು ಹೇಳಲು ಧನಮಿತ್ರನು ಹಾಗೆಯೇ ಹೋಗಿ—೧೪೫. ಮಹಾರಾಜನಿಗೆ ಆ ವಿಷಯಗಳನ್ನೆಲ್ಲ ಪ್ರೀತಿಯಿಂದ ಹೇಳಿದನು. ಅದನ್ನು ಕೇಳಿ ರಾಜನು ಸ್ನೇಹ ಮತ್ತು ಕರುಣೆಯಿಂದ 'ಹಾಗೆಯೇ ಆಗಲಿ ! ನಿನಗೆ ಅತಿಯಾದ ಸುಖವುಂಟಾಗುವಂತೆ ಇರು ಹೋಗು' ಎಂದು ಹೇಳಿದನು. ವ॥ ಹಾಗೆ ಧನಮಿತ್ರನು ಅರಸನ ಅಪ್ಪಣೆ ಪಡೆದು ಹೊರಟು ಬಂದನು ಮತ್ತು ತಾನು ಮಾಡಿದ ಕೆಲಸದ ವಿವರವನ್ನು ನನಗೆ ತಿಳಿಯಿಸಿದನು. ಅನಂತರ—೧೪೬. ಕೂಡಲೆ ವಿಮರ್ದಕನನ್ನು 'ಆದರದಿಂದ ಅರ್ಥಪತಿಯ ಸೇವೆಯನ್ನು ಮಾಡು' ಎಂದು ಹೇಳಿ ಇಲ್ಲಿ ಇರಿಸಿದೆನು. ಈ ಸಂತೋಷದಲ್ಲಿ ಮಂತ್ರಾಲೋಚನೆಯು ಗುಟ್ಟುರಟ್ಟಾಗದಂತೆ ನೋಡಿಕೊಂಡೆನು. ವ॥ ನನಗೆ ಜೂಜಿನಿಂದ ಗೆಳೆಯನಾದ ವಿಮರ್ದಕನಿಗೆ 'ನೀನು ಅರ್ಥಪತಿಯ ಸೇವೆಯನ್ನು ಮಾಡುತ್ತಾ ದಿನದಿನವೂ ಆಗಾಗ ಧನಮಿತ್ರನೊಡನೆ ಸುಳ್ಳು ಸುಳ್ಳಾಗಿ ಜಗಳವನ್ನು ಮಾಡು' ಎಂದು ಹೇಳಿದೆನು. ಬಳಿಕ—೧೪೭. ಅರಸನೆ ! ಅಂದಿನಿಂದ ದಿನವೂ ಅರ್ಧರಾತ್ರಿಯಲ್ಲಿ ನಾನು ಲಂಗೋಟಿಯನ್ನು ಮಾತ್ರ ಧರಿಸಿ ಆ ಊರಿನ

ವ॥ ಅದೆಂತನೆ

ಮನೆಯುವರೆಲ್ಲರುಂಡೊಱಗಿ ನಿದ್ರೆಯ ಸೊರ್ಕಿಡೆಗೋಡೆರೆಂಬುದಂ
ಮನದನುರಾಗದಿಂದಱಿತು ಭಿತ್ತಿಗೆ ಸೂತ್ರಮನಿಕ್ಕಿನೋಡಿ ಭಾ
ಜನ ನವ ವಸ್ತ್ರವೀಯೆಡೆಯೊಳಿರ್ಪುದು ತಪ್ಪದೆನುತ್ತೆ ಪನ್ನಗಾ
ನನದೊಳೆ ಕನ್ನಮಂಪವೆದು ಲುಬ್ಧಕರರ್ಥವನೆಯ್ದೆ ತೀರ್ಚಿದೆಂ ೧೪೮

ವ॥ ಅಂತು ಕಳ್ದು ಚರ್ಮಭಸ್ತ್ರಿಕ್ಕೆ ಕಱಿವುದೆಂಬ ನೆವದಿಂ ಬೇಟ್ಪರ್ಥವನಾರ್ಜಿಸಿ ಬೀಯುಂಗೆಯ್ದು ಧನಮಿತ್ರಕುಮಾರಂ ಸುಖದಿನಿರೆ

ಕಂ॥ ಎನ್ನೊಳ್ ಬೇಟ್ಪನಿತರ್ಥವ
ನುನ್ನತಿಯಿಂ ಪಡೆದು ಧನಿಕರಾದರ್ಥಿಗಳಿಂ
ಖಿನ್ನಮುಖರಾಗಿ ಬಂದೆರೆ
ವನ್ನರೆನಲ್ ಪುರದೊಳೆಸಗಿದೆಂ ಲುಬ್ಧಕರಂ ೧೪೯

ವ॥ ಅಂತು ಪುರದ ಲುಬ್ಧಕರ ಮನೆಯಂ ಕವರ್ದೊಂದುದಿನಮಾ ಕಳ್ದಪಟ್ಟಣದ ವಿಭವಮಂ ನೋಡಲೆಂದು ಧನಮಿತ್ರಂಬೆರಸಂಗಡಿಗೇರಿಯೊಳ್ ಬರ್ಪಾಗಳ್

ಕಂ॥ ಕಂಡಾವಿಮರ್ದಕಂ ಮಿಗೆ
ಮಿಂಡಿನೊಳಿರ್ದರ್ಥಪತಿಯ ಪಕ್ಷದೊಳವನು
ದ್ದಂಡತೆಯಿಂ ಧನಮಿತ್ರ ನ
ನಂಡಲೆಯುತ್ತಿರದೆ ಬೈದನೆಲ್ಲರ್ ಕೇಳಲ್ ೧೫೦

ಜಿಪುಣರೆಲ್ಲರ ಮನೆಯ ಹಣವನ್ನೆಲ್ಲ ಕನ್ನವಿಕ್ಕಿ ಕದಿಯತೊಡಗಿದೆನು ವ॥ ಅದು ಹೇಗೆಂದರೆ–೧೪೮. ಮನೆಯುವರೆಲ್ಲರೂ ಊಟ ಮಾಡಿ ಗಾಢ ನಿದ್ರೆಯಲ್ಲಿದ್ದಾರೆಂಬುದನ್ನು ಎಚ್ಚರಿಕೆಯಿಂದ ತಿಳಿದುಕೊಳ್ಳುತ್ತಿದ್ದೆನು. ಗೋಡೆಗೆ ದಾರವನ್ನಿಟ್ಟು ನೋಡಿ ಪಾತ್ರೆ ಗಳು ನೂತನ ವಸ್ತ್ರಗಳು ಇಂಥ ಕಡೆಯೇ ತಪ್ಪದೆ ಇವೆ ಎಂದು ಊಹಿಸುತ್ತಿದ್ದೆನು. ಅನಂತರ ಹಾವಿನ ಹೆಡೆಯ ಆಕಾರದ ಆಯುಧದಿಂದ ಕನ್ನಕೊರೆದು ಜಿಪುಣರ ಹಣವನ್ನೆಲ್ಲ ಕದಿಯುತ್ತಿದ್ದೆನು. ವ॥ ಹಾಗೆ ಕದ್ದು ತೊಗಲಚೀಲ ಕೊಡುತ್ತದೆ ಎಂದು ನೆವ ಹೇಳಿ ಬೇಕಾದಷ್ಟು ಹಣವನ್ನು ಸಂಪಾದಿಸಿದೆನು. ಅದನ್ನು ವೆಚ್ಚಮಾಡುತ್ತಾ ಧನಮಿತ್ರನು ಸುಖದಿಂದಿದ್ದನು. ೧೪೯. ಆ ಪುರದಲ್ಲಿ ನನ್ನಿಂದ ಬೇಡಿದಷ್ಟು ಹಣವನ್ನು ಪಡೆದು ಯಾಚಕರು ಧನಿಕರಾದರು, ಮತ್ತು ಜಿಪುಣರು ದುಃಖ ಬೆರೆತ ಮುಖದಿಂದ ಬಂದು ಅವರ ಮುಂದೆ ಯಾಚಕರಾಗುವಂತೆ ಮಾಡಿದೆನು. ವ॥ ಹೀಗೆ ಆ ಪುರದ ಜಿಪುಣರ ಮನೆಗಳನ್ನೆಲ್ಲ ಕದ್ದು ದೋಚಿದೆನು. ಒಂದು ದಿನ ತಾನು ಕಳವು ಮಾಡಿದ ಆ ನಗರದ ವೈಭವವನ್ನು ನೋಡಬೇಕೆಂದು ಧನಮಿತ್ರನೊಡನೆ ಅಂಗಡಿ ಬೀದಿಯಲ್ಲಿ ಬರುತ್ತಿದ್ದೆ. ಆಗ ೧೫೦. ನನ್ನನ್ನು ಕಂಡು ವಿಮರ್ದಕನು ಅತ್ಯುನ್ನತಿಯಲ್ಲಿದ್ದ (ಅಹಂಕಾರದಿಂದ ಬೀಗಿದ) ಅರ್ಥಪತಿಯ ಪಕ್ಷವನ್ನು ವಹಿಸಿಕೊಂಡು ಒರಟುತನದಿಂದ ಧನಮಿತ್ರನನ್ನು ಕಾಡುತ್ತಾ

ವ॥ ಅದೆಂತೆನೆ

ಅಕಟ ಕುಬೇರದತ್ತನಮಗಳ್ಗೆನಿತಾಟಿಸಿ ಕೆಟ್ಟುಪೋಗದಿರ್
ವಿಕಳಮನಸ್ಕನಾಗಿ ಧನಮಿತ್ರ ನೆಗಟ್ತೆಯ ನಿನ್ನ ಚರ್ಮಭ
ಸ್ತ್ರಿಕೆಯತಿಗರ್ವಮಂ ನಿಲಿಸುವೆಂ ಮುಳಿದೊಂದಿರುಳಿರ್ದೆನಾದೊಡಂ
ಜಿಕೆ ನಿನಗಾಗಲೆಂದುಸಿರ್ವೆನಲ್ತಿದು ಸತ್ಯಮೆನಲ್ಕೆ ಮಾಡುವೆಂ ೧೫೧

ವ॥ ಎಂದಾವಿಮರ್ದಕಂ ಧನಮಿತ್ರನಂ ಜರೆದೊಡಾಧನಮಿತ್ರನದೆ ಕೋಪದೊಳ ನ್ಯಾಯದೊಳೆನ್ನಂ ಬೈದಪನೆಂದಿಲ್ಲಿಗೆ ಪೇಟ್ಟೊಡಾವಿಮರ್ದಕಂ ಮಗುಟ್ದಿಂತೆಂದಂ

ಅನ್ಯಾಯಮಲ್ತೆ ಮತ್ಪತಿ
ಮಾನ್ಯಂ ಮತ್ತಾತನೊಲ್ದು ಕೂಡುವ ಸತಿಯಂ
ನೀಂ ನ್ಯಾಯವಿದನವೋಲ್ ತ
ತ್ಕನ್ಯೆಯಂ ಕೂರ್ತು ಮದುವೆಯಪ್ಪೆ ಗಡೀಗಳ್ ೧೫೨

ವ॥ ಎಂದು ವಿಮರ್ದಕಂ ಧಿಕ್ಕರಿಸಿದೊಡಂ ಕೇಳ್ದು ಕೇಳದಂತಾವಿರ್ಬರುಂ ಪೋಪಾಗಳಂತಂಗಡಿಗೇರಿಯೊಳ್ ಮುಂದೆ

ನಯನ ಸುಖಾವಹಂ ದಲೆನಿಪಂಗಡಿಗೇರಿಯೊಳಲ್ಲಿಗಲ್ಲಿ ವಿ
ಸ್ಮಯಮನೊಡರ್ಚುವಗ್ಗಳದ ಗಾಯಕಪಾಠಕ ಸತ್ಕವೀಂದ್ರಸಂ
ಚಯಮನೊಲ್ದು ನೋಡುತೊಲವಿಂ ಬರಲೊಪ್ಪುವ ಪಂಚವೀರಗೋ
ಷ್ಠಿಯೊಳನುರಾಗದಿಂ ಪಡೆದು ನರ್ತಿಸುತಿರ್ದಳದೊರ್ವಳುರ್ವಿಪಾ ೧೫೩

ಎಲ್ಲರೂ ಕೇಳುವಂತೆ ಅವನನ್ನು ಬೈದನು. ವ॥ ಅದು ಹೇಗೆಂದರೆ ೧೫೧. "ಧನಮಿತ್ರ ! ಅಕಟ ! ಕುಬೇರದತ್ತನ ಮಗಳಿಗೆ ಆಸೆಪಟ್ಟು ಮನಸ್ಸು ಕೆಡಿಸಿಕೊಂಡು ಕೆಟ್ಟು ಹೋಗಬೇಡ. ನಿನ್ನ ಹೆಸರುವಾಸಿಯಾದ ತೊಗಲಿನ ಚೀಲದ ದೆಸೆಯಿಂದುಂಟಾಗಿರುವ ಗರ್ವವನ್ನು, ನಾನು ಕೋಪಿಸಿದರೆ ಒಂದು ರಾತ್ರಿಯಲ್ಲಿ ಇಳಿಸುವೆನು. ನಿನಗೆ ಹೆದರಿಕೆಯುಂಟುಮಾಡುವುದಕ್ಕಾಗಿ ನಾನು ಈ ಮಾತನ್ನು ಹೇಳುತ್ತಿಲ್ಲ. ಅದನ್ನು ನಿಜಮಾಡಿ ತೋರಿಸುವೆನು". ವ॥ ಎಂದು ಆ ವಿಮರ್ದಕನು ಧನಮಿತ್ರನನ್ನು ಜರೆದನು. ಆಗ ಆ ಧನಮಿತ್ರನು ಕೋಪಿಸಿಕೊಂಡು 'ಅನ್ಯಾಯವಾಗಿ ಬೈಯ್ಯುತ್ತಿದ್ದಾನೆ' ಎಂದು ನನ್ನ ಕಡೆ ತಿರುಗಿ ಹೇಳಿದನು. ಆ ವಿಮರ್ದಕನು ಮತ್ತೆ ಹೇಳಿದನು ೧೫೨. "ಅನ್ಯಾಯವಲ್ಲವೇ ? ನನ್ನೊಡೆಯನು ಗೌರವಸ್ಥನು. ಆತನು ಪ್ರೀತಿಸಿ ಮದುವೆ ಮಾಡಿಕೊಳ್ಳುವ ಹೆಣ್ಣನ್ನು ನೀನೀಗ ಪ್ರೀತಿಸಿ ನ್ಯಾಯ ಬಲ್ಲವನಂತೆ ಮದುವೆಯಾಗಲು ಹೊರಟಿರುವೆಯಲ್ಲವೇ ?" ವ॥ ಎಂದು ವಿಮರ್ದಕನು ಧಿಕ್ಕರಿಸಿದುದನ್ನು ಕೇಳಿದರೂ ಕೇಳದಂತೆ ನಾವಿಬ್ಬರೂ ಅಂಗಡಿ ಬೀದಿಯಲ್ಲಿ ಹೋಗುತ್ತಿದ್ದೆವು. ಆಗ ಮುಂದೆ—೧೫೩. ಅಂಗಡಿ ಬೀದಿಯು ಕಂಗಳಿಗೆ ಆನಂದಕರವಾಗಿದ್ದಿತು. ಅಲ್ಲಲ್ಲಿ ಶ್ರೇಷ್ಠರಾದ ಗಾಯಕರೂ ಪಾಠಕರೂ ಸತ್ಕವೀಂದ್ರರೂ ಗುಂಪು ಗುಂಪಾಗಿ ಆಶ್ಚರ್ಯವನ್ನುಂಟುಮಾಡುತ್ತಿದ್ದರು. ಇವನ್ನೆಲ್ಲ

ಕಂ॥ ಮನಸಿಜನ ಮಂತ್ರದೇವತೆ
ಜನಚೇತಸ್ಸತ್ವವಿತ್ತಹಾರಿಣಿ ವಿಕಸ
ದ್ವನಜಮುಖಿ ಕಾಮಮಂಜರಿ
ಯನುಜೆ ಕಳಾವಂತೆ ರಾಗಮಂಜರಿಯೆಂಬಳ್ ೧೫೪

ವನಿತೆಯೊಳೊಪ್ಪುಗುಂ ಕಮಲ ಕುಂತಳಮದ್ರಿಸಮಾಕ್ಷಿಯಂಬರಾ
ಸನಮಿಭಕುಂಭದಂತವಸನಂ ಮಣಿಸತ್ಕುಚಮಿಂದುಮಧ್ಯಮ
ಬ್ಜನಿಭನಿತಂಬ ಮುದಭ್ರಮರ ಪಾದಮಲಕ್ತರಸಪ್ರಕಾಶಮೋ
ಹನರುಚಿಧಾತುವೃತ್ತ ತನುಕರ್ಕಶದಿಂದೆಸೆದಿರ್ಪ ಪಾಂಗಿನಿಂ ೧೫೫

ನೋಡುತ್ತಾ ಸಂತೋಷದಿಂದ ಬರುತ್ತಿರುವಾಗ ಜನರ ಸಭೆಯಲ್ಲಿ ಅನುರಾಗದಿಂದ ನರ್ತಿಸುತ್ತಿದ್ದವಳೊಬ್ಬಳನ್ನು ನೋಡಿದೆನು. ೧೫೪. ಅವಳು ಕಾಮಮಂಜರಿಯ ತಂಗಿ. ಕಲೆಯನ್ನರಿತ ರಾಗಮಂಜರಿ. ಅವಳು ಮನ್ಮಥನ ಮಂತ್ರದೇವತೆಯಾಗಿದ್ದಳು. ಜನರ ಮನಸ್ಸಿನ ಶಕ್ತಿಯೆಂಬ ಧನವನ್ನು ಅಪಹರಿಸುವವಳಾಗಿದ್ದಳು. ಅರಳಿದ ಕಮಲದಂತೆ ಅವಳ ಮುಖವಿತ್ತು. ೧೫೫, (ಈ ಪದ್ಯ ಒಗಟಿನಂತಿದ್ದು ಓದುಗರನ್ನು ಸ್ತಬ್ಧಗೊಳಿಸುತ್ತದೆ. ಇದರ ವಿವರಣೆ ಹೀಗೆ—ಈ ಪದ್ಯದಲ್ಲಿ ಎಂಟು ಉಪಮಾನಗಳೂ ಎಂಟು ಉಪಮೇಯಗಳೂ ಹೋಲಿಕೆಗೆ ಬೇಕಾದ ಎಂಟು ಸಾಧಾರಣ ಧರ್ಮಗಳೂ ಇವೆ. ಉಪಮಾನದ ಪಕ್ಕದಲ್ಲಿ ಉಪಮೇಯವಿಲ್ಲ. ಆದ್ದರಿಂದಲೇ ತೊಡಕು. ಕ್ರಮವಾಗಿ ಎಂಟು ಉಪಮಾನಗಳಿಗೆ ವ್ಯುತ್ಕ್ರಮದಿಂದ ಉಪಮೇಯಗಳನ್ನು ಸೇರಿಸಬೇಕು. ಆರೋಹಣ ಕ್ರಮದಿಂದ ಉಪಮಾನಗಳ ನಿರೂಪಣೆ. ಅವರೋಹಣ ಕ್ರಮದಿಂದ ಉಪಮೇಯಗಳ ನಿರೂಪಣೆ. ಒಂದನೆಯ ಉಪಮಾನಕ್ಕೆ ಎಂಟನೆಯ ಉಪಮೇಯ–ಹೀಗೆ ಸಾಮಾನ್ಯ ಧರ್ಮಗಳ ನಿರೂಪಣೆಯಲ್ಲಿ ಯಾವ ಕ್ರಮವೂ ಇಲ್ಲ. ಯಥೋಚಿತವಾಗಿ ಸೇರಿಸಬೇಕಾಗುತ್ತದೆ. ಹೇಗೆಂದರೆ) ೧. ಕಮಲದಂತೆ ಅಲಕ್ತ ರಸದಿಂದ ಕೂಡಿದ ಕೆಂಪಾದ (೮) ಪಾದ. ೨. ಅದ್ರಿಸಮವಾಗಿ ಧಾತುವೃತ್ತ (ಗೈರಿಕಧಾತುವಿನಿಂದ ಕೂಡಿದ ಮತ್ತು ರಕ್ತ ಮಾಂಸಾದಿಧಾತು)ಗಳಿಂದ ಕೂಡಿ, ವೃತ್ತ=ವರ್ತುಲವಾದ (೭) ನಿತಂಬ ೩. ಅಂಬರ (ಆಕಾಶ)ಕ್ಕೆ ಸದೃಶವಾಗಿ ಕಾಣದಂತೆ ತನು=ಕೃಶವಾದ (೬) ಮಧ್ಯ=ನಡು ೪. ಇಭಕುಂಭ (ಆನೆಯ ಕುಂಭಸ್ಥಳ)ದಂತೆ ಕರ್ಕಶವಾದ (೫) ಕುಚ ೫. (ಹವಳದ) ಮಣಿಯಂತೆ ಸತ್=ಸುಂದರವಾದ (೪) ದಂತವಸನ=ತುಟಿ ೬. ಇಂದುವಿನಂತೆ ಮೋಹನ=ಮೋಹಕವಾದ (೩) ಆನನ=ಮುಖ ೭. ಅಬ್ಜ (ಕಮಲ)ದಂತೆ ಪ್ರಕಾಶ

ಟಿಪ್ಪಣಿ :—ಮೂಲದಲ್ಲಿ ಕಮಶ ಎಂಬುದು ಅನನ್ವಿತವಾಗುವುದರಿಂದ 'ಕಮಲ' ಎಂದು ತಿದ್ದಿಕೊಂಡಿದೆ. (ರಂ)

ವ॥ ಅದಲ್ಲದೆಯುಂ

ಶಿರದಂದಂ ಪೊಸತಾಗೆ ಹಸ್ತವಲನಂ ಚೆಲ್ವಾಗೆ ಕಣ್ಚೆಲ್ಲಮ
ಚ್ಚರಿಯೆಂಬಂತಿರೆ ಪುರ್ಬಗುರ್ಬಿಸೆ ಪದನ್ಯಾಸಂ ರಸಾವಾಸಮಾ
ಗಿರೆ ನಾನಾಕರಣಂ ಕರಂ ಮೆಱೆಯೆ ಪೆಂಪಿಂದಂಗಹಾರಂ ಪೊದ
ಳ್ದಿರೆ ನೃತ್ಯಾಭಿನಯಕ್ಕದೇಂ ಮೆಱೆದಳೋ ತತ್ಕಾಂತೆ ರಂಗಾಗ್ರದೊಳ್ ೧೫೬

ಮನದನುರಾಗಮಂ ಮುಖವಿಳಾಸದೊಳಾಸ್ಯ ವಿಳಾಸಮಂ ವಿಲೋ
ಚನಯುಗದೊಳ್ ಸಿತಾಕ್ಷಿಗಳ ವಿಭ್ರಮಮಂ ಪದೆಪಿಂ ಶಿರೋಜ ಕಂ
ಪನದೊಳೆ ತಚ್ಛಿರೋವಿಧಮನೊಪ್ಪುವ ಹಸ್ತದೊಳಗ್ರಹಸ್ತ ಭಾ
ವನೆಯುಮನಲಂಪಿನಿಂ ಕರಣದೊಳ್ ಕಮಲಾನನೆ ತೋಱಿಯಾಡಿದಳ್ ೧೫೭

ಪದವಿನ್ಯಾಸವಿಳಾಸದಿಂ ತನುಲತಾವಿಕ್ಷೇಪದಿಂ ಲೋಚನಾ
ಗ್ರದ ಸನ್ನರ್ತನದಿಂ ಕಪೋಳರುಚಿಯಿಂ ಸುಭ್ರೂಳ ಡೋಳಾಯಿಯಿಂ
ಮೃದುಹಸ್ತಾಯುತದಿಂ ಲಸದ್ಭ್ರಮರಿಯಿಂ ಮೇಳಾಪದೊಳ್ಪಿಂ ತ್ರಿಭಂ
ಗದ ಸೊಂಪಿಂ ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ ೧೫೮

ಮಾನವಾದ (೨) ಅಕ್ಷಿ=ಕಣ್ಣು ೮. ಮದಭ್ರಮರ=ಮದಿಸಿದ ದುಂಬಿಯಂತೆ ರುಚಿ= ಕಾಂತಿಯುಳ್ಳ ಕುಂತಳ=ಮುಂಗುರುಳು ಇವು ಆ ವನಿತೆಯಲ್ಲಿ ಪ್ರಕಾಶಿಸುತ್ತವೆ. ವ॥ ಅದೂ ಅಲ್ಲದೆ ೧೫೬. ತಲೆಯನ್ನಲುಗಿಸುವ ರೀತಿಯು ಹೊಸದಾಗಿದ್ದಿತು. ಹಸ್ತಗಳ ಚಲನೆ ಸುಂದರವಾಗಿದ್ದಿತು. ಕಣ್ಣುಗಳನ್ನು ತಿರುಗಿಸುವುದು ಆಶ್ಚರ್ಯಕರವಾಗಿದ್ದಿತು. ಹುಬ್ಬುಗಳ ಕುಣಿತವು ಭಯವನ್ನುಂಟುಮಾಡುತ್ತಿತ್ತು. ಹೆಜ್ಜೆಗಳ ವಿನ್ಯಾಸವು ರಸದ ವಾಸಸ್ಥಾನವಾಗಿದ್ದಿತು. ವಿಧವಿಧವಾದ ಕರಣಗಳು (ನಾಟ್ಯಭೇದ) ಮನೋಹರವಾಗಿದ್ದುವು. ಅಂಗಹಾರಗಳು (ನಾಟ್ಯಭೇದ) ವಿಸ್ತಾರವಾಗಿ ಮೆರೆಯುತ್ತಿದ್ದುವು. ಹೀಗೆ ಆ ಕಾಂತೆಯು ರಂಗಭೂಮಿಯ ಮೇಲೆ ನೃತ್ಯಾಭಿನಯದಿಂದ ಮೆರೆದಳು. ೧೫೭. ಮನದ ಅನುರಾಗವನ್ನು ಮುಖ ವಿಲಾಸದಲ್ಲಿ, ಮುಖ ವಿಲಾಸವನ್ನು ಕಂಗಳೆರಡರಲ್ಲಿ, ಬೆಳ್ಗಣ್ಣುಗಳ ವಿಭ್ರಮವನ್ನು ಕೇಶ ಕಂಪನದಲ್ಲಿ, ಆ ತಲೆಯನ್ನಾಡಿಸುವ ರೀತಿಯನ್ನು ಸುಂದರವಾದ ಕೈಗಳಲ್ಲಿ, ಕರಾಗ್ರದ ಭಾವನೆಯನ್ನು ಸಂತೋಷದಿಂದ ಕರಣಗಳಲ್ಲಿ ತೋರಿಸುತ್ತಾ ಆ ಕಮಲ ಮುಖಿಯು ನಾಟ್ಯವಾಡಿದಳು. ೧೫೮. ವಿಲಾಸದಿಂದ ಹೆಜ್ಜೆಗಳನ್ನಿಡುತ್ತಾ, ಬಳ್ಳಿಯಂತಹ ದೇಹವನ್ನು ಈಚೆಗೂ ಆಚೆಗೂ ತಿರುಗಿಸುತ್ತಾ, ಕಡೆಗಣ್ಣನ್ನು ಮೋಹಕವಾಗಿ ಕುಣಿಸುತ್ತಾ, ಕೆನ್ನೆಗಳನ್ನು ಮಿರುಗಿಸುತ್ತಾ, ಮೃದುವಾದ ತೋಳುಗಳನ್ನು ವೇಗವಾಗಿ ತಿರುಗಿಸುತ್ತಾ, ಮೃದುವಾದ ಕೈಗಳನ್ನು ನೀಡುತ್ತಾ, ಸುಂದರವಾದ ಭ್ರಮರಿಯಿಂದಲೂ, ಮೇಳಾಪದ ಸೊಬಗಿನಿಂದಲೂ, ತ್ರಿಭಂಗದ ಸೊಂಪಿನಿಂದಲೂ ಕೂಡಿ ರಾಗಮಂಜರಿಯು ಸೊಗಸಾಗಿ ಲಾಸ್ಯವನ್ನು ಅಭಿನಯಿಸಿ

ವ॥ ಅಂತು ಭರತಮಾರ್ಗನಿರೂಪಣಕ್ರಮದಿಂ ಲಾಸ್ಯಮನೆಸಗುವಾಗಳ್

ಕಂ॥ ನೆರವಿಯೊಳೆನ್ನನದಾರ್ಗಂ
ಪರಿಕಿಸಲರಿದೆಂಬ ತೆಱದಿನಾಲಾಸ್ಯಮನ
ಚ್ಚರಿಯಿಂದೆನೆ ನೋಟ್ಪಾಗಳ್
ನಿರವಧಿಯಿಂದೆನ್ನ ಮೊಗಮನೀಕ್ಷಿಸುತಿರ್ದಳ್ ೧೫೯

ಮನದೊಲಪಿಂದೆನ್ನಂ ನೋ
ಡಿ ನಸುನಗಲ್ಕಿರದದರ್ಕೆನಾಂ ಸೋಲ್ತಂ
ಗನೆಗೊಳಗಾದೆಂ ಕಾಂತಾ
ಜನ ಚೇಷ್ಟೆಗಳೇನನೆಸಗವೆಲೆ ನೃಪತಿಲಕಾ ೧೬೦

ಕೂಣಿತದೃಷ್ಟಿಯೊಳೆನ್ನಂ
ಜಾಣೆಸೆವಂತಾಕೆ ನೋಡಲಾಗಳ್ ಸುಮನೋ
ಬಾಣಂ ತನ್ನೈದಂಬಂ
ಮಾಣದೆ ಮುಳಿದೆನ್ನಮೇಲೆ ಕಡುಪಿಂ ಕಱೆದಂ ೧೬೧

ವ॥ ಅಂತಾನವಳ್ಗೊಳಗಾಗೆ

ಮದನವಿಷಾಹಿಪುಷ್ಪಚಯದಂಷ್ಟ್ರಚಯಂಗಳಿನಾಗಳಟ್ಟಿ ಕ
ರ್ಚಿದೊಡುಸಿರುರ್ಚೆ ಮೆಯ್ಯನಿರಡರ್ದು ಕರಂ ತನು ಕಾಯ್ಪುಕಂದಿ ಚಿ
ತ್ತದ ನೆಲೆದಪ್ಪಿ ಮಾತಿನಿತುದೋಱದೆ ಸೈವೆಱಗಾಗಿ ಮುಂದ ಗಾ
ಣದೆ ಮಱೆದಾನಿರಲ್ ಮನೆಗೆ ಮೆಲ್ಲನೆತಂದನುಜೀವಿಯೋವಿದಂ ೧೬೨

ದಳು. (ಭ್ರಮರಿ, ಮೋಳಾಪ, ತ್ರಿಭಂಗ ಇವು ಅಭಿನಯ ಭೇದಗಳು) ವ॥ ಹಾಗೆ ಭರತ ಮುನಿಯು ನಿರೂಪಿಸಿರುವಂತೆ ಲಾಸ್ಯವನ್ನಭಿನಯಿಸಿದಳು. ಆಗ ೧೫೯. ಗುಂಪಿನಲ್ಲಿ ಯಾರೂ ನನ್ನನ್ನು ಗುರುತಿಸಲಾರರು ಎಂಬ ನಂಬಿಕೆಯಿಂದ ನಾನು ಅವಳ ಲಾಸ್ಯವನ್ನು ಆಶ್ಚರ್ಯದಿಂದ ನೋಡುತ್ತಾ ಇದ್ದೆನು. ಆಗ ಅವಳು ಎಡೆಬಿಡದೆ ನನ್ನ ಮುಖವನ್ನೇ ನೋಡುತ್ತಿದ್ದಳು. ೧೬೦. ಅವಳು ಪ್ರೀತಿಯಿಂದ ನನ್ನನ್ನು ನೋಡಿ ನಸುನಕ್ಕಳು. ನಾನು ಅದಕ್ಕೆ ಸೋತು ಅವಳಿಗೆ ವಶನಾದೆನು. ನೃಪ ತಿಲಕನೆ ! ರಮಣಿಯರ ಕಾಮಜನಕಗಳಿಂದ ಚೇಷ್ಟೆಗಳು ಏನನ್ನು ತಾನೇ ಮಾಡಲಾರವು ? ೧೬೧. ಅವಳು ತನ ಕಡೆಗಣ್ ನೋಟದಿಂದ ನನ್ನನ್ನು ಜಾಣತನದಿಂದ ನೋಡಿದಳು. ಕೂಡಲೆ ಮನ್ಮಥನು ತನ್ನ ಐದು ಬಾಣಗಳನ್ನು ಒಂದೇ ಸಲ ಕುಪಿತನಾಗಿ ನನ್ನ ಮೇಲೆ ವೇಗವಾಗಿ ಬಿಟ್ಟನು. ವ॥ ಹಾಗೆ ನಾನು ಅವಳಿಗೆ ವಶನಾಗಲು ೧೬೨. ಮದನನೆಂಬ ವಿಷಸರ್ಪವು ಹೂವಿನ ಗೊಂಚಲುಗಳೆಂಬ ಹಲ್ಲುಗಳಿಂದ ಅಟ್ಟಿಸಿಕೊಂಡು ಬಂದು ಕಚ್ಚಿತು, ಅದರಿಂದ ಉಸಿರೆಳೆಯುತೊಡಗಿತು. ನನಗೆ ರೋಮಾಂಚವಾಯಿತು. ನನ್ನ ಶರೀರವು ಚೆನ್ನಾಗಿ ಕಾಯ್ದು ಕಂದಿತು. ಬುದ್ಧಿಯು ನೆಲೆತಪ್ಪಿತು. ಮಾತನಾಡಲು ಏನೂ ತೋರಲಿಲ್ಲ.

ವ॥ ಅಂತು ಧನಮಿತ್ರನೆನ್ನಂ ಮನೆಗೆ ಕೊಂಡುಬಂದು

ಕುಳಿರ್ವತುಷಾರದಿಂ ಮೃದು ಮೃಣಾಳದಿನುತ್ಪಳತಾಳವೃಂತದಿಂ
ಮಳಯಜದಣ್ಪಿನಿಂ ತಳಿರಪಾಸಿಕೆಯಿಂ ಮದನಾಗ್ನಿ ದರ್ಪಮಂ
ನಿಲಿಸಿ ಮಗುಳ್ದುನೋಡಿ ಧನಮಿತ್ರನೆಲೇ ಅಪಹಾರವರ್ಮ ಸಂ
ಚಳಮನನಾದ ಕಾರಣಮನೋವದೆ ಪೇೞ್ನನಗೆಂದನಳ್ಕುಱಿಂ ೧೬೩

ವ॥ ಎನಲೊಡಂ

ಕಂ॥ ಇಂಗಿತಮನಱಿದುಮಱಿಯದ
ಭಂಗಿಯನನುಕರಿಸಲೇಕೆ ಕೆಳೆಯನೆ ಸಾಕಿ
ನ್ನಂಗಜ ತಾಪಮನಾರ್ಪಿಂ
ಪಿಂಗಿಸಿ ಬಾಳ್ವಂತುಪಾಯಮಿನ್ನೆಂತೆಂದಂ ೧೬೪

ವ॥ ಅಂತು ರಾಗಮಂಜರಿಯಿಂದೆನಗಾದವಸ್ಥೆಯಂ ಪೇೞಲ್ ಧನಮಿತ್ರನಿಂತೆಂದಂ

ಕಂ॥ ಅವಳೊರ್ವಂಗಲ್ಲದೆ ಧೂ
ರ್ತ ವಿಟರ್ ಪಲಬರ್ಗೆ ತನ್ನ ಜವ್ವನಮಂ ಬೀ
ಱುವಳಲ್ತು ಗಣಿಕೆಯರ ಧ
ರ್ಮವನೊಲ್ವವಳಲ್ಲೆನಿಪ್ಪುದಂ ಕೇಳ್ದಱಿವೆಂ ೧೬೫

ಬೆರಗಾಗಿ ಮುಂದೆ ಏನು ಮಾಡಬೇಕೆಂದು ತೋರದೆ ಮೈಮರೆತೆನು. ಆಗ ನನ್ನ ಸ್ನೇಹಿತನು ಮೆಲ್ಲಗೆ ಮನೆಗೆ ಕರೆತಂದನು. ವ॥ ಹಾಗೆ ಧನಮಿತ್ರನು ಹೇಗೋ ನನ್ನನ್ನು ಮನೆಗೆ ಕರೆದುಕೊಂಡು ಬಂದು – ೧೬೩. ತಣ್ಣಗಿರುವ ಹಿಮಜಲವನ್ನು ಚಿಮುಕಿಸಿ, ಮೃದುವಾದ ತಾವರೆ ದಂಟನ್ನು ಸುತ್ತಿ, ತಾವರೆ ಹೂವಿನ ಬೀಸಣಿಗೆಯಿಂದ ಬೀಸಿ, ಶ್ರೀಗಂಧದ ಪಟ್ಟನ್ನು ಹಾಕಿ, ಚಿಗುರಿನ ಹಾಸಿಗೆಯಲ್ಲಿ ಮಲಗಿಸಿ ನನ್ನ ಮದನಾಗ್ನಿಯ ವೇಗವನ್ನು ನಿಲ್ಲಿಸಿದನು. ಮತ್ತೆ ಧನಮಿತ್ರನು ನನ್ನನ್ನು ನೋಡಿ 'ಅಪಹಾರವರ್ಮ ನಿನ್ನ ಮನಸ್ಸು ಚಲಿಸುವುದಕ್ಕೆ ಕಾರಣವನ್ನು ಸಂಕೋಚವಿಲ್ಲದೆ ನನಗೆ ಹೇಳು' ಎಂದು ಹೇಳಿದನು. ವ॥ ಆಗ ೧೬೪. "ಗೆಳೆಯನೆ! ನನ್ನ ಮನದ ಅಭಿಪ್ರಾಯವನ್ನು ತಿಳಿದೂ ತಿಳಿಯದವನಂತೆ ಏಕೆ ಅನುಕರಿಸುತ್ತಿರುವೆ? ಇನ್ನು ಇದು ಸಾಕು. ಮದನ ತಾಪವನ್ನು ಕಳೆದುಕೊಂಡು ಬಾಳುವ ದಾರಿಯನ್ನು ಹೇಳು" ಎಂದು ಹೇಳಿದನು. ವ॥ ರಾಗಮಂಜರಿಯಿಂದ ನನಗಾದ ಅವಸ್ಥೆಯನ್ನು ಹೇಳಲು ಧನಮಿತ್ರನು ಹೀಗೆ ಹೇಳಿದನು. ೧೬೫. "ಅವಳು ಒಬ್ಬನಿಗಲ್ಲದೆ ಧೂರ್ತರಾದ ಹಲವರು ವಿಟರಿಗೆ ತನ್ನ ಯೌವನವನ್ನು ಕೊಡುವವಳಲ್ಲ. ವೇಶ್ಯೆಯರ ಕಸುಬನ್ನು ಮಾಡಲು ಅವಳು

ವ॥ ಅಂತವಳ್ ವೇಶ್ಯಾಧರ್ಮಮಂ ಬಿಟ್ಟು ಕುಲಸ್ತ್ರೀ ಪ್ರತಿಜ್ಞೆಯಂ ಮಾಡಲ್ ಮಾಧವ ಸೇನೆಯುಂ ಕಾಮಮಂಜರಿಯುಂ ಚಂಪಾಪತಿಯೋಲಗಕ್ಕೆ ರಾಗಮಂಜರಿಯನೊಡಗೊಂಡುಪೋಗಿ

ಕಂ॥ ಇವಳೆಮ್ಮ ಗಣಿಕೆಯರ ಧ
ರ್ಮಮನೊಲ್ಲದೆ ಸಾಧ್ವಿಯಾಗಿ ಜೀವಿಸಿದಪೆನೆಂ
ದು ವಿಟರ್ಕಳಂ ಕರಂ ನೋ
ಡುವ ಬಗೆಯಂ ಮಾಣ್ದಳೆಮಗೆ ಜೀವನಮೆಂತೋ ೧೬೬

ಮದದಿಂ ಸ್ವಧರ್ಮಮಂ ಮೀ
ಱಿದರಂ ದಂಡಿಸುವುದುಚಿತಮುರ್ವೀಶಂಗಂ
ಬುದನಱಿದು ದೇವ ನೀನೀ
ಸುದತಿಯನೆಮ್ಮಂತಿರಲ್ಕೆ ಪೇೞ್ ದಯೆಯಿಂದಂ ೧೬೭

ವ॥ ಎಂದು ಬಿನ್ನಪಂಗೆಯ್ಯಲರಸಂ ರಾಗಮಂಜರಿಯಂ ಝಂಕಿಸಿ ನಿನ್ನ ವೇಶ್ಯಾಧರ್ಮದೊಳಿರೆಂಬುದುಮವಳಿಂತೆಂದಳ್

ಕಂ॥ ಲಲಿತ ಶರೀರಮನೊಂದಂ
ಪಲಬರ್ಗಂ ಮಾಱುವಂದಮೆಂತೆಂದೊಲವಿಂ
ಕುಲಪಾಲಿಕಾ ಪ್ರಕಾರದಿ
ನಿಳೇಶ ಜೀವಿಸುವೆನಲ್ಲದಿರ್ದೊಡೆ ತೀರ್ವೆಂ ೧೬೮

ಒಪ್ಪುವವಳಲ್ಲ-ಎಂದು ಕೇಳಿದ್ದೇನೆ. ೧೬೫. ವ॥ ಹಾಗೆ ಅವಳು ವೇಶ್ಯಾಧರ್ಮವನ್ನು ತೊರೆದು ಕುಲಸ್ತ್ರೀಯಂತೆ ಬಾಳಬೇಕೆಂದು ಪ್ರತಿಜ್ಞೆಯನ್ನು ಮಾಡಿದಳು. ಆಗ ಮಾಧವಸೇನೆಯೂ ಕಾಮಮಂಜರಿಯೂ ಚಂಪಾಪತಿ ಮಹಾರಾಜರ ಸಭೆಗೆ ರಾಗಮಂಜರಿಯೊಡನೆ ಹೋಗಿ ೧೬೬. 'ಇವಳು ಗಣಿಕೆಯರ ಧರ್ಮವನ್ನು ತೊರೆದು ಕುಲಸ್ತ್ರೀಯಾಗಿ ಬದುಕುವೆನೆಂದು ನಿಶ್ಚಯಿಸಿ ವಿಟಪುರುಷರ ಕಡೆ ನೋಡುವ ಯೋಚನೆಯನ್ನೂ ಬಿಟ್ಟಿದ್ದಾಳೆ. ಮುಂದೆ ನಮಗೆ ಜೀವನ ಹೇಗೆ ನಡೆಯಬೇಕು? ೧೬೭. ಸ್ವಾಮಿ! ಮದದಿಂದ ತನ್ನ ಧರ್ಮವನ್ನು ಮೀರಿ ನಡೆಯುವವರನ್ನು ದಂಡಿಸಬೇಕಾದುದು ರಾಜನ ಕರ್ತವ್ಯ. ಆದುದರಿಂದ ನೀನು ಈ ರಾಗ ಮಂಜರಿಗೆ ನಮ್ಮ ಹಾಗೆ ವೇಶ್ಯಾಧರ್ಮವನ್ನನುಸರಿಸಬೇಕೆಂದು ದಯೆಯಿಟ್ಟು ಹೇಳು !" ವ॥ ಎಂದು ವಿಜ್ಞಾಪಿಸಿಕೊಂಡರು. ಅದನ್ನು ಕೇಳಿ ರಾಜನು ರಾಗಮಂಜರಿಗೆ 'ನೀನು ನಿನ್ನ ವೇಶ್ಯಾಧರ್ಮವನ್ನನುಸರಿಸು' ಎಂದು ಹೆದರಿಸಿ ಹೇಳಿದನು. ಆಗ ಅವಳು ಹೀಗೆ ಹೇಳಿದಳು. ೧೬೮. ಈ ನನ್ನ ಒಂದು ಸುಂದರವಾದ ಶರೀರವನ್ನು ಹಲಬರಿಗೆ ಹೇಗೆ ಮಾರಲಿ ? ರಾಜನೆ ! ಆದುದರಿಂದ ಕುಲಸ್ತ್ರೀಯ ರೀತಿಯಿಂದ ಬದುಕುವೆನು

ವ॥ ಎಂದವಳ್ ಗಾಢಪ್ರತಿಜ್ಞೆಯಂ ಮಾಡಲರಸನೇತನುಂ ತಿಳಿಸಲಱಿಯದವಳ್ ತನ್ನಿಚ್ಛೆಯೊಳಿರ್ಕೆಂದವರಂ ಕಳಿಪಲ್ ಮಗುಳ್ದು ಮಾಧವಸೇನೆಯಿಂತೆಂದಳ್

ಕಂ॥ ದೇವರ್ ಚಿತ್ತವಿಪುದಿವ
ಳ್ಗಾವಂ ಪತಿಯಾಗಿ ಬರ್ಪನವನೊಲವಿಂದೆ
ನ್ನಾವಾಸದಿಂ ಮಗುಳ್ದಿ
ನ್ನಾವೆಡೆಯಂ ಪೊಕ್ಕೊಡವನತೀವದ್ರೋಹಂ ೧೬೯

ವ॥ ಎಂದವರರಸನಿಂ ಕರುಣಂಬಡೆದು ಪೋದುದಂ ಕೇಳ್ದಱಿವೆನೆಂದು ಧನಮಿತ್ರಂ ಪೇಳ್ದ ಸಮಯದೊಳ್

ಕಂ॥ ಜಳಜಂ ಮುಕುಳಮನೆಯ್ದೆ
ಲ್ಕುಲಟಾಂಗನೆಯರ್ ಮನೋನುರಾಗಮನೆಯ್ದಲ್
ತಳವೆಳಗಾಗಲ್ ಕೋಕಂ
ನಲನಿಂದಪರಾಬ್ಧಿಗೆಯ್ದಿದಂ ದಿನನಾಥಂ ೧೭೦

ವ॥ ಅಂತು ಸೂರ್ಯಾಸ್ತಮಯಮಾಗಲೊಡಂ ಕತ್ತಲೆಯೊಳಾಂ ಕಾಮಮಂಜರಿಯ ಮನೆಗೆಯ್ದಿ

ಕಂ॥ ವನಜಮುಖಿ ಕಾಮಮಂಜರಿ
ಧನಮಿತ್ರನ ಮನೆಯ ಚರ್ಮಭಸ್ತ್ರಿಕೆಯಂ ತಂ
ದನುನಯದೊಳಿತ್ತಪೆಂ ನಿ
ನ್ನನುಜೆಯನೆನಗೀವುದೆಂದೆನತ್ಯುತ್ಸವದಿಂ ೧೭೧

ಅಥವಾ ಸಾಯುವೆನು !’ ವ॥ ಎಂದು ಅವಳು ಗಾಢ ಪ್ರತಿಜ್ಞೆಯನ್ನು ಮಾಡಿದಳು. ಆಗ ರಾಜನು ‘ಏನು ಮಾಡಿದರೂ ಅವಳನ್ನು ಒಪ್ಪಿಸುವುದಕ್ಕೆ ಸಾಧ್ಯವಿಲ್ಲ. ಅವಳು ತನ್ನಿಷ್ಟದಂತಿರಲಿ’ ಎಂದು ಹೇಳಿ ಅವರನ್ನು ಕಳುಹಿಸಿದನು. ಮತ್ತೆ ಮಾಧವಸೇನೆ ಹೀಗೆ ಹೇಳಿದಳು. ೧೬೯. “ದೇವ ! ಚಿತ್ತೈಸು. ಇವಳಿಗೆ ಪ್ರೀತಿಯಿಂದ ಪತಿಯಾಗುವವನು ನನ್ನ ಮನೆಯನ್ನು ಬಿಟ್ಟು ಇನ್ನೆಲ್ಲಿಗಾದರೂ ಹೋದರೆ ಅವನು ದ್ರೋಹ ಮಾಡಿದಂತೆ ವ॥ (ಎಂದು ತಿಳಿದು ದಂಡಿಸಬೇಕು.) ಎಂದು ಹೇಳಿ ಅರಸನಿಂದ ಆಶ್ವಾಸನೆಯನ್ನು ಹೊಂದಿ ಹೋದಳು. ಎಂದು ಕೇಳಿದ್ದೇನೆ’ ಎಂದು ಧನಮಿತ್ರನು ಹೇಳಿದನು. ಆ ಸಮಯದಲ್ಲಿ ೧೭೦. ಸೂರ್ಯನು ಪಡುವಣ ಸಮುದ್ರದಲ್ಲಿ ಮುಳುಗಿದನು. ಕಮಲಗಳು ಮುಚ್ಚಿಕೊಂಡುವು. ಜಾರಸ್ತ್ರೀಯರಿಗೆ ಆನಂದವಾಯಿತು. ಚಕ್ರವಾಕಗಳು ತಳಮಳಗೊಂಡವು. ವ॥ ಹಾಗೆ ಸೂರ್ಯನು ಮುಳುಗಲು ಕತ್ತಲೆಯಲ್ಲಿ ನಾನು ಕಾಮಮಂಜರಿಯ ಮನೆಗೆ ಹೋಗಿ ೧೭೧. “ಕಮಲಮುಖಿ ಕಾಮಮಂಜರಿ ! ಧನಮಿತ್ರನ ಮನೆಯಲ್ಲಿರುವ ತೊಗಲಿನ ಚೀಲವನ್ನು ತಂದು ಪ್ರೀತಿಯಿಂದ ಕೊಡುತ್ತೇನೆ. ನೀನು ಅದಕ್ಕೆ ಬದಲಾಗಿ ನಿನ್ನ ತಂಗಿಯನ್ನು

ವ|| ಎಂಬುದುಂ

ಕಂ|| ನವನಿಧಿ ದೊರಕಲ್ಕೆಡೆನೂಂ
ಕುವರೊಳರೆ ನೆಗಟ್ದ ಚರ್ಮಭಸ್ತ್ರಿಕೆಯಂ ಕೊ
ಟ್ಟವಳಂ ಕುಲವಧುವೆನಲನು
ಭವಿಸುವುದೆಲ್ಲರ್ಗೆ ಸಮ್ಮತಂ ಪೋಗೆಂದಳ್ ೧೭೨

ವ|| ಎಂದೊಡಾರಾತ್ರಿಯೊಳಾಂ ಚರ್ಮಭಸ್ತ್ರಿಕೆಯ ಪೂರ್ವವಿಧಾನಮಂ ಪೇೞ್ದು ಕುಡಲವಳಾ ರಾಗಮಂಜರಿಯಂ ಕುಲಸ್ತ್ರೀರೂಪದಿಂ ಕೈವರ್ತಿಸಲ್ ಬೞಿಕ್ಕಾಂ ಧನಮಿತ್ರನಂ ಕರೆದೀತೆಂದೆಂ

ಕಂ|| ನಿನ್ನಿರುಳಿ ಚರ್ಮರತ್ನವ
ನೆನ್ನರದೆಂದಱಿಯೆನಾರೊ ಕಳ್ದರದರ್ಕಾ
ನಿನ್ನೇವೆನೆಂದು ಮೊರೆಯಿಡು
ನಿನ್ನಾರ್ಪಿಂದುಸಿರ್ವುದರ್ಥಪತಿಯ ಕಳಂಕಂ ೧೭೩

ವ|| ಎನಲಾತನಾ ಮಱುದೆವಸಮರಸನೋಲಗಕ್ಕೆ ಪೋಗಿ

ಏಗೆಯ್ವೆನರಸ ಎನ್ನನು
ರಾಗಂ ಪೋದತ್ತು ಚರ್ಮರತ್ನದ ಸಿರಿಯಂ
ನೀಗಿದೆನೆನ್ನಸುವಂ ನಿನ
ಗೀಗೊಪ್ಪಿಸುವೆಂ ವಿಚಾರಿಪುದು ದಯೆಯಿಂದಂ ೧೭೪

ಸಂತೋಷದಿಂದ ನನಗೆ ಕೊಡಬೇಕು". ವ|| ಎಂದು ಹೇಳಿದೆನು. ಅದಕ್ಕೆ ಅವಳು ೧೭೨. "ನವನಿಧಿಯು ದೊರೆತರೆ ಯಾರಾದರೂ ದೂರುತ್ತಾರೆಯೇ ? ಪ್ರಸಿದ್ಧವಾದ ತೊಗಲಚೀಲವನ್ನು ತಂದುಕೊಟ್ಟು ಅವಳನ್ನು ಮಡದಿಯಾಗಿ ಕುಲವಧುವಿನಂತೆ ಅನುಭವಿಸು. ನಮಗೆಲ್ಲರಿಗೂ ಇದು ಸಮ್ಮತ, ಹೋಗು." ಎಂದಳು. ವ|| ನಾನು ಆ ರಾತ್ರಿ ತೊಗಲ ಚೀಲವನ್ನು ಅದರ ಅಪೂರ್ವವಾದ ರೀತಿಯನ್ನು ತಿಳಿಸಿ ಅವಳಿಗೆ ಕೊಟ್ಟೆನು. ಆಗ ಅವಳು ರಾಗಮಂಜರಿಯನ್ನು ಕುಲಸ್ತ್ರೀ ರೂಪದಿಂದ ನನ್ನ ವಶಪಡಿಸಿದಳು. ಬಳಿಕ ನಾನು ಧನಮಿತ್ರನನ್ನು ಕರೆದು ಹೇಳಿದೆನು. ೧೭೩. 'ನಿನ್ನೆ ರಾತ್ರಿಯೇ ಚರ್ಮರತ್ನವನ್ನು ಯಾರೋ ಕದ್ದಿದ್ದಾರೆ. ಅವರೆಂಥವರೆಂದು ತಿಳಿಯದು. ಅದಕ್ಕೆ ನಾನಿನ್ನೇನುಮಾಡಲಿ !' ಎಂದು ಕೂಗಿಕೋ. ಧೈರ್ಯವಾಗಿ ಅರ್ಥಪತಿಯ ಮೇಲೆ ಈ ಕಳಂಕವನ್ನು ಹೊರಿಸು.' ವ|| ಎಂದು ಹೇಳಲು ಆತನು ಮಾರನೆಯ ದಿವಸ ಅರಸನ ಸಭೆಗೆ ಹೋಗಿ. ೧೭೪. "ಅರಸನೆ ಏನುಮಾಡಲಿ ? ನನಗೆ ಜೀವನದ ಮೇಲಿನ ಅನುರಾಗವೇ ಹೋಯಿತು. ಚರ್ಮರತ್ನದ ಐಶ್ವರ್ಯವನ್ನು ಕಳೆದುಕೊಂಡೆನು. ನನ್ನ

ವ॥ ಎಂದೊಡರಸನಾತಂಗೆ ಕರುಣಿಸಿ ನಿನ್ನ ಚರ್ಮರತ್ನಂ ಪೋದ ಪೊಲಬಂ ಬಲ್ಲೊಡೆ ಪೇೞೆಂಬುದುಂ

ಕಂ॥ ಪಲಕಾಲಮರ್ಥಪತಿಯಂ
ನಲವಿಂದೋಲಗಿಸುವಂ ವಿಮರ್ದಕನೆಂಬಂ
ಮುಳಿದಾತನೆಲ್ಲರಱಿಯಲ್
ಪೞಿಯಿಲ್ಲದೆ ನಿನ್ನೆ ಬೈದನೆನ್ನನಿಳೇಶಾ ೧೭೫

ವ॥ ಅದಲ್ಲದೆಯುಂ

ಕಂ॥ ಎಲವೆಲವೊ ಚರ್ಮರತ್ನದ
ಬಲವಂ ತಗ್ಗಿಸುವೆನೊಂದಿರುಳ್ ನಿದ್ರೆಯು ಹಂ
ಬಲನೊಲ್ಲದಿರ್ದೊಡೆನುತ
ಗ್ಗಲಿಸಿ ದುರುಕ್ತಿಯುನುಸಿರ್ದನೆಲ್ಲರ್ ಕೇಳಲ್ ೧೭೬

ವ॥ ಎಂದು ಪೇೞಲರಸನಾನದಂ ವಿಚಾರಿಸಿ ಕೊಟ್ಟಪೆನೆಂದು ಧನಮಿತ್ರನಂ ಕಳಿಪಿಯ ರ್ಥಪತಿಯಂ ಕರಸಿ

ಕಂ॥ ನಿನಗೆ ವಿಮರ್ದಕನೆಂಬೊ
ರ್ಬನುಂಟೆ ಪೇೞೆಂದೊಡರ್ಥಪತಿಯೆನ್ನಯ ನ
ಚ್ಚಿನ ವಿಶ್ವಾಸಿಯವಂ ಮ
ತ್ತನುಪಮನುಂಟೆಂದೊಡಾತನಂ ಕರಸೆಂದಂ ೧೭೭

ಪ್ರಾಣವನ್ನು ನಿನಗೆ ಒಪ್ಪಿಸುವೆನು. ದಯೆಯಿಟ್ಟು ಇದನ್ನು ವಿಚಾರಿಸು.” ವ॥ ಎಂದು ಹೇಳಿದನು. ಆಗ ರಾಜನು ಅವನ ಮೇಲೆ ಕರುಣೆಯನ್ನು ತೋರಿಸಿ ‘ನಿನ್ನ ಚರ್ಮ ರತ್ನವು ಕಳೆದುಹೋದ ಸುಳಿವು ಗೊತ್ತಿದ್ದರೆ ಹೇಳು’ ಎಂದು ಅವನನ್ನು ಕೇಳಿದನು. ೧೭೫. ಅದಕ್ಕೆ ಆತನು “ವಿಮರ್ದಕನೆಂಬುವನು ಬಹುಕಾಲದಿಂದ ಅರ್ಥಪತಿಯ ಸೇವೆ ಯನ್ನು ಶ್ರದ್ಧೆಯಿಂದ ಮಾಡುತ್ತಿದ್ದಾನೆ. ಅವನು ‘ಮಹಾರಾಜನೆ’ ನಿನ್ನೆ ನನ್ನಲ್ಲಿ ಯಾವ ದೋಷವೂ ಇಲ್ಲದಿದ್ದರೂ ಕೋಪಿಸಿಕೊಂಡು ಎಲ್ಲರೆದುರಿಗೂ ಬೈದನು. ವ॥ ಅದೂ ಅಲ್ಲದೆ—೧೭೬. ‘ಎಲವೆಲವೋ ಒಂದು ರಾತ್ರಿ ನಿದ್ರೆ ಬರದಿದ್ದರೆ ನಿನಗಿರುವ ಚರ್ಮರತ್ನದ ಬಲವನ್ನು ತಗ್ಗಿಸುವೆನು!’ ಎಂದು ಎಲ್ಲರೂ ಕೇಳುವಂತೆ ಜೋರಾಗಿ ಕೆಟ್ಟಮಾತುಗಳನ್ನಾಡಿದನು ವ॥ ಎಂದು ಹೇಳಿದನು. ಅದಕ್ಕೆ ಅರಸನು ‘ವಿಚಾರಿಸಿ ಅದನ್ನು ಕೊಡಿಸುವೆನೆಂದು’ ಹೇಳಿ ಧನಮಿತ್ರನನ್ನು ಕಳುಹಿಸಿದನು. ಮತ್ತೆ ಅರ್ಥಪತಿ ಯನ್ನು ಕರೆಯಿಸಿ—೧೭೭. “ನಿನಗೆ ವಿಮರ್ದಕನೆಂಬುವನ ಪರಿಚಯವುಂಟೆ ? ಹೇಳು” ಎಂದು ಕೇಳಿದನು. ‘ಅವನು ನನ್ನ ನಂಬಿಕೆಯುಳ್ಳವನು. ಅವನಿಗೆ ಸಮನಾದವರು ಬೇರೆ ಇಲ್ಲ’ ಎಂದು ಅರ್ಥಪತಿಯು ಹೇಳಿದನು. ಆಗ ರಾಜನು ‘ಅವನನ್ನು ಕರೆಸು’ ಎಂದು ಹೇಳಿದನು.

ವ॥ ಎಂದೊಡೆ ಮಹಾಪ್ರಸಾದಮೆಂದರ್ಥಪತಿ ವಿಮರ್ದಕನಂ ನೋಡಲೆಂದು

ಕಂ॥ ಸೂಳೆಯರ ಮನೆಗಳೊಳ್ ಜೂ
ಜಾಳಿಗಳಾಲಯದೊಳಂಗಡಿಯೊಳಱಸಿ ಬೞಿ
ಕ್ಕಾಳಂ ಕಾಣದೆ ತದ್ಭೂ
ಪಾಳನ ಮುಂದಣ್ಗೆ ಬಂದು ಬೆಱಗಾಗಿರ್ದಂ ೧೭೮

ತಾನವನನೆಲ್ಲಿ ಕಂಡಪ
ನಾನೊಲವಿಂ ನಿಮ್ಮ ಕುಱುಪನಱಿಪಿ ಬೞಿಕ್ಕಂ
ನೀನೀಗಳ್ ಪೋಗೆಂದು
ಜ್ಜೈನಿಗೆ ಕಳಿಪಿದೆನವಂ ತೆರಳ್ದಂ ಬೇಗಂ ೧೭೯

ವ॥ ಅಂತಾವಿಮರ್ದಕನಂ ಧನಮಿತ್ರನೊಳ್ ತೋಟಿಯಾಡಿದಿರುಳೆ ನಿಮ್ಮಡಿಯನಱಸಲ್ ಕಳಿಪೆ ಅದುಕಾರಣಮರ್ಥಪತಿಯುಮವನಂ ಕಾಣದೆ ಮಗುೞ್ದರಸನೆಡೆಗೆ ಬಂದು ಕರಂಗಳಂ ಮುಗಿದು ನಿಲ್ವುದುಂ ಅರಸನಿಂತೆಂದಂ

ಕಂ॥ ಮರುಳ ವಿಮರ್ದಕನಿಂ ಚ
ರ್ಮರತ್ನಮಂ ಕಳಿಸಿಯುಮವನನೋಡಿಸಿ ತಾನೆ
ಲ್ಲರ ಮುಂದೆ ಸಭ್ಯನಾಗಿ
ರ್ಪಿರವಂ ನೋಡೆಂದು ಕೋಪಿಸಿದನುರ್ವೀಶಂ ೧೮೦

ವ॥ ಅರ್ಥಪತಿಯು ರಾಜನ ಮಾತನ್ನು ಮಹಾಪ್ರಸಾದವೆಂದು ಸ್ವೀಕರಿಸಿದನು ಮತ್ತು ವಿಮರ್ದಕನನ್ನು ನೋಡಬೇಕೆಂದು—೧೭೮. ಸೂಳೆಯರ ಮನೆಗಳಲ್ಲಿಯೂ, ಜೂಜುಗಾರರ ಮನೆಗಳಲ್ಲಿಯೂ ಅಂಗಡಿಗಳಲ್ಲಿಯೂ ಹುಡುಕಿಸಿದನು. ಬಳಿಕ ಅವನು ಎಲ್ಲಿ ಹೋದನೆಂಬ ವಿಷಯವೇ ತಿಳಿಯದೆ ರಾಜನ ಮುಂದೆ ಬಂದು ಬೆರಗಾಗಿ ನಿಂತುಕೊಂಡನು. ೧೭೯. ಅರ್ಥಪತಿಯು ಆ ವಿಮರ್ದಕನನ್ನು ಹೇಗೆ ತಾನೆ ಕಂಡಾನು! ರಾಜಪುತ್ರ, ನಾನು ನಿಮ್ಮ ಗುರುತನ್ನು ಹೇಳಿ ಬಳಿಕ 'ನೀನೀಗ ಹೋಗು' ಎಂದು ಹೇಳಿ ಅವನನ್ನು ಉಜ್ಜಯಿನಿಗೆ ಕಳುಹಿಸಿದೆನು. ಅವನು ಬೇಗ ಅಲ್ಲಿಂದ ಹೊರಟುಹೋದನು. ವ॥ ಹಾಗೆ ಆ ವಿಮರ್ದಕನನ್ನು ಧನಮಿತ್ರನಲ್ಲಿ ಜಗಳವಾಡಿದ ರಾತ್ರಿಯೇ ನಿಮ್ಮನ್ನು ಹುಡುಕುವುದಕ್ಕಾಗಿ ಕಳುಹಿಸಿದೆನು. ಆದುದರಿಂದ ಅರ್ಥಪತಿಯು ಅವನನ್ನು ಕಾಣಲಾಗಲಿಲ್ಲ. ಮತ್ತೆ ರಾಜನ ಹತ್ತಿರಕ್ಕೆ ಬಂದು ಕೈಗಳನ್ನು ಮುಗಿದುಕೊಂಡು ನಿಂತನು. ಆಗ ಅರಸನು ಹೀಗೆ ಹೇಳಿದನು. ೧೮೦. 'ಮರುಳ! ಚರ್ಮರತ್ನವನ್ನು ಕೊಟ್ಟು ವಿಮರ್ದಕನನ್ನು ಊರಿನಿಂದ ಹೊರಕ್ಕೆ ಓಡಿಸಿ ಎಲ್ಲರ ಮುಂದೆ ಸಭ್ಯನಂತೆ ನಟಿಸುವ

ವ॥ ಅಂತು ಕೋಪಿಸುವುದುಂ

ಕಂ॥ ಮುಱಿದಿರ್ದರ ಮಸ್ತಕಮಂ
ಬಱಸಿಡಿಲಾರ್ದೆಱಗಿದಂತೆ ತನ್ನಯ ಭಯದಿಂ
ಬೆಱಗಾದನರ್ಥಪತಿ ತಾ
ನಱಿಯದನರ್ಥಕ್ಕೆ ಸಂದೆಯಂ ಪುಟ್ಟಲೊಡಂ ೧೮೧

ವ॥ ಅಂತು ಬೆಱಗಾಗಲೊಡಮದುಂ ಸಂದೇಹಮಾಗಿಯರಸಂ ಕಳ್ಳನಂ ತರಿಸಿ ಕೊಡೆಂದೊಡರ್ಥಪತಿ ನಾಲ್ಕೆರಡು ದಿನದೊಳ್ ತರಿಸಿಕೊಟ್ಟಪೆನೆಂಬುದುಂ

ಕಂ॥ ಅನ್ನೆಗಮೀತನನುೞಿ ಬ
ಲ್ಪನ್ನಿಗಡನಿರೋಧದಲ್ಲಿ ಕುಳ್ಳಿರಿಸಿ ಬೞಿ
ಕ್ಕನ್ನೋೞ್ಪಮಿವನ ಕಲ್ಲೆರ್ದೆ
ಯನ್ನಿಷ್ಠುರಶಸ್ತ್ರಹತಿಯಿನೆಂದನಿಳೇಶಂ ೧೮೨

ವ॥ ಎಂದು ಅರ್ಥಪತಿಯಂ ನಿಗಡನಿರೋಧಮಂ ಮಾಡಿಸಿದಂ ಇತ್ತಲ್ ಮಾಧವ-ಸೇನೆ ಕಾಮಮಂಜರಿಯುಂ ಚರ್ಮಭಸ್ತ್ರಿಕೆಯ ಫಲಮಂ ಪಡೆಯಲೆಂದು

ಕಂ॥ ಅಪಲಾಪಿಸಿ ಕೊಂದರ್ಥವ
ನುಪಚರಿಸಿ ವಿರೂಪಕಂಗೆ ಕೊಟ್ಟು ಬೞಿಕ್ಕಿ
ದರ್ಪನಿಧಿಯನೆಲ್ಲಮಂ ದೈ
ನ್ಯಪಾತ್ರದೊಳ್ ಕೊಟ್ಟರೆಲ್ಲರಱಿವಂತಾಗಳ್ ೧೮೩

ವ॥ ಅದನಾಂ ಕಂಡಿನ್ನೀ ಚರ್ಮಭಸ್ತ್ರಿಕೆಯುಂ ಪರೀಕ್ಷಿಸುವರೆಂದಱಿದು ಧನಮಿತ್ರನಂ ಕರೆದು ಚರ್ಮಭಸ್ತ್ರಿಕೆಯ ನಿಧಾನಂ ಕಾಮಮಂಜರಿಯ ಮನೆಯೊಳಗಿರ್ದಪುದೆಂದರಸಂಗೆ ಪೇೞೆಂಬುದುಮಾತಂ ಪೋಗಿ

ರೀತಿಯನ್ನು ನೋಡು!' ಎಂದು ಹೇಳಿ ರಾಜನು ಕೋಪಿಸಿಕೊಂಡನು. ವ॥ ಹಾಗೆ ಕೋಪಿಸಿಕೊಳ್ಳಲು—೧೮೧. ನಿದ್ದೆ ಮಾಡಿದವರ ತಲೆಗೆ ಬರಸಿಡಿಲು ಅಬ್ಬರಿಸುತ್ತಾ ಎರಗಿದಂತಾಗಿ, ಅರ್ಥಪತಿಯು ತನಗೆ ತಿಳಿಯದಂತೆಯೇ ಅನರ್ಥವುಂಟಾಯಿತೆಂದು ಸಂದೇಹಿಸಿ ಹೆದರಿಕೆಯಿಂದ ಬೆರಗಾದನು. ವ॥ ಹಾಗೆ ಅವನು ಬೆರಗಾಗಿ ನಿಲ್ಲಲು ರಾಜನಿಗೆ ಸಂದೇಹವುಂಟಾಯಿತು. ರಾಜನು ಅವನಿಗೆ 'ಕಳ್ಳನನ್ನು ಹಿಡಿಸಿಕೊಡು' ಎಂದನು. ಅರ್ಥಪತಿಯು ನಾಲ್ಕೆರಡು ದಿನಗಳಲ್ಲಿ ಕರೆಸುವೆನೆಂದು ಹೇಳಿದನು. ೧೮೨. ಆಗ 'ಇವನನ್ನು ಬಿಗಿಯಾಗಿ ಬೇಡಿಗಳಿಂದ ಬಂಧಿಸಿ ಕುಳ್ಳಿರಿಸಿ. ಬಳಿಕ ಶಸ್ತ್ರದ ಹತಿಯಿಂದ ಇವನ ಕಲ್ಲೆದೆಯನ್ನು ಪರೀಕ್ಷಿಸೋಣ.' ಎಂದು ರಾಜನು ಹೇಳಿದನು. [ಬೇಡಿಗಳಿಂದ ಬಿಗಿದರೂ ವಿಮರ್ದಕನ ವಿಷಯವನ್ನೂ ಚರ್ಮರತ್ನದ ವಿಷಯವನ್ನೂ ಹೇಳದಿದ್ದರೆ ಶಸ್ತ್ರಗಳಿಂದ ಹೊಡೆದು ಹೇಳುವಂತೆ ಮಾಡೋಣ] ವ॥ ಎಂದು ಹೇಳಿ ಅರ್ಥಪತಿಯನ್ನು ಬೇಡಿಗಳಿಂದ ಬಿಗಿಸಿದನು. ಇತ್ತ ಆ ಮಾಧವ ಸೇನೆಯೂ ಕಾಮ

ಕಂ|| ಕೇಳರಸ ಕಾಮಮಂಜರಿ
ಯಾಲಯದೊಳ್ ಚರ್ಮರತ್ನಮಿರ್ಪುದೊಲದಱಿಂ
ಸ್ಥೂಲವಿಧಾನಂ ನಡೆದಪು
ದಾಲಿಸುವಂತೊರ್ಬ ದೂತನಂ ಕಳಿಪೆಂದಂ ೧೮೪

ಕಾಣಿಗೆ ಕಾಣಿಯನರ್ಚಿಪ
ಕೇಣಂ ಮಾಣ್ದೀಗಳುಳ್ಳ ತನ್ನರ್ಥಮನು
ಗ್ರಾಣಿಸದಿತ್ತಪಳೀ ಬಿ
ನ್ನಾಣಮುಮಾ ಚರ್ಮಭಸ್ತ್ರಿಕೆಯ ಬಲಮಲ್ತೇ ೧೮೫

ವ|| ಅಂತೆಯಂತರ್ಧನ ಬಹಿರ್ಧನಮಂ ಮುಸಲೋಲೂಖಸಹಿತಂ ವ್ಯಯಂಗೆಯ್ದು ಚರ್ಮಭಸ್ತ್ರಿಕೆಯಿಂದುಕ್ಕುವ ಬಹುಧನಾಪೇಕ್ಷೆಯಿಂದೆಂದರಸಂಗೆ ಪೇೞ್ದುದುಮಾತನೊರ್ಬ ದೂತನಂ ಕಳಿಪಲವಂ ಪೋಗಿ ಬಂದು

ಕಂ|| ಅತಿವಿಸ್ಮಯದಾನಮನ
ಪ್ರತಿಯಾಗಲ್ ದೇವ ಕಾಮಮಂಜರಿ ಮಾೞ್ಪು
ನ್ನತಿಯಂ ಕಾಣೆಯೊಳರ್ಥಂ
ಸ್ಥಿತವಾಗಿರಲಱಿಯ ಮಿನ್ನದೇನಂ ಪೇೞ್ವೆಂ ೧೮೬

ಮಂಜರಿಯೂ ತೊಗಲ ಚೀಲದ ಫಲವನ್ನು ಹೊಂದಬೇಕೆಂದು—೧೮೪. ಸುಳ್ಳು ಹೇಳಿ ಮೋಸಗೊಳಿಸಿ ತೆಗೆದುಕೊಂಡಿದ್ದ ಹಣವನ್ನು ಉಪಚಾರಮಾಡಿ ವಿರೂಪಕನಿಗೆ ಕೊಟ್ಟರು. ಬಳಿಕ ಉಳಿದಿದ್ದ ಧನವನ್ನೆಲ್ಲ ಅರ್ಹರಾದ ಬಡವರಿಗೆ ಎಲ್ಲರಿಗೂ ತಿಳಿಯುವಂತೆ ಕೊಟ್ಟರು. ವ|| ಅದನ್ನು ನೋಡಿ ನಾನು 'ಇವರಿನ್ನು ತೊಗಲಿನ ಚೀಲವನ್ನು ಪರೀಕ್ಷಿಸುವರು' ಎಂದು ತಿಳಿದು ಧನಮಿತ್ರನನ್ನು ಕರೆದೆನು. 'ಚರ್ಮದ ಚೀಲವು ಕಾಮಮಂಜರಿಯ ಮನೆಯಲ್ಲಿದೆ' ಎಂದು ನೀನು ಹೋಗಿ ರಾಜನಿಗೆ ಹೇಳು ಎಂದವನಿಗೆ ಹೇಳಿದೆನು. ಅವನು ಹಾಗೆಯೇ ಹೋಗಿ—೧೮೪. ಅರಸನೆ ಕೇಳು. ಕಾಮಮಂಜರಿಯ ಮನೆಯಲ್ಲಿ ಚರ್ಮರತ್ನವಿದೆ. ಅದರಿಂದಲೇ ಅಲ್ಲಿ ಹೆಚ್ಚಾಗಿ ದಾನ ನಡೆಯುತ್ತಿದೆ. ಅದನ್ನು ಕೇಳಿ ತಿಳಿಯಲು ದೂತನೊಬ್ಬನನ್ನು ಕಳುಹಿಸು' ಎಂದು ಹೇಳಿದನು. ೧೮೫. ಕಾಸಿಗೆ ಕಾಸನ್ನು ಕೂಡಿಹಾಕುವ ದುರಾಸೆಯನ್ನು ಬಿಟ್ಟು ಈಗ ತನ್ನಲ್ಲಿರುವ ಹಣವನ್ನೆಲ್ಲ ಸಂಗ್ರಹಿಸದೆ ಇವಳು ಕೊಡುತ್ತಿದ್ದಾಳೆ. ಇವಳ ಈ ಬಿನ್ನಾಣಕ್ಕೆ ತೊಗಲಿನ ಚೀಲದ ಬಲವೇ ಕಾರಣವಲ್ಲವೇ ? ವ|| ಹಾಗೆ ಒಳ ಹಣವನ್ನೂ ಹೊರಹಣವನ್ನೂ ಒನಕೆ ಒರಳುಗಳೊಡನೆ ಎಲ್ಲವನ್ನೂ ತೊಗಲಿನ ಚೀಲದಿಂದ ಉಕ್ಕಿ ಬರುವ ಧನಕ್ಕೆ ಆಶಿಸಿ ದಾನಮಾಡಿದಳು ಎಂದು ಅರಸನಿಗೆ ಹೇಳಿದನು. ಕೂಡಲೆ ಅರಸನು ಒಬ್ಬ ದೂತನನ್ನು ಕಳುಹಿಸಿದನು. ಅವನು ಅಲ್ಲಿಗೆ ಹೋಗಿಬಂದು—೧೮೬. "ದೇವ, ಕಾಮಮಂಜರಿಯ ದಾನವು ಅತ್ಯಾಶ್ಚರ್ಯಕರವಾದುದು. ಸಮನಿಲ್ಲದ್ದು. ಹಣ

ವ॥ ಎಂದಾದೂತಂ ಬಂದು ಪೇೞ್ದೊಡೆ ಅದು ಚರ್ಮಭಸ್ತ್ರಿಕಾವಿಧಾನಂ ತಪ್ಪ ದೆಂದು

ಕಂ॥ ಭರದಿಂ ಮಾಧವಸೇನೆಯು
ನರವರಿಸದೆ ಕಾಮಮಂಜರಿಯುಮೀಕ್ಷಣದಿಂ
ಬರಿಯುಮನೊಡಗೊಂಡು ಬರಲೆಂ
ದರಸಂ ಕಳಿಪಿದನದೊರ್ವ ಭೀಕರಮುಖನಂ ೧೪೭

ವ॥ ಅಂತಾದೂತಂ ಬಂದು ತವಕದಿ ಕರೆವುದಂ ಕಂಡುಮಾಧವಸೇನೆಗಿಂತೆಂದೆಂ

ಕಂ॥ ಇದು ಚರ್ಮಭಸ್ತ್ರಿಕಾ ಸಂ
ಪದಮಂ ತಿಳಿಯಲ್ಕೆ ಬಂದ ಪರಿ ನೀವತಿಗೂ
ಢದ ಕಾರ್ಯಮಂ ಜಗತ್ಪ್ರಕ
ಟದಿನೆಸಗಿದಿರೆಂತು ಕಳೆವೆವೀದುರ್ಘಟಮಂ ೧೪೮

ವ॥ ಎಂದಾನವರೊಳ್ ಸಮಾಲೋಚನೆಗೆಯ್ಯಲವರ್ ದೀನವದನರಾಗಿರಲದಂ ಕಂಡಾಂ ಮತ್ತಮಿಂತೆಂದೆಂ

ಕಂ॥ ಎನ್ನಸುವಂ ನಿಮ್ಮಸುಗಳ
ನುನ್ನತಿಯಿಂ ಕಾವೊಡಾನುಪಾಯಮನೊಂದಂ
ಚೆನ್ನೆಸೆಯೆ ಪೇೞ್ವೆನೆನಲವ
ರೆನ್ನಂಘ್ರಿದ್ವಯದೊಳೆಱಗಿ ಬದುಂಕಿಪುದೆಂದರ್ ೧೪೯

ವನ್ನೆಲ್ಲ ಒಂದು ದುಗ್ಗಾಣಿಗೆ ಸಮನಾಗಿ ಭಾವಿಸಲಾಗಿದೆ. ಅರ್ಥವಾಗದು ಅದನ್ನು ಏನೆಂದು ವರ್ಣಿಸಲಿ." [ಕಾಣಿ ಸಣ್ಣ ನಾಣ್ಯ] ವ॥ ಎಂಬುದಾಗಿ ಹೇಳಿದನು. ಅದು ತೊಗಲಚೀಲದ (ರೀತಿ) ವಿಧಾನ ಬೇರೆಯಲ್ಲ ಎಂದು ನಿಶ್ಚಯಿಸಿ—೧೪೭. "ಈ ಕೂಡಲೆ ಮಾಧವಸೇನೆಯನ್ನೂ ಕಾಮಮಂಜರಿಯನ್ನೂ ಜೊತೆಯಲ್ಲಿ ಬೇಗ ಕರೆತರ ಬೇಕೆಂದು ಅರಸನು ಭಯಂಕರ ಮುಖವುಳ್ಳ ದೂತನೊಬ್ಬನನ್ನು ಕಳುಹಿಸಿದನು. ವ॥ ಹಾಗೆ ಆ ದೂತನು ಬಂದು ಅವಸರದಿಂದ ಕರೆಯುವುದನ್ನು ಕಂಡು ನಾನು ಮಾಧವ ಸೇನೆಗೆ ಹೀಗೆ ಹೇಳಿದೆನು. ೧೪೮. "ಇದು ಚರ್ಮರತ್ನದಿಂದ ದೊರೆಯುವ ಸಂಪತ್ತನ್ನು ತಿಳಿದುಕೊಳ್ಳಲು ಮಾಡಿರುವ ಉಪಾಯ. ನೀವು ಗುಟ್ಟಾಗಿ ಮಾಡಬೇಕಾದ ಕಾರ್ಯವನ್ನು ಪ್ರಕಟವಾಗಿ ಎಲ್ಲರಿಗೂ ತಿಳಿಯುವಂತೆ ಮಾಡಿದಿರಿ. ಈಗ ಬಂದಿರುವ ಕಷ್ಟವನ್ನು ತಪ್ಪಿಸಿಕೊಳ್ಳುವುದು ಹೇಗೆ ?" ವ॥ ಎಂದು ಹೇಳಿ ನಾನು ಅವರೊಡನೆ ಸಮಾಲೋಚನೆ ಮಾಡಿದೆನು. ಅವರು ಇದರಿಂದ ದೀನವದನರಾದರು. ಅದನ್ನು ಕಂಡು ನಾನು ಮತ್ತೆ—೧೪೯. "ನನ್ನ ಪ್ರಾಣವನ್ನೂ ನಿಮ್ಮ ಪ್ರಾಣಗಳನ್ನೂ ಉಳಿಸಿ ಕಾಪಾಡಲು ನಾನೊಂದು ಒಳ್ಳೆಯ ಉಪಾಯವನ್ನು ಹೇಳುತ್ತೇನೆ" ಎಂದು ಹೇಳಿದೆನು. ಅದನ್ನು ಕೇಳಿ ಅವರು ನನ ಪಾದಗಳಿಗೆ ಬಿದ್ದು 'ಬದುಕಿಸಬೇಕು' ಎಂದು ಕೇಳಿಕೊಂಡರು.

ವ॥ ಎಂದೊಡಾನವರ್ಗಿಂತೆಂದೆಂ

ಕಂ॥ ಆದಿವಿಡಿದರ್ಥಪತಿಗಪ
ವಾದಂ ಪೊರ್ದಿರ್ಪುದದಱಿನವನಿತ್ತಂ ಚೆ
ಲ್ವಾದಜಿನರತ್ನಮಂ ಕೇಳ್
ಮೇದಿನಿಪತಿಯೆಂದು ಪೇೞ್ವುದಿದು ಸತ್ಕಾರ್ಯಂ ೧೯೦

ವ॥ ಎಂದಾಂ ಪೇೞೆ ಮಾಧವಸೇನೆಯಂತೆಗೆಯ್ವೆನೆಂದು

ನರೆಗೂದಲ್ಗಿಕ್ಕಿ ನುಣ್ಪಿಳೆ ಮುಡಿಯನಳವಡಲ್ಸಿಕ್ಕಿ ಬತ್ತಿರ್ದ ವಕ್ತ್ರಾಂ
ಬುರುಹಂ ಮಿಂಚಾಗಲಿರ್ಪಂ ತೊಡೆದು ತೊಡರ್ವ ಲಂಬಸ್ತನದ್ವಂದ್ವಮಂ ಮೇ
ಲ್ವರೆ ಬಲ್ಪಿಂ ಸೋಂಕಿಲಿಂದಂ ಬಿಗಿದು ಮುಸುಕನಿಟ್ಟೈದಿದಳ್ ವೃದ್ಧೆ ಚೇತೋ
ಭರದಿಂ ತದ್ಭೂಪನಾಸ್ಥಾನಮನವಿರಳಿ ಹಸ್ತಾಬ್ಜಸಂಕೋಚೆಯಾಗಳ್ ೧೯೦

ವ॥ ಅಂತು ಮಾಧವಸೇನೆಯಾಸ್ಥಾನಮಂ ಪೊಕ್ಕರಸಂಗೆ ಪೊಡಮಟ್ಟು ನಿಲ್ವುದುಮ
ವಳಂ ಕಂಡರಸನಿಂತೆಂದಂ

ಕಂ॥ ಏನೆಲೆಗೆ ಚರ್ಮರತ್ನ ವಿ
ಧಾನಂ ನಿಜಗೇಹದಲ್ಲಿ ನಡೆದಪುದದನೀ
ಸ್ಥಾನದೊಳಿತ್ತವನಾವನ
ದೇನೆಂಬುದನುಸಿರ್ವುದೀವುದೀಗಳ್ ಬೇಗಂ ೧೯೨

ವ॥ ಆಗ ನಾನು ಅವರಿಗೆ ಹೀಗೆ ಹೇಳಿದೆನು—೧೯೦. "ಮೊದಲಿನಿಂದ ಅರ್ಥಪತಿಗೆ ಅಪವಾದವು ಬಂದಿದೆ. ಆದುದರಿಂದ "ರಾಜನೆ, ಕೇಳು. ಸುಂದರವಾದ ಅಜಿನ ರತ್ನವನ್ನು ಆ ಅರ್ಥಪತಿಯು ಕೊಟ್ಟನು ಎಂದು ಹೇಳಬೇಕು. ಇದು ಒಳ್ಳೆಯ ಕೆಲಸ" ವ॥ ಎಂದು ನಾನು ಹೇಳಲು ಮಾಧವಸೇನೆಯು ಹಾಗೆಯೇ ಮಾಡುವೆನೆಂದಳು. ೧೯೧. ನರೆಗೂದಲನ್ನು ಸುಣ್ಣಗೆ ಬಾಚಿಕೊಂಡಳು. ಅಡಕವಾಗಿ ಕೂದಲನ್ನು ಗಂಟು ಹಾಕಿಕೊಂಡಳು. ಕಂದಿಹೋಗಿದ್ದ ಮುಖ ಕಮಲವನ್ನು ಮಿಂಚುವಂತೆ ಒರಸಿಕೊಂಡಳು. ಸೇದಿಕೊಂಡು ಉದ್ದವಾಗಿ ಜೋಲಾಡುತ್ತಿದ್ದ ಎರಡು ಸ್ತನಗಳನ್ನೂ ಸೆರಗಿನಿಂದ ಬಿಗಿಯಾಗಿ ಬಿಗಿದುಕೊಂಡಳು. ತಲೆಗೆ. ಮುಸುಕು ಹಾಕಿಕೊಂಡಳು ಹೀಗೆ ಸಜ್ಜಾಗಿ ಆ ಮುದುಕಿಯು ಅರಸನ ಅಸ್ಥಾನಕ್ಕೆ ಬಂದು ಕೈಮುಗಿದಳು. ವ॥ ಹೀಗೆ ಮಾಧವಸೇನೆಯು ರಾಜನ ಆಸ್ಥಾನಕ್ಕೆ ಬಂದು ರಾಜನಿಗೆ ನಮಸ್ಕರಿಸಿ ನಿಂತಳು. ಅವಳನ್ನು ನೋಡಿ ರಾಜನು ಹೀಗೆ ಹೇಳಿದನು. ೧೯೨. "ಎಲೆಗೆ, ನಿನ್ನ ಮನೆಯಲ್ಲಿ ಚರ್ಮರತ್ನದಿಂದ ಧನವನ್ನು ಹೊಂದುವ ವಿಧಾನವು ನಡೆಯುತ್ತಿದೆ. ಅದನ್ನು ನಿನಗೆ ಕೊಟ್ಟವನಂ

ವ|| ಎಂಬುದುಂ ಮಾಧವಸೇನೆಯಿಂತೆಂದಳ್

ಕ್ಷಿತಿಪತಿ ಬಂದಿಕಾಱನಧಮಂ ಕಿತವಂ ಮನೆಗಳ್ಳನುನ್ಮದೋ
ದ್ಧತವಿಟನಧ್ವಚೋರನತಿ ಯೌವನಮತ್ತನನೀತನರ್ಥಗ
ರ್ವಿತನೆನಿಸಿರ್ಪ ದುರ್ವ್ಯಸನಿಯಲ್ಲದೆ ಪಣ್ಯವಧೂಜನಕ್ಕೆ ಜೀ
ವಿತಧನದೇಹಮೆಂಬಿನಿತನೀವನೆ ಕಾಮುಕವೃತ್ತಿಯೋೞ್ಗೆಯೊಳ್ ೧೯೩

ವ|| ಎನಲಿವರೊಳ್ ನಿನಗಿತ್ತವನಾವಂ ಪೇೞೆಂಬುದುಂ

ಕಂ|| ಚಿತ್ತವಿಸಿತ್ತಲ್ ಧರಣೀ
ಶೋತ್ತಮ ಮತ್ಸುತೆಗೆ ಕಾಮಮಂಜರಿಗೊಲವಂ
ಪೆತ್ತಜಿನರತ್ನಮಂ ಕೊ
ಟ್ಟಿತ್ತನ್ನಲಿದರ್ಥಪತಿಯಿದಲ್ತೆ ವಿಧಾನಂ ೧೯೪

ವ|| ಎಂದು ಮಾಧವಸೇನೆ ಪೇೞ್ವುದುಮಾಗಳೆ ಕಾರಾಗೃಹದೊಳಿರ್ದರ್ಥಪತಿಯನರಸಂ ಕರಸಿ

ಕಂ|| ಎಲೆ ಕಿತವ ಚರ್ಮರತ್ನವ
ನೊಲವಿಂದಂ ಕಾಮಮಂಜರಿಗೆ ಕೊಟ್ಟೆನ್ನೊಳ್
ಪೊಲಬಂ ಪೇೞದೆ ನೀಂ ಸಂ
ಕಲೆಯೊಳ್ ಬೀೞಲ್ಕೆ ಬಿಡುವೆನೆಲೆ ದುರ್ವೃತ್ತಾ ೧೯೫

ವ|| ಎಂದರಸಂ ಕೋಪಿಸಿ ಸರ್ವಕವರ್ತೆಯಂ ಮಾಡಿಮೆಂದು ಸಮೀಪಸ್ಥರ್ಗೆ ಪೇೞ್ವುದುಂ

ಯಾವನು ? ಅದನ್ನು ಬೇಗ ಹೇಳು. ಅದನ್ನು ಬೇಗ ತಂದುಕೊಡು." ವ|| ಎಂದು ಹೇಳಲು ಮಾಧವಸೇನೆಯು ಹೀಗೆ ಹೇಳಿದಳು—೧೯೩. "ಮಹಾರಾಜನೆ ! ಹೊಗಳು ಭಟ್ಟ, ಅಧಮ, ವಂಚಕ, ಮನೆಗಳ್ಳ, ಮದಿಸಿದ ಕ್ರೂರಿಯಾದ ವಿಟ, ದಾರಿಗರನ್ನು ದರೋಡೆಮಾಡುವವ ಯೌವನದಿಂದ ಮದಿಸಿದವನು, ನೀತಿಗೆಟ್ಟವನು, ಹಣದಿಂದ ಗರ್ವಿತನು ಈ ರೀತಿಯಾದ ದುರ್ವ್ಯಸನಿಯಲ್ಲದೆ ಬೇರೆಯವನು ಹೆಚ್ಚಾದ ಕಾಮುಕ ವೃತ್ತಿಯಿಂದ ಸೂಳೆಯರಿಗೆ ಜೀವಿತವನ್ನೂ ಧನವನ್ನೂ ದೇಹವನ್ನೂ ಕೊಡುತ್ತಾನೆಯೇ ?" ವ|| ಎಂದು ಹೇಳಲು ಇವರಲ್ಲಿ ಯಾವನು ನಿನಗೆ ಕೊಟ್ಟವನು ಹೇಳು ಎಂದು ಕೇಳಿದನು. ೧೯೪. "ರಾಜಶ್ರೇಷ್ಠನೆ, ಕೇಳು. ಅರ್ಥಪತಿಯು ನನ್ನ ಮಗಳು ಕಾಮಮಂಜರಿಗೆ ಪ್ರೀತಿಯಿಂದ ಈ ಚರ್ಮರತ್ನವನ್ನು ಕೊಟ್ಟನು. ಇದು ನಮಗೆ ಸಿಕ್ಕಿದ ವಿಧಾನವಿದು." ವ|| ಮಾಧವ ಸೇನೆಯ ಮಾತನ್ನು ಕೇಳಿ ಅರಸನು ಕಾರಾಗೃಹದಲ್ಲಿದ್ದ ಅರ್ಥಪತಿಯನ್ನು ಕರೆಯಿಸಿ—೧೯೫. "ಎಲೆ ವಂಚಕನೇ, ನೀನು ಚರ್ಮರತ್ನವನ್ನು ಪ್ರೀತಿಯಿಂದ ಕಾಮಮಂಜರಿಗೆ ಕೊಟ್ಟು ನನ್ನಲ್ಲಿ ಸುಳ್ಳು ಹೇಳಿದೆ. ಕೆಟ್ಟನಡತೆಯವನಾದ ನಿನ್ನನ್ನು ಸಂಕೋಲೆಯ ಬಂಧನದಲ್ಲಿಯೇ ಇರಿಸುವೆನು." ವ|| ಎಂದು ಅರಸನು ಕೋಪಿಸಿಕೊಂಡು "ಇವನಲ್ಲಿರುವ ಧನವನ್ನೆಲ್ಲ ಕಿತ್ತುಕೊಳ್ಳಿರಿ" ಎಂದು

ಕಂ॥ ನವರತ್ನಮನವನುಳ್ಳ
ರ್ಥವನಾಭರಣಂಗಳಂ ಲಸದ್ವಾಹನಮಂ
ವಿವಿಧಾಂಬರಮಂ ಪಶುದಾ
ಸಿವರ್ಗಮಂ ಕವರ್ದು ತಂದರರಮನೆಗಾಗಳ್ ೧೯೬

ವ॥ ಅದಲ್ಲದೆಯುಂ

ಕಂ॥ ಒರಳೊನಕೆ ಮಡಕೆಯೊಳಗವ
ಧರಿಸದೆ ಸಲೆ ಸಲೆವಸ್ತುವಂ ಕವರ್ದಿವನಂ
ನರಕಿಯನಂತಕನಿಲಯದ
ನೆರೆಮನೆಗಟ್ಟೆಂದನರ್ಥಪತಿಯನಿಳೇಶಂ ೧೯೭

ವ॥ ಅಂತು ಸರ್ವಸ್ವಾಪಹಾರಂಗೆಯ್ದವನನಂತಕ ಮಂದಿರಕ್ಕೆ ಕಳಿಪುವುದಂ ಧನಮಿತ್ರಂ ಕಂಡು

ಕಂ॥ ತನಗುಪಕಾರಂಗೆಯ್ದಂ
ಗೆನಸುಂ ಲೇಸಂ ನೆಗಲ್ಪುವುದು ಕರ್ತವ್ಯಂ
ತನಗಪಕಾರಂಗೆಯ್ದಂ
ಗನವರತಂ ಲೇಸನೆಸಗುವುದು ಸನ್ಮಾರ್ಗಂ ೧೯೮

ವ॥ ಎಂಬುದಂ ತಿಳಿದು ಧನಮಿತ್ರನರಸನ ಕೂಡೆಯಿಂತೆಂದಂ

ಧಾರಿಣಿಯೊಳರಸುಗಳ್ ವ್ಯವ
ಹಾರಿಗಳಂ ತೀರ್ಚಲಾಗದೇಗೆಯ್ದೊಡಮೆಂ
ಬೀರಾಜ ನೀತಿ ಗಾದೆಯ
ಮೀಱುವವರುಮುಂಟೆ ಪೇೞ್ ಕೃಪಾಳುನೃಪಾಲಾ ೧೯೯

ಪತ್ತಿರದಲ್ಲಿದ್ದವರಿಗೆ ಹೇಳಿದನು ೧೯೬. ಅವರು ಕೂಡಲೆ ಅರ್ಥಪತಿಯ ಮನೆಯಲ್ಲಿದ್ದ ನವರತ್ನಗಳನ್ನೂ ಧನವನ್ನೂ ಆಭರಣಗಳನ್ನೂ ಸುಂದರವಾದ ವಾಹನವನ್ನೂ ವಿಧವಿಧಗಳಿಂದ ಬಟ್ಟೆಗಳನ್ನೂ ಪಶುಗಳನ್ನೂ ದಾಸಿಯರನ್ನೂ ಅರಮನೆಗೆ ತಂದರು. ವ॥ ಅದೂ ಅಲ್ಲದೆ—೧೯೭. ಒನಕೆ ಒರಳು ಮಡಿಕೆ ಎಂದು ಯೋಚಿಸದೆ ಇವನ ಎಲ್ಲ ವಸ್ತುಗಳನ್ನೂ ಸೆಳೆದು ತನ್ನಿರಿ. ಈ ಪಾಪಿಯಾದ ಅರ್ಥಪತಿಯನ್ನು ಯಮನ ನಗರಕ್ಕೆ ಕಳುಹಿಸಿರಿ" ಎಂದು ರಾಜನು ಅಪ್ಪಣೆಮಾಡಿದನು. ವ॥ ಹಾಗೆ ಸರ್ವಸ್ವವನ್ನೂ ಅಪಹರಿಸಿ ಅವನನ್ನು ಯಮನಗರಿಗೆ ಕಳುಹಿಸುವುದನ್ನು ನೋಡಿ ಧನಮಿತ್ರನು ೧೯೮. "ತನಗೆ ಉಪಕಾರ ಮಾಡಿದವನಿಗೆ ಯಾವಾಗಲೂ ಒಳ್ಳೆಯದನ್ನು ಮಾಡುವುದು ಮನುಷ್ಯನ ಕರ್ತವ್ಯ. ಆದರೆ ತನಗೆ ಅಪಕಾರ ಮಾಡಿದವನಿಗೆ ಯಾವಾಗಲೂ ಒಳ್ಳೆಯದನ್ನು ಮಾಡುವುದು ಸನ್ಮಾರ್ಗ." ವ॥ ಎಂದು ಯೋಚಿಸಿ ಅರಸನಿಗೆ ಹೀಗೆ ಹೇಳಿದನು—೧೯೯. "ಕೃಪಾಳುವಾದ ಮಹಾರಾಜನೆ ! ಈ ಪ್ರಪಂಚದಲ್ಲಿ "ವ್ಯವಹಾರಸ್ಥರು ಯಾವ ತಪ್ಪುಮಾಡಿದರೂ ಅವರನ್ನು ರಾಜರು ತೀರಿಸಿಬಿಡಬಾರದು"

ವ॥ ಎಂದು ಧನಮಿತ್ರಂ ಪೇೞ್ದೊಡರ್ಥಪತಿಯನರಸಂ ಕಾಯ್ದುೞಿದಂ

ಕಂ॥ ನಲವಿಂ ಮಾಧವಸೇನೆಯ
ನಿಲಯದೊಳಿರ್ದ ಜಿನರತ್ನಮಂ ಧನಮಿತ್ರಂ
ಗೊಲವಿಂ ತರಿಸಿತ್ತಂ ನೃಪ
ತಿಲಕಂ ಲಕ್ಷ್ಮೀನಿವಾಸ ನಿಜಹೃತ್ಪದ್ಮಂ ೨೦೦

ವ॥ ಅಂತಾ ಚರ್ಮಭಸ್ತ್ರಿಕೆಯಂ ಧನಮಿತ್ರಂಗೆ ತರಿಸಿ ಕುಡಲಾ ಧನಮಿತ್ರಂ ಮಾಧವ ಸೇನೆಯ ದೀನಭಾವಮಂ ಕಂಡು

ಕಂ॥ ಮೞೆಯುದಕದ ಬರವಿಂಗಂ
ಕೊಳದುದಕಮನೆಯ್ದೆ ತುಱುಕಿದೆಗ್ಗನ ತೆಱನಿಂ
ಗಳಪಿಸಾ ಮಾಧವಸೇನೆಗೆ
ನೆಲೆಯಾಯ್ತೆಂದವನಿಪತಿಗೆ ಮತ್ತೀತೆಂದಂ ೨೦೧

ಇನಿತಜಿನರತ್ನಮಂ ನ
ಚ್ಚಿ ನಿಜಾಲಯದರ್ಥಮೆಲ್ಲಮಂ ಬೀಯಂಗೆ
ಯ್ದನಸುಂ ದರಿದ್ರೆಯಾದಳ್
ಜನಪತಿಯಿಾಯರ್ಥಪತಿಯ ಧನದೊಳ್ ಕಿಱಿದಂ ೨೦೨

ವ॥ ಎಂದು ಕಿಱಿದರ್ಥಮಂ ಕುಡಿಸಿ ಕಳಿಪಿಸಿ ಧನಮಿತ್ರಂ ಕೃತಾರ್ಥತೆಯಿಂದರಸನಿಂ ತಾನುಂ ಕಳಿಪಿಸಿಕೊಂಡು ನಿಜಾಲಯಕ್ಕೆ ಪೋಗಿ ಕತಿಪಯ ದಿನಂಗಳ್

ಎಂಬುದು ರಾಜನೀತಿ. ಆ ನೀತಿಯನ್ನು ಮೀರುವವರೂ ಇದ್ದಾರೆಯೇ? ಹೇಳು." ವ॥ ಧನ ಮಿತ್ರನ ಮಾತನ್ನು ಕೇಳಿ ಅರಸನು ಅರ್ಥಪತಿಯನ್ನು ಉಳಿಸಿದನು. ಮತ್ತು—೨೦೦. ನಾರಾಯಣನನ್ನು ಹೃತ್ಕಮಲದಲ್ಲಿ ಧ್ಯಾನಮಾಡುವ ರಾಜಶ್ರೇಷ್ಠನು ಮಾಧವ ಸೇನೆಯ ಮನೆಯಲ್ಲಿದ್ದ ಚರ್ಮರತ್ನವನ್ನು ತರಿಸಿ ಪ್ರೀತಿಯಿಂದ ಧನಮಿತ್ರನಿಗೆ ಕೊಡಿಸಿದನು. ವ॥ ಹಾಗೆ ರಾಜನು ಚರ್ಮರತ್ನವನ್ನು ತರಿಸಿಕೊಡಲು ಧನಮಿತ್ರನು ಮಾಧವಸೇನೆಯ ದೀನ ಭಾವವನ್ನು ನೋಡಿ—೨೦೧. "ಮಳೆಯ ನೀರು ಬರುವುದನ್ನು ನಂಬಿಕೊಂಡು ಕೊಳದ ನೀರನ್ನೆಲ್ಲ ಎತ್ತಿ ಹೊರಕ್ಕೆ ಚೆಲ್ಲಿದ ದಡ್ಡನಂತೆ ಈಗ ಮಾಧವಸೇನೆಯ ಸ್ಥಿತಿಯಾಗಿದೆ" ಎಂದು ಯೋಚಿಸಿ ರಾಜನಿಗೆ ಹೇಳಿದನು. ೨೦೨. "ಈ ಚರ್ಮರತ್ನವನ್ನು ನಂಬಿಕೊಂಡು ಮಾಧವಸೇನೆಯು ತನ್ನ ಮನೆಯಲ್ಲಿದ್ದ ಹಣವನ್ನೆಲ್ಲ ದಾನಮಾಡಿ ಕಡು ಬಡವಳಾಗಿದ್ದಾಳೆ. ರಾಜನೆ! ಈ ಅರ್ಥಪತಿಯ ಹಣದಲ್ಲಿ ಸ್ವಲ್ಪ ಹಣವನ್ನು ಇವಳಿಗೆ ಕೊಡು." ವ॥ ಹೀಗೆ ಧನಮಿತ್ರನು ಸ್ವಲ್ಪ ಹಣವನ್ನು ಕೊಡಿಸಿ ಅವಳನ್ನು ಕಳುಹಿಸಿದನು. ತಾನು ಕೃತಾರ್ಥನಾದೆನೆಂದು ಭಾವಿಸಿ ರಾಜನಿಂದ ಅಪ್ಪಣೆಯನ್ನು ಪಡೆದು ತನ್ನ

ಕಂ॥ ಜನವಱಿಯಲರ್ಥಪತಿ ನಿ
ರ್ಧನನಾದುದನಱಿದು ಮೆಱೆವ ಕುಲಪಾಲಕಿಯಂ
ವಿನುತಿಯ ಕುಬೇರದತ್ತಂ
ಧನಮಿತ್ರಂಗಿತ್ತನೊಳ್ಮುಹೂರ್ತದೊಳಾಗಳ್ ೨೦೩

ವ॥ ಅಂತು ಚಿಂತಿಸಿದುವೆಲ್ಲಂ ಸಂತತವಾಗಲಾಂ ಬಟಿಯಂ

ಸಕಲೋಪಾಯಂಗಳಿಂ ತತ್ಪುರದ ಧನಿಕರುಳ್ಳರ್ಥಮಂ ಕಳ್ದು ಭೋಗಾ
ಧಿಕದಿಂ ತ್ಯಾಗಪ್ರದಾನೋನ್ನತಿಯಿನನುಪಮಾತ್ಮಪ್ರಿಯಾ ಸಂಗದಿಂ ಕೌ
ತುಕಮಂ ತಾಳ್ದಿರ್ಪಿನಂ ಭೋಂಕನೆ ಮನದೊಲವಿಂದೊರ್ವೆ ಕೇಳ್ ಭೂಪ ಮತ್ಸೌ
ಖ್ಯಕೆ ಭಂಗಂ ಪೊರ್ದಿತಾರ್ಪಿಂ ವಿಧಿಲಿಖಿತವನುಲ್ಲಂಘಿಸಲ್ಬಲ್ಲನಾವಂ ೨೦೪

ವ॥ ಎಂಬುದುಮದೇನೆಂದರಸಂ ಕೇಳೆ

ಮನದೊಳ್ ಕೂರ್ಪಾಸ್ಯದೊಳ್ ಮ್ಲಾನತೆ ಬಗೆಯೊಳೆ ರೋಷಂ ಲಸದ್ವಾಕ್ಯದೊಳ್ ಭ
ರ್ತ್ಸನೆ ಚಂಚದ್ದೃಷ್ಟಿವಿಕ್ಷೇಪಣದೊಳನುನಯಂ ಪುರ್ಬಿನೊಳ್ ಜರ್ಬು ದೂತೀ
ಜನದೊಳ್ ಚಿತ್ತಾನುತಾಪಪ್ರಿಯುರತಿ ಮುಖದೊಳ್ ಕೋಪಮೊಪ್ಪಲ್ಕೆ ಪೆಂಪಾ
ದ ನವೀನ ಪ್ರೌಢಿಯಿಂದಂ ಪ್ರಣಯ ಕಲಹಮಾಯ್ತೆನ್ನೊಳಬ್ಜಾಕ್ಷಿಗಾಗಳ್ ೨೦೫

ಮನೆಗೆ ಹೋಗಿ ಕೆಲವು ದಿನಗಳಲ್ಲಿದ್ದನು. ಬಳಿಕ— ೨೦೩. ಜನರಿಗೆಲ್ಲ ತಿಳಿದಂತೆ ಅರ್ಥಪತಿಯು ಬಡವನಾದುದನ್ನು ತಿಳಿದು ಕುಬೇರದತ್ತನು ತನ್ನ ಮಗಳು ಕುಲಪಾಲಿಕೆಯನ್ನು ಒಳ್ಳೆಯ ಮುಹೂರ್ತದಲ್ಲಿ ಧನಮಿತ್ರನಿಗೆ ಕೊಟ್ಟು ಮದುವೆ ಮಾಡಿದನು. ವ॥ ಹಾಗೆ ತಾನು ಯೋಚಿಸಿದುದೆಲ್ಲ ಹಾಗೆಯೇ ನೆರವೇರಿತು–ಬಳಿಕ ನಾನು—೨೦೪. ಎಲ್ಲ ರೀತಿಯ ಉಪಾಯಗಳಿಂದಲೂ ಆ ಊರಿನ ಧನಿಕರಲ್ಲಿದ್ದ ಹಣವನ್ನೆಲ್ಲ ಕದ್ದೆನು. ಹೆಚ್ಚಾಗಿ ಭೋಗಿಸಿದೆನು. ಹೆಚ್ಚಾಗಿ ದಾನ ಮಾಡಿದೆನು. ಅಸಮಳಾದ ನನ್ನ ಪ್ರಿಯೆಯ ಸಂಗದಿಂದ ಆನಂದಗೊಂಡಿದ್ದೆನು. ಮಹಾರಾಜನೆ, ಕೇಳು ಒಮ್ಮೆ ಇದ್ದಕ್ಕಿದ್ದ ಹಾಗೆ ನನ್ನ ಸೌಖ್ಯಕ್ಕೆ ಭಂಗವುಂಟಾಯಿತು. ಯಾವನು ತಾನೆ ಹಣೆಯ ಬರಹವನ್ನು ತಪ್ಪಿಸಿಕೊಳ್ಳಬಲ್ಲನು ? ವ॥ ಎಂದು ಹೇಳಿದನು. ಅದೇನೆಂದು ಅರಸನು ಕೇಳಿದನು—೨೦೫. "ನನಗೂ ರಾಗ ಮಂಜರಿಗೂ ಪ್ರಣಯ ಕಲಹವಾಯಿತು. ಮನಸ್ಸಿನಲ್ಲಿ ಸ್ನೇಹ. ಮುಖದಲ್ಲಿ ಕಾಂತಿ ಹೀನತೆ. ಮನಸ್ಸಿನಲ್ಲಿ ರೋಷ. ಮಾತಿನಲ್ಲಿ ನಿಂದೆ. ಚಂಚಲವಾದ ದೃಷ್ಟಿ ವಿಕ್ಷೇಪಣದಲ್ಲಿ ಅನುನಯವು ಹುಬ್ಬಿನಿಂದ ಜಂಬವು ತೋರಿತು. ದೂತೀ ಜನರಲ್ಲಿ ಚಿತ್ತದ ಅನುತಾಪವನ್ನು ತೋಡಿಕೊಳ್ಳುವುದು, ಪ್ರಿಯ ಜನರ ಸಂಗದಲ್ಲಿ ಕೋಪ. ಹೀಗೆ ನವೀನವಾದ ಪ್ರೌಢ ರೀತಿಯಿಂದ ಕಮಲಮುಖಿಯು ನನ್ನಲ್ಲಿ ಪ್ರಣಯ ಕಲಹವನ್ನು ಮಾಡಿದಳು.

ವ॥ ಆ ಪ್ರಣಯ ಕಲಹದ ಪುಗಿಲೊಳ್

ಶಿಶಿರದಿನಂಬುಜಕ್ಕೆ ದುಗುಡಂ ಘನಮೇಘದಿನಾಗಸಕ್ಕೆ ಕ
ರ್ಪಶನಿಯಿನದ್ರಿಗಳ್ಗೆ ಭಯಮರ್ಥವಿಮೋಹದಿನುತ್ತಮರ್ಗೆ ದು
ರ್ಯಶ ಮದಲೇಪದಿಂ ಬುಧರ್ಗೆ ದುರ್ಗತಿಯಪ್ಪವೊಲೆನ್ನೊಳಾದುದಾ
ಶಶಿಮುಖಿಯಿಂದಮೋದವಗುಣಂ ವಿಧಿಯಿಚ್ಛೆಯಿನುರ್ವರಾಧಿಪಾ ೨೦೬

ವ॥ ಅದೆಂತೆನೆ

ಸಕಳ ಸುಗಂಧಸಾರದೊದವಿಂ ಪೊರೆದುತ್ತಮಗಂಧದಿಂದೆ ಕೌ
ತುಕವೆನಲೊಪ್ಪುವೆತ್ತ ತಿಳಿಗಳ್ಗಳನೊಪ್ಪುವ ಹೇಮಪಾತ್ರದೊಳ್
ಸುಕರವೆನಲ್ಕೆ ತುಂಬಿ ಸಖಿಯರ್ವೆರಸುತ್ಸವದಿಂದೆ ಪೀರ್ದಳು
ತ್ಸುಕಮೆನೆ ರಾಗಮಂಜರಿಯದೊಂದು ದಿನಂ ಪೆಸರ್ವೆತ್ತ ಜೊನ್ನದೊಳ್ ೨೦೭

ವ॥ ಅಲ್ಲಿ ಕೆಲಂಬರ್

ಕಡುಪುೞಿಗಳ್ಳನೊಂದು ತಿಳಿವಟ್ಟಲಸಿಟ್ಟೆಱೆಯಲ್ಕೆ ಮೂರು ಸೂೞ್
ಮಿಡಿಮಿಡಿದರ್ಘಮಂ ಕುಡಿದು ಚಪ್ಪೞಿಸಿಕ್ಕಿದ ಸಣ್ಣಮೀಂಗಳಂ
ಮಿಡಿಚೆಗಳಂ ತುಱುಂಕಿ ಮಗುೞ್ದೀಂಟಿಯೆ ಡಱ್ಱನೆ ತೇಗಿ ಬಾೞ್ಗೆಯೆ
ನ್ನೊಡೆಯನೆನುತ್ತೆದೇಂ ಮೆಱೆದರೋ ಸಖಿಯರ್ ಮಧುಪಾನ ಗೋಷ್ಠಿಯೊಳ್
೨೦೮

ವ॥ ಆ ಪ್ರಣಯ ಕಲಹದ ಮೂಲಕ–(ಪ್ರಾರಂಭದಲ್ಲಿ) ೨೦೬. ಶಿಶಿರ ಋತುವಿನಿಂದ ಕಮಲಕ್ಕೆ ದುಃಖವುಂಟಾಗುತ್ತದೆ. ಒತ್ತಾದ ಮೋಡಗಳಿಂದ ಆಕಾಶಕ್ಕೆ ಕಾಂತಿಹೀನತೆಯುಂಟಾಗುತ್ತದೆ. ಸಿಡಿಲಿನಿಂದ ಬೆಟ್ಟಗಳಿಗೆ ಭಯವೂ, ಅರ್ಥಮೋಹದಿಂದ ಉತ್ತಮ ಜನರಿಗೆ ಕೆಟ್ಟ ಹೆಸರೂ, ಮದವೇರುವುದರಿಂದ ವಿದ್ವಾಂಸರಿಗೆ ದುರ್ಗತಿಯೂ, ಉಂಟಾಗುತ್ತದೆ. ಮಹಾರಾಜನೆ, ದೈವೇಚ್ಛೆಯಿಂದ, ಅದರ ಹಾಗೆ ನನ್ನಲ್ಲಿ ಚಂದ್ರಮುಖಿಯಿಂದ ಒಂದು ಅವಗುಣವುಂಟಾಯಿತು. ವ॥ ಅದು ಹೇಗೆಂದರೆ—೨೦೭. ಒಂದು ದಿನ ರಾಗಮಂಜರಿಯು ಬೆಳದಿಂಗಳಿನಲ್ಲಿ ಸಕಲ ಸುಗಂಧಗಳ ಸಾರದಿಂದ ಕೂಡಿದ ಉತ್ತಮವಾದ ಸುವಾಸನೆಯುಳ್ಳ ಆಶ್ಚರ್ಯಕರಗಳಾದ ತಿಳಿಯಾದ ಮದ್ಯಗಳನ್ನು ಹೊಳೆಯುವ ಚಿನ್ನದ ಪಾತ್ರೆಗಳಲ್ಲಿ ತುಂಬಿ ಸಖಿಯರೊಡನೆ ಆನಂದದಿಂದ ಕುಡಿದಳು. ವ॥ ಅಲ್ಲಿ ಕೆಲವರು—೨೦೮. ತುಂಬ ಹುಳಿಯಾದ ಕಳ್ಳನ್ನು ಒಂದು ಸೊಗಸಾದ ಬಟ್ಟಲಿಗೆ ಮೂರು ಸಾರಿ ಸುರಿದು ಫಾಲಕ್ಕೆತ್ತಿ ಎತ್ತಿ ಅರ್ಘವನ್ನು ಕುಡಿದು ಚಪ್ಪರಿಸಿದರು. ಅನಂತರ ಅಲ್ಲಿಟ್ಟಿದ್ದ ಸಣ್ಣ ಮೀನುಗಳನ್ನೂ ಮಿಡಿಚೆಗಳನ್ನೂ ಅಗಿದು ತಿಂದರು. ಮತ್ತೆ ಕುಡಿದು ಡರ್ ಎಂದು ತೇಗಿದರು. 'ನಮ್ಮ ಒಡೆಯನು ಬಾಳಲಿ !' ಎಂದು ಹೇಳುತ್ತಾ ಆ ಮಧುಪಾನ ಗೋಷ್ಠಿ

ಪುಟಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯುಂ ಕೊಳೆಮುಕ್ಕಿ ಮಿಕ್ಕುದಂ
ಕೆಲದವರ್ಗಿತ್ತು ಮತ್ತೆ ತಿಳಿಗಳ್ಳೆಱೆಯಲ್ ಕುಡಿಯಳ್ಳೆ ಪಿಙ್ಗಲಾ
ಗಳೆ ಕುಡಿದೆಟ್ಟು ಡೆಂಘಣಿಸೆ ಬಿಟ್ಟು ನೆಟಲ್ ಸುಟಿಯಲ್ಕೆ ನಕ್ಕು ಕ
ಣ್ಗಳನರೆಮುಚ್ಚಿ ಮುಚ್ಚಿ ತೆಱೆಯುತ್ತೆಸೆದರ್ ಮಧುಪಾನ ಕೋವಿದರ್ ೨೦೯

ವ॥ ಅಂತೊಂದು ದಿವಸಮವರೆಲ್ಲರುಂ ಮಧುಪಾನಮಂ ಮಾಡಿರ್ಪಾಗಳ್ ಪ್ರಣಯ ಕಲಹದೊಳ್ ಮುಳಿದಿರ್ದೆನ್ನಂ ರಾಗಮಂಜರಿ ಕಂಡು

ಕಂ॥ ಕೆಳದಿಯರ ಮಧ್ಯದೊಳ್ ಕೋ
ಮಳೆ ಮಧುಪಾನ ಪ್ರಸಂಗದಿಂದಿರ್ದೆನ್ನೊಳ್
ಮುಳಿಸಿಲ್ಲದೆ ಮಧುವಂ ಮು
ಕ್ಕುಳಿಸಿ ಮದೀಯಾಸ್ಯಕಮಳಮಂ ಚುಂಬಿಸಿದಳ್ ೨೧೦

ವ॥ ಅಂತು ಚುಂಬಿಸಿ ಮತ್ತಂ ಸ್ವಾದುರಸವಾಗಿರ್ಪುದೆಂದೆನ್ನಂ ತನ್ನಂತೆ ಮಾಡಲ್ವೇಳ್ದುದುಂ;

ಕಂ॥ ಸ್ತ್ರೀವಶವಾದವರನ್ವಯ
ಜೀವನಮಂ ಪಾಪಪುಣ್ಯಮಂ ನೀತಿಗಳಂ
ತೀವಿದಿಹಪರದ ಸುಖಮಂ
ಭಾವಿಸುವರೆ ಕಾಮತತ್ವಮಚ್ಚರಿಯಲ್ತೇ ೨೧೧

ಯಲ್ಲಿ ಹಲವು ಸಖಿಯರು ಮೆರೆದರು. ಅದನ್ನೇನೆಂದು ಹೇಳೋಣ! ೨೦೯. ಹುಳಿಯು ಹೆಚ್ಚಾಗಲು ಅಸಹ್ಯಪಟ್ಟುಕೊಂಡರು. ಗುಗ್ಗುರಿಯನ್ನು ಮುಕ್ಕಿದರು. ಉಳಿದುದನ್ನು ಪಕ್ಕದಲ್ಲಿದ್ದವರಿಗೆ ಕೊಟ್ಟರು. ಮತ್ತೆ ತಿಳಿಯಾದ ಕಳ್ಳನ್ನು ಕುಡಿಯಲು ಅಳ್ಳೆಗಳು ಹಿಗ್ಗಿದುವು. ಆಗಲೆ ಮತ್ತೆ ಕುಡಿದು ಎದ್ದು ನಡುಗಿ ಬಿದ್ದರು. ಸುಳಿದ ನೆಳಲನ್ನು ಕಂಡು ನಗುತ್ತಾ ಕಂಗಳನ್ನು ಅರ್ಧ ಮುಚ್ಚಿ ಮುಚ್ಚಿ ತೆರೆಯುತ್ತಿದ್ದರು. ಹೀಗೆ ಮಧು ಪಾನ ಕೋವಿದರು ಪ್ರಕಾಶಿಸಿದರು. ವ॥ ಹೀಗೆಯೇ ಒಂದು ದಿವಸ ಎಲ್ಲರೂ ಮಧು ಪಾನ ಮಾಡಿರುವಾಗ ಪ್ರಣಯ ಕಲಹದಿಂದ ಕೋಪಿಸಿಕೊಂಡಿದ್ದ ನನ್ನನ್ನು ರಾಗ ಮಂಜರಿಯು ನೋಡಿ—೨೧೦. ಗೆಳತಿಯರ ನಡುವೆ ಆ ಕೋಮಳೆಯು ಮಧುಪಾನ ಮಾಡುತ್ತಾ ಇದ್ದು, ಕೋಪವಿಲ್ಲದೆಯೇ ಮದ್ಯವನ್ನು ನನ್ನ ಮೇಲೆ ಮುಕ್ಕಳಿಸಿ ನನ್ನ ಮುಖ ಕಮಲವನ್ನು ಚುಂಬಿಸಿದಳು. ವ॥ ಹಾಗೆ ಚುಂಬಿಸಿ ಮತ್ತೆ 'ಮಧುವು ಮಧುರ ವಾಗಿದೆ. ನೀನೂ ನನ್ನಂತೆ ಮಾಡು' ಎಂದು ನನಗೆ ಹೇಳಿದಳು—೨೧೧. ಸ್ತ್ರೀವಶರಾದ ವರು ವಂಶದ ಗೌರವ ಜೀವನವನ್ನೂ ಪಾಪಪುಣ್ಯಗಳನ್ನೂ ನೀತಿಗಳನ್ನೂ ಇಹಪರದ ಸುಖವನ್ನೂ ಯೋಚಿಸುವರೆ? ಕಾಮತತ್ತ್ವವು ಆಶ್ಚರ್ಯಕರವಾದುದಲ್ಲವೇ?

ವ॥ ಅದಲ್ಲದೆಯುಂ

ಚತುರಕಳಾಢ್ಯರುಂ ಕುಶಲಜೀವನರುಂ ಸುಕೃತಾತ್ಮರುಂ ಕರಂ
ಯತಿಗಳನುತ್ತಮಾನ್ವಯುಪವಸ್ಥಿತರಂ ಸಕಲಾಗಮಜ್ಞರುಂ
ಗತಿಗೆಡಿಸಲ್ಕೆ ಮತ್ತೆ ಪೆಱತಾವುದೊ ಭಾವಿಸೆ ಠಾವು ದೇವ ಕೇಳ್
ಸತಿಯರ ಸಂಗಮಲ್ಲದೆ ಮನೋಜನ ಜಾಣ್ಮೆಯನಾರೊ ಮೀಱುವರ್ ೨೧೨

ವ॥ ಅದು ಕಾರಣಮಾನವಳಂ ಮೀಱಲರಿಯದೆ

ಅಲರ್ಗಣ್ ಕೆಂಪಡರಲ್ಕೆ ಪೊಂಗಿದಧರಂ ಬೆಳ್ಪುಗೆ ರೋಮೋದ್ಗಮಂ
ತಲೆದೋಱಲ್ ಬೆಮರುಣ್ಮೆ ಲಜ್ಜೆ ತೊಲಗಲ್ ನಿತ್ರಾಣಮಾಗಲ್ ಮದಂ
ಬಲಿಯಲ್ ಕಣ್ಮುಗಿಯುತ್ತೆ ಮೂರ್ಛೆಮಿಗೆ ತೋಱಲ್ ನಾಡೆ ಚೆಲ್ವಾದುದ
ಗ್ಗಳವೆಂಬಂತಿರಲಿನ್ನದೇವೊಗಟ್ಟುವುದೋ ಕಾದಂಬರೀ ಪಾನಮಂ ೨೧೩

ವ॥ ಅನಂತರಂ

ಕಂ॥ ಉನ್ಮಾದಂ ತಲೆದೋಱಲ್
ಮನ್ಮನಮಂ ನಿಲಿಸಲಱಿಯದಲ್ಲಿಂದಾಗಳ್
ತನ್ಮಾತ್ರದೊಳಾರಾತ್ರಿಯೊ
ಳುನ್ಮೀಳಿತದೃಷ್ಟಿಯಾಗಿ ಪುರದೊಳ್ ಪರಿವೆಂ ೨೧೪

ವ॥ ಅದೂ ಅಲ್ಲದೆ. ೨೧೨. ದೇವ! ಕೇಳು. ಚತುರರಾದ ಕಲಾವಿದರನ್ನೂ, ಕುಶಲದಿಂದ ಜೀವಿಸುವವರನ್ನೂ, ಪುಣ್ಯಾತ್ಮರನ್ನೂ, ಯತಿಗಳನ್ನೂ, ಉತ್ತಮವಾದ ವಂಶದಲ್ಲಿ ಹುಟ್ಟಿದವರನ್ನೂ, ಸಕಲ ಶಾಸ್ತ್ರಗಳನ್ನರಿತವರನ್ನೂ ಗತಿಗೆಡಿಸಲು ಸ್ತ್ರೀಯರ ಸಹವಾಸವಲ್ಲದೆ ವಿಚಾರಿಸಿದರೆ ಮತ್ತೆ ಯಾವ ಬೇರೆ ಸಾಧನವಿದೆ ? ಮನ್ಮಥನ ಜಾಣ್ಮೆಯನ್ನು ಯಾರು ತಾನೇ ಮೀರಬಲ್ಲರು ? ವ॥ ಆ ಕಾರಣದಿಂದ ನಾನು ಅವಳ ಮಾತನ್ನು ಮೀರಲಾರದೆ,—೨೧೩. ಮದ್ಯಪಾನವನ್ನು ಮಾಡಿದೆನು. ಅದರ ಮಹಿಮೆಯನ್ನು (ಪ್ರಭಾವವನ್ನು) ಏನೆಂದು ಹೊಗಳಲಿ ? ಹೂವಿನಂತಹ ಕಣ್ಣು ಕೆಂಪಾಯಿತು. ಉಬ್ಬಿದ ತುಟಿಯು ಬಿಳಿಚಿಕೊಂಡಿತು. ರೋಮಾಂಚವುಂಟಾಯಿತು. ಮೈಬೆವರಿತು. ನಾಚಿಕೆ ತೊಲಗಿತು. ಶಕ್ತಿಗುಂದಿತು. ಮದವು ಬಲಿಯಿತು. ಕಂಗಳನ್ನು ಮುಚ್ಚಿ ಮೂರ್ಛೆಯು ತಲೆದೋರಿತು. ಹೀಗೆ ಮದ್ಯಪಾನದ ಪ್ರಭಾವವು ತುಂಬ ಸೊಗಸಾಗಿದ್ದಿತು. ವ॥ ಅನಂತರ ೨೧೪. ನನ್ನಲ್ಲಿ ಉನ್ಮಾದವು ತಲೆದೋರಿತು. ನನ್ನ ಮನಸ್ಸನ್ನು ವಶದಲ್ಲಿ ಇಟ್ಟುಕೊಳ್ಳಲಾಗಲಿಲ್ಲ. ಆಗ ಆ ಸ್ಥಿತಿಯಲ್ಲಿಯೇ ರಾತ್ರಿ ಕಣ್ಣುಗಳನ್ನು ತೆರೆದುಕೊಂಡೇ ಪುರ

ವ॥ ಅಂತೆಗಮೆನ್ನ ಪಿಂತನೆ

ಕಂ॥ ಗುಣಿ ರಾಗಮಂಜರಿಗೆ ಸ
ದ್ಗಣಿಕಾರತ್ನಕ್ಕೆ ನಲ್ಮೆಯಿಂ ಧೂರ್ತಶಿಖಾ
ಮಣಿ ನೀತಿವೆತ್ತ ಮುದುಗುಂ
ಟಣಿಯಪ್ಪಳ್ ಮಾತೆವೋಲ್ ಸೃಗಾಲಿಕೆಯೆಂಬಳ್ ೨೧೫

ಪರಹೃದಯ ಪ್ರವೀಣತೆಯುಮೊಗಟೆಯರ್ಥಮನೂರ್ಧ್ವ ಬುದ್ಧಿಯು
ಚ್ಚರಿಯುಮನನ್ವಯಾರ್ಥ ಘಟನಾವಿಧಿಯುಂ ಸತತಂ ಲಸತ್ಕಳಾ
ಪರಿಣತಿಯುಂ ಸಮಸ್ತಜನವೈಶಿಕಮುಂ ವಿಧಿಯೊಂದುಗೂಡಿದಂ
ಧರಣಿಯೊಳೇಂಬಿನಂ ಮೆಱೆವಳಾ ಮುದುಗುಂಟಣಿಯುರ್ವರಾಧಿಪಾ ೨೧೬

ವ॥ ಅಂತವಳೆನ್ನ ಪಿಂದನೆ ಪರಿತರ್ಪಾಗಳ್

ಕಂ॥ ತಿಂತಿಣಿಯ ರಾತ್ರಿಯೊಳ್ ಕಾ
ಲಾಂತಕರಂತಿರ್ಪ ನಗರರಕ್ಷಕರಾಗಳ್
ಭ್ರಾಂತಿಂ ಪರಿದೆನ್ನಂ ಪಿಡಿ
ದೆಂತೋಡುವೆಯೆಂದು ಪಲವು ಪರಿಯಿಂ ಪೊಡೆದರ್ ೨೧೭

ವ॥ ಅಂತವರೆನ್ನಂ ಪಿಡಿದು ಪೊಡೆಯಲೊಡಂ

ಆವಂಗಾರದು ಕರ್ಮಂ
ಭಾವಿಸಲುನ್ಮತ್ತನಾದ ಪೊಟ್ಟದು ವಚನ
ಕ್ಕಾವಗಮನೇಕ ವಿಧದಿಂ
ತೀವಿರ್ಪುದು ಸಹಜಮಲ್ತೆ ನೃಪಕುಲತಿಲಕಾ ೨೧೮

ದಲ್ಲಿ ತಿರುಗಾಡಿದೆನು. ವ॥ ಆಗ (ನನ್ನ ಹಿಂದೆಯೇ) —೨೧೫. ಧೂರ್ತ ಶಿಖಾಮಣಿಯಾದ ಮುದಿ ಕುಂಟಣಿ ಸೃಗಾಲಿಕೆಯೆಂಬುವಳು ಗುಣಶಾಲಿಯಾದ ಗಣಿಕಾರತ್ನವಾದ ರಾಗಮಂಜರಿಗೆ ತಾಯಿಯಂತಿದ್ದಳು. ೨೧೬. ಮಹಾರಾಜನೆ! ಇತರರ ಹೃದಯದ ಭಾವಗಳನ್ನು ತಿಳಿಯಬಲ್ಲ ಚಾತುರ್ಯ, ಒಗಟೆಯ ಅರ್ಥವನ್ನರಿಯಬಲ್ಲ ಶಕ್ತಿ, ಆಶ್ಚರ್ಯಕರವಾದ ಚುರುಕು ಬುದ್ಧಿ, ಸೇರದ ವಸ್ತುಗಳನ್ನು ಸೇರಿಸುವ ಸಾಮರ್ಥ್ಯ, ಸುಂದರವಾದ ಕಲೆಗಳಲ್ಲಿ ಪರಿಣತಿ, ಸಮಸ್ತ ಜನರನ್ನು ವಶಪಡಿಸಿಕೊಳ್ಳುವ ವಂಚನಾ ನೈಪುಣ್ಯ—ಇವೆಲ್ಲವನ್ನೂ ಭೂಮಿಯಲ್ಲಿ ವಿಧಿಯು ಒಂದುಗೂಡಿಸಿ ನಿರ್ಮಿಸಿದನೋ ಎಂಬಂತೆ ಆ ಮುದುಗುಂಟಣಿಯು ಪ್ರಕಾಶಿಸುತ್ತಿದ್ದಳು. ವ॥ ಹೀಗಿದ್ದ ಅವಳು ನನ್ನ ಹಿಂದೆಯೇ ವೇಗವಾಗಿ ಬರುತ್ತಿದ್ದಾಗ—೨೧೭. ಆ ಕಗ್ಗತ್ತಲೆಯ ರಾತ್ರಿಯಲ್ಲಿ ಯಮರಂತಿದ್ದ ನಗರ ರಕ್ಷಕರು ಆಗ ಭ್ರಾಂತಿಯಿಂದ ಓಡಿ ಬಂದು ನನ್ನನ್ನು ಹಿಡಿದರು. ಮತ್ತು 'ಏಕೆ ಓಡುತ್ತಿದ್ದೀಯೆ ?' ಎಂದು ಹೇಳಿ ಹಲವು ರೀತಿಯಿಂದ ಹೊಡೆದರು ವ॥ ಹಾಗೆ ಅವರು ನನ್ನನ್ನು ಹಿಡಿದು ಹೊಡೆಯಲು—೨೧೮. ನೃಪಕುಲತಿಲಕಾ! ವಿಚಾರ ಮಾಡಿದರೆ, ಯಾರಿಗೂ ಕರ್ಮದ ಫಲವನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದು ನಾನು ಪ್ರೈ

ವ॥ ಅದು ಕಾರಣಂ

ಕಂ॥ ಪಿಡಿವವನೆನ್ನನದಾವಂ
ಪೊಡೆದಿರ್ಕಡಿವಮಾಟ್ಪೆನೆನ್ನ ಖಡ್ಗದಿನಾತಂ
ಮೃಡನಾದೊಡಾಗಲೆಂದು
ಗ್ಗಡಿಸಿದೆನಾನತಿಭಯಂ ಕರಂ ಪೊಣ್ಮುವಿನಂ ೨೧೯

ವ॥ ಅಂತಾಂ ಪೂರ್ವವಾಸನೆಯುಪ್ಪ ಕಠೋರವಚನಮಂ ನುಡಿಯೆ

ಕಂ॥ ಅನ್ನೆಗಮವರೆಲ್ಲರ್ ಪೊಡೆ
ದೆನ್ನಂ ಕೈವಿಡಿದು ಕಟ್ಟಿ ಮನದತಿಮುಳಿಸಿಂ
ಬನ್ನಕ್ಕೆ ತಂದೊಡೆನ್ನ ಮ
ದನ್ನೆಟ್ಟನೆ ಪೋಗೆ ತಿಳಿವು ಪುಟ್ಟಿತ್ತಾಗಳ್ ೨೨೦

ವ॥ ಆ ಸಮಯದೊಳ್ ಸೃಗಾಲಿಕೆಯುಮಳುತ್ತುಂ ಬರಲದನಾಂ ಕಂಡು

ಎನಗಾಪ್ತಂ ಧನಮಿತ್ರನೆಂದಱಿವುದೀಲೋಕಂ ಮದೀಯಾಪ್ತ ಕಾ
ಮಿನಿಯೆಂಗುಂ ಧರೆ ರಾಗಮಂಜರಿಯನೀಯಿರ್ವರ್ಗತಿ ಕ್ಲೇಶಮಿಂ
ದೆನಸುಂ ಬಂದಪುದಿಂತಿದಂ ತೊಲಗಿಸಲ್ವೇಟ್ಕೆಂದುಪಾಯ ಪ್ರಚಿಂ
ತನೆಯುಂ ಚಿಂತಿಸುತುಂ ಸೃಗಾಲಿಕೆಯನಾಂ ಸಕ್ರೋಧದಿಂ ನೋಡಿದೆಂ ೨೨೧

ಮರತು ಹುಚ್ಚನಾಗಿದ್ದ ಕಾಲ. ಆಗ ಅನೇಕ ವಿಧವಾಗಿ ಮಾತನಾಡುವುದೂ ಸಹಜವಾಗಿದೆಯಲ್ಲವೇ ? ವ॥ ಆ ಕಾರಣದಿಂದ, ೨೧೯. 'ನನ್ನನ್ನು ಹಿಡಿದವನು ಯಾವನು ? ಆತನು ಶಿವನೇ ಆಗಿರಲಿ. ನನ್ನ ಕತ್ತಿಯಿಂದ ಅವನನ್ನು ಹೊಡೆದು ಎರಡು ತುಂಡು ಮಾಡುತ್ತೇನೆ.' ಎಂದು ಬಹಳ ಭಯವುಂಟಾಗುವಂತೆ ನಾನು ಗರ್ಜಿಸಿದೆನು. ವ॥ ಹಾಗೆ ನಾನು ಹಿಂದಿನ ಕರ್ಮ ವಾಸನೆಯಿಂದ ಕಠೋರವಾದ ಮಾತನ್ನಾಡಲು—೨೨೦. ಆಗ ಅವರೆಲ್ಲರೂ ನನ್ನನ್ನು ಹೊಡೆದು ಅತಿ ಕೋಪದಿಂದ ಕೈಗಳನ್ನು ಹಿಡಿದು ಕಟ್ಟಿ ಭಂಗಪಡಿಸಿದರು. ಅದರಿಂದ ಆಗ ನನ್ನ ಮದವು ಮಾಯವಾಯಿತು. ತಿಳಿವಳಿಕೆ ಹುಟ್ಟಿತು. ವ॥ ಆ ಸಮಯದಲ್ಲಿ ಸೃಗಾಲಿಕೆಯು ಅಳುತ್ತಾ ಬಂದಳು. ನಾನು ಅದನ್ನು ನೋಡಿ— ೨೨೧. 'ಧನಮಿತ್ರನು ನನಗೆ ಆಪ್ತಮಿತ್ರನೆಂದು ಈ ಲೋಕಕ್ಕೇ ತಿಳಿದಿದೆ. ರಾಗಮಂಜರಿಯು ನನ್ನ ಪ್ರಿಯಳೆಂದು ಭೂಮಿಗೆ ತಿಳಿದಿದೆ. ಈ ಇಬ್ಬರಿಗೂ ಸ್ವಲ್ಪವೂ ಕ್ಲೇಶವುಂಟಾಗದಂತೆ ಈ ತೊಂದರೆಯನ್ನು ತಪ್ಪಿಸಬೇಕು.' ಎಂದು ಒಂದು ಉಪಾಯವನ್ನು ಅದಕ್ಕಾಗಿ ಯೋಚಿಸುತ್ತಾ ಆ ಸೃಗಾಲಿಕೆಯನ್ನು ಕೋಪದಿಂದ ನೋಡಿದೆನು.

ಕಂ॥ ಪೋಗೆಲೆ ಕುಂಟಣಿ ಕುಟಿಲೋ
ದ್ಯೋಗಂ ಮಿಗೆ ರಾಗಮಂಜರಿಯುಮಾನಿರ್ದಂ
ತೀಗಳ್ ಧನಮಿತ್ರಂಗೊಳ
ಗಾಗಿರ್ಪಂತೆಸಗುತಿರ್ಪೆ ನಾನರಿಯದುದೇ ೨೨೨

ವ॥ ಎಂದು ಮತ್ತಂ

ಕಂ॥ ಎನಗಾಪ್ತಮಿತ್ರನೆಂಬೊಂ
ದು ನೆವಂದೋಱುತ್ತೆ ರಾಗಮಂಜರಿಯಂ ತಾ
ನನುನಯದಿಂ ಬೆರಸಿರ್ಪಂ
ಧನಮಿತ್ರಂ ದುಷ್ಟಮಿತ್ರನೆಂಬುದು ಪುಸಿಯೇ ೨೨೩

ವ॥ ಅದುಕಾರಣಂ

ಕಂ॥ ಎಲಗೆ ನಿಜಸುತೆಯ ಭೂಷಣ
ಕುಲಮಂ ಧನಮಿತ್ರನ ಜನರತ್ನಮನೀ ಕ
ಟ್ಟಲೆಯೊಳ್ ಕಳ್ದಿಂ ನಿಮ್ಮಯ
ಬಲಮಂ ನಡೆ ನೋೞ್ಪೆನಿನ್ನಲೇ ಕುಟಿಲಾತ್ಮೇ ೨೨೪

ವ॥ ಎಂಬುದುಮವಳತಿ ನಿಪುಣೆಯಪ್ಪುದಱಿಂದೆನ್ನ ವಚನಭಾವಕೌಶಲಮನಱಿದದಂ ನೆಲೆಮಾಡಲೆಂದು

ಕಂ॥ ನೀನಾರ್ಜಿಸಿದರ್ಥಮೆ ಕೊಳೆ
ಮಾನಿನಿಯರ ಧನಮನುತ್ತಮರ್ಕಳೆ ವಿಟವಿ
ದ್ಯಾನಿಲಯ ಮತ್ತಮೂಜೆಗ
ನೂನವಿಭೂಷಣಮನೀವುದಾಂ ಪೊಡೆಮಡುವೆಂ ೨೨೫

೨೨೨. "ಎಲೆ ಕುಂಟಣಿ, ಹೋಗು ಹೋಗು. ನಿನ್ನ ಕುಟಿಲ ಪ್ರಯತ್ನಗಳು ಮಿತಿ ಮೀರಿದುವು. ನಾನಿದ್ದಂತೆಯೇ ನೀನು ರಾಗಮಂಜರಿಯನ್ನು ಧನಮಿತ್ರನಿಗೆ ವಶವಾಗು ವಂತೆ ಮಾಡುತ್ತಿದ್ದೀಯೆ. ನನಗೆ ಅದು ತಿಳಿಯದೇ ?" ವ॥ ಎಂದು ಹೇಳಿ ಮತ್ತೂ— ೨೨೩. ನನಗೆ ಆಪ್ತಮಿತ್ರನೆಂದು ನಟಿಸುತ್ತಾ ತಾನು ರಾಗಮಂಜರಿಯನ್ನು ಸ್ನೇಹದಿಂದ ಕೂಡಿಕೊಂಡಿದ್ದಾನೆ. ಧನಮಿತ್ರನು ದುಷ್ಟಮಿತ್ರನೆಂಬುದು ಸುಳ್ಳಲ್ಲ. ವ॥ ಆ ಕಾರಣ ದಿಂದ ೨೨೪. ಎಲಗೆ, ನಿನ್ನ ಮಗಳ ಒಡವೆಗಳನ್ನೂ ಧನಮಿತ್ರನ ಚರ್ಮರತ್ನವನ್ನೂ ಈ ಕತ್ತಲೆಯಲ್ಲಿ ನಾನೇ ಕದ್ದೆನು. ಎಲೆ ಕುಟಿಲ ಸ್ವಭಾವದವಳೇ, ಇನ್ನು ನಿಮ್ಮ ಬಲ ವನ್ನು ಚೆನ್ನಾಗಿ ನೋಡುವೆನು". ವ॥ ಎಂದು ಹೇಳಿದೆನು, ಅವಳು ಅತಿ ನಿಪುಣೆ ಯಾಗಿದ್ದುದರಿಂದ ನನ್ನ ಮಾತಿನ ಚಮತ್ಕಾರವಾದ ಭಾವವನ್ನು ತಿಳಿದು ಅದನ್ನು ಸ್ಥಿರಪಡಿಸಬೇಕೆಂದು ೨೨೫. "ನಿನ್ನಂಥ ಉತ್ತಮರೇ ಸ್ತ್ರೀಯರ ಹಣವನ್ನು ತೆಗೆದು ಕೊಂಡರೆ ಅದು ನೀನು ಸಂಪಾದಿಸಿದ ಹಣವಾಗುತ್ತದೆಯೇ ? ವಿಟ ವಿದ್ಯೆಗಾಶ್ರಯ

ಕಂ|| ಧನಮಿತ್ರನ ಜಿನರತ್ನವ
ನನುನಯದಿಂದೀಗೆ ಮಾಣ್ಗೆ ಮತ್ಪುತ್ರಿಯುಮಂ
ಡನಮಂ ದಯೆಗೆಯ್ ವೇಶ್ಯಾ
ವನಿತೆಯರಾವಲ್ಪ ಜೀವಿಗಳ್ ದಿಟಮಲ್ತೇ ೨೨೬

ವ|| ಎಂದೊಡಾಂ ಕರುಣಿಸಿದಂತೆ

ಕಂ|| ನಿನ್ನೊಡವೆಯನಿತ್ತೊಡಮೇ
ನೆನ್ನಂ ವಂಚಿಸಿದ ಧೂರ್ತಧನಮಿತ್ರನ ಗ
ರ್ವಂ ನೆರೆವ ಚರ್ಮಭಸ್ತ್ರಿಕೆ
ಯಂ ನೆಟ್ಟನೆ ಕುಡುವೆನಲ್ಲ ಬಗೆ ನಿಶ್ಚಯಮಂ ೨೨೭

ವ|| ಎಂಬುದುಮವಳ್ ಪುರರಕ್ಷಕರ್ಗೆ ಕೈಮುಗಿದು ಧನಮಿತ್ರನ ಚರ್ಮರತ್ನಮಂ ಕುಡದೊಡಮೇನೆನ್ನ ಮಗಳಾಭರಣಮಂ ಕುಡುವಂತೆ ಪೇೞಿಮೆನಲವರಿಂತೆಂದರ್

ಕಂ|| ಎಲವೆಲವೊ ನಾಳೆ ನಿನ್ನಯ
ತಲೆಯಂ ಕೊಯ್ದು ಜಿನರತ್ನಮಂ ಕೊಂಡಪೆವೀ
ಲಲನೆಯ ಭೂಷಣಮಂ ಕೋ
ಟಲೆಗೊಳಿಸದೆ ಕುಡುವುದೀಗಳೊಲ್ವೊಡೆ ತನುವಂ ೨೨೮

ವ|| ಎಂದೊಡಾಂ ಬೞಿಕ್ಕಾಭರಣಮಿರ್ದ ಠಾವನೇಕಾಂತದೊಳ್ ಪೇೞ್ವೆನೆಂದವಳಂ ಸಾರಗ್ಗೆ ಕರೆದು

ನಾದವನೆ ! ನನ್ನ ಮಗಳಿಗೆ ಶ್ರೇಷ್ಠವಾದ ಆ ಆಭರಣಗಳನ್ನು ಕೊಟ್ಟುಬಿಡು. ನಿನಗೆ ನಾನು ನಮಸ್ಕರಿಸುತ್ತೇನೆ. ೨೨೬. ಧನಮಿತ್ರನ ಚರ್ಮರತ್ನವನ್ನು ವಿನಯದಿಂದ ಕೊಡು ಅಥವಾ ಬಿಡು. ನನ್ನ ಮಗಳ ಒಡವೆಗಳನ್ನು ದಯೆಯಿಟ್ಟು ಕೊಟ್ಟು ಬಿಡು. ನಾವು ಸೂಳೆಯರು ಅಲ್ಪ ಜೀವಿಗಳು. (ಬಹುಕಾಲ ಜೀವಿಕೆ ನಡೆಸಲು ಆಗದವರು) ಇದು ನಿಜವಷ್ಟೇ." ವ|| ಎಂದು ಹೇಳಿದಳು. ನಾನು ಅವಳ ಮೇಲೆ ಕರುಣೆದೋರಿದವನಂತೆ – ೨೨೭. "ನಿನ್ನ ಒಡವೆಗಳನ್ನು ನಿನಗೆ ಕೊಡುತ್ತೇನೆ. ಆದರೂ ನನ್ನನ್ನು ವಂಚಿಸಿದ ಧೂರ್ತನಾದ ಧನಮಿತ್ರನ ಗರ್ವಕ್ಕೆ ಆಧಾರವಾದ ತೊಗಲ ಚೀಲವನ್ನು ಮಾತ್ರ ಖಂಡಿತ ಕೊಡುವುದಿಲ್ಲ. ಇದು ನಿಶ್ಚಯ" ೨೨೭. ವ|| ಎಂದು ಹೇಳಿದೆನು. ಅದಕ್ಕೆ ಅವಳು ನಗರರಕ್ಷರಿಗೆ ಕೈಮುಗಿದು 'ಧನಮಿತ್ರನ ಚರ್ಮರತ್ನವನ್ನು ಕೊಡದೆ ಹೋದರೇನೂ ಚಿಂತೆಯಿಲ್ಲ. ನನ್ನ ಮಗಳ ಒಡವೆಗಳನ್ನಾದರೂ ಕೊಡುವಂತೆ ಹೇಳಿ ಎಂದು ಹೇಳಿದಳು. ಅದಕ್ಕೆ ಅವರು ಹೇಳಿದರು. ೨೨೮. "ಎಲವೆಲವೋ ನಾಳೆ ನಿನ್ನ ತಲೆಯನ್ನು ಕಡಿದು ಚರ್ಮರತ್ನವನ್ನು ನಿನ್ನಿಂದ ತೆಗೆದುಕೊಳ್ಳುವೆವು. ಈಗ ನಿನಗೆ ನಿನ್ನ ಶರೀರವು ಪ್ರಿಯವಾಗಿದ್ದರೆ, ಈ ಲಲನೆಯ ಒಡವೆಗಳನ್ನು ತೊಂದರೆಮಾಡದೆ ಕೊಟ್ಟುಬಿಡು". ವ|| ಅದಕ್ಕೆ ನಾನು 'ಆಭರಣಗಳಿರುವ ಜಾಗವನ್ನು ಏಕಾಂತದಲ್ಲಿ

ಕಂ॥ ನಿನ್ನ ಸಖಂ ಸಿಲ್ಕಿದಪಂ
ನಿನ್ನಿರುಳಿಂದದಱ ದೆಸೆಯಿನೆನಗಂ ನಿನಗಂ
ಬನ್ನಂ ಬರ್ಪುದೆನಲ್ ಕೇ
ಳ್ದೆನ್ನಂ ನಿನ್ನೆಡೆಗೆ ಕಳಿಪಿದಂ ಧನಮಿತ್ರಂ ೨೨೯

ವ॥ ಎಂದು ಧನಮಿತ್ರಂಗೆ ಪೋಗಿ ಪೇೞೆಂದು ಮತ್ತಮಿಂತೆಂದೆಂ

ಕಂ॥ ಇಂತಾಂ ಸಿಲ್ಕಿದೆನೆಂದತಿ
ಚಿಂತಿಸದಿನ್ನೆನ್ನನೊಲ್ದು ಬಿಡಿಸುವ ತೆಱನಂ
ಚಿಂತಿಸುವುದು ಧನಮಿತ್ರಂ
ಮುಂತಣ ಕಾರ್ಯಕ್ಕೆ ಕಾರಣಂ ನೀನಲ್ತೇ ೨೩೦

ವ॥ ಎಂದಾಂ ಆಭರಣಮಿರ್ದ ಠಾವಂ ಪೇೞ್ವಂತೆ ಪೆಱತೊಂದು ಕಾರ್ಯವಂ ಪೇೞ ಲದಂ ಕೇಳ್ದು ಕೆಯ್ಗಳಂ ಮುಗಿದು

ನಿನಗಂಗರಾಜನೊಲ್ಗಿ
ಜನವನಿತುಂ ಹಿತವನೆಸಗುಗಧಿದೇವತೆಯೊ
ಲ್ದನುಕೂಲಪಕ್ಕೆನುತ್ತುಂ
ಧನಮಿತ್ರನ ಪೊರೆಗೆ ಪೋದಳಾಗಳ್ ಬೇಗಂ ೨೩೧

ವ॥ ಅಂತಾ ಸೃಗಾಲಿಕೆ ಪೋಪುದುಮಿತ್ತಲ್

ಹೇಳುವೆನು' ಎಂದು ಹೇಳಿ ಅವಳನ್ನು ಹತ್ತಿರಕ್ಕೆ ಕರೆದು – ೨೨೯. ನಿನ್ನ ಗೆಳೆಯನು ನೆನ್ನೆ ರಾತ್ರಿ ಸಿಕ್ಕಿದನು. ಇದು ಅದರ ದೆಸೆಯಿಂದ ನನಗೂ ನಿನಗೂ ತೊಂದರೆ ಯುಂಟಾಗುವುದು – ಎಂದು ಧನಮಿತ್ರ, ನನ್ನನ್ನು ನಿನ್ನ ಹತ್ತಿರಕ್ಕೆ ಕಳುಹಿಸಿದನು. ವ॥ ಎಂದು ಧನಮಿತ್ರನಿಗೆ ಹೋಗಿ ಹೇಳು' ಎಂದು ಹೇಳಿ ಮತ್ತೆ ಹೀಗೆ ಹೇಳಿದೆನು. ೨೩೦. ಹೀಗೆ ನಾನು ಸಿಕ್ಕಿಬಿದ್ದೆನೆಂದು ತುಂಬ ಚಿಂತಿಸಬೇಕಾಗಿಲ್ಲ. ಧನಮಿತ್ರನು ನನ್ನನ್ನು ಅಕ್ಕರೆಯಿಂದ ಬಿಡಿಸುವ ದಾರಿಯನ್ನು ಯೋಚಿಸಲಿ. ಮುಂದೆ ಆಗಬೇಕಾದ ಕೆಲಸಕ್ಕೆ ನೀನೇ ಕಾರಣವು" ವ॥ ಎಂದು ನಾನು ಆಭರಣಗಳಿರುವ ಜಾಗವನ್ನು ಹೇಳುವ ವನಂತೆ ಮತ್ತೊಂದು ಕೆಲಸವನ್ನು ಹೇಳಿದೆನು. ಅದನ್ನು ಕೇಳಿ ಅವಳು ಕೈಗಳನ್ನು ಜೋಡಿಸಿಕೊಂಡು – ೨೩೧. "ನಿನಗೆ ಅಂಗರಾಜನು ಒಲಿಯಲಿ. ಈ ಜನರೆಲ್ಲ ಹಿತ ವನ್ನುಂಟುಮಾಡಲಿ. ಅಧಿದೇವತೆಯು ಪ್ರೀತಿಯಿಂದ ಅನುಕೂಲವಾಗಲಿ" ಎಂದು ಹೇಳುತ್ತಾ ಧನಮಿತ್ರನ ಹತ್ತಿರಕ್ಕೆ ಬೇಗ ಹೋದಳು- ವ॥ ಹಾಗೆ ಸೃಗಾಲಿಕೆಯು

ಚಿಂತೆಯ ಮಂತಣಂ ದುಃಗುಡದೋವರಿ ಜಾಡ್ಯದ ಬೀಡು ದುಃಖಗೇ
ಹಂ ತನುಬಾಧೆಯಾಲಯಮಮಂಗಲದಿಕ್ಕೆಯಮಾರ್ಗದಾಗರಂ
ಭ್ರಾಂತಿನ ಜನ್ಮಭೂಮಿಯೆನಿಪಗ್ಗಳಬಂಧನ ಮಂದಿರಕ್ಕದೇ
ನುಂ ತಡವಿಲ್ಲದೊಯ್ದಿನಗೆ ಸಂಕಲೆಯಂ ಮುಳಿಸಿಂ ತೊಡರ್ಚಿದರ್ ೨೩೨

ಉಭಯಕಟಂಗಳಿಂದೊಸರ್ವಮೋಲ್ಮದದಿಂ ಕಡುಸೊರ್ಕಿಮಿಕ್ಕುಪಾ
ಯ್ವಿಭವನನೇಕದಂಡಹತಿಯಿಂ ಸೃಣಿಘಾತದಿನಾದ್ರ್ಯಪಾಯದಿಂ
ದಭಿಭವಮಂ ನಿಮಿರ್ಚಿ ದೃಢಶೃಂಖಲೆಯಿಂ ಸಲೆ ಯಂತ್ರಿಪಂದದಿಂ
ರಭಸದೊಳೆನ್ನ ಕಾಲ್ಗವರ್ಗಳಾಗಳೆ ಸಂಕಲೆಯಂ ತೊಡರ್ಚಿದರ್ ೨೩೩

ವ॥ ಅಂತು ತೊಡರ್ಚಲಲ್ಲಿಗೆ ಮಱುದಿನಂ ಸೃಗಾಲಿಕೆ ಬಂದು

ನೀನೆನ್ನೊಳ್ ಪೇಟ್ದ ಕಾರ್ಯಸ್ಥಿತಿಯನೊಸೆದು ತನ್ಮಿತ್ರನೊಳ್ಪೇಟ್ದೊಡಾತಂ
ತಾನೆಲ್ಲಾಕಾರ್ಯಮಂ ಸೈತೆಸಗಿದನವನೀತೆಲ್ಲಮಂ ಕೇಳ್ ಮನಃಪ್ರೇ
ಮಾನಂದಂ ಪೆರ್ಚಲೀಬಂಧನಮಟಿಯಲೆನುತ್ತಂತವಳ್ ತನ್ನ ಬುದ್ಧಿ
ಜ್ಞಾನಂ ಚಿಲ್ವಾಗಲೇಕಾಂತದೊಳೆನಗಿನಿತಂ ಪೇಟಲುದ್ಯುಕ್ತೆಯಾದಳ್ ೨೩೪

ಹೋದಳು – ಇತ್ತ – ೨೩೨. ನನ್ನನ್ನು ಚಿಂತೆಯ ಮಂತ್ರಾಲೋಚನಾಸಭೆ, ಮರುಕದ ಒಳಮನೆ, ಜಡತನದ ವಾಸಸ್ಥಾನ, ದುಃಖದ ಮನೆ, ಶರೀರದ ಬಾಧೆಗೆ ಮನೆ. ಅಮಂಗಲದ ವಾಸಸ್ಥಾನ, ತಪ್ಪುದಾರಿಗಾಶ್ರಯ, ಭ್ರಾಂತಿಯ ಜನ್ಮಭೂಮಿ- ಎಂದೆನಿಸುವ ಕಾರಾಗೃಹಕ್ಕೆ ತಡಮಾಡದೆ ಕರೆದುಕೊಂಡು ಹೋದರು. ಕೋಪದಿಂದ ಸಂಕೋಲೆಯನ್ನು ತೊಡಿಸಿದರು. ೨೩೩. ಎರಡು ಕಟವಾಯಿಗಳಿಂದಲೂ ಹರಿಯುವ ಮದೋದಕದಿಂದ ತುಂಬ ಸೊಕ್ಕಿದ ಹತೋಟಿ ತಪ್ಪಿ ನುಗ್ಗುವ ಆನೆಯನ್ನು ದೊಣ್ಣೆಗಳಿಂದ ಹೊಡೆದು ಅಂಕುಶದಿಂದ ತಿವಿದು ಗರ್ಜಿಸುತ್ತಾ ಉಪಾಯದಿಂದ ಸೋಲಿಸಿ ಅಡಗಿಸಿ ದೃಢವಾದ ಸಂಕೋಲೆಗಳಿಂದ ಕಟ್ಟುತ್ತಾರೆ, ಹಾಗೆ ರಭಸದಿಂದ ಆಗಲೆ ನನ್ನ ಕಾಲುಗಳಿಗೆ ಸಂಕೋಲೆಯನ್ನು ತೊಡಿಸಿದರು, ವ॥ ಹಾಗೆ ತೊಡಿಸಿದ ಮೇಲೆ ಮಾರನೆಯ ದಿನ ಸೃಗಾಲಿಕೆಯು ಬಂದು ೨೩೪. ನೀನು ನನಗೆ ಹೇಳಿದ್ದ ಕಾರ್ಯದ ವಿಚಾರವನ್ನು ನಿನ್ನ ಮಿತ್ರನಿಗೆ ಹೇಳಿದೆನು. ಆತನು ಈ ಬಂಧನವನ್ನು ತಪ್ಪಿಸಬೇಕೆಂದು ತಾನು ಮಾಡಬೇಕಾದ ಕೆಲಸಗಳನ್ನೆಲ್ಲ ಮಾಡಿದ್ದಾನೆ, ನಿನಗೆ ಸಂತೋಷವಾಗಲಿ. ಬಿಡುಗಡೆಯಾಗಲಿ ಎಂದು ಹೇಳಿ ಅವಳು ತನ್ನ ಬುದ್ಧಿವಂತಿಕೆಯಿಂದ ಏಕಾಂತದಲ್ಲಿ ನನಗೆ ಹೇಳತೊಡಗಿದಳು.

ವ॥ ಅದೆಂತೆನೆ

ಕಂ॥ ಸರಭಸದಿಂ ಧನಮಿತ್ರನ
ಪೊರೆಗಾಂ ಪದೆದೈದೆ ನಿನ್ನ ನಿಜಮಿತ್ರಂ ಪೋ
ದಿರುಳೇ ಪುರರಕ್ಷಕರಿಂ
ಪರವಶನಾಗಿರ್ದು ಸಿಲ್ಕಿದಂ ವಿಧಿವಶದಿಂ ೨೩೫

ವ॥ ಎಂದು ಪೇೞಲೊಡಂ

ತಳವೆಳಗಾಗಿ ಮಾತಿನಿತು ತೋಱದೆ ಮೆಯ್ಮರವಟ್ಟು ಬುದ್ಧಿ ಸಂ
ಚಲಿಸಿ ಮನಂ ಕಲಂಕಿ ಮತಿಗುಂದಿ ಕರಂ ಬಿಸುಸುಯ್ದು ಮಾನವರ್
ಕಳೆವವರಾರ್ ವಿಧಾತೃಬಲಮಂ ನಿಜಬುದ್ಧಿಯೊಳೆಂದು ಮತ್ತಮಂ
ತಿಳಿದು ಮಗುಳ್ದು ಮನ್ಮುಖಮನೀಕ್ಷಿಸಿದಂ ಧನಮಿತ್ರನಾಕ್ಷಣಂ ೨೩೬

ವ॥ ಅಂತಾತನೆನ್ನ ಮುಖಮಂ ನೋಡಲಾಂ ಮತ್ತಮಿಂತೆಂದೆಂ

ಕಂ॥ ನೀನುಮ್ಮಳಿಸಲ್ವೇಡ ನಿ
ಜಾನುಜರಂ ನಿನಗಮೆನಗಮೆಯ್ದುವ ಭಯಮಂ
ತಾನದನಟ್ಟಿಯಲ್ ತನ್ನನ
ನೂನದೆ ಪೇಳ್ದಟ್ಟಿದಂತೆ ಮಾಳ್ಪುದು ಕೆಳೆಯಾ ೨೩೭

ವ॥ ಅದೆಂತೆಂದಾತಂ ಬೆಸಗೊಳ್ವುದುಂ

ವ॥ ಅದು ಹೇಗೆಂದರೆ– ೨೩೫. “ಬೇಗ ಬೇಗ ನಾನು ಧನಮಿತ್ರನ ಹತ್ತಿರಕ್ಕೆ ಹೋದೆನು. ನಿನ್ನ ಮಿತ್ರನನ್ನು ನಿನ್ನೆ ರಾತ್ರಿ ವಿಧಿವಶದಿಂದ ನಗರರಕ್ಷಕರು ಬಂಧಿಸಿದ್ದಾರೆ. ವ॥ ಎಂದು ಹೇಳಿದೆನು. ಕೂಡಲೆ – ೨೩೬. ಧನಮಿತ್ರನು ತಳವೆಳಗಾದನು. ಏನು ಮಾತನಾಡಬೇಕೆಂದು ತೋರಲಿಲ್ಲ. ಮೈಮೇಲಿನ ಜ್ಞಾನ ತಪ್ಪಿತು. ಬುದ್ಧಿಯು ಚಂಚಲವಾಯಿತು. ಮನಸ್ಸು ಕಲಕಿತು. ಮತಿಯು ಕುಂದಿತು. ಹೆಚ್ಚಾಗಿ ಬಿಸಿಯುಸಿರುಬಿಟ್ಟನು. “ಮಾನವರಲ್ಲಿ ಯಾರೂ ದೈವಬಲವನ್ನು ತಪ್ಪಿಸಿಕೊಳ್ಳಲಾರರು,” ಎಂದು ಮನಸ್ಸಿನಲ್ಲಿ ಯೋಚಿಸಿದನು. ಮತ್ತೆ ಅವನು ನನ್ನ ಮುಖವನ್ನು ನೋಡಿದನು. ವ॥ ಹಾಗೆ ಅವನು ನನ್ನ ಮುಖವನ್ನು ನೋಡಲು ನಾನು ಮತ್ತೆ ಹೀಗೆ ಹೇಳಿದೆನು.– ೨೩೭. “ನೀನು ದುಃಖಿಸಬೇಡ. ನಿನ್ನ ತಮ್ಮಂದಿರಿಗೂ ನಿನಗೂ ನನಗೂ ಬರುವ ಭಯವನ್ನು ಹೋಗಲಾಡಿಸಲು, ಗೆಳೆಯನೆ, “ಅವನು ನನ್ನ ಮೂಲಕ ಹೇಳಿಕಳುಹಿಸಿದಂತೆ ಮಾಡು”. ವ॥ ‘ಅದು ಹೇಗೆ’ ಎಂದು ಆತನು ಪ್ರಶ್ನಿಸಿದನು

ಕಂ॥ ಅಂಗನೃಪೇಶ್ವರನ ಸಭಾ
ರಂಗಕ್ಕತಿದೀನಭಾವದಿಂ ಪೋಗಿಯೆ ಸಾ
ಷ್ಟಾಂಗ ನಮಸ್ಕರಂಗೆ
ಯ್ದಿಂಗಿತವಱಿದಿತ್ತ ಚಿತ್ತವೆಂಬುದು ಕೆಳೆಯಾ ೨೩೮

ಕವಿತೆಯೊಳಕ್ಷದ್ಯೂತಾ
ದಿವಿನೋದನ ವಿದ್ಯೆಯೊಳ್ ಕಳಾಗಮ ಚಾತು
ರ್ಯ ವಿಧಾನದೊಳ್ ಸಮಂತೆೊ
ಪ್ಪುವನಿರ್ಪಂ ರಾಗಮಂಜರಿಯ ಪತಿಯೆಂಬಂ ೨೩೯

ಆತಂಗಮೆನಗಮೊಲ್ದಿತ
ರೇತರ ಸೌಹಾರ್ದಮಾಗಲಾನಾತನ ತ
ತ್ಕಾಂತೆಗೆ ಮಿತ್ರವಧೂಸಂ
ಪ್ರೀತಿಯಿನುಪಚಾರಭಾವಮಂ ಮೀಗೆ ಮಾಳ್ಪೆಂ ೨೪೦

ವ॥ ಅಂತಾ ಮಿತ್ರಸ್ತ್ರೀಯೆಂಬ ದಾವದಿಂ ಸ್ನೇಹಂಗೆಯ್ದನೇಕ ಸುಗಂಧವಸ್ತು ಪ್ರಧಾನ ಸನ್ಮಾನದಿಂ ಸ್ನೇಹಂಗೆಯ್ಯಲದನಾಮೂರ್ಖಂ ವಿಪರೀತಭಾವಂಗೆಯ್ದು

ಕಂ॥ ಅಂತಾಮೂರ್ಖಂ ವಿದ್ಯಾ
ವಂತಂ ಮುಳಿದೆನ್ನ ಚರ್ಮಭಸ್ತ್ರಿಕೆಯಂ ಕ
ಳ್ದಂ ತರಿಸಿ ಕೊಟ್ಟು ಬರ್ದುಕಿಪು
ದೆಂತಾನುಂ ಪದೆದು ದುರ್ಬಲಂಗೆ ನೃಪಾಲಾ ೨೪೧

೨೩೮. ಗೆಳೆಯನೆ, ಅಂಗರಾಜನ ಅಸ್ಥಾನಕ್ಕೆ ಹೋಗಿ ದೀನಭಾವದಿಂದ ಸಾಷ್ಟಾಂಗ ನಮಸ್ಕಾರ ಮಾಡಿ ರಾಜನ ಮನೋಭಾವವನ್ನರಿದು, ಸ್ವಾಮಿ, ಇತ್ತ ಚಿತ್ತೈಸು" ಎಂದು ಹೇಳಬೇಕು. ೨೩೯. "ರಾಗಮಂಜರಿಯ ಪತಿಯೊಬ್ಬನಿದ್ದಾನೆ. ಅವನು ಕವಿತಾ ರಚನೆಯಲ್ಲಿ ನಿಪುಣ. ಪಗಡೆಯ ಜೂಜು ಮೊದಲಾದ ಮನಸ್ಸಿಗೆ ವಿನೋದವನ್ನುಂಟು ಮಾಡುವ ವಿದ್ಯೆಗಳಲ್ಲಿ ಚತುರ. ಕಲಾಚಾತುರ್ಯ ಪ್ರದರ್ಶನದಲ್ಲಿ ಸಮರ್ಥ ೨೪೦. ಅತನಿಗೂ ನನಗೂ ಪರಸ್ಪರ ಪ್ರೀತಿಯಿಂದ ಸೌಹಾರ್ದವು ಬೆಳೆಯಿತು. ಅವನ ಹೆಂಡತಿಗೆ, ಮಿತ್ರನ ಹೆಂಡತಿಯೆಂಬ ಒಂದು ಪ್ರೀತಿಯಿಂದ ವಿಶೇಷವಾಗಿ ಉಪಚಾರವನ್ನು ಮಾಡುತ್ತಿದ್ದೆನು. ವ॥ ಹಾಗೆ ನಾನು ಗೆಳೆಯನ ಹೆಂಡತಿಯೆಂಬ ಭಾವನೆಯಿಂದ ಸ್ನೇಹವನ್ನು ತೋರಿಸಿ ಅವಳಿಗೆ ಅನೇಕ ಸುಗಂಧ ವಸ್ತುಗಳನ್ನು ಕೊಟ್ಟು ಗೌರವವನ್ನು ತೋರಿಸಿದೆನು. ಅದನ್ನು ಆ ಮೂರ್ಖನು ವಿಪರೀತವಾಗಿ ಭಾವಿಸಿದನು. ೨೪೧. ಆದುದರಿಂದ ಆ ಮೂರ್ಖನು ವಿದ್ಯಾವಂತನಾಗಿದ್ದರೂ ಕೋಪಿಸಿಕೊಂಡು ನನ್ನ ಚರ್ಮದ ಚೀಲವನ್ನು ಕದ್ದಿದ್ದಾನೆ. ಅದನ್ನು ತರಿಸಿ ಕೊಟ್ಟು ಕಾಪಾಡಬೇಕು. ನೃಪಾಲನೆ, ದುರ್ಬಲನಿಗೆ ನೀನೇ

ಕಂ॥ ಮುನ್ನರ್ಥಪತಿಗೆ ಸಿಲ್ಕಿ
ದೆನ್ನಜಿನಾನರ್ಘ್ಯರತ್ನಮಂ ಕುಡಿಸಿದೆ ಕೇ
ಳಿನ್ನೊಯ್ದ ಧೂರ್ತನಿಂ ಕುಡಿ
ಸುನ್ನತಿಯಿಂದಜಿನರತ್ನಮಂ ಧರಣೀಶಾ ೨೪೨

ವ॥ ಅದಲ್ಲದೆಯುಮವನೆನ್ನಚರ್ಮರತ್ನಮಂ ಕಳ್ದು ಪೋಗುತ್ತುಂ ನಗರ ರಕ್ಷಕರ ಕೈಯೊಳ್ ಸಿಲ್ಕಿದನೆಂದರಸಂಗೆ ಪೋಗಿ ಪೇಟಲೆಂದೆನ್ನಂ ನಿನ್ನೆಡೆಗೆ ಕಳುಹಿದನೆಂದಾಂ ಪೇಟಲ್ ಧನಮಿತ್ರನಾಗಳರಸನ ಸಾರಣ್ಗೆ ಪೋಗಿಯಾಂ ಪೇಟ್ದ ಕ್ರಮದಿಂದೆ ಪೇಟಲರಸಂ ಸರೋಷನಾಗಿ

ಕಂ॥ ನೀಂ ಪೋಗು ಚರ್ಮಭಸ್ತ್ರಿಕೆ
ಯುಂ ಪೆಂಪಿಂ ತರಿಸಿ ಕುಡುವೆನೆಂದು ಮಹೀಪಾ
ಲಂ ಪದೆದು ಕಳಿಪಲಾತನ
ಲಂಪಿಂ ಬಂದಂ ನಿಜಾಲಯಕೆ ಧನಮಿತ್ರಂ ೨೪೩

ವ॥ ಅಂತು ಧನಮಿತ್ರಂ ಬಂದು ಸಂತಸದಿಂದೆನ್ನಂ ಕರೆದು ನೀಂ ಪೋಗಿ ಮನ್ಮಿತ್ರಂಗೆ ತದ್ವೃತ್ತಾಂತಮಂ ಪೇಟೆಂದೆನ್ನಂ ಮಗುಟ್ದು ಕಳಿಪಿದನೆಂದು ಸೃಗಾಲಿಕೆ ಪೇಟಲಾನದರ್ಕೆ ಪರಿಣಾಮಿಸಿ

ರಕ್ಷಕ. ೨೪೨. ಮಹಾರಾಜನೆ ! ಮೊದಲು ಅರ್ಥಪತಿಯ ಕೈಗೆ ಸಿಕ್ಕಿದ ಅನರ್ಘ್ಯವಾದ ಚರ್ಮರತ್ನವನ್ನು ಕೊಡಿಸಿಕೊಟ್ಟೆ. ಈಗ ಅದನ್ನು ಕೊಂಡು ಹೋಗಿರುವ ಧೂರ್ತನಿಂದ ಅದನ್ನು ಕೊಡಿಸಿಕೊಡು. ವ॥ ಅಷ್ಟೇ ಅಲ್ಲದೆ ಅವನು ನನ್ನ ಚರ್ಮರತ್ನವನ್ನು ಕದ್ದುಕೊಂಡು ಹೋಗುತ್ತಾ ದಾರಿಯಲ್ಲಿ ನಗರಕ್ಷಕರ ಕೈಗೆ ಸಿಕ್ಕಿಬಿದ್ದಿದ್ದಾನೆ. "ಈ ವಿಷಯವನ್ನು ಅರಸನಿಗೆ ಹೋಗಿ ಹೇಳು" ಎಂದು ನನ್ನನ್ನು ನಿನ್ನ ಹತ್ತಿರಕ್ಕೆ ಕಳುಹಿಸಿದ್ದಾನೆ ಎಂದು ರಾಜನಿಗೆ ತಿಳಿಸೆಂದು ನಾನು ಹೇಳಿದೆನು. ಆಗ ಧನಮಿತ್ರನು ಅರಸನ ಹತ್ತಿರಕ್ಕೆ ಹೋಗಿ ನಾನು ಹೇಳಿದ ಕ್ರಮದಿಂದ ಎಲ್ಲವನ್ನೂ ಹೇಳಿದನು. ಅದನ್ನು ಕೇಳಿ ಅರಸನು ಕ್ರುದ್ಧನಾಗಿ—೨೪೩. 'ನೀನು ಮನೆಗೆ ಹೋಗು. ಚರ್ಮರತ್ನವನ್ನು ತರಿಸಿ ಕೊಡುವೆನು.' ಎಂದು ಪ್ರೀತಿಯಿಂದ ಹೇಳಿ ಕಳುಹಿಸಿದನು. ಆಗ ಧನಮಿತ್ರನು ಸಂತೋಷದಿಂದ ತನ್ನ ಮನೆಗೆ ಬಂದನು. ವ॥ ಹಾಗೆ ಧನಮಿತ್ರನು ಮನೆಗೆ ಬಂದು ಸಂತೋಷದಿಂದ ನನ್ನನ್ನು ಕರೆದನು. 'ನೀನು ಹೋಗಿ ನನ್ನ ಸ್ನೇಹಿತನಿಗೆ ಈ ವೃತ್ತಾಂತವನ್ನು ಹೇಳು' ಎಂದು ಹೇಳಿ ನನ್ನನ್ನು ಮತ್ತೆ ಕಳುಹಿಸಿದ್ದಾನೆ, ಎಂದು ಸೃಗಾಲಿಕೆಯು ಹೇಳಿ

ಕಂ॥ ಇನ್ನೆನ್ನಂ ಬಿಡಿಸುವ ಕಾ
ರ್ಯಂ ನಿನ್ನಿಂದಲ್ಲದಾಗದೆಂದವಳೊಳ್ ಪ್ರ
ಚ್ಛನ್ನಮೆನಿಸಿರ್ಪ ಮಾತುಗ
ಳನ್ವಯದಿಂ ಪೇೞ್ದೆನಱಿವ ತೆಱದಿಂದಾಗಳ್ ೨೪೪

ವ॥ ಅಂತು ಪೇೞ್ದಾಂ ಸೃಗಾಲಿಕೆಯುಂ ಕಳಿಪಿ

ಕಂ॥ ಮುಳಿದೆನ್ನ ಕಾಲ ಬಲ್ಸಂ
ಕಲೆಯುಂ ಮುಱಿದಿಕ್ಕಲಾರ್ಪುದುಳ್ಳೊಡಮೇಂ ನಿ
ಶ್ಚಲಮೆನಿಪ ರಾಗಮಂಜರಿ
ಯೊಲವಂ ಬಿಡಲಾಱದಿರ್ದೆನಲ್ತೆ ನೃಪಾಲಾ ೨೪೫

ವ॥ ಆದಱಿಂ ಬಂಧನದುಃಖಮಂ ಕೆಲವು ದಿನಮನುಭವಿಸುತ್ತಿರ್ಪಿನಂ ಕಿಱಿದು ದಿನದಿಂ ಮೇಲೆ ಮಗುೞ್ದು ಸೃಗಾಲಿಕೆ ಬಂದು

ಕಂ॥ ಏಂ ಕೆಳೆಯಾ ಪಲದಿವಸು
ಸಂಕಲೆಯಾಯಾಸದುಃಖಮಂ ತಳೆದೆಯದ
ಕರ್ಗಂ ಕಂಡೆನೊಂದು ತೆಱನಂ
ನೀಂ ಕಲ್ಪಿಸಿದಂತೆ ಕೇಳೆನುತ್ತಿಂತೆಂದಳ್ ೨೪೬

ವ॥ ಅದೆಂತೆನೆ

ದಳು. ಅದನ್ನು ಕೇಳಿ ನನಗೆ ಸಂತೋಷವಾಯಿತು. ೨೪೪. 'ಇನ್ನು ನನ್ನನ್ನು ಬಿಡಿಸುವ ಕೆಲಸವು ನಿನ್ನಿಂದಲ್ಲದೆ ಬೇರೆಯಾರಿಂದಲೂ ಸಾಧ್ಯವಿಲ್ಲ' ಎಂದು ಹೇಳಿದೆ. ಮತ್ತು ಅವಳಿಗೆ ಗುಟ್ಟಾಗಿದ್ದ ಮಾತುಗಳನ್ನು ಕ್ರಮವಾಗಿ ತಿಳಿಯುವ ರೀತಿಯಲ್ಲಿ ಹೇಳಿದೆನು. ವ॥ ಹಾಗೆ ಹೇಳಿ ನಾನು ಸೃಗಾಲಿಕೆಯನ್ನು ಕಳುಹಿಸಿದೆನು. ೨೪೫. ನೃಪಾಲ ! ಕೋಪದಿಂದ ನನ್ನ ಕಾಲಿನಲ್ಲಿದ್ದ ಬಲವಾದ ಸಂಕೋಲೆಯನ್ನು ಮುರಿದು ಹಾಕುವ ಸಾಮರ್ಥ್ಯವಿದ್ದರೂ ನಿಶ್ಚಲವಾದ ರಾಗಮಂಜರಿಯ ಮೇಲಿನ ಪ್ರೀತಿಯನ್ನು ತೊರೆಯಲಾರದೆ ಹಾಗೆ ಬಂಧನದಲ್ಲಿದ್ದೆನು. ವ॥ ಆದುದರಿಂದ ಬಂಧನದ ದುಃಖವನ್ನು ಕೆಲವು ದಿವಸಗಳ ಕಾಲ ಅನುಭವಿಸುತ್ತಿದ್ದೆನು. ಕೆಲವು ದಿವಸಗಳಾದ ಮೇಲೆ ಸೃಗಾಲಿಕೆಯು ಮತ್ತೆ ಬಂದು—೨೪೬. "ಗೆಳೆಯನೆ ! ಹಲವುದಿವಸಗಳಕಾಲ ನೀನು ಸಂಕೋಲೆಯ ಆಯಾಸದ ದುಃಖವನ್ನು ಅನುಭವಿಸಿದೆ. ಅದಕ್ಕೆ ನಾನು ನೀನು ಯೋಚಿಸಿದಂತೆ ಒಂದು ಉಪಾಯವನ್ನು ಕಂಡುಹಿಡಿದಿದ್ದೇನೆ, ಕೇಳು" ಎಂದು ಹೇಳಿದಳು. ವ॥ ಅದು ಹೇಗೆಂದರೆ—

ಭೂಲಲನೇಶನೆಂಬ ಪೆಸರ್ವೆತ್ತೆಸೆವಂಗನೃಪಾಲ ಪುತ್ರಿಯುಂ
ಬಾಲಿಕೆಗೊರ್ಬ ಮಂಗಲಿಕೆಯಂಬಿಕೆಯಂಬಿಕೆಯಾ ಸಮೀಪದೊಳ್
ಲೀಲೆಯೆನಿಪ್ಪ ಭಿಕ್ಷುಕಿಯ ಬೆಂಬಟಿಯೊಳ್ ಪದೆದಾಂ ತದುರ್ವರಾ
ಪಾಲಕನಾಲಯಕ್ಕೆ ಪದೆದೆಯ್ದಿದೆನೊಂದು ದಿನಂ ಕುಮಾರಕಾ ೨೪೭

ಸುರಗಿರಿಯಂ ಸರೋಜಭವನೆಂಬ ಮಹಾರಥಕಾರನೊಲ್ದು ಕಂ
ಡರಿಸಿ ವಿಚಿತ್ರಪುತ್ರಿಕೆಗಳಿಂ ಪರಿರಂಜಿಸಿ ಚಂಪೆಯಲ್ಲಿ ತಂ
ದಿರಿಸಿದನೆಂಬಿನಂ ಜನಮನೋಹರಮಾಗಿ ಪೊಗೞ್ತೆಗೊಪ್ಪುವು
ಪ್ಪರಿಗೆಗಳಿಂ ನೆಗೞ್ತೆವಡೆದಿರ್ದುದು ಸೌಂದರರಾಜಮಂದಿರಂ ೨೪೮

ವ॥ ಅಂತೆಸೆವ ರಾಜಮಂದಿರದಲ್ಲಿ

ನಗುವಲರ್ಗಣ್ಣ ಕಾಂತಿ ಸುಲಪಲ್ಗಳ ಕಾಂತಿ ಕಪೋಲಕಾಂತಿ ಸೆ
ಳ್ಳುಗುರ್ಗಳ ಕಾಂತಿ ಪಚ್ಚಳಿಸುವಂಗಶಲಾಕೆಯ ಕಾಂತಿ ಬಳ್ಳಿಮಿಂ
ಚಗಳೆಳವೆಂಡಿರಾದುವೆನಿಪೊಂದಭಿಶಂಕೆಯನುಂಟುಮಾೞ್ಪಿನಂ
ಮೃಗಶಿಶುನೇತ್ರೆಯರ್ ಮೆಱೆದರೋಲಗದೊಳ್ ಧರಣೇಶಪುತ್ರಿಯಾ ೨೪೯

ರತಿಯ ವಿಲಾಸಮಂ ಶಚಿಯ ಸಂಪದಮಂ ಗಿರಿಜಾತೆಯೋಜೆಯುಂ
ಕ್ಷಿತಿಸುತೆಯೊಳ್ಪುಮಂ ಸಿರಿಯ ಸೌಷ್ಠವಮಂ ಮನವೊಲ್ದು ಭಾರತೀ
ಪತಿ ನಲಿದೊಂದುಗೂಡಿ ಪಡೆದಂತೆವೊಲೊಪ್ಪುವಳಂ ವಸುಂಧರಾ
ಪತಿಯ ಕುಮಾರಿಯಂ ಪದೆದು ಕಂಡೆನತೀವ ಮನೋನುರಾಗದಿಂ ೨೫೦

೨೪೭. "ಕುಮಾರನೆ, ಭೂಲಲನೆಗೆ ಒಡೆಯನಾದ ಹೆಸರುವಾಸಿಯಾದ ಅಂಗರಾಜನ ಮಗಳು ಅಂಬಾಲಿಕೆ. ಅವಳಿಗೆ ಮಂಗಳ ಸ್ವರೂಪಳಾದ ಅಂಬಿಕೆಯೆಂಬ ತಾಯಿ. ಅವಳ ಹತ್ತಿರವಿದ್ದ ಲೀಲೆಯೆಂಬ ಭಿಕ್ಷುಕಿಯ ಹಿಂದೆ ಒಂದು ದಿನ ಆ ರಾಜನ ಅರಮನೆಗೆ ಹೋದೆನು, ೨೪೮. ಕಮಲಭವ (ಬ್ರಹ್ಮ) ನೆಂಬ ಮಹಾರಥಕಾರನು (ಶಿಲ್ಪಿ) ಮೇರು ಪರ್ವತವನ್ನು ಕತ್ತರಿಸಿ ವಿಚಿತ್ರವಾದ ಬೊಂಬೆಗಳನ್ನು ಮಾಡಿ ಚಂಪಾನಗರದಲ್ಲಿ ತಂದಿರಿಸಿ ದನೋ ಎಂಬಂತೆ ಜನರಿಗೆ ಮನೋಹರವಾಗಿ ಪ್ರಸಿದ್ಧವಾದ ಉಪ್ಪರಿಗೆಗಳಿಂದ ಸುಂದರ ವಾದ ಆ ರಾಜಮಂದಿರವು ಪ್ರಕಾಶಿಸಿತು. ವ॥ ಹಾಗೆ ಪ್ರಕಾಶಿಸುತ್ತಿದ್ದ ಅರಮನೆ ಯಲ್ಲಿ—೨೪೯. ರಾಜಪುತ್ರಿಯ ಓಲಗದಲ್ಲಿ ಬಾಲಹರಿಣಾಕ್ಷಿಯರು ಪ್ರಕಾಶಿಸಿದರು. ನಗುವ ಹೂವಿನಹಾಗಿರುವ ಕಂಗಳಕಾಂತಿ, ಸ್ವಚ್ಛವಾದ ಬೆಳ್ಳಗಿರುವ ಹಲ್ಲುಗಳಕಾಂತಿ, ಪ್ರಜ್ವಲಿಸುವ ತೆಳುವಾದ ಮೈಹೊಳಪು- ಇವುಗಳಿಂದ ಅವರು ಬಳ್ಳಿ ಮಿಂಚುಗಳೇ ಪ್ರಾಯದ ತರುಣಿಯಾಗಿದ್ದಾರೆಯೋ ಎಂಬ ಶಂಕೆಯನ್ನುಂಟುಮಾಡಿದರು. ೨೫೦. ಅಲ್ಲಿ ರಾಜಕುಮಾರಿಯನ್ನು ವಿಶೇಷವಾದ ಮನಃ ಪ್ರೀತಿಯಿಂದ ಕಂಡೆನು. ಅವಳು ರತಿ ದೇವಿಯ ವಿಲಾಸವನ್ನೂ, ಶಚೀದೇವಿಯ ಸಂಪತ್ತನ್ನೂ, ಪಾರ್ವತಿಯ ಪ್ರೌಢಿಮೆ ಯನ್ನೂ, ಸೀತಾದೇವಿಯ ಒಳ್ಳೆಯ ತನವನ್ನೂ, ಲಕ್ಷ್ಮೀದೇವಿಯ ಸೌಂದರ್ಯವನ್ನೂ ಸರಸ್ವತೀ ಪತಿಯಾದ ಬ್ರಹ್ಮನು ಮನಸ್ಸಿಟ್ಟು ಪ್ರೀತಿಯಿಂದ ಒಟ್ಟಿಗೆ ಸೇರಿಸಿ ಮಾಡಿ

ವ॥ ಅಂತಾ ಕುಮಾರಿಯಂ ಕಂಡು ಪ್ರತಿದಿವಸಂ ರಾಗಮಂಜರಿಯಿಂ ಬೇೞ್ಪುಚಿತ ವಸ್ತುಗಳಂ ತಂದು ಕೊಟ್ಟವರಿರ್ಬರ್ಗನ್ಯೋನ್ಯಸ್ನೇಹಮಂ ನಿಮಿರ್ಚಿಯಾನಂಬಾಲಿಕೆಯಿಂ ಪ್ರಸಾದಂ ಬಡೆದು ನಿತ್ಯಸಮೀಪಸೇವೆಯಂ ಮಾಡುತಿರ್ಪಿನಮೊಂದು ದಿನಂ

ಗಗನಶ್ರೀಗನುರಾಗಮಂ ಮೆಱೆಯುತುಂ ಸಂಪ್ರೀತಿಯಿಂ ಜೊನ್ನವ
ಕ್ಕಗೆ ಬೆಳ್ದಿಂಗಳ ಸಾರಮಂ ಕಱೆಯುತುಂ ಪಂಕೇಜಿನೀಪಙ್ಕ್ತಿಕಾಂ
ತಿಗಳಂ ದರ್ಶನಮಾತ್ರದಿಂ ಜಱೆಯುತುಂ ಕಾಮಾಂಧಸಂದೋಹದಂ
ತಿಗಳುತ್ತುಂಗರದಂಗಳಂ ಮುಱಿಯುತುಂ ಮೆಯ್ದೋರಿದಂ ಚಂದ್ರಮಂ ೨೫೧

ವ॥ ಅಂತು ಚಂದ್ರೋದಯದೊಳ್

ಕಂ॥ ಸುಕರಾಬ್ಧಿಯೊಳ್ ಸುಧಾಕೌ
ತುಕದಿಂ ಪಾಂಡವನಿವಾಸದಂತಿರೆ ಪಾಂಚಾ
ಲಿಕೆಯಂತೆಸೆವುಪ್ಪರಿಗೆಯೊ
ಳಕಳಂಕ ಶಶಾಂಕಮುಖಿ ಕರಂ ಮೆಱೆದಿರ್ದಳ್ ೨೫೨

ನಿರುತಂ ಸೌಹಾರ್ದ್ರೆ ಸತ್ಕೋಮಳತನುಲತಿಕಾಚಿತ್ರೆ ಗಾಂಭೀರ್ಯ ಸವ್ಯೋ
ತ್ರೆ ಮಿತಾಪ್ರಶ್ಲೇಷೆ ರತ್ನಶ್ರವಣೆ ಸುರಭಿದೋರ್ಮೂಲಸಂಪನ್ನೆ ಹಸ್ತಾಂ
ಬುರುಹಶ್ರೀರಮ್ಯ ಮಾಂಗ್ಧಾರುಣಮಣಿಕಿರಣಾಕೀರ್ಣ ಸೌಂದರ್ಯಪೂರ್ವಾ
ಧರೆ ತಾರಾದೇವಿಯಂತುತ್ಪಲನಯನೆ ಕರಂ ಕಾಂತಿಯಿಂದೊಪ್ಪುತಿರ್ದಳ್ ೨೫೩

ದನೋ ಎಂಬಂತೆ ಪ್ರಕಾಶಿಸಿದಳು. ವ॥ ಹಾಗೆ ಆ ರಾಜಕುಮಾರಿಯನ್ನು ಕಂಡು ಪ್ರತಿದಿವಸವೂ ರಾಗ ಮಂಜರಿಯಿಂದ ಬಯಸಿದ ಉಚಿತ ವಸ್ತುಗಳನ್ನು ತಂದು ಕೊಟ್ಟು ಇಬ್ಬರಿಗೂ ಪರಸ್ಪರ ಸ್ನೇಹವನ್ನು ಬೆಳೆಸಿದೆನು. ಇದರಿಂದ ಅಂಬಾಲಿಕೆಯ ಅನುಗ್ರಹವನ್ನು ಪಡೆದೆನು. ಮತ್ತು ನಿತ್ಯವೂ ಹತ್ತಿರದಲ್ಲಿದ್ದುಕೊಂಡು ಸೇವೆಯನ್ನು ಮಾಡುತ್ತಿದ್ದೆನು. ಹೀಗಿರುವಾಗ ಒಂದು ದಿನ. ೨೫೧. ಚಂದ್ರನು ಉದಯಿಸಿದನು. ಆಗ ಗಗನಲಕ್ಷ್ಮಿಗೆ ಅನುರಾಗವನ್ನು ಇತ್ತನು. ಪ್ರೀತಿಯಿಂದ ಚಕ್ರವಾಕ ಪಕ್ಷಿಗೆ ಬೆಳುದಿಂಗಳ ಸಾರವನ್ನು ಕರೆದನು. ಸಾಲಾಗಿರುವ ಕಮಲಗಳ ಕಾಂತಿಯನ್ನು ದರ್ಶನ ಮಾತ್ರದಿಂದಲೇ ಕುಗ್ಗಿಸಿದನು. ಕಾಮಾಂಧರೆಂಬ ಆನೆಗಳ ಹಲ್ಲುಗಳನ್ನು ಮುರಿದನು. ವ॥ ಹಾಗೆ ಚಂದ್ರೋದಯವಾದಾಗ—೨೫೨. ಆ ಉಪ್ಪರಿಗೆಯು ಆ ಚಂದ್ರನ ಕಿರಣಗಳೆಂಬ ಸಮುದ್ರದಲ್ಲಿ ಸುಣ್ಣದ ಲೇಪನದಿಂದ ಅರಮನೆ ಪಾಂಡವನಿವಾಸವೆನಿಸಿತ್ತು. ಆ ಹೊಳೆಯುವ ಉಪ್ಪರಿಗೆಯ ಮೇಲೆ ಕಳಂಕ ರಹಿತನಾದ ಚಂದ್ರನಂತೆ ಮುಖವುಳ್ಳ ರಾಜಕುಮಾರಿಯು ಪಾಂಚಾಲಿಕೆಯಂತೆ (ದ್ರೌಪದಿ ಮತ್ತು ಬೊಂಬೆ) ಪ್ರಕಾಶಿಸಿದಳು. ಟಿ. ಪಾಂಡವನಿವಾಸ=ಬಿಳಿದಾದ ಅರಮನೆ-ಪಾಂಡವರ ಅರಮನೆ. ೨೫೩. ಆ ಉತ್ಪಲಾಕ್ಷಿಯು ತಾರಾದೇವಿಯಂತೆ ಕಾಂತಿಯಿಂದ ಪ್ರಕಾಶಿಸಿದಳು. ಅವಳು ಸರ್ವದಾ ಸೌಹಾರ್ದವುಳ್ಳವಳು. ಸುಂದರವಾದ ಕೋಮಲವಾದ ಬಳ್ಳಿಯಂತಾಗಿರುವ ಶರೀರದಿಂದ

ವ॥ ಅಂತು ಕಮನೀಯ ಕಾಂತಿಯಂ ತಳೆದ ಕಾಂತೆಯಂತವನಱಿದು

ಅಡಿ ಮುಡಿ ಜಂಘೆ ಮುಙ್ಗುರುಳ್ಗಳೊಳ್ತೊಡೆ ಪುರ್ಬು ನಿತಂಬಮಕ್ಷಿಗಳ್
ನಡು ಮೊಲೆ ಮೆಲ್ಪು ಬಿಣ್ಪಕಿದು ಕೊಂಕು ಸುದೀರ್ಘತೆ ಕರ್ಪು ಗೌರಮಂ
ಕಡುನಿಡಿದಲ್ಪಮುನ್ನತವೆನಿಪ್ಪವಱಿಂ ಸುಕುಮಾರವೃತ್ತಿಯಂ
ಪಡೆದ ನೃಪಾಲನಂದನೆಯನೊಯ್ಯನೆ ಪೊರ್ದಿದೆನಾಂ ಕುಮಾರಕಾ ೨೫೪

ವ॥ ಅಂತು ಪೊರ್ದಿ

ಕುರುಳಂ ನುಣ್ಣಿಪ ವೇಣಿಯಂ ಸಸಿನೆಗೆಯ್ದೇಕಾವಳೀರತ್ನಮಂ
ರತದಿಂ ಲೆಕ್ಕಿಪ ಪತ್ರವಲ್ಲಿಗಳ ಕೊಂಕಂ ತಿರ್ದುವಿಕ್ಕಿರ್ದ ನೂ
ಪುರಮಂ ಸೈತಿಡುವೇಟಿಗ್ಗಿಯುಜ್ಜುಗದೊಳಾಂ ಮೆಯ್ಸೋಂಕಿ ತತ್ಕಾಮಿನೀ
ಕರುಣಾಲೋಕನಸಿದ್ಧಿಯಂ ಪಡೆದುಮಂತಿರ್ದೆಂ ಸಮಭ್ಯರ್ಣದೊಳ್ ೨೫೫

ಆಶ್ಚರ್ಯಕರಳಾಗಿದ್ದಳು. ನೂತನ ರೀತಿಯ ಗಾಂಭೀರ್ಯದಿಂದ ಶ್ರೇಷ್ಠಳಾಗಿದ್ದಳು. ಗೆಳತಿಯರನ್ನು ಆಲಿಂಗಿಸಿಕೊಳ್ಳುತ್ತಿದ್ದಳು. ಕಿವಿಗಳಿಗೆ ರತ್ನಾಭರಣ ಹಾಕಿಕೊಂಡಿದ್ದಳು, ಸುವಾಸನೆಯುಳ್ಳ ಕಂಕುಳುಗಳಿಂದ ಕೂಡಿದ್ದಳು. ಕಮಲದಹಾಗಿದ್ದ ಕೈಗಳ ಕಾಂತಿಯಿಂದ ರಮ್ಯಳಾಗಿದ್ದಳು. ಸುಂದರವಾದ ಕೆಂಪು ರತ್ನದ ಕಿರಣಗಳಿಂದ ಮನೋಹರವಾದ ಅಧರದಿಂದ ಕೂಡಿದ್ದಳು. (ಇಲ್ಲಿ ಆದ್ರಾ ಚಿತ್ತ ಉತ್ತರ ಆಶ್ಲೇಷ ಶ್ರವಣ ಮೂಲ ಹಸ್ತ ಪೂರ್ವಾಧರ (ಭಾದ್ರಾ) ಮೊದಲಾದ ನಕ್ಷತ್ರಗಳ ಹೆಸರುಗಳನ್ನು ಸೇರಿಸಿ ತಾರಾದೇವಿಯೆಂದು ವರ್ಣಿಸಲಾಗಿದೆ). ವ॥ ಹಾಗೆ ಮನೋಹರವಾದ ಕಾಂತಿಯನ್ನು ಪಡೆದಿದ್ದ ರಾಜಕುಮಾರಿಯ ಅಭಿಪ್ರಾಯವನ್ನು ತಿಳಿದು—೨೫೪. ಪಾದವು ಮೃದು, ಕೇಶರಾಶಿಭಾರ, ಮೊಣಕಾಲು ತೆಳು, ನಯವಾದ ಮುಂಗುರುಳುಗಳು ವಕ್ರ, ಸುಂದರವಾದ ತೊಡೆಗಳು ಹೊಳೆಯುವುವು, ಹುಬ್ಬು ಕಪ್ಪು, ನಿತಂಬವು ತೂಕವಾದುವು, ಕಂಗಳು ನೀಳವಾದುವು, ನಡು ಸಣ್ಣ, ಸ್ತನಗಳು ಉನ್ನತ ಈ ಲಕ್ಷಣಗಳುಳ್ಳ ಪಾದಾದಿಗಳಿಂದ ರಾಜಕುಮಾರಿಯು ಸುಕುಮಾರಿಯಾಗಿದ್ದಳು. ಅಂಥ ರಾಜಕುಮಾರಿಯ ಹತ್ತಿರಕ್ಕೆ ಬೇಗ ಹೋದೆನು. ವ॥ ಹಾಗೆ ಹತ್ತಿರಕ್ಕೆ ಹೋಗಿ—೨೫೫. ಮುಂಗುರುಳುಗಳನ್ನು ನಯವಾಗಿ ತಿದ್ದುತ್ತಿದ್ದೆನು. ಜಡೆಯನ್ನು ಬಿಡಿಸಿ ಕಟ್ಟುತ್ತಿದ್ದೆನು. ಏಕಾವಳೀಸರದ ರತ್ನಗಳನ್ನು ಪ್ರೀತಿಯಿಂದ ಎಣಿಸುತ್ತಿದ್ದೆನು. ಹಣೆ ಮತ್ತು ಕೆನ್ನೆಗಳ ಮೇಲೆ ಬರೆದ ಎಲೆ ಮತ್ತು ಬಳ್ಳಿಗಳ ಕೊಂಕನ್ನು ತಿದ್ದುತ್ತಿದ್ದೆನು. ಹಾಕಿಕೊಂಡಿದ್ದ ಕಾಲಂದಿಗೆಯನ್ನು ಸರಿಪಡಿಸುತ್ತಿದ್ದೆನು. ಅಭಿವೃದ್ಧಿಯ ಮಂಗಳ ಕಾರ್ಯಗಳಲ್ಲೆಲ್ಲ ಮೆಯ್ ತಗಲಿಕೊಂಡು ಕೆಲಸ ಮಾಡುತ್ತಿದ್ದೆ. ಹೀಗೆ ಆಕೆಯು ಕರುಣೆಯಿಂದ ನೋಡುವಂಥ ಸೇವಾಸಿದ್ಧಿಯನ್ನು ಪಡೆದು ಅವಳ ಹತ್ತಿರದಲ್ಲಿಯೇ ಇದ್ದೆನು.

ವ|| ಅಂತಿರ್ದು

ಕಂ|| ಅಂಬಾಲಿಕೆ ನಿನ್ನಯ ಕಿವಿ
ಯಿಂ ಬಿಟ್ಟಪುದೆಂದು ಜಗುಟ್ಟಿ ಚೆನ್ನೈದಿಲ ಪೂ
ವಂ ಭರದೆ ತೆಗೆದು ಬೀಸಿದೆ
ನಂಬರದೊಳ್ ಪಾರಿವಾಳವಂ ಬೆದಱಿಪವೋಲ್ ೨೫೬

ವ|| ಆ ಸಮಯದೊಳ್

ತನುಸೌಮ್ಯಂ ನಾಡೆ ಮೂರ್ಖಂ ಜನಕೆ ವಿರಹಿತಂ ಸುಸ್ವತಂತ್ರಂ ಮಹಾಯೌ
ವನಮತ್ತಂ ನೀತಿಮೂಢಂ ವಿಟಜನಸುಲಭಂ ನೂತ್ನಸೇವಾಭಿರಾಮಂ
ಧನಿಕಂ ಸ್ತ್ರೀಲಂಪಟಂ ಕಾಮುಕತತಿಪರಿವಾರಂ ಕುಮಾರ್ಗಾನ್ವಿತಂ ಸ
ಜ್ಜನದೂರಂ ತತ್ಪುರೀರಕ್ಷಕನಧಿಕಬಳಂ ರಂಜಿಪಂ ಕಾಂತಕಾಖ್ಯಂ ೨೫೭

ವ|| ಅಂತಾ ಕಾಂತಕನೆಂಬ ತಳವಾರನಾಯಕಂ ಅರಸನೋಲಗದಿಂ ಕಳಿಪಿಸಿಕೊಂಡಂಬಾಲಿಕೆ ಕುಳ್ಳಿರ್ದುಪ್ಪರಿಗೆಯ ಕೆಳಗನೆ ಪೋಗುತ್ತಿರೆ

ಕಂ|| ನಲಿದೆನ್ನ ಕೆಯ್ಯ ಚೆನ್ನೆ
ಯ್ದಿಲ ಪೂವಂ ನೋಡಿ ಕಾಂತಕನ ಮಸ್ತಕದೊಳ್
ಘಳಿಲನೆ ಬಿಸುಡಲವಂ ತ
ನ್ನೊಲವಿಂದಂ ಮೇಲನೀಕ್ಷಿಸುತೆ ನಸುನಕ್ಕಂ ೨೫೮

ವ|| ಹಾಗೆ ಬಿದ್ದು—೨೫೬. “ಅಂಬಾಲಿಕೆ ! ನಿನ್ನ ಕಿವಿಯಿಂದ ಬೀಳುತ್ತಿದೆ” ಎಂದು ಹೇಳಿ ಜಾರಿದ ಅಂದವಾದ ನೈದಿಲೆ ಹೂವನ್ನು ಬೇಗ ತೆಗೆದು ಪಾರಿವಾಳವನ್ನು ಹೆದರಿಸುವಂತೆ ಆಕಾಶಕ್ಕೆ ಎಸೆದನು. ಆ ಸಮಯದಲ್ಲಿ – ೨೫೭. ಆ ನಗರದ ಪ್ರಧಾನರಕ್ಷಕನಾದ ಕಾಂತಕನೆಂಬುವನು ಇದ್ದಾನೆ. ಅವನು ಸೌಮ್ಯ ಸ್ವಭಾವದವನಲ್ಲ. ತುಂಬ ಮೂರ್ಖ. ಜನ ಸಮೂಹದಿಂದ ದೂರವಿರುವವನು. ಅತಿ ಸ್ವತಂತ್ರ ಪ್ರವೃತ್ತಿಯವನು. ಯೌವನದಿಂದ ಮದಿಸಿದವನು. ನೀತಿ ಮಾರ್ಗವನ್ನರಿಯದವನು. ವಿಟಪುರುಷರ ಗೆಳೆಯ. ನೂತನ ವಿಧವಾದ ಸೇವೆಯಿಂದ ಸುಂದರನು. ಧನಿಕ. ಸ್ತ್ರೀಲಂಪಟ. ಕಾಮುಕರ ಗುಂಪಿನಿಂದ ಸುತ್ತುವರಿದವನು. ದುಮಾರ್ಗದಲ್ಲಿ ನಡೆಯುವವನು. ಸಜ್ಜನರಿಂದ ದೂರವಿರುವವನು. ಅಧಿಕ ಬಲಶಾಲಿ. ವ|| ಹಾಗೆ ಆ ಕಾಂತಕನೆಂಬ ನಗರ ರಕ್ಷಕರ ನಾಯಕನು ಅರಸನ ಆಸ್ಥಾನದಿಂದ ಹೊರಟು ಅಂಬಾಲಿಕೆಯು ಕುಳಿತಿದ್ದ ಉಪ್ಪರಿಗೆಯ ಕೆಳಗೆ ಹೋಗುತ್ತಿದ್ದನು. ೨೫೮. ನಾನು ನಲಿದು ನನ್ನ ಕೈಯಲ್ಲಿದ್ದ ಚೆಲುವಾದ ನೈದಿಲೆ ಹೂವನ್ನು ಕಾಂತಕನ ತಲೆಗೆ ಸರಿಯಾಗಿ ನೋಡಿ ಘಳಿಲನೆ ಬಿಸು

ಕಂ॥ ಇದನೆಲ್ಲವನಂಬಾಲಿಕೆ
ಮುದಮೆಸೆಯಲ್ ಕಂಡು ಮಂದಹಾಸಂ ತಳ್ಕಿಲ್
ಪದೆದೆನ್ನಂ ನೋಡಲ್ಕಾ
ನದನಾ ಮೂರ್ಖಂಗೆ ತೋಱಿದೆಂ ಕಣ್ಗಱಪಿಂ ೨೫೯

ವ॥ ಅಂತಾ ಕಾಂತಕಂಗೆ ಕುಮಾರಿಯ ಸ್ವಭಾವಚೇಷ್ಟೆಗಳಂ ವಿಪರೀತ ಚೇಷ್ಟೆಗಳೆಂಬಂತು ತೋಱಿ

ಎನ್ನವೊಲಾರ್ ಕೃತಾರ್ಥರಿಳೆಯೊಳ್ ಮೆಱೆವಗ್ಗದ ರಾಜಪುತ್ರಿಯೊ
ಲ್ದೆನ್ನನಪೇಕ್ಷೆಯಿಂ ಪಿಡಿದ ನೆಯ್ದಿಲ ಪೂವಿನೊಳಿಟ್ಟು ತನ್ನ ಪಾಂ
ಗನ್ನಿಮಿರ್ಚಿತಿರೊಯ್ಯನೊಸೆದೀಕ್ಷಿಸಿ ಮೆಲ್ನಗೆಯುಂ ತುಱುಂಕಿದಳ್
ತನ್ನಿದಿರೊಳ್ ದಿಟಕ್ಕೆನುತೆ ಮೆಯ್ಮಱೆದಂ ಕಡುಕೆಯ್ದು ಕಾಂತಕಂ ೨೬೦

ವ॥ ಅಂತಾತಂ ಮೆಯ್ಮಱೆದು ತನ್ನಾಸೆಯುಂ ಸಂಬಂಧವಾರ್ತೆಗೆ ಚಿಂತಿಸಿ ಎಂತಾನುಂ ಮಂದಗತಿಯಿಂ ನಿಜಮಂದಿರಕ್ಕೆ ಪೋಗಲಾಂ ಮಱುದೆವಸಮವನಭವನಕ್ಕೆ ಪೋಗಲ್

ಕಂ॥ ತನ್ನಸು ಬಂದವೊಲೊಲವಿಂ
ದೆನ್ನಂ ಸನ್ಮಾನದಾನಪೂಜಾಕ್ರಮದಿಂ
ಮನ್ನಿಸಿ ಕಾಂತಕನೆನ್ನೊಳ್
ಕನ್ನೆಯ ಸಂಬಂಧವಾರ್ತೆಗೆಳಸುತ್ತಿರ್ದಂ ೨೬೧

ಟೆನು. ಅವನು ಒಲವಿನಿಂದ ಮೇಲೆ ನೋಡಿ ನಕ್ಕನು. ೨೫೯. ಇದನ್ನೆಲ್ಲ ಅಂಬಾಲಿಕೆಯು ಹರ್ಷದಿಂದ ನೋಡಿ ಮುಗುಳುನಗೆ ನಕ್ಕು ನನ್ನ ಮುಖವನ್ನು ನೋಡಿದಳು. ನಾನು ಅದನ್ನು ಆ ಮೂರ್ಖನಿಗೆ ಕಣ್ಸನ್ನೆಮಾಡಿ ತೋರಿಸಿದೆ. ವ॥ ಹಾಗೆ ಆ ಕಾಂತಕನಿಗೆ ಕುಮಾರಿಯ ಸ್ವಾಭಾವಿಕವಾದ ಚೇಷ್ಟೆಗಳನ್ನು ವಿಪರೀತ ಚೇಷ್ಟೆಗಳೆಂಬಂತೆ ತೋರಿಸಿದೆನು. ೨೬೦. "ಈ ಲೋಕದಲ್ಲಿ ನನ್ನ ಹಾಗೆ ಬೇರೆ ಯಾರು ಕೃತಾರ್ಥರಿದ್ದಾರೆ ? ಶ್ರೇಷ್ಠಳಾದ ರಾಜಪುತ್ರಿಯು ನನ್ನನ್ನು ಬಯಸಿ ಕೈಯಲ್ಲಿ ಹಿಡಿದ ಹೂವನ್ನು ನನ್ನ ಮೇಲೆ ಎಸೆದಳು. ಕಂಗಳನ್ನಗಲಿಸಿ ಕಡೆಗಣ್ ನೋಟ ಬೀರಿದಳು, ನಿಜವಾಗಿ ನನ್ನೆದುರಿಗೇ ಮೃದುವಾಗಿ ನಸುನಕ್ಕಳು." ಎಂದು ಯೋಚಿಸಿಕೊಂಡು ಕಾಂತಕನು ಮೈಯ್ ಮರೆತನು. ವ॥ ಹಾಗೆ ಆತನು ಮೈಯ್‌ಮರೆತು ತನ್ನ ಆಸೆಗನುಗುಣವಾಗಿ ಯೋಚಿಸುತ್ತ ನಿಧಾನವಾಗಿ ತನ್ನ ಮನೆಗೆ ಹೋದನು. ನಾನು ಮಾರನೆಯ ದಿವಸ ಅವನ ಮನೆಗೆ ಹೋದೆನು. ೨೬೧. ನನ್ನನ್ನು ನೋಡಿ ಅವನಿಗೆ ಪ್ರಾಣಬಂದಂತಾಯಿತು. ಸನ್ಮಾನದಾನ ಪೂಜೆಗಳಿಂದ ನನ್ನನ್ನು ಕಾಂತಕನು ಗೌರವಿಸಿದನು. ನನ್ನಿಂದ

ವ॥ ಅಂತಿರ್ದ ಭಾವವನಱಿದು

ಮಕರಾಂಕಂಬಂದೊಡಂ ಮೆಚ್ಚದ ನಿರುಪಮ ಸೌಭಾಗ್ಯ ಸಂಪನ್ನೆಯಂಬಾ
ಲಿಕೆ ನಿನ್ನಂ ಕಂಡು ಕಣ್ಸೋಲ್ತತಿಶಯ ಮದನಾಸ್ತ್ರಾಗ್ನಿ ಸಂತಾಪದಿಂ ಚಂ
ದ್ರಿಕೆಯೊಳ್....ನೀರ್ವಸೆಯೊಳೊಡಲನಟ್ಟಾಡುವೋಲ್ ಮಾಡಿದ್ದೈ ಕಾಂ
ತಕಕಾಂತಾಚಿತ್ತವಶ್ಯಂ ವಿವಿಧನವಕಳಾಮೂರ್ತಿ ನೀಂ ಸತ್ಯಮಲ್ತೇ ೨೬೨

ವ॥ ಎಂಬುದುಂ

ತಾನೆ ಮನೋಜರಾಜ್ಯಪತಿ ತಾನೆ ವಿಟಾಗ್ರಣಿ ತಾನೆ ಕೋವಿದಂ
ತಾನೆ ವಯೋವಿಳಾಸ . . . . . . . . . . . . . . . . ಕಂ
ತಾನೆ ವಿಳಾಸಿನೀಜನದ ಕೂಟದ ಜಾಣ್ಮೆಗೆ ತಾನೆ ಮೋಹನಂ
ತಾನೆನಿಪೊಂದಹಂಕೃತಿ ಕರಂ ನೆಲಸಿರ್ದುದು ಕಾಂತಕಾಖ್ಯನೊಳ್ ೨೬೩

ವ॥ ಅಂತಾತಂಗೆ ನಿಷ್ಕಾರಣದಿನೆಂತಾನುಂ ಕಾಮೋದ್ದೀಪನಪನೊಡರ್ಚಿಯಾ ದಿವಸ ಮಾನವನಿಂದಮೆಂತಾನುಂ ಕಳಿಪಿಸಿಕೊಂಡು ರಾಗಮಂಜರಿಯ ಮನೆಗೆ ಬಂದು ಮಗುಟ್ದು ಮಱುದೆವಸಂ

ಕಂ॥ ಲಲಿತಾಂಬರವೊಂದಂ ಪೂ
ಗಳ ಮಾಲೆಯನೊಳ್ಪವೆತ್ತ ತಾಂಬೂಲಕಮಂ
ನಲಿದೆನ್ನ ಮನೆಯಿನುಯ್ದಂ
ಕೆಲಬರ್ ಚೇಟಿಕೆಯರೊಡನೆ ಬರಲನಿನಯದಿಂ ೨೬೪

ಅವನು ಆ ರಾಜಕುಮಾರಿಯ ವಿಷಯವನ್ನು ಕೇಳಲು ಬಯಸಿದನು. ವ॥ ಹಾಗಿದ್ದ ಅವನ ಅಭಿಪ್ರಾಯವನ್ನು ತಿಳಿದು - ೨೬೨. "ನಿರುಪಮ ಸೌಭಾಗ್ಯವತಿಯಾದ ಈ ಅಂಬಾಲಿಕೆಯು ಮನ್ಮಥನೇ ಸ್ವತಃ ಬಂದರೂ ಮೆಚ್ಚುವವಳಲ್ಲ. ಅಂಥವಳು ನಿನ್ನನ್ನು ಕಂಡು ಮನಸೋತಳು. ಅತಿಶಯವಾದ ಮದನನ ಅಸ್ತ್ರದ ಅಗ್ನಿಯಿಂದಾದ ಸಂತಾಪದಿಂದ ಬೆಳುದಿಂಗಳಿನಲ್ಲಿಯೂ.......ನೀರಿನ ಹಾಸಿಗೆಯಲ್ಲಿಯೂ ಅವಳ ದೇಹ ವನ್ನು ಹೊರಳಾಡಿಸುವಂತೆ ಮಾಡಿರುವೆ. ಕಾಂತಕ, ನೀನು ಕಾಂತೆಯರ ಚಿತ್ತವನ್ನು ವಶಪಡಿಸಿಕೊಳ್ಳುವವನು ! ವಿಧವಿಧವಾದ ಕಲೆಗಳ ಮೂರ್ತಿ ! ಇದು ಸತ್ಯವಲ್ಲವೇ ?" ವ॥ ಎಂದು ಹೇಳಿದೆನು. – ೨೬೩. ತಾನೆ ಮದನನ ರಾಜ್ಯಕ್ಕೆ ಒಡೆಯ. ತಾನೆ ವಿಟರ ಮುಂದಾಳು ತಾನೆ ಈ ವಿಷಯದಲ್ಲಿ ಪಂಡಿತ, ತಾನೆ........ತಾನೆ ವಿಲಾಸಿನಿಯರ ಕೂಟದ ಜಾಣತನಕ್ಕೆ ಆಶ್ರಯ. ತಾನೆ ಎಲ್ಲರನ್ನೂ ಮೋಹಿಸುವವನು ಎಂಬುದಾಗಿ ಒಂದು ಅಹಂಕಾರವು ಆ ಕಾಂತಕನ ಮನಸ್ಸಿನಲ್ಲಿ ನೆಲಸಿತು. ವ॥ ಹಾಗೆ ಆತನಿಗೆ ನಿಷ್ಕಾರಣವಾಗಿ ಹೇಗೋ ಕಾಮೋದ್ದೀಪನವನ್ನುಂಟುಮಾಡಿದೆನು. ಆ ದಿವಸ ಹೇಗೋ ಅವನಿಂದ ಬಿಡಿಸಿಕೊಂಡು ರಾಗಮಂಜರಿಯ ಮನೆಗೆ ಬಂದೆನು. ಮತ್ತೆ ಮಾರನೆಯ ದಿವಸ ೨೬೪. ಲಲಿತವಾದ ವಸ್ತ್ರ, ಹೂಮಾಲೆ ತಾಂಬೂಲ ಇವುಗಳನ್ನು ನನ್ನ ಮನೆಯಿಂದ ಎತ್ತಿಕೊಂಡು ಕೆಲವು ದಾಸಿಯರೊಡನೆ ಬೆಡಗಿನಿಂದ ಅವನ

ವ॥ ಅಂತವಂ ಕೊಂಡು ಪೋಗಿ

ಅಟ್ಟಿದಳೊಲ್ದು ತನ್ನ ಮನದುತ್ಸವದಿಂ ಧರಣೀಶ ಪುತ್ರಿ ತಾ
ನುಟ್ಟ ಸುವಸ್ತ್ರವಂ ಕುಸುಮಮಾಲಿಕೆಯುಂ ಪೊಸವೀಳೆಯುಂಗಳಂ
ಕೊಟ್ಟು ಬರಲ್ಕೆ ತನ್ನಸೆವ ಚೇಟಿಯರಂ ನಿನಗೀಸಿ ಕೊಂಡು ನೀಂ
ನೆಟ್ಟನೆ ಕೂರ್ಪುದಾಕೆಗೆ ಮನಃಪ್ರಿಯರಿಂ ಪೆಱರಾರೊ ಕಾಂತಕಾ ೨೬೫

ವ॥ ಅದಲ್ಲದೆಯುಂ

ಜ್ಞಾನಿಗಳಿಂದೆ ಕೇಳ್ದಱಿವೆನಾಂ ನಿಜಲಕ್ಷಣಮಂ ತದೀಯ ಧಾ
ತ್ರೀ ನರಪಾಲಕತ್ವಮನಿಶಂ ನೃಪನಂದನೆಯಂಗ ಸಂಗದಿಂ
ತಾನಿದಿರ್ವರ್ಪುದೆಂದು ಪದೆಪಿಂದಿದು ಸತ್ಯಮಿಳೇಶ್ವರಂಗೆ ಸಂ
ತಾನಮಲ್ಲದಿರ್ಪ ಕುಱುಪಿಂಗಿದು ಕಾರಣಮಲ್ತೆ ಕಾಂತಕಾ ೨೬೬

ವ॥ ಎಂಬುದುಮವನಿಂತೆಂದಂ

ಕಂ॥ ಶಂಬರಸೂದನನಾರ್ದೈ
ದಂಬುಗಳೈಸಾಸಿರಂಬೆನಲ್ ಪೂಣಿಸಿಯಾ
ರ್ದಿಂ ಬಿಡದೆಚ್ಚಪನೆನ್ನಂ
ನೀಂ ಬಲ್ಲಂತೆಸಗು ಕಾರ್ಯಮಂ ಕಮಳಾಕ್ಷೀ ೨೬೭

ವ॥ ಎಂದು ಮತ್ತಮಿಂತೆಂದಂ

ಮನೆಗೆ ಹೋದೆನು. ವ॥ ಹಾಗೆ ಅವನ್ನು ತೆಗೆದುಕೊಂಡು ಹೋಗಿ ೨೬೫. "ರಾಜಕುಮಾರಿಯು ಸಂತೋಷದಿಂದ ಕಳುಹಿಸಿದ್ದಾಳೆ. ತಾನು ಉಟ್ಟ ವಸ್ತ್ರವನ್ನೂ ಹೂಮಾಲೆಯನ್ನೂ ಹೊಸವೀಳೆಯವನ್ನು ನಿನಗೆ ಕೊಟ್ಟು ಬರಬೇಕೆಂದು ತನ್ನ ಚೆಲುವೆಯರಾದ ದಾಸಿಯರೊಡನೆ ಕಳುಹಿಸಿದ್ದಾಳೆ. ಇವನ್ನೆಲ್ಲ ಕೂಡಲೆ ತೆಗೆದುಕೊಂಡು ನೀನು ಅವಳ ಮೇಲೆ ಸ್ನೇಹವನ್ನು ತೋರಿಸು. ಕಾಂತಕ, ನಿನಗಿಂತ ಅವಳಿಗೆ ಪ್ರಿಯರು ಬೇರೆ ಯಾರಿದ್ದಾರೆ? ವ॥ ಅದೂ ಅಲ್ಲದೆ – ೨೬೬. ತಿಳಿದವರಿಂದ ನಾನು ನಿನ್ನ ಲಕ್ಷಣವನ್ನು ಕೇಳಿ ತಿಳಿದಿದ್ದೇನೆ, ರಾಜಕುಮಾರಿಯ ಅಂಗಸಂಗದಿಂದ ಈ ಭೂಮಿಯ ಒಡೆತನವೂ ಎದುರುಗೊಂಡು ಬರುವುದು. ಈ ಮಾತು ಸತ್ಯ. ರಾಜನಿಗೆ ಗಂಡು ಮಕ್ಕಳಿಲ್ಲದಿರುವುದೆ. ಇದಕ್ಕೆ ಕಾರಣ". ವ॥ ಎಂದು ಹೇಳಲು ಅವನು ಹೀಗೆ ಹೇಳಿದನು — ೨೬೭. "ಮದನನು ತನ್ನ ಐದು ಬಾಣಗಳನ್ನು ಐದು ಸಾವಿರ ಬಾಣಗಳೋ ಎಂಬಂತೆ ಹೂಡಿ ಗರ್ಜಿಸಿ ನನ್ನ ಮೇಲೆ ಬಿಟ್ಟಿದ್ದಾನೆ. ಕಮಲಾಕ್ಷಿ, ನಿನಗೆ ತೋರಿದಂತೆ ಕೆಲಸವನ್ನು ಮಾಡು" ವ॥ ಎಂದು ಹೇಳಿ ಮತ್ತೆ ಹೀಗೆ ಹೇಳಿದನು–

ಕಂ॥ ಎಲೆ ಕೆಳದಿ ನೃಪಸುತೆಯ ತಂ
ಬುಲಮಂ ನಾಳೆನಗೆ ತಂದು ಕೊಟ್ಟೆನ್ನಸುವಂ
ನೆಲೆಗೊಳಿಪುದೆಂದೊಡಾನಾ
ಗಲಿ ಎಂದಲ್ಲಿಂ ತಳರ್ದು ಮನೆಗೆಯ್ತಂದೆಂ ೨೬೮

ವ॥ ಅಂತಾ ದಿನಂ ಮನೆಗೆ ಬಂದು ಮಱುದೆವಸಂ

ಕಂ॥ ಮಿಸುಪೆನ್ನ ತಂಬುಲಮನೊ
ಳ್ಪೆಸೆಯಲ್ ತಂದಿತ್ತು ನಿನ್ನ ತಂಬುಲಮುಂ ಬೇ
ಟ್ಟ ಸುವಸ್ತುವಂ ಕುಮಾರಿಗೆ
ಪೊಸತೆನೆ ಕರುಣಿಸುವುದಲ್ತೆ ಕಾಂತಕ ನಯದಿಂ ೨೬೯

ವ॥ ಎಂದೊಡವಂ ಬೇಟ್ಟ ಸುವಸ್ತುವಂ ತಂಬುಲಮಂ ಕೊಟ್ಟೆನ್ನಂ ಕಳಿಪೆ

ಕಂ॥ ಅವನೊಲ್ದಿತ್ತನುಪಮಸಕ
ಲವಸ್ತುವಂ ಕೊಂಡು ಬಿಸುಟು ತಂಬುಲವಂ ಸಂ
ಭವಿಸಿತ್ತು ಮಿತ್ರಕಾರ್ಯಂ
ನವೀನಮೆಂಬಂತೆನುತೆ ಮನೆಗೆಯ್ತಂದೆಂ ೨೭೦

ವ॥ ಅಂತು ಬಂದು ಮಱುದೆವಸಂ

ಮದನದವಾಗ್ನಿ ಯೌವನವನಾಂತದೊಳರ್ಬಿಸೆ ಚಂದ್ರಿಕಾಹಿಮಂ
ವದನಸರೋಜಮಂ ಮುಸುಕೆ ತದ್ವಿರಹೋಗ್ರಮಹಾಂಧಕಾರಮು
ನ್ಮದಕುಚಕೋಕಮಂ ಕವಿಯೆ ಸೈರಿಸಲಾರ್ಪಳೆ ಸೌಕುಮಾರ್ಯಸಂ
ಪದದ ಸರೋವರಂಬೊಲೆಸೆವಂಗನೆ ಪೇಟ್ ಮನವೊಲ್ದು ಕಾಂತಕಾ ೨೭೧

೨೬೮. "ಎಲೆ ಗೆಳತಿ ರಾಜಕುಮಾರಿಯ ತಂಬುಲವನ್ನು ನಾಳೆ ನನಗೆ ತಂದುಕೊಟ್ಟು ನನ್ನ ಪ್ರಾಣಗಳನ್ನು ಕಾಪಾಡು." (ಎಂದು ಹೇಳಲು) ನಾನು 'ಹಾಗೆಯೇ ಆಗಲಿ' ಎಂದು ಹೇಳಿ ಅಲ್ಲಿಂದ ಹೊರಟು ಮನೆಗೆ ಬಂದೆನು. ವ॥ ಹಾಗೆ ಆ ದಿನ ಮನೆಗೆ ಬಂದು ಮಾರನೆಯ ದಿವಸ- ೨೬೯. ಮಿರುಗುವ ನನ್ನ ತಂಬುಲವನ್ನು ಚೆಡಗಿನಿಂದ ತಂದುಕೊಟ್ಟೆನು! "ಕಾಂತಕ ! ನಿನ್ನ ತಂಬುಲವನ್ನು ಪ್ರಿಯವಾದ ಒಳ್ಳೆಯ ವಸ್ತು ವಿನೊಡನೆ ಕುಮಾರಿಗೆ ಹೊಸಬಗೆಯಿಂದ ಕರುಣಿಸು". ವ॥ ಎಂದು ಹೇಳಿದೆನು. ಅವನು ಹಾಗೆಯೇ ಪ್ರಿಯವಸ್ತುವನ್ನೂ ತಂಬುಲವನ್ನೂ ನನ್ನ ಕೈಯ್ಯಲ್ಲಿ ಕೊಟ್ಟು ಕಳುಹಿಸಿದನು, ೨೭೦. ಅವನು ಕೊಟ್ಟ ಶ್ರೇಷ್ಠವಾದ ವಸ್ತುಗಳನ್ನೆಲ್ಲ ಇಟ್ಟುಕೊಂಡು ತಂಬುಲವನ್ನು ಬಿಸಾಡಿದೆನು. "ಮಿತ್ರಕಾರ್ಯವು ನವೀನವಾದ ರೀತಿಯಲ್ಲಿ ಆದಂತಾಯಿತು" ಎಂದು ಸಂತೋಷಿಸುತ್ತಾ ಮನೆಗೆ ಬಂದೆನು. ವ॥ ಹಾಗೆ ಬಂದು ಮಾರನೆಯ ದಿವಸ- ೨೭೧. ಮನ್ಮಥನೆಂಬ ಕಾಳ್ಕಿಚ್ಚು ಯೌವನವೆಂಬ ವನದ ಸೆರಗಿನಲ್ಲಿ ವ್ಯಾಪಿಸಿದೆ. ಬೆಳದಿಂಗಳೆಂಬ ಮಂಜು ಮುಖವೆಂಬ ಕಮಲವನ್ನು ಮುಸುಕಿಕೊಂಡಿದೆ, ವಿರಹವೆಂಬ ಉಗ್ರ ಮಹಾಂಧಕಾರವು ಉಬ್ಬಿದ ಕುಚಗಳೆಂಬ ಚಕ್ರವಾಕಗಳನ್ನು ಕವಿದಿದೆ.

ವ॥ ಎಂದು ಮತ್ತಂ

ನಳರಾಜಂ ದಮಯಂತಿಯಂ ಪದೆಪಿನಿಂ ದುಷ್ಯಂತಭೂಪಂ ಶಕುಂ
ತಳೆಯಂ ಭಾವಿಸಿ ಚಂದ್ರಚೂಡನೊಲವಿಂ ಕಾದಂಬರೀದೇವಿಯಂ
ನಲವಿಂ ಪಾಂಡು ನೆಗಟ್ದ ಮಾದ್ರಿಯನಲಂಪಿಂ ಕೂಡಿದಂತೊಲ್ದು ನಿ
ಶ್ಚಲದಿಂ ಕಾಂತಕ ಕೂಡು ನೀಂ ಮೆಱೆಯುತಿರ್ಪಂಬಾಲಿಕಾದೇವಿಯಂ ೨೭೨

ವ॥ ಎಂದೊಡಮವನೆನ್ನೊಳಿಂತೆಂದಂ

ಕಂ॥ ಕಮಳಿನಿಯಂ ದಿನಪತಿ ತ
ನ್ನ ಮರೀಚಿಯಿನೊಲ್ದಲರ್ಚಿದಲ್ಲದೆ ಮಕರಂ
ದಮನಿಂಟಲುಂಟೆ ಮತ್ತ
ಭ್ರಮರಕ್ಕಿದು [ಸಹಜಮಲ್ತೆ] ಕಮಲದಳಾಕ್ಷೀ ೨೭೩

ವ॥ ಎಂದು ಮತ್ತಂ

ಕಂ॥ ಕಾರಣಮಿಲ್ಲದೆ ಕಾರ್ಯವಿ
ಚಾರಂ ಸಿದ್ಧಿಸದು ಮನ್ಮನಃಪ್ರೀತಿಗೆ ನೀಂ
ಕಾರಣಮಪ್ಪುದಱಿಂ ತ
ನ್ನಾರಿಯ ಕೂಟಮನೊಡರ್ಚುವುದು ಪದೆದೆನ್ನೊಳ್ ೨೭೪

ಕಾಂತಕನೆ ! ಸೌಕುಮಾರ್ಯಸಂಪತ್ತಿನ ಸರೋವರದ ಹಾಗೆ ಪ್ರಕಾಶಿಸುವ ರಾಜ. ಕುಮಾರಿಯು ಇದನ್ನು ತಡೆಯಬಲ್ಲಳೆ? ಹೇಳು" ವ॥ ಎಂದು ಹೇಳಿ ಮತ್ತೆ – ೨೭೨. "ಕಾಂತಕನೆ ! ನಳರಾಜನು ಪ್ರೀತಿಯಿಂದ ದಮಯಂತಿಯನ್ನು ಕೂಡಿದಂತೆ, ದುಷ್ಯಂತರಾಜನು ಶಕುಂತಲೆಯನ್ನೂ ಚಂದ್ರಾಪೀಡನು ಕಾದಂಬರಿಯನ್ನೂ ಸೇರಿದಂತೆ, ಪಾಂಡುರಾಜನು ಹೆಸರುವಾಸಿಯಾದ ಮಾದ್ರಿಯನ್ನು ಸಂತೋಷದಿಂದ ಕೂಡಿದ ಹಾಗೆ, ನೀನು ನಿಶ್ಚಲವಾದ ಮನಸ್ಸಿನಿಂದ ಸೌಂದರ್ಯದಿಂದ ಮೆರೆಯುತ್ತಿರುವ ಅಂಬಾಲಿಕೆಯನ್ನು ಕೂಡಿಕೋ" ವ॥ ಎಂದು ಹೇಳಿದೆನು. ಅದಕ್ಕೆ ಅವನು ನನಗೆ ಹೀಗೆಂದನು. ೨೭೩. "ಕಮಲದಳಾಕ್ಷೀ ! ಸೂರ್ಯನು ತಾವರೆಯನ್ನು ತನ್ನ ಕಿರಣಗಳಿಂದ ಅರಳಿಸಬಲ್ಲನೇ ಹೊರತು ಮಕರಂದವನ್ನು ಕುಡಿಯಬಲ್ಲನೇ? ಆದರೆ ಮದಿಸಿದ ದುಂಬಿಗೆ ಮಕರಂದಪಾನವು ಸಹಜವಾದುದಷ್ಟೆ! ವ॥ ಎಂದು ಹೇಳಿ ಮತ್ತೆ – ೨೭೪. "ಕಾರಣವಿಲ್ಲದೆ ಕಾರ್ಯದ ವಿಚಾರವು ಸಿದ್ಧಿಸುವುದಿಲ್ಲ. ನನಗೆ ಅವಳ ಮೇಲೆ ಪ್ರೀತಿ ಬರಲು ನೀನೇ ಕಾರಣ. ಆದುದರಿಂದ ನೀನು ಪ್ರೀತಿಯಿಂದ ನನ್ನನ್ನು ಆ ರಾಜಕುಮಾರಿ

ವ॥ ಅದಲ್ಲದೆಯುಂ

ಕಂ॥ ತೊಳಗುವ ಕನ್ಯಾಂತಃಪುರ
ದೊಳಗಿರ್ಪಳನೆಂತು ಭೇದಿಸಲ್ಬರ್ಕುಂ ಕೋ
ಮಳೆಯನುಱಿ ಪೇಳ್ ಸೃಗಾಳಿಕೆ
ತಿಳಿವಂತೆನಗೆಂದು ಕಾಂತಕಂ ಬೆಸಗೊಂಡಂ ೨೭೫

ವ॥ ಅಂತು ಬೆಸಗೊಳಲಾತಂಗಿಂತೆಂದಂ

ಕಂ॥ ಅವನಂ ಬಲ್ಲೈ ಕಾಂತಕ
ನವೀನಮೆನೆ ಚರ್ಮರತ್ನಮಂ ಕಳ್ದ ಕಳಾ
ಧವನಂ ಸಮಸ್ತಚೌರ್ಯ
ಪ್ರವೀಣನಂ ಲೋಕಜನದೊಳತಿಸಾಹಸಿಯಂ ೨೭೬

ವ॥ ಆ ಕಳ್ಳನ ಸಮೀಪಕ್ಕೆ ಪೋಗಿ,

ಕಂ॥ ನಿನ್ನಂ ಬಿಡಿಸಿದಪೆಂ ನಂ
ಬೆನ್ನಂ ಸಂದೇಹಮಿಲ್ಲವೆಂದೊಲವಿಂದಂ
ನನ್ನಿಯನೀಯೆ ಬಳಿಕ್ಕವ
ನಿನ್ನನ್ನಯ ಕಾರ್ಯಸಿದ್ಧಿಯಕ್ಕುಮಮೋಘಂ ೨೭೭

ವ॥ ಅದೆಂತೆನೆ

ಕಂ॥ ಕಾರಾನಿಲಯಕ್ಕರಮನೆ
ಸಾರೆಯುದಂ ಕನ್ನವಿಕ್ಕಿಸುವಮಾವನಿಂ ಮ
ತ್ತಾರಱಿಯದವೋಲಿಕ್ಕುವ
ಮೋರಣದಿಂದವನ ಕಾಲ್ಗೆ ಬಲ್ಸಂಕಲೆಯುಂ ೨೭೮

ಯೊಡನೆ ಸೇರುವಂತೆ ಪ್ರಯತ್ನಿಸು ವ॥ ಅದೂ ಅಲ್ಲದೆ ೨೭೫. “ಸೃಗಾಲಿಕೆ ! ಪ್ರಕಾಶಮಾನವಾದ ಕನ್ಯೆಯರ ಅಂತಃಪುರದಲ್ಲಿ ಇರುವ ಕೋಮಳೆಯಾದ ರಾಜಕುಮಾರಿಯನ್ನು ನಮಗನುಕೂಲಳಾಗುವಂತೆ ತಿರುಗಿಸಿಕೊಳ್ಳುವುದು ಹೇಗೆ ? ನನಗೆ ತಿಳಿಯುವಂತೆ ವಿವರಿಸಿ ಹೇಳು.” ಎಂದು ಕಾಂತಕನ್ನು ಪ್ರಶ್ನಿಸಿದನು. ವ।। ಹಾಗೆ ಪ್ರಶ್ನಿಸಲು ಅವನಿಗೆ ಹೀಗೆ ಹೇಳಿದಳು. ೨೭೬. “ಕಾಂತಕನೆ ! ನವೀನವಾದ ರೀತಿಯಲ್ಲಿ ಚರ್ಮರತ್ನವನ್ನು ಕದ್ದವನನ್ನು ಬಲ್ಲೆಯಲ್ಲವೆ ? ಅವನು ಕಲೆಗಳನ್ನೆಲ್ಲ ಬಲ್ಲವನು. ಎಲ್ಲ ರೀತಿಯ ಕಳ್ಳತನದಲ್ಲಿ ಪ್ರವೀಣನು. ಈ ಲೋಕದ ಜನರಲ್ಲೆಲ್ಲ ಅತಿ ಸಾಹಸಿಯಾದವನು. ವ।। ಆ ಕಳ್ಳನ ಹತ್ತಿರಕ್ಕೆ ಹೋಗಿ—೨೭೭. ನಿನ್ನನ್ನು ಬಿಡಿಸು ತ್ತೇನೆ. ನನ್ನನ್ನು ನಂಬು. ಇದರಲ್ಲಿ ಸಂದೇಹವಿಲ್ಲ. ಎಂದು ಪ್ರೀತಿಯಿಂದ ನಂಬಿಕೆ ಯನ್ನು ಕೊಡು. ಬಳಿಕ ಅವನಿಂದ ಖಂಡಿತವಾಗಿ ನಿನ್ನ ಕಾರ್ಯವು ಸಿದ್ಧಿಸುವುದು. ವ।। ಅದು ಹೇಗೆಂದರೆ—೨೭೮. ಅವನಿಂದ ಕಾರಾಗೃಹದಿಂದ ಅರಮನೆಯವರೆಗೂ ಸುರಂಗವನ್ನು ಕೊರೆಯಿಸೋಣ. ಅದು ಯಾರಿಗೂ ತಿಳಿಯದಂತೆ ಆಗಬೇಕು.

ಕಂ॥ ಫಣಿಮುಖವಂ ಕೊಂಡೊಡವಂ
ಫಣಿರಾಜಸಮುಸ್ತಲೋಕಪರ್ಯಂತಂ ಮೆ
ಯ್ದಣಿಯದೆ ಕನ್ನವನಿಕ್ಕುವ
ನಣಕವಿದಲ್ತಱಿವೆನವನ ಬಲ್ಪಿನ ಹವಣಂ ೨೭೯

ವ॥ ಅಂತವಂ ಕನ್ನವಿಕ್ಕಲ್ ಬೞಿಯಂ

ಯುವತಿಯ ಸಾರಣ್ಗೆ ಸುರಂ
ಕಂ॥ ಗವದೊಳಗಣಿನೆಯ್ದಿ ಪಲವು ದಿವಸಂ ಚಿತ್ತೋ
ದ್ಭವಕೇಳೀಸೌಖ್ಯಂ ಸಂ
ಭವಿಸಿರ್ಕುಂ ನಿನಗೆ ಕೇಳ ಕಾಂತಕ ಸತ್ಯಂ ೨೮೦

ವ॥ ಎಂದಾಂ ಪೇೞಲವಂ ಗೃಹದ್ವಾರದೊಳ್ ಬಂದಿರ್ದಪನೆಂದು ಪೇೞ್ದು ಸೃಗಾಳಿಕೆ ಮತ್ತಮಿಂತೆಂದಳ್

ಕಂ॥ ಕನ್ನವನಿಕ್ಕಿದಬೞಿಕಂ
ನಿನ್ನಂ ಕೊಲ್ವಂ ದುರಾತ್ಮಕಂ ಕಾಂತಕನೆಂ
ದೆನ್ನೊಡನೆ ಪೇೞ್ದಳಾಕೆ ಲ
ಸನ್ನೀತಿಯೊಳಿರ್ಪುದೆಂದು ತನ್ನನುನಯದಿಂ ೨೮೧

ವ॥ ಎಂದೊಡಾನಂತೆಗೆಯ್ವೆನೆಂದು ಕಾಂತಕನಂ ಬರಿಸೆಂಬುದುಮವಳ್ ಕರೆಯಲವಂ ಬಂದು

ಅನಂತರ ಕ್ರಮವಾಗಿ ಅವನ ಕಾಲಿಗೆ ಮತ್ತೆ ಸಂಕೋಲೆಯನ್ನು ತೊಡಿಸೋಣ. ೨೭೯. ಅವನು ಫಣಿಮುಖವೆಂಬ ಆಯುಧವನ್ನು ಹಿಡಿದುಕೊಂಡರೆ, ಪಾತಾಳದವರೆಗೆ ಸ್ವಲ್ಪವೂ ಆಯಾಸವಿಲ್ಲದೆ ಕನ್ನವನ್ನು ಕೊರೆಯಬಲ್ಲನು. ಇದು ಹಾಸ್ಯದ ಮಾತಲ್ಲ. ನನಗೆ ಅವನ ಶಕ್ತಿಯ ವಿಚಾರಗೊತ್ತಿದೆ, ವ।। ಹಾಗೆ ಅವನು ಕನ್ನ ಕೊರೆದರೆ ಬಳಿಕ– ೨೮೦. ಕಾಂತಕನೆ, ಕೇಳು. ಆ ಸುರಂಗದ ದಾರಿಯಿಂದ ಹಲವು ದಿವಸ ನೀನು ಆ ತರುಣಿಯ ಹತ್ತಿರಕ್ಕೆ ಹೋಗಿ ಕಾಮಸುಖವನ್ನು ಅನುಭವಿಸಬಹುದು. ನಾನು ಹೇಳುವ ಮಾತು ನಿಜ." ವ॥ ಎಂದು ನಾನು ಹೇಳಿದೆನು. ಅಲ್ಲದೆ ಕಾಂತಕನು ಈಗ ಕಾರಾಗೃಹದ ಬಾಗಿಲಿಗೆ ಬಂದು ಕಾದಿದ್ದಾನೆ" ಎಂದು ಸೃಗಾಲಿಕೆ ಹೇಳಿದಳು. ೨೮೧. ಮತ್ತೆ ಸುರಂಗವನ್ನು ಕೊರೆದ ಬಳಿಕ ಕಾಂತಕನು ನಿನ್ನನ್ನು ಕೊಲ್ಲುವನು. ಆತನು ದುರಾತ್ಮನು. ಎಚ್ಚರಿಕೆಯಿಂದಿರಬೇಕು." ಎಂದು ಅನುನಯದಿಂದ ನನಗೆ ಹೇಳಿದಳು. ವ॥ ನಾನು "ಹಾಗೆಯೇ ಮಾಡುವೆನು. ಕಾಂತಕನನ್ನು ಬರಮಾಡು ಎಂದು ಹೇಳಿದೆನು.

ಕಂ॥ ಆಯಾಸಂಬಡಿಸಿದನ
ನ್ಯಾಯಂ ನಿನ್ನಂ ನೃಪಂ ಮಗುೞ್ದಾತಂಗ
ತ್ಯಾಯತದಿಂ ಬಿನ್ನವಿಸಿಯು
ಪಾಯದೆ ನಾಂ ನಿನ್ನಂ ಬಿಡಿಸುವೆಂ ನಂಬೆನ್ನಂ ೨೮೨

ವ॥ ಎಂದು ಪ್ರತ್ಯಯಮಂ ಮಾಡಿಯನಂತರಂ ಸುರಂಗದ ವೃತ್ತಾಂತಮಂ ಪೇೞ್ದೊಡಾನದರ್ಕೊಡಂಬಡಲವನೆನ್ನ ಸಂಕಲೆಯಂ ಕಡಿಯಲ್

ಕಂ॥ ಅನಿದೆರ್ೊಳಗಣಿನುರುಭುಜ
ಗಾನನದಿಂ ಕನ್ನವಿಕ್ಕಿ ಕನ್ಯಾಭವನ
ಕ್ಕಾನಂದದಿಂ ಮದೀಯಾ
ಸ್ಥಾನಮನೆಯ್ದುವವೊಲೆಯ್ದಿದೆಂ ನಿರ್ಭಯದಿಂ ೨೮೩

ಸ್ಫಟಿಕದಕುಟ್ಟಿಮಂ ಶಶಿಶಿಲಾಮಯಭಿತ್ತಿ ನವೀನವಜ್ರ ಸಂ
ಘಟಿತನಿಕಾಮತೋರಣತತಿ ವಿದ್ರುಮ ವಂದನಮಾಲೆ ಚಂದ್ರಿಕಾ
ಪಟಲ ಸದೃಗ್ವಿತಾನರುಚಿ ಮೌಕ್ತಿಕಪುತ್ರಿಕೆ ಶಕ್ರಚಾಪಸಂ
ಕಟ ಶಬಲ ಪ್ರಕಾಶದೊದವಂ ತಳೆಯಲ್ ಮೆಱೆಗುಂ ನೃಪಾಲಯಂ ೨೮೪

ಅನಂತರ ಅವಳು ಕರೆಯಲು ಅವನು ಬಂದನು. ೨೮೨. ಆತನು "ಅರಸನು ಅನ್ಯಾಯದಿಂದ ನಿನಗೆ ಆಯಾಸವನ್ನುಂಟುಮಾಡಿದನು. ಮತ್ತೆ ಅರಸನಿಗೆ ವಿಸ್ತಾರವಾಗಿ ಹೇಳಿ ನಿನ್ನನ್ನು ಈ ಅಪಾಯದಿಂದ ಬಿಡಿಸುವೆನು. ನನ್ನನ್ನು ನಂಬು." ಎಂದು ಹೇಳಿ ನಂಬಿಕೆಯನ್ನು ಹುಟ್ಟಿಸಿದನು. ಅನಂತರ ಸುರಂಗದ ವೃತ್ತಾಂತವನ್ನು ಹೇಳಿದನು. ನಾನು ಅದಕ್ಕೆ ಒಪ್ಪಿದೆನು. ಕೂಡಲೆ ಅವನು ನನ್ನ ಸಂಕೋಲೆಯನ್ನು ಕಡಿದು ಹಾಕಿದನು. ೨೮೩. ನಾನು ಇದ್ದ ಜಾಗದಿಂದ ಕನ್ಯಾಂತಃಪುರದವರೆಗೂ ಸರ್ಪಾನನವೆಂಬ ಆಯುಧದಿಂದ ಸುರಂಗ ಕೊರೆದೆನು. ಅನಂತರ ನನ್ನ ಮನೆಗೆ ಹೋಗುವಂತೆ ನಿರ್ಭಯವಾಗಿ ಆನಂದದಿಂದ ಅಂತಃಪುರವನ್ನು ತಲಪಿದೆನು! ೨೮೪. ಸ್ಫಟಿಕ ರತ್ನದ ನೆಲ, ಚಂದ್ರಕಾಂತ ಶಿಲೆಯ ಗೋಡೆ, ನೂತನವಾದ ವಜ್ರಗಳನ್ನು ಹದ್ದಿರುವ ದೊಡ್ಡ ದೊಡ್ಡ ಕಂಭಗಳು, ಹವಳದ ತೋರಣಗಳು ; ಬೆಳದಿಂಗಳ ಪರದೆಗೆ ಸಮನಾದ ಮೇಲ್ಕಟ್ಟಿನ ಬಟ್ಟೆಯ ಕಾಂತಿ, ಮುತ್ತಿನ ಬೊಂಬೆಗಳು, ಕಾಮನಬಿಲ್ಲುಗಳು ಒಟ್ಟಾಗಿ ಸೇರಿದಂತೆ ನಾನಾ ವರ್ಣದ ಬೆಳಕು ಇವುಗಳಿಂದ ಅರಮನೆಯು ಮೆರೆಯುತ್ತಿತ್ತು.

ವ॥ ಅದಱೊಳ್

ಕುಂಜರದಂತದಿಂದೆಸೆವ ಮಂಚದೊಳೊಪ್ಪುವ ಹಂಸತೂಲತ
ಲ್ಪಂ ಜಿತಚಂದ್ರಿಕಾಪಟಲಮೆಂದೆನೆ ಚಿತ್ರವಿಧಾನದೇೞ್ಗೆಯಿಂ
ರಂಜಿಸಿ ಶಂಖದಿಂ ತೊಡೆದ ಭಿತ್ತಿ ಸುಮೌಕ್ತಿಕ ದರ್ಪಣಂಬೊಲೊ
ಳ್ಪಿಂ ಜನವಕ್ತ್ರಮಂ ಬೆಳಗಲೇಂ ಮೆಱೆದಿರ್ದುದೊ ಸಜ್ಜೆಯಾಲಯಂ ೨೮೫

ವ॥ ಆ ಸೆಜ್ಜೆಯ ಮನೆಯೊಳ್ ಮಂಚದ ಮೇಲೆ

ಎಡಗೆಯ್ಯಂ ತಲೆಗಿಂಬಿನೊಳ್ ಮಡಗಿ ವೃತ್ತಂಬೆತ್ತು ಕೆಂಪಪ್ಪನು
ಣ್ಮಡಮಂ ವಾಮಪದ ಪ್ರಗಲ್ಭದೆಡೆಯೊಳ್ ಸೈತಿಟ್ಟು ಹಸ್ತಾಬ್ಜಮಂ
ಕಡುಚೆಲ್ವಪ್ಪ ನಿತಂಬದೊಳ್ ನಿಱಿಸಿ ಕಿಂಚಿಚ್ಛ್ವಾಸದಿಂ ಕಂಠದೊಳ್
ತೊಡವಲ್ಲಾಡೆ ಮೃದೂರುತಲ್ಪದೆಡೆಯೊಳ್ ನಿದ್ರಾಂಗಿ ಕಣ್ಗೊಪ್ಪಿದಳ್ ೨೮೬

ಕಂ॥ ಮಿಸುಗುವ ಚೀನಪಟಂ ಲೇ
ಪಿಸಿದಂದದಿನೊಪ್ಪೆ ತನ್ನ ತನುಲತೆಯೊಳ್ ಕ
ಣ್ಗೆಸೆದಳ್ ದುಗ್ಧಾಂಬುಧಿ ಫೇ
ನ ಸಹಸ್ರಂ ತುಱುಗಿದಿಂದಿರಾ ಮೂರ್ತಿಯವೋಲ್ ೨೮೭

ಚಂದ್ರಿಕೆಯೊಳ್ವಾಸಿಕೆಯೊಳ್
ಚಂದ್ರಕಳಾಕಾಂತೆ ಶಯನದಿಂದೆಸೆದಳೆನಲ್
ಚಂದ್ರಾನನೆ ಶಯ್ಯಾತಳ
ಸಾಂದ್ರದಿನೆಸೆದಿರ್ದಳಮಳ ನಿದ್ರಾಭರದಿಂ ೨೮೮

ವ॥ ಅದರಲ್ಲಿ—೨೮೫. ಆನೆಯ ದಂತದಿಂದ ಮಾಡಿದ ಮಂಚದ ಮೇಲೆ ಹಂಸದ ತುಪ್ಪಳ ಹಾಸಿಗೆ, ಬೆಳದಿಂಗಳನ್ನು ಮೀರಿಸಿದ ಚಿತ್ರವಿಚಿತ್ರವಾದ ಅಲಂಕಾರಗಳಿಂದ ರಂಜಿಸುವ ಶಂಖದ ಸುಣ್ಣ ಬಳಿದ ಗೋಡೆ, ಇವುಗಳಿಂದ ಒಳ್ಳೆಯ ಮುತ್ತಿನ ಕನ್ನಡಿಯಂತೆ ಜನರ ಮುಖಗಳನ್ನು ಬೆಳಗುತ್ತಾ ಶಯ್ಯಾಗೃಹವು ಪ್ರಕಾಶಿಸಿತು. ವ॥ ಆ ಶಯ್ಯಾಗೃಹದಲ್ಲಿ ಮಂಚದ ಮೇಲೆ—೨೮೬. ಮೃದುವಾದ ಹಾಸಿಗೆಯಲ್ಲಿ ನಿದ್ರೆ ಮಾಡುತ್ತಿದ್ದ ರಾಜಕುಮಾರಿಯನ್ನು ನೋಡಿದೆನು. ಎಡಗೈಯನ್ನು ತಲೆಯ ಕೆಳಗೆ ಇಟ್ಟುಕೊಂಡಿದ್ದಳು. ದುಂಡಾಗಿ ಕೆಂಪಾದ ನಯವಾದ ಹಿಮ್ಮಡಿಯನ್ನು ಎಡಗಾಲಹರಡಿನ ಬಳಿ ಇಟ್ಟುಕೊಂಡಿದ್ದಳು. ಚೆಲುವಾದ ಕರಕಮಲವನ್ನು ನಿತಂಬದ ಮೇಲೆ ಇರಿಸಿಕೊಂಡಿದ್ದಳು. ಕಂಠದಲ್ಲಿ ನಿಧಾನವಾಗಿ ಉಸಿರಾಡುತ್ತಿರಲು ಒಡವೆಗಳು ಅಲ್ಲಾಡುತ್ತಿದ್ದುವು. ನಿದ್ರೆಮಾಡುತ್ತಾ ಅವಳು ಕಡುಚಲುವೆಯಾಗಿ ಕಂಡಳು. ೨೮೭. ಅವಳ ಬಳ್ಳಿಯಂಥ ಶರೀರದ ಮೇಲೆ ಮಿರುಗುವ ತೆಳುವಾದ ಚೀನಾಂಬರವು ಅಂಟಿಕೊಂಡ ಹಾಗೆ ಇದ್ದಿತು. ಆದರಿಂದ ಅವಳು ಕ್ಷೀರಸಮುದ್ರದಲ್ಲಿ ಸಾವಿರಾರು ನೊರೆಗಳು ಮುಚ್ಚಿದ ಇಂದಿರೆಯಂತೆ ಪ್ರಕಾಶಿಸಿದಳು. ೨೮೮. ಚಂದ್ರಮುಖಿಯು ಹಾಸಿಗೆಯ ಮೇಲೆ ಮಲಗಿ ನಿದ್ರಿಸುತ್ತಿದ್ದಳು. ಆಗ ಅವಳು ಬೆಳದಿಂಗಳ ಸುಂದರವಾದ ಹಾಸಿಗೆಯ ಮೇಲೆ ಚಂದ್ರಕಳೆಯೆಂಬ ಕಾಂತೆಯು

ವ॥ ಮತ್ತಮಲಕ್ತಕರಸದಿಂದಡಿಯೂಡಿದಂಘ್ರಿ ನಖದೀಪ್ತಿಲಾವಣ್ಯರಸಮೆಡೆವಿಡದೆ ಕಡೆಗೋಡಿವರಿವಂತಿರೆ ಕಿಂಚಿದ್ವಳಿತ ವಿಳಾಸದಿಂದೆಸೆವ ದಕ್ಷಿಣಜಾನು ಪ್ರದೇಶಮುಂ, ಆಕಾಶಪರಿಕಲ್ಪಮೆಂಬ ಕವಿಸಮಯ ಪ್ರಸಿದ್ಧಿಯುಂ ಪಡೆದೆನಿಂದು ಪಾತಾಳಪರಿಲಗ್ನಮೆಂಬುಪಮೆಗಾಸ್ಪದಮಪ್ಪೆನೆಂಬಂತೆಯನಲ್ಪತಲ್ಪದೊಳಟ್ಟ ಮಧ್ಯಪ್ರದೇಶಮುಂ ನಿತಂಬ ವಲ್ಮೀಕಮಂ ಪುಗಲೆಳಸಿದ ಫಣಾಧರ ಫಣಾಮಣಿಗಳೆಂಬಂತೆಸೆವ ಸೆಳ್ಳುಗುರಕಾಂತಿ ಬಳ್ಳಿವರಿಯೆ ನೀಡಿದ ದಕ್ಷಿಣಬಾಹುಲತೆಯುಂ ಗಂಡಮಂಡಲ ಪೂರ್ಣಶಶಿಗೆ ಪರಿವೇಷಮಾದಂತಿರ್ದ ದಕ್ಷಿಣಕರ್ಣಪತ್ರಮುಂ ವಾಮಕುಚಪೀಠದೊಳ್ ಚೀನಪಟ ಚಂದನಚರ್ಚೆಯಿಂ ರಂಜಿಸುವಪಸವ್ಯಕುಚಲಿಂಗಮುಂ ಮುಖಪದ್ಮದೊಳ್ ಗಱಿವೊಯ್ವ ಪಱಿವೆಯ ಮಱಿಗಳಂತಿರೆ ಅರಲ್ದ ಕಣ್ಮಲರ್ಗಳುಂ ಅರುಣ ಸರಸಿರುಹಚುಂಬನಕ್ಕೆಳಸಿದ ತರಣಿಮಂಡಲದಂತೆ ಎಡಗಿವಿಯೊಳ್ ಕಡುಚೆಲ್ವಿಂದೆಸೆವ ರತ್ನದೋಲೆಯುಂ ನಾಗಕನ್ಯಕಾ ನಿರ್ಮುಕ್ತ ನಿರ್ಮೋಕದಂತಿರ್ಪ ನಿರ್ಮಲ ವಸ್ತ್ರಾಭರಣಮುಂ ಸುಧಾಬ್ಧಿ ತುಷಾರಮಂ ತಳೆದ ಸುಧಾಸೂತಿಯಂತಿರ್ಪ ಮುಖಮೃಗಾಂಕಮಂಡಲಮುಂ ನವರತ್ನಮಯ ತ್ರಿಸರಹಾರಮನೋರಣದಿಂದಲ್ಲಾಡಿಸುವ ಮೆಲ್ಲುಸಿರ್ಗಳುಮತಿ ರಮಣೀಯಮಾದುವು ಅಂತುಮಲ್ಲದೆಯುಂ

ಮಲಗಿರುವಂತೆ ಕಾಣಿಸಿದಳು. ವ॥ ಸ್ವಲ್ಪ ಬಗ್ಗಿ ವಿಲಾಸದಿಂದ ಪ್ರಕಾಶಿಸುವ ಬಲ ಮಂಡಿಯು ಅರಗಿನ ರಸ ಹಚ್ಚಿದ ಪಾದಗಳ ಉಗುರುಗಳ ಬೆಳಗುವ ಲಾವಣ್ಯ ರಸವು ಎಡೆಬಿಡದೆ ತುಂಬಿ ಕೋಡಿ ಹರಿದಂತೆ ಕಾಣಿಸಿತು. 'ಇದುವರೆಗೆ ಆಕಾಶಕ್ಕೆ ಸಮನೆಂದು ಕವಿಸಮಯದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದೆ, ಈಗ ಪಾತಾಳಕ್ಕೆ ಸಮ ಎಂಬ ಹೋಲಿಕೆಗೆ ಆಶ್ರಯವಾಗುವೆನೆಂದು ಶ್ರೇಷ್ಠವಾದ ಹಾಸಿಗೆಯಲ್ಲಿ ಅವಳ ಸೊಂಟವು ಅಡಗಿ ಹೋಗಿದ್ದಿತು. ಬಳ್ಳಿಯಂತಹ ಬಲದೋಳನ್ನು ನೀಡಿಕೊಂಡಿದ್ದಳು. ಅದರ ತೆಳುವಾದ ಉದ್ದವಾದ ಉಗುರುಗಳು ನಿತಂಬವೆಂಬ ಹುತ್ತವನ್ನು ಹೊಗಲು ಬಯಸಿದ ಸರ್ಪದ ಹೆಡೆಗಳ ಮೇಲಿನ ರತ್ನಗಳಂತೆ ಪ್ರಕಾಸಿದುವು ಮತ್ತು ಅವುಗಳ ಕಾಂತಿಯು ಬಳ್ಳಿಯಂತೆ ಹಬ್ಬಿದ್ದಿತು. ಬಲಗಿವಿಯ ಓಲೆಯು ದುಂಡಾದ ಕೆನ್ನೆಗಳೆಂಬ ಪೂರ್ಣಚಂದ್ರನಿಗೆ ಪರಿವೇಷವಾದಂತೆ ಕಂಗೊಳಿಸಿತು. ಬಲ ಮೊಲೆಯೆಂಬ ಲಿಂಗವು ಎಡ ಮೊಲೆಯ ಪೀಠದ ಮೇಲೆ ಚೀನಾಂಬರವೆಂಬ ಗಂಧಲೇಪದಿಂದ ರಂಜಿಸಿತು. ಅರಳಿದ ಹೂವಿನ ಹಾಗಿರುವ ಕಣ್ಣುಗಳು ಮುಖವೆಂಬ ಕಮಲದ ಮೇಲೆ ಗರಿಗಳನ್ನು ಬಿಚ್ಚಿಕೊಂಡು ಹಾರಾಡುವ ದುಂಬಿಯ ಮರಿಗಳಂತೆ ತೋರುತ್ತಿದ್ದುವು. ಎಡಗಿವಿಯಲ್ಲಿ ಅಂದವಾಗಿ ಹೊಳೆಯುವ ರತ್ನದೋಲೆಯು ಕೆಂದಾವರೆಯನ್ನು ಚುಂಬಿಸಲು ಬಯಸಿದ ಸೂರ್ಯ ಮಂಡಲದಂತೆ ಪ್ರಕಾಶಿಸಿತು. ಅವಳ ನಿರ್ಮಲವಾದ ವಸ್ತ್ರಾಭರಣಗಳು ನಾಗಕನ್ನಿಕೆಯರಿಂದ ಸುಲಿದು ಬಿಟ್ಟ ಪರೆಯಂತೆ ಕಾಣಿಸಿತು. ಮುಖವೆಂಬ ಚಂದ್ರಮಂಡಲವು ಅಮೃತಸಾಗರದ ಹಿಮವನ್ನು ತಳೆದ ಚಂದ್ರನಂತೆ ಕಂಗೊಳಿಸಿತು. ಅವಳ ಮೆಲ್ಲುಸಿರುಗಳು ನವರತ್ನ ಖಚಿತವಾದ

ಸುರುಚಿರಮಾದ ದಂತವಸನಂ ನಸುಗೆತ್ತುವಿನಂ ಸಿತಾಕ್ಷಿ ನೀ
ಳ್ದಿರೆಮುಗಿದಿರ್ಪಿನಂ ಕದಪುನುಣ್ಪೆಮರೋಳಿಯನಾಂಪಿನಂ ಕುಚಾಂ
ತರದ ನಿಜೋತ್ತರೀಯವಸನಂ ತೊಲಗಿರ್ಪಿನಮಲ್ಪ ಮಧ್ಯಮು
ಬ್ಬಿರೆ ಮೃದುತಲ್ಪದೊಳ್ ಮಱಿದಳಂಗನೆ ಮಂಗಳಮಾದ ನಿದ್ರೆಯಿಂ ೨೮೯

ಕಂ॥ ದುಗ್ಧಾಂಬುಧಿಯೊಳ್ ಜನಿಸುವ
ಮುಗ್ಧೇಂದು ಕಳಾವಿಳಾಸದಂತನುನಯದಿಂ
ದಿಗ್ಧವಳಿತ ತಳ್ಪದೊಳೆ ವಿ
ದಗ್ಧಾಂಗನೆ ಮಱಿದಳೆಸೆವ ನಿದ್ರಾಭರದಿಂ ೨೯೦

ಕೆಳದಿಯರೆಲ್ಲರ್ ತಂತ
ಮ್ಮಳವಡಿಕೆಯ ಠಾವಿನಲ್ಲಿ ಕಲ್ಪಲತಾ ಕೋ
ಮಳೆವೊಲ್ ಮೃದುತರಶಯ್ಯಾ
ತಳದೊಳ್ ಮಱಿದಿರ್ದರೆನ್ನ ಕಣ್ ಸೋಲ್ವಿನೆಗಂ ೨೯೧

ವ॥ ಅಂತಿರ್ದ ಕಾಂತೆಯಂ ಕಂಡು

ಇಂದೆನ್ನಕ್ಷಿಗೆ ಪರ್ವಮಾಯ್ತು ಮದನಶ್ರೀರಾಜ್ಯಮಂ ಕಂಡೆನಾ
ನಂದಂ ಮಿಕ್ಕುದು ಧೂಪವಾಸಿತಲಸತ್ಕನ್ಯಾಲಯಂಬೊಕ್ಕೆನೀ
ಮಂದಶ್ವಾಸೆಯ ನಿದ್ರೆಯಂ ತೊಲಗಿಸಲ್ಕೇನೆಂಬಳೋ ಎನ್ನನೆಂ
ಬೊಂದುದ್ವೇಗದೊಳಿರ್ದೆನೊಂದು ನಿಮಿಷಂ ಸಾರ್ದಾಮಣಿಸ್ತಂಭಮಂ ೨೯೨

ಮೂರೆಳೆ ಹಾರವನ್ನು ಕ್ರಮದಿಂದ ಅಲ್ಲಾಡಿಸುತ್ತಿದ್ದುವು. ಹೀಗೆ ಎಲ್ಲವೂ ರಮಣೀಯವಾಗಿದ್ದುವು. ಅಷ್ಟೇ ಅಲ್ಲದೆ—೨೮೯. ಅತಿ ರಮಣೀಯವಾದ ತುಟಿಯು ತುಸ ಅದುರುತ್ತಿತ್ತು. ನೀಳವಾದ ಬೆಳ್ಗಣ್ಣುಗಳು ಅರ್ಧ ಮುಚ್ಚಿಕೊಂಡಿದ್ದುವು. ಕೆನ್ನೆಗಳು ಬೆವರಿದ್ದುವು. ಸ್ತನಗಳ ಮೇಲಿನ ಹೊದಿಕೆಯು ಜಾರಿಹೋಗಿದ್ದಿತು. ತೆಳುವಾದ ಸೊಂಟವು ಮೆತ್ತನೆಯ ಹಾಸಿಗೆಯಲ್ಲಿ ಕಾಣದಂತೆ ಅಡಗಿದ್ದಿತು ಮೃದುವಾದ ಹಾಸಿಗೆಯಲ್ಲಿ ಅಂಗನೆಯು ಮಂಗಳವಾದ ನಿದ್ರೆಯಲ್ಲಿ ಮೆರೆದಳು. ೨೯೦. ದಿಕ್ಕುಗಳನ್ನು ಬೆಳ್ಳಗೆಮಾಡುವ (ತನ್ನ ಪ್ರಕಾಶದಿಂದ) ಬೆಳ್ಳಗಿರುವ ಮೆತ್ತನೆಯ ಹಾಸಿಗೆಯಲ್ಲಿ ನಿದ್ರಾವಶಳಾದ ಆ ಸುಂದರ ಪ್ರೌಢತರುಣಿಯು ಕ್ಷೀರಸಮುದ್ರದಲ್ಲಿ ಹುಟ್ಟಿದ ಸುಂದರನಾದ ಚಂದ್ರನ ಕಲಾ ವಿಳಾಸದಂತೆ ಮೆರೆದಳು. ೨೯೧. ಅವಳ ಗೆಳತಿಯರೆಲ್ಲರೂ ತಮ ತಮಗೆ ನಿಗದಿಯಾದ ಜಾಗದಲ್ಲಿ ಮೃದುವಾದ ಹಾಸಿಗೆಗಳ ಮೇಲೆ ಮಲಗಿದ್ದರು. ಅವರು ಕಲ್ಪಲತಾ ಕೋಮಳೆಯರಂತೆ ರಂಜಿಸಿದರು. ಅವರ ಅಂದಕ್ಕೆ ಕಂಗಳು ಸೋತವು. ವ॥ ಹಾಗಿದ್ದ ಕಾಂತೆಯನ್ನು ನೋಡಿ—೨೯೨. 'ಇದು ನನ್ನ ಕಂಗಳಿಗೆ ಹಬ್ಬವಾಯಿತು, ಮದನಲಕ್ಷ್ಮಿಯ ರಾಜ್ಯವನ್ನು ನೋಡಿದೆನು. ಆನಂದವು ಮೇರೆ ಮೀರಿತು. ಧೂಪದ ಹೊಗೆಯಿಂದ ಸುವಾಸನೆಯುಳ್ಳ ಕನ್ಯಾಂತಃಪುರವನ್ನು ಪ್ರವೇಶಿಸಿದೆನು. ಮೆಲ್ಲಗೆ ಉಸಿರು ಬಿಡುವ ಈ ತರುಣಿಯ ನಿದ್ದೆಯನ್ನು ತೊಲಗಿಸಿದರೆ ನನ್ನನ್ನು ಏನೆಂದು ಹೇಳುವಳೋ ?'

ವ॥ ಅಂತವಳಂ ಕಂಡು ಪರವಶನಾದಂತೆಯುಂ ರತಿಸಮಾಧಿಯಂ ಪಡೆದಂತೆಯುಂ ಸ್ವರ್ಗಲೋಕಂಬೊಕ್ಕಂತೆಯುಂ ಕಾಮನಿಧಾನಮಂ ಕಂಡಂತೆಯುಂ ಸುಖಸಾಗರದೊಳ್ ಮುೞುಂಗಿದಂತೆಯುಂ ಕುಸುಮಶರದಿಂ ಬದ್ಧನಾದಂತೆಯುಂ ಮನಮಂ ಮಾಱುಗೊಟ್ಟಂತೆಯುಂ ಇರ್ದು ಎಂತಾನುಂ ತಿಳಿದು ಕೆಲದ ಭಿತ್ತಿಭಾಗಮಂ ನೋೞ್ಪನ್ನೆಗಂ

ಕಂ॥ ತಳತಳಿಸಿ ಪೊಳೆವ ನಿರ್ಮಳ
ಫಳಕಂ ನೇಱಿರ್ದೊಡಂತದಂ ತೆಗೆದದಱೊಳ್
ಬಳಪದಿನಾಗಳ್ ಬರೆದೆಂ
ಲಳನೆಯ ರೂಪಾತಿಶಯಮನೆನ್ನಱಿವನಿತಂ ೨೯೩

ವ॥ ಅದೆಂತೆನೆ

ತಳಿರಡಿಯುಂ ನಯಂಬಡೆದ ಜಂಘೆಯುಮೊಳ್ಪಡರ್ದೂರುಮಂ ಮೃದೂ
ಜ್ಜ್ವಳಕಟಿಯುಂ ಸುರುಳ್ದ ಸುೞಿನಾಭಿಯುಮೊಳ್ನಡುಮಂ ಕಳಾಪಮುಂ
ಕಳಶಕುಚಂಗಳುಂ ಭುಜಲತಾದ್ವಯಮುಂ ಶಶಿಬಿಂಬವಕ್ತ್ರಮುಂ
ದಳಮನಲಂಪಿನಿಂ ಬರೆದೆನಂಗಜಚಿತ್ರಕನೋಜನಾದವೋಲ್ ೨೯೪

ಅದು ಕುಸುಮಾಸ್ತ್ರಭಾಳಲಿಖಿತಂ ಶಶಿಯೋೞಿಗೆಯ ಸೀಮೆ ಚೈತ್ರನ
ಭ್ಯುದಯದ ಮಂತ್ರವೃತ್ತಿ ಮಳಯಾನಿಳನೊಪ್ಪುವ ಜೀವಮಾಕ್ಷಿಸ
ಲ್ಕದು ರತಿಯೋಲೆಭಾಗ್ಯಮದು ಮೋಹನಮೂರ್ತಿಯೆನಲ್ಕೆ ರಂಜಿಸಿ
ರ್ದುದು ಬರೆದಿರ್ದ ಚಿತ್ರಮೆನಗಂ ಬೆಱಗಪ್ಪಿನೆಗಂ ಧರಾಧಿಪಾ ೨೯೫

ಎಂದು ಒಂದು ನಿಮಿಷ ರತ್ನದ ಕಂಭದ ಹತ್ತಿರ ಹೋಗಿ ಆತುರದಿಂದ ಯೋಚಿಸಿದೆನು. ವ॥ ಹಾಗಿದ್ದ ಅವಳನ್ನು ನೋಡಿ ಪರವಶನಾದಂತೆಯೂ, ರತಿಸಮಾಧಿಯನ್ನು ಹೊಂದಿದಂತೆಯೂ, ಸ್ವರ್ಗಲೋಕವನ್ನು ಪ್ರವೇಶಿಸಿದಂತೆಯೂ, ಮನ್ಮಥನ ನಿಧಿಯನ್ನು ನೋಡಿದಂತೆಯೂ, ಸುಖ ಸಾಗರದಲ್ಲಿ ಮುಳುಗಿದಂತೆಯೂ, ಹೂಬಾಣಕ್ಕೆ ಗುರಿಯಾದಂತೆಯೂ ಅವಳಿಗೆ ಮನಸ್ಸನ್ನು ಮಾರಿಬಿಟ್ಟ ಹಾಗೆ ಅನುಭವವನ್ನು ಪಡೆದನು. ಹೇಗೋ ಎಚ್ಚರವಾಗಿ ಪಕ್ಕದ ಗೋಡೆಯನ್ನು ನೋಡಿದೆನು. ಆಗ—೨೯೩. ಅಲ್ಲಿ ಥಳಥಳ ಎಂದು ಹೊಳೆಯುತ್ತಿದ್ದ ನಿರ್ಮಲವಾದ ಹಲಗೆಯೊಂದು ನೇತಾಡುತ್ತಿತ್ತು. ಅದನ್ನು ತೆಗೆದುಕೊಂಡು ಅದರಲ್ಲಿ ಬಳಪದಿಂದ ಆ ಲಲನೆಯ ರೂಪಾತಿಶಯವನ್ನು ನನಗೆ ತಿಳಿದಂತೆ ಬರೆದನು. ವ॥ ಅದು ಹೇಗೆಂದರೆ—೨೯೪. ಚಿಗುರಿನಂತಹ ಅಡಿಯನ್ನೂ ನುಣುಪಾದ ಮೊಣಕಾಲನ್ನೂ, ಸುಂದರವಾದ ತೊಡೆಯನ್ನೂ, ಮೃದುವಾದ ಹೊಳೆಯುವ ಸೊಂಟವನ್ನೂ, ಸುರುಳಿಕೊಂಡಿರುವ ಆಳವಾದ ಹೊಕ್ಕುಳನ್ನೂ, ಸುಂದರವಾದ ಸೊಂಟದ ಒಡ್ಯಾಣವನ್ನೂ, ಕುಂಭಾಕಾರದ ಸ್ತನಗಳನ್ನೂ, ಬಳ್ಳಿಯಂತಿದ್ದ ಎರಡು ತೋಳುಗಳನ್ನೂ, ಚಂದ್ರಬಿಂಬದ ಹಾಗಿರುವ ಮುಖವನ್ನೂ, ಸಂತೋಷದಿಂದ ಬರೆದೆನು. ಇದಕ್ಕೆ ಮನ್ಮಥನೆಂಬ ಚಿತ್ರಕಾರನೇ ಗುರುವಾದನು. ೨೯೫. ಮಹಾರಾಜನೆ, ನಾನು ಬರೆದಿದ್ದ ಚಿತ್ರವು ನಾನೇ ಬೆರಗಾಗುವಂತೆ ರಂಜಿಸಿತು. ಅದು ಮನ್ಮಥನ ಹಣೆಯ

ವ॥ ಅದಲ್ಲದೆಯುಂ

ಉರುತರಮಂಚದೊಳ್ ಮಲಗಿದಂಗನೆಯಾಕೃತಿಯಂ ವಿಳಾಸದಿಂ
ಬರೆದು ತದಂಘ್ರಿಪಲ್ಲವ ಸಮೀಪದೊಳಂಗಜ ಕೇಳಿಯಾಸೆಯಿಂ
ಕರಕಮಳಂಗಳಂ ಮುಗಿದು ಕಾಲ್ಗೆಱಗಿರ್ಪ ಮದೀಯಭಾವಮಂ
ನಿರವಿಸಿಯಾರ್ಯೆಯೊಂದನೊಲವಿಂ ಬರೆದಂ ನೃಪರೂಪಚಂದ್ರಮಾ ೨೯೬

ವ॥ ಅದೆಂತೆನೆ

ಆರ್ಯೆ

ತ್ವಾಮಯಮಾಬದ್ಧಾಂಜಲಿ ದಾಸಜನಸ್ತ್ವಮಿಮಮರ್ಥಮರ್ಥಯತೇ
ಸ್ವಪಿಹಿ ಮಯಾ ಸಹ ಸುರತವ್ಯತಿಕರಖಿನ್ನೈವಮಾಮೈವಂ

ಟೀಕೆ

ಕಂ॥ ನಿನ್ನಯ ದಾಸಂ ಕೆಯ್ಮುಗಿ
ದುನ್ನತಿಯಿಂ ಪ್ರಾರ್ಥಿಸುವನಿದಂ ಸತಿ ನೀಂ ಕೇಳ್
ನಿನ್ನೊಡನೆ ಸುರತಕಲಹದ
ಖಿನ್ನತೆಯಿಂದೊಱಗಿ ಸುಖದೊಳೊಪ್ಪುವ ತೆಱಸಂ ೨೯೭

ವ॥ ಎಂಬಿದಂ ಬರೆದನಂತರಂ

ಕಂ॥ ಅಲ್ಲಿರ್ದ ಪೆಟ್ಟಿಯೊಳಗಣ
ಸಲ್ಲಲಿತಕ್ರಮುಕ ಪತ್ರಕರ್ಪೂರಮನಾಂ
ಬಲ್ಲನಿತಂ ಕೊಂಡು ಮುದಂ
ಪಲ್ಲವಿಸಲ್ ಸವಿದೆನಧಿಕರಾಗಂ ಮೆಱೆಯಲ್ ೨೯೮

ಬರೆಹ. ಶಶಿಯ ಅಭ್ಯುದಯದ ಎಲ್ಲೆಯ ಗೆರೆ. ವಸಂತನ ಉನ್ನತಿಯ ಮಂತ್ರ ವೃತ್ತಿ. ಮಲಯಮಾರುತದ ಸುಂದರವಾದ ಜೀವ. ನೋಡುವುದಕ್ಕೆ ಅದು ರತಿದೇವಿಯ ಓಲೆಯ ಭಾಗ್ಯ. ಅದು ಎಲ್ಲರನ್ನೂ ಮೋಹಿಸುವ ಮೂರ್ತಿ,—ಎಂಬಂತೆ ಮನೋಹರವಾಗಿದ್ದಿತು. ವ॥ ಅದೂ ಅಲ್ಲದೆ—೨೯೬. ನೃಪಚಂದ್ರ, ಶ್ರೇಷ್ಠವಾದ ಮಂಚದ ಮೇಲೆ ಮಲಗಿರುವ ಅಂಗನೆಯ ಆಕಾರವನ್ನು ವಿಳಾಸದಿಂದ ಬರೆದೆನು. ಮತ್ತು ಅವಳ ತಳಿರಡಿಗಳ ಬಳಿ ಮದನಕೇಳಿಗೆ ಆಶಿಸಿ ಕರಕಮಲಗಳನ್ನು ಜೋಡಿಸಿಕೊಂಡು ಕಾಲಿಗೆ ನಮಸ್ಕರಿಸಿರುವ ನನ್ನ ಮನೋಭಾವವನ್ನು ತಿಳಿಸಲು ಒಂದು ಆರ್ಯಾ ಪದ್ಯವನ್ನು ಬರೆದನು. ವ॥ ಅದು ಹೇಗೆಂದರೆ—"ತ್ವಾಮಯಮಾ ಬದ್ಧಾಂಜಲಿ ದಾಸಜನಸ್ತ್ವಮಿಮಮರ್ಥಯತೇ ಸ್ವಪಿಹಿಮಯಾಸಹ ಸುರತ ವ್ಯತಿಕರಖಿನ್ನೈವ ಮಾಮೈವಂ॥" ೨೯೭. 'ನಿನ್ನ ದಾಸನಾದ ನಾನು ಕೈಮುಗಿದುಕೊಂಡು ಈ ವಿಷಯವನ್ನು ಪ್ರಾರ್ಥಿಸುತ್ತೇನೆ. ಸುರತ ಕಲಹದಿಂದ ಆಯಾಸಗೊಂಡು ಈ ರೀತಿ ಸುಖದಿಂದ ನನ್ನೊಡನೆ ಮಲಗಿ ನಿದ್ರಿಸು. ಒಂಟಿಯಾಗಿ ಹೀಗೆ ಮಲಗಬೇಡ !' ವ॥ ಎಂದು ಬರೆದ ಮೇಲೆ—೨೯೮. ಅಲ್ಲಿದ್ದ ಪೆಟ್ಟಿಗೆಯಲ್ಲಿದ್ದ ಕರ್ಪೂರ ಮಿಶ್ರವಾದ ಎಲೆ ಅಡಿಕೆಯನ್ನು ತೆಗೆದು ಬೇಕಾದಷ್ಟು

ವ॥ ಅಂತು ಸವಿದು

ಕಂ॥ ಪೊಳೆವ ಸುಧಾಭಿತ್ತಿಯೊಳ
ಗ್ಗಳಮಾಗಲ್ ಪದ್ಮರಾಗವರ್ಣದ ಪೊಸತಂ
ಬುಲದ ರಸಮಂ ವಿಳಾಸದಿ
ನಳವಡಲುಗುೞ್ದೆಂ ರಥಾಂಗರೂಪಪ್ಪಿನೆಗಂ ೨೯೯

ವ॥ ಬೞಿಕಲ್ಲಿಂ ಪೊಱಮಟ್ಟು ಪೂರ್ವಮಾರ್ಗದಿಂ ಕಾರಾಗೃಹಕ್ಕೆ ಬರಲೆನ್ನಂ ಕಾಂತಕಂ ಕಂಡು ಕನ್ನಕ್ಕೆನ್ನಂ ಬಲಿಗೆಯ್ಯಲೆಂದನುಮಾನಿಸೆ

ತನ್ನೊಂದಲ್ಪಸುಖಕ್ಕೆ ಕೂರ್ತು ಪರರಂ ನಿಷ್ಕಾರಣಂ ಕೊಲ್ವನಂ
ಮುನ್ನಂ ಕೊಂದೊಡೆ ದೋಷವಿಲ್ಲೆನಿಪ ನಾನಾನೀತಿಯಂ ಬಲ್ಲೆನಿಂ
ದೆನ್ನಂ ಕೈತವದಿಂ ಕೊಲಲ್ ಬಗೆವನೀ ಕ್ರೂರಾತ್ಮನೆಂದಾಕ್ಷಣಂ
ಭಿನ್ನಾಂಗಾವಯವಂಗಳಾಗೆ ಪೊಡೆದೆಂ ತತ್ಕಾಂತಕಾಭಿಖ್ಯನಂ ೩೦೦

ಕಂ॥ ತನ್ನಸಿಯಂ ಕೊಂಡಾರ್ಪಿಂ
ಕೆನ್ನಂ ತಱಿದುದನೆ ನೋಡಿ ಕಾರಾಗೃಹದೊಳ್
ಮುನ್ನಿನ ತಳವಾಱಿಂ ಕಡು
ಬನ್ನದೊಳಿರಲವನೊಳಾಗಳಾನಿಂತೆಂದೆಂ ೩೦೧

ಸವಿದೆನು. ಆನಂದವು ಚಿಗುರಿತು. ಬಾಯಿ ತುಂಬ ಕೆಂಪಗಾಯಿತು. ವ।। ಹಾಗೆ ಸವಿದು ೨೯೯. ಹೊಳೆಯುವ ಸುಣ್ಣಬಳಿದ ಗೋಡೆಯ ಮೇಲೆ ಪದ್ಮರಾಗ ರತ್ನದ ಬಣ್ಣವುಳ್ಳ ಹೊಸ ತಂಬುಲದ ರಸವನ್ನು ವಿಲಾಸದಿಂದ ಉಗುಳಿದೆನು. ಅದು ಚಕ್ರವಾಕದ ಆಕಾರವನ್ನು ತಳೆಯಿತು. ವ।। ಬಳಿಕ ಅಲ್ಲಿಂದ ಹೊರಟು ಹಿಂದಿನ ದಾರಿಯಿಂದ ಸೆರೆಮನೆಗೆ ಬಂದೆನು. ಕಾಂತಕನು ನನ್ನನ್ನು ಆ ಸುರಂಗಕ್ಕೆ ಬಲಿಕೊಡ ಬೇಕೆಂದು ಯೋಚಿಸಿದನು. ೩೦೦. 'ತನ್ನ ಒಂದು ಅಲ್ಪ ಸುಖಕ್ಕಾಗಿ ಬೇರೆಯವರನ್ನು ಕಾರಣವಿಲ್ಲದೆ ಕೊಲ್ಲುವವನನ್ನು ಕೊಂದರೆ ದೋಷವಿಲ್ಲ' ಎಂಬ ನಾನಾ ನೀತಿ ಮಾರ್ಗವನ್ನು ನಾನು ಬಲ್ಲೆನು. ಇಂದು ನನ್ನನ್ನು ವಂಚಿಸಿ ಈ ಕ್ರೂರಿಯಾದ ಕಾಂತಕನು ನನ್ನನ್ನು ಕೊಲ್ಲಲು ಯೋಚಿಸಿದ್ದಾನೆ–ಎಂದು ಯೋಚಿಸಿ ಕೂಡಲೆ ಆ ಕಾಂತಕನನ್ನು ಅವಯವಗಳು ಬೇರೆ ಬೇರೆಯಾಗುವಂತೆ ಕಡಿದೆನು. ೩೦೧. ಅವನ ಕತ್ತಿಯನ್ನು ತೆಗೆದುಕೊಂಡು ಶೌರ್ಯದಿಂದ ಸದ್ದಿಲ್ಲದೆ ಅವನನ್ನೇ ಕತ್ತರಿಸಿದುದನ್ನು ನೋಡಿ ಕಾರಾಗೃಹದಲ್ಲಿದ್ದ ಮೊದಲಿನ ತಳವಾರನು ತುಂಬ ಹೆದರಿದನು. ಆಗ ಅವನಿಗೆ ನಾನು ಹೀಗೆಂ

ಕಂ॥ ಎನ್ನಿಂ ಕನ್ನವನಿಕ್ಕಿಸಿ
ಕನ್ನಿಕೆಯೊಡನಿರ್ಪೆನೆಂದು ತಾನಱಿದಂ ನೀಂ
ಚೆನ್ನಾಗಱಿಪಿದೊಡರಸಂ
ಗೆನ್ನಿಂ ನಿನಗಕ್ಕುಮುಱಿಪುಮವನಿಪನೊಲವುಂ ೩೦೨

ವ॥ ಎಂದು ಪೇೞ್ದಲ್ಲಿಂ ಸೃಗಾಳಿಕೆವೆರಸು ಪೊಱಮಡುವಾಗಳ್

ವಿಹಿತಾಸ್ಥಾನಮೆನಿಪ್ಪ ವಿಷ್ಣುಪದಮಂ ಬಿಟ್ಟೊರ್ವೊರ್ದಲ್ ಮಧ್ಯಗಂ
ಮಿಹಿರಂ ಕ್ಷೀಣವಯಸ್ಕನಾಗಿಯುಮಿದೇನಾನಾರ್ಯದಿಂ ವಾರುಣೀ
ಸ್ಪೃಹೆಯಂ ಮಾಡಿದನೆಂದು ನಾಣ್ಚಿ ತಲೆವಾಗುತ್ತಿರ್ದುದೋ ಪದ್ಮಿನೀ
ಮಹಿಳಾ ಸಂಕುಳಮೆಂಬಿನಂ ದಿನಕರಂ ಪೊಕ್ಕಂ ಪ್ರತೀಚ್ಯಬ್ಧಿಯಂ ೩೦೩

ವ॥ ಅಂತು

ಕಂ॥ ಇನನಸ್ತಾದ್ರಿಯನೆಯ್ದಿ
ರ್ದನೆಂಬುದೇಕಱಿಯದೆಯ್ದೆ ನಲಿದು ಜಗಲ್ಲೋ
ಚನಬಿಂಬಂ ಪದೆಪಿಂದಂ
ಜನಸಂಗದಿನೊಟ್ಟುವೆತ್ತುದೆನ್ನದೆ ಲೋಕಂ ೩೦೪

ವ॥ ಅಂತು ಸೂರ್ಯಾಸ್ತಮಾನವಾಗಲೊಡಂ

ದೆನು. ೩೦೨. "ನನ್ನಿಂದ ಸುರಂಗ ಕೊರೆಯಿಸಿ ರಾಜಕುಮಾರಿಯೊಡನೆ ಕೂಡಿ ಸುಖಿಸುವೆನೆಂದು ಯತ್ನಿಸಿ ಕಾಂತಕನು ಸತ್ತನು. ಈ ವಿಷಯವನ್ನು ನೀನು ಅರಸನಿಗೆ ಸರಿಯಾಗಿ ತಿಳಿಸು. ಇದರಿಂದ ನನ್ನಿಂದ ಸಾಯದೆ ಉಳಿಯುತ್ತೀಯೆ. ನಿನಗೆ ಅರಸನ ಪ್ರೀತಿಯೂ ಉಂಟಾಗುತ್ತದೆ." ವ॥ ಎಂದು ಹೇಳಿ ಅಲ್ಲಿಂದ ಸೃಗಾಳಿಕೆಯ ಜೊತೆ ಹೊರಟೆನು. ಆಗ—೩೦೩. ತನಗೆ ವಿಹಿತ ಸ್ಥಾನವಾದ ವಿಷ್ಣುಪದವನ್ನು (ಆಕಾಶವನ್ನು) ತೊರೆದು ಸೂರ್ಯನು ಮಧ್ಯಾಕಾಶದಿಂದ ವಯಸ್ಸುಕ್ಷೀಣಿಸಿ ಕೆಳಗಿಳಿದರೂ (ಮುದುಕನಾಗಿದ್ದರೂ), ವಾರುಣಿಗೆ (ಪಶ್ಚಿಮದಿಕ್ಕು–ಮದ್ಯ) ಆಶಿಸಿದ್ದಾನಲ್ಲ ಎಂದು ಪದ್ಮಿನೀ ಮಹಿಳಾ ಸಂಕುಲವು (ಕಮಲಗಳ ಗುಂಪು-ಪದ್ಮಿನೀ ಜಾತಿಯ ನಾರಿಯರ ಗುಂಪು) ನಾಚಿ ತಲೆಬಗ್ಗಿಸಿತೋ–ಎಂಬಂತೆ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮುಳುಗಿದನು. ವ॥ ಹಾಗೆ–೩೦೪. ಸೂರ್ಯನು ಅಸ್ತಗಿರಿಯನ್ನು ಸೇರಿದನು ಎಂದೇಕೆ ತಿಳಿಯದೆ ಹೇಳಬೇಕು ? ಅದಕ್ಕೆ ಬದಲಾಗಿ ಜಗತ್ತಿನ ನೇತ್ರ ಬಿಂಬವೇ ಇದುವರೆಗೆ ನಲಿದು ಈಗ ಜನರನ್ನು ಬಿಟ್ಟು ಹೊರಟು ಹೋಯಿತೆಂದು ಹೇಳಬಾರದೆ ! (ಕತ್ತಲೆಯಾದ್ದರಿಂದ ಜನರ ಕಣ್ಣುಗಳೇ ಅಸ್ತಂಗತವಾದವೆಂದು ಹೇಳಲಾಗದೆ–ಎಂದು ಅಭಿಪ್ರಾಯ (ರಂ). ವ॥ ಹಾಗೆ

ದೆಸೆಯುಂ ಬಾಸಣಿಸಿರ್ಪ ಕಟ್ತಲೆಯೊಳಾಂ ಬರ್ಪನ್ನೆಗಂ ನಾಗರೀ
ಕಸಮೂಹಂ ತೊೞಲುತ್ತೆ ಮುಂದೆ ಸುೞಿವೆನ್ನಂ ಕಂಡು ಪೊಯ್‌ಪೊಯ್ಯುದ್ಬಂ
ಧಿಸಲೆಂದೆಯ್ತರೆ ಕಂಡಿದಿರ್ನಡೆದವರ್ಗಿರ್ಕೆಯ್ಗಳಂ ನೀಡಿ ಬಂ
ಧಿಸಿಮೆಂಬನ್ನೆಗಮಾ ಸೃಗಾಳಿಕೆ ಸಮಂತೆಯ್ತಂದಳತ್ಯಾರ್ತದಿಂ ೩೦೫

ವ॥ ಅಂತು ಬಂದು

ಕಡುಜರದಿಂ ಕರಂ ನವೆದು ವಾಯುವಿಕಾರದೊಳಲ್ದು ಕಂಡ ಕಂ
ಡೆಡೆಗೆ ನಿಜೇಚ್ಛೆಯಿಂ ಪರಿಯುಲಿರ್ಕರವಂ ಮಿಗೆ ಕಟ್ಟಿ ಕೋಣೆಯೊಳ್
ಮಡಗಿಡಲಿಂದು ಮಾಣ್ದು ತೆಱದಿಂದಿರಲಾಂ ಬಿಡೆ ಮತ್ತೆ ವಾಯು ಬಂ
ದಡಸಿತು ನೋಡಲಾಂ ಬಡವೆ ಮತ್ಸುತನಂ ಪಿಡಿದೀವುದೆಲ್ಲರುಂ ೩೦೬

ವ॥ ಎಂಬುದುಂ

ಕಂ॥ ಎಲೆ ವೃದ್ಧೆಯುವಂ ಮರುಳ್ಳೈ
ಸಲೆ ನೀಂ ಮರುಳಳ್ತೆಯುವನನಾರ್ ಪಿಡಿವರ್ ನೀ
ನೊಲಿದತ್ತ ಪೋಗೆನಲ್ ಕ
ಟ್ಟುೞಿಸಿದೆನಾಂ ವಾಯುದೇವರಿಂದಂತಾಗಳ್ ೩೦೭

ಸೂರ್ಯನು ಮುಳುಗಲು—೩೦೫. ದಿಕ್ಕುಗಳನ್ನೆಲ್ಲ ಆವರಿಸಿದ್ದ ಕತ್ತಲೆಯಲ್ಲಿ ನಾನು ಬರುತ್ತಿದ್ದೆನು. ಆಗ ಸಂಚರಿಸುತ್ತಿದ್ದ ನಗರ ರಕ್ಷಕರು ಮುಂದೆ ಹೋಗುತ್ತಿದ್ದ ನನ್ನನ್ನು ಕಂಡು "ಹೊಡೆಯಿರಿ ಹೊಡೆಯಿರಿ" ಎಂದು ಕೂಗುತ್ತಾ ಬಂಧಿಸಲು ಬಂದರು. ಆಗ ನಾನು ಅವರ ಮುಂದೆ ಹೋಗಿ ಎರಡು ಕೈಗಳನ್ನೂ ನೀಡಿ 'ಬಂಧಿಸಿರಿ' ಎಂದು ಹೇಳಿದೆನು. ಆ ಸಮಯಕ್ಕೆ ಸೃಗಾಲಿಕೆಯು ದುಃಖದಿಂದ ಅಲ್ಲಿಗೆ ವೇಗವಾಗಿ ಬಂದಳು. ವ॥ ಹಾಗೆ ಬಂದು—೩೦೬. "ನನ್ನ ಮಗನಾದ ಈತನು ಉಗ್ರವಾದ ಜ್ವರದಿಂದ ತುಂಬ ನವೆದು ಹೋಗಿ ವಾಯು ವಿಕಾರಕ್ಕೆ ಒಳಗಾಗಿ ಕಂಡ ಕಂಡ ಕಡೆಗೆ ತನ್ನಿಷ್ಟ ಬಂದಹಾಗೆ ಓಡುತ್ತಿದ್ದನು. ಈ ಸ್ಥಿತಿಯನ್ನು ನೋಡಿ ಇವನನ್ನು ಕಟ್ಟಿ ಕೋಣೆಯಲ್ಲಿ ಹಾಕಿದ್ದೆವು. ಆದರೆ ಇಂದು ವಾಸಿಯಾಗಿದ್ದಂತೆ ತೋರಲು ನಾನು ಹೊರಕ್ಕೆ ಬಿಟ್ಟೆನು. ಮತ್ತೆ ವಾಯುಬಂದು ಎರಗಿದೆ. ನಾನು ಬಡವೆ. ನೀವೆಲ್ಲರೂ ಈ ನನ್ನ ಮಗನನ್ನು ಹಿಡಿದು ಕೊಡಿರಿ." ವ॥ ಎಂದು ಹೇಳಿದಳು—೩೦೭. 'ಎಲೆ ಮುದುಕಿ ! ಅವನು ಹುಚ್ಚನು. ನೀನೂ ಹುಚ್ಚಿಯೇ ಸರಿ. ಅವನನ್ನು ಹಿಡಿಯುವರಾರು ? ನಿನಗೆ ಇಷ್ಟಬಂದಕಡೆ ಹೋಗು' ಎಂದು ಅವರೆಂದರು. ಆಗ ವಾಯುದೇವರಿಂದ ಆ ರೀತಿ ಬಂಧನಕ್ಕೆ ಸಿಗದೆ ಬಿಡಿಸಿಕೊಂಡೆನು ! (ಸೃಗಾಲಿಕೆ ಹೇಳಿದ ವಾಯುರೋಗವನ್ನು ವಾಯುದೇವನೆಂದು ಹಾಸ್ಯಪೂರ್ವಕ ಹೇಳಿ

ವ॥ ಅಂತಾ ದುರ್ಘಟಮಂ ಕಳಿದು ರಾಗಮಂಜರಿಯ ಮನೆಗೆ ಬಂದು

ಕಂ॥ ಪಿರಿದಾಲಿಂಗಿಸಿದೆಂ ನಲಿ
ದು ರಾಗಮಂಜರಿಯನಾತಳೋದರಿಯೆನ್ನೊಳ್
ಪರಿರಂಭಸುಖದಿನಿರಲೊ
ರ್ಬರೊರ್ಬರಂ ಪೊರ್ದಿ ಕಳಿದೆವಂದಿನ ದಿನಮಂ ೩೦೮

ವ॥ ಅನ್ನೆಗಂ

ರವಿ ಶಶಿಯಂತೆ ತಣ್ಗದಿರ್ಗಳಿಯುದಯಾದ್ರಿಯೊಳುಣ್ಮೆ ಹಸ್ತಪ
ಲ್ಲವದಿನೊಱಲ್ದು ಸಾಧುಜನಮರ್ಘ್ಯಮನೆತ್ತೆ ಸರೋಜಷಂಡಮಂ
ದವಿರಳಪುಷ್ಪಿತಸ್ಥಿತಿಯಿನೊಪ್ಪೆ ಜಗಜ್ಜನನೇತ್ರ ಪುತ್ರಿಕೋ
ತ್ಸವ ಫಲಮಾಗಲೇನುದಯಮಾದನೊ ಪಂಕಜಜೀವಿತೇಶ್ವರಂ ೩೦೯

ವ॥ ಅಂತು ಸೂರ್ಯೋದಯಮಾಗಲೊಡಂ ಧನಮಿತ್ರನ ಮನೆಗೆ ಪೋಗಲಾತಂ ಎನ್ನಂ ಕಂಡು

ಇಂದಸು ತುಂಬಿತೆನ್ನವಯವಂಗಳೊಳಿಂದೆನಗೊಪ್ಪುವೆತ್ತ ಕಣ್
ಬಂದುವು ನೋಡಲಿಂದೆನಗನೇಕಮಹಾವ್ರತಸಿದ್ಧಿ ಸಾಧ್ಯಮಾ
ಯ್ತೆಂದನುರಾಗದಿಂ ಪುಳಕಮುಣ್ಮಿವಿನಂ ಧನಮಿತ್ರನಾಕ್ಷಣಂ
ಬಂದಮರ್ದಪ್ಪಿ ಮನ್ನಿಸಿದನೆನ್ನನತೀವ ಮನಃಪ್ರಮೋದದಿಂ ೩೧೦

ಪ್ರಾದನೆ (ರಂ) ವ॥ ಹಾಗೆ ಆ ವಿಪತ್ತಿನಿಂದ ತಪ್ಪಿಸಿಕೊಂಡು ರಾಗಮಂಜರಿಯ ಮನೆಗೆ ಬಂದು ೩೦೮. ನಾನು ನಲಿದು ರಾಗಮಂಜರಿಯನ್ನು ಬಿಗಿಯಾಗಿ ಆಲಿಂಗಿಸಿಕೊಂಡೆನು. ಆ ತಳೋದರಿಯೂ ನನ್ನನ್ನು ಆಲಂಗಿಸಿಕೊಂಡು ಸುಖಿಸಿದಳು. ಹೀಗೆ ಒಬ್ಬರನ್ನೊಬ್ಬರು ಕೂಡಿಕೊಂಡು ಆ ದಿನವನ್ನು ಆನಂದದಿಂದ ಕಳೆದೆವು. ವ॥ ಆ ಸಮಯದಲ್ಲಿ. ೩೦೯. ಕಮಲಗಳ ಒಡೆಯನಾದ ಸೂರ್ಯನು ಉದಯಿಸಿದನು. ರವಿಯು ಚಂದ್ರನಂತೆ ತಂಪಾದ ಕಿರಣಗಳಿಂದ ಉದಯಗಿರಿಯ ಮೇಲಿದ್ದನು. ಸಾಧುಜನರು ಚಿಗುರಿನಂಥ ಕೈಗಳಿಂದ ಸೂರ್ಯನಿಗೆ ಅರ್ಘ್ಯದ ನೀರನ್ನೆತ್ತಿದರು. ತಾವರೆಗಳ ಗುಂಪು ದಟ್ಟವಾಗಿ ಅರಳಿದುವು. ಜಗತ್ತಿನ ಜನರ ನೇತ್ರಗಳಿಗೆ ಪುತ್ರಿಕೋತ್ಸವವು ಆದಂತಾಯಿತು. ವ॥ ಹಾಗೆ ಸೂರ್ಯೋದಯವಾಗಲು ಧನಮಿತ್ರನ ಮನೆಗೆ ಹೋದೆನು. ಅವನು ನನ್ನನ್ನು ಕಂಡು—೩೧೦. "ಇಂದು ನನ್ನ ಶರೀರದ ಅವಯವಗಳಲ್ಲಿ ಪ್ರಾಣಗಳು ಬಂದು ತುಂಬಿದುವು. ಇಂದು ನನಗೆ ಸುಂದರವಾದ ಕಣ್ಣುಗಳು ನೋಡಲು ಬಂದಹಾಗಾಯಿತು. ನನಗೆ ಅನೇಕ ಮಹಾವ್ರತಗಳು ಸಿದ್ಧಿಸಿದುವು" ಎಂದು ಹೇಳುತ್ತಾ ರೋಮಾಂಚಿತನಾಗಿ ಅತ್ಯಂತ ಹರ್ಷದಿಂದ ಬಂದು ಧನಮಿತ್ರನು ಕೂಡಲೆ ನನ್ನನ್ನು ತಬ್ಬಿಕೊಂಡು ಗೌರವಿಸಿದನು.

ವ॥ ಅಂತು ಮನ್ನಿಸಲಾಧನಮಿತ್ರನ ಮನೆಯೊಳ್ ಸುಖದಿನಿರ್ಪಿನಮೊಂದು ದಿನಂ

ಲೀಲೆಯ ರಾಜ್ಯಮುಂ ನಿಜಶರೀರಮನೊಲ್ವೊಡೆ ತನ್ನ ಪುತ್ರಿಯಂ
ಬಾಲಿಕೆಯಂ ಮನೋಮುದದಿನೀವುದು ಕೂರ್ತೆನಗಲ್ಲದಂದು ಕಾ
ಲಾಲಯದತ್ತಲೆಯ್ದಿಸುವೆನೆಂದತಿಗರ್ವಿತಚಂಡವರ್ಮನು
ದೋಲೆಯನಂಗಭೂಪತಿಗೆ ಭೀತಿ ಮಿಗಲ್ ಮುಳಿದಾತನಟ್ಟಿದಂ ೩೧೧

ವ॥ ಅಂತು ಚಂಡವರ್ಮಂ ಸಿಂಹವರ್ಮಂಗೆ ದೂತನಂ ಕಳಿಪಲದರ್ಕೆ ಸಿಂಹವರ್ಮಂ ಕನಲ್ದು

ಕಂ॥ ಕುಡೆನೆನ್ನ ತನೂಜೆಯನಾ
ಪೋಡೆ ಯುದ್ಧಕ್ಕೆತ್ತಿ ಚಂಡವರ್ಮಂ ತಾಂ ಬಂ
ದೊಡೆ ನೋಟ್ಪೆನೆಂದು ಚರನಂ
ಪೆಡದಲೆಯಂ ಪಿಡಿದು ನೂಂಕಿಸಿದನವನೀಶಂ ೩೧೨

ವ॥ ಅಂತು ದೂತನಂ ನೂಂಕಿ,

ತನಗನುಕೂಲಮಪ್ಪಖಿಳ ಭೂಪತಿಗಳ್ಗೆ ಸುಹೃತ್ಪ್ರಸಿದ್ಧನೊ
ಲ್ದನುನಯದಿಂದನೇಕ ಮಣಿಭೂಷಣಕಾಂಚನದಿವ್ಯ ವಸ್ತ್ರವಾ
ಹನವನಲಂಪಿನಿಂ ಕಳಿಪಿ ತತ್ಸಮಯಕ್ಕತಿ ಶೀಘ್ರಮಾರ್ಗದಿಂ
ಮನದೊಲವಿಂದೆ ಬರ್ಪುದೆನುತೋಲೆಯನಟ್ಟಿದನಂಗಭೂಭುಜಂ ೩೧೩

ವ॥ ಹಾಗೆ ಗೌರವಿಸಲು ನಾನು ಆ ಧನಮಿತ್ರನ ಮನೆಯಲ್ಲಿ ಸುಖದಿಂದ ಇದ್ದೆನು. ಆಗ ಒಂದು ದಿವಸ—೩೧೧. 'ಸುಂದರವಾದ ರಾಜ್ಯವನ್ನೂ ನಿನ್ನ ಶರೀರವನ್ನೂ ನಿಜವಾಗಿ ಬಯಸುವುದಾದರೆ, ನಿನ್ನ ಮಗಳನ್ನು ಸಂತೋಷದಿಂದ ನನಗೆ ಕೊಡು. ಹಾಗೆ ಕೊಡದಿದ್ದರೆ ನಿನ್ನನ್ನು ಯಮಪುರಿಗೆ ಅಟ್ಟುವೆನು.' ಎಂದು ಅತಿಗರ್ವಿಷ್ಠನಾದ ಚಂಡವರ್ಮನು ಅಂಗರಾಜನಾದ ಸಿಂಹವರ್ಮನಿಗೆ ಭಯ ಹುಟ್ಟಿಸಿ ಪತ್ರವನ್ನು ಬರೆದು ಕಳುಹಿಸಿದನು. ವ॥ ಹೀಗೆ ಚಂಡವರ್ಮನು ಸಿಂಹವರ್ಮನಿಗೆ ದೂತನನ್ನು ಕಳುಹಿಸಲು ಆದಕ್ಕೆ ಸಿಂಹವರ್ಮನು ಕೋಪಿಸಿಕೊಂಡು ೩೧೨. "ನನ್ನ ಮಗಳನ್ನು ಅವನಿಗೆ ಖಂಡಿತ ಕೊಡುವುದಿಲ್ಲ. ಶಕ್ತಿಯಿದ್ದರೆ ಚಂಡವರ್ಮನು ಯುದ್ಧಕ್ಕೆ ದಂಡೆತ್ತಿ ಬರಲಿ. ನಾನು ನೋಡಿಕೊಳ್ಳುವೆನು." ಎಂದು ಹೇಳಿ ಅಂಗರಾಜನು ಆ ದೂತನ ಕತ್ತಿಗೆ ಕೈಹಾಕಿಸಿ ತಳ್ಳಿಸಿದನು. ವ॥ ಹಾಗೆ ದೂತನನ್ನು ನೂಕಿ—೩೧೩. ಗೆಳೆಯರಲ್ಲಿ ಹೆಸರುವಾಸಿಯಾದ (ಪ್ರಸಿದ್ಧರಾದ ಗೆಳೆಯರುಳ್ಳ) ಅಂಗರಾಜನು ತನಗೆ ಅನುಕೂಲರಾದ ರಾಜರಿಗೆಲ್ಲ ಶೀಘ್ರವಾಗಿ ಬರಬೇಕೆಂದು ಓಲೆಗಳನ್ನು ಬರೆದು ಕಳುಹಿಸಿದನು. ಅದರೊಡನೆ ರತ್ನಾಭರಣಗಳನ್ನೂ ಚಿನ್ನದೊಡವೆಗಳನ್ನೂ ದಿವ್ಯವಸ್ತ್ರಗಳನ್ನೂ ವಾಹನಗಳನ್ನೂ ಕಳುಹಿಸಿದನು.

ವ॥ ಅಂತು ತನ್ನ ಮಿತ್ರಕ್ಷತ್ರಿಯಗೋತ್ರಕ್ಕೆ ಪತ್ರಮಂ ಕಳಿಪಲತ್ತಲ್ ತನ್ನಿಂದವಮಾನಿತನಾದ ದೂತಂ ತನಗಾದ ಮಾನಹಾನಿಯಂ ಚಂಡವರ್ಮಂಗೆ ಪೋಗಿಪೇಟ್ದಂ

ಗಿರಿಯಂ ನುಂಗುವ ತಾರೆಯಂ ತಿಱಿವ ಧಾತ್ರೀಭಾಗಮಂ ಪೋಟ್ವಿ ಸಾ
ಗರಮಂ ತುಟ್ಕುವ ಚಾತುರಂಗಬಲದಿಂ ಸೌರಂಭಮಂ ತಾಳ್ದು ನಿ
ರ್ಭರದೋರ್ದರ್ಪದ ಚಂಡವರ್ಮನಬಲಾಸಂವಾಂಛೆಯಿಂದಂಗ ಭೂ
ವರನಂ ಮುತ್ತುವೆನೆಂದು ಬಂದನದಟಂ ಚಂಪಾಪುರಕ್ಕಾಕ್ಷಣಂ ೩೧೪

ವ॥ ಅಂತು ಬಂದು

ದಟಿದುಟಿವಾಯ್ದುವೋಲ್ ಸಕಲಸೈನ್ಯಯುತಂ ಛಲಿ ಚಂಡವರ್ಮನಾ
ಗಳೆ ಮುಳಿದಂಗಭೂಪತಿಯ ಸತ್ವಮನೊರ್ಮೆಯೆ ಸೂಱೆಗೊಂಡು ಕಾ
ಲ್ಗಳೊಳತಿಕೋಪದಿಂ ಪಿರಿಯ ಸಂಕಲೆಯಂ ಮಿಗೆ ಸಾರ್ಚಿ ತನ್ನ ದೋ
ರ್ಬಲದವಲೇಪದಿಂ ಮದುವೆಯುಜ್ಜುಗಮಂ ತಳೆದಿರ್ದನಾ ಖಳಂ ೩೧೫

ವ॥ ಅಂತು ಚಂಡವರ್ಮನಂಗರಾಜನಂ ಭಗಿತನಂ ಮಾಡಿ ಮಱುದಿನಮಂಬಾಲಕೆಯಂ ಮದುವೆಯಾಗಲನುಗೆಯ್ಯೆ

ಅವನಂ ಬಾಲಿಕೆಯೊಳ್ ವಿವಾಹಸುಖಮಂ ತಾಳ್ದಿರ್ಪನೆಂಬೊಂದು ಕಾ
ರ್ಯ ವಿಶೇಷಕ್ಕತಿಕೋಪಮುಬ್ಬರಿಸಲಾಂ ಮುಂ ಕಂಡು ಕೂರ್ತಿರ್ದನಾ
ಯುವತೀರತ್ನಮಿದೆನ್ನ ಭೂಷಣಮೆನುತ್ತಾಂ ನಿಶ್ಚಯಂಮಾಡಿಯೊ
ಪ್ಪುವಿನಂ ಕಂಕಣದಾರಮಂ ಕರದೊಳಾಂ ತಾಳ್ದೆಂ ಮನೋರಾಗದಿಂ ೩೧೬

ವ॥ ಹೀಗೆ ತನ್ನ ಮಿತ್ರರಾದ ಕ್ಷತ್ರಿಯರಿಗೆ ಪತ್ರಗಳನ್ನು ಕಳುಹಿಸಿದನು. ಅತ್ತ ಅಪಮಾನಿತನಾದ ದೂತನು ತನಗಾದ ಮಾನಹಾನಿಯನ್ನು ಚಂಡವರ್ಮನಿಗೆ ಹೋಗಿ ಹೇಳಿದನು. ೩೧೪. ವಿಶೇಷವಾದ ಬಾಹುದರ್ಪವುಳ್ಳ ಚಂಡವರ್ಮನು ರಾಜಕುಮಾರಿಯ ಮೇಲಿನ ಆಸೆಯಿಂದ ಅಂಗರಾಜನನ್ನು ಮುತ್ತುವೆನೆಂದು ಕೂಡಲೆ ಚಂಪಾಪುರಕ್ಕೆ ದಂಡೆತ್ತಿಬಂದನು. ಅವನ ಚತುರಂಗ ಸೇನೆಯು ಬೆಟ್ಟವನ್ನು ನುಂಗುವ, ನಕ್ಷತ್ರಗಳನ್ನು ಕೊಯ್ಯುವ, ಭೂಭಾಗವನ್ನು ಸೀಳುವ, ಸಾಗರದ ನೀರನ್ನು ಮೇಲೆತ್ತಿ ಚೆಲ್ಲುವ ಸಾಮರ್ಥ್ಯದಿಂದ ಕೂಡಿದ್ದಿತು. ವ॥ ಹಾಗೆ ಬಂದು—೩೧೫. ಸೂರೆ ಹೊಡೆಯಲು ನುಗ್ಗುವಂತೆ ಸಕಲ ಸೇನೆಯೊಡನೆ ಛಲಗಾರನಾದ ಚಂಡವರ್ಮನು ಆಗಲೆ ನಗರವನ್ನು ಮುತ್ತಿದನು. ಒಂದೇ ಸಲಕ್ಕೆ ಅಂಗರಾಜನ ಶಕ್ತಿಯನ್ನು ಸೂರೆಗೊಂಡನು, ಅವನ ಕಾಲುಗಳಿಗೆ ಅತಿ ಕೋಪದಿಂದ ದೊಡ್ಡ ಸಂಕೋಲೆಯನ್ನು ತೊಡಿಸಿದನು. ತನ್ನ ತೋಳು ಬಲದ ಗರ್ವದಿಂದ ಆ ದುಷ್ಟನು ಮದುವೆಗೆ ಏರ್ಪಾಟು ಮಾಡತೊಡಗಿದನು. ವ॥ ಹೀಗೆ ಚಂಡವರ್ಮನು ಅಂಗರಾಜನನ್ನು ಸೋಲಿಸಿ ಮಾರನೆಯ ದಿನ ಅಂಬಾಲಿಕೆಯನ್ನು ಮದುವೆಯಾಗಲು ಸಿದ್ಧಗೊಳಿಸಲು ೩೧೬. "ಚಂಡವರ್ಮನು ಅಂಬಾಲಿಕೆಯೊಡನೆ ವಿವಾಹ ಮಾಡಿಕೊಳ್ಳುವ ಸುಖದಲ್ಲಿದ್ದಾನೆ. ಇದರಿಂದ ನನಗೆ ಕೋಪ ಮಿತಿ ಮೀರಿತು. ನಾನು ಮೊದಲೇ ನೋಡಿ ಆ

ವ॥ ಅಂತು ಕಂಕಣದಾರವಂ ಕಟ್ಟಿಕೊಂಡು ಧನಮಿತ್ರಂಗಿಂತೆಂದೆಂ

ಕಂ॥ ಏಗೆಯ್ದು ಚಂಡವರ್ಮನ
ನೀಗಳ್ ತೀರ್ಚುವೆನದರ್ಕೆ ತಾವಂಜದೆ ಚೆ
ಲ್ವಾಗಿರ್ಪುದೆಂದು ಪೇಳನು
ರಾಗದೆ ಪೌರರ್ಗೆ ರಾಗದಿಂ ಧನಮಿತ್ರಾ ೩೧೭

ವ॥ ಎಂದಲ್ಲಿ ಪೌರರ್ಗೆ ಪೇಳ್ದು,

ಕಂ॥ ಅಂಗನೃಪಾಲನ ಸೀಮಾ
ರಂಗಕ್ಕೈತಂದುದಖಿಳಭೂಪರ ಸಂಗಂ
ಮಂಗಳವಾರ್ತೆಯನುಸಿರ್ದವ
ರಂ ಗುಣದಿಂ ಕೊಂಡು ಬರ್ಪುದನುನಯದಿಂದಂ ೩೧೮

ವ॥ ಎಂದು ಧನಮಿತ್ರನನತ್ತಲ್ ಕಳಿಪಿದೆಂ, ಇತ್ತಲ್ ಚಂಡವರ್ಮನಂಬಾಲಿಕೆಯುಂ ಮದುವೆಯಾಗಲ್ ಮದವಣಿಗನಾಗಿ ಪಸೆಯಮೇಲೆ ನಿಂದಿರ್ದಾಗಳ್ ;

ಮಂಗಳಗಾಯಕರ್ ಸಕಲವಾದ್ಯವಿಚಕ್ಷಣರುದ್ಧನರ್ತಕರ್
ಮಂಗಳಪಾಠಕರ್ ಗಣಿಕಸಂತತಿ ಸಂಭ್ರಮದಿಂ ಪುಗುತ್ತಿರಲ್
ಮಂಗಳಗೇಹಮಂ ಮುದದಿನಾನವರೊಳ್ ತಱಿಸಂದು ಬೇಗದಿಂ
ಮಂಗಳಪಾಠಕಾಕೃತಿಯಿನೊಲ್ದೊಳಪೊಕ್ಕೆನಿಳಾಧಿನಾಯಕಾ ೩೧೯

ಯುವತೀರತ್ನವನ್ನು ಪ್ರೀತಿಸಿದ್ದೆನು ಇದು ನನ್ನ ಒಡವೆ." ಎಂದು ನಿಶ್ಚಯಮಾಡಿ ಪ್ರೀತಿಯಿಂದ ಕೈಗೆ ಕಂಕಣ ಕಟ್ಟಿಕೊಂಡೆನು, ವ॥ ಹಾಗೆ ಕಂಕಣದ ನೂಲನ್ನು ಕಟ್ಟಿಕೊಂಡು ಧನಮಿತ್ರನಿಗೆ ಹೀಗೆ ಹೇಳಿದೆನು. ೩೧೭. "ಧನಮಿತ್ರ 'ಚಂಡವರ್ಮನನ್ನು ಈಗ ತೀರಿಸಿ ಬಿಡುವೆನು. ಅದರಿಂದ ಹೆದರದೆ ಶಾಂತರಾಗಿರಬೇಕು' ಎಂದು ನೀನು ಊರಿನ ಜನರಿಗೆಲ್ಲ ಹೇಳು" ವ॥ ಎಂದು ಅಲ್ಲಿ ಪುರಜನರಿಗೆ ತಿಳಿಸಿ—೩೧೮. ಅಂಗರಾಜನ ರಾಜ್ಯದ ಸರಹದ್ದಿಗೆ ಬಂದಿರುವ ಎಲ್ಲರಾಜರಿಗೂ ಈ ಮಂಗಳದ ಸುದ್ದಿಯನ್ನು ತಿಳಿಸಿ ಪ್ರೀತಿ ಗೌರವಗಳಿಂದ ಅವರನ್ನು ಕರೆದುಕೊಂಡು ಬರಬೇಕು," ವ॥ ಎಂದು ಹೇಳಿ ಧನಮಿತ್ರನನ್ನು ಅತ್ತ ಕಳುಹಿಸಿದೆನು, ಇತ್ತ ಚಂಡವರ್ಮನು ಅಂಬಾಲಿಕೆಯನ್ನು ಮದುವೆಯಾಗಲು ಮದವಣಿಗನಾಗಿ ಹಸೆಯ ಮೇಲೆ ನಿಂತನು. ಆಗ ೩೧೯. ಮಹಾರಾಜನೆ ! ಮಂಗಳ ಹಾಡುವ ಹಾಡುಗಾರರೂ, ಸಕಲವಾದ್ಯಗಳನ್ನು ಬಾರಿಸುವುದರಲ್ಲಿ ಕುಶಲರಾದ ವಾದ್ಯಗಾರರೂ, ಅದ್ಭುತವಾಗಿ ನರ್ತಿಸಬಲ್ಲ ನರ್ತಕರೂ, ಮಂಗಳ ಹೇಳುವವರೂ, ವೇಶ್ಯೆಯರ ಸಮೂಹವೂ ಸಂಭ್ರಮದಿಂದ ವಿವಾಹ ಮಂಗಳದ ಮಂಟಪವನ್ನು ಪ್ರವೇಶಿಸುತ್ತಿದ್ದರು. ಆಗ ನಾನು ಹರ್ಷದಿಂದ ಅವರ ನಡುವೆ ಸೇರಿಕೊಂಡು ಮಂಗಳ ಪಾಠಕನ

ಕಂ॥ ಅಂತಾಂ ಪುಗುವಾಗಳ್ ಜವ
ನಂತುಟು ಕಿಱುಸುರಿಗೆಯೊಂದನಾರ್ಪಿಂ ಬಲಗೆ
ಯ್ಯಿಂ ತಳೆದು ಪೊಕ್ಕು ಮಂದಿಯ
ತಿಂತಿಣಿಯೊಳ್ ನೋಡುತಿರ್ದೆನಾತನ ಕಡೆಯಂ ೩೨೦

ವ॥ ಅನ್ನೆಗಮಾತಂ ತನ್ನಾಯುಃಷ್ಯಮನೊಪ್ಪುಗುಡುವಂತೆ ಪಾಣಿಗ್ರಹಣಾರ್ಥಂ ಕೆಯ್ಯಂ ನೀಡೆ

ನೀಡಿದ ಕೆಯ್ಯನಾಂ ತುಡುಕಿ ಗಾಢಮೆನಲ್ ಪಿಡಿದೀೞ್ದು ಬೀೞ್ವಿನಂ
ಜಿಱೋಡಿಸಿ ಶಸ್ತ್ರದಿಂ ತಿವಿಯಲಂತದು ನುಣ್ಣನೆ ಬೆನ್ನೊಳೊರ್ಮೊೞಂ
ಮೂಡಲೊಱಲ್ದು ಬಿೞ್ದುಸುವನಾಗಳೆ ನೀಗಿದನೆಂದು ಬಂಧುಗಳ್
ನೋಡುವ ಮಾೞ್ಕೆಯಿಂ ಕೆಡೆಪಿದೆಂ ಪಸೆಯೊಳ್ ಕಲಿ ಚಂಡವರ್ಮನಂ ೩೨೧

ವ॥ ಅಲ್ಲಿಂ ಬೞಿಯಂ

ಕಂ॥ ಆ ರಿಪುವಿನಾಪ್ತಬಲಮಂ
ಮಾರಿವೊಲಾಂ ಬೀದಿವರಿದು ಭುಜಬಲದಿಂ ಸಂ
ಹಾರಂ ಮಾೞ್ಪಾಗಳ್ ಗಂ
ಭೀರರವಂ ಪೊಣ್ಮಲೆಯ್ದಿದೆಂ ನಿಜಪದಮಂ ೩೨೨

ವ॥ ಎಂದು ಅಪಹಾರವರ್ಮಂ ಪೇೞ್ದುದಂ ರಾಜವಾಹನಂ ಕೇಳ್ದು

ವೇಷ ಧರಿಸಿ ಬೇಗ ಬೇಗ ಒಳಹೊಕ್ಕೆನು. ೩೨೦. ಹಾಗೆ ಒಳಕ್ಕೆ ಹೋಗುವಾಗ ಮೃತ್ಯುವಿನಂತಿದ್ದ ಒಂದು ಸಣ್ಣ ಕತ್ತಿ (ಕಠಾರಿ) ಯನ್ನು ಬಲಗೈಯಲ್ಲಿ ಹಿಡಿದುಕೊಂಡು ಹೊಕ್ಕೆನು. ಮಂದಿಯ ನಡುವೆ ನಿಂತು ಆತನ ಕಡೆ ನೋಡುತ್ತಾ ಇದ್ದೆನು, ವ॥ ಆಗ ಅವನು ತನ್ನ ಆಯುಷ್ಯವನ್ನು ಒಪ್ಪಿಸಿ ಕೊಡುವ ಹಾಗೆ ಪಾಣಿಗ್ರಹಣಕ್ಕಾಗಿ ಕೈಯನ್ನು ನೀಡಿದನು. ೩೨೧. ಹಾಗೆ ನೀಡಿದ ಚಂಡವರ್ಮನ ಕೈಯನ್ನು ಹಿಡಿದುಕೊಂಡು ಬಿಗಿಯಾಗಿ ಎಳೆದೆನು. ಹಿಂಸಿಸಿ ಕೆಡವಿದೆನು, ಶಸ್ತ್ರದಿಂದ ತಿವಿದೆನು. ಅದು ಬೆನ್ನಿನಲ್ಲಿ ಒಂದು ಮೊಳ ಆಳವಾಗಿ ಚುಚ್ಚಿಕೊಂಡಿತು, ಕೂಡಲೆ ಕೂಗುತ್ತಾ ಬಿದ್ದು ಆತನು ಪ್ರಾಣಗಳನ್ನು ಕಳೆದುಕೊಂಡನು. ಹೀಗೆ ಬಂಧುಗಳು ನೋಡುತ್ತಿರುವ ಹಾಗೆಯೇ ಕಲಿ ಚಂಡವರ್ಮನನ್ನು ಹಸೆಯ ಮೇಲೆ ಕೆಡವಿದೆನು. ವ॥ ಅಲ್ಲಿಂದ ಮುಂದೆ— ೩೨೨. ಆ ಶತ್ರುವಿನ ಆಪ್ತಬಲವನ್ನು ಮಾರಿಯ ಹಾಗೆ ನಾನು ವೇಗದಿಂದ ನುಗ್ಗಿ ನನ್ನ ಭುಜಬಲದಿಂದ ಸಂಹರಿಸಿದೆನು. ಆಗ ಗಂಭೀರ ಧ್ವನಿಯು ಮೇಲೆದ್ದಿತು. ಬಳಿಕ ನಾನು ನನ್ನ ಸ್ಥಾನವನ್ನು ಸೇರಿದೆನು." ವ॥ ಎಂದು ಅಪಹಾರವರ್ಮನು ಹೇಳಿದನು. ಅವನ್ನು

ಶಿವಶಿವ ಮರ್ತ್ಯಲೋಕದೊಳಪೂರ್ವಮಗೋಚರಮಲ್ತೆ ಭಾವಿಸ
ಲ್ಕಿವನ ಪರಾಕ್ರಮಂ ಬಗೆಗಮಾನುಷಮೀತೆಱದಿಂ ತೊೞಲ್ದನಾ
ವವನತಿ ಸಾಹಸಂಬೆರಸು ಪೇೞೆನುತ್ತಪಹಾರವರ್ಮನಂ
ನವಪುಳಕಂಗಳುಣ್ಮೆ ಬಿಗಿಯಪ್ಪಿದನಾಗಳಭಂಗವಿಕ್ರಮಂ ೩೨೩

ಗದ್ಯ

ಇದು ನಿಖಿಳಬುಧಜನ ಮನೋವನಜವನ ದಿವಾಕರಕಿರಣ ಪ್ರತಿಮಪ್ರಸನ್ನ ಶ್ರೀಮದಭಂಗ ವಿಟ್ಠಲಪದಾಂಭೋಜ ಮತ್ತಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಅಪಹಾರವರ್ಮ ಕಥಾವೃತ್ತಾಂತಂ

## ಅಷ್ಟಮಾಶ್ವಾಸಂ

ರಾಜವಾಹನನು ಕೇಳಿ—೩೨೩. ಶಿವ ಶಿವ ! ಆಲೋಚಿಸಿದರೆ ಈ ಮನುಷ್ಯ ಲೋಕದಲ್ಲಿ ಇವನ ಪರಾಕ್ರಮವು ಹಿಂದೆಂದೂ ಕಾಣದಂಥದು. ಊಹೆಗೆ ನಿಲುಕದು. ಅಮಾನುಷವಾದುದು. ಈ ರೀತಿಯಿಂದ ಸಂಚಾರ ಮಾಡಿದವನು ಯಾವನಿದ್ದಾನೆ ? ಅತಿ ಸಾಹಸ ಮಾಡಿದವನಾರು ? ಹೇಳಿರಿ. ಎಂದು ಹೇಳುತ್ತಾ ಅಭಂಗ ವಿಕ್ರಮನಾದ ರಾಜವಾಹನನು ಅವನನ್ನು ರೋಮಾಂಚವೇಳುವಂತೆ ಬಿಗಿಯಾಗಿ ಆಲಿಂಗಿಸಿಕೊಂಡನು. ಇದು ನಿಖಿಲ ವಿದ್ವಾಂಸರ ಮನಸ್ಸೆಂಬ ಕಮಲವನವನ್ನರಳಿಸುವ ರವಿಯ ಕಿರಣಗಳಿಗೆ ಸಮನಾದ ಪ್ರಸನ್ನನಾದ ಶ್ರೀಮದಭಂಗವಿಟ್ಠಲನ ಪಾದ ಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡ ರಾಜವಿರಚಿತವಾದ ಅಭಿನವದಶಕುಮಾರ ಚರಿತೆಯಲ್ಲಿ

# ನವಮಾಶ್ವಾಸಂ

## ಅರ್ಥಪಾಲನ ಕಥೆ

ಕಂ॥ ಶ್ರೀಕೇಳೀಮುಖಕಮಳಂ
ಭೂಕಾಂತಾಧೀಶನರ್ಥಪಾಲಕನಂ ಸೌ
ಮ್ಯಾಕಾರನನೀಕ್ಷಿಸಿದಂ
ಲೋಕಜನಸ್ತುತನಭಂಗವಿಟ್ಠಲ ಭೃತ್ಯಂ ೧

ವ॥ ಅಂತು ರಾಜವಾಹನನರ್ಥಪಾಲನ ಮುಖಾವಲೋಕನಂಗೆಯ್ದು ನೀನೆಸಗಿದ ಕಾರ್ಯಮಂ ಪೇೞೆನಲಾತಂ ಕೆಯ್ಗಳಂ ಮುಗಿದು

ಸಹಚರರೆಲ್ಲರುಂ ನಿಜಪದಾಂಬುರುಹದ್ವಯಮಂ ನಿರಂತರಂ
ಮಹಿಯೊಳಲಂಪಿನಿಂದಱಸಲೆಣ್ದೆಸೆಗೆಯ್ದಿದೊಡಾನುಮಂತೆ ಸ
ಸ್ಪೃಹೆಯಿಸತಿ ಪ್ರಸಿದ್ಧಿವಡೆದಿರ್ಪ ಮನೋಹರಮಪ್ಪ ಕಾಶಿಯಂ
ಬಹಳ ಸುಖಾಧಿವಾಸಿಯನಘೌಘ ವಿನಾಶಿಯನೈದಿದೆಂ ನೃಪಾ ೨

ದುರಿತವಿನಾಶಿಯಂ ಸುಕೃತ ಸತ್ಫಲರಾಶಿಯನುಗ್ರಕರ್ಮದು
ರ್ಧರಗಳಪಾಶೆಯಂ ಸಕಳಮಂಗಳಸಾರ್ಥಕ ತೀರ್ಥವಾಸಿಯಂ
ನರಕಹುತಾಶಿಯಂ ಕೃತಯುಗಾಂಬುಜ ನಿರ್ಮಳ ಬೀಜಕೋಶಿಯಂ
ನಿರುಪಮಕಾಶಿಯಂ ಭರದಿನೆಯ್ದಿದೆನೊಲ್ದು ಜಗತ್ಪ್ರಕಾಶಿಯಂ ೩

೧. ಈ ಲೋಕದ ಜನರಿಂದ ಹೊಗಳಲ್ಪಟ್ಟ ಅಭಂಗ ವಿಟ್ಠಲನ ಸೇವಕನಾದ ರಾಜವಾಹನ ಮಹಾರಾಜನು ಅರ್ಥಪಾಲನನ್ನು ನೋಡಿದನು. ರಾಜನ ಮುಖಕಮಲವು ಲಕ್ಷ್ಮಿಯ ಕ್ರೀಡೆಗೆ ಆಶ್ರಯವಾಗಿದ್ದಿತು. ಅರ್ಥಪಾಲನ ಆಕಾರವು ಸೌಮ್ಯವಾಗಿದ್ದಿತು. ವ॥ ರಾಜವಾಹನನು ಅರ್ಥಪಾಲನ ಮುಖವನ್ನು ನೋಡಿ 'ನೀನು ಮಾಡಿದ ಕೆಲಸವನ್ನು ಹೇಳು' ಎಂದನು. ಅದನ್ನು ಕೇಳಿ ಅವನು ಕೈಗಳನ್ನು ಜೋಡಿಸಿಕೊಂಡು—೨. ಹೀಗೆಂದನು. ರಾಜನೆ ! ಗೆಳೆಯರೆಲ್ಲರೂ ನಿಮ್ಮ ಪಾದಕಮಲಗಳನ್ನು ಭೂಮಿಯಲ್ಲಿ ಎಡೆ ಬಿಡದೆ ಸಂತೋಷದಿಂದ ಹುಡುಕಲು ಎಂಟು ದಿಕ್ಕುಗಳಿಗೂ ತೆರಳಿದರು. ನಾನೂ ಹಾಗೆಯೇ ಅದೇ ಆಸೆಯಿಂದ ಪ್ರಸಿದ್ಧವಾದ ಮನೋಹರವಾದ ಬಹು ಸುಖವುಳ್ಳ ಪಾಪನಿವಾರಕವಾದ ಕಾಶೀ ಪಟ್ಟಣಕ್ಕೆ ಹೋದೆನು. ೩. ಜಗತ್ತಿಗೇ ಪ್ರಕಾಶಮಾನವಾದ ಕಾಶೀನಗರವನ್ನು ವೇಗದಿಂದ ಹೋಗಿ ಸೇರಿದೆನು. ಕಾಶಿಯು ಪಾಪನಾಶಿನಿ ಪುಣ್ಯಗಳಿಂದ ಬರುವ ಸತ್ಫಲಗಳ ರಾಶಿ. ಉಗ್ರವಾದ ಪಾಪಕರ್ಮಗಳಿಗೆ ದುಃಸಹವಾದ ಬೀರುಗುಣಿಕೆ. [ಬೀರುಗುಣಿಕೆಯಂತೆ ಉಗ್ರವಾದ ಪಾಪಕರ್ಮಗಳ ಕೊರಳನ್ನು ಬಿಗಿಯುತ್ತದೆ.] ಸಕಲ ಮಂಗಳಗಳನ್ನುಂಟುಮಾಡುವುದರಿಂದ ಈ ತೀರ್ಥ ವಾಸಿಗಳು ಸಫಲರು. ನರಕವನ್ನು

ಅದು ಸುಕೃತಪ್ರಸಿದ್ಧಿಯ ತವರ್ಮನೆ ಜ್ಞಾನಮಹಾಬ್ಧಿತೀರಮಂ
ಪದುಳದಿನೊಲ್ದು ತೋಱಿಸುವ ಮಾರ್ಗಮನೂನಸುಖಂ ವಿಳಾಸದಿಂ
ದುದಯಿಪ ಭೂಮಿಯೀಶನ ವಿತರ್ಕದಿನಿರ್ಪೆಡೆ ಮೋಕ್ಷಕಾಮಿನೀ
ಸದನಮೆನಲ್ಕೆ ವಾರಣಸಿ ರಂಜಿಪುದಲ್ತೆ ಧರಾಧಿನಾಯಕಾ ೪

ಸ್ಮರಹರನಿರ್ಕೆ ಶಂಕರನ ಮಂದಿರಮೀಶನ ಗೇಹಮದ್ರಿಜಾ
ವರನ ಗೃಹಂ ಗಿರೀಶನ ನಿಜಾಲಯಮುಗ್ರನ ಶಾಲೆ ಜಾಹ್ನವೀ
ಧರನ ನಿಕೇತನಂ ಭವನ ವೇಶ್ಮ ಯಮಾರಿಯ ಧಾಮಮಿಂದುಶೇ
ಖರನ ನಿವೇಶನಂ ದಲೆನಲೊಪ್ಪುವ ಕಾಶಿಯನೆಯ್ದಿದೆಂ ನೃಪಾ ೫

ಪುಟ್ಟುವುದುಳ್ಳೊಡಂ ಜಡೆ ಲಲಾಟವಿಲೋಚನಮಿಂದುಲೇಖೆ ಕ
ರ್ಪಿಟ್ಟಗಳಂ ಲಸದ್ದಶಭುಜಂ ಫಣಿಕುಂಡಲಮೊಪ್ಪಿರಲ್ಕೆ ತಂ
ದುಟ್ಟ ಗಜಾಜಿನಂ ಗಿರಿಜೆ ತುಂಗವೃಷಂ ಸಹಿತಂ ನಿರಂತರಂ
ಪುಟ್ಟುವರೆಂದೊಡೇಪೊಗಟ್ವೆನೊಪ್ಪುವ ಕಾಶಿಯ ಪೆಂಪನುರ್ವಿಪಾ ೬

ವ॥ ಅಂತು ಕಮನೀಯಮಾದ ಕಾಶೀಕ್ಷೇತ್ರಮನೆಯ್ದಿ

ಸುಡುವ ಬೆಂಕಿ. ಕೃತಯುಗವೆಂಬ ಕಮಲದ ನಿರ್ಮಲವಾದ ಬೀಜ ಕೋಶವಿದು. ೪. ಧರೆಯೊಡೆಯನೇ ! ಕಾಶಿಯು ಪುಣ್ಯಗಳಿಗೆ ಪ್ರಸಿದ್ಧವಾದ ತವರುಮನೆ. ಜ್ಞಾನವೆಂಬ ಸಾಗರದ ಆಚೆಯ ದಡವನ್ನು ಪ್ರೀತಿಯಿಂದ ತೋರಿಸಲು ಸಹಾಯಕವಾದ ದಾರಿ. ಪೂರ್ಣಸುಖವು ಬೆಡಗಿನಿಂದ ಹುಟ್ಟುವ ನೆಲ. ಈಶ್ವರನ ಧ್ಯಾನದಿಂದ ಇರಬಹುದಾದ ಸ್ಥಾನ. ಮೋಕ್ಷವೆಂಬ ಕಾಮಿನಿಯ ವಾಸಸ್ಥಾನ ಎಂಬ ರೀತಿಯಲ್ಲಿ ವಾರಾಣಸೀ ನಗರವು ಪ್ರಕಾಶಿಸುತ್ತದೆ. ೫. ಮಹಾರಾಜನೆ ! ಆ ನಗರವು ಕಾಮನನ್ನು ಸುಟ್ಟ ಹರನವಾಸ ಸ್ಥಾನ. ಶಂಕರನ ಮನೆ. ಈಶ್ವರನ ಗೃಹ. ಪಾರ್ವತೀ ಪತಿಯಮಂದಿರ. ಗಿರೀಶನ ವಾಸಗೃಹ ಉಗ್ರರೂಪಿಯಾದ ಶಂಕರನ ಮನೆ. ಗಂಗಾಧರನ ಮನೆ. ಭವನ ನಿಲಯ. ಯಮನನ್ನು ಸೋಲಿಸಿದ ಶಿವನ ವಾಸಸ್ಥಾನ—ಎಂದು ಪ್ರಕಾಶಿಸುವ ಕಾಶೀನಗರಕ್ಕೆ ಹೋದೆನು. ೬. ಭೂಪಾಲನೆ ! ಪ್ರಸಿದ್ಧವಾದ ಕಾಶಿಯ ಮಹಿಮೆಯನ್ನು ಏನೆಂದು ಹೇಳಲಿ ! ಮತ್ತೆ ಹುಟ್ಟಿದರೂ ಈ ಊರಿನಲ್ಲಿ ಹುಟ್ಟಿದವರು ಜಡೆ, ಹಣೆಗಣ್ಣು, ಚಂದ್ರ ಲೇಖೆ, ಕೊರಳಲ್ಲಿ ಕಪ್ಪು, ಹತ್ತು ಪ್ರಕಾಶಮಾನವಾದ ತೋಳುಗಳು, ಹಾವಿನ ಕುಂಡಲ, ಇವುಗಳಿಂದ ಕೂಡಿ ಆನೆಯ ತೊಗಲನ್ನುಟ್ಟು ಪಾರ್ವತಿ ಮತ್ತು ಎತ್ತರವಾದ ವೃಷಭ ಇವುಗಳೊಡನೆಯೇ ನಿರಂತರವಾಗಿ ಹುಟ್ಟುತ್ತಾರೆ. ವ॥ ಹಾಗೆ ಮನೋರಮವಾದ

ಈಕ್ಷಣಮಾತ್ರದಿಂದಖಿಲ ಪಾತಕಮಂ ತವಿಪಭ್ರಗಂಗೆಯುಂ
ಮೋಕ್ಷಫಲಪ್ರಸಿದ್ಧಿ ನೆಲಸಿರ್ಪ ಲಸದ್ಗುಣಸಂಗೆಯುಂ ವಿರೂ
ಪಾಕ್ಷ ಶಿರಸ್ಸರೋಜನವಗಂಧಮದಾಲಸಭೃಂಗೆಯುಂ ಜಗ
ದ್ರಕ್ಷಣಮೂರ್ತಿಯುಪ್ಪಮರಗಂಗೆಯನಾಂ ಮಿಗೆ ಕಂಡೆನುರ್ವಿಪಾ ೭

ಮಲಿನಮನುಳ್ಳುದಂ ತವಿಸಲೆಂದು ವಿಯನ್ನದಿಯೊಳ್ ಮುಳುಂಗೆ ಮುಂ
ದಲೆ ಜಡೆಗಟ್ಟಿ ಕಣ್ ವಿಷಮಮಾಗಿ ಕೊರಲ್ ಕಱಗಟ್ಟಿ ಸರ್ಪಸಂ
ಕುಳಮೆಡೆಗೊಂಡು ವಾಮತನು ಪೆಣ್ಗಡೆಯಾಗಿ ಪಿಶಾಚಸಂಗಮ
ಗ್ಗಳಿಸಿರೆ ಪುಟ್ಟುಪೊಂದಿಗೆಡೆಯಲ್ಲದೆ ತೋರ್ಪರಿದಲ್ತೆ ವಿಸ್ಮಯಂ ೮

ತನ್ನಂ ಭೋಂಕೆನೆ ಕಂಡವಂ ಕನಸಿನೊಳ್ ಕಾಣಂ ಪುನರ್ಜನ್ಮಮಂ
ತನ್ನಂ ಪೊರ್ದಿದ ಜೀವಿಗಳ್ ನರಕಮಂ ಪೊರ್ದರ್ ಮನೋಭಕ್ತಿಯಿಂ
ತನ್ನಾ ಧ್ಯಾನದೊಳಿರ್ಪವಂ ಪದೆಪಿನಿಂದಿರ್ಪಂ ಮಹಾನಂದದೊಳ್
ತನ್ನೊಳ್ ಸ್ನಾನಮನೊಲ್ದು ಮಾಳ್ಪ ಮನುಜಂ ಮಾಳ್ಪಂ ಜಗತ್ಸೃಷ್ಟಿಯುಂ ೯

ವ॥ ಮತ್ತಮದು ನೀರಾಟಕ್ಕೆಳಸಿದ ಐರಾವತವಾರಣಶರೀರ ಗೌರವರ್ಣಂ ತೀರ್ಥೈಸಿದಂತೆಯುಂ ಜಳಪಾನಕ್ಕೆಳಸಿದ ಅಳಕೇಶ್ವರಪ್ರಿಯನ ವೃಷಭೇಂದ್ರನ ಕಮನೀಯಕಾಂತಿಯುಂ

ಕಾಶೀ ಕ್ಷೇತ್ರಕ್ಕೆ ಹೋಗಿ—೭. ಮಹಾರಾಜನೆ ! ನಾನಲ್ಲಿ ಶ್ರೇಷ್ಠವಾದ ದೇವಗಂಗೆಯನ್ನು ನೋಡಿದೆನು. ಅದು ನೋಡಿದ ಮಾತ್ರದಿಂದಲೇ ಪಾಪವನ್ನೆಲ್ಲ ನಾಶಮಾಡುತ್ತದೆ. ಮೋಕ್ಷ ಫಲವನ್ನು ತಪ್ಪದೆ ಕೊಡುವ ಪ್ರಸಿದ್ಧಿ ಗುಣವುಳ್ಳುದು. ವಿರೂಪಾಕ್ಷನ ತಲೆಯ ಕಮಲಗಳ ನವಗಂಧ ಸೇವನೆಯಿಂದ ಅದರಲ್ಲಿರುವ ದುಂಬಿಗಳು ಮದಿಸಿ ಚಲಿಸಲಾರವು. ಅದರ ಆಕಾರ ಜಗತ್ತನ್ನು ರಕ್ಷಿಸುವ ಸಾಮರ್ಥ್ಯವುಳ್ಳುದು. ೮. ಇರುವ ಪಾಪವನ್ನು ಹೋಗಲಾಡಿಸಿಕೊಳ್ಳಲು ದೇವಗಂಗೆಯಲ್ಲಿ ಮುಳುಗುತ್ತಾರೆ. ಮುಳುಗಿದ ಕೂಡಲೆ ಮುಂದಲೆಯಲ್ಲಿ ಜಡೆಯು ಕಾಣಿಸಿಕೊಳ್ಳುತ್ತದೆ. ಕಂಗಳು ಮೂರಾಗುತ್ತವೆ. ಕೊರಳು ನೀಲವಾಗುತ್ತದೆ. ಹಾವುಗಳು ಬಂದು ಕೂಡಿಕೊಳ್ಳುತ್ತವೆ. ಶರೀರದ ಎಡ ಭಾಗವು ಹೆಣ್ಣಾಗುತ್ತದೆ. ಪಿಶಾಚಿಗಳ ಗುಂಪು ಕೂಡುತ್ತದೆ. ಹುಟ್ಟುವ ಅವಕಾಶವಿಲ್ಲದೆಯೇ ಹೀಗೆ ತೋರುತ್ತಾರೆ. ಇದು ಅಚ್ಚರಿಯಲ್ಲವೆ ? ! ೯. ತನ್ನನ್ನು (ಗಂಗೆಯನ್ನು) ಆಕಸ್ಮಾತ್ತಾಗಿ ಕನಸಿನಲ್ಲಿ ನೋಡಿದರೂ ಪುನರ್ಜನ್ಮವಿಲ್ಲ. ತನ್ನನ್ನು (ಗಂಗೆಯನ್ನು) ಆಶ್ರಯಿಸಿದ ಜೀವಿಗಳು ನರಕದಲ್ಲಿ ಬೀಳುವುದಿಲ್ಲ. ಮನಸ್ಸಿನ ಭಕ್ತಿಯಿಂದ ತನ್ನನ್ನು (ಗಂಗೆಯನ್ನು) ಧ್ಯಾನಮಾಡುವವನು ಮಹಾನಂದದಲ್ಲಿ ಮುಳುಗುತ್ತಾನೆ. ತನ್ನಲ್ಲಿ (ಗಂಗೆಯಲ್ಲಿ) ಸ್ನಾನಮಾಡುವ ಮನುಷ್ಯನು ಜಗತ್ತಿನ ಸೃಷ್ಟಿಯನ್ನು ಮಾಡಲು ಸಮರ್ಥನಾಗುತ್ತಾನೆ. ಇದು ಆ ಗಂಗೆಯ ಮಹಿಮೆ. ವ॥ ನೂರ್ಮಡಿ ನೈರ್ಮಲ್ಯದಿಂದ ಕೂಡಿದ ಅಮರ ಗಂಗಾನದಿಯನ್ನು ಕಂಡೆನು. ಅದು ಸ್ನಾನಮಾಡಬಂದ ಐರಾವತ ಗಜದ ಶರೀರದ ಬಿಳುಪು ಬಣ್ಣವು ಒಟ್ಟುಗೂಡಿದಂತೆ ಕಂಡಿತು. ಅಲಕಾರಾಜ

ಕವರ್ದಂತೆಯುಂ ಅವಗಾಹನ ಪ್ರೀತಿಯಿಂದವತರಿಸಿದಭವನ ಧವಳದೇಹದಿಂದವಿರಳಮಾದಂತೆಯುಂ ಸಲಿಲಕ್ರೀಡೆಗಲಸಯಾನದಿಂ ಬಂದ ದಿವಿಜನಾರಿಯರ ನಯನಕಾಂತಿಕೌಮುದಿಯಂ ಕೆಪ್ಪುಗೊಂಡಂತೆಯುಂ ನೈರ್ಮಲ್ಯದಿಂ ನೂರ್ಮಡಿಸಿರ್ದ ಅಮರನದಿಯುಂ ಕಂಡು

ಕಂ॥ ಅದಱೊಳಗಣ ಕರ್ಣಿಕೆಯಾಗಳ್
ಸದಮಳಮಪ್ಪಂತು ಮಿಂದು ದುರಿತಮನಾರ್ಪಿಂ
ದೊದೆದು ಕೃತಕೃತ್ಯನಾದೆಂ
ವಿದಿತಮೆನಿಪ್ಪಖಿಳ ಕರ್ಮಮಂ ಪ್ರಕಟಿಸಿದೆಂ ೧೦

ತತ್ಸ್ಥಾನೋಚಿತವಿಧಿಯನ
ತಿ ಸ್ಥೂಲಮೆನಲ್ಕೆ ಮಾಡಿ ಬೞಿಕಾನಾಗಳ್
ಸ್ವಸ್ಥಮನನಾಗಿಯಲ್ಲಿರ್ದ
ರ್ದ ಸ್ಥಾಣುವಿನಂಘ್ರಿ ಪರಿಸರಕ್ಕೆಯ್ತಂದೆಂ ೧೧

ಶಶ್ವನ್ಮಂಗಲಮೂರ್ತಿ ಪಾತಕಗಿರಿಪ್ರೋದ್ಭಿನ್ನ ದಂಭೋಳಿ ಸ
ಪ್ತಾಶ್ವಶ್ವೇತರುಚಿಪ್ರಸಿದ್ಧನಯನಂ ನೈರ್ಮಲ್ಯಲಿಂಗಂ ಜಗ
ದ್ವಿಶ್ವವ್ಯಾಪ್ತನಪಾರ ಸಾರಮಹಿಮಂ ಕಾರುಣ್ಯಕಲ್ಪದ್ರುಮಂ
ವಿಶ್ವೇಶಂ ಭವನಾಶನದ್ರಿತನಯಾಧೀಶಂ ಸಮಾಸ್ತಾಶ್ರಯಂ ೧೨

ನಿಗೆ (ಕುಬೇರ) ಪ್ರಿಯನಾದ ಹರನ ವೃಷಭವು ನೀರು ಕುಡಿಯಲು ಬಂದಾಗ ಕಮನೀಯವಾದ ಕಾಂತಿಯನ್ನೆಲ್ಲ ತನ್ನತ್ತ ಸೆಳೆದುಕೊಂಡಿದ್ದಂತೆ ಕಂಗೊಳಿಸಿತು. ಸ್ನಾನಮಾಡಲು ನೀರಿನಲ್ಲಿಳಿದ ಶಿವನ ಬಿಳುಪಾದ ಶರೀರದ ಕಾಂತಿಯು ಒತ್ತಾಗಿ ಸೇರಿದಂತೆ ಪ್ರಕಾಶಿಸಿತು. ಜಲಕ್ರೀಡೆಗಾಗಿ ಮುಂದಗಮನದಿಂದ ಬಂದ ದೇವಾಂಗನೆಯರ ಕಂಗಳ ಕಾಂತಿಯೆಂಬ ಬೆಳದಿಂಗಳನ್ನು ತನ್ನಲ್ಲಿ ಸೆಳೆದುಕೊಂಡಂತೆ ರಂಜಿಸಿತು, (ಕೆಪ್ಪು=ಸೆಳೆದುಕೊ.) ೧೦. ಆ ದೇವಗಂಗೆಯ ಮಣಿಕರ್ಣಿಕಾ ಘಟ್ಟದಲ್ಲಿ ಶುದ್ಧನಾಗುವಂತೆ ಸ್ನಾನ ಮಾಡಿ ಪಾಪಗಳನ್ನು ಕಳೆದುಕೊಂಡೆನು. ಇದರಿಂದ ಕೃತಕೃತ್ಯನಾದೆನು. ಆಮೇಲೆ ವಿಹಿತವಾದ ಕರ್ಮಗಳನ್ನು (ಸಂಧ್ಯಾವಂದನಾದಿ) ಮಾಡಿದೆನು. ೧೧. ಆ ಕ್ಷೇತ್ರದಲ್ಲಿ ಮಾಡಬೇಕಾದ ಕರ್ಮಗಳನ್ನು ಸ್ಥೂಲವಾಗಿ (ಸಂಗ್ರಹವಾಗಿ) ಮಾಡಿ ಬಳಿಕ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡು ಕಾಶಿಯಲ್ಲಿ ವಾಸಿಸುತ್ತಿದ್ದ ಶಿವನ ಪಾದಗಳ ಹತ್ತಿರಕ್ಕೆ ಬಂದೆನು. ೧೨. ವಿಶ್ವೇಶ್ವರನು ಸದಾ ಮಂಗಳಸ್ವರೂಪನು. ಪಾಪವೆಂಬ ಬೆಟ್ಟವನ್ನು ಸೀಳುವ ವಜ್ರಾಯುಧ. ಸೂರ್ಯಚಂದ್ರರೆಂಬ ಪ್ರಸಿದ್ಧವಾದ ಕಣ್ಣುಗಳುಳ್ಳವನು. ನಿರ್ಮಲವಾದ ಲಿಂಗ. ಇಡೀ ವಿಶ್ವದಲ್ಲಿ ವ್ಯಾಪಿಸಿದವನು. ಎಲ್ಲೆಯಿಲ್ಲದ ಸಾರವಾದ ಮಹಿಮೆಯುಳ್ಳವನು. ಕರುಣೆಗೆ ಕಲ್ಪವೃಕ್ಷ. ಹುಟ್ಟನ್ನು ಹೋಗಲಾಡಿ

ವ॥ ಅಂತಪ್ಪ ಜಗನ್ಮೋಹನಮೂರ್ತಿಯಾದ ವಿಶ್ವೇಶ್ವರನಂ ನಮಸ್ಕರಿಸಿ

ಕಂ॥ ಸಂಸಾರ ಭ್ರಮಣವ ನಿ
ಶ್ಚೈಸುವ ಬಗೆಯಂ ಬಿಸುಟ್ಟು ವಿಶ್ವೇಶನಿಜಾ
ವಾಸವನುದ್ಭ್ರಮಣಂಗೆ
ಯ್ದಾ ಸುಖದಿಂದಿರ್ಪೆನೆಂಬವೋಲ್ ಬಲವಂದೆಂ ೧೩

ವ॥ ಅಂತು ಬಲವರುತಿರ್ಪಾಗಳ್

ಪೊಸನನೆಯಿಂ ಮುಗುಳ್ಗಳಿನರಲ್ಗಳಿನುಜ್ಜ್ವಲವಾಗಿ ಗುಜ್ಜುಗೊಂ
ಡೆಸುವುದದೊಂದುಚೆಲ್ವ ಕರವೀರದ ಕಪಿನೊಳೊಲ್ದು ರಜ್ಜುವಂ
ಪೊಸೆದು ಕೊರಲ್ಗೆ ಸೇಂದಿಕೊಳುತಿರ್ಪತಿ ಸಾಹಸ ಕರ್ಮಭೂತನ
ಪ್ಪಸಮ ಬಲಾಢ್ಯನೊರ್ಬನಿರಲಾನವನಂವಿಃಗೆ ಕಂಡೆನುರ್ವಿಪಾ ೧೪

ತೋರವೊಗಂ ಸಮುನ್ನತಗಳಂ ನಸುಕೆಂಪಡರ್ದಕ್ಷಿ ನೀಳ್ದತೋಳ್
ಪೇರುರಮುಟ್ಟಗಂಡುಡಿಗೆ ಕರ್ಕಶ ದೇಹಮತೀವಭೀಷಣಾ
ಕಾರಮನಪ್ಪುಕೈಯೆ ಸಲೆ ಸಾಹಸಕರ್ಮದೊಳಿರ್ದನೊರ್ಬನು
ದ್ಘಾರಿತ ಬಾಷ್ಪವಾರಿಪರಿಲಗ್ನನವಂ ಮುದಭಗ್ನನುರ್ವಿಪಾ ೧೫

ಸುವನು. ಪಾರ್ವತಿಯ ಪತಿ. ಸಮಸ್ತರಿಗೂ ಆಶ್ರಯನಾದವನು. ವ|| ಅಂಥ ಜಗನ್ಮೋಹನ ಮೂರ್ತಿಯಾದ ವಿಶ್ವೇಶ್ವರನಿಗೆ ನಮಸ್ಕರಿಸಿದೆನು. ೧೩. ಜಗತ್ತಿನಲ್ಲಿ ಸಂಚರಿಸಬೇಕೆಂಬ ಆಲೋಚನೆಯನ್ನು ತೊರೆದು ವಿಶ್ವೇಶ್ವರನ ದೇವಾಲಯದ ಪ್ರದಕ್ಷಿಣೆ ಮಾಡಿ ಸುಖದಿಂದ ಇರುವೆನು ಎಂಬಂತೆ ನಾನೇ ದೇವಾಲಯದ ಪ್ರದಕ್ಷಿಣೆ ಮಾಡಿದನು. ವ|| ಹಾಗೆ ಪ್ರದಕ್ಷಿಣೆ ಮಾಡುತ್ತಿದ್ದಾಗ – ೧೪. ರಾಜನೆ ! ನಾನು ಒಬ್ಬ ಅಸಮಬಲಶಾಲಿಯಾದ ಅತಿಸಾಹಸಿಯನ್ನು ಕಂಡೆನು. ಹೊರದಾದ ಕಾಯಿ ಮೊಗ್ಗು, ಹಣ್ಣುಮೊಗ್ಗು, ಹೂವುಗಳು —ಇವುಗಳಿಂದ ಪ್ರಕಾಶಮಾನವಾಗಿ ಬಗ್ಗಿದ ಒಂದು ಸುಂದರವಾದ ಕಣಿಗಿಲೆ ಗಿಡದ ಮರೆಯಲ್ಲಿ ಒಂದು ಹಗ್ಗವನ್ನು ಹೊಸೆದು ತನ್ನ ಕುತ್ತಿಗೆಗೆ ಅವನು ಹಾಕಿಕೊಂಡು ಸೇದಿಕೊಳ್ಳುತ್ತಿದ್ದನು. [ಕೊರಳಿಗೆ ಹಗ್ಗ ಹಾಕಿ ಸೇದಿಕೊಂಡು ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದನು] ೧೫. ರಾಜನೆ ! ಅತನು ಅಲ್ಲಿ ಸಾಹಸಕಾರ್ಯದಲ್ಲಿ ತೊಡಗಿದ್ದನು. ಅವನ ಮುಖ ದೊಡ್ಡದಾಗಿದ್ದಿತು. ಕುತ್ತಿಗೆ ಎತ್ತರವಾಗಿದ್ದಿತು. ಕಂಗಳು ಸ್ವಲ್ಪ ಕೆಂಪಾಗಿದ್ದುವು. ತೋಳುಗಳು ಉದ್ದವಾಗಿದ್ದುವು. ಎದೆ ಅಗಲವಾಗಿತ್ತು. ಗಂಡುಡಿಗೆಯನ್ನುಟ್ಟಿದ್ದನು. ಶರೀರವು ಒರಟಾಗಿದ್ದಿತು. ಅವನ ಆಕಾರವೂ ಅತಿ ಭಯಂಕರ, ಕಂಗಳಿಂದ ನೀರು ಸುರಿಯುತ್ತಿತ್ತು.

ಕಂ॥ ನಿರವಧಿಯೊಳಶ್ರುಜಲಮಂ
ಸುರಿಯುಲೊಡಂ ನಯನವಾರಿ ತೀರ್ದಬಳಿಕ್ಕಂ
ತಿರುಳಾದ ಮಾಂಸಮುೞಿದಂ
ತಿರೆ ಕೆಂಪಡರ್ದಕ್ಷಿಯುಗಳವೊಪ್ಪಿದುದವನಾ ೧೬

ವ॥ ಅಂತಿರ್ದನಂ ಕಂಡು

ಕಂ॥ ಅವನಿಂಗಿತಮಂ ಕಂಡಾ
ನಿವನಾತ್ಮ ಸುಹೃದ್ವಿಯೋಗದಿಂದಸುವಂ ನೀ
ಗುವ ಬಗೆಯೊಳಿರ್ಪ ತೆಱನೆಂ
ದು ವಿಚಾರಿಸಿ ಬೞಿಯೊಳವನನಾನಿಂತೆಂದೆಂ ೧೭

ಈ ಸಾಹಸ ಕರ್ಮಮನ
ತ್ಯಾಸುರವೆನೆಮಾೞ್ಪಯೇಕೆ ನೀನೆತ್ತಣನೆಂ
ದೋಸರಿಸದೆನಾಂ ಬೆಸಗೊಳ
ಲಾ ಸುಭಟಂ ಪೇೞಲಾಗಲಾದ್ಯತನಾದಂ ೧೮

ಪೆಸರ್ವೆತ್ತಪೂರ್ವಕಾಮೋ
ಪುಶಯದ ದೇಶದೊಳದೊರ್ಬ ವೈಶ್ಯನ ಮಗನಾಂ
ಪೊಸತೆನಿಪ ಚೌರ್ಯವೃತ್ತಿ
ವ್ಯಸನಂ ನೆಲೆಗೊಂಡುದೆನಗೆ ವಿಧಿವಶದಿಂದಂ ೧೯

ಆನಂದವನ್ನು ಕಳೆದುಕೊಂಡಿದ್ದಂತೆ ಇದ್ದನು. ೧೬. ಎಡೆಬಿಡದೆ ಕಣ್ಣೀರು ಸುರಿಸಿ ಸುರಿಸಿ ಕಣ್ಣೀರೇ ತೀರಿ ಹೋಗಿತ್ತು. ಅದರಿಂದ ಅವನ ಕಂಗಳು ತುಂಬ ಕೆಂಪಾಗಿದ್ದುವು. ಅವನ ಎರಡು ಕಂಗಳೂ ಕಣ್ಣೀರು ಮುಗಿದುಹೋದ ಮೇಲೆ ಉಳಿದ ತಿರುಳಾದ ಮಾಂಸಖಂಡವೋ ಎಂಬಂತೆ ಕಾಣಿಸಿದುವು. ವ॥ ಹಾಗಿದ್ದವನನ್ನು ನೋಡಿ, ೧೭. ನಾನು ಅವನ ಮನಸ್ಸಿನ ಅಭಿಪ್ರಾಯವನ್ನು ಊಹಿಸಿದೆನು. "ಇವನು ತನ್ನ ಗೆಳೆಯನ ಅಗಲಿಕೆಯಿಂದ ಪ್ರಾಣಗಳನ್ನು ತೊರೆಯುವ ಯೋಚನೆಯಲ್ಲಿದ್ದಾನೆ." ಎಂದು ಯೋಚಿಸಿದೆನು. ಬಳಿಕ ನಾನವನನ್ನು ಕೇಳಿದೆನು. ೧೮. "ಆವೇಶಕ್ಕೊಳಗಾಗಿ ಈ ಸಾಹಸಕಾರ್ಯವನ್ನೇಕೆ ಮಾಡುತ್ತಿದ್ದೀಯೆ ? ನೀನು ಯಾವ ದೇಶದವನು ?" ಎಂದು ನಾನು ಸ್ವಲ್ಪವೂ ಅನುಮಾನಿಸದೆ ಅವನನ್ನು ಪ್ರಶ್ನಿಸಿದೆನು. ಆಗ ಆ ಸುಭಟನು ಹೇಳಲು ಪ್ರಾರಂಭಿಸಿದನು. ೧೯. "ಹೆಸರುವಾಸಿಯಾದ ಅಪೂರ್ವವಾದ ಕಾಮೋಪುಶಯವೆಂಬ ದೇಶದಲ್ಲಿರುವವೈಶ್ಯನೊಬ್ಬನ ಮಗನು ನಾನು. ನನಗೆ ದುರದೃಷ್ಟದಿಂದ ಹೊಸದಾದ ಕಳ್ಳತನದ

ಕಂ|| ಆಯುಃಕರ್ಮಂ ವಿತ್ತಾ
ದಾಯಂ ವಿದ್ಯಾದಿಲಾಭಮೆಂಬಿವು ಮೊದಲೊಳ್
ತಾಯ ಬಸಿಱಲ್ಲಿ ಪುಟ್ಟುವ
ಕಾಯಕ್ಕಾಗಿರ್ಪವಱಿಯಲಾಱದವರಳವೇ ೨೦

ಎನ್ನ ಪಿತೃಮಾತೃ ಸೋದರ
ರೆನ್ನಯ ನಡೆವಳಿಗೆ ಸೈರಿಸದೆ ಪೊಱಮಡಿಸಲ್
ಖಿನ್ನಮನನಾಗಿ ಬಂದಪೆ
ನೆನ್ನ ಪೆಸರ್ ಪೂರ್ಣಭದ್ರನೆಂಬುದು ಕೆಳೆಯಾ ೨೧

ವ|| ಎಂದು ಮತ್ತಂ

ಈ ವಾರಣಾಸಿಪುರದ ಮ
ಹಾ ವೈಶ್ಯಾಧಿಪನ ಮನೆಗೆ ಕನ್ನಮನಿಕ್ಕಲ್
ಕೋವಿದಪುರ ರಕ್ಷಕರಱಿ
ದೋವದೆ ಬಲ್ವಿಡಿದರೆನ್ನನದಟಿಂದಿರುಳೊಳ್ ೨೨

ವ|| ಅಂತವರೆನ್ನಂ ಪಿಡಿದು ಧರ್ಮಾಸನ ಕರ್ಮಶ್ರೇಷ್ಠರ್ಗೆ ತೋಱಲವರ್ ಧರ್ಮಸೂಕ್ಷ್ಮ ಪ್ರಾಯಶ್ಚಿತ್ತಮನಿಂತೆಂದರ್

ಕಂ|| ಮದರದನಿಯ ಪಾದಾಗ್ರದಿ
ನೊದೆಯಿಪುದಿವನುತ್ತಮಾಂಗಮಂ ನುರ್ಚಪ್ಪಂ
ತಿದು ಧರ್ಮಮೀತನಂ ಬೇ
ಗದೆ ಕೊಂಡೊಯ್ಯೆಂದರವರ್ಗಳವರೊಡನಾಗಳ್ ೨೩

ಜಟವು ತಗಲಿಕೊಂಡಿತು. ೨೦. ಆಯುಸ್ಸು, ಕರ್ಮ (ಕಸಬು), ಧನಲಾಭ, ವಿದ್ಯೆ-ಇತ್ಯಾದಿಗಳು ಇಷ್ಟೇ ಒಂದು ತಾಯಿಯ ಬಸಿರಲ್ಲಿರುವಾಗಲೇ ನಿಗದಿಯಾಗಿರುತ್ತವೆ. ಉಳಿದವರಾರೂ ಅದನ್ನರಿಯರು. ೨೧. ಗೆಳೆಯನೆ! ನನ್ನ ತಂದೆ, ತಾಯಿ ಮತ್ತು ಸಹೋದರರು ನನ್ನ ನಡವಳಿಕೆಯನ್ನು ನೋಡಿ ಸಹಿಸಲಾರದೆ ಮನೆಯಿಂದ ಹೊರಗೋಡಿಸಿದರು. ದುಃಖಿತನಾಗಿ ನಾನಿಲ್ಲಿಗೆ ಬಂದೆನು. ನನ್ನ ಹೆಸರು ಪೂರ್ಣಭದ್ರನೆಂದು." ವ|| ಎಂದು ಹೇಳಿ ಮತ್ತೂ– ೨೨. "ಈ ಕಾಶೀನಗರದ ದೊಡ್ಡ ವೈಶ್ಯನೊಬ್ಬನ ಮನೆಗೆ ಕನ್ನ ಹಾಕಿದೆನು. ಬುದ್ಧಿವಂತರಾದ ನಗರರಕ್ಷಕರು ಇದನ್ನು ತಿಳಿದು ಆದಿನ ರಾತ್ರಿ ಶೌರ್ಯದಿಂದ ಹಿಂಜರಿಯದೆ ನನ್ನನ್ನು ಹಿಡಿದು ಹಾಕಿದರು. ವ|| ಅವರು ನನ್ನನ್ನು ಹಿಡಿದು ನ್ಯಾಯಾಧಿಪತಿಯ ಮುಂದೆ ನಿಲ್ಲಿಸಿದರು. ಅವರು ಧರ್ಮಸೂಕ್ಷ್ಮವನ್ನು ಪರಿಶೀಲಿಸಿ ಒಂದು ಪ್ರಾಯಶ್ಚಿತ್ತವನ್ನು ಹೇಳಿದರು. ೨೩. "ಇವನ ತಲೆಯನ್ನು ನುಚ್ಚು ನೂರಾಗುವಂತೆ ಮದಿಸಿದ ಆನೆಯ ಕಾಲಿನಿಂದ ಒದೆಯಿಸಿರಿ. ಇದೇ ಧರ್ಮ. ಈತನನ್ನು ಬೇಗ ಕರೆದುಕೊಂಡು ಹೋಗಿರಿ" ಎಂದು

ವ॥ ಎಂದು ಪೇಟ್ಗೊಡವರೀ ಕಾಶೀವಲ್ಲಭನ ಮಂತ್ರಿ ಬಾಹತ್ತರನಪ್ಪ ಕಾಮಪಾಲಂಗೆ ತದ್ವೃತ್ತಾಂತಮಂ ಪೇಟ್ಗೊಡಾತನೆನ್ನನಾನೆಗಿಕ್ಕಿಸಲೆಂದುಪ್ಪರಿಗೆಯೊಳಿರ್ದು ಮಾವತನನಾನೆಯುಂ ತರಲ್ವೇಟಲೊಡಂ

ಅದಟಿಂದದ್ರಿಜೆಯಾಣ್ಮನೊಳ್ ಭುಜಭಲಾವಷ್ಟಂಭದಿಂದಾಂತು ಕಾ
ದಿದ ಸೋನ್ಮಾದಗಜಾಸುರಂ ಸಹಜದಿಂ ತಾನೆಂಬಿನಂ ಘೋರ ರೌ
ದ್ರಗುರ್ಬಿಂ ದಿಗಿಭಂಗಳಂ ಬೆದಱಿಸುತ್ತಾಟೋಪದಿಂ ಬಂದು ನಿಂ
ದುದು ಸಂಹಾರ ಯಮಂಬೊಲುದ್ಧತ ಗಜಂ ಮೃತ್ಯುಂಜಯಾಖ್ಯಾನದಿಂ ೨೪

ಸಿಡಿಲಂ ಬೃಂಹಿತದೊಳ್ ತದುಗ್ರಶಿಖಿಯಂ ರೌದ್ರೇಕ್ಷಣ ದ್ವಂದ್ವದೊಳ್
ಕುಡುಮಿಂಚಂ ಕುರುದಾಡೆಯೊಳ್ ಮಿಸುಪಕರ್ಪಂ ದೇಹದೊಳ್ ವಾರಿಯಂ
ಕಡುಪೆಂಪಿಂ ಮದವಾರಿಯೊಳ್ ಕರಕಮಂ ಚಂಚತ್ತುಷಾರಂಗಳೊಳ್
ಪಡೆದುದ್ಯತ್ಕರಿ ಕಾಳಮೇಘ ಘಟೆಯಂತೊಪ್ಪಿರ್ದುದುತ್ಕೋಪದಿಂ ೨೫

ವ॥ ಅಂತಿರ್ಪುದೊಂದಾನೆಯುಂ ನಿಷಾದಿ ತರಲದಱ ಮುಂದೆನ್ನ ನಿಲಿಸಿ ಕೊಲಿಸಲೆಂದು

ನ್ಯಾಯಾಧಿಪತಿಗಳು ಅವರಿಗೆ ಹೇಳಿದರು. ವ॥ ಅವರು ಈ ಕಾಶೀರಾಜನ ಮಂತ್ರಿಯೂ ಬಾಹತ್ತರನೂ (ಎಪ್ಪತ್ತೆರಡು ಅಧಿಕಾರಿಗಳಲ್ಲೊಬ್ಬ) ಆದ ಕಾಮಪಾಲನಿಗೆ ಈ ವೃತ್ತಾಂತ್ತವನ್ನು ಹೇಳಿದರು. ಆತನು ನನ್ನನ್ನು ಆನೆಗೆ ಕೊಡಿಸಬೇಕೆಂದು ಉಪ್ಪರಿಗೆಯ ಮೇಲೆ ಹತ್ತಿ ನಿಂತು ಮಾವಟಿಗನನ್ನೂ ಆನೆಯನ್ನೂ ತರಲು ಹೇಳಿದನು ೨೪. ಪರಾಕ್ರಮದಿಂದ ಶಿವನೊಡನೆ ತೋಳ್ಬಲದಿಂದ ಕಾದಿದ ಮದಿಸಿದ ಗಜಾಸುರನೇ ಬಂದನೋ ಎಂಬಂತೆ ಆ ಮೃತ್ಯುಂಜಯವೆಂಬ ಆನೆಯು ಬಂದು ನಿಂತಿತು. ಘೋರವಾದ ರೌದ್ರಾಕಾರದಿಂದ ಕೊಬ್ಬಿ ದಿಗ್ಗಜಗಳನ್ನೂ ಹೆದರಿಸುತ್ತಾ ಘೀಳಿಡುತ್ತಾ ಬಂದು ನಿಂತಿತು. ಆ ಉದ್ಧತಗಜವು ಪ್ರಳಯ ಕಾಲದ ಯಮನಂತೆ ಕಾಣಿಸಿತು. ೨೫. ಕೋಪಗೊಂಡಿದ್ದ ಮದಿಸಿದ ಆ ಆನೆಯು ಕಾಳಮೇಘದ ಸಮೂಹದಂತೆ ಕಾಣಿಸಿತು. ಅದರ ಘೀತ್ಕಾರವು ಸಿಡಿಲನ್ನನುಕರಿಸಿದ್ದಿತು. ಭಯಂಕರವಾದ ಎರಡು ಕಣ್ಣುಗಳಿಂದ ಉಗ್ರವಾದ ಬೆಂಕಿಯನ್ನು ಕಾರುತ್ತಿತ್ತು. ವಕ್ರವಾದ ಕೋರೆ ಹಲ್ಲುಗಳು ಕೊಂಕಾದ ಮಿಂಚಿನಂತೆ ಕಾಣಿಸಿದುವು. ಶರೀರವು ಕಪ್ಪಾಗಿ ಹೊಳೆಯುತ್ತಿತ್ತು ಮದದ ನೀರಿನ ಮೂಲಕ ಮಳೆ ನೀರನ್ನು ಧರಿಸಿದ್ದಿತು. ಚಲಿಸುವ ತುಂತುರುಗಳು ಆಲಿಕಲ್ಲನ್ನು ಹೋಲಿದುವು. ಆದುದರಿಂದ ಆನೆಯು ಕಾಳಮೇಘದಂತೆ ಕಾಣಿಸಿತು. ವ॥ ಇಂಥ ಒಂದು ಆನೆಯನ್ನು

**ವ್ಯಾಳನನಾರ್ದು ಮಾವತಿಗನಂಕುಶಮಿಕ್ಕಿ ಬಿಡಲ್ಕೆ ಕಂಡು ಕೈ**
**ಕೋಳದೆ ಕೆಯ್ಗಳಂ ನೆಗಪಿ ತತ್ಪ್ರತಿಮಾನಮನಾರ್ಪಿನಿಂ ಗಜಂ**
**ಘೀಳಿಡಲಾಂ ನಿಮಿರ್ದು ಪೊಡೆಯಲ್ಕದು ನೊಂದು ಮದದ್ವಿಪಂ ಗಜಾ**
**ಮೀಳನದಿಂ ನಿರೀಕ್ಷಿಸದೆ ಪೋಗಲೊಡರ್ಚಿತತೀವ ಭೀತಿಯಿಂ** ೨೬

**ವ॥ ಅಂತಾಂ ಪೊಡೆಯಲಾನೆ ನೊಂದು ಪಿಂದು ಮುಂದಪ್ಪಿನಂ ಮಾವತಿಗಂ ಕೋಪಿಸಿ**

**ಕಂ॥ ಸುಡು ಕುಂಜರಾಪಶದ ನಿ**
**ನ್ನೊಡಲಂ ನರಮಾತ್ರನಂ ಕೊಲಲ್ಕಾಱದೆ ಬೆಂ**
**ಗೊಡಲಾಂ ಬಿಡುವೆನೆ ನಿನ್ನಂ**
**ಕಡಿದಿಕ್ಕುವೆನೆಂದು ಮಗುಟ್ದು ನೂಂಕಿದನಿಭವಂ** ೨೭

**ವ॥ ಅಂತು ನೂಂಕಲ್**

**ಬರಿಕೈಯ್ಯಿಂ ನೆತ್ತಿ ಪೋಟ್ವಂತಿರೆ ಪೊಡೆಯಲತಿಕ್ರೂರ ದಂತಾಗ್ರದಿಂ ಮೆ**
**ಯ್ಯೆರಡಾಗಲ್ ಸೀಟ್ವ ಸಂರಂಭದೊಳೆನಗಿದಿರಾಗೇಟ್ತರಲ್ ದಂತಿಯುಂ ಮ**
**ತ್ಕರದಿಂದಾನಾರ್ಪಿನಿಂದಪ್ಪಳಿಸಲಖಿಳ ದಿಗ್ಭಿತ್ತಿಯೊಳ್ ಬೃಂಹಿತಂ ತೀ**
**ವಿರೆ ಘೀಳಿಟ್ಟಾನೆ ಮುಂಗೆಟ್ಟನುಪಮಭಯದಿಂ ನಿಲ್ಲದೋಡಿತ್ತು ಬೇಗಂ** ೨೮

ಮಾವಟಿಗನು ತಂದನು. ಕೊಲ್ಲಿಸಲೆಂದು ನನ್ನನ್ನು ಅದರ ಮುಂದೆ ನಿಲ್ಲಿಸಿದರು. ೨೬. ಮಾವಟಿಗನು ಮದ್ದಾನೆಯನ್ನು ಅಂಕುಶದಿಂದ ಚುಚ್ಚಿ ಗರ್ಜಿಸುತ್ತಾ ನನ್ನ ಮೇಲೆ ಬಿಟ್ಟನು. ಆಗ ನಾನು ಕೈಕೋಳಗಳನ್ನು ಮೇಲಕ್ಕೆತ್ತಿ ನೆಗೆದು ಆ ಆನೆಯನ್ನು ಹೊಡೆದೆನು. ಆ ಮದಗಜವು ತುಂಬ ನೊಂದು ಘೀಳಿಟ್ಟಿತು. ಭಯದಿಂದ ಕಣ್ಣುಮುಚ್ಚಿಕೊಂಡು ಹಿಂದಿರುಗಿನೋಡದೆ ಓಡಲು ಯತ್ನಿಸಿತು. ವ॥ ಹಾಗೆ ನಾನು ಹೊಡೆಯಲು ಆನೆಯು ನೊಂದು ಹಿಂದುಮುಂದಾಯಿತು. ಅದರಿಂದ ಮಾವಟಿಗನು ಕೋಪಿಸಿಕೊಂಡು ೨೭. "ನೀಚ ಗಜವೇ ! ನಿನ್ನ ಶರೀರವನ್ನು ಸುಡು. ಮನುಷ್ಯಮಾತ್ರನನ್ನು ಕೊಲ್ಲಲಾರದೆ ಬೆನ್ನು ತಿರುಗಿಸಿದರೆ ನಿನ್ನನ್ನು ನಾನು ಬಿಡುತ್ತೇನೆಯೇ ? ನಿನ್ನನ್ನು ಕತ್ತರಿಸಿ ಹಾಕುವೆನು." ಎಂದು ಹೇಳಿ ಮತ್ತೆ ಅದನ್ನು ನನ್ನತ್ತ ನೂಕಿದನು. ವ॥ ಹಾಗೆ ನೂಕಲು—೨೮. ಬರಿ ಕೈಯ್ಯಿಂದ ನೆತ್ತಿಯನ್ನು ಹೋಳುಮಾಡುವಂತೆ ಹೊಡೆದೆನು. ಆ ಆನೆಯೂ ತನ್ನ ಕ್ರೂರವಾದ ದಂತಾಗ್ರದಿಂದ ನನ್ನ ಮೈಯನ್ನು ಎರಡಾಗಿ ಸೀಳುವ ಪ್ರಯತ್ನದಿಂದ ನನಗಿದಿರಾಗಿ ನುಗ್ಗಿತು. ಆಗ ನಾನದನ್ನು ನನ್ನ ಕೈಗಳಿಂದ ಬಿಗಿಯಾಗಿ ಅಪ್ಪಳಿಸಿದೆನು. ಅದರಿಂದ ಅದು ದಿಗಂತದವರೆಗೆ ತುಂಬಿ ಪ್ರತಿಧ್ವನಿಸುವಂತೆ ಘೀಳಿಟ್ಟಿತು. ಮತ್ತು ಮಿತಿಮೀರಿದ ಹೆದರಿಕೆಯಿಂದ ಮುಂದು ಕಾಣದೆ ಓಡಿಹೋಯಿತು.

ವ॥ ಅಂತು ಪೋಪಾನೆಯುಂ ಕಂಡು

ಇದುವೆ ನಿಷಾದಿಕುಂಜರವೆಸರ್ಗಳ ಕೀಟಕನೆನ್ನ ಮುಂದೆ ನಿ
ಲ್ಲದು ಮಗುಳ್ದೊಂದು ಮತ್ತಗಜಮುಳ್ಳೊಡೆ ನಿಲ್ಲದೆ ಕೊಂಡುಬಾ ಬಟಿ
ಕ್ಕದಱನುಮಾನವಂ ತಿಳಿವೆನೆಂದವನಂ ಜಡಿಯಲ್ಕೆ ಕಂಡು ಸಂ
ಮದದೊಳೆ ಕಾಮಪಾಲಸಚಿವಂ ಪದೆದೀಕ್ಷಿಸಿದಂ ಮದಾಸ್ಯಮಂ ೨೯

ವ॥ ಅಂತೆನ್ನಂ ಕಾಮಪಾಲಂ ನೋಡಿ ತನ್ನ ಸಾರಕ್ಕೆ ಕರೆದಿಂತೆಂದಂ

ಕಂ॥ ಈ ಚೌರ್ಯವೃತ್ತಿಯಂ ಬಿ
ಟ್ಟಾಚಾರದಿನೆನ್ನ ಪೊರೆಯೊಳಿರ್ದೊಡೆ ನಿನ್ನಂ
ಭೂಚಕ್ರಂ ಪೊಗೞ್ವಂತತಿ
ವೈಚಿತ್ರ್ಯದಿನೊಲ್ದು ಪೊರೆವೆನೆಂದನಲಂಪಿಂ ೩೦

ವ॥ ಎಂಬುದುಮಾಂ ಮಹಾಪ್ರಸಾದಮಂತೆಗೆಯ್ವೆನೆಂದೊಡೆನ್ನ ಕೈಯ್ಯ ಕೋಳಮಂ ಕಳೆಯಲ್ವೇೞ್ವುದುಂ

ಕಂ॥ ನಿನ್ನಾಜ್ಞೆಗೋಸುಗಂ ಕೋ
ಳಂ ನೆಲಸಿತ್ತೆನ್ನ ಕರದೊಳಲ್ಲದೆ ಕೇಳಾ
ನಿನ್ನೋರ್ವರ ಬಗೆವೆನೆ ನೋ
ಡೆನ್ನಳವನೆನುತ್ತೆ ನುರ್ಗಿದೆಂ ಪಟುವರನಂ ೩೧

ವ॥ ಅಂತಾ ಕೋಳಮಂ ನುರ್ಗಿ ಕೈಯ್ಗಳಂ ಮುಗಿಯಲೆನ್ನನಾತಂ ಮನ್ನಿಸೆ

ವ॥ ಹಾಗೆ ಓಡಿಹೋಗುವ ಆನೆಯನ್ನು ನೋಡಿ—೨೯. "ಎಲೈ ಮಾವಟಿಗ, ಆನೆಯ ಹೆಸರಿನ ಈ ಹುಳು ನನ್ನ ಮುಂದೆ ಎದುರಿಸಿ ನಿಲ್ಲಲಾರದು. ಮತ್ತೊಂದು ಮದ್ದಾನೆ ಯಿದ್ದರೆ ಕೂಡಲೆ ಕರೆದುಕೊಂಡು ಬಾ. ಅವರ ಶಕ್ತಿಯನ್ನು ತಿಳಿಯುವೆನು." ಎಂದು ಮೂದಲಿಸಿದೆನು. ಅದನ್ನು ಕೇಳಿ ಕಾಮಪಾಲಮಂತ್ರಿಯು ಸಂತೋಷದಿಂದ ನನ್ನ ಮುಖವನ್ನು ನೋಡಿದನು. ವ॥ ಕಾಮಪಾಲನು ನನ್ನನ್ನು ತನ್ನ ಹತ್ತಿರಕ್ಕೆ ಕರೆದು ಹೀಗೆ ಹೇಳಿದನು. ೩೦. ಈ ಕಳ್ಳತನದ ಕಸುಬನ್ನು ತೊರೆದು ಸದಾಚಾರಿಯಾಗಿ ನನ್ನ ಹತ್ತಿರ ಇದ್ದರೆ, ಭೂಲೋಕವು ಹೊಗಳುವಂತೆ ನಿನ್ನನ್ನು ವಿಚಿತ್ರವಾದ ರೀತಿಯಿಂದ ರಕ್ಷಿಸುವೆನು. ವ॥ ಎಂದು ಹೇಳಲು ನಾನು "ಮಹಾಪ್ರಸಾದ, ಹಾಗೆಯೇ ಮಾಡು ವೆನು" ಎಂದೆನು. ಮಂತ್ರಿಯು ಈತನ "ಕೈಕೋಳವನ್ನು ತೆಗೆಯಿರಿ" ಎಂದು ಹೇಳಿದನು. ಆಗ, ೩೧. ನಿನ್ನ ಆಜ್ಞೆಯನ್ನು ಪಾಲಿಸುವುದಕ್ಕಾಗಿ ನನ್ನ ಕೈಯಲ್ಲಿನ್ನೂ ಕೋಳವಿದೆ. ಅಲ್ಲದೆ ಹೋದರೆ ನಾನು ಯಾರನ್ನೂ ಲಕ್ಷಿಸುವುದಿಲ್ಲ. ನನ್ನ ಶಕ್ತಿಯನ್ನು ನೋಡು" ಎಂದು ಹೇಳುತ್ತಾ ಕೈ ಕೋಳವನ್ನು ಚೂರುಚೂರಾಗಿ ಮುರಿದೆನು. ವ॥ ಕೋಳ

ಕಂ॥ ಅಂದು ಮೊದಲಾಗಿ ನೃಪ ಸಚಿ
ವಂ ದಯೆಯಿಂದಾಪ್ತ ಮಿತ್ರಭಾವದಿನೆನ್ನಂ
ಮುಂದಿಟ್ಟುಕೊಂಡು ಸುಖಮೆಸೆ
ವಂದದೊಳೊಲವಿಂ ಸಮಂತು ರಕ್ಷಿಸುತಿರ್ದಂ ೩೨

ವ॥ ಅಂತಿರ್ಪುದುಮಾನೊಂದುದಿನಂ ರಹಸ್ಯ ಸಮಯದೊಳ್ ಸಂತೋಷದಿನಿರ್ಪಾಗಲ್ ಕಾಮಪಾಲಂಗಿಂತೆಂದೆಂ

ಕಂ॥ ನಿಜಗುಣಮಪೂರ್ವಮೆನಸುಂ
ಸುಜನತೆ ಪೊಸತಾವಗಂ ದಯಾಪರತೆ
ಋಜುಮಾರ್ಗಿ ನಲ್ಮೆಯಿಂ ನಿ
ನ್ನ ಜನ್ಮಮಂ ಪೇೞವೇೞ್ಪುದೆನಗಧಿನಾಥಾ ೩೩

ವ॥ ಎಂದಾಂ ಬಿನ್ನಪಂಗೆಯ್ಯಲಾತನಿಂತೆಂದಂ

ಮಗಧಧರಾಧಿನಾಥನೆನಲೊಪ್ಪುವಮ್ಮೈಮೆಯಃ ರಾಜಹಂಸನಾ
ಜಗಮುಱಿಕೂರ್ಪ ಮಂತ್ರಿ ಕುಲಶೇಖರನಪ್ಪ ಸುಮಿತ್ರ ಪುತ್ರನಾಂ
ಮೃಗ ಶಿಶುಲೋಚನಾವ್ಯಸನದಿಂದಿರೆ ಮತ್ಪಿತೃಮಾತೃ ಬಂಧುಗಳ್
ಮಿಗೆಜಡಿದೆನ್ನನೀ ವ್ಯಸನಮಂ ತೊಱೆಯೆಂದರತೀವ ಕೋಪದಿಂ ೩೪

ವ॥ ಅಂತವರೆನ್ನಂ ಜಡಿದೊಡಂ ಕಾಂತಾವ್ಯಸನಮನೆ ಪಿಡಿದಿರ್ಪುದುಂ

ವನ್ನು ಮುರಿದು ಕೈಮುಗಿಯಲು ನನ್ನನ್ನವನು ಗೌರವಿಸಿದನು—೩೨. ಅಂದಿನಿಂದ ಆ ಮಂತ್ರಿಯು ದಯೆಯಿಂದ ಆಪ್ತನಾದ ಗೆಳೆಯನಂತೆ ಎಲ್ಲ ಕೆಲಸಕ್ಕೂ ನನ್ನನ್ನೇ ಮುಂದಿಟ್ಟುಕೊಂಡು ಸುಖವಾಗಿ ಪ್ರೀತಿಯಿಂದ ಕಾಪಾಡುತ್ತಿದ್ದನು. ವ॥ ಹೀಗಿರುವಾಗ ಒಂದು ದಿವಸ ರಹಸ್ಯದಲ್ಲಿ ಸಂತೋಷದಿಂದಿರುವಾಗ ನಾನು ಕಾಮಪಾಲನಿಗೆ (ಹೀಗೆ) ಹೇಳಿದೆನು—೩೩. "ಒಡೆಯನೆ ! ನಿನ್ನ ಗುಣಗಳು ಅಪೂರ್ವವಾದವು. ಯಾವಾಗಲೂ ನಿನ್ನ ಸೌಜನ್ಯ ಹೊಸ ಬಗೆಯದು. ಸದಾ ನಿನ್ನ ದಯಾಪರತ್ವವು ಘನವಾದುದು. ಸರಳ ಮಾರ್ಗದಲ್ಲಿ ನಡೆಯುವವನು. ಪ್ರೀತಿಯಿಂದ ನಿನ್ನ ಜನ್ಮ ವೃತ್ತಾಂತವನ್ನು ನನಗೆ ಹೇಳು." ವ॥ ಎಂದು ನಾನು ವಿಜ್ಞಾಪಿಸಲು ಆತನು (ಕಾಮಪಾಲನು) ಹೇಳಿದನು—೩೪. "ಮಹಾಮಹಿಮೆಯುಳ್ಳ ರಾಜಹಂಸನೆಂಬ ಮಗಧ ದೇಶದ ರಾಜನೊಬ್ಬನಿದ್ದಾನೆ. ಅವನ ಪ್ರಿಯಮಂತ್ರಿ ಕುಲಶೇಖರ. ಅವನಿಗೆ ಒಳ್ಳೆಯ ಗೆಳೆಯರೂ ಮಕ್ಕಳೂ ಇದ್ದಾರೆ. ನಾನು ಎರಳೆಗಣ್ಣಿನ ಹೆಂಗಳ ವ್ಯಸನದಿಂದ ಕಾಲಹಾಕುತ್ತಿದ್ದೆ. ನನ್ನ ತಂದೆ ತಾಯಿ ಮತ್ತು ಬಂಧುಗಳು 'ಈ ವ್ಯಸನವನ್ನು ಬಿಡು' ಎಂದು ಕೋಪಿಸಿಕೊಂಡು ಕಠಿಣವಾಗಿ ಹೇಳಿದರು. ವ॥ 'ಅವರು ಹೀಗೆ ಜರೆದರೂ ನಾನು ಸ್ತ್ರೀವ್ಯಸನ

ಕಂ॥ ಸಚಿವರ ಕುಲಕ್ಕನೀತಿಗ
ಳುಚಿತಮೆ ಕೇಳ್ ಕಾಮಪಾಲ ನಿನ್ನಿಂ ಬಂಧು
ಪ್ರಚಯಂ ಕಿಡುವುದಱಿಂ ನಿ
ನ್ನಚಿತ್ತಮೆಸೆದತ್ತ ಪೋಪುದಿಲ್ಲಿಂದೀಗಳ್ ೩೩

ವ॥ ಎಂದವರೆನ್ನಂ ಪುಷ್ಪಪುರದಿಂ ಪೊರಮಡಿಸೆ

ಕುಲಮಂ ನೋಡದಪಾಯಮಂ ಬಿಡದು ನಿಂದಾಭೀತಿಯಂ ಪೊರ್ದದು
ಜ್ವಲಮಪ್ಪಾಪ್ತರ ವಾಕ್ಯಮಂ ಬಗೆಯಿವಾರೇನೆಂದೊಡಂ ಲಜ್ಜೆಯಿಂ
ತಲೆಯಂಬಾಗದು ದೇಶವಿಭ್ರಮಣದಿಂ ಬೆಂಡಾಗದೊಳ್ವೆತ್ತ ಮೆ
ಯ್ವಲಮಂಪೀರ್ವುದು ಕಾಮಮೆಂದೊಡದನಿನ್ನೇವಣ್ಣಿಪಂಬಣ್ಣಿಪಂ ೩೬

ಕಂ॥ ಅಲ್ಲಿಂ ತಳರ್ದೊರ್ಬನೆ ಅವ
ರೆಲ್ಲರನುೞಿದಧಿಕ ದುಃಖಮಂ ತಳೆದೊಲವಿಂ
ಸಲ್ಲಲಿತಮೆನಿಪ ಕಾಶಿಗೆ
ಮೆಲ್ಲನೆ ಬಂದಿಲ್ಲಿ ಪೊಕ್ಕು ಚರಿಯಿಸುತಿರ್ದೆಂ ೩೭

ಗಾಡಿಯೊಳಂಗನಾತತಿಯುತಂ ತದಿಳೇಶ್ವರಪುತ್ರಿ ತದ್ವನ
ಕ್ರೀಡೆಗೆ ಕೂರ್ತು ಕಾಂತಿಮತಿ ಬಂದಿರಲಾಂಮಿಗೆ ಕಂಡು ಕಾಮನೆ
ಚ್ಚಾಡುವಬಲ್ಸರಲ್ಗೆ ಗುಱಿಯಾಗಿಯನಂಗ ದವಾಗ್ನಿತಾಪದೊಳ್
ಕೂಡಿದೆನಾಕೆಯುಂ ಮದನಚೇಷ್ಟೆಯೊಳೀಕ್ಷಿಸಲೆನ್ನವಕ್ತ್ರಮಂ ೩೮

ದಲ್ಲಿಯೇ ಮುಂದುವರಿದೆನು—೩೫. "ನಿನ್ನ ಈ ಅನೀತಿ ಮಾರ್ಗವು ಸಚಿವರ ವಂಶಕ್ಕೇ ಅನುಚಿತ. ಕಾಮಪಾಲ ! ಕೇಳು, ನಿನ್ನಿಂದ ನಮ್ಮ ಬಂಧುಗಳ ಸಮೂಹವೇ ಕೆಡುವುದು. ಆದುದರಿಂದ ನೀನೀಗ ನಿನಗೆ ಮನಸ್ಸು ಬಂದಕಡೆ ಹೋಗು." ವ॥ ಎಂದು ಹೇಳಿ ಅವನು ನನ್ನನ್ನು ಪುಷ್ಪಪುರದಿಂದ ಹೊರಕ್ಕೆ ಹೊರಡಿಸಿದರು—೩೬. ಕಾಮವೆಂಬುದು ಕುಲವನ್ನು ನೋಡುವುದಿಲ್ಲ. ಅಪಾಯವನ್ನು ಲೆಕ್ಕಿಸುವುದಿಲ್ಲ. ನಿಂದೆಗೆ ಹೆದರುವುದಿಲ್ಲ. ಉಜ್ಜ್ವಲವಾದ ಆಪ್ತರ ಮಾತನ್ನೂ ಗಮನಿಸುವುದಿಲ್ಲ. ಯಾರು ಏನು ಹೇಳಿದರೂ ನಾಚಿಕೆಯಿಂದ ತಲೆತಗ್ಗಿಸುವುದಿಲ್ಲ. ದೇಶಗಳನ್ನು ಅಲೆದರೂ ಶಕ್ತಿಗುಂದುವುದಿಲ್ಲ. ಒಳ್ಳೆಯ ಮೈಬಲವನ್ನು ಹೀರಿ ಹಾಕುತ್ತದೆ. ಕಾಮದ ಪ್ರಭಾವವನ್ನು ಏನೆಂದು ವರ್ಣಿಸೋಣ ! ೩೭. ಅವರೆಲ್ಲರನ್ನೂ ತೊರೆದು ಅಲ್ಲಿಂದ ಒಬ್ಬನೇ ಹೊರಟೆನು. ಅಧಿಕವಾದ ದುಃಖದಿಂದ ನೊಂದೆನು. ಆಮೇಲೆ ಈ ಸುಂದರವಾದ ಕಾಶೀನಗರಕ್ಕೆ ಬಂದು ಅಲ್ಲಲ್ಲಿ ಸಂಚರಿಸುತ್ತಿದ್ದೆನು. ೩೮. ಈ ಕಾಶೀನಗರದ ರಾಜಪುತ್ರಿ ಕಾಂತಿಮತಿಯು ಹಲವಾರು ಸಖಿಯರೊಡನೆ ವನಕ್ರೀಡೆಗಾಗಿ ಬೆಡಗಿನಿಂದ ಬಂದಿದ್ದಳು. ಅವಳನ್ನು ನೋಡಿ ನಾನು ಮದನನ ಬಾಣಗಳಿಗೆ ಗುರಿಯಾದೆನು. ಅವಳೂ ತನ್ನ ಕಾಮವನ್ನರುಹುವ ಚೇಷ್ಟೆಗಳಿಂದ ನನ್ನ ಮುಖವನ್ನು ನೋಡಿದಳು. ಅದರಿಂದ ನಾನು

ವ॥ ಅಂತವಳಂ ಕಂಡಾಂ ಕಾಮವಶಗತನಾಗಿ ಬಳಿಯಂ

ಒಂದಾನೊಂದುಮುಪಾಯದಿಂ ಯುವತಿಯಿರ್ಪಂತಃಪುರಕ್ಕೆಯ್ದಿಸಾ
ನಂದಂ ತತ್ಸತಿಯೊಳ್ ಮನೋಜ ವಿವಿಧ ಕ್ರೀಡಾನುರಾಗಾಬ್ಧಿಯೊಳ್
ಸಂದಿರ್ಪನ್ನೆಗಮಾಕೆಗೆನ್ನದೆಸೆಯಿಂ ಗರ್ಭಂನಿಲಲ್ ನಾಡೆ ಪೆಂ
ಪಿಂದಂ ನಿತ್ಯರಹಸ್ಯ ಸೌಖ್ಯದೊದವಂ ತಾಳ್ದಿರ್ದೆನಿರ್ಪನ್ನೆಗಂ ೩೯

ವ॥ ಕೆಲವಾನುಂ ದಿವಸಕ್ಕೆ ಕಾಂತಿಮತಿಗೆ ಪೂರ್ಣಗರ್ಭವಾಗಿ ಕುಮಾರನಂ ಪಡೆದು

ಕಂ॥ ಮಾತೃಪಿತೃಬಂಧು ಗೋತ್ರಜ
ಭೀತಿಯೊಳಬ್ಜಾಕ್ಷಿ ಕಾಂತಿಮತಿ ಪೆತ್ತತನೂ
ಜಾತನನಾಗಳೆ ಮೃತಸಂ
ಜಾತಂ ತಾನಾದನೆಂದು ಬಿಸುಡುವ ಬಗೆಯಿಂ ೪೦

ವ॥ ಒರ್ಬ ವೃದ್ಧೆಯ ಕೆಯ್ಯೊಳ್ ಕೂಸಂ ಕೊಟ್ಟದಂ ಶ್ಮಶಾನದೊಳ್ ಬಿಸುಟ್ಟು ಬಾಯೆಂದೊಡವಳ್ ಅಂತೆಗೆಯ್ವೆನೆಂದು ಕೊಂಡು ಪೋಗಿ ಬಿಸುಡೆ

ಸುರತರುವಿಂ ಪೊದಟ್ಟಿ ತನಿವಣ್ಣುಡಿದುರ್ವಿಗೆ ಬಿಟ್ಟುದೋ ವಿಯ
ಚ್ಚರಿಯರ ವೇಣಿಯಿಂ ಜಗುಟ್ಟಿ ತೊಂಡಲದಂಡೆಯೊ ಭಾವಿಸಲ್ಕೆ ಭಾ
ಸ್ಕರನ ಕರಾಬ್ಜದಿಂದಿಳೆಗೆ ಬಿಟ್ಟರುಣಾಬ್ಜಮೊ ಪೇಟಿನಲ್ಕೆ ತ
ತ್ಪುರದೆಸೆವ ಶ್ಮಶಾನದೊಳದೇನೆಸೆದಿರ್ದನೊ ತತ್ಕುಮಾರಕಂ ೪೧

ಮದನನೆಂಬ ಕಾಳ್ಕಿಚ್ಚಿನ ತಾಪದಲ್ಲಿ ಬೆಂದೆನು. ವ॥ ಹಾಗೆ ಅವಳನ್ನು ನೋಡಿ ನಾನು ಕಾಮಕ್ಕೆ ವಶನಾದೆನು. ಬಳಿಕ—೩೯. ಯಾವುದೋ ಒಂದು ಉಪಾಯದಿಂದ ಆ ತರುಣಿಯ ಅಂತಃಪುರಕ್ಕೆ ಹೋದೆನು. ಆನಂದದಿಂದ ಆ ಸತಿಯೊಡನೆ ವಿವಿಧ ಮದನ ಕ್ರೀಡೆಗಳನ್ನಾಡಿ ಅನುರಾಗದ ಸಮುದ್ರದಲ್ಲಿ ಮುಳುಗಿದೆನು. ಕೆಲವು ದಿವಸಗಳಲ್ಲಿ ಆಕೆಯು ನನ್ನಿಂದ ಗರ್ಭವತಿಯಾದಳು. ಆದರೂ ನಾನು ಬಹುಕಾಲ ರಹಸ್ಯವಾಗಿ ಅವಳೊಡನೆ ಸುಖವನ್ನನುಭವಿಸುತ್ತಿದ್ದೆನು. ವ॥ ಮತ್ತೆ ಕೆಲವು ದಿನಗಳು ಕಳೆದ ಮೇಲೆ ಕಾಂತಿಮತಿಯು ಪೂರ್ಣ ಗರ್ಭಿಣಿಯಾಗಿ ಕುಮಾರನೊಬ್ಬನನ್ನು ಪಡೆದಳು. ೪೦. ತಾಯಿ ತಂದೆ ಬಂಧು ಮತ್ತು ದಾಯಾದಿಗಳ ಹೆದರಿಕೆಯಿಂದ ಕಾಂತಿಮತಿಯು ಹೆತ್ತಮಗುವನ್ನು ಸತ್ತಮಗು ಹುಟ್ಟಿತೆಂದು ಹೇಳಿ ಬಿಸುಡಲು ನಿಶ್ಚಯಿಸಿದಳು. ವ॥ ಒಬ್ಬ ಮುದುಕಿಯ ಕೈಯಲ್ಲಿ ಮಗುವನ್ನು ಕೊಟ್ಟು ಅದನ್ನು ಮಸಣದಲ್ಲಿ ಬಿಸಾಡಿಬಾ ಎಂದು ಹೇಳಿದಳು. ಅವಳೂ 'ಹಾಗೆಯೇ ಆಗಲಿ' ಎಂದು ಹೇಳಿ ಬಿಸಾಡಿಬಂದಳು— ೪೧. "ಕಲ್ಪವೃಕ್ಷದಿಂದ ನೆಲದ ಮೇಲೆ ಕಳಚಿಬಿದ್ದ ರಸಭರಿತವಾದ ಹಣ್ಣೋ ! ಆಕಾಶ ಚಾರಿಣಿಯರಾದ ದೇವಾಂಗನೆಯರ ಜಡೆಯಿಂದ ಜಾರಿದ ಹೂ ದಂಡೆಯೋ ! ಸೂರ್ಯನ ಕರಕಮಲದಿಂದ ನೆಲಕ್ಕುದುರಿದ ಕೆಂದಾವರೆಯೋ ! ಹೇಳು." ಎನ್ನುವಂತೆ

ವ|| ಅಂತಿರ್ದ ಕುಮಾರಕನಂ ಬಿಸುಟ್ಟು ವೃದ್ಧೆಯೊರ್ಬಳೆ ರಾತ್ರಿಯೊಳ್ ಬರುತಿರ್ಪಾಗಳ್

ಕಂ|| ಪುರರಕ್ಷಕರೆಣ್ದೆಸೆಯೊಳ್
ಪರಿಪರಿದಾರೈದು ಕಂಡರಂ ಬಹುವಿಧದಿಂ
ಪರಿಭವಿಸುತಿರ್ಪ ಸಮಯದೊ
ಳರವರಿಸದೆ ಬರ್ಪ ವೃದ್ಧೆ ಸಿಲ್ಕಿದಳಾಗಲ್ ೪೨

ವ|| ಅಂತವಳ್ ಸಿಲ್ಕಲವಳಂ ಬಹುಪ್ರಕಾರದಿಂದಂ ದಂಡಿಸಿ ಈ ರಾತ್ರಿಯೊಳೆಲ್ಲಿಗೆ ಪೋದೆಯೆಂದು ಕೇಳ್ದೊಡವಳನೇಕ ವಿಧದಿಂ ವಂಚಿಸಿ ದಂಡನೆಗಾಱದೆ ಬಱಿಕಿಂತೆಂದಳ್

ನೃಪನಂದನೆ ತನಗುದಯಿಸಿ
ದ ಪುತ್ರನಂ ರುದ್ರಭೂಮಿಯೊಳ್ ಬಿಸುಟು ಬರಲ್
ಕೃಪೆಯಿಲ್ಲದೆನ್ನನಟ್ಟಿದ
ಳಪರಾಧಂ ಬಂದುದೆನಗೆ ವಿಧಿವಶದಿಂದಂ ೪೩

ವ|| ಎಂದೊಡೆ ರಾಜಕನ್ಯೆ ಯಾವನಿಂದಂತರ್ವತ್ನಿಯಾದಳೆಂದವರ್ ಬೆಸಗೊಳೆ

ಕಂ|| ಎನ್ನೊಡನೆ ಬಂದೊಡೀಗಳೆ
ಕನ್ನೆಗೆ ಪೊಕ್ಕವನನೊಲ್ದು ತೋಱಿದಪೆಂ ನೀ
ವೆನ್ನಂ ಬಿಡಿ ಪರಸೇವೆಯೊ
ಳೆನ್ನರುಮೇನಾಗರೆನ್ನ ಬಡಿವರಮೇನೊ ೪೪

ಆ ನಗರದ ಶ್ಮಶಾನದಲ್ಲಿ ಎಸೆದಿದ್ದ ಆ ಕುಮಾರನು ಪ್ರಕಾಶಿಸಿದನು. ೪೨. ಹಾಗಿದ್ದ ಕುಮಾರನನ್ನು ಬಿಸುಟು ಮುದುಕಿಯೊಬ್ಬಳೇ ರಾತ್ರಿಯಲ್ಲಿ ಬರುತ್ತಿದ್ದಾಗ—೪೨. ಎಂಟು ದಿಕ್ಕುಗಳಿಂದಲೂ ನಗರ ರಕ್ಷಕರು ಬಂದು ಬೀದಿಯಲ್ಲಿ ಕಂಡವರನ್ನೆಲ್ಲ ಹಿಡಿದು ಪರಿಪರಿಯಿಂದ ವಿಚಾರಿಸುತ್ತ ಕಾಡುತ್ತಿದ್ದರು. ಆಗ ಬೇಗ ಬೇಗ ಬರುತ್ತಿದ್ದ ಮುದುಕಿಯು ಅವರ ಕೈಗೆ ಸಿಕ್ಕಿಬಿದ್ದಳು. ವ|| ಅವರು ಸಿಕ್ಕಿಬಿದ್ದ ಇವಳನ್ನು ಅನೇಕ ವಿಧವಾಗಿ ದಂಡಿಸಿ 'ಈ ರಾತ್ರಿಯ ಹೊತ್ತು ನೀನೆಲ್ಲಿಗೆ ಹೋಗುತ್ತಿದ್ದಿಯೆ' ಎಂದು ಕೇಳಿದರು. ಅವಳು ಅನೇಕ ರೀತಿಯಿಂದ ತಪ್ಪಿಸಿದರೂ ದಂಡನೆಯನ್ನು ತಡೆಯಲಾರದೆ ಬಳಿಕ ಹೇಳಿದಳು. ೪೩. ರಾಜಕುಮಾರಿಯು ತನಗೆ ಹುಟ್ಟಿದ ಮಗನನ್ನು ಶ್ಮಶಾನದಲ್ಲಿ ಎಸೆದು ಬಾ ಎಂದು ದಯೆಯಿಲ್ಲದೆ ಹೇಳಿ ನನ್ನನ್ನು ಕಳುಹಿಸಿದಳು. ವಿಧಿವಶದಿಂದ ನಾನೀ ಅಪರಾಧಕ್ಕೆ ಗುರಿಯಾದೆನು. ವ|| ಅದನ್ನು ಕೇಳಿ ರಾಜಕುಮಾರಿಯು ಯಾರಿಂದ ಗರ್ಭಿಣಿಯಾದಳೆಂದು ಅವರು ಕೇಳಿದರು. ೪೪. ನನ್ನೊಡನೆ ಈಗಲೇ ಬನ್ನಿರಿ. ಕನ್ಯೆಯೊಡನೆ ಕೂಡಿದವನನ್ನು ತೋರಿಸುವೆನು. ನೀವು ನನ್ನನ್ನು ಬಿಡಿರಿ. ಪರಸೇವೆಯಲ್ಲಿ ನನ್ನಂಥವರು ಏನು ಬೇಕಾದರೂ ಆಗಬಹುದು. ಇದರಲ್ಲಿ ನನ್ನ ಬಿಗಾಜಂಭವೇನೂ

ವ॥ ಎಂದವರನೊಡಗೊಂಡು ಬಂದು

ಕಂ॥ ನವರತ್ನ ಖಚಿತ ಕೃತಕಾ
ದ್ರಿ ವಿಳಾಸಗೃಹಾಂತದಲ್ಲಿ ಪಟ್ಟಿರ್ದೆನ್ನಂ
ತವಕದೊಳಾ ವೃದ್ಧಾಂಗನೆ
ಯವಿನೀತರೆನಿಪ್ಪವರ್ಗೆ ತೋಱಿದಳಾಗಳ್ ೪೫

ವ॥ ಅಂತು ತೋಱಲೊಡಂ

ಕಂ॥ ಉಪವನದ ಲತೆಗಳಂ ಪಱಿ
ದು ಪವಡಿಸಿರ್ದೆನ್ನನೀೞ್ದು ಕಟ್ಟಿ ಬೞಿಕ್ಕೊ
ಯ್ದುಪರೋಧಿಸಿ ಕನ್ಯಾ ಚೌ
ರ್ಯಪಾತಕಂ ದಂಡ್ಯನೆಂದವರ್ ಕಡುಮುಳಿಸಿಂ ೪೬

ಊರಿಂ ಪೊಱಗುಯ್ದಾಗಳ್
ಕೂರಸಿಯಿಂದಿವನ ತಲೆಯನರಿಯೆಂದೊರ್ಬಂ
ಕ್ರೂರಾತ್ಮನ ಕಯ್ಗೆನ್ನಂ
ಬೇರದೊಳಿತ್ತವರ್ಗಳತ್ತ ಪೋದರ್ ಬೞಿಯಂ ೪೭

ವ॥ ಅಂತವರ್ ಅತ್ತ ಪೋದರ್ ಇತ್ತಲಾ ಮಾದಿಗನೆನ್ನಂ ಚಾವಟಕ್ಕೆ ತಂದು

ಕಂ॥ ಪರಸುಪರಸೆಲವೊ ಕಾಶೀ
ಪುರೇಶನಂ ನೀಡು ಗೋಣನೆಂಬಾಗಳ್ ನಿ
ರ್ಭರ ಸತ್ವದಿನಾನುರ್ಬಲ್
ಭರದಿಂ ಕಟ್ಟಿರ್ದಬಳ್ಳಿ ಪಱಿದುದು ಬೇಗಂ ೪೮

ಇಲ್ಲ." ವ॥ ಎಂದು ಹೇಳಿ ಅವರನ್ನು ಜೊತೆಯಲ್ಲಿ ಕರೆದುಕೊಂಡು ಬಂದು—೪೫. ನವರತ್ನ ಖಚಿತವಾದ ಕೃತಕವಾದ ಕ್ರೀಡಾ ಪರ್ವತದಲ್ಲಿದ್ದ ವಿಲಾಸಗೃಹದಲ್ಲಿ ಮಲಗಿದ್ದ ನನ್ನನ್ನು ಆ ಮುದುಕಿಯು ಆಗ ಆ ದುಷ್ಟ ನಗರರಕ್ಷಕರಿಗೆ ತೋರಿಸಿದಳು. ವ॥ ಹಾಗೆ ತೋರಿಸಲು ಆಗಲೇ—೪೬. ಉದ್ಯಾನವನದ ಬಳ್ಳಿಗಳನ್ನು ಹರಡಿಕೊಂಡು ಮಲಗಿದ್ದ ನನ್ನನ್ನು ಸೆಳೆದು ಕಟ್ಟಿದರು. ಬಳಿಕ ಹಿಂಸಿಸಿ 'ಕನ್ಯೆಯನ್ನು ಕಳವು ಮಾಡಿದ ಪಾಪಿ. ಇವನು ದಂಡನೆಗೆ ಅರ್ಹ' ಎಂದು ಅವರು ತುಂಬ ಕೋಪದಿಂದ ೪೭. 'ಊರಿನಿಂದ ಹೊರಕ್ಕೆ ಕರೆದುಕೊಂಡು ಹೋಗಿ ಹರಿತವಾದ ಕತ್ತಿಯಿಂದ ಇವನ ತಲೆಯನ್ನು ಕತ್ತರಿಸಿರಿ' ಎಂದು ಹೇಳಿ ಅವರು ವೈರದಿಂದ ನನ್ನನ್ನು ಒಬ್ಬ ಕ್ರೂರಿಯ ಕೈಗೆ ಒಪ್ಪಿಸಿ ಅತ್ತ ಹೋದರು. ವ॥ ಹಾಗೆ ಅವರತ್ತ ಹೋದರು. ಇತ್ತ ಆ ಮಾದಿಗನು ನನ್ನನ್ನು ನಾಲ್ಕು ರಸ್ತೆಗಳು ಸೇರುವ ಸ್ಥಳಕ್ಕೆ ತಂದನು. ೪೮. "ಎಲವೋ! ಈ ಕಾಶೀಪುರದೊಡೆಯನಾದ ಶಿವನನ್ನು ಧ್ಯಾನಮಾಡು. ಕೊರಳನ್ನು ನೀಡು" ಎಂದು ಹೇಳಿದನು. ಆಗ ನಾನು ಅತಿಶಯವಾದ ಶಕ್ತಿಯಿಂದ ಉಬ್ಬಿದೆನು. ಕೂಡಲೇ ಕಟ್ಟಿದ್ದ ಬಳ್ಳಿಗಳೆಲ್ಲ

ವ॥ ಅಂತು ಪಱಿಯಲೊಡಂ

ಕಂ॥ ಆ ಮಾದಿಗನಸಿಯುಂ ಕೊಂ
ಡೀಮಾತವನಂ ದುರಾತ್ಮನಂ ಪೊಡೆದು ಮನಃ
ಪ್ರೀಮದಿನಲ್ಲಿಂ ತಳರ್ದಟ
ವೀ ಮಧ್ಯಮನೆಯ್ದಿದೆಂ ಪಥಭ್ರಮೆಯಿಂದಂ ೪೯

ಇನಶಶಿರಶ್ಮಿ ಸಂತತಿಗಗೋಚರಮಪ್ಪ ಮಹಾಂಧಕಾರಸಂ
ಜನಿತ ಲತಾಳಿಗುಲ್ಮತರು ಸಂಕುಲದಿಂದೆ ಶರಾರು ಘೋರ ಕಾ
ನನ ಮೃಗರಾಜಿಯಿಂದತಿ ಭಯಂಕರಮಪ್ಪಟವೀ ನಿವಾಸಮಂ
ಮನಮೊಸೆದೆಯ್ದಿದೆಂ ಪಥಪರಿಭ್ರಮೆಯಿಂ ಪಡೆದೊರ್ಬನಾಕ್ಷಣಂ ೫೦

ವ॥ ಅಂತಯ್ದಿವಪಾರ್ಗಳಲ್ಲಿ

ದಿವ್ಯಮಧುವೊರ್ವಳೊಲ್ದಲ
ಸದ್ವ್ಯೋಮದಿನವನಿಗೆಯ್ದಿಯಂಜಲಿ ಕರದಿಂ
ಶ್ರವ್ಯವಚನಂಗಳಿಂದತಿ
ನವ್ಯಾಕೃತಿಯೆನ್ನ ಸಮ್ಮುಖಕ್ಕೊಪ್ಪಿರ್ದಳ್ ೫೧

ಕಂ॥ ವಿಳಸನ್ಮುಕ್ತಾಗ್ರಹಾರಂ ಸುಲಲಿತ ನವಮಂದಾರ ಪುಷ್ಪಾವತಂ ಸಂ
ದಳಿತ ಶ್ವೇತಾಬ್ಜನೇತ್ರಂ ಘಟಕುಚಯುಗಳಂ ಚಿತ್ರಕಾಂಚೀನಿತಂಬ
ಸ್ಥಳಮುದ್ಯದ್ವಲ್ಲಕೀ ರಂಜಿತಕರಮೊಸಸುಂ ತನ್ನೊಳೊಪ್ಪಲ್ಕೆ ಹಸ್ತಾಂ
ಜಳಿಯಿಂ ಬಂದೊರ್ಬ ದಿವ್ಯಾಂಗನೆ ಭರವಸದಿಂದೆನ್ನಿದಿರ್ಗಾಗಿ ನಿಂದಳ್ ೫೨

ಬೇಗ ಕಿತ್ತು ಹೋದುವು. ವ॥ ಹಾಗೆ ಹರಿಯಲು ಕೂಡಲೆ—೪೯. ಆ ಮಾದಿಗನ ಕತ್ತಿಯನ್ನೇ ತೆಗೆದುಕೊಂಡು ಆ ದುರಾತ್ಮನನ್ನು ಕೊಂದೆನು, ಬಳಿಕ ಸಂತೋಷದಿಂದ ಅಲ್ಲಿಂದ ಹೊರಟು ದಾರಿತಪ್ಪಿ ಕಾಡಿನ ಮಧ್ಯಕ್ಕೆ ಬಂದೆ. ೫೦. ಸೂರ್ಯ ಚಂದ್ರರ ಕಿರಣಗಳೂ ಬೀಳದೆ ಘೋರವಾದ ಕತ್ತಲೆಯು ಹರಡಿ ಬಳ್ಳಿ, ಪೊದರು, ಮರ ಇವ್ಯಾವುದೂ ಕಾಣುತ್ತಿರಲಿಲ್ಲ. ಕ್ರೂರಿಗಳಾದ ಭಯಂಕರ ವನ್ಯಮೃಗಗಳ ಗುಂಪಿನಿಂದ ಆ ಕಾಡು ಅತಿ ಭಯಂಕರವಾಗಿದ್ದಿತು. ಇಂಥ ಕಾಡನ್ನು ದಾರಿತಪ್ಪಿ ಒಬ್ಬನೇ ಆಗ ಸಂತೋಷದಿಂದ ಪ್ರವೇಶಿಸಿದೆನು. ವ॥ ಹಾಗೆ ಬರುತ್ತಿರುವಾಗ—೫೧. ದೇವಾಂಗನೆಯೊಬ್ಬಳು ರಮಣೀಯವಾದ ಆಕಾಶದಿಂದ ಭೂಮಿಗೆ ಇಳಿದು ಬಂದಳು. ಕೈಗಳನ್ನು ಜೋಡಿಸಿಕೊಂಡು ಮಧುರವಾದ ನುಡಿಗಳಿಂದ ಸುಂದರವಾಗಿ ನನ್ನ (ಕಾಮಪಾಲನ) ಮುಂದೆ ನಿಂತಳು. ೫೨. ಆ ದಿವ್ಯಾಂಗನೆಯು ಕೈಗಳನ್ನು ಮುಗಿದುಕೊಂಡು ಹರ್ಷದಿಂದ ನನ್ನ ಮುಂದೆ ಬಂದು ನಿಂತಳು. ಅವಳು ಹೊಳೆಯುವ ಮುತ್ತಿನಹಾರವನ್ನು ಧರಿಸಿದ್ದಳು. ಅಂದವಾದ ಮಂದಾರ ಕುಸುಮಗಳ ದಂಡೆಯನ್ನು ತಲೆಯಲ್ಲಿ ಮುಡಿದಿದ್ದಳು. ಅವಳ ಕಂಗಳು ಅರಳಿದ ಬೆಳ್ದಾವರೆಯಂತಿದ್ದುವು ಸ್ತನಗಳು ಘಟಗಳಂತೆ ತೋರವಾಗಿದ್ದುವು. ಸೊಂಟದಲ್ಲಿ ಸುಂದರವಾದ ಒಡ್ಯಾಣವನ್ನು ಹಾಕಿಕೊಂಡಿದ್ದಳು.

ಅವತಂಸೀಕೃತ ಪಾರಿಜಾತಸುಮನ ಸೌರಭ್ಯಮಾಶಾನಿಕಾ
ಯುವನೆಯ್ದಲ್ ಪರಿವಾದಿನೀ ಮೃದುರವಂ ಮಾಧುರ್ಯಮಂ ಸಾಲಿಡಲ್
ಧವಳಾಪಾಂಗಮರೀಚಿ ಸಂತತ ಸುಧಾ ಸಂವೃಷ್ಟಿಯಂ ಬೀಱಲೊ
ಪ್ಪುವ ದಿವ್ಯಾಂಗನೆ ಭೋಂಕೆನಲ್ ವನದೊಳಂದೆಯ್ತಂದಳಾನಂದದಿಂ ೫೩

ವ॥ ಅಂತೆನ್ನ ಸಂಮುಖಕ್ಕೆ ಬಂದವಳಂ ನೀನಾರ್ಗೆಯೆಂದು ಕೇಳಲೊಡಂ

ಕಂ॥ ತಿಳಿ ಮಾಣಿಭದ್ರನಾತ್ಮಜೆ
ವಿಳಸಿತಗಂಧರ್ವಕುಲ ಸಮುದ್ಭವೆ ತಾರಾ
ವಳಿಯೆಂಬಳಗಸ್ತ್ಯಾಶ್ರಮ
ದೊಳಗಿಂ ಪೊಱಮಟ್ಟು ಬರುತುಮಿರ್ಪವಸರದೊಳ್ ೫೪

ಈ ವಾರಾಣಸಿಯ ಪಿತೃವನ
ದೋವರಿಯೊಳ್ ಶಿಶುವದೋಂದಟುತ್ತಿರೆ ಕಂಡಾ
ನೋವಿ ಪದೆದೆತ್ತಿಕೊಂಡು ಮ
ಹಾವಿಭವದಿನೆಯ್ದಿದೆಂ ಕುಬೇರನ ಸಭೆಯಂ ೫೫

ಕನಕದಭಿತ್ತಿ ಪೊನ್ನ ಪೊಸಕಂಭಮುದಂಚಿತಹೇಮಭೂಮಿ ಕಾಂ
ಚನಮಯಗೋಪುರಂ ನವಸುವರ್ಣದ ವೇದಿಕೆ ಶಾತಕುಂಭ ಸಂ
ಜನಿತಸಮುಲ್ಲಸತ್ಕಳಶವೊಪ್ಪುವ ಓಲಗ ಸಾಲೆಯೊಳ್ ಕರಂ
ಧನಪತಿ ರಂಜಿಸಿರ್ದನಮರೀಚಯಮಿಕ್ಕುವ ಚಾಮರಂಗಳಿಂ ೫೬

ಕೈಗಳಲ್ಲಿ ವೀಣೆಯನ್ನೆತ್ತಿ ಹಿಡಿದಿದ್ದಳು. ಹೀಗೆ ಅವಳು ಆಕರ್ಷಕಳಾಗಿದ್ದಳು. ೫೩. ಪ್ರಕಾಶಮಾನಳಾದ ಆ ದಿವ್ಯಾಂಗನೆ ಆ ವನದಲ್ಲಿ ಆನಂದದಿಂದ ಬಂದಳು. ಆಗ ಅವಳ ತಲೆಯಲ್ಲಿ ಮುಡಿದುಕೊಂಡಿದ್ದ ಪಾರಿಜಾತ ಪುಷ್ಪದ ಪರಿಮಳವು ದಿಕ್ಕುಗಳಿಗೆಲ್ಲ ಹರಡಿತ್ತು. ವೀಣೆಯ ಇಂಚರದ ಮಾಧುರ್ಯವು ಸಾಲಿಡುತ್ತಿತ್ತು. ಬಿಳುಪಾದ ಕಟಾಕ್ಷಗಳ ಕಾಂತಿಯೆಂಬ ಅಮೃತದ ಮಳೆಯು ಹರಡುತ್ತಿತ್ತು. ವ॥ ನನ್ನೆದುರಿಗೆ ಬಂದ ಅವಳನ್ನು 'ನೀನಾರು ?' ಎಂದು ಕೇಳಿದೆನು—೫೪. "ನಾನು ಮಣಿಭದ್ರನ ಮಗಳು. ಗಂಧರ್ವ ಕುಲದಲ್ಲಿ ಹುಟ್ಟಿದವಳು. ನನ್ನ ಹೆಸರು ತಾರಾವಳಿಯೆಂದು. ಅಗಸ್ತ್ಯರ ಆಶ್ರಮದಿಂದ ಬರುತ್ತಿರುವಾಗ ೫೫. ಈ ವಾರಾಣಸಿಯ ಶ್ಮಶಾನದ ಪಕ್ಕದಲ್ಲಿ ಬಂದು ಅಳುತ್ತಿರುವ ಮಗುವನ್ನು ಕಂಡೆನು. ಪ್ರೀತಿಯಿಂದ ಅದನ್ನೆತ್ತಿಕೊಂಡು ವೈಭವದಿಂದ ಕುಬೇರನ ಸಭೆಗೆ ಹೋದೆನು ೫೬. ಚಿನ್ನದ ಗೋಡೆ, ಚಿನ್ನದ ಹೊಸ ಕಂಭಗಳು, ಎತ್ತರಿಸಿದ ಚಿನ್ನದ ನೆಲ, ಚಿನ್ನದ ಗೋಪುರ, ಹೊಸ ಹೊನ್ನಿನ ಜಗಲಿ, ಚಿನ್ನದ ಹೊಳೆಯುವ ಕಲಶಗಳು–ಇವುಗಳಿಂದ ಪ್ರಕಾಶಮಾನವಾದ ಸಭಾಮಂದಿರದಲ್ಲಿ ಕುಳಿತು ಕುಬೇರನು ರಂಜಿಸುತ್ತಿದ್ದನು. ದೇವತಾಸ್ತ್ರೀಯರು ಚಾಮರಗಳನ್ನು ಬೀಸು

ಕಿನ್ನರಸಂಕುಳಂ ಜಯಜಯಧ್ವನಿಯಿಂ ಪರಿವೇಷ್ಟಿಸಿರ್ಪಿನಂ
ರನ್ನದಪಚ್ಚ ಮಚ್ಚರಿಯೆನಲ್ ಮಿಗೆ ದೇಹದೊಳೊಪ್ಪುತಿರ್ಪಿನಂ
ಸೋನ್ನತಹೇಮ ವಿಷ್ಟರದೊಳಿರ್ದನ ಶೇಷದಿಶಾಧಿಪೋತ್ತಮಂ
ಪನ್ನಗಭೂಷಣ ಪ್ರಿಯಸಖಂ ಮನವೊಲ್ದಳಕಾಪುರೀಶ್ವರಂ ೫೭

ವ॥ ಅಂತೆಸೆವ ಕುಬೇರನೋಲಗಕ್ಕಾ ಶಿಶುಸಹಿತಂ ಪೋಗಲಾತನೆನ್ನಂ ಕಂಡು

ಕಂ॥ ಈ ಹಸುಳೆಯಲ್ಲಿ ನಿನ್ನಯ
ಮೋಹಂ ಬಗೆಗೆಂತು ತೋರ್ಪುದಿಂದೊಲವಿಂ ನರ
ವಾಹನನೆನ್ನಂ ಕೇಳಲ್
ದೇಹಜನೆಂಬಂತೆ ತೋರ್ಪುದೆಂದೆನಲಂಪಿಂ ೫೮

ವ॥ ಎಂದೊಡುಳ್ಳುದಂ ಪೇಳ್ದೆಯೆಂದಾತನಾ ಶಿಶುವಿನ ವೃತ್ತಾಂತಮಂ ಪೇಳಲ್ ತಗುಳ್ದನದೆಂತೆನೆ

ವಿನಯವಿಳಾಸಿ ಕೇಳ್ನಿನಗೆ ಶೌನಕಶೂದ್ರಕ ಕಾಮಪಾಲನೆಂ
ಬನುಪಮನಾಮಮಂ ತಳೆದ ಮೂಱುಭವಂ ನಿನಗೊಪ್ಪಲೈವರಂ
ಗನೆಯರವರ್ಗೆ ನಿನ್ನೊಡನೆ ಮೂಱುಭವಂಗಳೊಡರ್ಚೆ ಮೂಱು ಮೂ
ಱುನಯವಪ್ಪನಾಮಮವರ್ಗಾದಪುದೆಂದುಸಿರ್ದಂ ಧನೇಶ್ವರಂ ೫೯

ತ್ತಿದ್ದರು. ೫೭. ಕಿನ್ನರರ ಗುಂಪು ಜಯ ಜಯ ಎಂದು ಹೇಳುತ್ತಾ ಸುತ್ತಿಕೊಂಡಿದ್ದರು. ಅವನ ಮೈಮೇಲೆ ರತ್ನದಾಭರಣಗಳು ಹೊಳೆಯುತ್ತಿದ್ದುವು. ಶಿವನ ಪ್ರಿಯಮಿತ್ರನೂ ದಿಕ್ಪಾಲನೂ ಆದ ಅಲಕಾಪುರಿಯೊಡೆಯನು ಆನಂದದಿಂದ ಎತ್ತರವಾದ ಸಿಂಹಾಸನದ ಮೇಲೆ ಕುಳಿತಿದ್ದನು. ವ॥ ಹಾಗೆ ಪ್ರಕಾಶಿಸುತ್ತಿದ್ದ ಕುಬೇರನ ಆಸ್ಥಾನಮಂಟಪಕ್ಕೆ ಆ ಮಗುವಿನೊಡನೆ ಹೋದೆನು. ಅವನು ನನ್ನನ್ನು ನೋಡಿ—೫೮. 'ಈ ಮಗುವಿನಲ್ಲಿ ನಿನಗಿರುವ ಪ್ರೀತಿಯು ನಿನ್ನ ಮನಸ್ಸಿಗೆ ಹೇಗೆ ತೋರುತ್ತದೆ ?' ಎಂದು ಕುಬೇರನು ನನ್ನನ್ನು ಕೇಳಿದನು. 'ನನ್ನ ದೇಹದಿಂದ ಹುಟ್ಟಿದವನೆಂದೇ ನನಗೆ ತೋರುತ್ತಿದೆ.' ಎಂದು ನಾನು ಹೇಳಿದೆನು. ವ॥ 'ಇದ್ದದ್ದನ್ನೇ ನೀನು ಹೇಳಿದೆ' ಎಂದು ಅವನು ಆ ಶಿಶುವಿನ ವೃತ್ತಾಂತವನ್ನು ಹೇಳಲು ಪ್ರಾರಂಭಿಸಿದನು. ಅದು ಹೇಗೆಂದರೆ—೫೯. 'ವಿನಯವುಳ್ಳ ವಿಲಾಸಿಯೇ ಕೇಳು, ನಿನಗೆ (ಕಾಮಪಾಲನಿಗೆ) ಶೌನಕ, ಶೂದ್ರಕ, ಕಾಮಪಾಲ ಎಂದು ಮೂರುಜನ್ಮ. ಐವರು ಹೆಂಡತಿಯರು. ನಿನ್ನೊಡನೆ ಮೂರುಜನ್ಮಗಳನ್ನು ಕಳೆಯಲು ಅವರಿಗೆ ಮೂರು ಮೂರು ಹೆಸರುಗಳಾದುವು.' ಎಂದು ಕುಬೇರನು ಹೇಳಿ

ವ॥ ಅದೆಂತೆನೆ

ಕಂ॥ ಕ್ರಮದಿಂದೆ ಬಂಧುಮತಿ ವೇ
ದಿಮತಿ ಕರಂ ಚೆಲ್ವನಪ್ಪ ಹಂಸಾವಳಿಯುಂ
ತ್ತ್ರಮನಂದಿನಿ ಗೋಪ ಕುಮಾ
ರಿ ಮುಖ್ಯಮಾದಯ್ವರುಂ ಭವದ್ವಧುವಾದರ್ ೬೦

ವ॥ ಅಂತವರ್ಗೆ ನಿನ್ನ ಮೊದಲಜನ್ಮದ ಶೌನಕಾವಸ್ಥೆಯಲ್ಲಿ ಬಂಧುಮತಿ ಎರಡನೆಯ ಶೂದ್ರಕಾವಸ್ಥೆಯಲ್ಲಿ ವಿನಯವತಿ, ಮೂಱನೆಯ ಕಾಮಪಾಲಾವಸ್ಥೆಯಲ್ಲಿ ಕಾಂತಿಮತಿಯೆಂಬ ಮೂಱುಜನ್ಮಂ ಬಂಧುಮತಿಯೊರ್ಬಳಾಗ್ದುವು ಆ ಕ್ರಮದಿಂ ಮಿಕ್ಕ ನಾಲ್ವರ್ಗಂ ವೇದಿಮತಿ ಯಜ್ಞದಾಸಿ ಕಾಮದೇವಿ ಹಂಸಾವಳಿ ಶೂರಸೇನಿ ಸುಲೋಚನೆ ನಂದಿನಿ ರಂಗಪತಾಕೆ ಇಂದ್ರಸೇನೆ ಗೋಪಕುಮಾರಿ ಆರ್ಯದಾಸಿ ತಾರಾವಳಿ ಎಂದೀ ಕ್ರಮದಿಂ ಸ್ತ್ರೀಯರಾದರಪ್ಪುದಱಿಂ

ಕಂ॥ ನೀಂ ಶೂದ್ರಕನಾಗಿರ್ದಂ
ದಾ ಶಿಶುವಂ ವಿನಯವತಿ ಕರಂ ಪೊರೆದುದಱಿಂ
ದೀ ಶಿಶುಜನ್ಮದೊಳತಿ ಮೋ
ಹಾಶೆಯೊಳಾಕಾಂತಿಮತಿಗೆ ಜನಿಸಿತ್ತೊಲವಿಂ ೬೧

ದನು. ವ॥ ಅದು ಹೇಗೆಂದರೆ—೬೦. 'ಕ್ರಮವಾಗಿ ನಿನಗೆ (ಕಾಮಪಾಲನಿಗೆ) ಬಂಧುಮತಿ, ವೇದಿಮತಿ, ಸುಂದರಿಯಾದ ಹಂಸಾವಳಿ, ನಂದಿನಿ, ಗೋಪ ಕುಮಾರಿ ಮೊದಲಾದ ಐವರು ಹೆಂಡತಿಯರಾದರು ವ॥ ಹಾಗೆ ಅವರಲ್ಲಿ ನಿನ್ನ ಮೊದಲ ಜನ್ಮದ ಶೌನಕಾವಸ್ಥೆಯಲ್ಲಿ ಬಂಧುಮತಿಯೇ ಎರಡನೆಯ ಶೂದ್ರಕಾವಸ್ಥೆಯಲ್ಲಿ ವಿನಯವತಿ, ಮೂರನೆಯ ಕಾಮಪಾಲಾವಸ್ಥೆಯಲ್ಲಿ ಕಾಂತಿಮತಿಯಾದಳು. ಅಕ್ರಮದಿಂದ ಉಳಿದ ನಾಲ್ವರಲ್ಲಿ ವೇದಿಮತಿ, ಯಜ್ಞದಾಸಿ, ಕಾಮದೇವಿ ; ಹಂಸಾವಳಿ, ಶೂರಸೇನಿ, ಸುಲೋಚನೆ ; ನಂದಿನಿ, ರಂಗಪತಾಕೆ, ಇಂದ್ರಸೇನೆ ; ಗೋಪಕುಮಾರಿ ಆರ್ಯದಾಸಿ, ತಾರಾವಳಿ ಎಂಬ ಕ್ರಮದಿಂದ ಪತ್ನಿ ಮೂರು ಜನ್ಮಗಳಲ್ಲಿ ಪತ್ನಿಯರಾದರು. ಅದರಿಂದ—೬೧. ನೀನು (ಕಾಮಪಾಲನು) ಶೂದ್ರಕನಾಗಿದ್ದಾಗ ಆ ಮಗುವನ್ನು ವಿನಯವತಿಯು ಚೆನ್ನಾಗಿ ಸಾಕಿದಳು. ಅದರಿಂದ. ಈ ಶಿಶುಮೋಹಬಂಧದಿಂದ ಕಾಂತಿಮತಿಗೆ ಮಗುವಾಗಿ ಹುಟ್ಟಿತು. ವ॥ ಆ ಕಾರಣದಿಂದ ಈ ಮಗುವು ನಿನಗೆ ಮಗನ ಮಗನ[1] ಮಗನಾದುದರಿಂದ ನಿನ್ನ ದೃಷ್ಟಿ

1. 'ಆತ್ಮಾವೈ ಪುತ್ರನಾಮಾಸಿ' ಎಂಬ ಶ್ರುತಿವಾಕ್ಯದಂತೆ ಪತಿಯೇ ಪುತ್ರನಾಗಿ ಹುಟ್ಟುತ್ತಾನೆಂಬ ಅಭಿಪ್ರಾಯದಿಂದ ಈ ಮಾತು ಬಂದಿದೆ. ಮೂರನೆಯ ಜನ್ಮದಲ್ಲಿ ಕಾಮಪಾಲನು ಮಗನ ಮಗನಾದನು. ಅವನ ಮಗನೇ ತಾರಾವಳಿಗೆ ಸಿಕ್ಕಿದ ಮಗು (ರಂ).

ವ॥ ಅದು ಕಾರಣದಿಂ ನಿನಗೆ ಪುತ್ರನಪುತ್ರನ ಪುತ್ರನಪ್ಪುದಱಿಂ ನಿನ್ನ ಕಣ್ಗೊಪ್ಪಲ ದೊಳಿರ್ದಪೆಂದು ಕುಬೇರಂ ಪೇೞ್ದು ಮತ್ತಮಿಂತೆಂದಂ–

ಕಂ॥ ಇವನಂ ಕೊಂಡುಯ್ದಂಭೋ
ರುಹ ಲೋಚನೆಯಪ್ಪ ವಸುಮತೀ ದೇವಿಗೆ ಕೊ
ಟ್ಟು ವಿಲಾಸಿನಿ ನೀಂ ಪೋಗು
ತ್ಸವದಿಂದಂ ಕಾಮಪಾಲನಿರ್ದೆಡೆಗೀಗಳ್ ೬೨

ವ॥ ಎಂದು ಕುಬೇರಂ ಪೇೞ್ದೊಡಾಕುಮಾರನಂ ವಸುಮತೀ ದೇವಿಗೆ ಕೊಟ್ಟು ನಿನ್ನ ಪದಪರಿಚರ್ಯಾರ್ಥಮರಸುತ್ತುಂ ಬಂದೀಗಳ್ ಕಂಡೆನೆಂದು ತಾರಾವಳಿ ಪೇೞ್ದನಂತರಂ

ವನಜದಳಾಕ್ಷಿ ತತ್ತರುಣಿ ಕಣ್ಮುಗಿದೊಯ್ಯನೆ ತನ್ನ ವಿದ್ಯೆಯಂ
ನೆನೆಯಲೊಡಂ ವಿಚಿತ್ರಮೆನಿಸಿರ್ಪಮನೋಹರ ಚಿತ್ರಶಾಲೆ ಭೋಂ
ಕನೆ ನೆಲಸಿತ್ತನೇಕಮಣಿರಂಜಿತ ಗೋಪುರವೇದಿ ಮಾರುತಾ
ಯನ ಕಮನೀಯ ಹೇಮಕಲಶಂಗಳಿನಾ ವಿಪಿನಪ್ರದೇಶದೊಳ್ ೬೩

ಮೃದುತಲ್ಪಂ ಮಂಚಂ ಕಂ
ಪೊದವಿದಪುಷ್ಪಾನುಲೇಪನಂ ತಾಂಬೂಲಂ
ತ್ರಿದಶಾಶನಸಮಭಕ್ಷ್ಯಂ
ಸುದತಿಯ ವಿದ್ಯೆಗಳಿನಾಗಳೊಪ್ಪಿದುವೆನಸುಂ ೬೪

ವ॥ ಅಂತೊಪ್ಪಿರ್ದ ಗಂಧರ್ವಗೃಹದಲ್ಲಿ

ಯಲ್ಲಿ ಇದೆ ಎಂದು ಕುಬೇರನು ಹೇಳಿ ಮತ್ತೆ ಹೇಳಿದನು. ೬೨. ವಿಲಾಸಿನಿಯೇ! ನೀನು ಈಗ ಈ ಮಗುವನ್ನು ಕೊಂಡು ಹೋಗಿ ಕಮಲಾಕ್ಷಿಯಾದ ವಸುಮತೀದೇವಿಗೆ ಕೊಟ್ಟು ಸಂತೋಷದಿಂದ ಕಾಮಪಾಲನಿದ್ದಲ್ಲಿಗೆ ಹೋಗು." ವ॥ ಎಂದು ಕುಬೇರನು ಹೇಳಿದನು. ಅನಂತರ ಆ ಕುಮಾರನನ್ನು ವಸುಮತೀದೇವಿಗೆ ಕೊಟ್ಟು ನಿನ್ನ ಪಾದ ಪರಿಚಯಕ್ಕಾಗಿ ಹುಡುಕುತ್ತಾ ಬಂದು ಈಗ ನಿನ್ನನ್ನು ಕಂಡೆನು ಎಂದು ತಾರಾವಳಿ ಹೇಳಿದಳು. ಅನಂತರ, ೬೩. ಆ ಕಮಲಾಕ್ಷಿಯು ಕಂಗಳನ್ನು ಮುಚ್ಚಿಕೊಂಡು ತನ್ನ ವಿದ್ಯೆಯನ್ನು ನೆನೆದಳು. ಕೂಡಲೆ ಆವನ ಪ್ರದೇಶದಲ್ಲಿ ವಿಚಿತ್ರವಾದ ಮನೋಹರವಾದ ಚಿತ್ರಶಾಲೆ (ಅರಮನೆ) ಯೊಂದು ಕೂಡಲೆ ಆವಿರ್ಭವಿಸಿತು, ಅದರಲ್ಲಿ ಅನೇಕ ರತ್ನಗಳಿಂದ ರಂಜಿತವಾದ ಗೋಪುರವಿದ್ದಿತು. ವೇದಿಕೆ, ಕಿಟಕಿಗಳು ಮತ್ತು ಚಿನ್ನದ ಕಲಶಗಳಿದ್ದವು. ೬೪. ಆ ತರುಣಿಯ ವಿದ್ಯೆಗಳಿಂದ ಆ ಮನೆಯಲ್ಲಿ ಮೃದುವಾದ ಹಾಸಿಗೆ, ಮಂಚ, ಸುವಾಸನೆಯುಳ್ಳ ಹೂ, ಗಂಧ, ತಾಂಬೂಲ, ದೇವತೆಗಳು ತಿನ್ನುವಂಥ ಭಕ್ಷ್ಯಗಳಿಗೆ ಸಮನಾದ ಭಕ್ಷ್ಯಗಳು ಎಲ್ಲವೂ ಉಂಟಾದುವು. ವ॥ ಹಾಗೆ ಸುಂದರವಾಗಿದ್ದ ಗಂಧರ್ವ

ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ನಾಣ್ಗೆವಾಯ್ದು ಕೂ
ಡುವ ಬಗೆಯಿಂತುಟೆಂದುಸಿರ್ವಬಲ್ಮೆಯನಾನಱಿಯೆಂ ನಿರಂತರಂ
ಸಮಸುಖಮಾಗಲೆನ್ನೊಳೊಡಗೂಡಿರೆ ಚಿತ್ರದ ಕಲ್ಲ ಲೆಪ್ಪದಂ
ಗವನೆಡೆಗೊಂಡುದೆನ್ನತನುವೇಪೊಗೞ್ವೆಂ ಖಚರೀ ವಿನೋದಮಂ ೬೫

ವ॥ ಅಂತವಳ್ ಬಹುವಿಧ ವಿನೋದದಿಂದೆನ್ನೊಳ್ ಸಂಭೋಗಮನೊಡರ್ಚುತುಂ ಕೆಲವು ದಿನಮಂ ಕಳೆಯುತ್ತಿರಲೊಂದು ಸಮಯದೊಳಾನವಳೊಳಿಂತೆಂದೆಂ

ಕ್ಷಿತಿಪತಿ ಚಂಡಸಿಂಹನೃಪನೆನ್ನನಕಾರಣದಿಂ ಕೊಲಲ್ಕೆ ದು
ರ್ಮತಿ ಬಗೆದಂ ಮಗುೞ್ದವನೊಳಾಂಮಿಗೆ ದುರ್ಘಟಮಪ್ಪಶಾಸ್ತಿಯಂ
ಗತಿಗಿಡೆಮಾಡುವಿಚ್ಛೆಯೆನಗಾದಪುದಂಗನೆ ಪೇೞಿದರ್ಕೆ ಪ
ದ್ಧತಿಯನೆನಲ್ಕವಳ್ ಕದನಕೀರ್ತಿಯ ಬೆಳ್ಪಿನೆ ನಕ್ಕಳಾಕ್ಷಣಂ ೬೬

ವ॥ ಅಂತು ನಕ್ಕು

ಕಂ॥ ವನಜಮುಖಿ ಕಾಂತಿಮತಿಯಂ
ನೆನೆದಪೆಯಕ್ಕೆಂದು ನಕ್ಕು ತಾರಾವಳಿ ಭೋಂ
ಕನೆ ತನ್ನ ವಿದ್ಯೆಯಿಂದಂ
ನೆನೆದಳ್ಸಲೆ ಚಂಡಸಿಂಹನಿರ್ದಾಲಯಮಂ ೬೭

ಮಂದಿರದಲ್ಲಿ—೬೫. ಆ ಗಂಧರ್ವ ಕನ್ನೆಯನ್ನು ಆತುರದಿಂದ ಅಪ್ಪಿಕೊಂಡೆನು, ಸಂಭ್ರಮದಿಂದ ಚುಂಬಿಸಿದೆನು. ತಡಮಾಡದೆ ನಾಚಿಕೊಂಡು ಕೂಡುವ ಬಲುಮೆಯೆಂಥದು ಎಂದು ಹೇಳುವ ರೀತಿಯನ್ನು ನಾನು ಅರಿಯೆನು. ಎಡಬಿಡದೆ ಸಮ ಸುಖವಾಗಿರುವಂತೆ ಅವಳು ನನ್ನೊಡನೆ ಕೂಡಿದ್ದಳು. ನನ್ನ ಶರೀರವು ಚಿತ್ರದಲ್ಲಿ ಬರೆದಂತೆ, ಕಲ್ಲಿನದರಂತೆ ಅರಗಿನದರಂತೆ ನಿಶ್ಚಲವಾಯಿತು. ಆ ಅಪ್ಸರೆಯಿಂದಾದ ವಿನೋದವನ್ನು ಏನೆಂದು ವರ್ಣಿಸಲಿ.” ವ॥ ಹೀಗೆ ಅವಳು ಬಹುವಿಧ ವಿನೋದಗಳಿಂದ ನನ್ನೊಡನೆ ಸಂಭೋಗವನ್ನು ಮಾಡಿದಳು. ಹೀಗೆಯೇ ಕೆಲವು ದಿನಗಳು ಕಳೆದುವು. ಒಂದು ದಿನ ನಾನವಳಿಗೆ ಹೇಳಿದೆನು. ೬೬. “ದುರ್ಮತಿಯಾದ ಚಂಡಸಿಂಹರಾಜನು ಕಾರಣವಿಲ್ಲದೆ ನನ್ನನ್ನು ಕೊಲ್ಲಲು ಯತ್ನಿಸಿದನು. ಅವನಿಗೆ ಅದಕ್ಕೆ ತಕ್ಕಶಾಸ್ತಿಯನ್ನು ಮಾಡಬೇಕೆಂದು ಆಶಿಸುತ್ತೇನೆ. ಅದಕ್ಕೊಂದು ದಾರಿಯನ್ನು ಹೇಳು.” ಎನ್ನಲು ಅವಳಪಕ್ಕೆ ನಕ್ಕಳು. ಅವಳ ನಗೆಯು ಕದನ ಕೀರ್ತಿಯ ಬಿಳುಪಾದ ಕಾಂತಿಯೆಂಬಂತೆ ರಂಜಿಸಿತು. ವ॥ ಹಾಗೆ ನಕ್ಕು—೬೭. ‘ಕಮಲ ಮುಖಿಯಾದ ಕಾಂತಿಮತಿಯನ್ನು ನೆನೆಸಿಕೊಳ್ಳುತ್ತಿರುವೆ’ ಎಂದು ಹೇಳಿ ತಾರಾವಳಿಯು ಹೇಳಿದಳು, ಮತ್ತೆ ತನ್ನ ವಿದ್ಯೆಯಿಂದ ಚಂಡಸಿಂಹನ ಅರಮನೆ

ವ॥ ಅಂತು ಕಾಶೀಪತಿಯಪ್ಪ ಚಂಡಸಿಂಹನರಮನೆಯುಮಂ ನೆನೆದು

ಕಂ॥ ತಾರಾವಳಿ ನಿಮಿಷಕೆ ಕಾಂ
ತಾರದಿನಳವಟ್ಟ ತನ್ನ ವಿದ್ಯಾಬಲದಿಂ
ವಾರಾಣಸಿಪುರದಧಿಪನ
ಗಾರಕ್ಕಾಂ ಸಹಿತಮಿರುಳವಳ್ ನಡೆತಂದಳ್ ೬೮

ವ॥ ಅಂತವಳರ್ಧರಾತ್ರಿಯೊಳ್ ಬಂದಾರುಮಱಿಯದಂತೆ ಚಂಡಸಿಂಹನಿರ್ದ ಸೆಜ್ಜೆ ಮನೆಯೊಳೆನ್ನಂ ಪುಗಿಸಿ ತಾಂ ಪೊಱಗಿರ್ಪುದುಂ

ಕಂ॥ ತಲೆದೆಸೆಯೊಳಿರ್ದ ಡಾಯ್ದುವ
ನೊಲವಿಂದಾನುರ್ಚಿ ನಿದ್ರೆಯಿಂ ತನ್ನೃಪನಂ
ತಿಳಿಪಲತಿಭೀತಿಯಿಂದಂ
ತಳವೆಳಗಾಗುತ್ತುಮೆಟ್ಟು ಕುಳ್ಳಿರ್ದಾಗಳ್ ೬೯

ವ॥ ಅಂತು ಚಂಡಸಿಂಹನೆಟ್ಟು ಕುಳ್ಳಿರಲೊಡಂ

ಕಂ॥ ಸೆಳೆದಿರ್ದಸಿ ಸಹಿತಂ ಕೆ
ಯ್ಗಳನೆರಡಂ ಮುಗಿದು ಕಾಂತಿಮತಿಯಧಿಪಂ ನಿ
ನ್ನಳಿಯಂ ಯಕ್ಷಿಣಿ ತಾರಾ
ವಳಿಯೊಡನಾಂ ಬಂದೆನರ್ಧರಾತ್ರಿಯೊಳೀಗಳ್ ೭೦

ವ॥ ಎಂಬುದುಂ ನೃಪಂ ವಿಸ್ಮಯಸ್ವಾಂತನಾಗಿಂತೆಂದು

ಯನ್ನು ನೆನೆಸಿಕೊಂಡಳು. ವ॥ ಹಾಗೆ ಕಾಶೀಪತಿಯಾದ ಚಂಡಸಿಂಹನ ಅರಮನೆಯನ್ನು ನೆನೆಸಿಕೊಂಡು. ೬೮. ತಾರಾವಳಿಯು ಒಂದು ನಿಮಿಷದಲ್ಲಿ ಕಾಡಿನಲ್ಲಿ ತೋರಿಸಿದ ತನ್ನ ವಿದ್ಯಾ ಬಲದಿಂದ ಕಾಶೀಪತಿಯ ಅರಮನೆಗೆ ನನ್ನೊಡನೆ ರಾತ್ರಿಯಲ್ಲಿ ಬಂದಳು. ವ॥ ಹಾಗೆ ಅವಳು ಅರ್ಧರಾತ್ರಿಯಲ್ಲಿ ಯಾರೂ ತಿಳಿಯದ ಹಾಗೆ ಚಂಡಸಿಂಹನ ಅರಮನೆಗೆ ಬಂದು ನನ್ನನ್ನು ಅವನ ಮಲಗುವ ಮನೆಯಲ್ಲಿ ಹೊಗಿಸಿ ತಾನು ಹೊರಗೆ ನಿಂತಳು— ೬೯. ತಲೆಯ ಕಡೆ ಇದ್ದ ಆಯುಧವನ್ನು ಸಿರಿದು ಆ ರಾಜನನ್ನು ನಿದ್ರೆಯಿಂದ ಎಬ್ಬಿಸಿದೆನು. ಅವನು ಬಹುಭಯದಿಂದ ದಿಕ್ಕುಗೆಟ್ಟು ಎದ್ದು ಕುಳಿತನು. ವ॥ ಹಾಗೆ ಚಂಡಸಿಂಹನು ಎದ್ದು ಕುಳಿತಾಗ—೭೦. "ಸಿರಿದು ಹಿಡಿದಿದ್ದ ಕತ್ತಿಯೊಡನೆಯೇ ನಾನು ಅವನಿಗೆ ಕೈಮುಗಿದೆನು. ನಾನು ಕಾಂತಿಮತಿಯ ಗಂಡ. ನಿನ್ನಳಿಯ, ಯಕ್ಷಿಣಿ ತಾರಾವಳಿ ಯೊಡನೆ ಈ ಅರ್ಧರಾತ್ರಿಯಲ್ಲಿ ಇಲ್ಲಿಗೆ ಬಂದಿದ್ದೇನೆ" ವ॥ ಎಂದು ಹೇಳಿದೆನು.

ಎನ್ನರ್ಥಂ ಪ್ರಾಣಮೆನ್ನಾಳ್ವವನಿಯುನಿತುಮಂ ಕೊಟ್ಟು ಮತ್ಪುತ್ರಿಯಂ ಕೊ
ಟ್ಟೆನ್ನಾಣ್ಮಾತೇಕೆ ಪೇೞೆಂದೆನಗೆ ಮಱುದಿನಂ ತತ್ತನೂಜಾತೆಯಂ ಕೊ
ಟ್ಟೆನ್ನಂ ತಾರಾವಳಿಯಾ ಭೀತಿಯೊಳಧಿಕತರ ಸ್ನೇಹದಿಂ ಕೂಡಿಕೊಂಡಿ
ರ್ದನ್ನೋಡಲ್ಕೀಂ ಜನ್ಮಸ್ಥಿತಿಗತಿಯಿದು ಕೇಳ್ ಪ್ರೀತಿಯಿಂ ಪೂರ್ಣಭದ್ರಾ ೭೧

ವ॥ ಎಂದು ಕಾಮಪಾಲಂ ತನ್ನ ವೃತ್ತಾಂತಮನೆನ್ನೊಳ್ ಪೇೞ್ದನೆಂದು ಪೂರ್ಣಭದ್ರಂ ಸುಚ್ಚನೆ ಸುಯ್ಯಲ್ಕೆ ಸುಯ್ದುದರ್ಕೆ ಕಾರಣಮೇನೆಂದು ನಾಂ ಕೇಳಲಾತಂ ಮಗುೞ್ದಿಂತೆಂದಂ

ಕಂ॥ ಭಾವಿಪೊಡೆ ಕಾಮಪಾಲನ
ಮಾವಂ ಗುಣಿಚಂಡಸಿಂಹನೞಿಯಲೊಡಂ ಸ
ದ್ಭಾವದಿನಾತನ ಸುತನಖಿ
ಳಾವನಿಗರಸಾಗಿ ನಿಂದಪಂ ಕೆಲವುದಿನಂ ೭೨

ವ॥ ಅಂತು ಚಂಡಸಿಂಹಂ ಕಾಲನಿಲಯಮನೆಯ್ದಲಾತನಪಿರಿಯಮಗನಪ್ಪ ಚಂಡಘೋಷಂ ಪಟ್ಟಮಂ ತಳೆದು

ಕಂ॥ ಕತಿಪಯದಿನಕ್ಕೆ ತದ್ಭೂ
ಪತಿರಾಜ್ಯಶ್ರೀಯ ಸೌಖ್ಯಮಿನಿತಿಲ್ಲದೆ ಕೇಳ್
ಗತಜೀವಿತನಾದಂ ಸು
ಸ್ಥಿತಿಯಂ ದುಸ್ಸ್ಥಿತಿಯುನೆಣಿಸಲಱಿವವರೊಳರೇ ೭೩

ರಾಜನು ಮನಸ್ಸಿನಲ್ಲಿ ಅಚ್ಚರಿಗೊಂಡು ಹೇಳಿದನು—೭೧. 'ನನ್ನ ಹಣ, ಪ್ರಾಣ, ನಾನಾಳುವ ಭೂಮಿ ಎಲ್ಲವನ್ನೂ ಕೊಟ್ಟು ನನ್ನ ಮಗಳನ್ನೂ ಕೊಡುವೆನು. ಆಣೆಮಾಡಿ ಹೇಳುತ್ತೇನೆ' ಎಂದು ನನಗೆ ಹೇಳಿದನು. ಅಲ್ಲದೆ ಮಾರನೆಯ ದಿವಸವೇ ತನ್ನ ಮಗಳನ್ನು ಕೊಟ್ಟು ಮದುವೆಮಾಡಿದನು. ತಾರಾವಳಿಯು ಭಯದಿಂದ ನನ್ನನ್ನು ತುಂಬ ಸ್ನೇಹದಿಂದ ನೋಡಿಕೊಂಡನು. ಪೂರ್ಣಭದ್ರ ! ಕೇಳು ಇದು ನನ್ನ ಜನ್ಮವೃತ್ತಾಂತ. ವ॥ 'ಎಂದು ಕಾಮಪಾಲನು ತನ್ನ ವೃತ್ತಾಂತವನ್ನು ನನಗೆ ಹೇಳಿದನು' ಎಂದು ಹೇಳಿ ಪೂರ್ಣಭದ್ರನು ಸುರ್‍ರೆಂದು ಉಸಿರೆಳೆದನು. ಹಾಗೆ ನಿಟ್ಟುಸಿರುಬಿಡಲು ಕಾರಣವೇನೆಂದು ನಾನು (ಅರ್ಥಪಾಲ) ಮತ್ತೆ ಕೇಳಿದೆನು. ಆತನು ಮತ್ತೆ ಉತ್ತರಿಸಿದನು. ೭೨. "ಕಾಮಪಾಲನ ಮಾವ ಗುಣಿಯಾದ ಚಂಡಸಿಂಹನು ಕೆಲದಿನಗಳಲ್ಲಿ ಸತ್ತನು. ಅನಂತರ ಆತನ ಮಗನು ಕೆಲವು ದಿವಸಗಳು ರಾಜನಾಗಿ ಆಳಿದನು. ವ॥ ಹಾಗೆ ಚಂಡಸಿಂಹನು ಸಾಯಲು ಆತನ ಹಿರಿಯ ಮಗನಾದ ಚಂಡಘೋಷನು ಪಟ್ಟ ಕಟ್ಟಿಸಿಕೊಂಡನು. ೭೩. ಕೆಲವು ದಿನಗಳಾದ ಮೇಲೆ ಆ ರಾಜನು ರಾಜ್ಯಲಕ್ಷ್ಮಿಯ ಸೌಖ್ಯವನ್ನು ಸ್ವಲ್ಪವೂ ಅನುಭವಿಸದೆ ಸತ್ತನು. ಸುಖವು ಯಾವಾಗ ಬರುತ್ತದೆ ದುಃಖವು ಯಾವಾಗ ಬರುತ್ತದೆ-ಎಂದು ತಿಳಿಯಬಲ್ಲ

ವ॥ ಅಂತು ಚಂಡಘೋಷನುಮೞಿಯಲೊಡಂ

ಕಂ॥ ಅವನಿಂ ಕಿಱಿಯಂಗೆ ಮನೋ
ಭವಮೂರ್ತಿಗೆ ಸಿಂಹಘೋಷನೆಂಬ ಕುಮಾರಂ
ಗೆ ವಿಲಾಸದಿಂದೆ ತತ್ಪ
ಟ್ಟವನಿತ್ತಂ ಕಾಮಪಾಲನತ್ಯುತ್ಸವದಿಂ ೭೪

ವ॥ ಅಂತಾಕಾಮಪಾಲಂ ಸಿಂಹಘೋಷನೆಂಬ ಕುಮಾರಂಗೆ ಪಟ್ಟವಂ ಕಟ್ಟಲೊಡಮವಂ ಕೆಲವುದಿನಕ್ಕೆ ಯೌವನ ಮತ್ತನಾಗಿ ಧೂರ್ತವರ್ಗಮಂ ಕೂಡಿಕೊಂಡು ಪೇೞ್ದಕೊಂಡೆಯಮಂ ಕೇಳಲ್ ಮನಂದರಲ್ ಪಿಶುನರ್ ಪೊರ್ದಿಯಿಂತೆಂದರ್

ಸಾಹಸವಂತನಿಂದ್ರಿಯರತಂ ಬಹುಮೂರ್ಖನತೀವ ಕಾಮುಕಂ
ಬಾಹುಪರಾಕ್ರಮಂ ಕುಟಿಲ ದೈವಪರಂ ಧನಧಾನ್ಯ ಯುಕ್ತನು
ಗ್ರಾಹವಧೀರನಾದಧಿಕ ಮಂತ್ರಿಯನೇತೆಱದಿಂದೆ ದುಷ್ಟಕಾ
ಳಾಹಿಯ ಗೋಣನೊತ್ತಿ ಮುಱಿವಂತವನಂ ಮುಱಿದಿಕ್ಕುಗುರ್ವಿಪರ್ ೭೫

ಕಂ॥ ತನ್ನಂ ಲೆಕ್ಕಿಸದವನಂ
ತನ್ನಸಮಶ್ರೀಯನುಳ್ಳನಂ ಸಾಹಸಿಯಂ
ತನ್ನಿಂದಧಿಕನನಾರ್ಪಿಂ
ಮುನ್ನಿಱಿವುದು ಧೂರ್ತಸಚಿವನಂ ಭೂಪಾಲರ್ ೭೬

ವ॥ ಎಂದು ಲೋಕನೀತಿಯಂ ಪೇಳ್ವಂತೆ ಕಾಮಪಾಲಂಗಂ ಸಿಂಹಘೋಷಂಗಂ ವಿರೋಧಮಂ ಬಳೆಯಿಸಲೆಂದು

ವರು ಯಾರಾದರೂ ಇದ್ದಾರೆಯೇ ? ವ॥ ಹಾಗೆ ಚಂಡಘೋಷನೂ ಅಳಿಯಲು— ೭೪. ಅವನಿಗೆ ತಮ್ಮನಾದ ಮನ್ಮಥನಂತೆ ಸುಂದರನಾದ ಸಿಂಹಘೋಷನೆಂಬ ಕುಮಾರನಿಗೆ ಕಾಮಪಾಲನು ಬೆಡಗಿನಿಂದ ವೈಭವದೊಡನೆ ರಾಜ್ಯದಲ್ಲಿ ಪಟ್ಟಗಟ್ಟಿದನು. ವ॥ ಹಾಗೆ ಕಾಮಪಾಲನು ಸಿಂಹಘೋಷನೆಂಬ ಕುಮಾರನಿಗೆ ಪಟ್ಟವನ್ನು ಕಟ್ಟಿದನು. ಅವನು ಕೆಲವು ದಿನಗಳಲ್ಲಿ ಯೌವನದಿಂದ ಮದಿಸಿ ದುಷ್ಟರೊಡನೆ ಸೇರಿಕೊಂಡು ಅವರು ಹೇಳಿದ ಚಾಡಿಯ ಮಾತುಗಳನ್ನು ಕೇಳತೊಡಗಿದನು. ಆಗ ಚಾಡಿಕೋರರು ಬಂದು ಹೇಳಿದರು— ೭೫. "ಸಾಹಸಿಯಾದ, ಇಂದ್ರಿಯ ಸುಖದಲ್ಲಿ ಆಸಕ್ತನಾದ, ಅತಿಮೂರ್ಖನಾದ ಅತಿಕಾಮುಕನಾದ, ಬಾಹು ಪರಾಕ್ರಮವುಳ್ಳ, ಕುಟಿಲವಾದ ದೈವವನ್ನು ನಂಬಿದ, ಧನಧಾನ್ಯಗಳಿಂದ ಕೂಡಿದ, ಉಗ್ರವಾದ ಯುದ್ಧದಲ್ಲಿ ಧೀರನಾದ ಪ್ರಬಲ ಮಂತ್ರಿಯನ್ನು ರಾಜರು ಯಾವುದಾದರೂ ರೀತಿಯಿಂದ ದುಷ್ಟಕಾಲಸರ್ಪವನ್ನು ಕತ್ತು ಹಿಸಿಕಿ ಕೊಲ್ಲುವಂತೆ ಕೊಂದು ಹಾಕುತ್ತಾರೆ. ೭೬. ತನ್ನನ್ನು ಲಕ್ಷ್ಯಮಾಡದ, ತನಗೆ ಸಮನಾದ ಐಶ್ವರ್ಯವುಳ್ಳ, ಸಾಹಸಿಯಾದ, ತನಗಿಂತ ಪ್ರಬಲನಾದ ಧೂರ್ತ ಮಂತ್ರಿಯನ್ನು ರಾಜರು ಪರಾಕ್ರಮದಿಂದ ಮೊದಲೇ ಕೊಲ್ಲಬೇಕು. ವ॥ ಎಂದು ಲೋಕವ್ಯವಹಾರದಲ್ಲಿ ಹೇಳುವಂತೆ ಕಾಮಪಾಲನಿಗೂ ಸಿಂಹ ಘೋಷ

ನಿಮ್ಮಯ ತಂದೆಯುಂ ನಡುವಿರಳ್‌ಕೊಲಲೆಂದಸಿಯುರ್ಚಿಸಜ್ಜೆಯಂ
ಕೆಮ್ಮನೆ ಪೊಕ್ಕನೊರ್ಬಖಚರೀ ಸಹಿತಂ ಸಲೆ ಕಾಮಪಾಲನಂ
ದೊಮ್ಮೆ ವಧೂಟಿ ಕಾಂತಿಮತಿಯಂ ನೃಪನಿತ್ತು ಬರ್ದುಂಕಿ ಮತ್ತೆ ಕೊಂ
ದಂ ಮನದಟ್ಕಱಿಂ ನೃಪತಿಯಂ ಕುಟಿಲಂ ಮಿಗೆ ದುಷ್ಟ ಚೇಷ್ಟೆಯಿಂ ೭೭

ವ॥ ಅದಲ್ಲದೆಯುಂ ನಿಮ್ಮಗ್ರಜನಪ್ಪ ಚಂಡಘೋಷನಂ ಕಪಟದಿಂ ತೀರ್ಚಿದನೆಂದು ಪಲಬರ್ ಕೋಡೆಯುವಂ ಪೇಟಲಾಕುಮಾರನಿಂತೆಂದಂ

ಕಂ॥ ಏಗೆಯ್ವೆಂಬಲ್ವಗೆಯಂ
ನೀಗಲ್ಬಾರದು ಸಮರ್ಥೆತಾರಾವಳಿಯಿಂ
ಬಾಗಣಿಕೆಯ ಭಯದಿಂದಂ
ಮೂಗರ್ ಮಿಗೆ ಕಂಡ ಕನಸಿನಂತಾಯ್ತೀಗಳ್ ೭೮

ವ॥ ಎಂದು ತಾರಾವಳಿಯ ಭೀತಿಯಿಂ ಕಾಮಪಾಲಂಗೆ ಹೊಲ್ಲಹವನೆಸಗಲಱಿಯದಿರ್ದುಮೊಂದುದಿನಂ ಕಾಂತಿಮತಿ ಸಿಂಹಘೋಷನ ಕಾಂತೆಯಪ್ಪ ಲಕ್ಷಣೆಯ ಸಮೀಪಕ್ಕೆ ಪೋಗಲಾಲಕ್ಷಣೆ ಕಾಂತಿಮತಿಯ ಮುಖಮಂ ನೋಡಿ

ಕಂ॥ ಏನೆಲೆಗೆ ಕಾಂತಿಮತಿ ನಿ
ನ್ನಾನನ ಕಮಳಂ ಮಸುಳ್ದುದೇಕಾರಣಮೆಂ
ದಾನರಪನರಸಿ ಬೆಸಗೊಳ
ಲಾನಮ್ರ ಶಿರಸ್ಕೆ ಕಾಂತಿಮತಿಯಿಂತೆಂದಳ್ ೭೯

ನಿಗೂ ದ್ವೇಷವನ್ನು ಬೆಳೆಯಿಸಲು ಹೀಗೆಂದರು. ೭೭. "ಕಾಮಪಾಲನು ಅರ್ಧರಾತ್ರಿಯಲ್ಲಿ ನಿಮ್ಮ ತಂದೆಯನ್ನು ಕೊಲ್ಲುವುದಕ್ಕಾಗಿ ದೇವಾಂಗನೆಯೊಡನೆ ಮಲಗುವ ಮನೆಯನ್ನು ಹೊಕ್ಕನು. ರಾಜನು ತನ್ನ ಮಗಳು ಕಾಂತಿಮತಿಯನ್ನು ಕೊಟ್ಟು ಬದುಕಿಕೊಂಡನು. ಮತ್ತೆ ಪ್ರೀತಿಯನ್ನು ತೋರಿಸುತ್ತಲೇ ಆ ದುಷ್ಟನು ತನ್ನ ಕುಟಿಲಮಾರ್ಗದಿಂದ ಅವನನ್ನು ಕೊಂದನು. ವ॥ ಅದೂ ಅಲ್ಲದೆ ನಿಮ್ಮಣ್ಣನಾದ ಚಂಡಘೋಷನನ್ನು ಕಪಟದಿಂದ ಕೊಂದನು॥ ಎಂದು ಹಲವರು ಚಾಡಿ ಹೇಳಿದರು. ಅದನ್ನು ಕೇಳಿ ಆ ಕುಮಾರನು ಹೇಳಿದನು. ೭೮. "ಏನು ಮಾಡಲಿ ! ಬಲಾಢ್ಯನಾದ ಹಗೆಯನ್ನು ಕೊಲ್ಲಲು ಸಾಧ್ಯವಿಲ್ಲ. ಸಮರ್ಥೆಯಾದ ದೇವ ವೇಶ್ಯೆ ತಾರಾವಳಿಯ ಹೆದರಿಕೆ. ಈಗ ಇದು ಮೂಗರು ಕಂಡ ಕನಸಿನಂತಾಗಿದೆ" (ಅದನ್ನು ಹೇಳಿಕೊಳ್ಳುವಂತಿಲ್ಲ.) ವ॥ ಹೀಗೆ ತಾರಾವಳಿಯ ಹೆದರಿಕೆಯಿಂದ ಕಾಮಪಾಲನಿಗೆ ಕೇಡನ್ನು ಮಾಡಲು ಸಾಧ್ಯವಾಗಲಿಲ್ಲ. ಆಗ ಒಂದು ದಿನ ಕಾಂತಿಮತಿಯು ಸಿಂಹಘೋಷನ ಹೆಂಡತಿ ಲಕ್ಷಣೆಯ ಹತ್ತಿರಕ್ಕೆ ಹೋದಳು. ಲಕ್ಷಣೆಯು ಕಾಂತಿಮತಿಯ ಮುಖವನ್ನು ನೋಡಿ– ೭೯. 'ಎಲೆ ಕಾಂತಿಮತಿ ನಿನ್ನ ಮುಖ ಕಮಲವು ಬಾಡಿದೆಯೇಕೆ ? ಅದಕ್ಕೆ ಕಾರಣವೇನು?' ಎಂದು ಅರಸಿಯು ಪ್ರಶ್ನಿಸಿದಳು, ಅದಕ್ಕೆ ಕಾಂತಿಮತಿಯು ತಲೆ ಬಗ್ಗಿಸಿಕೊಂಡು ಹೇಳಿದಳು.

ನಿನಗೇನಂ ವಂಚಿಸೇಂಲಕ್ಷಣೆ ಪದೆದುಮದೀಯಪ್ರಿಯಂ ಕಾಮಪಾಲಂ
ಮನೆಯೊಳ್ ಕುಳ್ಳಿರ್ದು ತಾರಾವಳಿಯನೊಸೆದು ಮನ್ನಾಮದಿಂದಿತ್ತ ಬಾ ಕಾ
ಮಿಸಿಯೆಂದುತ್ಸಾಹದಿಂದಂ ಮಱೆದು ಕರೆಯೆ ತತ್ಕಾಂತೆ ಮಾತ್ಸರ್ಯದಿಂ ಭೋಂ
ಕನೆ ಪೋದಳ್ ತದ್ವಧೂ ಚಿಂತೆಯೊಳಳವಟಿಯುತ್ತಿರ್ದಪಂ ಮಂತ್ರಿಮುಖ್ಯಂ ೮೦

ವ॥ ಆದುಕಾರಣಮಾತನ ದುಗುಡಮೆ ಎನ್ನದುಗುಡಮಾಗಿರ್ದಪೆನೆಂದು ಪೇಟಲೊಡಂ

ಕಂ॥ ಈ ಸುದ್ದಿಯನಾಲಕ್ಷಣೆ
ದೇಶಾಧಿಪ ಸಿಂಹಘೋಷನೊಳ್ ಪೇಟಲೊಡಂ
ಕ್ಲೇಶಂಪೋಯ್ತೆಂದು ಧರಾ
ಧೀಶಂ ತನ್ನಾಪ್ತವರ್ಗಮಂ ಕರೆಯಿಸಿದಂ ೮೧

ವ॥ ಅಂತು ಧೂರ್ತವರ್ಗಮಂ ಕರೆಯಿಸಿಯೋಲಗಂಗೊಟ್ಟಿರ್ದು

ಎನಸುಂ ತಾರಾವಳೀ ಕಾಂತೆಯ ವಿರಹದೊಳಂಗಂ ಬೆಳರ್ತುಪ್ಪದಿಂದಾ
ನನಬಿಂಬಂ ಬಾಡಿ ಚಿತ್ತವ್ಯಥೆಪಸರಿಸಿ ಚಿಂತಾಗ್ನಿಕೈಕೊಂಡು ಪುಷ್ಪಾ
ಸ್ತ್ರನಬಾಣಂ ಮೆಯ್ಗಳೊಳ್ ಕೀಲಿಸಿದವೊಲಧಿಕೋನ್ಮಾದದಿಂ ಕಾಮಪಾಲಂ
ಮನದೊಳ್ ಮುಂಗೆಟ್ಟು'ಮತ್ತಂ ಧೃತಿಗಿಡದಿರವಂ ಕಂಡನಾಸಿಂಹಘೋಷಂ ೮೨

೮೧. "ಲಕ್ಷಣೆ, ನಿನಗೇನೂ ನಾನು ವಂಚಿಸುವುದಿಲ್ಲ. ನನ್ನ ಪ್ರಿಯ ಕಾಮಪಾಲನು ಮನೆಯಲ್ಲಿ ಕುಳಿತಿದ್ದಾಗ, ಪ್ರೀತಿಯಿಂದ ತಾರಾವಳಿಯನ್ನು ನನ್ನ ಹೆಸರಿನಿಂದ 'ಇತ್ತ ಬಾ, ಕಾಮಿನಿ' ಎಂದು ಉತ್ಸಾಹದಿಂದ ಮರೆತು ಕರೆದನು. ಆ ಕಾಂತೆಯು ಅದರಿಂದ ಮಾತ್ಸರ್ಯವನ್ನು ಹೊಂದಿ ಇದ್ದಕ್ಕಿದ್ದ ಹಾಗೆ ಹೊರಟುಹೋದಳು. ಮಂತ್ರಿ ಮುಖ್ಯನಾದ ಕಾಮಪಾಲನು ಅವಳ ಚಿಂತೆಯಿಂದ ಕರಗಿಹೋಗುತ್ತಿದ್ದಾನೆ. ವ॥ ಆ ಕಾರಣದಿಂದ ಆತನ ದುಃಖವೇ ನನ್ನ ದುಃಖವಾಗಿದೆ. ಎಂದು ಹೇಳಿದಳು. ಆಗ ೮೧. ಈ ಸುದ್ಧಿಯನ್ನು ಆ ಲಕ್ಷಣೆಯು ಸಿಂಹಘೋಷರಾಜನಿಗೆ ಹೇಳಿದಳು. ರಾಜನು ಪೀಡೆ ಕಳೆಯಿತೆಂದು ತನ್ನ ಆಪ್ತರುಗಳನ್ನು ಕರೆಯಿಸಿದನು. ವ॥ ಹಾಗೆ ಧೂರ್ತರ ಗುಂಪನ್ನು ಕರೆಯಿಸಿ ಸಭೆ ನಡೆಯಿಸಿದನು. ೮೨. ತಾರಾವಳೀ ಕಾಂತೆಯ ವಿರಹದಿಂದ ಕಾಮಪಾಲನ ಶರೀರವು ಬಿಳಿಚಿಕೊಂಡಿತ್ತು. ಕಾವಿನಿಂದ ದುಂಡಾದ ಮುಖವು ಬಾಡಿ ಹೋಗಿದ್ದಿತು. ಚಿತ್ತದಲ್ಲಿ ವ್ಯಥೆಯು ಹರಡಿಕೊಂಡಿದ್ದಿತು. ಚಿಂತಾಗ್ನಿಗೆ ವಶನಾಗಿದ್ದನು. ಕುಸುಮಬಾಣನಾದ ಮದನನ ಬಾಣವು ಮೆಯ್ಯ ಅವಯವಗಳಲ್ಲಿ ಚುಚ್ಚಿಕೊಂಡಂತೆ ಉನ್ಮಾದವುಂಟಾಗಿದ್ದಿತು. ಆದರೂ ಮನದಲ್ಲಿ ಮುಂದೆ ಮಾಡಬೇಕಾದುದನ್ನು ತಿಳಿಯದೆ ಧೈರ್ಯಗೆಟ್ಟಿರಲಿಲ್ಲ. ಅಂಥ ಕಾಮಪಾಲನ ಸ್ಥಿತಿಯನ್ನು ಸಿಂಹ

ವ॥ ಅಂತು ಕಂಡು

ಕಂ॥ ನೆರೆದಿರ್ದೋಲಗದೊಳ್ ಕೂ
ರ್ತರನೀಕ್ಷಿಸಿ ಸಂಜ್ಞೆಮಾಡಿ ರಾಜಕುಮಾರಂ
ಭರದಿಂದೆ ಕಾಮಪಾಲನ
ನರವರಿಸದೆ ಪಿಡಿದು ಕಟ್ಟಿಸಿದನಾಕ್ಷಣದೊಳ್ ೮೩

ವ॥ ಅಂತು ಕಟ್ಟಿಸಿ ಮಿಥ್ಯಾದೋಷಂಗಳನುಗ್ಗಡಿಸಿಯನಂತರಂ

ಕಂ॥ ಸಾಹಸವಿದನಂ ಸ್ವಾಮಿ
ದ್ರೋಹನನತ್ಯಧಮನಂ ನೃಪಾಲನ ಕನ್ಯಾ
ಮೋಹಿಯನುಯ್ದಕ್ಷಿಗಳಂ
ಲೋಹದ ಮೊನೆಯಿಂದೆ ಕಳೆಯಿಮೆಂದನಿಳೇಶಂ ೮೪

ವ॥ ಅಂತು ಭೂಮಿಪಾಲಂ ಗ್ರಾಮಪಾಲರ ಕೆಯ್ಯೊಳ್ ಕಾಮಪಾಲನಂ ಕುಡಲವರ್ ಚಾವಟಕ್ಕೆ ಕೊಂಡುಪೋಗಿ ಕುಳ್ಳಿರಿಸುವುದನಾಂ ಕಂಡು

ದೊರೆವೆತ್ತೆನ್ನಾಪ್ತ ಮಿತ್ರಂಗಿನಿತಳವಡಲುದ್ವೇಗಮಾಪತ್ಸಮೂಹಂ
ಬರೆ ಕಂಡಾಂ ಪ್ರಾಣದಿಂ ಜೀವಿಸುವುದುಚಿತಮಲ್ತೆಂದು ಮದ್ದೇಹಮಂ ಗೋ
ಣ್ಮುಱಿಗೊಂಡಾನೀಗಳಟ್ಟಾಡುವ ಪೊಸವಗೆಯಿಂ ರಜ್ಜುವಂ ಮಾಟ್ಪೆನೆಂದ
ಚ್ಚರಿಯಾಗಲ್ ಪೂರ್ಣಭದ್ರಂ ನಯನಜಲದೊಳಟ್ಟಾಡುತುಂ ಪೇಟ್ದನೆನ್ನೊಳ್
೮೫

ಘೋಷನು ಕಂಡನು. ವ॥ ಹಾಗೆ ನೋಡಿ – ೮೩. ತುಂಬಿದ್ದ ಸಭೆಯಲ್ಲಿ ರಾಜಕುಮಾರನು ಸ್ನೇಹಿತರನ್ನು ನೋಡಿ ಸನ್ನೆಮಾಡಿದನು. ಕೂಡಲೆ ತಡಮಾಡದೆ ಕಾಮಪಾಲನನ್ನು ಹಿಡಿದು ಕಟ್ಟಿಸಿದನು. ವ॥ ಹಾಗೆ ಕಟ್ಟಿಸಿ ಸುಳ್ಳುಸುಳ್ಳು ಅಪರಾಧಗಳನ್ನು ಘೋಷಿಸಿದನು, ಅನಂತರ – ೮೪. "ಕಬ್ಬಿಣದ ಸಲಾಕಿಯ ತುದಿಯಿಂದ ಈ ಕಾಮಪಾಲನ ಕಣ್ಣುಗಳನ್ನು ಕಿತ್ತುಹಾಕಿರಿ. ಕಾರಣ ಇವನು ಸಾಹಸಿ, ಸ್ವಾಮಿದ್ರೋಹಿ, ತುಂಬ ಅಧಮನು, ರಾಜಕುಮಾರಿಯನ್ನು ಮೋಹಿಸಿದವನು." ಎಂದು ರಾಜನು ಹೇಳಿದನು. ವ॥ ಹಾಗೆ ಹೇಳಿ ರಾಜನು ಗ್ರಾಮಪಾಲರ ಕೈಗೆ ಕಾಮಪಾಲನನ್ನು ಕೊಟ್ಟನು. ಅವರು ಅವನನ್ನು ಚಾವಡಿಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದರು. ಅದನ್ನು ನಾನು (ಪೂರ್ಣಭದ್ರ) ನೋಡಿ – ೮೫. ಪ್ರಸಿದ್ಧನಾದ ನನ್ನ ಆಪ್ತ ಮಿತ್ರನಿಗೆ ಇಷ್ಟು ಕಳವಳವೂ ಆ ಪತ್ಸಮೂಹವೂ ಬಂದುದನ್ನು ಕಂಡು ನಾನು ಬದುಕುವುದು ಉಚಿತವಲ್ಲ. ಆದುದರಿಂದ ಈ ನನ್ನ ಶರೀರವನ್ನು ಕುತ್ತಿಗೆ ಮುರಿದುಕೊಂಡು ಕಳೆಯುವೆನು. ಅದಕ್ಕಾಗಿ ಒಂದು ಹೊಸಬಗೆಯ ಹಗ್ಗವನ್ನು ಹೊಸೆಯುತ್ತಿದ್ದೇನೆ." ಹೀಗೆ ಆಶ್ಚರ್ಯಕರವಾದ ರೀತಿಯಲ್ಲಿ ಪೂರ್ಣಭದ್ರನು ಕಣ್ಣೀರಿನಲ್ಲಿ

ವ॥ ಅಂತು ಪೂರ್ಣಭದ್ರಂ ಪೇೞ್ದ ವೃತ್ತಾಂತಮಂ ಕೇಳ್ದಾತನನಿಂತೆಂದೆಂ

ಕಂ॥ ತಾರಾವಳಿ ಸಲೆ ವಸುಮತಿ
ನಾರಿಗೆ ಕೊಂಡುಯ್ದು ಕೊಟ್ಟಳೆಂಬ ಮಗಂ ವಿ
ಸ್ತಾರಮೆನೆ ಕಾಂತಿಮತಿಯ ಕು
ಮಾರಕನಾಂ ನಿನ್ನ ದುಃಖಮಂ ಬಿಡುಬೇಗಂ ೮೬

ವ॥ ಎಂಬುದುಮಾತಂ ಕಣ್ಬನಿಯಂ ಬಿಟ್ಟೆನ್ನಾಸ್ಯಕಮಳಮಂ ನೋಡಿ ಬೞಿಕಂ ಬಿಗಿಯಪ್ಪಿ ನಿತಾಂತ ಸುಖಾಂಬುಧಿಯೊಳ್ ಮುೞುಂಗಿ ದುಃಖವಾರ್ಧಿಯನುೞಿದು

ಕಂ॥ ಕಾಂತಿಮತಿಗಾದ ಪುಣ್ಯವ
ನಂತಿಂತೆನಲೇಕೆ ಕಾಮಪಾಲನ ಕಣ್ಗಳ್
ಮುಂತಿರ್ದೊಡಮಿಲ್ಲದೊಡಮ
ನಂತ ಸುಖಂ ಪುತ್ರನಾದಪಂ ತನಗೀಗಳ್ ೮೭

ವ॥ ಎಂದು ಪೂರ್ಣಭದ್ರಂ ಸಂತಸದಂತವನೆಯ್ದಲ್ ಮತ್ತಮಿಂತೆಂದಂ

ನೆರವಿಯನೆಲ್ಲಮಂ ಭರದೊಳೊರ್ವನೆ ಮತ್ಕರಖಡ್ಗಘಾತದಿಂ
ದೊರಸಿ ಬಿಸುಟ್ಟು ನಿಲ್ವಧಿಕ ಸಾಹಸಮೆನ್ನೊಳೆ ಕೂರ್ತು ಸಂದೊಡೇಂ
ದೊರಕಿದ ತಂದೆಯಂ ಬೞಿಕ ಕೊಂದಪರಾ ಖಳರೆಂಬ ಶಂಕೆಗೋ
ಸರಿಸುವೆನಲ್ಲದಿಂದಿನಿತು ಸೈರಿಸಲಾರ್ಪೆನೆ ಪೂರ್ಣಭದ್ರಕಾ ೮೮

ಮುಳುಗುತ್ತಾ ನನಗೆ (ಅರ್ಥಪಾಲನಿಗೆ) ಹೇಳಿದನು. ವ॥ ಹಾಗೆ ಪೂರ್ಣಭದ್ರನು ಹೇಳಿದ ಸಮಾಚಾರವನ್ನು ಕೇಳಿ ಆತನಿಗೆ ನಾನು ಹೇಳಿದೆನು. ೮೬. "ತಾರಾವಳಿಯು ವಸುಮತಿಗೆ ಕೊಂಡು ಹೋಗಿ ಕೊಟ್ಟ ಮಗನೇ ನಾನು! ನಾನೇ ಕಾಂತಿಮತಿಯ ಮಗ. ಇನ್ನು ಬೇಗ ನಿನ್ನ ದುಃಖವನ್ನು ಬಿಟ್ಟು ಬಿಡು" ವ॥ ಎಂಬ ಮಾತನ್ನು ಕೇಳಿ ಅವನು ಕಣ್ಣೀರನ್ನು ಕರೆದನು. ನನ್ನ ಮುಖ ಕಮಲವನ್ನು ನೋಡಿದನು. ಬಳಿಕ ಬಿಗಿಯಾಗಿ ತಬ್ಬಿಕೊಂಡನು. ಎಡೆಬಿಡದೆ ಸುಖಸಾಗರದಲ್ಲಿ ಮುಳುಗಿದನು. ದುಃಖ ಸಮುದ್ರದಿಂದ ಹೊರಕ್ಕೆ ಬಂದನು. ೮೭. "ಕಾಂತಿಮತಿಗೆ ಆದ ಪುಣ್ಯವನ್ನು ಅಷ್ಟು ಇಷ್ಟು ಎಂದು ಹೇಳಬೇಕಾಗಿಲ್ಲ. ಕಾಮಪಾಲನ ಕಂಗಳು ಮೊದಲಿನಂತೆ ಇರಲಿ ಇಲ್ಲದೆ ಹೋಗಲಿ, ಅವನಿಗೀಗ ಅನಂತ ಸುಖಕರನಾದ ಮಗನು ಸಿಕ್ಕಿದನು." ವ॥ ಎಂದು ಪೂರ್ಣಭದ್ರನು ಸಂತೋಷವನ್ನು ಪಡೆದನು. ನಾನು ಮತ್ತೆ ಹೀಗೆಂದನು. ೮೮. "ಈ ಶತ್ರು ಸಮೂಹವನ್ನೆಲ್ಲ ಒಬ್ಬನೇ ವೇಗದಿಂದ ನನ್ನ ಕತ್ತಿಯ ಹೊಡೆತದಿಂದ ಕೊಂದು ನಾಶಮಾಡುವ ಶಕ್ತಿ ಸಾಹಸವು ನನ್ನಲ್ಲಿದೆ. ಆದರೇನು? ಆ ಖಳರು ಈಗ ಸಿಕ್ಕಿರುವ ನನ್ನ ತಂದೆಯನ್ನು ಕೊಂದು ಹಾಕುವರು– ಎಂಬ ಭಯದಿಂದ ಹಿಂಜರಿಯುತ್ತಿದ್ದೇನೆ. ಪೂರ್ಣಭದ್ರ, ಅಲ್ಲದಿದ್ದರೆ ಇದನ್ನು ನಾನು ತಡೆದುಕೊಳ್ಳುತ್ತಿ

ವ॥ ಎಂದು ಪೇೞ್ದು ಪಿತೃಪ್ರಾಣರಕ್ಷಣೋಪಾಯಮಂ ಚಿಂತಿಸುತಿರ್ಪನ್ನೆಗಂ ಆ ದೇವಾಲಯದ ಕೋಟೆಯ ಬಿಲದಿಂ

ಮೊರೆಯುತ್ತುಂ ಕಾಳಕೂಟಜ್ವಲನಮನುಗುೞುತ್ತುಂ ವಿಷಜ್ವಾಲೆಯಿಂ ಕಾ
ಯ್ದುರಿಪುತ್ತುಂ ಮಾರ್ಗಮಂಬಾಯ್ದೆಱೆದೆರೆಗೆಳಸುತ್ತುಂ ನರಚ್ಛಾಯೆ ಮುಂದೇ
ಟ್ತರೆ ಕಣ್ಣಿಂದಾಲಿಸುತ್ತುಂ ಪಸಿವಿನೆಸಕದಿಂದೊಂದು ಗಂಭೀರ ಛಿದ್ರಾಂ
ತರದಿಂ ಕಾಳೋರಗಂ ಮೆಲ್ಲನೆ ಪೊಱಮಡಲಾಂ ಕಂಡೆನುರ್ವೀವರೇಣ್ಯಾ ೮೯

ವ॥ ಅಂತು ಪಾವು ಪೊಱಮಡುವುದಂ ಕಂಡು

ಕಪಿಲಾಕ್ಷಂ ನೀಳ್ದತೋಳ್ಗಳ್ ನಿಶಿತ ಕುಟಿಲದಂಷ್ಟ್ರಾಂಕುರಂ ವಕ್ರನಾಸಂ
ತಪನೀಯ ಪ್ರಾಯಕಾಯಂ ಫಣಿಗಣವಿವಿಧಾಲಂಕೃತಂ ತಳ್ಕೆ ಗೊಂಡಿ
ರ್ದ ಪತತ್ರಂ ತನ್ನೊಳೊಪ್ಪಿರ್ಪಹಿಕುಲರಿಪುವಂ ಸಂತತಂ ಸದ್ವಿಹಂಗಾ
ಧಿಪನಂ ಮಚ್ಚಿತ್ತದೊಳ್ ಭಾವಿಸಿದೆನತುಳ ಪಂಚಾಕ್ಷರಿಜಾಪ್ಯದಿಂದಂ ೯೦

ಕಂ॥ ಗರುಡಧ್ಯಾನಮನೊಲ್ದಂ
ತರಂಗದೊಳ್ ನಿಱಿಸಿ ಪಂಚಮುಖಮಂತ್ರಮನು
ಚ್ಚರಿಸಿಯಪಸವ್ಯ ಕರದೊಳ್
ಭರವಸದಿಂ ಪಿಡಿದೆನಾ ಭುಜಂಗಾಧಿಪನಂ ೯೧

ದ್ದೆನೆ? ವ॥ ಎಂದು ಹೇಳಿ ತಂದೆಯ ಪ್ರಾಣವನ್ನು ಕಾಪಾಡುವ ದಾರಿಯನ್ನು ಯೋಚಿಸುತ್ತಿರುವಾಗ ಆ ದೇವಾಲಯದ ಕೋಟೆಯ ಬಿಲದಿಂದ ೮೯. "ಮಹಾರಾಜನೆ, ಒಂದು ಆಳವಾದ ಬಿಲದಿಂದ ಮೆಲ್ಲಗೆ ಹೊರಕ್ಕೆ ಬರುತ್ತಿದ್ದ ಒಂದು ಕಾಲ ಸರ್ಪವನ್ನು ಕಂಡೆನು. ಅದು ಬುಸುಗುಟ್ಟುತ್ತಿತ್ತು. ಕಾಳಕೂಟ ವಿಷಾಗ್ನಿಯನ್ನು ಹೊರಕ್ಕೆ ಉಗುಳುತ್ತಿತ್ತು, ವಿಷದುರಿಯ ಜ್ವಾಲೆಗಳಿಂದ ದಾರಿಯಲ್ಲಿ ಸಿಕ್ಕಿದುದನ್ನೆಲ್ಲ ಸುಟ್ಟು ಹಾಕುತ್ತಿತ್ತು. ಬಾಯಿತೆರೆದುಕೊಂಡು ಆಹಾರಕ್ಕೆ ಆಸೆದೋರುತ್ತಿತ್ತು. ನರರ ನೆರಳು ಮುಂದೆ ಬಂದರೆ ಕಣ್ಣಿಂದ ಕೇಳುತ್ತಾ ವಿಪರೀತ ಹಸಿವಿನಿಂದ ಬರುತ್ತಿತ್ತು. ವ॥ ಹಾಗೆ ಹಾವು ಹೊರಕ್ಕೆ ಬರುವುದನ್ನು ಕಂಡು- ಕೆಂಗಣ್ಣು, ಉದ್ದವಾದ ತೋಳುಗಳು, ಹರಿತವಾದ ಬಗ್ಗಿದ ಮೊಳಕೆಯಂತೆ ಹಲ್ಲುಗಳು, ಬಗ್ಗಿದ ಮೂಗು, ಚಿನ್ನದ ಬಣ್ಣದ ಯೌವನದ ಶರೀರ, ವಿವಿಧ ಹಾವುಗಳಿಂದ ಅಲಂಕಾರ, ಅಂಟಿಕೊಂಡಿದ್ದ (ಸೇರಿಕೊಂಡಿದ್ದ) ರೆಕ್ಕೆಗಳು—ಇವುಗಳಿಂದ ಪ್ರಕಾಶಮಾನನಾದ, ಹಾವುಗಳ ಕುಲಕ್ಕೇ ಶತ್ರುವಾದ ಪಕ್ಷಿರಾಜನಾದ ಗರುಡನನ್ನು ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ಮನಸ್ಸಿನಲ್ಲಿ ಧ್ಯಾನಿಸಿದೆನು. ೯೧. ಮನಸ್ಸಿನಲ್ಲಿ ಗರುಡನನ್ನು ಧ್ಯಾನಿಸಿದೆನು. ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸಿ

ವ॥ ಅಂತು ಪಾವಂಪಿಡಿದು

ಕಂ॥ ಎಲೆಪೂರ್ಣಭದ್ರ ಫಣಿ ಕೈ
ಯ್ಗೊಳಗಾಯ್ತು ಶೀಘ್ರದಿಂದಮೆಮ್ಮಯ ಕಾರ್ಯಂ
ಫಲವಾಯ್ತು ಚಿಂತೆಯಂ ಬಿಡು
ತಿಳಿಯಲ್ ದೇಸಿಗರ್ಗೆ ದೈವಮುಳ್ಳುದು ಪುಸಿಯೇ ೯೨

ವ॥ ಅದೆಂತೆನೆ

ಕಂ॥ ಈ ಪಾವನುಯ್ದು ಮುತ್ತಿದ
ಚಾಪಟದೊಳ್ ಪಿತನಮೇಲೆ ಬಿಸುಡಲ್ ವಿಷ ಸಂ
ತಾಪಮನಿದು ಮಾಟ್ಕುಂ ಮೃತ
ರೂಪಂ ತಾನಾದನೆಂದು ಜನಮಱಿವಿನೆಗಂ ೯೩

ವ॥ ಬಟಿಕಾಂ ಪ್ರಾಣಪ್ರತಿಷ್ಠೆಯಂ ಮಾಡಿ

ಕಂ॥ ನಾಗಮತಮಂತ್ರದಿಂದಾ
ನಾಗಳ್ ವಿಷಮಂ ನಿರಂತರಂ ಸ್ತ್ರೋಭಿಸಿನಾ
ನಾಗಾರುಡಿಗರ್ಗಸದಳ
ಮಾಗಲ್ ಮಾಟ್ಪೆಂ ಸ್ವಕಾರ್ಯ ವಶದಿಂದೀಗಳ್ ೯೪

ವ॥ ಅಂತು ವಿಷಮಂ ಸ್ತ್ರೋಭಿಸಲ್ ಕಾಮಪಾಲಂ ಕಾಲಭವನಮನೆಯ್ದಿದನೆಂದು ನೆರವಿಯೆಲ್ಲಂ ಪರೆದುಪೋಗಲ್ ಬಟಿಕ್ಕಾ ಕಾಂತಿಮತಿ

ದೆನು. ಉತ್ಸಾಹದಿಂದ ಆ ಸರ್ಪರಾಜನನ್ನು ಬಲಗೈಯಿಂದ ಹಿಡಿದೆನು. ವ॥ ಹಾಗೆ ಹಾವನ್ನು ಹಿಡಿದು ೯೨. "ಎಲೆ ಪೂರ್ಣಭದ್ರ ! ಬಹು ಬೇಗ ಹಾವು ಕೈವಶವಾಯಿತು. ನಮ್ಮ ಕೆಲಸ ಫಲಿಸಿತು. ಚಿಂತೆ ಮಾಡಬೇಡ. ಅನಾಥರಿಗೆ ಸಹಾಯಮಾಡಲು ದೇವರಿದ್ದಾನೆ ಎಂಬ ಮಾತು ಸುಳ್ಳೇ. ಇದನ್ನು ನೀನು ತಿಳಿದುಕೋ. ವ॥ ಅದು ಹೇಗೆಂದರೆ– ೯೩. ಈ ಹಾವನ್ನು ತೆಗೆದುಕೊಂಡು ಹೋಗಿ ಜನರು ತುಂಬಿರುವ ಚೌಪಟದಲ್ಲಿ(ಚೌಕ)ನನ್ನ ತಂದೆಯ ಮೇಲೆ ಬಿಸುಡು, ಇದರಿಂದ ನಮ್ಮ ತಂದೆಗೆ ವಿಷದ ಸಂತಾಪವುಂಟಾಗುತ್ತದೆ. ಜನರೆಲ್ಲರೂ ಅವನು ಸತ್ತು ಹೋದನೆಂದು ತಿಳಿಯುತ್ತಾರೆ, ವ॥ ಬಳಿಕ ನಾನು ಮತ್ತೆ ಪ್ರಾಣಬರುವಂತೆ ಮಾಡಿ – ೯೪. ನನ್ನ ಕಾರ್ಯಸಾಧನೆಗಾಗಿ. ಸರ್ಪಮಂತ್ರದಿಂದ ಆಗ ವಿಷವನ್ನು ಹರಡದಂತೆ ತಡೆಯುತ್ತೇನೆ. ನಾನಾ ವಿಧರಾದ ಹಾವಾಡಿಗರಿಗೂ ಅಥವಾ ವಿಷವೈದ್ಯರಿಗೂ ಸಾಧ್ಯವಾಗದಂತೆ ಮಾಡುವೆನು. ವ॥ ಹಾಗೆ ವಿಷವನ್ನು ತಡೆಹಿಡಿಯಲು ಕಾಮಪಾಲನು ಯಮನ ಮನೆ ಸೇರಿದನೆಂದು ತಿಳಿದು ಅಲ್ಲಿ ಸೇರಿದ್ದ ಗುಂಪೆಲ್ಲ ಹೊರಟು ಹೋಗುವುದು. ಬಳಿಕ ಆ ಕಾಂತಿಮತಿಯು

ಕಂ॥ ಎನ್ನಪತಿಯೞಿದನೀ ಗೆನ
ಗಿನ್ನಾರ್ ಶರಣಾತನಲ್ಲದನುಗಮನಕ್ಕಾ
ಸನ್ನಂ ಸಮಕಟ್ಟುವುದುೞಿ
ಮನ್ನಣೆಯಿಂದೆನಗೆ ಸಿಂಹಘೋಷ ನರೇಂದ್ರಾ ೯೫

ವ॥ ಎಂದರಸಂಗೆ ಪೇೞ್ದನುಗಮನಕ್ಕನುವಾಗಿ ಸರ್ವಾಲಂಕಾರಂಗೈಯಲ್ ಕಾಮಪಾಲನ ಶಬವಂ ಕೊಂಡುಪೋಗಲ್ ಬೞಿಕ್ಕಾನಲ್ಲಿಗೆ ಬಂದಾತನ ಪ್ರಾಣಮಂ ಪಡೆವೆನೆಂದು ಪೂರ್ಣಭದ್ರಂಗೆ ಪೇೞ್ದು ಮತ್ತಮೀತೆಂದೆಂ

ಕಂ॥ ಎಮ್ಮವ್ವೆಗೆ ಪೇೞೊಲವಿಂ
ಕೆಮ್ಮನೆ ನೀಂ ಬಿಸುಡಲಿತ್ತ ನಿಜಸುತನೇೞ್ತಂ
ದಮ್ಮಾಣುಮ್ಮಳಿಕೆಯನಥ
ಪಮ್ಮರಣದಿನುೞಿಪನೆಂಬ ಶುಭವಾಚಕಮಂ ೯೬

ವ॥ ಎಂದು ಪೂರ್ಣಭದ್ರನಂ ಕಾಂತಿಮತಿಯ ಸಮೀಪಕ್ಕತ್ತಲೆ ಕಳಿಪಿ ಇತ್ತಲಾಂ ಕಾಮಪಾಲನಿರ್ದ ಚಾವಟಕ್ಕೆ ಬಂದು ನೋೞ್ಪಿನಂ

ವಿಲಸದ್ಯೋಗವಿಲಾಸಮಂ ನಿಜವಪುಸ್ಸೌಭಾಗ್ಯದಿಂ ಧಾತ್ರಿಯೊಳ್
ಬೆಳಗುತ್ತಿರ್ಪಮೃತಾಂಶುಬಿಂಬ ಕಳೆಗಳ್ ಚಂಚತ್ಸುಧಾ ಬಿಂದು ಸಂ
ಮಿಳಿತಂಗಳ್ತವೆ ಕೊಂಬುಕೊಂಬಿನೆಡೆಯೊಳ್ ಸಿಲ್ಕಿರ್ದವೋಲ್ ಪುಷ್ಪದಿಂ
ಫಲದಿಂ ರಂಜಿಸುತಿರ್ದುದೊಂದು ಸತತಂ ಚೆಲ್ವಾದ ಚಿಂಚಾದ್ರುಮಂ ೯೭

೯೫. ಸಿಂಹಘೋಷ ಮಹಾರಾಜನೆ! ನನ್ನ ಗಂಡನು ಸತ್ತನು. ಈಗ ಆತನಲ್ಲದೆ ಬೇರೆ ಯಾರೂ ರಕ್ಷಕರಿಲ್ಲ. ನನಗೆ ಗೌರವದಿಂದ ಸಹಗಮನಕ್ಕೆ ಏರ್ಪಾಟುಮಾಡಿಸಬೇಕು. ವ॥ ಎಂದು ಅರಸನಿಗೆ ಹೇಳಿ ಸಹಗಮನಕ್ಕೆ ಸಿದ್ಧಳಾಗಿ ಎಲ್ಲ ವಿಧವಾದ ಅಲಂಕಾರಗಳನ್ನು ಮಾಡಲು ಕಾಮಪಾಲನ ಹೆಣವನ್ನು ಕೊಂಡು ಹೋಗಲಿ. ಬಳಿಕ ನಾನು ಅಲ್ಲಿಗೆ ಬಂದು ಆತನನ್ನು ಬದುಕಿಸುವೆನು." ಎಂದು ಪೂರ್ಣಭದ್ರನಿಗೆ ಹೇಳಿದೆನು. ಮತ್ತೂ ಹೀಗೆಂದೆನು. ೯೬. "ನಮ್ಮ ತಾಯಿಗೆ ಪ್ರೀತಿಯಿಂದ ಹೇಳು. ನೀನು ಯಾರಿಗೂ ತಿಳಿಯದಂತೆ ಬಿಟ್ಟ ನಿನ್ನ ಮಗನೀಗ ಬಂದಿದ್ದಾನೆ. ದುಃಖವನ್ನು ಬಿಡು. ಪತಿಯು ಬದುಕುವನು ಎಂಬ ಶುಭವಾರ್ತೆಯನ್ನು ತಿಳಿಸು," ವ॥ ಎಂದು ಹೇಳಿ ಪೂರ್ಣಭದ್ರನನ್ನು ಕಾಂತಿಮತಿಯ ಹತ್ತಿರಕ್ಕೆ ಕಳುಹಿಸಿದೆನು. ಅನಂತರ ಕಾಮಪಾಲ ನಿದ್ದ ಚೌಕಕ್ಕೆ ಬಂದು ನೋಡಿದೆನು. ಆಗ ಅಲ್ಲಿ ೯೭. ಒಂದು ಸುಂದರವಾದ ಹುಣಿಸೆಮರವಿದ್ದಿತು. ಪ್ರಕಾಶಮಾನವಾದ ಯೋಗ ವಿಲಾಸವನ್ನು ತನ್ನ ಶರೀರದ ಸೌಭಾಗ್ಯದಿಂದ ಭೂಮಿಯಲ್ಲಿ ಬೆಳಗುತ್ತಿರುವ ಚಂದ್ರನ ಕಲೆಗಳು ಅಮೃತಬಿಂದುಗಳಿಂದ ಕೂಡಿಕೊಂಡು ಕೊಂಬೆ ಕೊಂಬೆಯಲ್ಲಿಯೂ ಸಿಕ್ಕಿಕೊಂಡಿವೆಯೋ ಎಂಬಂತೆ

ವ॥ ಅಂತಿರ್ದುದೊಂದು ಪುಣಿಸೆಯುಮರನಂ ಪಲಂಬರೇಱಿ ಕಾಮಪಾಲನಂ ನೋಡುತ್ತಿರಲಾನುಮೊಂದೆಳೆಗೊಂಬಿನೊಳ್ ಕುಳ್ಳಿರ್ದಾಗಲ್

ಕಂ॥ ಅರಸನುಮಂ ತತ್ಸುತನುಮ
ನರವರಿಸದೆ ತೀರ್ಚಿದಂ ಮಗುೞ್ದಿರ್ದಂಗಂ
ಗರಳಮನಿಕ್ಕಿ ಕೊಲಲ್ ಚಿ
ಚ್ಚರದಿಂ ಬಗೆದಂ ಸಮಸ್ತ ಮಿತ್ರದ್ರೋಹಂ ೯೮

ವ॥ ಎಂದೊರ್ವ ಮಾತಂಗಕಂ ಮೂಱುಸೂೞು ಸಾಱಿ ಕಾಮಪಾಲನ ಕಣ್ಗಳಂ ಗತಜೀವಿತನಪ್ಪ ಮಾೞ್ಕೆಯಿಂ ಪೆಡದಲೆಯೊಳ್ ತೋಡುವೆನೆಂಬ ಸಮಯದೊಳ್

ಕಂ॥ ಮುಸುಕಿನೊಳಗಿರ್ದ ಪಾವಂ
ಪಸಿನಂ ಮತ್ಪಿತನಮೇಲೆ ಬಿಸುಡಲೊಡಂ ಮುಂ
ಪಸಿದಿರ್ದ ದಾಂಡಿತತಿ ಸರ
ಭಸದಿಂ ಪಿತನುಮನೊಱಲ್ವ ಮಾತಂಗನುಮಂ ೯೯

ವ॥ ಅಂತು ಕಾಳೋರಗಂ ಕರ್ಚಲ್ ಮತ್ಪಿತನ ಪ್ರಾಣಪ್ರತಿಷ್ಠೆಯನಾರುಮಱಿಯದಂತುಮಾಡಿ ವಿಷಮಂ ಸ್ತೋಭಿಸೆ

ಕಂ॥ ಮಾತಂಗಕಂ ಕೃತಾಂತ ನಿ
ಕೇತನಮಂ ಪೊಕ್ಕನೆಂದೊಡೀವಿಷದಿಂ ಮ
ತ್ತೀತಂ ಬರ್ದುಕುವನೆ ಎನು
ತ್ತೋತೆಲ್ಲರ್ ಕಾಮಪಾಲನೊಡಲಂ ಬಿಸುಟರ್ ೧೦೦

ಹೂಗಳಿಂದಲೂ ಹಣ್ಣುಗಳಿಂದಲೂ ಅದು ರಂಜಿಸುತ್ತಿತ್ತು. ವ॥ ಹಾಗಿದ್ದ ಒಂದು ಹುಣಸೇಮರವನ್ನು ಹತ್ತಿ ಹಲವರು ಕಾಮಪಾಲನನ್ನು ನೋಡುತ್ತಿದ್ದರು. ನಾನೂ ಒಂದು ಚಿಕ್ಕ ಕೊಂಬೆಯ ಮೇಲೆ ಏರಿಕುಳಿತೆನು. ಆಗ - ೯೮. "ಅರಸನನ್ನೂ ಅವನ ಮಗನನ್ನೂ ಈತನು ಹಿಂದುಮುಂದು ನೋಡದೆ ಕೊಂದನು. ಮತ್ತೆ ಉಳಿದವನಿಗೂ ವಿಷವನ್ನು ಕೊಟ್ಟು ಕೊಲ್ಲಲು ಹವಣಿಸಿದನು. ಹೀಗೆ ಎಲ್ಲರಿಗೂ ಮಿತ್ರದ್ರೋಹವನ್ನೆಸಗಿದನು" ವ॥ ಎಂದು ಒಬ್ಬ ಚಂಡಾಲನು ಮೂರು ಸಲ ಸಾರಿದನು. 'ಕಾಮಪಾಲನನ್ನು ಹೆಡತಲೆಯಲ್ಲಿ ತೋಡಿ ಕಂಗಳನ್ನು ಕಿತ್ತು ಸಾಯಿಸುವೆನು' ಎಂದು ಹೇಳಿದನು. ಆ ಸಮಯದಲ್ಲಿ- ೯೯. ಮುಸುಕಿನಲ್ಲಿ ಕಾಣದಂತೆ ಇಟ್ಟುಕೊಂಡಿದ್ದ ಹಾವನ್ನು ನನ್ನ ತಂದೆಯ ಮೇಲೆ ಬಿಸುಟೆನು. ಕೂಡಲೆ ಹಸಿದಿದ್ದ ಆ ಹಾವು ವೇಗದಿಂದ ನನ್ನ ತಂದೆಯನ್ನೂ ಕೂಗಿ ಸಾರುತ್ತಿದ್ದ ಚಂಡಾಲನನ್ನೂ ಕಚ್ಚಿತು. ವ॥ ಹಾಗೆ ಕಾಲಸರ್ಪವು ಕಚ್ಚಲು ನನ್ನ ತಂದೆಯ ಪ್ರಾಣಗಳನ್ನು ಹೋಗದಂತೆ ತಡೆದು ನಿಲ್ಲಿಸಿ ಯಾರಿಗೂ ತಿಳಿಯದಂತೆ ವಿಷವನ್ನು ಹರಡದಂತೆ ತಡೆದು ನಿಲ್ಲಿಸಿದೆನು. ೧೦೦. 'ಈ ವಿಷದಿಂದ ಮಾದಿಗನು ಯಮನ ಮನೆಯನ್ನು ಸೇರಿದನು. ಹೀಗಿರುವಾಗ ಈತನು (ಕಾಮ

ಕಂ॥ ಜನಪತಿಕೊಲಿಸದೆ ಕಳೆ ಲೋ
ಚನಮೆರಡೆನಲ್ಕೆ ಪಾಪಿಮಾಡಿದ ಪಾಪಂ
ಘನಮಾದುದಱಿಂ ದೈವಂ
ಮುನಿದಸುವಂ ಕೊಂಡುದೞಿದನಧಿಕದ್ರೋಹಂ ೧೦೧

ವ॥ ಎಂದಲ್ಲಿರ್ದವರೆಲ್ಲರುಂ ಕಾಮಪಾಲನ ಕಳೇಬರಮಂ ಬಿಸುಟ್ಟು ಪೋಗಲಾಂ ಪೇೞ್ದತೆಱದಿಂ ಮುನ್ನಮೆ ಪೂರ್ಣಭದ್ರಂ ಕಾಂತಿಮತಿಗೆ ಬುದ್ಧಿವೇೞ್ದೊಡಾ ಕಾಂತಿಮತಿ ಸಿಂಹಘೋಷನಿರ್ದೆಡೆಗೆ ಪೋಗಿ

ಕಂ॥ ಎನ್ನಧಿಪಂ ನಿನಗೊಡರಿಸಿ
ದನ್ನಯದಿಂದೞಿದನಾತನೊಡನಾಂ ಪೋಗಲ್
ಮುನ್ನಮೆ ಸಿದ್ಧಂ ಸಹಗಮ
ನನ್ನೆಟ್ಟನೆ ಧರ್ಮಮಲ್ತೆ ನನಗೆ ನೃಪಾಲಾ ೧೦೨

ಪಾತಕನಾದೊಡಂ ಪಿಶುನನಾದೊಡಮೆಲ್ಲರೊಳುಗ್ರನಾದೊಡಂ
ಘಾತುಕನಾದೊಡಂ ಪತಿಯೆ ತನ್ನಧಿದೈವಮೆನಿಪ್ಪಕಾಂತೆ ಸಂ
ಪ್ರೀತಿಯಿನಪ್ಪುಕೆಯ್ದು ಪತಿಯಾದವೊಲಪ್ಪುದು ಧರ್ಮಮಲ್ತೆ ಕೇಳ್
ಭೂತಳನಾಥ ಕೂರ್ತೆನಗನುಜ್ಞೆಯನಗ್ನಿಯೊಳೀವುದೞಿಯಿಂ ೧೦೩

ವ॥ ಎಂದು ಬಿನ್ನಪಂಗೆಯ್ಯಲಾತಂ ಮನದೊಳ್ ಗುಡಿಗಟ್ಟಿ ಶತ್ರು ನಿಶ್ಶೇಷಮಕ್ಕೆಂದಗ್ನಿ ಪ್ರವೇಶಕ್ಕನುಜ್ಞೆಯುಂ ಕುಡಲೊಡಂ

ಪಾಲನು) ಬದುಕುತ್ತಾನೆಯೇ ?' ಎಂದು ಹೇಳಿಕೊಳ್ಳುತ್ತಾ ಎಲ್ಲರೂ ಕಾಮಪಾಲನ ಶರೀರವನ್ನು ತೊರೆದು ಹೋದರು. ೧೦೧. "ರಾಜನು ಕೊಲ್ಲಿಸದೆ ಕಣ್ಣು ಕೀಳಲು ಹೇಳಿದನು. ಆದರೆ ಈ ಪಾಪಿಯು ಮಾಡಿದ ಪಾಪವು ತುಂಬ ದೊಡ್ಡದು ಆದುದರಿಂದ ದೈವ ಮುನಿಯಿತು. ಈ ಅಧಿಕ ದ್ರೋಹಿಯು ಸತ್ತನು". ವ|| ಎಂದು ಹೇಳಿಕೊಂಡು ಅಲ್ಲಿದ್ದವರೆಲ್ಲರೂ ಕಾಮಪಾಲನ ಶರೀರವನ್ನು ತೊರೆದು ಹೋದರು. ನಾನು ಹೇಳಿದ್ದಂತೆಯೇ ಪೂರ್ಣಭದ್ರನು ಮೊದಲೆ ಕಾಂತಿಮತಿಗೆ ಹೇಳಿದ್ದನು. ಅದರಂತೆ ಕಾಂತಿಮತಿಯು ಸಿಂಹ ಘೋಷನಿದ್ದಲ್ಲಿಗೆ ಹೋಗಿ– ೧೦೨. "ರಾಜನೆ ! ನನ್ನ ಗಂಡನು ನಿನಗೆ ಮಾಡಿದ ಅನ್ಯಾಯದಿಂದ ಸತ್ತನು. ನಾನು ಅವನೊಡನೆ ಹೋಗಲು ಮೊದಲೆ ಸಿದ್ಧಳಾಗಿದ್ದೇನೆ. ನನಗೆ ಪತಿಯೊಡನೆ ಅಗ್ನಿಪ್ರವೇಶಮಾಡುವುದು ಧರ್ಮವಾಗಿದೆಯಷ್ಟೆ. ೧೦೩. ಭೂಮಿಯೊಡೆಯನೆ ! 'ಪಾಪಿಯಾಗಿರಲಿ. ಚಾಡಿಕೋರನಾಗಿರಲಿ ಎಲ್ಲರಲ್ಲಿ ಕ್ರೂರಿಯಾಗಿರಲಿ, ಕೊಲೆಪಾತಕನಾಗಿರಲಿ. ಪತಿಯೇ ತನಗೆ ಪರದೈವ' ಎಂದು ಭಾವಿಸುವ ಕಾಂತೆಯು ಪ್ರೀತಿಯಿಂದ ಪತಿಯ ಗತಿಯನ್ನೇ ಪಡೆಯಬೇಕು, ಇದೆ, ಧರ್ಮ. ಆದುದರಿಂದ ಅವನೊಡನೆ ಅಗ್ನಿಪ್ರವೇಶ ಮಾಡಲು ಸಂತೋಷದಿಂದ ಅಪ್ಪಣೆಯನ್ನು ಕೊಡು ವ|| ಎಂದು ವಿಜ್ಞಾಪಿಸಿದಳು. ಆತನು ಮನಸ್ಸಿನಲ್ಲಿಯೇ ಸಂತೋಷ

ಕಂ॥ ಶವಶೃಂಗಾರಂ ಗೆಯ್ವಲ್
ಭವನಕ್ಕಾ ಕಾಮಪಾಲ ಸಚಿವನ ನಿಜದೇ
ಹವನುಯ್ದೋವರಿಯೊಳ್ ಸಂ
ತವಿಟ್ಟು ಮನ್ಮಾರ್ಗಮಂ ನಿರೀಕ್ಷಿಸುತಿರ್ದಳ್ ೧೦೪

ವ॥ ಅಂತು ಪೂರ್ಣಭದ್ರನುಂ ಕಾಂತಿಮತಿಯುಮೆನ್ನಬರವಂ ಪಾರುತ್ತಿರಲಾಂ ಪ್ರಚ್ಛನ್ನ ವೇಷದಿಂ ಬಂದು ಪೂರ್ಣಭದ್ರನೀಂ ಕಾಂತಿಮತಿಯು ಕುಱುಹನಱಿದು

ಕಂ॥ ಕಣ್ಣೀವಿನೋಡಿ ಮತ್ತಂ
ಗೋಣ್ಗೊಟ್ಟನೆ ಬಿಗಿಯೆ ಸೆರೆಗಳಿಂ ಮೋಹಕುಜಂ
ಪಣ್ತೆಸೆಯಲೆಱಗಿದೆಂಸಲೆ
ಪೂಣ್ತೆನ್ನಯ ಪುಣ್ಯ ಸಿದ್ಧಿಯಾಯ್ತೆಂದಾಗಳ್ ೧೦೫

ವ॥ ಅಂತು ಕಾಂತಿಮತಿಗೆ ನಮಸ್ಕಾರಂ ಮಾಡಲೊಡಂ

ಸ್ತನದಿಂ ಚುಮ್ಮೆಂದು ಪಾಲ್ಗಳ್ ಸುರಿಯೆ ಭುಜಯುಗಂ ಬೆರ್ಚೆ ವಕ್ತ್ರಾಂಬು
ಜಂಪೆಂ
ಪಿನ ಸೊಂಪಂ ಬೀಱಲೆನ್ನಂಪರಸಿ ನೆಗಪಿಯೊಲ್ದಪ್ಪಿ ಮುಂಡಾಡಿ ಮದ್ಭಾ
ಗ್ಯನಿಧಾನಂ ಕೆಯ್ಗೆ ಸಾರ್ದತ್ತಿಳೆಯೊಳಧಿಕರಾರೆನ್ನವೋಲೆಂದು ಕಣ್ತುಂ
ಬ ನಿತಾಂತಂ ನೋಡುತಿರ್ದಳ್ ಜನನಿನಲವಿನಿಂದೆನ್ನನಾಗಳ್ ಮರೇಂದ್ರಾ ೧೦೬

. ಗೊಂಡು ಶತ್ರುನಿರ್ನಾಮವಾಗಲೆಂದು ಅಗ್ನಿ ಪ್ರವೇಶಕ್ಕೆ ಅಪ್ಪಣೆಯನ್ನಿತ್ತನು ೧೦೪. (ಆಗ) ಹೆಣಕ್ಕೆ ಅಲಂಕಾರಮಾಡುವುದಕ್ಕಾಗಿ ಕಾಂತಿಮತಿಯು ಕಾಮಪಾಲನ ಶರೀರವನ್ನು ಮನೆಗೆ ಎತ್ತಿಕೊಂಡು ಹೋದಳು. ಅಲ್ಲಿ ಕೋಣೆಯಲ್ಲಿ ಸಮಾಧಾನದಿಂದ ನನ್ನ ದಾರಿ ಕಾಯುತ್ತಿದ್ದಳು. ವ॥ ಹಾಗೆ ಪೂರ್ಣಭದ್ರನೂ ಕಾಂತಿಮತಿಯೂ ನನ್ನ ಆಗಮನ ವನ್ನು ಕಾಯುತ್ತಿದ್ದರು. ಆಗ ನಾನು ವೇಷಮರೆಸಿಕೊಂಡು ಬಂದು ಪೂರ್ಣಭದ್ರ ನನ್ನೂ ಕಾಂತಿಮತಿಯನ್ನೂ ಗುರುತು ಹಿಡಿದೆನು. ೧೦೫. ತಾಯಿಯನ್ನು ಕಣ್ತುಂಬ ನೋಡಿದೆನು. ನನ್ನ ಕುತ್ತಿಗೆಯ ನರಗಳು ಆನಂದದಿಂದ ಸೇದಿಕೊಂಡುವು. ಪ್ರೀತಿ ಯೆಂಬ ಮರವು ಹಣ್ಣುತುಂಬಿ ಬಗ್ಗಿದಂತೆ ಅವಳ ಕಾಲುಗಳಿಗೆರಗಿದೆನು. ಪ್ರತಿಜ್ಞೆ ಮಾಡಿದ ನನ್ನ ಪುಣ್ಯವು ಸಿದ್ಧಿಸಿತೆಂದು ಆಗ ತಿಳಿದೆನು. ವ॥ ಹಾಗೆ ನಾನು ಕಾಂತಿ ಮತಿಗೆ ನಮಸ್ಕಾರ ಮಾಡಿದೆನು. ಆಗ - ೧೦೬. "ನನ್ನ ತಾಯಿಯ ಸ್ತನಗಳಿಂದ ಚುಮ್ ಎಂದು ಹಾಲು ಚಿಮ್ಮಿ ಹರಿಯಿತು. ತೋಳುಗಳೆರಡೂ ಅದುರಿದುವು. ಮುಖ ಕಮಲವು ಹಿರಿದಾದ ಆನಂದವನ್ನು ಹೊರಸೂಸಿತು. ನನ್ನ ಹರಸಿ ಮೇಲಕ್ಕೆತ್ತಿ ತಬ್ಬಿಕೊಂಡಳು ಮುದ್ದಾಡಿದಳು. 'ಭೂಮಿಯಲ್ಲಿ ಭಾಗ್ಯದ ನಿಧಿಯೇ ನನ್ನ ವಶವಾಯಿತು. ನನ್ನನ್ನು ಮೀರಿಸುವವರಾರು ?' ಎಂದು ಭಾವಿಸಿ ನನ್ನನ್ನು ಕಣ್ತುಂಬ ಪ್ರೀತಿ

ವ॥ ಅಂತು ನೋಡಿ

ಕಂ॥ ಅಱಿದಿರ್ದುಂತಾರಾವಳಿ
ಪೆಱಳ್ಗೆ ವಸುಮತಿಗೆ ಕೊಟ್ಟಳೆನ್ನಯ ಮಗನಂ
ನೆಱೆನೋಂಪಿಯನೆಸಗದವಳ್
ತಱಿಸಲ್ವಳೆ ಪುತ್ರಸುಖದೊಳೆಂತೆಳಸಿದೊಡಂ ೧೦೭

ತೊದಳಿಸೆವ ನುಡಿಗಳಂ ಚೆ
ಲ್ವೊದವಿದ ದಟ್ಟಡಿಯನಮರ್ದ ದೂಳಾಟದ ಸಂ
ಪದವನುಱೆಕೇಳ್ವ ಕಾಣ್ಬ
ಭ್ಯುದಯಂ ದೊರೆಕೊಳ್ವಪುಣ್ಯಮೆನಗಾದಪುದೇ ೧೦೮

ವ॥ ಎಂದು ಮಗುೞ್ದು ಮಗುೞ್ದಪ್ಪುವಂಬಿಕೆಗಾನಂದಮನೆಸಗಿಯನಂತರಂ ಸರ್ಪದಷ್ಟನಾಗಿ ಶವರೂಪದಿಂದಿರ್ದ ಕಾಮಪಾಲನೆಡೆಗೆ ಬಂದು

ಕಂ॥ ಗಾರುಡ ಪಂಚಾಕ್ಷರಿಯಿಂ
ನೀರಂ ಮಂತ್ರಿಸುತಮಮೃತಪಂಚಾಕ್ಷರಿಯಿಂ
ದಾರಣೆಯುಂ ಜಪಿಸುತ್ತುಂ
ಮಾರಾರಿಯ ನೀಲಕಂಠನಂ ಧ್ಯಾನಿಸಿದೆಂ ೧೦೯

ಸರಸಿಜನೇತ್ರನಿಂದ್ರನಜನಷ್ಟದಿಶಾಧಿಪರಾದಿಯಾದದೇ
ವರಗಡಣಕ್ಕೆ ಭೀತಿಯನೊಡರ್ಚುವ ದುರ್ದಮಕಾಳಕೂಟಮಂ
ಕರಕಮಲಂಗಳಂ ಪೊಸೆದುಸಾದಿನ ಮಾೞ್ಕೆಯೊಳೊಲ್ದು ಕಂಠದೊಳ್
ಧರಿಸಿದ ನೀಲಕಂಠನ ನಿಜಾಕೃತಿಯುಂ ನೆನೆದೆಂ ನೃಪಾಲಕಾ ೧೧೦

ಯಿಂದ ನೋಡುತ್ತಿದ್ದಳು. ವ॥ ಹಾಗೆ ನೋಡಿ—೧೦೭. “ತಿಳಿದೂ ತಿಳಿದೂ ತಾರಾವಳಿಯು ಬೇರೆಯವಳಾದ ವಸುಮತಿಗೆ ನನ್ನ ಮಗನನ್ನು ಕೊಟ್ಟಳು, ಒಳ್ಳೆಯ ವ್ರತವನ್ನು ಮಾಡದವಳು ಎಷ್ಟು ಬಯಸಿದರೂ ಪುತ್ರ ಸುಖವನ್ನು ಹೊಂದ ಬಲ್ಲಳೆ ? ೧೦೮. ಮನೋಹರವಾದ ತೊದಲು ಮಾತುಗಳನ್ನೂ ಸುಂದರವಾದ ತಪ್ಪು ಹೆಜ್ಜೆಗಳನ್ನೂ, ಇನಿದಾದ ದೂಳಿನ ಆಟದ ಸಂಪತ್ತನ್ನೂ ನೋಡುವ ಮತ್ತು ಕಾಣುವ ಪುಣ್ಯವು ನನಗೆ ಉಂಟೇ ?” ವ॥ ಎಂದು ಹೇಳಿಕೊಂಡು ಮತ್ತೆ ಮತ್ತೆ ಅಪ್ಪಿಕೊಳ್ಳುವ ತಾಯಿಗೆ ಆನಂದವನ್ನುಂಟುಮಾಡಿದೆನು. ಅನಂತರ ಹಾವು ಕಚ್ಚಿ ಹೆಣದ ರೂಪದಲ್ಲಿದ್ದ ಕಾಮಪಾಲನ ಹತ್ತಿರಕ್ಕೆ ಬಂದು—೧೦೯. ಗಾರುಡ ಪಂಚಾಕ್ಷರಿಯಿಂದ ನೀರನ್ನು ಮಂತ್ರಿಸಿದೆನು. ಅಮೃತ ಪಂಚಾಕ್ಷರಿಯಿಂದ ಆರಣೆಯನ್ನು ಜಪಿಸಿದೆನು. ಮತ್ತು ಕಾಮಾರಿಯಾದ ನೀಲಕಂಠನನ್ನು ಧ್ಯಾನಿಸಿದೆನು. ೧೧೦. ವಿಷ್ಣು, ಇಂದ್ರ, ಬ್ರಹ್ಮ, ಅಷ್ಟದಿಕ್ಪಾಲಕರು ಮೊದಲಾದ ದೇವ ಸಮೂಹಕ್ಕೆ ಭೀತಿಯನ್ನುಂಟುಮಾಡುವ ತಡೆಯಲಾಗದ ಕಾಳಕೂಟ ವಿಷವನ್ನು ಕರಕಮಲಗಳಲ್ಲಿ ತಿಕ್ಕಿ ಸಾದಿನಂತೆ, ಮಾಡಿ ಕುತ್ತಿಗೆಯಲ್ಲಿ ಶಿವನು ಧರಿಸಿದ್ದಾನೆ. ಮಹಾರಾಜನೆ, ನಾನು ಅಂತಹ ನೀಲಕಂಠನ ನಿಜ ಸ್ವರೂಪ

ಕಪಿಲಾಕ್ಷಂ ನೀಳ್ದತೋಳ್ಗಳ್ ಮಿಸುಪ ನಿಶಿತದಂಷ್ಟ್ರಾಂಕುರಂ ವಕ್ರನಾಸಂ
ತಪನೀಯ ಪ್ರಾಯಕಾಯಂ ಫಣಿಕುಲ ವಿವಿಧಾಲಂಕೃತಂ ತಳ್ಕಿಗೊಂಡಿ
ರ್ದಪತತ್ರಂ ತನ್ನೊಳೊಪ್ಪಿರ್ಪಹಿಗಣರಿಪುವಂ ಶೀಘ್ರದಿಂ ತದ್ವಿಹಂಗಾ
ಧಿಪನಂ ಮಚ್ಚಿತ್ತದೊಳ್ ಭಾವಿಸಿದೆನಮಳ ಪಂಚಾಕ್ಷರೀ ಜಾಪ್ಯದಿಂದಂ ೧೧೧

ವ॥ ಅಂತು ನೀಲಕಂಠ ಗರುಡರ ಧ್ಯಾನಮಂ ಮಾಡಿಯಮೃತ ಪಂಚಾಕ್ಷರಿಯಿಂದು ದಕಮಂ ಮಂತ್ರಿಸಿ ಮುಖದೊಳ್ ತಳಿದು

ಕಂ॥ ಹಾಮೆಕ್ಕೆಯ ಪಣ್ಣೊಳತಿ
ಕ್ಷೇಮದೊಳಿರಿಸಿಟ್ಟ ಸುಂಟಿ ಹಿಪ್ಪಲಿಮೆಣಸಂ
ಬೀಮೂಱನಾತ್ಮಜಲದಿಂ
ಪ್ರೇಮದಿನಾತಂಗೆ ನಲಿದು ನಸ್ಯಂಗೆಯ್ದಂ ೧೧೨

ವ॥ ಅಂತು ನಸ್ಯಂಗೆಯ್ಯಲೊಡಂ

ತನುವಿನ ಕಾಳಿಮಂ ಪಱಿದು ಸುರ್ಕಿದಗೋಣ್ ಸರಿಸೈತನಾಗಿ ತ
ಣ್ಪಿನ ಬೆಮರುಣ್ಮೆ ರೋಮನಿಕರಂ ತಲೆಯೆತ್ತಿ ಬೆರಲ್ ನಿಮಿರ್ದುಲೋ
ಚನಮರೆನೀರಡರ್ದುಸಿರ್ಗಳೊಯ್ಯನೆ ತುಂಬಿ ವಿಷಂ ಕಱಲ್ದು ಭೋಂ
ಕನೆ ಪಿತನೊಲ್ದುಕಣ್ದೆಱೆದು ನೋಡಿದನೆನ್ನ ಮುಖೇಂದು ಬಿಂಬಮಂ ೧೧೩

ವನ್ನು ಧ್ಯಾನಿಸಿದೆನು. ೧೧೧. ಕೆಂಗಣ್ಣುಗಳು, ಉದ್ದವಾದ ತೋಳುಗಳು, ಹೊಳೆಯುವ ಚೂಪಾದ ಹಲ್ಲುಗಳು, ಬಗ್ಗಿದಮೂಗು, ಚಿನ್ನದ ಬಣ್ಣದ ಪ್ರಾಯದ ಶರೀರ, ಅನೇಕ ಹಾವುಗಳಿಂದ ಅಲಂಕೃತ, ಸೇರಿಕೊಂಡ ರೆಕ್ಕೆಗಳು—ಇವುಗಳಿಂದ ಪ್ರಕಾಶಮಾನವಾದ ಹಾವುಗಳಿಗೆ ಶತ್ರುವಾದ ಪಕ್ಷಿರಾಜನಾದ ಗರುಡನನ್ನು ಪಂಚಾಕ್ಷರೀ ಮಂತ್ರವನ್ನು ಜಪಿಸಿ ಧ್ಯಾನಮಾಡಿದೆನು. ವ॥ ಹೀಗೆ ನೀಲಕಂಠನನ್ನು ಗರುಡನನ್ನೂ ಧ್ಯಾನಮಾಡಿ ಅಮೃತ ಪಂಚಾಕ್ಷರೀಮಂತ್ರದಿಂದ ನೀರನ್ನು ಮಂತ್ರಿಸಿ ಮುಖದ ಮೇಲೆ ತಳಿದೆನು. ೧೧೨. ಹಾಮೆಕ್ಕೆಯ ಹಣ್ಣಿನಲ್ಲಿ ಸುಂಟಿ ಹಿಪ್ಪಲಿ ಮೆಣಸು ಈ ಮೂರನ್ನೂ ಆತ್ಮಮಂತ್ರದ ಜಲದಿಂದ ಅರೆದು ಅತನಿಗೆ ನಸ್ಯವನ್ನು ಮಾಡಿದೆನು. ವ॥ ಹಾಗೆ ನಸ್ಯದ ಪುಡಿಮಾಡಿ ಸೇದಿಸಿದ ಕೂಡಲೇ—೧೧೩. ಶರೀರದ ಕಪ್ಪುಬಣ್ಣವು ಮಾಯವಾಯಿತು. ತಿರುಗಿಕೊಂಡಿದ್ದ ಕೊರಳು ನೆಟ್ಟಗಾಯಿತು. ತಂಪಾದ ಬೆವರು ಹೊಮ್ಮಿತು. ರೋಮರಾಜಿಯು ಮೇಲಕ್ಕೆ ನಿಗುರಿತು. ಬೆರಳುಗಳು ನೇರವಾದುವು. ಕಂಗಳು ಅರ್ಧತೆರೆದು ನೀರು ತುಂಬಿತು. ನಿಧಾನವಾಗಿ ಉಸಿರಾಡತೊಡಗಿತು. ವಿಷವು ಹರಿಯಿತು. ಕೂಡಲೆ ತಂದೆಯು ಕಂಗಳನ್ನು ತೆರೆದು ನನ್ನ ಚಂದ್ರಬಿಂಬದಂತಿದ್ದ ಮುಖ

ವ॥ ಅದೆಂತೆನೆ

ಮುನ್ನಱಿವಂದದಿಂ ಮುಕುರದೊಳ್ ಪ್ರತಿಬಿಂಬಮನೀಕ್ಷಿಪಂದದಿಂ
ತನ್ನ ಶರೀರಮೀಗಳೆರಡಾದಪುದೆಂಬಭಿ ಶಂಕೆಯಿಂ ಮಗು
ೞ್ದೆನ್ನಯ ಜನ್ಮಕಾರಣನಿವಂ ಪೆಱನಲ್ಲೆನಿಪಂದದಿಂ ಪೊದ
ೞ್ದೆನ್ನ ಮುಖಾಬ್ಜಮಂ ಪದೆಪಿನಿಂದೆವೆಯಿಕ್ಕದೆ ನೋಡಿದಂ ನೃಪಾ ೧೧೪

ವ॥ ಅಂತು ನೋಡಿ ಮೆಯ್ಮುಱಿದೆೞ್ದು ಕುಳ್ಳಿರಲೊಡಂ

ಕಂ॥ ಲಲನೆ ವಸುಮತಿಗೆ ತಾರಾ
ವಳಿ ಕೊಟ್ಟಿರಿಸಿಟ್ಟ ನಿಮ್ಮ ನಂದನನಾಂ ಕೇ
ಳೆಲೆ ಪಿತ ಎಂದಾತನ ಪದ
ನಳಿನಕ್ಕಭಿವಾದನೋಕ್ತಿಯಿಂ ಪೊಡೆಮಟ್ಟೆಂ ೧೧೫

ವ॥ ಅಂತು ಪೊಡೆಮಡಲ್

ಕಂ॥ ಗಾರುಡ ಮಂತ್ರೌಷಧಿಗಳ
ಕಾರಣದಿಂ ಬಂದುದಲ್ತು ಮಜ್ಜೀವಂ ವಿ
ಸ್ತಾರಮೆನಲಾತ್ಮ ಜಾತಾ
ಕಾರಮನೀಕ್ಷಿಸುವುದರ್ಕೆ ಬಂದುದು ದಿಟದಿಂ ೧೧೬

ಇಂದೆನ್ನ ಜನ್ಮಫಲ ಮಾ
ಯ್ತಿಂದು ಪುನರ್ಜನ್ಮಮಾಯ್ತು ಮನ್ನೇತ್ರಕ್ಕಾ
ನಂದಂ ದೊರಕಿತ್ತೆಂದೊಲ
ವಿಂದಂ ಮುಯ್ಯಾಂತುಪೆರ್ಚಿದಂ ಮಜ್ಜನಕಂ ೧೧೭

ವನ್ನು ನೋಡಿದನು. ವ॥ ಅದು ಹೇಗೆಂದರೆ—೧೧೪. ಮೊದಲೇ ತಿಳಿದವನಂತೆ, ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡುವಂತೆ, ತನ್ನ ಶರೀರವು ಈಗ ಎರಡಾಗಿದೆಯೋ ಎಂಬ ಒಂದು ಸಂದೇಹದಿಂದ, ಮತ್ತೆ ನನ್ನ ಬದುಕುವಿಕೆಗೆ ಕಾರಣನು ಇವನೇ ! ಬೇರೆಯಲ್ಲ ಎಂದೂ ಪ್ರೀತಿಯಿಂದ 'ಮಹಾರಾಜನೆ !' ಮತ್ತೊಮ್ಮೆ ನನ್ನ ಮುಖ ಕಮಲವನ್ನು ರೆಪ್ಪೆಹಾಕದೆ ಆತನು ನೋಡಿದನು. ವ॥ ಹಾಗೆ ನೋಡಿ ಮೈಮುರಿದು ಎದ್ದು ಕುಳಿತನು. ಆಗ—೧೧೫. 'ತಂದೆಯೋ ! ತಾರಾವಳಿಯು ವಸುಮತಿಯು ಕೈಯ್ಯಲ್ಲಿ ಕೊಟ್ಟು ಇರಿಸಿದ್ದ ನಿಮ್ಮ ಮಗನೇ ನಾನು ಕೇಳು' ಎಂದು ಹೇಳುತ್ತಾ ಅವನ ಪಾದ ಕಮಲಗಳಿಗೆ ನಾನು ನಮಸ್ಕಾರ ಮಾಡಿದೆನು. ವ॥ ಹಾಗೆ ನಮಸ್ಕರಿಸಲು—೧೧೬. ಗಾರುಡ ಮಂತ್ರ ಮತ್ತು ಔಷಧಿಗಳಿಂದ ನನ್ನ ಜೀವ ಬರಲಿಲ್ಲ. ನಿಜವಾಗಿ ಮಗನ ಆಕಾರವನ್ನು ನೋಡುವುದಕ್ಕಾಗಿ ಈ ಜೀವವು ಮತ್ತೆ ಬಂದಿತು. ೧೧೭. ಇಂದು ನನ್ನ ಜನ್ಮ ಸಫಲವಾಯಿತು. ನನಗೆ ಪುನರ್ಜನ್ಮವಾದಂತಾಯಿತು. ನನ್ನ ಕಂಗಳಿಗೆ ಆನಂದವುಂಟಾಯಿತು.' ಹೀಗೆ ಹೇಳುತ್ತ ನನ್ನ ತಂದೆಯು ಆನಂದದಿಂದ ಉಬ್ಬಿದನು.

ವ॥ ಅಂತು ಸಂತೋಷಮಂ ತಳೆದಿರ್ದ ತಂದೆಗಾನಿಂತೆಂದೆಂ

ಕಂ॥ ಮೇಲಪ್ಪ ಕಾರ್ಯಮಂ ಪದೆ
ದಾಲೋಚಿಸಿ ನಿಮ್ಮನಿನಿತು ಬಾಧಿಸಿದರಿಯಂ
ಕಾಲನಮನೆಗಟ್ಟಿ ಧರಾ
ಪಾಲನೆಯಂ ಮಾಳ್ಪುಪಾಯಮೆಂತುಟೊ ಜನಕಾ ೧೧೮

ವ॥ ಎಂದೊಡಾ ಕಾಮಪಾಲನಿಂತೆಂದಂ

ಕಂ॥ ನೃಪನೊಳ್ ಪ್ರತಿಪಕ್ಷಿಗಳಾ
ದ ಪರರನೊಳವೊಯ್ದುಕೊಂಡು ನಮ್ಮರಮನೆಯೊಳ್
ಸಪರಿಗ್ರಹನಾಗಿರ್ದಂ
ಗಪಕಾರಮನೆಸಗುವಂ ದಿನಕ್ರಮದಿಂದಂ ೧೧೯

ವ॥ ಎಂದು ಸಕಲ ಪರಿವಾರಮನಂತರ್ಭೇದಂಗೆಯ್ವುಪಾಯದಿಂ ಕಾಂತಿಮತಿ ಕಾಮಪಾಲನೊಳ್ ತನ್ಮಂದಿರದೊಳ್ ಸಹಗಮನಂಗೆಯ್ದಳೆಂಬ ಸುದ್ದಿಯಂ ಪ್ರಸಿದ್ಧಂಮಾಡಿರಲಾನಿತ್ತಲ್

ಕಂ॥ ಅವನಿಪತಿ ಸಿಂಹಘೋಷಂ
ಪವಡಿಸುವಾಲಯಮನಱಿದು ರಾತ್ರಿಯೊಳಾಂ ಕ
ನ್ನವನಿಕ್ಕಿ ಪೋಗುತಿರ್ಪ
ಲ್ಲಿವಿಳಾಸದೆ ಕಂಡೆನೊಂದು ನೆಲಮಾಳಿಗೆಯಂ ೧೨೦

ವ॥ ಹಾಗೆ ಸಂತೋಷವನ್ನು ಹೊಂದಿದ್ದ ನನ್ನ ತಂದೆಗೆ ಹೀಗೆ ಹೇಳಿದೆನು—೧೧೮. "ತಂದೆ ! ಮುಂದೆ ಆಗಬೇಕಾದ ಕೆಲಸವನ್ನು ಆಲೋಚಿಸಿ. ನಿಮ್ಮನ್ನು ಇಷ್ಟು ಹಿಂಸೆಗೆ ಗುರಿಮಾಡಿದ ಶತ್ರುವನ್ನು ಸಂಹರಿಸಿ ಭೂಮಿಯನ್ನಾಳುವ ಉಪಾಯವು ಯಾವುದೋ ? ಯೋಚಿಸಿ." ವ॥ ಎಂದು ನಾನು ಹೇಳಲು ಕಾಮಪಾಲನು ಹೀಗೆ ಹೇಳಿದನು. ೧೧೯. "ರಾಜನಿಗೆ ಪ್ರತಿ ಪಕ್ಷಿಗಳಾದ ಶತ್ರುಗಳನ್ನು ನಮ್ಮ ಕಡೆಗೆ ತಿರುಗಿಸಿಕೊಂಡು ನಮ್ಮ ಅರಮನೆಯಲ್ಲಿ ಹೆಂಡತಿ ಮಕ್ಕಳೊಡನೆ ವಾಸವಾಗಿರುವ ಅವನಿಗೆ ದಿನ ಕ್ರಮದಿಂದ ಅಪಕಾರಮಾಡೋಣ. ವ॥ ಎಂದು ಆಲೋಚಿಸಿದೆವು. ಪರಿವಾರವನ್ನೆಲ್ಲ ಒಳಗೊಳಗೇ ತಮ್ಮ ಕಡೆಗೆ ತಿರುಗಿಸಿಕೊಳ್ಳುವ ಉಪಾಯದಿಂದ "ಕಾಂತಿಮತಿಯು ತನ್ನ ಮನೆಯಲ್ಲಿ ಕಾಮಪಾಲನೊಡನೆ ಸಹಗಮನಮಾಡಿದಳು" ಎಂದು ಸುದ್ದಿಯನ್ನು ಎಲ್ಲರಿಗೂ ತಿಳಿಯುವಂತೆ ಹರಡಲಾಯಿತು. ನಾನು ಇತ್ತ—೧೨೦. ಸಿಂಹಘೋಷ ಮಹಾರಾಜನ ಮಲಗುವ ಮನೆಯನ್ನು ತಿಳಿದುಕೊಂಡೆನು. ಮತ್ತೆ ರಾತ್ರಿ ಅದಕ್ಕೆ ಕನ್ನವನ್ನು ಹಾಕಿ ಒಳಗೆ ಹೋಗುತ್ತಿದ್ದೆನು. ಆಗ ಒಂದು ವಿಲಾಸ ಯುಕ್ತವಾದ ನೆಲಮಾಳಿಗೆಯನ್ನು ಕಂಡೆನು.

ವ॥ ಅದಱೊಳ್

ಕಮಲಜನಾಪ್ತ ಕಾಲಧನಮೆಂದಿರಿಸಿಟ್ಟ ಲಸದ್ವಧೂ ನಿಧಾ
ನಮೊ ರವಿತಾಪದಿಂ ಸಿಡಿದು ಬಂದಡಗಿರ್ದುರು ಚಂದ್ರಿಕಾ ಪ್ರತಾ
ನಮೊ ಭುಜಗೇಂದ್ರ ಕನ್ಯೆಯರನೀಕ್ಷಿಸಿ ಪೋಪಮರಾಂಗನಾ ಸಮೂ
ಹಮೊ ಎನಿಪೊಂದು ಶಂಕೆ ನೆಲೆಸಲ್ಮೆಱೆದತ್ತಬಲಾಕದಂಬಕಂ ೧೨೧

ವ॥ ಅಂತುನೆಲಮಾಳಿಗೆಯೊಳಿರ್ದ ಕನ್ನೆಯರೆನ್ನಂ ಕಂಡು

ಕಂ॥ ಮಱಿವುಲ್ಲೆಗಳಾರ್ದೆಸಗುವ
ಬಿಱುಗಾಳಿಗೆ ಬೆದಱುವಂತೆ ಕಾಂತೆಯರೆನ್ನಂ
ನೆಱೆಕಂಡು ಲಜ್ಜೆಯಿಂ ಮೆ
ಯ್ಮಱೆದು ಕರಂ ಭೀತಿಯಿಂದೆ ತಳವೆಳಗಾದರ್ ೧೨೨

ವ॥ ಅಂತು ಬೆರ್ಚುವ ಕನ್ನೆಯರ್ಗಾನಂಜದಿರಿಮೆಂಬ ವಾಕ್ಯ ಸನ್ನಾಹಮಂ ತೋಱಿ ಸಲಲ್ಲಿ

ತೊಳಪಕ್ಷಿದ್ಯುತಿಯಂ ರಹಚ್ಚವಿಗಳಂ ಕರ್ಣೋತ್ಪಲ ಜ್ಯೋತ್ಸ್ನೆಯಂ
ವಿಳಸನ್ಮೌಕ್ತಿಕಹಾರ ದೀಧಿತಿಗಳಂ ಚಂಚನ್ನಖಜ್ಯೋತಿಯಂ
ತಲೆಯೊಳ್ಪೆತ್ತೆಸೆವಂತೆ ನುಣ್ಗಱೆಗಳಂ ತಾಳ್ದಂಗಶೈಥಿಲ್ಯದಿಂ
ಲಲನಾಸಂಕುಳಮಧ್ಯದೊಳ್ ಮಱೆದದೊರ್ಬಳ್ ವೃದ್ಧೆಯಿರ್ದಳ್ ನೃಪಾ ೧೨೩

ವ॥ ಅದರಲ್ಲಿ—೧೨೧. ನಾರಿಯರ ಸಮೂಹವು ಪ್ರಕಾಶಿಸಿತು. ಅದು ಬ್ರಹ್ಮನು ಆಪ್ತ ಕಾಲಕ್ಕೆ ಒದಗಲಿ ಎಂದು ಬಚ್ಚಿಟ್ಟ ತರುಣಿಯರೆಂಬ ಧನದ ನಿಧಿಯೋ ಎಂಬಂತಿತ್ತು. ಸೂರ್ಯನ ತಾಪದಿಂದ ಸಿಡಿದು ಬಂದು ಅಡಗಿಕೊಂಡಿದ್ದ ಬೆಳದಿಂಗಳಿನ ಗುಂಪೋ ? ನಾಗಕನ್ಯೆಯರನ್ನು ನೋಡಿ ಹೋಗಲು ಬಂದಿರುವ ಅಮರಾಂಗನೆಯರ ಸಮೂಹವೋ ಎಂಬ ಸಂದೇಹವನ್ನುಂಟುಮಾಡಿತು. ವ॥ ಹಾಗೆ ನೆಲಮಾಳಿಗೆಯಲ್ಲಿದ್ದ ಆ ಕನ್ಯೆಯರು ನನ್ನನ್ನು ನೋಡಿ—೧೨೨. ಜಿಂಕೆಯ ಮರಿಗಳು ರಭಸದಿಂದ ಮೊರೆಯುತ್ತಾ ಬೀಸುವ ಬಿರುಗಾಳಿಗೆ ಹೆದರುವಂತೆ ಕಾಂತೆಯರು ತುಂಬ ನಾಚಿಕೆಯಿಂದ ಎಚ್ಚರಿಕೆ ತಪ್ಪಿ ಹೆದರಿಕೆಯಿಂದ ತಳವೆಳಗಾದರು. ಹಾಗೆ ಹೆದರಿದ ಕನ್ಯೆಯರಿಗೆ ಹೆದರಬೇಡಿರೆಂದು ಹೇಳಿದೆನು—ಅಲ್ಲಿ ೧೨೩. ಲಲನೆಯರ ನಡುವೆ, ಮಹಾರಾಜನೆ, ಒಬ್ಬಳು ಮುದುಕಿಯು ಇದ್ದಳು. ಅವಳು ಅಂಗ ಶೈಥಿಲ್ಯದಿಂದ ತಲೆಯ ಮೇಲೆ ಸುಂದರವಾದ ನರೆಗೂದಲನ್ನು ಹೊಂದಿದ್ದಳು. ಅವು ಹೊಳೆಯುವ ಕಂಗಳ ಕಾಂತಿಯನ್ನೂ ಹಲ್ಲಿನ ಕಾಂತಿಗಳನ್ನೂ ಕಿವಿಯ ಮೇಲಿದ್ದ ಉತ್ಪಲ ಪುಷ್ಪದ ಬೆಳುದಿಂಗಳನ್ನೂ, ಹೊಳೆಯುವ ಮುತ್ತಿನ ಹಾರದ ಕಿರಣಗಳನ್ನೂ, ತಲೆಯಮೇಲೆ ಹೊತ್ತು ಪ್ರಕಾಶಿಸುವಂತೆ ಕಂಡವು.

ವ॥ ಅಂತಿರ್ದ ವೃದ್ಧೆ ಅಲ್ಲಿರ್ದ ರಾಜಕುಮಾರಿಯನೊರ್ಬಳಂ ತೋಱಿ

ಕಂ॥ ಈ ಲಲನೆಗಿನಿಬರಂ ಪಡೆ
ದೋಲಗಿಸಲ್ಕಿರಿಸಿಯನ್ನ ಪಾನಾದಿಗಳಂ
ಕಾಲಾವಧಿಗಿತ್ತೀ ಪಾ
ತಾಳ ಗೃಹಾಂತರದೊಳಿವ್ಮನಿರಿಸಿದನರಸಂ ೧೨೪

ಕಾಂತಿಮತಿಗಾದ ಕಾರ್ಯದ
ಚಿಂತೆಯೊಳೀ ನೃಪಕುಮಾರಿಯಂ ಧರಣೀಶಂ
ಪಾತಾಳಗೃಹದೊಳಿರಿಸಿದ
ನೀತೆಱದಿಂದಂ ದಶಾಬ್ದಮಾದತ್ತೀಗಳ್ ೧೨೫

ವ॥ ಎಂದೊಡಾಂ ಕಾಂತಿಮತಿಯ ಕುಮಾರನೆಂದು ಸೂಚಿಸಲವಳ್ ಮತ್ತಮಿಂತೆಂದಳ್

ಪೂರ್ವದೊಳೊಲ್ದು ಕಾಂತಿಮತಿಗೊಪ್ಪುವ ಲಕ್ಷಣೆ ನನ್ನಿಯಿತ್ತಳಾ
ನೊರ್ವ ಕುಮಾರಿಯಂ ಪಡೆದು ನೀಂ ಮಗನಂ ಪಡೆದಪ್ಪೆಯಾದೊಡೇ
ನುರ್ವರೆ ಮೆಚ್ಚಲೀವೆನವಳೆಳಂ ನಿನಗಾದ ಕುಮಾರಕಂಗೆ ಮ
ತ್ತೊರ್ವರೊಳೊರ್ವರಿಂತುಸಿರ್ದುದಂ ಪದೆದಾನಱಿವೆಂ ಕುಮಾರಕಾ ೧೨೬

ವ॥ ಎಂದು ವೃದ್ಧೆ ಪೇೞ್ದುದಂ ಕೇಳ್ದಾಂ ಸಿಂಹಘೋಷನಿರ್ದೆಡೆಗೆ ಪೋಗಿ ಬಂದು ನಿನ್ನಭಿಮತಮಂ ಮಾೞ್ಪೆನೆಂಬುದುಮಾ ವೃದ್ಧೆಯಿಂತೆಂದಳ್

ಹಾಗಿದ್ದ ಮುದುಕಿಯು ಅಲ್ಲಿದ್ದ ರಾಜಕುಮಾರಿಯೊಬ್ಬಳನ್ನು ತೋರಿಸಿ—೧೨೪. ಅರಸನು ಈ ಲಲನೆಗೆ ಸೇವೆಮಾಡುವುದಕ್ಕಾಗಿ ಇಷ್ಟು ಜನರನ್ನೂ ನನ್ನನ್ನೂ ಅನ್ನಪಾನಗಳನ್ನೊದಗಿಸಿ ಈ ಪಾತಾಳ ಗೃಹದೊಳಗಡೆ ಇರಿಸಿದ್ದಾನೆ. ೧೨೫. ಕಾಂತಿಮತಿಯ ವಿಷಯದಲ್ಲಿ ನಡೆದ ಸಂದರ್ಭವನ್ನು ಚಿಂತಿಸಿ ರಾಜನು ಈ ರಾಜಕುಮಾರಿಯನ್ನು ಈ ಪಾತಾಳ ಗೃಹದಲ್ಲಿರಿಸಿದ್ದಾನೆ. ಹೀಗೆ ಇಟ್ಟು ಆಗಲೇ ಹತ್ತುವರ್ಷಗಳಾದುವು.” ವ॥ ಎಂದು ಹೇಳಲು ನಾನು ಕಾಂತಿಮತಿಯ ಮಗನೆಂದು ಹೇಳಿದೆನು. ಅದನ್ನು ಕೇಳಿ ಅವಳು ಹೀಗೆ ಹೇಳಿದಳು.—೧೨೬. “ಹಿಂದೆ ಚೆಲುವೆಯಾದ ಲಕ್ಷಣೆಯು ಕಾಂತಿಮತಿಗೆ ಸತ್ಯಮಾಡಿ ಮಾತು ಕೊಟ್ಟಿದ್ದಳು. ನನಗೆ ಒಬ್ಬಳು ಮಗಳಾದರೆ ನಿನಗೊಬ್ಬನು ಮಗನಾದರೆ ಭೂಮಿಯ ಜನ ಮೆಚ್ಚುವಂತೆ ನನ್ನ ಮಗಳನ್ನು ನಿನ್ನ ಮಗನಿಗೆ ಕೊಡುವೆನು. ಕುಮಾರನೇ ! ಹೀಗೆ ಅವರಿಬ್ಬರೂ ಮಾತನಾಡಿಕೊಂಡುದನ್ನು ನಾನು ಕೇಳಿ ತಿಳಿದಿದ್ದೇನೆ.” ವ॥ ಎಂದು ಮುದುಕಿಯು ಹೇಳಿದುದನ್ನು ಕೇಳಿ ‘ನಾನು ಸಿಂಹಘೋಷನಿದ್ದಲ್ಲಿ ಹೋಗಿ ಬಂದು ನಿನ್ನಿಷ್ಟದಂತೆ ಮಾಡುವೆನು’ ಎಂದು ಹೇಳಿದೆನು. ಆಗ ಆ ಮುದುಕಿಯು ಹೀಗೆ

ಕಂ॥ ಇತ್ತಲಿದೆ ಮೂಲೆಗಂಭವ
ನೆತ್ತಲ್ ತಳದಲ್ಲಿ ಬಾಗಿಲಿರ್ದಪುದದಱೊಳ್
ಬಿತ್ತರದಿಂ ನಡೆಯಲ್ ಭೂ
ಪೋತ್ತಮನಿರ್ದೆಡೆಯನೆಯ್ದಲಕ್ಕುಮಮೋಘಂ ೧೨೭

ವ॥ ಎಂದಾ ವೃದ್ಧೆ ಪೇೞ್ದೊಡಾಕ್ರಮದಿಂ ನೆಲಮಾಳಿಗೆಯ ಮೂಲೆಗಂಭವನೆತ್ತಿ ದಾರಿಯಂ ಕಂಡು ತನ್ಮಾರ್ಗದೊಳ್ ಸಿಂಹಘೋಷನ ಸಜ್ಜೆಯ ಮನೆಯಂ ಪೊಕ್ಕು

ಕಂ॥ ಬಿಲದೊಳಗಿರ್ದಹಿಯಂ ಖಗ
ಕುಲಪತಿ ಪಿಡಿದೆೞೆವ ಮಾೞ್ಕೆಯಿಂದಂ ನಾಂ ಮೆ
ಯ್ಗಲಿ ಸಿಂಹಘೋಷನಂ ಮುಂ
ದಲೆಯಂ ಪಿಡಿದೆೞೆದೆನಿರ್ದ ಸಜ್ಜೆಯ ಮನೆಯಿಂ ೧೨೮

ಅಂತವನಂ ಕೋಡಗಗ
ಟ್ಟಂ ತಡೆಯದೆ ಕಟ್ಟಿಬಂದ ಬಟ್ಟೆಯೊಳೇಟ್ಟಂ
ದೆಂ ತರುಣಿಯರಿರ್ದೆಡೆಗೆ ನಿ
ತಾಂತಂ ಸಂಕಲ್ಪ ಸಿದ್ಧನಾಗಿ ನೃಪೇಂದ್ರಾ ೧೨೯

ವ॥ ಬೞಿಕಲ್ಲಿರ್ದ ಮಣಿಪುತ್ರಿಕೆ ಮೊದಲಾದ ಸ್ತ್ರೀಯರಂ ಸಿಂಹಘೋಷನಂ ಮನ್ಮಾತೃಪಿತೃ ಸಮೀಪಕ್ಕೆ ತಂದು

ಹೇಳಿದಳು. ೧೨೭. "ಇತ್ತ ಮೂಲೆಯಲ್ಲಿ ಒಂದು ಕಂಭವಿದೆ. ಅದನ್ನೆತ್ತಿದರೆ ತಳದಲ್ಲಿ ಒಂದು ಬಾಗಿಲಿದೆ. ಅದರಲ್ಲಿ ಹೊಕ್ಕು ನಡೆದರೆ ತಪ್ಪದೆ ರಾಜನಿರುವ ಸ್ಥಳವನ್ನು ಸೇರಬಹುದು. ವ॥ (ಎಂದು) ಆ ಮುದುಕಿಯು ಹೇಳಿದಳು. ಅಂತೆಯೇ ನೆಲಮಾಳಿಗೆಯ ಮೂಲೆಗಂಭವನ್ನು ಎತ್ತಿದೆನು, ಅಲ್ಲಿದ್ದ ದಾರಿಯನ್ನು ಕಂಡು ಅದರ ಮೂಲಕ ನಡೆದು ಸಿಂಹಘೋಷನ ಮಲಗುವ ಮನೆಯನ್ನು ಹೊಕ್ಕೆನು. ೧೨೮. ಮಲಗುವ ಮನೆಯಲ್ಲಿ ಮಲಗಿದ್ದ ಶೂರನಾದ ಸಿಂಹಘೋಷನನ್ನು ಗರುಡನು ಬಿಲದೊಳಗಿದ್ದ ಹಾವನ್ನು ಹಿಡಿದು ಎಳೆಯುವಂತೆ ಮುಂದಲೆಯನ್ನು ಹಿಡಿದು ಎಳೆದೆನು. ೧೨೯. ಮಹಾರಾಜನೆ! ಹಾಗೆ ಅವನನ್ನು ಕೋಡಗವನ್ನು ಕಟ್ಟುವಂತೆ ಕಟ್ಟಿ ಎಳೆದುಕೊಂಡು ಬಂದದಾರಿಯಿಂದಲೇ ಆ ತರುಣಿಯರಿದ್ದೆಡೆಗೆ ಬಂದೆನು. ನನ್ನ ಸಂಕಲ್ಪವು ಸಿದ್ಧಿಸಿತು. ವ॥ ಬಳಿಕ ಅಲ್ಲಿದ್ದ ಮಣಿಪುತ್ರಿಕೆ ಮೊದಲಾದ ಹೆಂಗಸರನ್ನೂ ಸಿಂಹಘೋಷನನ್ನೂ ನನ್ನ ತಾಯಿ

ನಿಮಗೆ ವಿರೋಧಮಂ ಬಗೆದ ದೋಷಿಯನಗ್ಗಳ ಸಿಂಹಘೋಷ ಭೂ
ರಮಣನನೊಂದು ಚೆಲ್ವ ನೆಲಮಾಳಿಗೆಯೊಳ್ ನೆಲಸಿರ್ದ ಕಾಮಿನೀ
ಸಮುದಯಮುಮಂ ನಿಜಾಂಘ್ರಿಯುಗಮಂ ಮಿಗೆ ಕಾಣಿಸಿಕೊಳ್ವುದೆಂದುತ
ತ್ಕ್ರಮದೊಳೆ ಸಾರ್ಚಿದೆಂ ಪಿತೃಗಳಿರ್ವರ ಮೆಲ್ಲಡಿಗಳ್ಗೆ ಭೂಪನಂ ೧೩೦

ವ|| ಅಂತು ಸಿಂಹಘೋಷನಂ ತರಲೊಡಂ ಕಾಂತಿಮತಿ ಕಂಡು ಕ್ಲೇಶಿತೆಯಾಗಿ ಬಿಡಲ್ವೇೞ್ದೊಡಂ ಬಿಡದೆ ಅದೆ ಮುಹೂರ್ತವಾಗಿ ಮಣಿ ಪುತ್ರಿಕೆಯೊಳ್ ಮದುವೆ ನೆಱೆದನಂತರಂ ದುಷ್ಟನಿಗ್ರಹಂಗೆಯ್ದು ಕಾಮಪಾಲನಂ ರಾಜ್ಯಸ್ಥನಂ ಮಾಡಿ ದೇವರಂ ವಿಚಾರಿಸಲ್ ಪೊರಡುವಾಗಳ್

ಕಂ|| ತನಗೆ ಬಲಮಾಗಿ ಬರ್ಕೆಂ
ದನುನಯದಿಂ ಸಿಂಹವರ್ಮನೊಲವಿಂ ಪೇೞ್ದ
ಟ್ಟೆ ನಿರಾಕುಳದಿಂದಿಲ್ಲಿಗೆ
ಮನವೊಸೆದೆೞ್ತಂದು ದೇವ ನಿಮ್ಮಂ ಕಂಡೆಂ ೧೩೧

ವ|| ಎಂದರ್ಥಪಾಲಂ ತನ್ನ ವೃತ್ತಾಂತಮಂ ರಾಜವಾಹನಂಗೆ ಪೇೞ್ದು ಕೆಯ್ಗಳಂ ಮುಗಿದಿರೆ

ಸುಲಲಿತನೀತಿಯಂ ಲಸದುಪಾಯಮನೊಪ್ಪುವ ಮಂತ್ರತಂತ್ರ ಸಂ
ಕುಳದಿನರಾತಿಜಯಂ ಜಯಿಸುವಾ ಮತಮಂ ಪಡೆದರ್ಥಪಾಲನಂ
ತಿಳಿಯೊಳದಾವವಂ ತಿಳಿಯಲಾರ್ಪವನೆಂದನುರಾಗದಿಂ ಕಳಾ
ನಿಳಯನನಾರತಂ ಪೊಗೞ್ದು ಮೆಚ್ಚಿದನಾಗಳಭಂಗ ವಿಕ್ರಮಂ ೧೩೨

ತಂದೆಗಳ ಹತ್ತಿರಕ್ಕೆ ಕರೆತಂದೆನು. ೧೩೦. "ನಿಮಗೆ ವಿರೋಧವನ್ನು ಮಾಡಿದ ಅಪರಾಧಿಯಾದ ಈ ಶೂರನಾದ ಸಿಂಹಘೋಷ ರಾಜನನ್ನೂ ಒಂದು ಸುಂದರವಾದ ನೆಲಮಾಳಿಗೆಯಲ್ಲಿ ನೆಲಸಿದ್ದ ಕಾಮಿನಿಯರ ಸಮೂಹವನ್ನೂ ಕರೆತಂದಿದ್ದೇನೆ. ನಿಮ್ಮ ಚರಣಗಳನ್ನು ದರ್ಶಮಾಡಲಿ." ಎಂದು ಹೇಳಿ ಕ್ರಮದಿಂದ ರಾಜನನ್ನು ನನ್ನ ತಾಯಿ ತಂದೆಗಳ ಮೆಲ್ಲಡಿಗಳಿಗೆ ಬೀಳಿಸಿದೆನು. ವ|| ಹಾಗೆ ಸಿಂಹಘೋಷನನ್ನು ತರಲು ಅವನನ್ನು ಕಂಡು ದುಃಖಿತೆಯಾದ ಕಾಂತಿಮತಿಯು ಅವನನ್ನು ಬಿಡು ಎಂದು ಹೇಳಿದರೂ ನಾನು ಬಿಡಲಿಲ್ಲ. ಅದೇ ಮುಹೂರ್ತದಲ್ಲಿ ಮಣಿಪುತ್ರಿಕೆಯನ್ನು ಮದುವೆಯಾದೆನು. ಅನಂತರ ದುಷ್ಟರನ್ನು ನಿಗ್ರಹಿಸಿ ಕಾಮಪಾಲನನ್ನು ರಾಜ್ಯದಲ್ಲಿ ಇರಿಸಿದನು. ಅನಂತರ ಸ್ವಾಮಿಯನ್ನು (ರಾಜವಾಹನನನ್ನು) ವಿಚಾರಿಸುವುದಕ್ಕಾಗಿ ಹೊರಟೆನು. ಆಗ—೧೩೧. ತನಗೆ ಸಹಾಯಮಾಡಲು ಬರಬೇಕೆಂದು ಪ್ರೀತಿಯಿಂದ ಸಿಂಹವರ್ಮನು ಹೇಳಿ ಕಳುಹಿಸಿದನು. ಆದರಿಂದ ನಾನು ಇಲ್ಲಿಗೆ ಹರ್ಷದಿಂದ ಬಂದೆನು. ಇಲ್ಲಿ ದೇವ ! ನಿಮ್ಮನ್ನು ಕಂಡೆನು." ವ|| ಎಂದು ಅರ್ಥಪಾಲನು ತನ್ನ ಸಮಾಚಾರವನ್ನು ರಾಜವಾಹನನಿಗೆ ಹೇಳಿ ಕೈಮುಗಿದನು—೧೩೨. ಸುಲಲಿತವಾದ ರಾಜನೀತಿಯನ್ನೂ, ಶತ್ರುಗಳನ್ನು ನಾಶ ಮಾಡುವ ಸ್ಪಷ್ಟವಾದ ಉಪಾಯವನ್ನೂ, ಮಂತ್ರ ತಂತ್ರಗಳ ಸಹಾಯದಿಂದ ಶತ್ರು

ಗದ್ಯ

ಇದುನಿಖಿಲ ಬುಧಜನ ಮನೋವನಜವನ ದಿವಾಕರ ಕಿರಣ ಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಅರ್ಥಪಾಲ ಕಥಾವೃತ್ತಾಂತಂ

## ನವಮಾಶ್ವಾಸಂ

ಗಳನ್ನು ಗೆಲ್ಲುವ ರೀತಿಯನ್ನೂ ಅರ್ಥಪಾಲನ ಹಾಗೆ ಈ ಭೂಮಿಯಲ್ಲಿ ತಿಳಿದವರು ಬೇರೆ ಯಾರಿದ್ದಾರೆ. ಎಂದು ಅನುರಾಗದಿಂದ ಕಲೆಗಳಿಗೆ ಆಶ್ರಯನೆಂದ ಅಭಂಗ ವಿಕ್ರಮನಾದ ರಾಜವಾಹನನು ಒಂದೇ ಸಮನಾಗಿ ಅರ್ಥಪಾಲನನ್ನು ಹೊಗಳಿ ಮೆಚ್ಚಿ ಕೊಂಡನು. ಇದು ಬುಧ ಜನರೆಲ್ಲರ ಮನಸ್ಸೆಂಬ ತಾವರೆಗಳ ವನವನ್ನು ಅರಳಿಸುವ ಸೂರ್ಯನ ಕಿರಣಗಳಿಂದ ಪ್ರಸನ್ನವಾದ ಶ್ರೀಮದಭಂಗ ವಿಟ್ಠಲ ಪದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜ ವಿರಚಿತವಾದ ಅಭಿನವ ದಶಕುಮಾರ ಚರಿತೆಯಲ್ಲಿ ಒಂಬತ್ತನೆಯ ಆಶ್ವಾಸ.

# ದಶಮಾಶ್ವಾಸಂ

## ಉಪಹಾರವರ್ಮನ ಕಥೆ

ಕಂ॥ ಶ್ರೀನಾರೀನಿಳಯಂ ವಿ
ದ್ಯಾನಿಧಿಯುಪಹಾರವರ್ಮನಂ ಕೇಳ್ದಂ ನೀ
ನೇನಂ ಮಾಡಿದೆಯೆಂದ
ತ್ಯಾನಂದದಿನೊಲ್ದಭಂಗವಿಟ್ಠಲಭೃತ್ಯಂ ೧

ವ॥ ಎಂದೊಡುಪಹಾರವರ್ಮಂ ರಾಜವಾಹನಂಗೆ ಕೈಗಳಂ ಮುಗಿದಿಂತೆಂದಂ

ಎಲ್ಲರ ಚೆಂದದಿಂದಱಸಲಾಂ ನಿಜಪಾದಪಯೋಜಯುಗ್ಮಮಂ
ಪಲ್ಲವಪಾರಿಯಾತ್ರ ಮಗದಾಂಧ್ರ ತುರುಷ್ಕ ಕಳಿಂಗದೇಶಮಂ
ಬೆಲ್ಲಡೆಯುಂ ತೊಟಲ್ದು ಮಿಥಿಲಾ ವಿಷಯಾಂತರಾಳದೊಳ್ ಬರುತ್ತಿರ
ಲ್ಕಲ್ಲಿ ಜಗತ್ಪ್ರಸಿದ್ಧಿವಡೆದಿರ್ಪುದು ಕೇಳ್ ಮಿಥಿಳಾಪುರಂ ನೃಪಾ ೨

ವ॥ ಅದು ಸತ್ಪಾತ್ರಹಸ್ತದಂತೆ ಪತಾಕಾಭಿರಾಮಮುಂ ವಿಶಿಷ್ಟಾಗ್ರಹಾರದಂತೆ ವಿಪ್ರಾಕಾರರಂಜಿತಮುಂ ಮಧುರಾಪುರಿಯಂತೆ ವಸುದೇವಾಗಾರ ರಮ್ಯಮುಂ ವ್ಯೋಮಮಂಡಲ ದಂತೆ ದ್ವಿಜರಾಜ ಸನ್ಮಾರ್ಗಮುಂ ಸ್ವರ್ಗಲೋಕದಂತೆ ಸುಧಾಮಯ ಮಂದಿರಮುಂ ಗ್ರಹ

೧. ರಾಜ್ಯಲಕ್ಷ್ಮಿಯೆಂಬ ನಾರಿಗೆ ಆಶ್ರಯನಾದ ವಿದ್ಯೆಗಳ ನಿಧಿಯಾದ ಅಭಂಗ ವಿಟ್ಠಲನ ಸೇವಕನಾದ ರಾಜವಾಹನನು 'ನೀನೇನು ಮಾಡಿದೆ ?' ಎಂದು ಉಪಹಾರವರ್ಮನನ್ನು ಅತ್ಯಾನಂದದಿಂದ ಪ್ರಶ್ನಿಸಿದನು. ವ॥ ಉಪಹಾರವರ್ಮನು ಕೈ ಮುಗಿದುಕೊಂಡು ರಾಜವಾಹನನಿಗೆ ಹೇಳಿದನು—೨. "ದೊರೆಯೇ ! ನಾನೂ ಎಲ್ಲರ ಹಾಗೆ ಪಲ್ಲವ, ಪಾರಿ ಯಾತ್ರ, ಮಗಧ, ಆಂಧ್ರ, ತುರುಷ್ಕ, ಕಳಿಂಗ–ಮೊದಲಾದ ದೇಶಗಳಲ್ಲೆಲ್ಲಾ ನಿಮ್ಮ ಪಾದಕಮಲಗಳನ್ನು ಹುಡುಕಿದೆನು. ಸಂಚರಿಸುತ್ತಾ ಹಾಗೆಯೇ ಮಿಥಿಲಾ ದೇಶವನ್ನು ಹೊಕ್ಕೆನು. ಮಿಥಿಲಾ ಪುರವು ಜಗತ್ತಿನಲ್ಲಿ ಅತಿ ಪ್ರಸಿದ್ಧವಾಗಿದೆ. ವಿವರಿಸುತ್ತೇನೆ ಕೇಳು. ವ॥ ಆ ಮಿಥಿಲಾನಗರವು ಯೋಗ್ಯನಾದವನ ಕೈಯ ಹಾಗೆ ಪತಾಕೆಗಳಿಂದ ಸುಂದರ ವಾಗಿದೆ [ಪತಾಕೆಯ ಗುರುತು–ಸಣ್ಣ ಬಾವುಟಗಳು]. ವಿಶೇಷ ಗುಣಗಳುಳ್ಳ ಅಗ್ರಹಾರದ ಹಾಗೆ ವಿಪ್ರಾಕಾರದಿಂದ ರಂಜಿತವಾಗಿದೆ. [ಬ್ರಾಹ್ಮಣರ ರೂಪ–ವಿಸ್ತಾರವಾದ ಕೋಟೆ], ಮಧುಪುರಿಯ ಹಾಗೆ ವಸುದೇವಾಗಾರದಿಂದ ರಮ್ಯವಾಗಿದ್ದಿತು. [ವಸುದೇವನಮನೆ-ಹಣ ಗಾರರಮನೆಗಳು] ಆಕಾಶ ಮಂಡಲದಂತೆ ದ್ವಿಜರಾಜನಿಗೆ ಒಳ್ಳೆಯ ದಾರಿಯಾಗಿದ್ದಿತು. [ಚಂದ್ರಪಥ–ದ್ವಿಜ ಶ್ರೇಷ್ಠರ ಮಾರ್ಗ] ಸ್ವರ್ಗಲೋಕದ ಹಾಗೆ ಸುಧಾಮಯಗಳಾದ

**ಸಮೂಹದಂತೆ ಮಿತ್ರರಾಜ ಗೋತ್ರಜ ಬುಧ ಗುರು ಕವಿ ಸೌರಿ ಸಮೃದ್ಧಿಯುಂ ಸಾಮಭೂಮಿಯಂತೆ ಭದ್ರಗಜರಂಜಿತಮುಮೆನಿಸಿರ್ಪುದು ಅಂತುಮಲ್ಲದೆಯುಂ**

ವಸುಧಾದೇವಿಯ ನೀಳ್ದ ತೋಳ್ಗಳೆನಿಸಲ್ ಸೋಮಾರ್ಕಸದ್ವೀಥಿ ರಂ
ಜಿಸೆ ನಾನಾ ನವರತ್ನ ಹೇಮಕಲಶಂಸ್ವರ್ಣಾದ್ರಿಯಂ ಸೈತು ಸೋ
ಲಿಸುವಂತೊಪ್ಪೆ ನಿಮಿರ್ಕೆಯುಪ್ಪರಿಗೆಗಳ್ ತಾರಾದ್ರಿಯಂ ಪೋಲ್ತು ಪೆಂ
ಪೆಸೆಯಲ್ ನಿತ್ಯವಿಳಾಸದಿಂ ಮಿಥಿಳೆಯೇಂ ಚೆಲ್ವಾಯ್ತೊ ಸಂಪತ್ತಿಯಿಂ ೩

ವ॥ ಅಂತೆಸೆವ ಮಿಥಿಳಾಪುರಮಂ ಪುಗುವಾಗಳದಱ ಬಹಿರ್ದ್ವಾರದ ಪಾೞ್ಮಠದಲ್ಲಿ

ಸೆರೆಗಳ್ ತಳ್ತಂಗಮುಲ್ಲಲ್ಲಿಗೆ ಸುರುಳ್ದಿರೆ ಲಂಬಸ್ತನಂ ಮೆಲ್ಪಿನಿಂ ಜೋ
ಲ್ದಿರೆ ಗಲಂ ಪತ್ತಿ ಕಣ್ಗಳ್ ಕುಳಿತೆರ್ದೆಯಗಲಂ ಬೆತ್ತು ತೋಳೊಳ್ ತೊವಲ್ ನೀ
ಳ್ದಿರೆ ಪಶ್ಚಾತ್ತಾಪಮಂ ತದ್ವದನಮುಱಿಪಲಿರ್ದಳ್ ಕರಂ ವೃದ್ಧೆ ದುಃಖಾ
ತುರೆ ಚಿಂತಾಭ್ರಾಂತಿಯಿಂದಾ ಪೞೆಯ ಮಠದ ಗೋಂಟಿಂಗೆ ಗೆಂಟಾಗಿಯೊರ್ವಳ್ ೪

**ವ॥ ಅಂತಿರ್ದ ತಾಪಸರೂಪೆಯಪ್ಪ ವೃದ್ಧೆಯಂ ಕಂಡು ನಾಂ ಆ ಮಠದೊಳ್ ನಿಮಿಷಂ ಕುಳ್ಳಿರ್ಪುದುಮಾವೃದ್ಧೆ ಎನ್ನಂನೋಡಿ**

ಮಂದಿರಗಳಿಂದ ಕೂಡಿದೆ. [ಅಮೃತಭರಿತವಾದ ಮಂದಿರ–ಸುಣ್ಣ ಹಚ್ಚಿದ ಮನೆಗಳು] ಗ್ರಹ ಸಮೂಹದಂತೆ ಮಿತ್ರ ರಾಜ ಗೋತ್ರಜ ಬುಧ ಗುರು ಕವಿ ಸೌರಿಗಳ ಸಮೃದ್ಧಿಯಿಂದ ತುಂಬಿದೆ. [ಸೂರ್ಯ, ಚಂದ್ರ, ಕುಜ, ಬುಧ, ಗುರು. ಶುಕ್ರ ಶನಿ–ಸ್ನೇಹಿತ' ರಾಜ, ಬಂಧುಗಳು, ವಿದ್ವಾಂಸ, ಗುರು, ಕವಿ, ರತ್ನ] ಸಾಮ ಭೂಮಿಯ ಹಾಗೆ ಭದ್ರ ಗಜಗಳಿಂದ ರಂಜಿತವಾಗಿದೆ. [ಉತ್ತಮ ಜಾತಿಯ ಆನೆ-ಪಟ್ಟದಾನೆ] ೩, ಮಿಥಿಲಾ ನಗರವು ನಿತ್ಯವಿಲಾಸದಿಂದಲೂ ಸಂಪತ್ತಿನಿಂದಲೂ ಚೆಲುವಾಗಿದ್ದಿತು. ಅಲ್ಲಿನ ಚಂದ್ರ ಸೂರ್ಯ ಬೀದಿಗಳು ಭೂದೇವಿಯ ಉದ್ದವಾದ ತೋಳುಗಳಂತೆ ಕಂಡುವು. ನವರತ್ನಗಳುಳ್ಳ ಚಿನ್ನದ ಕಲಶಗಳು ಚಿನ್ನದ ಬೆಟ್ಟವನ್ನು ಮೀರಿಸಿದ್ದುವು. ಎತ್ತರವಾದ ಉಪ್ಪರಿಗೆಗಳು ಕೈಲಾಸಗಳಂತೆ ಕಂಗೊಳಿಸಿದುವು.' ಎಂದನು. ವ॥ ಆ ಸುಂದರವಾದ ಮಿಥಿಲಾನಗರವನ್ನು ನಾನು (ಉಪಹಾರವರ್ಮನು) ಹೊಕ್ಕೆನು. ಆಗ ಆ ನಗರದ ಹೊರ ಬಾಗಿಲಿನಲ್ಲಿದ್ದ ಹಾಳು ಮಠದಲ್ಲಿ (ಒಬ್ಬ ಮುದುಕಿ ಕಾಣಿಸಿದಳು). ೪. ನರಗಳೆದ್ದು ಅವಯವಗಳು ಸುಕ್ಕುಗೊಂಡಿದ್ದುವು. ಸ್ತನಗಳು ಉದ್ದಕ್ಕೆ ಜೋತುಬಿದ್ದಿದ್ದವು. ಗಲ್ಲವು ಬತ್ತಿ ಹೋಗಿದ್ದಿತು. ಕಂಗಳು ಗುಳಿ ಬಿದ್ದಿದ್ದುವು. ಎದೆ ಅಗಲವಾಗಿದ್ದಿತು. ತೋಳುಗಳಲ್ಲಿ ತೊಗಲು ನೇತಾಡುತ್ತಿತ್ತು. ಮುಖವು ಪಶ್ಚಾತ್ತಾಪವನ್ನು ಸೂಚಿಸುತ್ತಿತ್ತು, ಇಂಥ ಹಣ್ಣು ಮುದುಕಿಯೊಬ್ಬಳು ದುಃಖ ಪೀಡಿತಳಾಗಿ, ಚಿಂತಾಕ್ರಾಂತಳಾಗಿ ಆ ಹಳೆಯ ಮಠದ........ಸ್ವಲ್ಪ ದೂರದಲ್ಲಿ ಕುಳಿತಿದ್ದಳು. ವ॥ ತಾಪಸಳಂತಿದ್ದ ಮುದುಕಿಯನ್ನು ಕಂಡು ನಾನು ಆ ಮಠದಲ್ಲಿ ಸ್ವಲ್ಪ ಹೊತ್ತು ಕುಳಿತೆನು. ಆ ಮುದುಕಿಯು ನನ್ನನ್ನು (ಉಪಹಾರವರ್ಮ)

ಕಂ॥ ಪಾಡಱಿದಾಂ ತನ್ನೊಳ್ ಮಾ
ತಾಡದ ಮುನ್ನಾಕೆಯೆನ್ನ ಮುಖಮಂಡಲಮಂ
ನೋಡುತ್ತುಂ ಕಣ್ಬನಿಯೊಳ್
ಮೂಡಿ ಮುಳುಂಗಿರ್ದಳೆನಗೆ ವಿಸ್ಮಯಮಾಗಲ್ ೫

ವ॥ ಅಂತು ವಿಸ್ಮಯಮೆನ್ನೊಳ್‌ಪುಟ್ಟೆ ಇದೇನೀದುಃಖಕ್ಕೆ ಕಾರಣಮೇನೆಂದಾಸಾಕೆಯಂ ಬೆಸಗೊಳ್ವುದುಮವಳಿಂತೆಂದಳ್

ಪೃಥು ಬಳಮಾದಿಕೂರ್ಮಂ
ಪೃಥಿವೀಕಂಟಕ ನೃಪಾಲಕುಲಹಿಮಘರ್ಮಂ
ಪ್ರಥಿತ ಪ್ರಹಾರವರ್ಮಂ
ಮಿಥಿಳಾಪುರದರಸನೆಂಬ ಮಹಿಮಾವರ್ಮಂ ೬

ಅಂತಾತಂಗಾಪ್ತಮಿತ್ರಂ ನೃಪಕುಲತಿಲಕಂ ರಾಜಹಂಸೋರ್ವಿಪಂ ತ
ತ್ಕಾಂತಾಸೀಮಂತಸಂಪ್ರೀತಿಗೆ ಕರೆಸೆ ಮದೀಯೋರ್ವಿಪಂ ಕೇಳ್ದು ಚೇತ
ಸ್ಸಂತೋಷಂ ಮಿಕ್ಕು ತನ್ನಂಗನೆ ನಿಜಸುತರಿರ್ವರ್ ಬಲಂ ಕೂಡೆ ಪೋದಂ
ಮುಂತಪ್ಪಾಹಾನಿವೃದ್ಧಿಸ್ಥಿತಿಯನಱಿವರಾರ್ ಪೂರ್ವಸಂಸ್ಕಾರಕಲ್ಪಂ ೭

ವ॥ ಅಂತೀ ಮಿಥಿಳಾಪತಿಯಪ್ಪ ಪ್ರಹಾರವರ್ಮಂ ತನ್ನಾಪ್ತಮಿತ್ರ ಮಾಗಧೇಶ್ವರನಪ್ಪ ರಾಜಹಂಸನರಸಿ ವಸುಮತೀದೇವಿಯ ಸೀಮಂತಕ್ಕೆ ಪ್ರಿಯಂವದೆಯುಂ ತನ್ನಿರ್ಬರ್ ಕುಮಾರರ್ ಸಹಿತಂ ಪುಷ್ಪಪುರಕ್ಕೆ ಪೋಗಲಲ್ಲಿ

ನೋಡಿ—೫. ನಾನು ಅವಳ ಕಷ್ಟವನ್ನು ತಿಳಿದುಕೊಂಡು ಅವಳೊಡನೆ ಮಾತನಾಡುವುದಕ್ಕೆ ಮೊದಲೇ, ಆ ಮುದುಕಿಯು ನನ್ನ ಮುಖವನ್ನು ನೋಡಿ ಕಣ್ಣೀರಿನಲ್ಲಿ ಮುಳುಗಿದಳು. ನನಗೆ ಇದರಿಂದ ಆಶ್ಚರ್ಯವಾಯಿತು. ವ॥ ನನಗೆ ಆಶ್ಚರ್ಯವುಂಟಾಗಲು 'ಇದೇನು ? ಈ ದುಃಖಕ್ಕೆ ಕಾರಣವೇನು ?' ಎಂದು ನಾನು ಆ ಮುದುಕಿಯನ್ನು ಕೇಳಿದೆನು. ಅವಳು ಅದಕ್ಕೆ ಹೀಗೆ ಹೇಳಿದಳು—೬. "ಮಿಥಿಲಾಪುರದರಸನು ಮಹಾಮಹಿಮೆಯುಳ್ಳ ಪ್ರಹಾರವರ್ಮನು. ಅವನು ಅಧಿಕಬಲಶಾಲಿಯಾದ ಆದಿಕೂರ್ಮನಂತಹನು. ಭೂಮಿಗೆ ಕಂಟಕರಾದ ರಾಜರೆಂಬ ಮಂಜನ್ನು ಕರಗಿಸುವ ಬೇಸಗೆಯಂಥವನು. ೭. ರಾಜರಲ್ಲಿ ಶ್ರೇಷ್ಠನಾದ ರಾಜಹಂಸ ರಾಜನು ಆ ಪ್ರಹಾರವರ್ಮನ ಪ್ರಿಯ ಮಿತ್ರನು. ಅವನು ತನ್ನ ಪ್ರಿಯೆಯ ಸೀಮಂತ ಮಹೋತ್ಸವಕ್ಕೆ ಕರೆಯಿಸಲು ಪ್ರಹಾರವರ್ಮನು ಆನಂದದಿಂದ ತನ್ನ ಹೆಂಡತಿ ಮತ್ತು ಇಬ್ಬರು ಮಕ್ಕಳೊಡನೆ ಸೇನಾಸಮೇತನಾಗಿ ಪ್ರಯಾಣ ಮಾಡಿದನು. ಜನ್ಮಾಂತರದ ಸಂಸ್ಕಾರದಂತೆ ಮುಂದಾಗುವ ಹಾನಿವೃದ್ಧಿಗಳನ್ನು ಯಾರು ತಾನೇ ಅರಿಯಬಲ್ಲರು ? ವ॥ ಮಿಥಿಲಾ ರಾಜನಾದ ಪ್ರಹಾರವರ್ಮನು ತನ್ನ ಆಪ್ತ ಮಿತ್ರನಾದ ಮಗಧ ರಾಜನಾದ ರಾಜಹಂಸನ ಹೆಂಡತಿಯಾದ ವಸುಮತೀದೇವಿಯ ಸೀಮಂತಕ್ಕೆ ಪ್ರಿಯಂವದೆ ಮತ್ತು ತನ್ನಿಬ್ಬರು

ಕಂ|| ಮಾಳವನೃಪನೆಂಬ ಮಹೀ
ಪಾಳಂ ಮುಳಿದೆತ್ತಿ ಬಂದು ಮಾಗಧನೃಪನಂ
ಸೋಲಿಸಲಂದು ಮದೀಯ ನೃ
ಪಾಳಂ ಮಾಳವನ ಕೆಯ್ಗೆ ಸಿಲ್ಕಿದನಾಗಳ್ ೮

ವ|| ಅಂತು ಪ್ರಹಾರವರ್ಮಂ ಸಿಲ್ಕಿದೊಡೆ ಮಾಳವೇಶ್ವರನುಪಕಾರಕ್ಕೆ ಬಿಟ್ಟು ಕಳಿಪಲ್ ಬೞಿಕ್ಕಾತಂ ತನ್ನ ಕುಟುಂಬಂಬೆರಸು ನಿಜಜನಪದಕ್ಕೆ ಬರ್ಪಾಗಳ್

ಕಂ|| ದಾಯಾದ್ಯ ವಿಕಟವರ್ಮಂ
ದಾಯಂ ತನಗೆಂದು ಮಿಥಿಳೆಯೊಳ್ ಪಟ್ಟವನ
ತ್ಯಾಯತದಿಂ ತಳೆದಿರ್ದಪ
ನೀಯೆಡೆಗಿನ್ನಾವ ಬುದ್ಧಿ ಪೇೞ್ ಮಿಥಿಳೇಶಾ ೯

ವ|| ಅದಲ್ಲದೆಯುಂ, ನಿನ್ನ ಬರವಂ ಕೇಳ್ದುಳ್ಳ ಸೈನ್ಯಮಂ ಕೂಡಿಕೊಂಡು ನಿನ್ನಂ ಕೊಲಲ್ ಬರುತಿರ್ದಪನೆಂವೊರ್ಬ ದೂತನಿದಿರಾಗಿ ಬಂದು ಪೇೞ್ವುದುಂ ಪ್ರಹಾರವರ್ಮಂ ಬಿಟ್ಟರಣ್ಯಮಾರ್ಗದೊಳ್ ಪೋಪಾಗಳ್

ಕಂ|| ಶಬರಾಧಿಪರೆಲ್ಲರ್ ನೆರೆ
ದು ಬಂದು ಮುತ್ಪತಿಯ ಬಲವನಾರ್ಪಿಂ ಕವರ
ಲ್ಕಬಲೆಯರತಿಭಯದಿಂ ಪಲವು
ಬಟ್ಟೆಯುಂ ಪತ್ತಿ ಪೋದರಿನ್ನೇವೇೞ್ವೆಂ ೧೦

ಕುಮಾರರೊಡನೆ ಪುಷ್ಪಪುರಕ್ಕೆ ಹೋದರು. ಅಲ್ಲಿ—೮. ಮಾಳವದೇಶದರಸನು ಕ್ರುದ್ಧನಾಗಿ ದಂಡೆತ್ತಿ ಬಂದು ಮಗಧ ರಾಜನಾದ ರಾಜಹಂಸನನ್ನು ಸೋಲಿಸಿದನು. ಆಗ ನಮ್ಮ ರಾಜ ಪ್ರಹಾರವರ್ಮನು ಮಾಳವರಾಜನ ಕೈಗೆ ಸಿಕ್ಕಿಬಿದ್ದನು. ವ|| ಮಾಳವೇಶ್ವರನು ಸಿಕ್ಕಿಬಿದ್ದ ಪ್ರಹಾರವರ್ಮನನ್ನು ಉಪಕಾರ ಬುದ್ಧಿಯಿಂದ ಬಿಟ್ಟು ಕಳುಹಿಸಿದನು. ಬಳಿಕ ಆತನು ತನ್ನ ಕುಟುಂಬದೊಡನೆ ತನ್ನ ರಾಜ್ಯಕ್ಕೆ ಹೊರಟನು. ಬರುತ್ತಿರುವಾಗ ಒಬ್ಬ ದೂತನು ಬಂದು—೯. "ದಾಯಾದಿಯಾದ ವಿಕಟವರ್ಮನು ತಾನು ವಾರಸುದಾರನೆಂದು ಮಿಥಿಲೆಯಲ್ಲಿ ಪಟ್ಟ ಕಟ್ಟಿಸಿಕೊಂಡನು. ಮಿಥಿಲಾ ರಾಜನೇ ! ಈ ವಿಘ್ನಕ್ಕೆ ನಿವಾರಣೋಪಾಯವೇನು ? ಹೇಳು. ವ|| ಅದಲ್ಲದೆ ನೀನು ಬರುತ್ತಿರುವುದನ್ನು ಕೇಳಿ ಇದ್ದ ಸೇನೆಯನ್ನು ಕರೆದುಕೊಂಡು ನಿನ್ನನ್ನು ಕೊಲ್ಲಲು ವಿಕಟವರ್ಮನು ಬರುತ್ತಿದ್ದಾನೆ" ಎಂದು ಎದುರಾಗಿ ಬಂದ ದೂತನೊಬ್ಬನು ಹೇಳಿದನು, ಅದನ್ನು ಕೇಳಿ ಪ್ರಹಾರವರ್ಮನು ಆ ದಾರಿಯನ್ನು ಬಿಟ್ಟು ಕಾಡುದಾರಿಯಲ್ಲಿ ಹೋದನು. ಆಗ—೧೦. ಬೇಡರ ಮುಖಂಡರೆಲ್ಲ ಸೇರಿ ಬಂದು ಪ್ರಹಾರವರ್ಮನ ಸೇನೆಯನ್ನು ಮುತ್ತಿ ಓಡಿಸಿದರು. ಆಗ ಅತಿಭಯದಿಂದ ಅಬಲೆಯರೆಲ್ಲರೂ ಹಲವು ದಾರಿಗಳಲ್ಲಿ ಓಡಿ

ವ॥ ಎಂದು ಮತ್ತಮಿಂದೆಂದಳ್

ಅಂತು ಕಿರಾತಸಂತತಿ ಮದೀಯನೃಪಾಲಕನಾಪ್ತಸೈನ್ಯಮಂ
ತಿಂತಿಣಿಯುಪ್ಪರಣ್ಯಪಥದೊಳ್ ಕವರಲ್ ಬೞಿಕೆನ್ನ ಚಿತ್ತವಿ
ಭ್ರಾಂತಿಯಿನಂಜಿಯಾಂ ನೃಪ ಕನೀಯಸಪುತ್ರನನೆತ್ತಿಕೊಂಡು ಪೋ
ದೆಂ ತರುಷಂಡಗುಲ್ಮಲತೆ ತೀವಿದಿಡುಂಕುಱೊಳೋಡಿಯಾಕ್ಷಣಂ ೧೧

ವ॥ ಅಂತೋಡಿಯಾತಮಾಲಗುಲ್ಮದೆಡೆಯೊಳ್ ಭೀತಿಯಿಂ ಕುಳ್ಳಿರ್ಪಾಗಳ್

ಅತಿ ರೌದ್ರಂ ಕ್ರೂರದಂಷ್ಟ್ರಂ ಜ್ವಲಿತವಿಲಸದಂಗಾರನೇತ್ರಂ ಸಮುನ್ನ
ರ್ತಿತವಜ್ರಶ್ಮಶ್ರು ತೀಕ್ಷ್ಣಸ್ಫುಟನಖಮುಖಮುತ್ಕುಂಚಿತಾಂಗಂ ನಟತ್ಪ್ರೋ
ನ್ನತಕರ್ಣಂ ಘೋರವಕ್ತ್ರಂ ಘನಘನರವದಿಂದಾರ್ದುಪಾಯ್ದುತ್ತು ಸಿಂಹ
ಪ್ರತಿಮಂ ಕಾಂತಾರದೊಳ್ ಪೆರ್ಬುಲಿ ಮುಳಿದದಟಿಂದೆನ್ನನಾಗಳ್ ಕುಮಾರಾ ೧೨

ವ॥ ಅಂತು ಪುಲಿ ಪಾಯಲಾಂ ಬೆದಱಿ ಕೆಯ್ಯ ಮಗನಂ ಬಿಸುಡಲಾಮಗಂ

ಕಂ॥ ಪಿರಿಯ ಕಪಿಲಾಶವಂ ಮುಂ
ದಿರಲದಱೊಡಲೊಳಗೆ ಭೀತಿಯಿಂ ಪೊಕ್ಕಂ ಭೂ
ವರಸುತನಲ್ಲಿಗೆ ಪೆರ್ಬುಲಿ
ಭರದಿಂ ಪಾಯ್ದುತ್ತು ಕೋಪದಿಂ ಗರ್ಜಿಸುತಂ ೧೩

ವ॥ ಅಂತು ಪುಲಿ ಪಾಯಲೊಡಂ

ಹೋದರು. ಅದನ್ನೇನೆಂದು ಹೇಳಲಿ ?" ವ॥ ಎಂದು ಹೇಳಿ ಮತ್ತೆ ಆ ಮುದುಕಿಯು ಹೇಳಿದಳು—೧೧. "ಬೇಡರ ಗುಂಪು ಹಾಗೆ ನನ್ನ ರಾಜನ ಆಪ್ತ ಸೈನ್ಯವನ್ನು ಆ ದಟ್ಟವಾದ ಕಾಡಿನಲ್ಲಿ ಸುಲಿದರು. ಬಳಿಕ ನನಗೆ ಏನು ಮಾಡಬೇಕೆಂದು ತೋರಲಿಲ್ಲ. ಹೆದರಿದ ನಾನು ರಾಜನ ಕಿರಿಯ ಮಗುವನ್ನು ಎತ್ತಿಕೊಂಡು ಮರಗಳು ಬಳ್ಳಿಗಳು ಮತ್ತು ಪೊದೆಗಳಿಂದ ತುಂಬಿದ್ದ ಇಕ್ಕಟ್ಟಾದ ಕಾಡು ದಾರಿಯಲ್ಲಿ ಕೂಡಲೇ ಓಡಿ ಹೋದೆನು. ವ॥ ಹಾಗೆ ಓಡಿ ಹೋಗಿ ಹೊಂಗೆಯ ಪೊದರಿನಲ್ಲಿ ಭಯದಿಂದ ಕುಳಿತಿದ್ದೆನು-ಆಗ, ೧೨. ಅತಿ ಭಯಂಕರ, ಕ್ರೂರವಾದ ಕೋರೆ ಹಲ್ಲು, ಉರಿಯುತ್ತಿದ್ದ ಕೆಂಡಗಣ್ಣು, ಮೇಲಕ್ಕೆ ಎದ್ದು ಕುಣಿಯುತ್ತಿದ್ದ ಕಠಿಣವಾದ ಮೀಸೆ, ಹರಿತವಾದ ಸ್ಫುಟವಾದ ಚೂಪಾದ ಉಗುರು, ಬಗ್ಗಿದ ಶರೀರ, ಮೇಲೆತ್ತಿದ್ದ ಚಲಿಸುವ ಕಿವಿ. ಘೋರವಾದ ಮುಖ-ಇವುಗಳಿಂದ ಸಿಂಹದ ಹಾಗೆ ಭಯಂಕರವಾಗಿದ್ದ ಹೆಬ್ಬುಲಿಯೊಂದು ಮೋಡದಂತೆ ಗರ್ಜಿಸುತ್ತಾ ಕೋಪದಿಂದ ಆ ಕಾಡಿನಲ್ಲಿ ನನ್ನ ಮೇಲೆರಗಿತು. ವ॥ ಹುಲಿಯೆರಗಲು ನಾನು ಹೆದರಿ ಕೈಯಲ್ಲಿದ್ದ ಮಗುವನ್ನು ಬಿಸುಟೆನು. ಆ ಮಗುವು—೧೩. ಮುಂದೆ ಬಿದ್ದಿದ್ದ ಕಪಿಲೆ ಹಸುವಿನ ಶವದ ಶರೀರದಲ್ಲಿ ಭಯದಿಂದ ಹೋಗಿ ಅಡಗಿಕೊಂಡಿತು. ಹೆಬ್ಬುಲಿಯು ಕೋಪದಿಂದ ಗರ್ಜಿಸುತ್ತಾ ಅಲ್ಲಿಗೂ ನುಗ್ಗಿತು. ವ॥ ಹಾಗೆ ಹುಲಿಯು ನುಗ್ಗಲು—

ಕಂ॥ ಕಾರಡವಿಯೊಳಱಿದಾವಿನ
ಹೇರೊಡಲೊಳ್ ಮುನ್ನಮಱಿದು ಶಬರರ್ ಯಂತ್ರಾ
ಕಾರದೆ ನಿಟ್ಟಂಬಂ ವಿ
ಸ್ತಾರದಿನೊಲ್ದಿಟ್ಟರಾರ್ಗೆ ತಿಳಿಯದ ತೆಱದಿಂ ೧೪

ಅಳವಡಲೇಱಿಸಿಟ್ಟ ಸರಳಾಂತ್ರದ ಬಲ್ಪಿನ ಬಿಲ್ ಸಿಡಿಲ್ದು ಪೆ
ರ್ಬುಲಿಯ ಪೊದಟ್ದ ಗೋಣಱಿಯಲಿರ್ಬಗಿಯಪ್ಪಿನಮುರ್ಚಿಪಾಯ್ತುರಲ್
ಪೆಟವೆಣನಾದವೋಲ್ ಮಡಿಯಿತಾಪುಲಿಯಾನದನೆಯ್ದೆ ಕಂಡು ಪೆ
ಪ್ಪಳಸಿ ತೆರಳ್ದಿನೊಂದು ಕಡೆಗಾಗಳತೀವಭಯಾತಿರೇಕದಿಂ ೧೫

ವ॥ ಅಂತಾನಲ್ಲಿಂ ತೆರಳ್ದು ಪೋಪಾಗಳೊರ್ಬ ತಾಪಸಸುಕುಮಾರನಂ ಕಂಡು ತಚ್ಚಿತ್ರಮಂ ಪೇಳ್ದೊಂದೂರಂ ಸಾರ್ವೆನೆಂದು ಪೋಗುತಿರ್ಪಾಗಳ್

ಕಂ॥ ಪಿರಿಯ ಕುಮಾರನನುಯ್ದಂ
ಬುರುಹಾನನೆ ಮತ್ತನೂಜೆ ಪುಷ್ಕರಿಕೆ ಸುಖೇ
ತರೆಯಾಗಿ ಬರ್ಪುದಂ ಕಂ
ಡುರಿದತ್ತೆನ್ನೊಡಲೊಳಂದು ದುಃಖಜ್ವಲನಂ ೧೬

ವ॥ ಅಂತೊರ್ಬ ಪಟುಭಟಸಹಿತಂ ಬರುತಿರ್ದ ಪುಷ್ಕರಿಕೆಯನಾಂ ಕಾಣಲೊಡಂ

೧೪. ಆ ಕಾರಡವಿಯಲ್ಲಿ ಬೇಡರು ಆ ಸತ್ತ ಹಸುವಿನ ದೊಡ್ಡ ಶರೀರದಲ್ಲಿ ಮೊದಲೆ ಒಂದು ಬಿಲ್ಲನ್ನಿಟ್ಟು ಅದರಲ್ಲಿ ನೀಳವಾದ ಬಾಣವನ್ನು ಯಾರಿಗೂ ತಿಳಿಯದಂತೆ ಹೂಡಿದ್ದರು. ೧೫. ಅನುಕೂಲವಾಗಿ ಹೂಡಿದ್ದ ಬಾಣವು ಬಿಲ್ಲಿನ ನರದಿಂದ ಸಿಡಿದು ಹೆಬ್ಬುಲಿಯ ವಿಸ್ತಾರವಾದ ಕೊರಳನ್ನು ಇರಿದು ಎರಡಾಗಿ ಸೀಳಿ ಕೊಂದು ಹಾಕಿತು. ಅದನ್ನು ಕಂಡು ಹೆದರಿ ನಾನು ಒಂದು ಕಡೆಗೆ ಓಡಿದೆನು. ವ॥ ನಾನು (ಮುದುಕಿಯು) ಅಲ್ಲಿಂದ ಹೊರಟು ಹೋಗುತ್ತಿದ್ದಾಗ ಒಬ್ಬ ಮುನಿಕುಮಾರನನ್ನು ಕಂಡೆನು. ಅವನಿಗೆ ಈ ಆಶ್ಚರ್ಯ ಘಟನೆಯನ್ನು ಹೇಳಿ ಒಂದೂರನ್ನು ಸೇರಬೇಕೆಂದು ಮುಂದೆ ಹೋಗುತ್ತಿದ್ದೆನು. ಆಗ–೧೬. ಹಿರಿಯಮಗನನ್ನು ಎತ್ತಿಕೊಂಡೋಡಿದ ನನ್ನ ಮಗಳು ಪುಷ್ಕರಿಕೆಯು ದುಃಖಿತಳಾಗಿ ಬರುತ್ತಿದ್ದಳು. ಅವಳನ್ನು ನೋಡಿ ದುಃಖಾಗ್ನಿಯಿಂದ ನನ್ನ ಶರೀರವು ಉರಿದು ಹೋಯಿತು. ವ॥ ಹಾಗೆ ಒಬ್ಬ ಸೈನಿಕನೊಡನೆ ಬರುತ್ತಿದ್ದ ಪುಷ್ಕರಿಕೆಯನ್ನು

ಪಾತಕಿಯಂ ನಿಕೃಷ್ಟೆಯನನಾಥೆಯನಾತ್ಮವಿರೋಹಿಯಂ ಮಹಾ
ಘಾತುಕಿಯಂ ಸ್ವಬಂಧುಜನದೂರಿತೆಯಂ ಖಳೆಯಂ ದುರಂತದುಃ
ಖಾತುರೆಯಂ ಕುಮಾರಕನನೀಗಳೆ ನೀಗಿದ ಪಾಪಕರ್ಮಿಯಂ
ಮಾತೆಯಿದೇಕೆ ಕಂಡೆಯೆನುತುರ್ವರೆಯೊಳ್ ಪೊರಳ್ದುಟ್ತಳಾಕ್ಷಣಂ ೧೭

ವ॥ ಅಂತವಳ್ ದುಃಖಿಸಲದನೆಂತಾನುಂ ಸಂತೈಸಿ ಬಟಿಕೆಲೆ ನೀನೆತ್ತಿಕೊಂಡಿರ್ದ ಕುಮಾರಕನೇನಾದನೆಂದಾಂ ಕೇಳಲವಳಿಂತೆಂದಳ್

ಕಂ॥ ಒರ್ಬಳೆ ಪೋಗುತ್ತಿರಲಾ
ನೊರ್ಬ ಕಿರಾತಂ ಭಯಂಕರಂ ಕಂಡೆನ್ನಂ
ಜರ್ಬಿ ಕುಮಾರಕನಂ ನಿಜ
ದೋರ್ಬಲದಿಂ ಸೆಳೆದುಕೊಂಡು ಗುಹೆಯೊಳ್ ಪೊಕ್ಕಂ ೧೪

ವ॥ ಅಂತವಂ ಪುಗಲೊಡಂ ಮತ್ತೊರ್ಬಂ ಬಂದೆನ್ನಂ ಪಿಡಿದು ತನ್ನಿರ್ಕೆಗೆ ಕೊಂಡು ಪೋಗಿ

ಕಂ॥ ತನಗೆ ಸತಿಯಾಗವೇಟ್ಕಿಂ
ದನುನಯವೊಲ್ದೆನ್ನನಲೆಯಲಾನೊಲ್ಲದಿರಲ್
ಮುನಿದಾಕಿರಾತನೆನ್ನಂ
ವನದೊಳ್ ಕೊಲಲೆಂದು ಮನದೊಳನುಗೆಯ್ವಾಗಳ್ ೧೯

ನಾನು ನೋಡಿದೆನು. ಆಗ—೧೭. "ನಾನು ಪಾತಕಿ, ನೀಚಳು, ಅನಾಥೆಯು, ಆತ್ಮದ್ರೋಹಿಯು, ದೊಡ್ಡ ಕೊಲೆಗಾರ್ತಿ, ಬಂಧುಗಳಿಂದ ದೂರ ಮಾಡಲ್ಪಟ್ಟವಳು. ದುಷ್ಟೆಯು, ದುರಂತವಾದ ದುಃಖದಿಂದ ಪೀಡಿತೆಯು, ಕುಮಾರನನ್ನು ಕಳೆದುಕೊಂಡ ಮಹಾಪಾಪಕರ್ಮಿ, ಅಮ್ಮ ! ನೀನು ನನಗೇಕೆ ಕಾಣಿಸಿಕೊಂಡೆ ?" ಎಂದು ಹೇಳುತ್ತಾ ಆಗ ನೆಲದ ಮೇಲೆ ಹೊರಳಾಡಿದಳು. ವ॥ ಹಾಗೆ ದುಃಖಿಸುತ್ತಿದ್ದ ಪುಷ್ಕರಿಕೆಯನ್ನು ಸಮಾಧಾನ ಮಾಡಿದೆನು. ಬಳಿಕ 'ನೀನೆತ್ತಿಕೊಂಡಿದ್ದ ಕುಮಾರನೇನಾದನು ?' ಎಂದು ಕೇಳಿದೆನು. ಅವಳು ಅದಕ್ಕೆ ಹೀಗೆ ಹೇಳಿದಳು. ೧೮. ನಾನು ಒಬ್ಬಳೇ ಹೋಗುತ್ತಿದ್ದೆನು. ಆಗ ಭಯಂಕರನಾದ ಕಿರಾತನೊಬ್ಬನು ನನ್ನನ್ನು ನೋಡಿದನು. ಅವನು ನನ್ನನ್ನು ಹೆದರಿಸಿ ತನ್ನ ಬಲವಾದ ತೋಳುಗಳಿಂದ ಮಗುವನ್ನು ಸೆಳೆದುಕೊಂಡು ಒಂದು ಗುಹೆಯೊಳಕ್ಕೆ ಹೋದನು. ವ॥ ಮತ್ತೊಬ್ಬನು ಬಂದು ನನ್ನನ್ನು ಹಿಡಿದುಕೊಂಡು ತನ್ನ ವಾಸಸ್ಥಾನಕ್ಕೆ ಕರೆದುಕೊಂಡು ಹೋದನು. ೧೯. 'ತನಗೆ ಹೆಂಡತಿಯಾಗು' ಎಂದು ಆ ಕಿರಾತನು ನನ್ನನ್ನು ನಯ ವಿನಯಗಳಿಂದ ಕೇಳಿಕೊಂಡನು, ನಾನು ಆಗುವುದಿಲ್ಲವೆಂದೆನು, ಆಗ ಆ ಕಿರಾತನು ಕೋಪಿಸಿಕೊಂಡು ನನ್ನನ್ನು ಕಾಡಿನಲ್ಲಿ ಕೊಲ್ಲಲು ನಿಶ್ಚಯಿ

ಕ॥ ಎನ್ನೊಡನಿರ್ಪಾತಂ ಪ್ರ
ಚ್ಛನ್ನತೆಯಿಂ ಬಂದು ತತ್ಕಿರಾತನ ಶಿರಮಂ
ತನ್ನಸಿಯಿಂದರಿದು ಬಱಿ
ಕ್ಕೆನ್ನಂ ವಧುವಾಗಿ ಮಾಡಿಕೊಂಡನಲಂಪಿಂ ೨೦

ವ॥ ಬಱಿಯಿಂದೀತಂ ಪ್ರಹಾರವರ್ಮನಿಂ ಮನ್ನಿಸಿಕೊಳ್ವ ಭೃತ್ಯನೆಂದು ಪೇೞ್ದುದರ್ಕಾಂ ಹರ್ಷಿತೆಯಾಗಲನಂತರಂ,

ಕಂ॥ ನಮ್ಮೊಡೆಯನಿರ್ದ ಠಾವಿಂ
ಗುಮ್ಮಹದಿಂ ಪೋಪೆನೆಂದು ಮತ್ಪತಿಯೆನ್ನಂ
ಸಮ್ಮಾನಿಸಿಯೊಡಗೊಂಡು
ಯ್ದಮ್ಮುದದಿಂ ಮಾತೆ ಕೇಳಿದೆನಗಾದ ಹದಂ ೨೧

ವ॥ ಎಂಬುದುಮಾನುಂ ನಿನ್ನಂತೆಯಾದೆನೆಂದೆನಗಾದವಸ್ಥೆಯನವಳ್ಗೆ ಪೇೞ್ದನಂತರಂ ಆವಿರ್ಬರುಂ ಪ್ರಹಾರವರ್ಮನುಂ ಪ್ರಿಯಂವದೆಯುಮಿರ್ದೆಡೆಗೆಯ್ದಿ

ಕಂ॥ ಧಾತ್ರೀಶನಂ ತದೀಯಕ
ಳತ್ರಮನಾವಿರ್ಬರೆಯ್ದಿ ಕಡುಪಿಂದಾಗಳ್
ಪುತ್ರವಿಯೋಗದ ಶಿಖಿಯಿಂ
ಶ್ರೋತ್ರಂಗಳನುರಿಪಿ ಕಳಿದೆವಚ್ಚರಿಯಾಗಲ್ ೨೨

ವ॥ ಅಂತವರಿರ್ಬರ್ ಕುಮಾರರ್ ಪೋದರೆಂಬುದನಱಿದು ಕಡುದುಃಖದಿಂ ಪ್ರಹಾರವರ್ಮನಲ್ಲಿಂ ತಳರ್ದು ಸಹ್ಯದೇಶಮಾರ್ಗದೊಳ್ ಮಿಥಿಳಾಪುರಕ್ಕೆ ಪೋಗುತಿರ್ಪಾಗಳ್

ಸಿದನು. ೨೦. ಆಗ ನನ್ನೊಡನಿದ್ದವನು ಗುಟ್ಟಾಗಿ ಬಂದು ಆ ಕಿರಾತನ ತಲೆಯನ್ನು ಕತ್ತರಿಸಿ ಹಾಕಿದನು. ಬಳಿಕ ಅವನು ನನ್ನನ್ನು ಪ್ರೀತಿಯಿಂದ ಮದುವೆಯಾದನು. ವ॥ ಬಳಿಕ ಅವನು 'ತಾನು ಪ್ರಹಾರವರ್ಮನ ಗೌರವಸ್ಥನಾದ ಸೇವಕನು. ಎಂದು ಹೇಳಿದನು. ಆಗ ನನಗೆ ತುಂಬ ಸಂತೋಷವಾಯಿತು. ಅನಂತರ— ೨೧ 'ನಮ್ಮ ರಾಜನಿರುವ ಸ್ಥಳಕ್ಕೆ ಹೋಗೋಣ' ಎಂದು ನಾನು ಉತ್ಸಾಹದಿಂದ ಹೇಳಿದೆನು. ಆಗ ನನ್ನ ಪತಿಯು ನನ್ನನ್ನು ಗೌರವದಿಂದ ಕರೆದುಕೊಂಡು ಬಂದನು. ಇದು ನನ್ನ ವೃತ್ತಾಂತ." ವ॥ 'ನಾನೂ ನಿನ್ನಂತೆಯೇ ಆದೆನು ? ಎಂದು ಹೇಳಿ ನಾನು ಮಗಳಿಗೆ ತನ್ನ ವೃತ್ತಾಂತವನ್ನು ವಿವರಿಸಿದೆನು. ಅನಂತರ ಇಬ್ಬರೂ ಪ್ರಹಾರವರ್ಮ ಪ್ರಿಯಂವದೆಯರಿದ್ದ ಸ್ಥಳಕ್ಕೆ ಹೋದೆವು. ೨೨. ನಾವಿಬ್ಬರೂ ಪುತ್ರವಿರಹದ ವಿಷಯವನ್ನು ಹೇಳಿ ರಾಜ ರಾಣಿಯರ ಕಿವಿಯನ್ನು ಪುತ್ರವಿಯೋಗಾಗ್ನಿಯಿಂದ ಉರಿಸಿದೆವು. ಅವರು ಆಶ್ಚರ್ಯಪಟ್ಟರು. ವ॥ ಅವರಿಬ್ಬರೂ ಕುಮಾರರು ಕಳೆದು ಹೋದ ವಿಷಯವನ್ನು ಕೇಳಿ ತುಂಬ ದುಃಖಿಸಿದರು. ಅನಂತರ ಪ್ರಹಾರವರ್ಮನು ಅಲ್ಲಿಂದ ಹೊರಟು ಸಹ್ಯ ದೇಶದ ಮೂಲಕ ಮಿಥಿಲಾ ನಗರಕ್ಕೆ ಹೋಗು

ಕಂ॥ ಸಂಹಾರವರ್ಮತನಯಂ
ಬಾಹಾಬಲದಿಂದೆ ಮಿಥಿಳೆಯೊಳ್ ಪಟ್ಟವನಾಂ
ತಾಹವಕೆ ಬಂದನುದ್ಧತ
ಸಾಹಸದಿಂದಂ ಪ್ರಹಾರವರ್ಮನೊಳಾಗಳ್ ೨೨

ವ॥ ಅಂತು ಬಂದು,

ಕಂ॥ ಜವದಿಂ ಮುಳಿದಾಗಳ್ ವಿಕ
ಟವರ್ಮನಾರ್ಪಿಂ ಪ್ರಹಾರವರ್ಮನ ಸರ್ವ
ಸ್ವವನಂದು ಪಿಡಿದು ತನ್ನು
ತ್ಸವದಿಂ ಮಿಥಿಳಾಪುರಕ್ಕೆ ಬಂದನಲಂಪಿಂ ೨೪

ವ॥ ಅಂತು ಕೊಂಡು ಬಂದು ಪ್ರಹಾರವರ್ಮನಂ ಪ್ರಿಯಂವದೆಯುಂ ವಿಕಟವರ್ಮಂ ಸೆಱೆಗೊಯ್ದನೆಂದು ಮತ್ತಮಿಂತೆಂದಳ್

ಕಂ॥ ಇಂದುಮುಖಿ ಪೂರ್ಣಕುಚೆ ಮ
ನ್ನಂದನೆ ಪುಷ್ಕರಿಕೆ ಕಲ್ಪಸುಂದರಿಯುಂ ಪೆಂ
ಪಿಂದಂದೋಲಗಿಸುತ್ತುಂ
ಬೆಂದೊಡಲಂ ಪೊರೆಯುತ್ತಿರ್ದಪಳ್ ನೋಡೀಗಳ್ ೨೫

ವ॥ ಅಂತೀ ವಿಕಟವರ್ಮನರಸಿಯಪ್ಪ ಕಲ್ಪಸುಂದರಿಯುನೆನ್ನ ಮಗಳ್ ಪುಷ್ಕರಿಕೆ ಸೇವೆಗೆಯ್ವ ಕಾರಣವಿಾತಾಣದಿಂ ತೊಲಗಲಾಱದೆ

ತ್ತಿದ್ದಾಗ— ೨೨. ಸಂಹಾರವರ್ಮನ ಮಗನು (ವಿಕಟವರ್ಮನು) ತನ್ನ ಬಾಹು ಬಲದಿಂದ ಮಿಥಿಲಾನಗರವನ್ನು ವಶಪಡಿಸಿಕೊಂಡು ಸಿಂಹಾಸನಾರೂಢನಾಗಿ ಪ್ರಹಾರ ವರ್ಮನ ಮೇಲೆ ಉದ್ಧತ ಸಾಹಸದಿಂದ ಯುದ್ಧಕ್ಕೆ ಬಂದನು. ವ॥ ಹಾಗೆ ಬಂದು—೨೪. ವಿಕಟವರ್ಮನು ಕೋಪಿಸಿಕೊಂಡು ವೇಗದಿಂದ ಪ್ರಹಾರ ವರ್ಮನ ಮೇಲೆ ನುಗ್ಗಿದನು. ಪ್ರಹಾರವರ್ಮನ ಸರ್ವಸ್ವವನ್ನೂ ವಶಪಡಿಸಿ ಕೊಂಡು ಉತ್ಸವದಿಂದ ಮಿಥಿಲಾನಗರವನ್ನು ಪ್ರವೇಶಿಸಿದನು. ವ॥ ಮತ್ತು ಪ್ರಹಾರವರ್ಮನನ್ನೂ ಪ್ರಿಯಂವದೆಯನ್ನೂ ಹಿಡಿದುಕೊಂಡು ಬಂದು ವಿಕಟವರ್ಮನು ಸೆರೆಯಲ್ಲಿಟ್ಟನು ಎಂದು ಹೇಳಿ ಮತ್ತೆ ಮುದುಕಿಯು ಹೇಳಿದಳು. ೨೫. ಇಂದು ಮುಖಿಯಾದ, ತುಂಬಿದ ಕುಚಗಳುಳ್ಳ ನನ್ನ ಮಗಳು ಪುಷ್ಕರಿಕೆಯು (ವಿಕಟವರ್ಮನ ಹೆಂಡತಿಯಾದ) ಕಲ್ಪ ಸುಂದರಿಯನ್ನು ಈಗ ಸೇವಿಸುತ್ತಿದ್ದಾಳೆ. ನೋಡು. ಹೀಗೆ ತನ್ನ ಬೆಂದ ಶರೀರವನ್ನು ಪೋಷಿಸುತ್ತಿದ್ದಾಳೆ. ವ॥ ಹೀಗೆ ವಿಕಟವರ್ಮನ ಅರಸಿ ಕಲ್ಪಸುಂದರಿಯ ಸೇವೆಯನ್ನು ನನ್ನ ಮಗಳು ಪುಷ್ಕರಿಕೆಯು ಮಾಡುತ್ತಿದ್ದಾಳೆ.

ಕಂ॥ ಈ ಪರಿಯುವಸ್ಥೆಗಾಂ ಪರಿ
ತಾಪಂಬಟ್ಟಖಿಳಸೌಖ್ಯಮಂ ತೊಱೆದೀಗಳ್
ತಾಪಸಿಯಾಗಿರ್ದಪೆನೆಂ
ದಾಪರಿಣತವಯಸೆ ಪೇಟ್ದು ಮತ್ತಿಂತೆಂದಳ್ ೨೬

ಆ ಕಪಿಲಾಶವದೊಳ್ ಪೊ
ಕ್ಕಾಕುವರಂ ಸುಖದೊಳಿರ್ದನಾದೊಡೆ ನಿನ್ನಂ
ತಾಕಾರಪೂಜ್ಯನಾಗಿ ನಿ
ಜಾಕೃತಿಯಂ ತಳೆವನೆಂದು ಶೋಕಿಸುತಿರ್ದಳ್ ೨೭

ವ॥ ಮತ್ತಂ

ಕಂ॥ ಅನುನಯದಿನಾಕುಮಾರಕ
ನಿನಿತುದಿನಂ ಸುಖದೊಳಿರ್ದನಾದೊಡೆ ತನ್ನೀ
ಜನನೀ ಜನಕರ್ಗತಿ ಬಂ
ಧನಮೇಕಾದಪುದು ಪೆರ್ಚುವನೆ ದಾಯಾದ್ಯಂ ೨೮

ವ॥ ಎಂಬುದುಂ[1] (ಒಂದು ಹಸ್ತಪ್ರತಿಯಲ್ಲಿ ಈ ಪದ್ಯ ದೊರೆಯುತ್ತದೆ.)

'ಕಪಿಲಾಶವದೊಳ್ ಭಯದಿಂ
ದೆ ಪೊಕ್ಕನೆಂಬಾಕುಮಾರನಾಂ ಬಱಿಕಲ್ಲಿಂ
ದುಪಚರಿಸಿಯೆನ್ನನೊರ್ಬಂ
ತಪಸ್ವಿ ಕೊಂಡೊಯ್ದನದೆ ಕಥಾವೃತ್ತಾಂತಂ'

ಈ ಕಾರಣದಿಂದ ನಾನು ಇಲ್ಲಿಂದ ಹೋಗಲಾರದೆ ಇದ್ದೇನೆ. ೨೬. ಈ ರೀತಿಯ ಸ್ಥಿತಿಯಲ್ಲಿರಲು ಪರಿತಾಪವಾಗಿದೆ. ಎಲ್ಲ ಸೌಖ್ಯಗಳನ್ನೂ ಬಿಟ್ಟು ತಾಪಸಿಯಾಗಿದ್ದೇನೆ." ಎಂದು ಹಣ್ಣು ಹಣ್ಣು ಮುದುಕಿಯು ಹೇಳಿದಳು. ಮತ್ತೆ ಅವಳು ಹೇಳಿದಳು ೨೭. 'ಆ ಕಪಿಲೆ ಹಸುವಿನ ಹೆಣದಲ್ಲಿ ಸೇರಿದ ಕುಮಾರನು ಸುಖವಾಗಿದ್ದರೆ ಇಷ್ಟು ವರ್ಷಗಳಿಗೆ ನಿನ್ನ ಹಾಗೆ ಆಕಾರದಿಂದ ಗಣ್ಯನಾಗುತ್ತಿದ್ದನು" ಎಂದು ಹೇಳಿ ಶೋಕಿಸಿದಳು. ವ॥ ಮತ್ತೆ ೨೮. ಆ ಕುಮಾರಕನು (ಉಪಹಾರವರ್ಮನು) ಇಷ್ಟು ದಿನಗಳು ಸುಖವಾಗಿದ್ದರೆ, ಆತನ ಈ ತಾಯಿ ತಂದೆಗಳಿಗೆ ಈ ಬಗೆಯ ಬಂಧನವು ಏಕಾಗುತ್ತಿತ್ತು? ದಾಯಾದಿಯೂ (ಶತ್ರು) ವೃದ್ಧಿ ಹೊಂದುತ್ತಿದ್ದನೆ?" ವ॥ ಎಂದು ಹೇಳಲು "ನೀನು ಹಸುವಿನ ಶವದಲ್ಲಿ ಭಯದಿಂದ ರಾಜಕುಮಾರನು ಅಡಗಿಕೊಂಡನೆಂದು ಹೇಳಿದೆಯಲ್ಲ, ಆ ಕುಮಾರನೇ ನಾನು. ಒಬ್ಬ ತಪಸ್ವಿ ನನ್ನನ್ನು ಅಲ್ಲಿಂದ ಕರೆದುಕೊಂಡು ಹೋಗಿ ಪಾಲಿಸಿದನು. ಅದೇ ಕಥಾವೃತ್ತಾಂತ" ಎಂದು ನಾನು ಹೇಳಿದೆನು (೮೦)

ತೊರೆಯೆ ಕುಚಂಗಳುಣ್ಮೆ ಪುಳಕಾಂಕುರಮುರ್ಚೆ ಮುದಶ್ರುಗಂಟಲಂ
ಸೆರೆಬಿಗಿಯಲ್ ನಿಜಾಕೃತಿ ಕರಂ ನಯಮೇಱೆ ಮುಖಂ ಪ್ರಸನ್ನಮಂ
ದಿರಮೆನಿಸಲ್ ಮನಂ ವಿನಯದಿಂ ಗುಡಿಗಟ್ಟೆ ಮಹಾಪ್ರಮೋದದು
ಬ್ಬರದೊಳತೀವ ಸಂಭ್ರಮದೊಳೆನ್ನನಲಂಪಿನೊಳಾಕೆಯಪ್ಪಿದಳ್ ೨೯

ವ॥ ಅಂತು ಸಂತಸದಿಂದಪ್ಪಿಯೆನ್ನ ಮುಖಮಂ ನೋೞ್ಪುದುಮಾನಿಂತೆಂದೆಂ

ಮಲ್ಲಿಕಾಮಾಲೆ

ವಿಕಟವರ್ಮನ ಮುಂಡಮಂ ಪೊಡೆಸೆಂಡನಾಡಿ ಜಗಕ್ಕೆ ಕೌ
ತುಕಮನಿತ್ತು ಬೞಿಕ್ಕಮತ್ಪಿತೃಮಾತೃಮಂ ಭುಜದಾರ್ಪಿನಿಂ
ಸಕಳರಾಜ್ಯಸುಖಕ್ಕೆ ಭಾಜನಮಪ್ಪವೋಲ್ ಮಿಗೆಮಾೞ್ಪೆನಂ
ಬಿಕೆಯಿದಂ ಪ್ರಕಟಕ್ಕೆ ತಾರದೆ ನೀತಿಯಿಂದಱಿ ನಿಶ್ಚಯಂ ೩೦

ವ॥ ಎಂದು ಮತ್ತಂ

ಕಂ॥ ಆಂ ಬಂದಿರ್ದುದನೊಲ್ದ
ನ್ನಂಬಿಕೆಯುಂ ಜನಕನುಂ ದಿಟಕ್ಕಱಿಯದವೋ
ಲಿಂಬಿನೊಳೆಸಗುಗೆ ಕಾರ್ಯಮ
ನಂಬುಜಮುಖಿ ವಿಕಟವರ್ಮನಱಿಯದ ತೆಱದಿಂ ೩೧

ವ॥ ಎಂದಾಂ ಪೇೞ್ವುದುಮಾಕೆ ಸಂತೋಷಂಬಟ್ಟು ಮುಹುರ್ಮುಹುರಾಲೋಕನಂಗೆಯ್ದು

೨೯. ಅವಳ ಕುಚಗಳಿಂದ ಹಾಲು ಉಕ್ಕಿ ಹರಿಯಿತು. ದೇಹದಲ್ಲಿ ರೋಮಾಂಚವುಂಟಾಯಿತು. ಆನಂದದ ಕಂಬನಿಯು ಗಂಟಲಿನ ನರಗಳನ್ನು ಬಿಗಿಯಿತು. ಅವಳ ಆಕೃತಿಯೇ ಸುಂದರವಾಯಿತು. ಮುಖವು ಪ್ರಸನ್ನವಾಯಿತು. ಮನವು ವಿನಯದಿಂದ ಉತ್ಸಾಹಗೊಂಡಿತು. ಅತಿಶಯವಾದ ಹರ್ಷವು ಉಕ್ಕಿತು. ಅತಿ ಸಂಭ್ರಮದಿಂದ ಆನಂದದಿಂದ ಆಕೆಯು ನನ್ನನ್ನು ಅಪ್ಪಿಕೊಂಡಳು. ವ॥ ಹಾಗೆ ಸಂತೋಷದಿಂದ ಅಪ್ಪಿಕೊಂಡು ನನ್ನ ಮುಖವನ್ನವಳು ನೋಡಿದಳು. ಆಗ ನಾನು ಹೀಗೆ ಹೇಳಿದೆನು — ೩೦. "ವಿಕಟವರ್ಮನ ತಲೆಯನ್ನು ಕಡಿದು ಚೆಂಡಾಟವಾಡಿ ಜಗತ್ತಿಗೆ ಆಶ್ಚರ್ಯವನ್ನುಂಟುಮಾಡುವೆನು. ಬಳಿಕ ನನ್ನ ತೋಳ ಬಲದಿಂದ ನನ್ನ ತಾಯಿ ತಂದೆಗಳನ್ನು ಸಕಲ ರಾಜ್ಯ ಸುಖಕ್ಕೆ ಆಶ್ರಯರಾಗುವಂತೆ ಮಾಡುವೆನು. ಇದನ್ನು ಪ್ರಕಟಿಸಬೇಡ. ಇದನ್ನು ನಿಶ್ಚಯವೆಂದು ತಿಳಿ" ವ॥ ಎಂದು ಹೇಳಿ ಮತ್ತೆ— ೩೧. "ಕಮಲ ಮುಖಿ! ನಾನು ಬಂದಿರುವ ವಿಷಯವು ನನ್ನ ತಾಯಿಗೂ ತಂದೆಗೂ ತಿಳಿಯದೆ ಇರಲಿ. ವಿಕಟವರ್ಮನಿಗೂ ತಿಳಿಯದ ಹಾಗೆ ಈ ಕೆಲಸವನ್ನು ನಡೆಯಿಸಬೇಕು." ವ॥ ಎಂದು ನಾನು ಹೇಳಲು ಆಕೆಯು ಸಂತೋಷವನ್ನು ಹೊಂದಿ ಮತ್ತೆ ಮತ್ತೆ ನನ್ನನ್ನು

ಕಂ॥ ಕೂಡಿತೊಲವಿಂ ಪ್ರಿಯುಂವದೆ
ಮಾಡಿದ ನೋಂಪಿಯ ಫಲಂ ದಲೆಂದಂದೆನ್ನಂ
ನೋಡಿ ನಿಜಹರ್ಷದಿಂ ಮಾ
ತಾಡಿಸುತುಂ ಮಠದೊಳೊಲ್ದು ಸುಖಮಿರ್ದಾಗಳ್ ೩೨

ದಿವಸಶ್ರೀ ರವಿರತ್ನ ಕುಂಭದಿನಲಂಪಿಂದೊಲ್ಮೆಯಿಂ ಪಶ್ಚಿಮಾ
ರ್ಣವ ಪಾನೀಯವನೊಯ್ವೆನೆನ್ನುದಯ ಶೈಲಾವಾಸಕೆಂದಲ್ಲಿ ತುಂ
ಬುವ ಪೊೞ್ತೊಂದು ಮಹೋಗ್ರಕಾಲಮಕರಂ ತತ್ಕುಂಭಮಂಕರ್ಚಿ ಪೋ
ಯ್ತವಳಂ ಕೂಡಿಯೆನಲ್ಕೆ ಪಂಕಜಸಖಂ ಪೊಕ್ಕಂ ಪ್ರತೀಚ್ಯಬ್ಧಿಯಂ ೩೩

ವ॥ ಅಂತು ಸೂರ್ಯಾಸ್ತಮಾನವಾಗಲೊಡನೆನಗೊಂದು ಪಱಿದ ತಟ್ಟಿಯಂ ಮಠದ ಗೊಂಟಿನೊಳ್ ಪಾಸಿ ಕೊಟ್ಟೊಡಾಂ ವಿಶ್ರಮಿಸಿಯಾರಾತ್ರಿಯಂ ಕಳಿಯೆ

ಉದಯಗಿರೀಂದ್ರಮೆಂಬ ಪೊಸಕಂಭದಿನಾರ್ದು ಗಭಸ್ತಿಕೇಸರಂ
ಬಿದಿರ್ದು ಕರಂಗಳಂ ನೆಗಪಿ ಮುನ್ನರುಣೋದಯ ವಿಸ್ಫುಲಿಂಗಮಂ
ಕೆದಱಿ ತಮಿಸ್ರದೈತ್ಯನೊಡಲಂ ಬಗಿದಾಕಮಳಾನುಮೋದದಿಂ
ದುದಯಿಸಿದಂ ದಿನಾಧಿಪನೃಕೇಸರಿಧಾತೃಹರಾತ್ಮಕಂ ಕರಂ ೩೪

ವ॥ ಅಂತುದಯುವಾಗಲುದಯುಕರ್ಮಮಂ ತೀರ್ಚಿ ಕುಳ್ಳಿರ್ದ ಸಮಯದೊಳ್

ನೋಡಿದಳು. ೩೨. ಪ್ರಿಯುಂವದೆಯು ಮಾಡಿದ ವ್ರತದ ಫಲವಿಂದು ಫಲಿಸಿತು ಎಂದು ನನ್ನನ್ನು ನೋಡಿ ಹರ್ಷದಿಂದ ಮಾತನಾಡಿಸಿದಳು. ಆನಂದದಿಂದ ಮಠದಲ್ಲಿ ಸುಖವಾಗಿದ್ದಳು. ೩೩. ದಿವಸಲಕ್ಷ್ಮಿಯು ಸೂರ್ಯನೆಂಬ ರತ್ನದ ಬಿಂದಿಗೆಯಿಂದ ಸಂತೋಷವಾಗಿ ಪಶ್ಚಿಮ ಸಮುದ್ರದ ನೀರನ್ನು 'ನನ್ನ ಉದಯಗಿರಿಯ ಮನೆಗೆ ಒಯ್ಯುವೆನು' ಎಂದು ಬಿಂದಿಗೆಯನ್ನು ತುಂಬತೊಡಗಿದಳು. ಆಗ ಒಂದು ಮಹೋಗ್ರವಾದ ಮೃತ್ಯುರೂಪಿಯಾದ ಮೊಸಳೆಯು ಅವಳೊಡನೆ ಕುಂಭವನ್ನೂ ಕಚ್ಚಿಕೊಂಡು ಹೋಯಿತು–ಎಂಬಂತೆ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು! ವ॥ ಸೂರ್ಯನು ಮುಳುಗಿದ ಕೂಡಲೆ ನನಗೆ ಒಂದು ಹರಿದ ಗೋಣೀ ತಟ್ಟನ್ನು ಮಠದ ಒಂದು ಕಡೆ (?) ಹಾಸಿಕೊಟ್ಟಳು. ನಾನು ಅದರ ಮೇಲೆ ವಿಶ್ರಮಿಸಿಕೊಂಡು ಆ ರಾತ್ರಿಯನ್ನು ಕಳೆದೆನು. ೩೪. ಬ್ರಹ್ಮಶಿವರೂಪಿಯಾದ ಸೂರ್ಯನೆಂಬ ನರಸಿಂಹನು ಉದಯಗಿರಿಯೆಂಬ ಹೊಸಕಂಭವನ್ನು ಸೀಳಿಕೊಂಡು ಉದಯಿಸಿದನು. ಅವನ ಪ್ರಕಾಶವೇ ಕೇಸರಗಳು. ಹರಡಿದ ಕಿರಣಗಳೆಂಬ ಕೈಗಳನ್ನು ಮೇಲಕ್ಕೆತ್ತಿ ಅರುಣೋದಯ ರೂಪದಲ್ಲಿ ಕೋಪಾಗ್ನಿಯ ಕಿಡಿಗಳನ್ನು ಕೆದರಿ, ಕತ್ತಲೆಯೆಂಬ ದೈತ್ಯನ ಶರೀರವನ್ನು ಬಗಿದು, ಆ ಕಮಲವೆಂಬ ಕಮಲೆಯು (ಲಕ್ಷ್ಮಿಯು) ಸಂತೋಷದೊಡನೆ ಉದಯಿಸಿದನು ವ॥ ಹಾಗೆ ಸೂರ್ಯೋದಯುವಾದ ಮೇಲೆ ಉದಯಕಾಲದಲ್ಲಿ ಮಾಡಬೇಕಾದ

ಮುಡಿಯುಂ ಸಿಕ್ಕಿದ ಪುಷ್ಪಗಂಧಮಳಕಾನೀಕಕ್ಕೆ ಕಸ್ತೂರಿ ಸಾ
ಲಿಡುವಂತಿಕ್ಕಿದ ಮಿಕ್ಕ ಕಂಪು ಕುಚದೊಳ್ ಶ್ರೀಖಂಡಮಂ ಚೆಲ್ವಿನಿಂ
ತೊಡೆದಾಮೋದಮನಾರತಂ ನೆಲಸೆ ಭೃಂಗಶ್ರೇಣಿ ತನ್ನೊಳ್ ಸರಂ
ಗುಡುತೆಯ್ತರ್ಪಿನಮಂದು ಪುಷ್ಕರಿಕೆಬಂದಳ್ ಸಂತತೋತ್ಸಾಹದಿಂ ೩೫

ವ॥ ಅಂತು ಕಲ್ಪಸುಂದರಿಗೆ ಶೃಂಗಾರಂಗೆಯ್ದು ಬಂದ ಪುಷ್ಕರಿಕೆಗೆ ಮದ್ಧಾತ್ರಿಯೆನ್ನಂ ತೋಱಿ

ಕಂ॥ ಈತಂ ಮನ್ನೃಪತಿಯಾತನು
ಜಾತಂ ಕಾನನದೊಳಾಂ ಬಿಸುಟ್ಟೆಡೆಯೊಳ್ ನಿ
ರ್ಭೀತಿಯಿನುಜ್ಜೀವಿಸಿ ದೇ
ಶಾಂತರಮುಖನಾಗಿ ಬಂದನಿದುದಲ್ ಪುಣ್ಯಂ ೩೬

ವ॥ ಎಂದು ಪೇಳ್ವುದುಮಾ ಪುಷ್ಕರಿಕೆಯೆನ್ನಂ ನೋಡಿ

ಕಂ॥ ಮಿಕ್ಕಪಸಿವಿಂಚಕೋರಿಗ
ಳಕ್ಕಜದಿಂಪಸರಿಸಿರ್ದ ಬೆಳ್ದಿಂಗಳಂ ನು
ಡಕ್ಕಿಸಲಾಱದುಗುೞ್ದಪು
ವಕ್ಕುಮೆನಲ್ ಸುರಿದಳಬಲೆ ಬಿಸುಗಣ್ಬನಿಯಂ ೩೭

ವ॥ ಅಂತು ಶೋಕಿಸಲವಳಂ ಸಂತೈಸಿಯನಂತರಮಪಹಾರವರ್ಮಂ ಸುಖದೊಳಿರ್ದಪನೆಂಬ ಸಂತೋಷಮನವಳ್ಗೆ ಮಾಡಿ ಬೞಿಕಿಂತೆಂದಂ

ಕರ್ಮಗಳನ್ನು ಮಾಡಿ ಮುಗಿಸಿ ಕುಳಿತೆನು. ಆ ಸಮಯದಲ್ಲಿ ೩೫. ಪುಷ್ಕರಿಕೆಯು ಎಡೆಬಿಡದ ಉತ್ಸಾಹದಿಂದ ಬಂದಳು. ಅವಳ ಮುಡಿಗೆ ಸಿಕ್ಕಿಸಿದ ಹೂವಿನ ಪರಿಮಳ, ಮುಂಗುರುಳುಗಳ ಸಾಲಿಗೆ ಹಚ್ಚಿದ ಕಸ್ತೂರಿಯ ಸುವಾಸನೆ ಸಾಲಾಗಿ ಹಚ್ಚಿದ ಉಳಿದ ಸುಗಂಧದ್ರವ್ಯಗಳ ಕೆಂಪು ಕುಚಗಳಿಗೆ ಅಂದವಾಗಿ ಹಚ್ಚಿದ ಶ್ರೀಗಂಧದ ಆಮೋದ, ಇವುಗಳಿಂದ ಆಕರ್ಷಿಸಲ್ಪಟ್ಟು ದುಂಬಿಗಳ ಸಾಲು ಇಂಪಾಗಿ ಧ್ವನಿ ಮಾಡುತ್ತಾ ಬರುತ್ತಿತ್ತು. ವ॥ ಹಾಗೆ ಕಲ್ಪಸುಂದರಿಗೆ ಅಲಂಕಾರವನ್ನು ಮಾಡಿ ಬಂದ ಪುಷ್ಕರಿಕೆಗೆ ನನ್ನ ದಾದಿಯು ನನ್ನನ್ನು ತೋರಿಸಿ– ೩೬. ಇವನು ನಮ್ಮ ರಾಜನ ಮಗನು. ಕಾಡಿನಲ್ಲಿ ನಾನು ತ್ಯಜಿಸಿದ ಸ್ಥಳದಲ್ಲಿಯೇ ಬದುಕಿ ನಿರ್ಭಯನಾಗಿ ಬೇರೆ ಬೇರೆ ದೇಶಗಳನ್ನು ತಿರುಗುತ್ತಾ ಇಲ್ಲಿಗೆ ಬಂದಿದ್ದಾನೆ. ಇದು ನಮ್ಮ ಪುಣ್ಯ" ವ॥ ಎಂದು ಹೇಳಲು ಆ ಪುಷ್ಕರಿಕೆಯು ನನ್ನನ್ನು ನೋಡಿ – ೩೭. ಹೆಚ್ಚಾದ ಹಸಿವಿನಿಂದ ಚಕೋರಿಗಳು ಆಶ್ಚರ್ಯಕರವಾಗಿ ಹರಡಿದ್ದ ಬೆಳದಿಂಗಳನ್ನು ಕುಡಿದು ಅರಗಿಸಿಕೊಳ್ಳಲಾರದೆ ಉಗುಳುತ್ತಿವೆಯೋ ಎಂಬಂತೆ ಆ ಅಬಲೆಯು ಬಿಸಿಯಾದ ಕಂಬನಿಯನ್ನು ಸುರಿಸಿದಳು. ವ॥ ಹಾಗೆ ಅಳುತ್ತಿದ್ದ ಅವಳನ್ನು ಸಮಾಧಾನಪಡಿಸಿದೆನು. ಅನಂತರ 'ಅಪಹಾರವರ್ಮನು ಸುಖವಾಗಿದ್ದಾನೆ' ಎಂದು ಹೇಳಿ ಅವಳಿಗೆ ಸಂತೋಷವನ್ನುಂಟುಮಾಡಿದೆನು. ಬಳಿಕ ಹೀಗೆ

ನಿನ್ನೊಡೆಯಂ ಸುರೂಪಿಯೆ ಗುಣಜ್ಞನೆ ಕಾಮಕಳಾವಿಳಾಸ ಸಂ
ಪನ್ನನೆ ಅಂಗಸೌಷ್ಠವಿಯೆ ನೀತಿನಿವಾಸನೆ ವಿಕ್ರಮಪ್ರಭಾ
ವೋನ್ನತ ಬಾಹುಸಾಹಸಿಯೆ ಸಜ್ಜನಸಂಗಿಯೆ ದೇವತಾರ್ಚನಾ
ಸನ್ನನೆ ಪೇಟಿ ಪುಷ್ಕರಿಕೆ ಕೌತುಕಮಪ್ಪಿನೆಗಂ ವಿಳಾಸಿನೀ ೩೮

ಸುರತವಿನೋದದಿಂ ವಿಕಟವರ್ಮ ನೃಪಂಗೆವಿದಗ್ಧೆ ಕಲ್ಪ ಸುಂ
ದರಿಮಿಗೆಕೂರ್ಪಳೇ ನಿನಗೆ ತನ್ನನುತಾಪಮನೇನನಾದೊಡಂ
ಪರಮರಹಸ್ಯದಿಂದುಸಿರ್ವಳೇ ನಿಜಮಂದಿರದೊಳ್ ಸ್ವತಂತ್ರ ಸೌಂ
ದರದೊಳಗಿರ್ಪಳೇ ಪದೆದು ಪೇಟಿನಗಂಬುಜಲೋಲಲೋಚನೇ ೩೯

ವ॥ ಎಂಬುದುಮವಳಿಂತೆಂದಳ್

ಧರೆಗೆ ಕುರೂಪಿ ದುರ್ಗುಣಿಮನೋಭವ ಕೇಳಿನಿಕೃಷ್ಟನಂಗ ದು
ರ್ಧರನತಿ ದುರ್ವಿನೀತನನಿಶಂ ವನಸೈರಿಭಸಾಮ್ಯವಿಕ್ರಮಂ
ನಿರುಪಮದುಷ್ಟಸಂಗಿ ಬಹುಮೂರ್ಖನಬೋಧಿತದುರ್ವಿವೇಕಿ ದು
ಶ್ಚರಿತನದಾವನೀ ವಿಕಟವರ್ಮನವೋಲ್ ಸುಕುಮಾರ ಶೇಖರಾ ೪೦

ಕಂ॥ ವನಜಮುಖಿ ಕಲ್ಪಸುಂದರಿ
ಯನುದಿನಮಾವಿಕಟವರ್ಮನಂ ಕಾಣಲೊಡಂ
ಕಿನಿಸುವಳೇಕೆಂದಱಿಯೆಂ
ತನಗವನೊಳ್ ಮೋಹಮೆಂಬುದಿನಿತಂ ಕಾಣೆಂ ೪೧

ಹೇಳಿದೆನು. ೩೮. "ವಿಲಾಸಿನಿ ಪುಷ್ಕರಿಕೆ ! ಹೇಳು. ನಿನ್ನ ಒಡೆಯನು ಸುಂದರನೆ? ಗುಣಜ್ಞನೆ? ಕಾಮಕಲಾವಿಲಾಸದಲ್ಲಿ ಚದುರನೇ ? ಅವನ ಅವಯವಗಳು ಸುಂದರವಾಗಿವೆಯೆ ? ರಾಜನೀತಿಯನ್ನು ಬಲ್ಲವನೇ ? ವಿಕ್ರಮದ ಪ್ರಭಾವದಿಂದ ಉನ್ನತವಾದ ತೋಳ್ಬಲವುಳ್ಳವನೇ? ಸಜ್ಜನರ ಸಂಗಮಾಡುವವನೇ ? ದೇವತಾರ್ಚನೆಯನ್ನು ಮಾಡುತ್ತಾನೆಯೇ? ೩೯. ಕಮಲಲೋಚನೆ ! ರಸಿಕಳಾದ ಕಲ್ಪಸುಂದರಿಯು ರತಿಕೇಳಿಯಿಂದ ವಿಕಟವರ್ಮನಿಗೆ ಅತಿಶಯವಾದ ಸ್ನೇಹವನ್ನು ತೋರಿಸುತ್ತಿದ್ದಾಳೆಯೇ? ತನ್ನ ಮನಸ್ಸಿನ ಅನುತಾಪವನ್ನು ಏನಾದರೂ ರಹಸ್ಯವಾಗಿ ನಿನಗೆ ಹೇಳುತ್ತಾಳೆಯೇ? ತನ್ನ ಮನೆಯಲ್ಲಿ ಸ್ವತಂತ್ರಳಾಗಿದ್ದಾಳೆಯೇ ? ಆಲೋಚಿಸಿ ಹೇಳು" ವ॥ ಎಂದು ಹೇಳಲು ಪುಷ್ಕರಿಕೆಯು ಹೇಳಿದಳು— ೪೦. ವಿಕಟವರ್ಮನು ಭೂಮಿಯಲ್ಲಿಯೇ ಕುರೂಪಿ. ದುರ್ಗುಣಿ. ರತಿಕೇಳಿಗೆ ಸ್ವಲ್ಪವೂ ಅರ್ಹನಲ್ಲ. ವಿಕಾರವಾದ ಅಂಗಗಳುಳ್ಳವನು. ಒರಟನು. ಅವನ ವಿಕ್ರಮವು ಕಾಡುಕೋಣನಿಗೆ ಸಮನಾದುದು. ಅತಿದುಷ್ಟರ ಸಂಗ ಮಾಡುತ್ತಾನೆ. ಬಹುಮೂರ್ಖನು. ಯಾವ ಉದ್ದೇಶದಿಂದಲೂ ಸರಿಮಾಡಲಾಗದಂಥ ಅವಿವೇಕಿ. ದುರಾಚಾರಿಯು. ಸುಕುಮಾರನೆ! ಈ ವಿಕಟವರ್ಮನ ಹಾಗೆ ದುಷ್ಟರು ಬೇರೆ ಯಾರೂ ಇಲ್ಲ. ೪೧. ಕಮಲಮುಖಿಯಾದ ಕಲ್ಪಸುಂದರಿಯು ದಿನವೂ ಆ ವಿಕಟವರ್ಮನನ್ನು ಕಂಡಕೂಡಲೇ ಕೋಪಿಸುತ್ತಾಳೆ. ಏಕೆ–

ವ॥ ಎಂಬುದುಂ ಮತ್ಪಿತೃಮಾತೃಬಂಧನ ಮೋಕ್ಷಕ್ಕಿದೆಕಾರಣಮೆಂದವಳ್ಗಿಂತೆಂದೆಂ

ಕಂ॥ ಎನ್ನಭಿಮತಮಿದು ನೀಂ ಪೋ
ಗಿನ್ನುಂ ಬೇಟ್ಪನಿತುಕೋಪಮಂ ನೃಪನೊಳ್ ತ
ತ್ಕನ್ನೆಗೆ ಪುಟ್ಟಿಸಿ ಮತ್ತಂ
ನಿನ್ನಱಿವಂತೋರ್ಪುದೆನಗೆ ಕಮಲದಳಾಕ್ಷೀ ೪೨

ವ॥ ಎಂಬುದುಮವಳಂತೆಗೆಯ್ವೆನೆಂದು ಬೀಟ್ಕೊಂಡು ರಾಜಭವನಕ್ಕೆ ಪೋಗಿ ಮಗು
ೞ್ದೆರಡುಮೂಱುದಿನಕ್ಕೆ ಬಂದು ನೀಂಪೇೞ್ದಂತೆ ಕಲ್ಪಸುಂದರಿಯೊಳಿಂತೆಂದೆನೆಂದಳ್

ಕಳ್ಳಿಗೆ ಕಲ್ಪವಲ್ಲಿ ರಸಕುಪ್ಪಿಗೆ ಚಂದನದಣ್ಪು ರೋಗಿಗಿಂ
ಪುಳ್ಳ ಸುಭೋಜನಂ ಕಪಿಗೆ ನಿಸ್ತುಲಮೌಕ್ತಿಕಹಾರಯಷ್ಟಿ ಕಾ
ಲ್ವಳ್ಳಿಗೆ ಪಂಡಿತೋಕ್ತಿಮಿಗೆ ಮೂರ್ಖಕುರೂಪಿ ನೃಪಂಗೆ ಕಾಮಿನೀ
ಸಲ್ಲಲಿತಪ್ರಸಂಗಮೆಸೆದಿರ್ಪುದು ಚಿತ್ರಮಿದಲ್ತೆಧಾತ್ರಿಯೊಳ್ ೪೩

ನಿಸದಮಿಳಾತಳಕ್ಕೆ ಕರಕೌಶಲಮಂಮಿಗೆ ತೋಱಲೆಂದು ಭಾ
ವಿಸಿ ಮೃದುಹಸ್ತದಿಂ ತರುಣಿಯಾಕೃತಿಯಂ ಸಮುದಾಯ ಶೋಭೆಯಂ
ಪೊಸತೆನಿಪಂದದಿಂ ಬರೆದು ಜೀವಮನೋವದೆಕೀವಿ ಪದ್ಮಜಂ
ಬಿಸುಟನದೇಕೆ ಮತ್ತೆ ಪಟಗಾಲದಕೋಟೆಸರೊಳ್ ಜಡಾಶ್ರಯಂ ೪೪

ಎಂದು ತಿಳಿಯದು. ನನಗಂತೂ ಅವನಲ್ಲಿ ಸ್ವಲ್ಪವೂ ಮೋಹವಿಲ್ಲ. ವ॥ ಎಂದು ಹೇಳಿದಳು. ನನ್ನ ತಂದೆ ತಾಯಿಗಳ ಬಿಡುಗಡೆಗೆ ಇದೇ ಸಹಾಯಕವೆಂದು ಯೋಚಿಸಿ ಅವಳಿಗೆ ಹೀಗೆ ಹೇಳಿದೆನು. ೪೨. "ಕಮಲದಳಾಕ್ಷಿಯೇ! ನೀನು ಹೋಗಿ ಆ ಕನ್ನಿಕೆಗೆ ಅವನ ಮೇಲೆ ಮತ್ತಷ್ಟು ಹೆಚ್ಚಾಗಿ ಕೋಪಬರುವಂತೆ ಮಾಡಿ ನಿನ್ನ ಅಭಿಪ್ರಾಯವನ್ನು ನನಗೆ ತಿಳಿಸು-ಇದು ನನ್ನ ಸಲಹೆ"—ವ॥ ಅವಳೂ 'ಹಾಗೆಯೇ ಮಾಡುವೆನೆಂದು' ಹೇಳಿ ಅರಮನೆಗೆ ಹೋದಳು. ಮತ್ತೆ ಎರಡು ಮೂರುದಿನಗಳಾದ ಮೇಲೆ ಬಂದು 'ನೀನು ಹೇಳಿದಂತೆ ಕಲ್ಪ ಸುಂದರಿಗೆ ಹೇಳಿದೆನು.' ಎಂದು ಹೇಳಿದಳು. ೪೩. ಮದ್ಯಕ್ಕೂ ಕಲ್ಪ ವೃಕ್ಷಕ್ಕೂ, ರಸ ತೃಪ್ತಿಗೂ ಗಂಧದಮರದ ಗಂಧಕ್ಕೂ, ರೋಗಿಗೂ ಮೃಷ್ಟಾನ್ನಕ್ಕೂ, ಕಪಿಗೂ ಉತ್ತಮವಾದ ಮುತ್ತಿನ ಹಾರಕ್ಕೂ ಸಣ್ಣ ಹಳ್ಳಿಗೂ ಪಂಡಿತರ ಉಪ ದೇಶಕ್ಕೂ, ಸಂಬಂಧವಾದಂತೆ ಈ ಕಡು ಮೂರ್ಖನೂ ಕುರೂಪಿಯೂ ಆದ ವಿಕಟ ವರ್ಮನಿಗೆ ಕಾಮಿನೀ ಪ್ರಸಂಗವು ಅಸಂಬದ್ಧವಾಗಿದೆ. ಭೂಮಿಯಲ್ಲಿದು ಆಶ್ಚರ್ಯ ವಲ್ಲವೇ ? ೪೪. ಜಡನಾದ ಬ್ರಹ್ಮನು ಭೂಲೋಕಕ್ಕೆ ತನ್ನ ಹಸ್ತ ಕೌಶಲವನ್ನು ತೋರಿಸಬೇಕೆಂದು ಭಾವಿಸಿದನು. ತನ್ನ ಮೃದುವಾದ ಹಸ್ತದಿಂದ ತರುಣಿಯ ಆಕಾರ ವನ್ನು ಸುಂದರವಾಗಿ ಹೊಸ ಬಗೆಯಲ್ಲಿ ಬರೆದನು. ಆದರೆ ಅದರಲ್ಲಿ ಜೀವವನ್ನು ತುಂಬಿ ದಯೆಯಿಲ್ಲದೆ ಮತ್ತೆ ಹಳೆಕಾಲದ ಕೆಸರಿನಲ್ಲಿ ಏಕೆ ಎಸೆದನು ? ಬ್ರಹ್ಮನು ಜಡನೇ!

ವ॥ ಎಂಬುದುಮಾ ಕಲ್ಪಸುಂದರಿಯೆನ್ನ ಮನಮನಱಿದು ತನ್ನನುತಾಪಮಂ ಪೇೞಲೆಂದಿಂತೆಂದಳ್

ಕಂ॥ ವಾರಿಜಮುಖಿಯೆನ್ನಯ ಸಂ
ಸಾರಂ ಮರ್ಕಟನಕೆಯ್ಯ ಪೂಮಾಲೆಯ ವಿ
ಸ್ತಾರಮೆನಲ್ಕಾಯ್ತೆನುತುಂ
ಭೋರೆನೆ ಬಿಸುಸುಯ್ದು ತನ್ನ ಪತಿಯಂ ಬಯ್ದಳ್ ೪೫

ವ॥ ಅಂತು ಪತಿಯಂ ಬಯ್ವುದುಮಾನಿಂತೆಂದೆಂ

ಕಂ॥ ಕಮಳಾಯತಮುಖಿ ನೀಂ ಪೊರೆ
ದ ಮಲ್ಲಿಕಾಲತೆಯ ಪೂಗಳಂ ನಿನ್ನಧಿಪಂ
ದಮಯಂತಿಗೆ ಮುಡಿಸಿದ ನೆ
ನ್ನ ಮುಂದೆ ಕೆಯ್ಮುಟ್ಟೆ ಮೋಹದಿಂದುಪವನದೊಳ್ ೪೬

ವ॥ ಎಂಬುದುಮಾ ಕಲ್ಪಸುಂದರಿ ಕಡುಮುಳಿದು

ಕಂ॥ ಈ ವಿದ್ರೂಪಿಯ ಸಂಗಮ
ನಾವದಿನಂ ಬಿಟ್ಟು ಸುಖದೊಳಾನಿರ್ಪೆನೆಲೇ
ಭಾವಕಿಪೇೞೆಂದಾಕೆಮ
ಹಾವಸ್ಥೆಯನೆಯ್ದೆ ಪಂತಿರೆಸಗಿದೆನಾಗಳ್ ೪೭

ವ॥ ಎಂದು ಪುಷ್ಕರಿಕೆ ಬಂದು ಪೇೞಲಾಂ ಮತ್ಕಾರ್ಯ ಸಿದ್ಧಿಯಾಯ್ತೆಂದು ಬೞಿಯಂ

ಸರಿ !" ವ॥ ಎಂದು ಹೇಳಿದೆನು. ಅದನ್ನು ಕೇಳಿ ಕಲ್ಪಸುಂದರಿಯು ನನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ತನ್ನ ದುಃಖವನ್ನು ಹೀಗೆ ಹೇಳಿದಳು. ೪೫. 'ಕಮಲಮುಖಿ ! ನನ್ನ ಸಂಸಾರವು ಕಪಿಯ ಕೈಗಿತ್ತ ಹೂಮಾಲೆಯಂತಾಯ್ತು' ಎಂದು ಹೇಳಿ ಬಿಸಿಯಾಗಿ ನಿಟ್ಟುಸುರೆಳೆದು ತನ್ನ ಗಂಡನನ್ನು ಬಯ್ದಳು. ವ॥ ಹಾಗೆ ಗಂಡನನ್ನು ಬಯ್ಯಲು ನಾನು ಹೀಗೆ ಹೇಳಿದೆನು-೪೬. "ಸರೋಜ ಮುಖಿ ! ನೀನು ಬೆಳೆಯಿಸಿದ ಮಲ್ಲಿಗೆ ಬಳ್ಳಿಯ ಹೂಗಳನ್ನು ನಿನ್ನ ಗಂಡನು ಉಪವನದಲ್ಲಿ ನನ್ನ ಮುಂದೆಯೇ ಪ್ರೀತಿಯಿಂದ ದಮಯಂತಿಗೆ ತನ್ನ ಕೈಯಿಂದಲೇ ಮುಡಿಸಿದನು. ವ॥ ಎಂದು ಹೇಳಿದೆನು. ಅದನ್ನು ಕೇಳಿ ಆ ಕಲ್ಪಸುಂದರಿಯು ತುಂಬ ಕೋಪಿಸಿಕೊಂಡು ೪೭. 'ಈ ಕುರೂಪಿಯ ಸಂಗವನ್ನು ತೊರೆದು ನಾನೆಂದು ಸುಖದಿಂದಿರುವೆನೋ ಪ್ರೀತಿಯ ಗೆಳತಿ ! ಹೇಳು' ಎಂದು ಹೇಳಿದಳು. ಹೀಗೆ ನಾನು ಅವಳು ಅತಿ ಕಠಿಣಾವಸ್ಥೆಗೆ ಬರುವಂತೆ ಮಾಡಿದ್ದೇನೆ" ಎಂದು ಪುಷ್ಕರಿಕೆ ಹೇಳಿದಳು. ವ॥ ಅವಳ ಮಾತನ್ನು ಕೇಳಿ ನನ್ನ ಕಾರ್ಯವು ಸಿದ್ಧಿಸಿತೆಂದು

ಅವಳುನ್ಮಾದಿನಿಯಪ್ಪವೋಲ್ ನೃಪವಮದೀಯಾಕಾರಮಂ ಪುಷ್ಪ ಸಂ
ಭವಮಂ (?) ದರ್ಶನಮಾತ್ರ ಮೋಹನತೆಯಂ ಸೀಮಂತಿನೀ ಚಿತ್ತ ವ
ಶ್ಯವನೊಂದುಜ್ಜ್ವಲ ನವ್ಯದಿವ್ಯಪಟದೊಳ್ ಸರ್ವಾಂಗ ಸೌಂದರ್ಯದೊ
ಪ್ಪವನಾಂ ಚಿತ್ರಮೆನಲ್ಕೆ ಕೂರ್ತುಬರೆದೆಂ ಷಡ್ವರ್ಣಸಂಪೂರ್ಣದಿಂ ೪೮

ವ॥ ಅದೆಂತೆನೆ

ನಗೆಮೊಗಮಂ ಸಮುನ್ನತ ಭುಜಂಗಳನಬ್ಜ ಕರಂಗಳಂ ನೆಗ
ಟ್ದಗಲ್ದುರಮಂ ಮೃಗಾಧಿಪಕೃಶೋದರಮಂ ದೃಢಪೀವರೋರುಜಂ
ಘೆಗಳನತೀವ ಕೋಮಳಪದದ್ವಯಮಂ ಸಮುದಾಯ ಶೋಭೆಯಂ
ಸೊಗಸೆಸೆವಂತಿರೊಲ್ದು ಬರೆದೆಂ ಕಡುಕೂರ್ತುಮದೀಯ ಮೂರ್ತಿಯಂ ೪೯

ವ॥ ಅಂತು ಬರೆದ ಚಿತ್ರಪಟಮಂ ಪುಷ್ಕರಿಕೆಯ ಕೆಯ್ಯೊಳ್ ಕಲ್ಪಸುಂದರಿಗೆ ಕಳಿಪಳವಳಾಪಟಮಂ ತೋಱಿ ಮಱುದಿನಂ ಮಗುಟ್ದು ಬಂದೆನ್ನೊಳಿಂತೆಂದಳ್

ಆ ಹಿಮಬಿಂಬರಶ್ಮಿಮುಖಿಯೊರ್ಬಳೆಕೂರ್ತು ವಿನೋದದಿಂ ಲತಾ
ಗೇಹದೊಳಿರ್ದೊಡೊಂದಿತು ರಹಸ್ಯದ ಪೊಟ್ತೆನುತೆಯ್ದಲಂತವಳ್
ಮೋಹದೊಳಂತಿರಲ್ಕೆ ಕರೆಯಲ್ ಪದೆದಾಂಬಟ್ಕಿತ್ತನೊಲ್ದು ಸಂ
ಮೋಹನಪಾತ್ರಮಂ ಸ್ಮರತನುತ್ರಮನಾಕೆಗೆ ನಿನ್ನ ಚಿತ್ರಮಂ ೫೦

ಬಗೆದೆನು. ಬಳಿಕ ೪೮. ರಾಜನೆ ! ಅವಳಿಗೆ ಹುಚ್ಚು ಹಿಡಿಸುವಂತೆ ಆಶ್ಚರ್ಯಕರವಾದ ರೀತಿಯಲ್ಲಿ ನನ್ನ ಸರ್ವಾಂಗ ಸೌಂದರ್ಯವನ್ನೂ ಆರು ಬಣ್ಣಗಳನ್ನುಪಯೋಗಿಸಿ ಬರೆದೆನು ಆಕಾರವನ್ನು ಹೂವಿನಿಂದ ಹುಟ್ಟಿದಂತೆ, ನೋಡಿದರೇ ಮೋಹವನ್ನುಂಟುಮಾಡುವಂತೆ, ಸ್ತ್ರೀಯರ ಮನಸ್ಸನ್ನು ವಶಪಡಿಸಿಕೊಳ್ಳುವಂತೆ, ಉಜ್ಜ್ವಲವಾದ ಸೊಗಸಾದ ಬಟ್ಟೆಯ ಮೇಲೆ ಬರೆದೆನು. ವ॥ ಅದು ಹೇಗೆಂದರೆ—೪೯. ನಗೆಮೊಗ, ಎತ್ತರವಾದ ಭುಜಗಳು, ಕಮಲದಂತಹ ಕೈಗಳು, ವಿಸ್ತಾರವಾದ ಎದೆ, ಬಲವಾದ ದಪ್ಪವಾದ ತೊಡೆಗಳು ಮತ್ತು ಮೊಳಕಾಲುಗಳು, ಅತಿ ಕೋಮಲವಾದ ಪಾದಗಳು, ಸಿಂಹದಂತೆ ತೆಳ್ಳಗಿರುವ ಹೊಟ್ಟೆ, ಹೀಗೆ ಒಟ್ಟು ಶರೀರದ ಶೋಭೆಯು ಸೊಗಸಾಗಿ ಪ್ರಕಾಶಿಸುವಂತೆ ನನ್ನ ಆಕಾರವನ್ನು ಆಸಕ್ತಿಯಿಟ್ಟು ಬರೆದೆನು. ವ॥ ಆ ಚಿತ್ರಪಟವನ್ನು ಪುಷ್ಕರಿಕೆಯ ಮೂಲಕ ಕಲ್ಪಸುಂದರಿಗೆ ಕಳುಹಿಸಿದೆನು. ಅವಳು ಅದನ್ನು ಅವಳಿಗೆ ತೋರಿಸಿ ಮರುದಿನ ಮತ್ತೆ ಬಂದು ಹೇಳಿದಳು. ೫೦. "ಆ ಚಂದ್ರಮುಖಿ ಕಲ್ಪಸುಂದರಿಯು ಒಬ್ಬಳೆ ವಿನೋದಕ್ಕಾಗಿ ಲತಾಗೃಹದಲ್ಲಿದ್ದಳು. ಇದು ರಹಸ್ಯವಾದ ಸಮಯವೆಂದು ನಾನು ಅಲ್ಲಿಗೆ ಹೋದೆನು. ಅವಳೂ ಪ್ರೀತಿಯಿಂದ ನನ್ನನ್ನು ಕರೆದಳು. ಆಗ ನಾನು ಮೋಹವನ್ನುಂಟುಮಾಡುವ ಮನ್ಮಥನ ಕವಚದಂತಿದ್ದ ನಿನ್ನ ಚಿತ್ರವನ್ನು

ವ॥ ಅಂತು ಕುಡಲೊಡಂ

ಗಳಿಲನೆಕಾಂತೆ ಚಿತ್ರಪಟದೊಪ್ಪವನೀಕ್ಷಿಸಿಯಾಗಳೊರ್ವೊದಲ್
ಪುಳಕಿತೆಯಾಗಿ ಕಂಪಿಸಿ ಬೆವರ್ತಧರಂನಸುಗೆತ್ತೆ ಲಜ್ಜೆ ಕೈ
ಗಳೆದು ಕಳಾಪವೊಯ್ಯನೆ ಸಡಿಲ್ವಕರಂ ಮರವಟ್ಟು ಚಿತ್ತದೊಳ್
ತಳವೆಳಗಾಗಿ ಮೆಯ್ಮರೆದಳಿಂತುಟೆನಲ್ ನಿಜಚಿತ್ರವಿಭ್ರಮಂ ೫೧

ವ॥ ಅಂತು ನೋಡಿ

ಇದು ಶೃಂಗಾರದ ಸೀಮೆಯೋ ಇದು ಮನೋಜಾತಂಗೆ ಮೇಲಾಗಿಯೊ
ಡ್ಡಿದ ಮಾಱೊಂಕನೋ ಮೇಣಿದಂಗನೆಯರೊಳ್ ಕಾಮಾಗ್ನಿಯುಂ ವರ್ಧಿಸ
ಲ್ಕುದಯಂಗೆಯ್ದ ವಸಂತಮೂರ್ತಿಯೊ ದಿಟಂ ಪೇಟೆಂಬಿನಂ ಕೂರ್ತುನೋ
ಡಿದಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿಬೀಟ್ವನ್ನೆಗಂ ೫೨

ವ॥ ಅಂತೆವೆಯಿಕ್ಕದೆ ನೋಡುತ್ತಿಂತೆಂದಳ್

ತೊಳಗುವ ತೋರ ಕಣ್ಮಲರ್ಗಳುನ್ನತ ಪೂರ್ಣ ವಿಶಾಲವಕ್ಷಮು
ಜ್ಜ್ವಳತರ ದೀರ್ಘಬಾಹು ಹರಿಮಧ್ಯಮನೂನ ಲಸತ್ಕಟೀತಟಂ
ತಿಳಿಪೊಡಿದಲ್ತೆ ಸತ್ಪುರುಷ ಲಕ್ಷಣಮೆಂಬ ಕವಿ ಪ್ರಸಿದ್ಧಿ ಕೀ
ಟ್ಕೆಲೆಯೆನಿಸಿತ್ತೆನುತ್ತಬಲೆ ಚುಂಬಿಸಿದಳ್ ನಿಜಮೂರ್ತಿ ಚಿತ್ರಮಂ ೫೩

ಪ್ರೀತಿಯಿಂದ ಕೊಟ್ಟೆನು. ವ।। ಹಾಗೆ ಕೊಡಲು—೫೧. ಇದ್ದಕ್ಕಿದ್ದ ಹಾಗೆ ಆ ಕಾಂತೆಯು ಚಿತ್ರಪಟವನ್ನು ನೋಡಿದ ಕೂಡಲೆ ಮೊದಲು ರೋಮಾಂಚಿತಳಾದಳು. ನಡುಗಿದಳು, ಬೆವರಿದಳು, ತುಟಿಯುದುರಿತು. ನಾಚಿಕೆ ಕಳೆದುಹೋಯಿತು. ಒಡ್ಯಾಣವು ಸಡಿಲವಾಯಿತು. ಮೈಮರವುಂಟಾಯಿತು. ಮನಸ್ಸಿನಲ್ಲಿ ತಳಮಳವುಂಟಾಯಿತು. ನಿನ್ನ ಚಿತ್ರದಿಂದ ಉಂಟಾದ ಚಿತ್ತಭ್ರಮಣೆಯು ಇಂಥದು ! ವ।। ಹಾಗೆ ನೋಡಿ—೫೨. ಇದು ಶೃಂಗಾರದ ಕೊನೆಯು ಎಲ್ಲೆಯೋ ? ಇದು ಮನ್ಮಥನಿಗೆ ಎದುರಾಗಿ ಒಡ್ಡಿದ ಶ್ರೇಷ್ಠವಾದ ಎದುರಾಳಿಯೋ ? ಅಥವಾ ಅಂಗನೆಯರಲ್ಲಿ ಕಾಮಾಗ್ನಿಯನ್ನು ಹೆಚ್ಚಿಸಲು ಹುಟ್ಟಿದ ವಸಂತನೋ ? ನಿಜವಾಗಿ ಹೇಳು ಎಂಬಂತೆ ಕಮಲಮುಖಿಯು ಸ್ನೇಹದಿಂದ ಕಣ್ಣಾಲಿಗಳನ್ನು ನೆಟ್ಟು ಆಯಾಸವಾಗುವವರೆಗೂ ನಿನ್ನ ಚಿತ್ರಪಟವನ್ನು ನೋಡಿದಳು. ವ॥ ಹಾಗೆ ರೆಪ್ಪೆ ಹೊಡೆಯದೆ ನೋಡುತ್ತಾ ಹೇಳಿದಳು.—೫೩. ಹೊಳೆಯುವ ವಿಶಾಲವಾದ ಕಣ್ಣುಗಳು, ಉನ್ನತವಾದ ವಿಶಾಲವಾದ ಎದೆ, ಉಜ್ಜ್ವಲವಾದ ನೀಳವಾದ ತೋಳುಗಳು, ಸಿಂಹದ ಸೊಂಟ, ಪುಷ್ಟವಾದ ನಿತಂಬ ಪ್ರದೇಶ, ವಿಚಾರಿಸಿದರೆ 'ಇವೇ ಸತ್ಪುರುಷನ ಲಕ್ಷಣಗಳು ಎಂದು ಹೇಳುವ ಕವಿಗಳ ವರ್ಣನೆಯನ್ನು ಮೀರಿಸಿದೆ ಎಂದು ಹೇಳುತ್ತಾ ನಿನ್ನ ಚಿತ್ರವನ್ನು ಚುಂಬಿಸಿದಳು.

ವ॥ ಅಂತು ಚುಂಬಿಸಿ

ಮದನಂ ತನ್ನಧಿದೈವದಾಕೃತಿಯನೊಲ್ದಾರಾಧಿಸಲ್ಕೆಂದು ಚಿ
ತ್ರದ ರೂಪಂ ಬರೆದಂಜೆ ಮತ್ತೆ ರತಿ ತತ್ಸೌಂದರ್ಯಮಂ ಕಂಡು ಮೋ
ಹದಗುರ್ಬಿಂದಸುವೊಯ್ವಳಾದೊಡದಱಿಂದಾಂ ರೂಪುಗೆಟ್ಟಪ್ಪೆನೆಂ
ದಿದನುರ್ವೀತಳದೊಳ್ ಪ್ರತಿಷ್ಠಿಸಿದನೆಂದಾ ಕಾಂತೆ ಮುಂಡಾಡಿದಳ್ ೫೪

ವ॥ ಅಂತು ಮುಂಡಾಡಿಯೆನ್ನ ಮುಖಮಂ ನೋಡಿಯಿಂತೆಂದಳ್

ಕಂ॥ ಈ ಕಾಂತ ಮೂರ್ತಿಮಾನವ
ಲೋಕದೊಳಿಲ್ಲಿಂತು ನಿನಗೆ ಸಾರ್ದತ್ತಬಲಾ
ನೀಕ ತನು ವಾಕ್ಯಚಿತ್ತವ
ಶೀಕರಣಮೆನಿಪ್ಪ ಚಿತ್ರಮೆಲೆ ಪುಷ್ಕರಿಕೇ ೫೫

ವ॥ ಎಂಬುದುಮಾನಿಂತೆಂದೆಂ

ದೇವಿಯರಿಂತಪೇಕ್ಷಿಸುವಿರಾದೊಡೆ ಚಿತ್ರದ ರೂಪಿನಾತನಂ
ಭಾವಕನಂ ಕಳಾನಿಳಯನಂ ಪದೆದಿಲ್ಲಿಗೆ ತಂದು ತೋರ್ಪೆನೆಂ
ದಾ ವಧುವಿಂಗೆ ಪೇೞಲದು ಪೋಗದಪೂರ್ವಮದಲ್ಲದಿರ್ದೊಡಿಂ
ತೀ ವಪು ತೋರ್ಪುದಾದೊಡತಿ ಭಾಗ್ಯಮೆನುತ್ತವಳೆನ್ನನಪ್ಪಿದಳ್ ೫೬

ದ್ವಿಪನಿಭಯಾನೆ ಪುಷ್ಕರಿಕೆ ತತ್ಸುಭಗಂ ಸ್ಮರ ಮೂರ್ತಿ ಸೂರ್ಯನಿಂ
ದಪರಗಿರೀಂದ್ರ ಮಸ್ತಕಮನೆಯ್ದಲೊಡಂ ಕಡುಮರ್ಬಿನೊಳ್ ತಳಿ
ರ್ತುಪವನಮಧ್ಯದೊಳ್ ಮೆಱೆವ ಪುಷ್ಪಲತಾಭವನಕ್ಕೆ ಬಂದು ಸ
ತ್ಕೃಪೆಯನಲಂಪಿನಿಂದೆನಗೆ ತೋರ್ಪುದು ಬೇಟ್ಪಿನಿದಂ ತಳೋದರೀ ೫೭

ವ॥ ಹಾಗೆ ಚುಂಬಿಸಿ—೫೪. ಮದನನು ತನ್ನ ಅಧಿದೇವತೆಯ ಆಕೃತಿಯನ್ನು ಪೂಜಿಸಲು ಚಿತ್ರದಲ್ಲಿ ಬರೆದು (ತನಗಿಂತ ಸುಂದರವಾಗಿದೆಯೆಂದು). ಅಂಜಿದನು ಮತ್ತೆ ರತಿಯು ಆ ಚಿತ್ರದ ಸೌಂದರ್ಯವನ್ನು ನೋಡಿ ಮೋಹಗೊಂಡು ಹೆದರಿ ಮೂರ್ಛೆಹೋಗಿಬಿಟ್ಟಳು. ಅದರಿಂದ ತನ್ನ ರೂಪ ಕೆಡುವುದೆಂದು ಅದನ್ನು ಈ ಭೂಮಿಯಲ್ಲಿ ಪ್ರತಿಷ್ಠಿಸಿದನು. ಎಂದು ಯೋಚಿಸಿ ಆ ಕಲ್ಪಸುಂದರಿಯು ಅದನ್ನು ಮತ್ತೆ ಮತ್ತೆ ಚುಂಬಿಸಿದಳು. ವ॥ ಹಾಗೆ ಚುಂಬಿಸಿ ನನ್ನ ಮುಖವನ್ನು ನೋಡಿ ಹೇಳಿದಳು—೫೫. "ಪುಷ್ಕರಿಕೆ ! ಈ ಸುಂದರವಾದ ಆಕಾರವು ಈ ಮನುಷ್ಯ ಲೋಕದಲ್ಲಿ ಇಲ್ಲ. ನಿನಗೆ ಹೇಗೆ ಸಿಕ್ಕಿತು ? ಈ ಚಿತ್ರವು ಅಬಲೆಯರ ಶರೀರವನ್ನೂ ಮಾತನ್ನೂ ಮನಸ್ಸನ್ನೂ ವಶಪಡಿಸಿಕೊಳ್ಳಬಲ್ಲದು." ವ॥ ಹೀಗೆನ್ನಲು ನಾನು ಹೇಳಿದನು—೫೬. 'ದೇವಿಯರು ಆಸೆಪಡುವುದಾದರೆ ಈ ಚಿತ್ರದ ರೂಪವುಳ್ಳವನನ್ನು ಇಲ್ಲಿಗೆ ಕರೆತಂದು ತೋರಿಸುವೆನು. ಅವನು ಭಾವುಕನು, ಕಲೆಗಳಿಗೆ ಆಶ್ರಯನು.' ಎಂದು ನಾನವಳಿಗೆ ಹೇಳಿದೆನು. 'ಹಾಗಾದರೆ ಹಾಗಾದರೆ ಅದು ಪೂರ್ವ ಪುಣ್ಯ. ಈ ರೂಪವನ್ನು ತೋರಿಸುವುದಾದರೆ ಅದು ನನ್ನ ಭಾಗ್ಯ' ಎಂದು ಹೇಳಿ ಕಲ್ಪ ಸುಂದರಿಯು ನನ್ನನ್ನು ತಬ್ಬಿಕೊಂಡಳು. ೫೭. "ಗಜಗಮನೆಯಾದ ಪುಷ್ಕರಿಕೆ ! ಇಂದು

ವ॥ ಎಂದೆನ್ನಂ ಕಳಿಪಿದಳೆಂದು ಪುಷ್ಕರಿಕೆ ಪೇೞಲೊಡಂ ಮನದೊಳ್ ಗುಡಿಗಟ್ಟಿ ಕಲ್ಪ ಸುಂದರಿ ಪೇೞ್ದ ಸಂಕೇತಸ್ಥಾನಕ್ಕೆ ಪೋಪೆನೆಂಬಾಗಳ್

ಕಂ॥ ಕಮಳಮುಖಿಯಂಗಸಂಗ
ಕ್ರಮಮಂ ಕಣ್ಣಾಱೆ ನೋಡಲಾಱದ ತೆಱದಿಂ
ಕಮಳ ಸಹಾಯಂ ಪದೆದ
ಸ್ತಮಾನಗಿರಿಗೆಯ್ದಿದಂ ನೃಪಾಲಮನೋಜಾ ೫೮

ವ॥ ಅಂತಸ್ತಮಾನವಾಗಲೊಡಂ

ಪಸಿದ ಚಕೋರಿಗಳ್ ದ್ವಿಜಶರೀರಿಗಳೆಂದೆಱೆಯಲ್ಕೆ ಸಂಜೆ ಭಾ
ವಿಸಿ ಪೊಸಜೊನ್ನಮಂ ನಿಶೆಯ ಕರ್ಪಿನಿತಿಲ್ಲದ ಮಾಱ್ಕೆಯಿಂದೆ ಶೋ
ಧಿಸಲದು ಶುದ್ಧಮಾಗೆ ಬೞಿಯಂ ಸಲೆ ಸಿಕ್ಕಿದ ಧಾರೆವಟ್ಟಲೊಳ್
ಸಸಿನಿರಿಸಿಟ್ಟವೋಲ್ ಮೃದುಕಳಂಕದಿನೊಪ್ಪಿದುದಿಂದು ಮಂಡಲಂ ೫೯

ವ॥ ಅಂತು ಚಂದ್ರೋದಯಮಾಗಲೊಡಂ

ನೆಲೆನೋಡಲ್ ಸುರಗಂಗೆ ಕೋಟಿಮುಖದಿಂದೇೞ್ತಂದಳಲ್ತಲ್ತು ನಿ
ರ್ಮಳದುಗ್ಧಾಂಬುಧಿ ಮೇರೆದಪ್ಪಿ ಕವಿದತ್ತಲ್ತಲ್ತು ಗೌರೀಶನು
ಜ್ಜ್ವಲ ಸತ್ಪಂಚಕ ಮೂರ್ತಿಧಾರಿಣಿಯನಿಂದಪ್ಪಿರ್ದುದಲ್ತಲ್ತು ಕೇ
ಳಿಯೊಳ್ ಕೌತುಕಮಪ್ಪಿನಂ ಪಸರಿಸಿತ್ತಾನಂದಚಂದ್ರೋದಯಂ ೬೦

ಸೂರ್ಯನು ಮುಳುಗಿದ ಮೇಲೆ ಕಗ್ಗತ್ತಲೆಯಲ್ಲಿ ಉದ್ಯಾನದ ನಡುವೆ ಇರುವ ಪುಷ್ಪ ಲತಾ ಭವನಕ್ಕೆ ಬಂದು ಆ ಮನ್ಮಥಾಕಾರದ ಸುಂದರನು ನನ್ನ ಮೇಲೆ ಕೃಪೆಯನ್ನು ತೋರಲಿ ತಳೋದರಿ ! ನಿನ್ನನ್ನು ನಾನು ಬೇಡಿಕೊಳ್ಳುತ್ತೇನೆ.'—ವ॥ ಎಂದು ಹೇಳಿ ನನ್ನನ್ನು ಕಳುಹಿಸಿದ್ದಾಳೆ" ಎಂದು ಪುಷ್ಕರಿಕೆಯು ಹೇಳಿದಳು. ಅದನ್ನು ಕೇಳಿ ನಾನು ಮನಸ್ಸಿನಲ್ಲಿ ಹರ್ಷದ ಗೋಪುರ ಕಟ್ಟಿ ಕಲ್ಪ ಸುಂದರಿಯು ಹೇಳಿದ ಸಂಕೇತ ಸ್ಥಾನಕ್ಕೆ ಹೋಗಲು ಸಿದ್ಧನಾದೆನು. ಆಗ ೫೮. ನೃಪಾಲ ಮನ್ಮಥನೇ ! ಕಮಲ ಮುಖಿಯು ಅಂಗಸಂಗ ಕ್ರಮವನ್ನು ಕಂಗಳು ತೃಪ್ತಿಯಾಗುವಂತೆ ನೋಡಲು ಆಗದ ರೀತಿಯಲ್ಲಿ ಸೂರ್ಯನು ಅಸ್ತಗಿರಿಯನ್ನು ಸೇರಿದನು. ವ॥ ಹಾಗೆ ಸೂರ್ಯನು ಮುಳುಗಲು— ೫೯. ಸುಂದರವಾದ ಕಳಂಕದಿಂದ ಇಂದು ಮಂಡಲವು ಪ್ರಕಾಶಿಸಿತು. ಅದು ಹಸಿದ ಚಕೋರಿಗಳು ದ್ವಿಜರೆಂದು (ಬ್ರಾಹ್ಮಣರು-ಹಕ್ಕಿಗಳು) ೫೯. ಎರೆಯುವುದಕ್ಕಾ ಸಂಜೆ ಯೋಚಿಸಿ ಹೊಸ ಬೆಳದಿಂಗಳನ್ನು ರಾತ್ರಿಯ ಕಪ್ಪು ಸ್ವಲ್ಪವೂ ಇಲ್ಲದಂತೆ ಶೋಧಿಸಿ ಶುದ್ಧಗೊಳಿಸಿ ಬಳಿಕ ಸಿಕ್ಕಿದ ಧಾರೆ ಬಟ್ಟಲಿನಲ್ಲಿ ಸರಿಯಾಗಿ ಕೂಡಿಸಿ ಇಟ್ಟಿರುವಂತೆ ಕಾಣಿಸಿತು. ವ॥ ಹಾಗೆ ಚಂದ್ರೋದಯವಾಗಲು—೬೦. ಸರಿಯಾಗಿ ನೋಡಿದರೆ ದೇವಗಂಗೆಯು ಕೋಟಿ ಕೋಟಿ ಕವಲಾಗಿ ಹರಿದು ಬಂದಿದ್ದಾಳೆ. ಅಲ್ಲ ಅಲ್ಲ. ನಿರ್ಮಲವಾದ ಹಾಲಿನ ಸಮುದ್ರವು ದಡಮೀರಿ ಹರಿದಿದೆ. ಅಲ್ಲ ಅಲ್ಲ. ಶಂಕರನ

ವ॥ ಅಂತು ಬೆಳ್ದಿಂಗಳ್ ಪರ್ಬಲೊಡಂ ಚಂದ್ರಾಸ್ತಮಾನಮಪ್ಪನ್ನೆಗಮಿರ್ದ ನಂತರಂ ಪೋಪೆನೆಂದಿರ್ಪಾಗಳ್

ಪರ ನಾರೀಸಂಗದೋಷಂ ವಿಷಮುಷದ ಮಹಾಬಾಂಧವದ್ರೋಹಮೆಂಬು
ದ್ಧುರಮಪ್ಪೀದುರ್ಯಶಂ ಪೊರ್ದುಗುಮೆನಗದಱಿಂದಲ್ಲದಿನ್ನೊಂದು
ಸ್ಥಿರಮಪ್ಪಂತಾಗದೆಂದಾಂ ಪಲವುಪಮೆಗಳಿಂ ಚಿಂತಿಸುತ್ತಿರ್ಪಿನಂನಿ
ರ್ಭರನಿದ್ರಾಲಸ್ಯಮಾರಾತ್ರಿಯೊಳನುನಯದಿಂ ಮೋಹಿಸಿತ್ತಾಗಳೆನ್ನಂ ೬೧

ವ॥ ಅಂತು ನಿದ್ರೆ ಬರಲೊಡಂ

ಸಿತದೂರ್ವಾಂಕುರ ರಂಜಿತಾಗ್ರಮುಕುಟಂ ನೀಳ್ದೇಕದಂತಂ ಕರಾ
ಗ್ರತಲೋದ್ಧೂತನಹೀಂದ್ರ ಬದ್ಧಪೃಥುಲೋದ್ಯತ್ಕುಕ್ಷಿ ಸಿಂಧೂರಶೋ
ಭಿತ ಕುಂಭಂ ವಿಲಸದ್ಭುಜಂ ಮದಗಜೋದ್ಗಂಡ ಸ್ಥಳಾಶ್ಲಿಷ್ಟರಘುಂ
ಕೃತಭೃಂಗಾವಳಿ ಪೆಂಪುವೆತ್ತಿಭಮುಖಂ ಮೆಯ್ದೋರಿದಂ ಸ್ವಪ್ನದೊಳ್ ೬೨

ವ॥ ಅಂತು ಸ್ವಪ್ನದೊಳ್ ತೋಱಿ ವಿನಾಯಕನಿಂತೆಂದಂ

ಲಲಿತ ತರಂಗಸಂಚಯದಿನುಣ್ಮುವ ಬುದ್ಬುದಕೋಟಿಯಿಂ ಸಮು
ಜ್ಜ್ವಲಶಫರೌಘದಿಂ ಕಮಳಕೈರವ ಸಂತತಿಯಿಂ ನಿರಂತರಂ
ಸಲೆಮೆಱೆದಿರ್ಪದೇವನದಿಯಂ ಮಿಗೆಪೊಕ್ಕು ಕಲಂಕಲಾನವಳ್
ಮುಳಿದು ಮನುಷ್ಯನಾಗೆನುತೆ ಶಾಪಮನಂದೆನಗಿತ್ತಳುಗ್ರದಿಂ ೬೩

ಉಜ್ವಲವಾದವಿಸ್ತಾರವಾದ ಶುಭ್ರಮೂರ್ತಿಯು ಭೂಮಿಯನ್ನು ಅಪ್ಪಿಕೊಂಡಿದೆ. ಅಲ್ಲ ಅಲ್ಲ. ಕೇಳು ಎಂಬಂತೆ ಭೂಮಿಯಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ಆನಂದ ಕರವಾದ ಬೆಳದಿಂಗಳು ಹರಡಿಕೊಂಡಿದ್ದಿತು. ವ॥ ಹಾಗೆ ಬೆಳದಿಂಗಳು ಹರಡಿತು. ಚಂದ್ರನು ಮುಳುಗಿದ ಮೇಲೆ ಹೋಗುವೆನೆಂದು ಯೋಚಿಸಿದೆನು. ೬೧. 'ಇದರಿಂದ ನನಗೆ ಪರನಾರೀ ಸಂಗ ಮಾಡಿದ ಪಾಪ ಬರುವುದು. ಅಲ್ಲದೆ ಬಂಧು ದ್ರೋಹವೆಂಬ ಪಾಪವೂ ಬರುವುದು. ಆ ಕಾರ್ಯವನ್ನು ಮಾಡದಿದ್ದರೆ ಇನ್ನೊಂದು ಕೆಲಸವು ಸಿದ್ಧಿಸದು. ಏನು ಮಾಡಲಿ ?' ಎಂದು ಹಲವು ಉದಾಹರಣೆ ಗಳಿಂದ ಯೋಚಿಸುತ್ತಿರುವಾಗ ಗಾಢ ನಿದ್ರಾವಶನಾದೆನು ವ॥ ಹಾಗೆ ನಿದ್ರಾವಶ ನಾದಾಗ— ೬೨. ಕಿರೀಟದ ತುದಿಯಲ್ಲಿ ಬಿಳುಪಾದ ಗರಿಕೆ ಹುಲ್ಲಿನ ಚಿಗುರು ರಂಜಿಸು ತ್ತಿದೆ. ಉದ್ದವಾದ ಒಂದೇ ದಂತ. ಸೊಂಡಿಲ ತುದಿಯು ಮೇಲೆತ್ತಿದೆ. ದೊಡ್ಡ ಹಾವನ್ನು ತನ್ನ ದೊಡ್ಡ ಹೊಟ್ಟೆಗೆ ಕಟ್ಟಿದ್ದಾನೆ. ಕುಂಭಸ್ಥಳವು ಕುಂಕುಮದಿಂದ ಶೋಭಿಸುತ್ತಿದೆ. ಭುಜಗಳು ಪ್ರಕಾಶಿಸುತ್ತಿವೆ. ಗಂಡ ಸ್ಥಳದಲ್ಲಿ ಹರಿಯುವ ಮದೋದಕಕ್ಕೆ ಅಂಟಿಕೊಂಡು ದುಂಬಿಗಳು ಝೇಂಕರಿಸುತ್ತಿವೆ– ಈ ರೀತಿಯಾಗಿ ವಿನಾಯಕನು ಕನಸಿನಲ್ಲಿ ಕಾಣಿಸಿಕೊಂಡನು. ವ॥ ಹಾಗೆ ಕನಸಿನಲ್ಲಿ ಕಾಣಿಸಿಕೊಂಡು ವಿನಾಯಕನು ಹೇಳಿದನು.— ೬೩. 'ಲಲಿತವಾದ ಅಲೆಗಳ ಸಮೂಹ. ಮೇಲೇಳುವ

ವ॥ ಅಂತು ಗಗನಗಂಗೆ ಶಾಪಮಂ ಕುಡಲಾಂ ಮಗುೞ್ದು

ವಾರುಣ ಸಂಕುಲಕ್ಕುಚಿತಮಪ್ಪುದನಾನೆಸಗಲ್ಕೆ ಗಂಗೆ ನಿ
ಷ್ಕಾರಣಮಿತ್ತೆ ಶಾಪಮನದೇಕೆನಗೆಂದು ಮಗುೞ್ದುವಳ್ಗೆ ನೀಂ
ಧಾರಿಣಿಯೊಳ್ ಮನುಷ್ಯ ಸತಿಯಾಗಿ ಪರರ್ ನೆರೆವಂತು ಪುಟ್ಟಿ ವಿ
ಸ್ತಾರದೊಳಿರ್ಪೆಯೆಂದು ಮುಳಿದಾಂ ಮಿಗೆ ಶಾಪಮನಿತ್ತೆನಾಕ್ಷಣಂ ೬೪

ವ॥ ಅಂತು ಶಾಪಮಂ ಕುಡಲಾ ಗಂಗೆಯಂಜಿ ಇಂತೆಂದಳ್

ಕನ್ನೆಯವಸ್ಥೆಯೊಳ್ ಪುರುಷನೊರ್ಬನೊಳೊಲ್ದು ವಿವಾಹಮಾಗಿ ಮ
ತ್ತೆನ್ನಯ ಶಾಪದಿಂ ಮನುಜನಾಗಿ ಧರಾತಳದಲ್ಲಿ ನೀಂ ಬರಲ್
ನಿನ್ನಯ ಸಂಗದಿಂ ಸುಖದೊಳಿರ್ಪನಿತೊಂದು ವರಪ್ರಸಾದಮಂ
ಪನ್ನಗ ಭೂಷಣಾತ್ಮಭವ ನೀಂ ದಯೆಗೆಯ್ಯನುತಾಕೆ ಬೇಡಿದಳ್ ೬೫

ವ॥ ಅಂತು ಬೇಡಲೊಡಮಂತಾಗಲೆಂದೆಂ ಅದಱಿಂ

ಸುರಗಂಗಾಕೃತಿ ಕಲ್ಪಸುಂದರಿ ನಿಜಂ ಮನ್ಮೂರ್ತಿ ನೀನಾಗಿಯು
ರ್ವರೆಯೊಳ್ ಸಂಭವಿಸಿರ್ದ ಕಾರಣದೊಳೀ ಸ್ತ್ರೀ ಸಂಗದೋಷಂ ನಿರಂ
ತರದಿಂ ಪೊರ್ದದು ನಿನ್ನನೊಲ್ದು ಪಿತೃಮಾತೃಪ್ರಾಣರಕ್ಷಾರ್ಥಮೆ
ನ್ನರುಮಂ ಬಾಧಿಸೆ ಪಾಪಮಿಲ್ಲ ನಿನಗೆಂದಂ ವಾರಣೇಂದ್ರಾನನಂ ೬೬

ಕೋಟಿಗಟ್ಟಲೆ ಗುಳ್ಳೆಗಳು. ಫಳ ಫಳನೆ ಹೊಳೆಯುವ ಮೀನುಗಳ ಗುಂಪು. ಕೆಂಪು ಬಿಳುಪು ಕಮಲಗಳು, ಇವುಗಳಿಂದ ಎಡೆಬಿಡದೆ ಪ್ರಕಾಶಿಸುವ ದೇವಗಂಗೆಯನ್ನು ಪ್ರವೇಶಿಸಿ ಕಲಕಿ ಕೆಸರು ಮಾಡಿದೆನು. ಆಗ ಅವಳು ಕ್ರುದ್ಧಳಾಗಿ 'ಮನುಷ್ಯನಾಗೆಂದು' ನನಗೆ ಉಗ್ರ ಶಾಪವನ್ನು ಕೊಟ್ಟಳು. ವ॥ ಹಾಗೆ ಆಕಾಶ ಗಂಗೆಯು ನನಗೆ ಶಾಪವನ್ನು ಕೊಟ್ಟಳು. ಆಗ ನಾನು ಮತ್ತೆ— ೬೪. "ಗಂಗೆ ! ನಾನು ಆನೆಗಳಿಗೆ ಸಹಜವಾದ ಕಾರ್ಯವನ್ನು ಮಾಡಿದೆನು. ಆದರೆ ನೀನು ಅದನ್ನು ಯೋಚಿಸದೆ ನನಗೆ ಶಾಪವನ್ನೇಕೆ ಕೊಟ್ಟೆ ? ಅದರಿಂದ ನೀನೂ ಭೂಮಿಯಲ್ಲಿ ಮನುಷ್ಯನ ಹೆಂಡತಿಯಾಗಿ ಬೇರೆಯವರು ನಿನ್ನನ್ನು ಕೂಡಲಿ." ಎಂದು ಕ್ರುದ್ಧನಾಗಿ ಗಂಗೆಗೆ ಮರುಶಾಪವನ್ನು ಕೊಟ್ಟೆನು. ವ॥ ನಾನು ಶಾಪವನ್ನು ಕೊಡಲು ಗಂಗೆಯು ಹೆದರಿ ಹೇಳಿದಳು :— ೬೫. ಕನ್ಯಾವಸ್ಥೆಯಲ್ಲಿ ಪುರುಷನೊಬ್ಬನನ್ನು ಮದುವೆಯಾದರೂ ನನ್ನ ಶಾಪದಿಂದ ಭೂಮಿಯಲ್ಲಿ ಮನುಜನಾಗಿ ಹುಟ್ಟಿದ ನಿನ್ನ ಸಂಗದಿಂದ ಸುಖವಾಗಿರುವಂತೆ ವಿನಾಯಕ, ನೀನು ನನಗೆ ವರವನ್ನು ಕೊಟ್ಟು ಅನುಗ್ರಹಿಸು. ವ॥ ಹಾಗೆ ಬೇಡಲು 'ಹಾಗೆಯೇ ಆಗಲಿ' ಎಂದು ಹೇಳಿದೆನು. ಅದರಿಂದ— ೬೬. 'ದೇವಗಂಗೆಯೇ ಕಲ್ಪಸುಂದರಿಯಾಗಿದ್ದಾಳೆ. ನಾನೇ ನಿನ್ನ ಆಕಾರದಿಂದ ಈ ಭೂಮಿಯಲ್ಲಿ ಹುಟ್ಟಿದ್ದೇನೆ. ಅದರಿಂದ ನಿನಗೆ ಸ್ತ್ರೀ ಸಂಗದ ದೋಷವು ಬರುವುದಿಲ್ಲ. ನಿನ್ನನ್ನು ನಂಬಿದ ತಾಯಿ ತಂದೆಗಳನ್ನು ಕಾಪಾಡಲು ಈ

ವ॥ ಆ ವ್ಯತಿಕರದೊಳಾಂ ಕಣ್ದೆರೆಯೆ

ಕಂ॥ ತಾರಾಂಗನಾ ಸ್ವತಂತ್ರೋ
ದಾರ ಮಹತ್ತೇಜಮೆಯ್ದೆ ಪೆರ್ಚಿತ್ತೆನ್ನಾ
ಕಾರದಿನೆಂಬನುಶಯದಿಂ
ಭೋರೆನೆ ಕರಗಿದವೊಲಿಂದು ಕರಗಿದನಾಗಳ್ ೬೭

ವ॥ ಅಂತು ಚಂದ್ರಾಸ್ತಮಾನವಾಗಲೊಡಂ

ಕಂ॥ ಲೋಕಜನಶಫರನೇತ್ರಾ
ನೀಕಮನೊರ್ವೊದಲೆ ಬಂಧಿಸಲ್ ಕಾಲಂ ನಿ
ರ್ವ್ಯಾಕುಲದಿಂ ಮಿಗೆ ಬೀಸಿ
ಟ್ಟ ಕರ್ಪಿನಬಲೆವೊಲೆಯ್ದೆ ಪೆರ್ಚಿತ್ತು ತಮಂ ೬೮

ವ॥ ಅಂತು ಪೆರ್ಚಿದ ಕಟ್ಟಲೆಯೊಳಾಂ ಸಂಕೇತಸ್ಥಾನಕ್ಕೆ ಬರ್ಪಾಗಲ್

ಕಂ॥ ಪುರದಗಟಿ³ಂತ್ತಿನೊಳಾ ಪು
ಷ್ಕರಿಕೆಯ ಮನೆಯಿರ್ದುದಲ್ಲಿ ಪೆರ್ಬಿದಿರೊಂದಂ
ಭರದಿಂ ತೆಗೆದಂಭೋಧಿಗೆ
ಸರಿಯೆನಿಸಿರ್ದಗಳನೊಲ್ದು ನೋಡಿದೆನಾಗಳ್ ೬೯

ಕೆಲಸ ಮಾಡಿದರೆ ನಿನಗೆ ಪಾಪವಿಲ್ಲ." ಎಂದು ವಿನಾಯಕನು ಹೇಳಿದನು. ವ॥ ಈ ಸಂದರ್ಭದಲ್ಲಿ ನಾನು ಕಣ್ಣು ತೆರೆದೆನು :— ೬೭. ತಾರೆಗಳೆಂಬ ಅಂಗನೆಯರ ಸ್ವತಂತ್ರವೂ ಉದಾರವೂ ಆದ ಮಹಾತೇಜಸ್ಸು ನನ್ನಂತೆ ಬೆಳೆದು ಬಿಟ್ಟಿತು ಎಂದು ಪಶ್ಚಾತ್ತಾಪದಿಂದ ಕರಗಿದಂತೆ ಚಂದ್ರನು ಕರಗಿ ಹೋದನು, (ಕೃಷ್ಣಪಕ್ಷವಾದ್ದರಿಂದ ಚಂದ್ರನು ರಾತ್ರಿಯಲ್ಲೇ ಅಸ್ತಂಗತನಾದನು. ನಕ್ಷತ್ರಗಳು ಪ್ರಕಾಶಿಸಿದವು ಎಂದು ಅಭಿಪ್ರಾಯ. –ರಂ) ವ॥ ಹಾಗೆ ಚಂದ್ರನು ಮುಳುಗಲು— ೬೮. ಸುತ್ತ ಕತ್ತಲೆಯು ಹರಡಿತು. ಲೋಕದ ಜನರ ನೇತ್ರಗಳೆಂಬ ಮೀನುಗಳನ್ನು ಏಕ ಕಾಲದಲ್ಲಿ ಹಿಡಿಯಲು ಕಾಲನು ನಂಬಿಕೆಯಿಂದ ಬೀಸಿದ ಕಪ್ಪಾದ ಬಲೆಯೋ ಎಂಬಂತೆ ಅದು ಕಾಣಿಸಿತು. ವ॥ ಹಾಗೆ ಹರಡಿದ ಗಾಢಾಂಧಕಾರದಲ್ಲಿ ಸಂಕೇತ ಸ್ಥಾನಕ್ಕೆ ಬರುತ್ತಿದ್ದೆ. ಆಗ— ೬೯. ಆ ನಗರದ ಕಂದಕದ ಹತ್ತಿರ ಆ ಪುಷ್ಕರಿಕೆಯ ಮನೆಯಿದ್ದಿತು. ಅಲ್ಲಿ ಒಂದು ದೊಡ್ಡ ಬಿದಿರು ಬೊಂಬನ್ನೆತ್ತಿ ಹಿಡಿದುಕೊಂಡು ಸಮುದ್ರದಹಾಗಿದ್ದ

ವ॥ ಅಂತಿರ್ದಗೞಂ ನೋಡಿ

ಕಂ॥ ಪಿರಿಯಗೞೊಳ್ ಬಿದಿರಂ ಪ
ಟ್ಟಿರಿಸಿಯದಂ ದಾಂಟಿ ಮತ್ತಮದಂ ಕೋಂಟೆಗೆ ನಿಂ
ದಿರಿಸಿಯೊಳಬಿಟ್ಟು ನಡೆದೆಂ
ಭರದಿಂ ಪುಷ್ಕರಿಕೆ ಪೇೞ್ದ ಪೊಲಬಿಂಗಾಗಳ್ ೨೦

ವ॥ ಅಂತು ನಡೆವಾಗಳ್ ಮುಂದೆ

ರಸವಂ ಸಾಲಿಡುತಿರ್ಪ ದಾಡಿಮಫಲಂ ಪೆರ್ಚಿರ್ಪ ಚೆಂದೆಂಗು ನು
ಣ್ಪಸುರೇಱಿರ್ದೆಳಗೌಂಗು ಮೇಣ್ ಜಡಿಯೆ ಬಿಣ್ಪಿಂ ಜೋಲ್ವ ಪೊಂಬಾೞೆ ಪೆಂ
ಪೆಸೆವಿಮ್ಮಾವು ಪೊದೞ್ದಮುಟ್ಟಿಗೆಯ ಗೊಂಚಲ್ ನೀಳ್ದ ಜಂಬೂಫಲ
ಪ್ರಸರಂ ತೀವಿರೆ ಪೆಂಪುವೆತ್ತುಪವನಂ ಚೆಲ್ವಾಯ್ತಿಳಾಧೀಶ್ವರಾ ೨೧

ವ॥ ಅಂತಿರ್ದುಪವನಮಂ ಕಂಡು ಪುಷ್ಕರಿಕೆ ಪೇೞ್ದ ಮಾರ್ಗದೊಳೆ

ಅಸುಕೆಯ ಕೆಂದಳಿರ್ದುಱುಗಲಂ ಬಗಿದಾಮ್ರಸಮೂಹವೀಥಿಯಂ
ನುಸುಳ್ದತಿ ವೇಗದಿಂ ಕೃತಕಶೈಲಮನೊಯ್ಯನಡರ್ದು ಪೊಕ್ಕು ಸ
ತ್ಕುಸುಮ ಲತಾಳಿಯೊಳ್ ತೊಡರ್ದು ಮಂದಸಮೀರನ ಮಾೞ್ಕೆಯಿಂ ಲತಾ
ವಸಥಮನೆಯ್ದಿ ನಾಲ್ದೆಸೆಯನೀಕ್ಷಿಸಿದೆಂ ಭುವನಾಧಿನಾಯಕಾ ೨೨

ಅಗಳನ್ನು ನೋಡಿದೆನು. ವ॥ ಹಾಗಿದ್ದ ಕಂದಕವನ್ನು ನೋಡಿ— ೨೦. ಆಳವಾದ ಕಂದಕದಲ್ಲಿ ಬಿದಿರನ್ನು ಬಲವಾಗಿ ಊರಿ ಅದನ್ನು ದಾಟಿದೆನು. ಮತ್ತೆ ಆ ಬಿದಿರನ್ನೇ ಕೋಟೆಗೆ ನಿಲ್ಲಿಸಿ ಹತ್ತಿ ಒಳಕ್ಕೆ ನೆಗೆದೆನು. ಅನಂತರ ವೇಗವಾಗಿ ಪುಷ್ಕರಿಕೆಯು ಹೇಳಿದ್ದ ಸಂಕೇತಸ್ಥಾನಕ್ಕೆ ಹೋದೆನು. ವ॥ ಹಾಗೆ ನಡೆಯುತ್ತಿರುವಾಗ ಮುಂದೆ— ೨೧. ಮಹಾರಾಜನೆ ! ರಸವು ಸಾಲಾಗಿ ಸೋರುತ್ತಿದ್ದ ದಾಳಿಂಬೆಹಣ್ಣು, ಶ್ರೇಷ್ಠವಾದ ಚೆಂದೆಂಗು, ಹಸುರಾದ ಅಡಿಕೆಕಾಯಿ, ಭಾರದಿಂದ ಜೋಲುತ್ತಿರುವ ಚಿನ್ನದ ಬಣ್ಣದ ಬಾಳೆ, ಶ್ರೇಷ್ಠವಾದ ಸಿಹಿಯಾದ ಮಾವು, ಸೊಗಸಾದ ಮುಟ್ಟಿಗೆ(?) ಹಣ್ಣಿನ ಗೊಂಚಲು, ನೀಳವಾದ ನೇರಿಲೆ ಹಣ್ಣು ಇವುಗಳಿಂದ ತುಂಬಿದ ಸುಂದರವಾದ ಉಪವನವು ಕಾಣಿಸಿತು. ವ॥ ಹಾಗಿದ್ದ ಉಪವನವನ್ನು ನೋಡಿ ಪುಷ್ಕರಿಕೆಯು ಹೇಳಿದ್ದ ದಾರಿಯಲ್ಲಿ— ೨೨. ಮಹಾರಾಜನೆ ! ಅಶೋಕದ ಕೆಂದಳಿರ ಗೊಂಚಲುಗಳನ್ನು ಸೀಳಿಕೊಂಡು ಹೋದೆನು. ಮಾವಿನಮರಗಳ ಬೀದಿಯಲ್ಲಿ ಅತಿವೇಗದಿಂದ ನುಸುಳಿದೆನು. ಕೃತಕ ಗಿರಿಯನ್ನು ವೇಗವಾಗಿ ಹತ್ತಿದೆನು. ಅಂದವಾದ ಹೂತುಂಬಿದ ಬಳ್ಳಿಗಳಲ್ಲಿ ತೊಡರಿ ಕೊಂಡೆನು. ಹೀಗೆ ಮಂದ ಮಾರುತದ ಹಾಗೆ ಲತಾಗೃಹವನ್ನು ಸೇರಿ ನಾಲ್ಕು ದಿಕ್ಕು

ವ॥ ಅದು ರಂಭಾಸಂಭೂತಮಾಗಿಯುಂ ಸುರಾಧಿಪನಿವಾಸಮಲ್ತು; ಪನ್ನಾಗಪರಿಪೂರ್ಣಮಾಗಿಯುಂ ವಿಷಧರನಿಳಯಮಲ್ತು ಕೋಮಳಲತಾವೇಷ್ಟಿತಮಾಗಿಯುಂ ವೇಶ್ಯಾವಾಟಮಲ್ತು ಸಕಲ ಸುಮನೋರಂಜಿತಮಾಗಿಯುಂ ಅಮರ್ತ್ಯಭವನಮಲ್ತು ಮಧುಪ್ರಸವಮಾಗಿಯುಂ ಪುರವಿರೋಧಿಯಲ್ತೆನಿಸಿರ್ದ ಉಪವನದೊಳ್ ಕದಂಬ ಕುಸುಮರಾಗದಿಂ ಪಸರಿಸಿಟ್ಟ ನೆಲೆಗಟ್ಟಿನಿಂ ಪಸಿಯಡಕೆಯ ಪೊಸಕಂಭದಿಂ ರಸದಾಳಿಯಸಿಯ ಗಂಧವಟ್ಟಿಗೆಯಿಂ ಕುಳಿರ್ವ ಕುಳಿರ್ವೇರ ಕೇರ್ಗಟ್ಟಿನಿಂ ಅಸುಕೆಯ ಕಿಸುದಳಿರ ಪೊದಕೆಯಿಂ ಪಜ್ಜಳಿಸುವ ಪನ್ನೀರಚಳೆಯದಿಂ ನಿಱಿಗೊಂಡಗಱಪೂವಿನ ಬಾಳ್ವೇಲಿಯಿಂ ಲೀಲೆವಡೆದ ಲತಾಗೃಹಂ ಲತಾಂತ ಶರ ಜನ್ಮಭವನದಂತಿರ್ದುದು ಅಂತುಮಲ್ಲದೆಯುಂ

ಕಂ॥ ಸುರಯಿಯ ಸೇವಂತಿಯ ಪಾ
ದರಿಗಳ ಮಲ್ಲಿಗೆಯ ಸಂಪಗೆಯ ಜಾಜಿಯ ತಾ
ವರೆಯ ಸುರಹೊನ್ನೆಯಲರ್ಗಳ
ಪರಿಮಳದಲರೆಸೆಯುತಿರ್ಪುವಾವುಪವನದೊಳ್ ೭೩

ವ॥ ಅಂತೆಸೆವ ಉಪವನ ಮಧ್ಯದಲ ತಾಭವನಮಂ ನೋಟ್ಪಿನಮಲ್ಲಿ

ಗಳನ್ನೂ ನೋಡಿದೆನು. ವ॥ ಆ ಉಪವನವು ರಂಭೆಯು ಹುಟ್ಟಿದ ಸ್ಥಾನವಾಗಿದ್ದರೂ ಇಂದ್ರನ ಮನೆಯಲ್ಲ. (ಬಾಳೆಯಮರ ಮತ್ತು ರಂಭೆ) ಪುನ್ನಾಗವೃಕ್ಷಗಳಿಂದ ತುಂಬಿದ್ದರೂ ಸರ್ಪಲೋಕವಲ್ಲ. [ಸುರಹೊನ್ನೆಮರ ಮತ್ತು ಹಾವು] ಕೋಮಲ ಲತೆಯಿಂದ ಕೂಡಿದ್ದರೂ ವೇಶ್ಯಾಗೃಹವಲ್ಲ (ಎಳೆಯಬಳ್ಳಿ-ಬಳ್ಳಿಯಂತಿರುವ ವೇಶ್ಯೆಯರು) ಸಕಲ ಸುಮನಸ್ಸುಗಳಿಂದ ರಂಜಿತವಾಗಿದ್ದರೂ ದೇವಲೋಕವಲ್ಲ (ಹೂಗಳು-ದೇವತೆಗಳು). ಮಧುವಿಗೆ ಉತ್ಪತ್ತಿಸ್ಥಾನವಾಗಿದ್ದರೂ ಪುರವಿರೋಧಿಯಲ್ಲ (ಮಕರಂದ-ಮಧುವೆಂಬ ರಾಕ್ಷಸ). ಹೀಗೆ ಪ್ರಸಿದ್ಧವಾದ ಉಪವನದಲ್ಲಿ ಕದಂಬ ಪುಷ್ಪಗಳ ಪರಾಗಗಳನ್ನು ಹರಡಿದ ನೆಲಗಟ್ಟಿನಿಂದಲೂ, ಹಸಿ ಅಡಿಕೆ ಮರಗಳನ್ನು ಕಟ್ಟಿದ ಹೊಸ ಕಂಭದಿಂದಲೂ, ರಸದಾಳಿಕಬ್ಬನ್ನು ಕಟ್ಟಿದ್ದ ಗಂಧವಟ್ಟಿಕೆಯಿಂದಲೂ, ತಣ್ಣಗಿರುವ ತಂಪಾದ ಬಳ್ಳಿಗಳನ್ನು ಹಬ್ಬಿಸಿದ ಗೋಡೆಗಳಿಂದಲೂ, ಅಶೋಕದ ಕೆಂದಳಿರ ಹೊದಿಕೆಯಿಂದಲೂ, ಪ್ರಜ್ವಲಿಸುವ ಪನ್ನೀರನ್ನು ಚುಮುಕಿಸಿರುವುದರಿಂದಲೂ, ಒಂದರಲ್ಲೊಂದು ಹೆಣೆದ ತಾಳೆ ಹೂಮರಗಳ ಬೇಲಿಯಿಂದಲೂ ಸುಂದರವಾದ ಬಳ್ಳಿಮನೆಯು, ಲತೆಗಳುಳ್ಳ ಕುಮಾರಸ್ವಾಮಿಯ ಮನೆಯಂತೆ ಕಾಣಿಸಿತು. ಅಲ್ಲದೆ - ೭೩. ಆ ಉಪವನದಲ್ಲಿ ಸುರಗಿ, ಸೇವಂತಿ, ಪಾದರಿ, ಮಲ್ಲಿಗೆ, ಸಂಪಗೆ, ಜಾಜಿ, ತಾವರೆ, ಸುರಹೊನ್ನೆ ಮೊದಲಾದ (ಹೂಗಳ ಪರಿಮಳವನ್ನುಳ್ಳ ಗಾಳಿಯು ಬೀಸುತ್ತಿತ್ತು) ಪರಿಮಳವುಳ್ಳ ಹೂಗಳು ರಂಜಿಸುತ್ತಿದ್ದುವು. ವ॥ ಹಾಗೆ ಪ್ರಕಾಶಿಸುವ ಉಪವನದ ನಡುವೆ ಇದ್ದ ಲತಾಗೃಹವನ್ನು

ಇರ್ದೆಸೆಯಲ್ಲಿ ಮಾಣಿಕದದೀವಿಗೆ ಕೆಂದಳಿರ್ದೊಂಗಲಲ್ಲಿ ಪಾ
ಸಿರ್ದಮಳ್ವಾಸು ಪೆಂಪೆಸೆವನುಣ್ಪಿನ ತಣ್ಗಳಸಂಗಳಲ್ಲಿ ತಿ
ವಿರ್ದಸುಗಂಧ ಶೈತ್ಯಜಲಮಿರ್ತಲೆಗಿಂಬೆಳತಾಳವೃಂತಮೊ
ಪ್ಪಿರ್ದ ಲತಾಗೃಹಂ ನಯನ ಕೌತುಕಮಂ ಪಡೆದತ್ತಿಳಾಧಿಪಾ ೭೪

ವ॥ ಅಂತು ಕೌತುಕಮಾದ ಲತಾಭವನಮಂ ಪೊಕ್ಕು ಕುಳ್ಳಿರ್ಪನ್ನೆಗಂ

ನೂಪುರಮಂ ಕಟಲ್ಚಿ ನವ ಕಿಂಕಿಣಿ ರಂಜಿತ ಕಾಂಚಿಯಂ ಬಿಸು
ಟ್ಟೋಪನ ನಿದ್ರೆಯುಬ್ಬರವನಾಲಿಸಿಯೊರ್ಬಳೆ ಮರ್ಬಿನೊಳ್ ಬರಲ್
ಚಾಪಲನೇತ್ರಕಾಂತಿ ಕುಡುಮಿಂಚಿನವೋಲ್ ಪೊಳೆಯಲ್ ಸುಗಂಧಶೋ
ಭಾ ಪವನಂ ಮುಸುಂಕಲದಱಿಂದಱಿದೆಂ ಸತಿ ಬರ್ಪಳೆಂಬುದಂ ೭೫

ವ॥ ಅಂತಾನಾ ಕಲ್ಪಸುಂದರಿಯ ಬರವನಱಿದು ಲತಾಭವನದ ಮಾಧವೀಗುಲ್ಮ
ದೊಳ್ ಮೆಯ್ಗರೆದಿರ್ಪುದುಮವಳ್ ಬಂದು ತದ್ಭವನದಲ್ಲೆನ್ನಂ ಕಾಣದೆ

ಎಲೆ ಕುಸುಮಾಸ್ತ್ರನಿರ್ದಯ ನಿರಂತರ ಮುಗ್ಧೆಯನೆನ್ನನಿಂತು ಕೋ
ಟಲೆಗೊಳಿಪಂತಿರಾಂ ನಿನಗೆ ಮಾಡಿದ ಪೊಲ್ಲಮೆಯುಂಟೆ ಧಾರಿಣೀ
ತಿಲಕನನೊಲ್ದು ಚಿತ್ರಪಟದೋಪನನಿಲ್ಲಿಗೆ ತಂದುತೋಱದಿಂ
ತಟಲಿಪೆಯೇಕೆಯೆನ್ನನೆನುತಂಗನೆ ಮುಂಗಿಡುತಿರ್ದಳಾಕ್ಷಣಂ ೭೬

ನೋಡಿದೆನು. ಅಲ್ಲಿ— ೭೪. ಎರಡು ಕಡೆಯಲ್ಲಿಯೂ ಮಾಣಿಕ್ಯದ ದೀಪಗಳಿವೆ. ಕೆಂದಳಿರಿನ ಗೊಂಚಲುಗಳು ನೇತಾಡುತ್ತಿವೆ. ಬೆಳ್ಳಗಿರುವ ಹಾಸಿಗೆಯನ್ನು ಹಾಸಿದೆ. ಹಿರಿದಾದ ಸುಂದರವಾದ ತಣ್ಣಗಿರುವ ಕಳಶಗಳಲ್ಲಿ ಸುಗಂಧಿತವಾದ ತಣ್ಣೀರನ್ನು ತುಂಬಿದೆ. ತಲೆಯ ಎರಡುಕಡೆಗೂ ಬೀಸಣಿಗೆಗಳಿವೆ. ಇವುಗಳಿಂದ ಆ ಲತಾಗೃಹವು ರಾಜನೇ ಕಂಗಳಿಗೆ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ವ॥ ಹಾಗೆ ಆಶ್ಚರ್ಯಕರ ವಾದ ಲತಾಗೃಹವನ್ನು ಪ್ರವೇಶಿಸಿ ಕುಳಿತುಕೊಂಡೆನು—ಆಗ ೭೫. ಕಾಲಂದಿಗೆಯನ್ನು ಕಳಚಿಹಾಕಿ, ಗೆಜ್ಜೆಗಳಿಂದ ಸುಂದರವಾದ ಒಡ್ಯಾಣವನ್ನು ಬಿಚ್ಚಿಹಾಕಿ, ಪತಿಯ ಗಾಢ ನಿದ್ರೆಯನ್ನರಿದು ಒಬ್ಬಳೇ ಕತ್ತಲೆಯಲ್ಲಿ ಕಲ್ಪಸುಂದರಿಯು ಬಂದಳು. ಆವಳ ಚಂಚಲ ನೇತ್ರಗಳ ಕಾಂತಿಯು ಕುಡಿ ಮಿಂಚಿನಂತೆ ಹೊಳೆಯಿತು. ಸುಗಂಧವುಳ್ಳ ಗಾಳಿಯು ನುಗ್ಗಿ ಬಂದಿತು. ಇವುಗಳಿಂದ ಕಲ್ಪಸುಂದರಿಯು ಬರುತ್ತಿದ್ದಾಳೆಂದು ತಿಳಿದೆನು, ವ॥ ಆ ಕಲ್ಪಸುಂದರಿಯ ಬರವನ್ನು ತಿಳಿದು ನಾನು (ಉಪಹಾರವರ್ಮ) ಲತಾಗೃಹದ ಮಾಧವೀ ಬಳ್ಳಿಗಳ ಪೊದೆಯಲ್ಲಿ ಅಡಗಿಕೊಂಡೆನು. ಅವಳು ಬಂದು ಆ ಮನೆಯಲ್ಲಿ ನನ್ನನ್ನು ಕಾಣದೆ—೭೬. 'ಎಲೆ ಕುಸುಮಾಸ್ತ್ರನೆ! ನಿರ್ದಯನೆ ! ಮುಗ್ಧೆಯಾದ ನನ್ನನ್ನು ಹೀಗೆ ಹಿಂಸಿಸಲು ನಿನಗೆ ನಾನು ಮಾಡಿದ ಕೆಡುಕೇನು? ಭೂಲೋಕದಲ್ಲಿ ಶ್ರೇಷ್ಠನಾದ ಚಿತ್ರಪಟದಲ್ಲಿ ಕಂಡ ಪ್ರಿಯನನ್ನು ಇಲ್ಲಿಗೆ ಕರೆತಂದು ಏಕೆ ತೋರಿಸುತ್ತಿಲ್ಲ?'

ವ॥ ಅಂತು ಮುಂಗಿಡುತಿರ್ದಳಂ ಕಂಡು ಗುಲ್ಮದಿಂ ಪೊಱಮಟ್ಟು

ನಿನ್ನಕ್ಷಿದ್ವಿತಯಂ ಸ್ಮರಾಸ್ತ್ರತತಿಯಂ ನಿನ್ನಾನನಂ ಚಂದ್ರನಂ
ನಿನ್ನುಚ್ಚಸ್ತನಮೆಯ್ದೆ ಮನ್ಮಥನ ಕೇಳೀ ಕಂತುಕದ್ವಂದ್ವಮಂ
ನಿನ್ನಂಗಂ ರತಿಯಾರ್ಪನೀಟ್ಟುಕಳಿಗೊಳಲ್ ನೀಂ ಲೇಸನೇಗೆಯ್ದೆ ಕೇಳ್
ನಿನ್ನಿಂ ವೈರಿಗಳುಂಟೆ ಕೇಳ್ ಮನಸಿಜಂಗೆಂದೊಲ್ದು ಬಂದಪ್ಪಿದೆಂ ೭೭

ವ॥ ಅಂತಪ್ಪಿ ಸತಿಯಂ ನೋಟ್ಪಿನಂ

ಸರಸಿಜನೇತ್ರೆಗುಜ್ಜ್ವಳಿಪ ತುಂಬಿಗುರುಳ್ ಕಮನೀಯಪಲ್ಲವಾ
ಧರೆಗೆ ಪಿಕಸ್ವನಂ ನವಸುಧಾ ಕಳಶಸ್ತನಿಗಾ ಕಪೋಳ ಬಿಂ
ಧುರಮಣಿದರ್ಪಣಂ ಪುಳಿನಪೂರ್ಣ ನಿತಂಬೆಗೆ ರಾಜಹಂಸಮಂ
ಥರಗತಿಸಂತತಂ ಮೆಱೆವುದೆಂಬುದು ನೋಡಲಿದಾವ ವಿಸ್ಮಯಂ ೭೮

ವ॥ ಅಂತೆಸೆವ ಕಾಂತೆಯನಾಲಿಂಗನಂಗೆಯ್ದನಂತರಂ

ಕಂ॥ ಘಟಕುಚೆ ಪುಷ್ಕರಿಕೆಯ ನುಡಿ
ದಿಟಮಾಯ್ತೆಂದೆನಗೆನುತ್ತವಳ್ ನನ್ನನುರ
ಸ್ತಟದಮರ್ದಪ್ಪಿರತಿಲಂ
ಪಟದಿಂದಿರಲಾಗಳಱಿದೆ ನಾನಿಂಗಿತಮಂ ೭೯

ಎಂದು ಏನು ಮಾಡಬೇಕೆಂದು ತಿಳಿಯದೆ ತಳಮಳಗೊಂಡಳು, ವ॥ ಹಾಗೆ ದುಃಖಿಸುತ್ತಿದ್ದವಳನ್ನು ಕಂಡು ಪೊದೆಯಿಂದ ಹೊರಗೆ ಬಂದು. ೭೭. "ನಿನ್ನ ಎರಡುಕಣ್ಣುಗಳು ಮದನನ ಬಾಣಗಳನ್ನು ಮೀರಿಸುತ್ತಿವೆ. ನಿನ್ನ ಮುಖವು ಚಂದ್ರನನ್ನೂ, ನಿನ್ನ ದಪ್ಪ ಸ್ತನಗಳು ಮನ್ಮಥನ ಆಟದ ಚೆಂಡುಗಳೆರಡನ್ನೂ ಮೀರಿಸುತ್ತಿವೆ. ನಿನ್ನ ಶರೀರವು ರತಿಯ ದರ್ಪವನ್ನಡಗಿಸುತ್ತಿದೆ. ನೀನೇನು ಪುಣ್ಯವನ್ನು ಮಾಡಿದೆಯೋ? ಕಾಮನಿಗೆ ನಿನಗಿಂತ ವೈರಿಗಳಿದ್ದಾರೆಯೇ!" ಎಂದು ಹೇಳುತ್ತಾ ಬಂದು ಪ್ರೀತಿಯಿಂದ ಅವಳನ್ನು ಅಪ್ಪಿದೆನು. ವ॥ ಹಾಗೆ ಅಪ್ಪಿಕೊಂಡು ಸತಿಯನ್ನು ನೋಡಲು—೭೮. ಕಮಲನೇತ್ರೆಗೆ ಪ್ರಕಾಶಮಾನವಾದ ದುಂಬಿಗಳಂತಿರುವ ಮುಂಗುರುಳುಗಳೂ, ಸುಂದರವಾದ ಚಿಗುರಿನಂತಹ ಅಧರವುಳ್ಳವಳಿಗೆ ಕೋಗಿಲೆಯ ಧ್ವನಿಯೂ, ನೂತನವಾದ ಅಮೃತಕಳಶದಂತ ಸ್ತನಗಳುಳ್ಳವಳಿಗೆ ಆ ಕೆನ್ನೆಗಳೆಂಬ ಸುಂದರವಾದ ಮಣಿಗನ್ನಡಿಯೂ, ಮರಳದಿಣ್ಣೆಯಂತೆ ನಿತಂಬವುಳ್ಳವಳಿಗೆ ರಾಜಹಂಸದ ಮಂದಗಮನವೂ ಯಾವಾಗಲೂ ಮೆರೆಯುತ್ತದೆ. ಇದರಲ್ಲಿ ಆಶ್ಚರ್ಯವೇನಿದೆ? ವ॥ ಹಾಗೆ ಪ್ರಕಾಶಿಸುತ್ತಿದ್ದ ಕಾಂತೆಯನ್ನು ಆಲಿಂಗಿಸಿದೆನು. ಅನಂತರ—೭೯. 'ಕುಂಭಸ್ತನಿಯಾದ ಪುಷ್ಕರಿಕೆಯ ಮಾತು ಇಂದು ನನಗೆ ನಿಜವಾಯಿತು.' ಎಂದು ಹೇಳುತ್ತಾ ಅವಳು ನನ್ನನ್ನು ವಕ್ಷಸ್ಥಲದಲ್ಲಿ ಗಟ್ಟಿಯಾಗಿ ಅಪ್ಪಿಕೊಂಡು ರತಿಕ್ರೀಡೆಯಲ್ಲಿ ಆಸಕ್ತಿಯನ್ನು ತೋರಿದಳು. ಅವಳ ಇಂಗಿತ

ವ॥ ಅಂತಿಂಗಿತಮನಱಿದು

ಕಂ॥ ರಾಜಶುಕಂ ಕೆಂದಳಿರ್ಗಳ
ನೋಜೆಯಿಂನೊಳ್ಪಿಸೆಯೆ ಕರ್ದುಕುವಂದದಿನಾಗಳ್
ಕೂಜಿತರವದಿಂ ಕರ್ದುಕಿದೆ
ನಾ ಜಂಗಮ ಕಲ್ಪಲತೆಯ ಬಿಂಬಾಧರಮಂ ೮೦

ವ॥ ಅಂತಧರ ಗ್ರಹಣಂಗೆಯ್ದು

ನಿಯಮಸ್ಥಾನಮನಂಟಿ ಸತ್ವದೊದವಂ ಮುಂ ನೋಡಿ ಕಾಲಪ್ರಬೋ
ಧೆಯನಾರಯ್ದು ನಿರಂತರಪ್ರಕೃತಿಯಂ ಭಾವೇಂಗಿತ ಜ್ಞಾನ ನಿ
ರ್ಣಯದಿಂ ಭಾವಿಸಿಯಾತ್ಮ ಶುಕ್ಲಭರವಂ ಹೃನ್ಮಾರುತ ವ್ಯಾಪ್ತಿಯೋ
ಟಕ್ಕೆಯಿಂನಾಂತಂಗನೆಯಿಚ್ಛೆಯಂ ಸಲಿಸಿದೆಂ ಸಂಭೋಗದೊಳ್ ಯೋಗದೊಳ್
೮೧

ಸಹಜಪ್ರೀತಿಮನೋಹರಾಧರಮಣಿಪ್ರೋಚ್ಚುಂಬನಂ ಕುಂತಳ
ಗ್ರಹಣಂ ಕೋಮಳದೀನಚಾಟುವಚನಂ ಜಿಹ್ವಾಂಕುರಾಚ್ಛೋಟನಂ
ವಿಹಗಾನೀಕಲಸನ್ಮಹಾಗಳರವಂಲಜ್ಜಾಭಿಭಂಗಂ ಮುಹು
ರ್ಮುಹುರಾಲಿಂಗನಮಂತದೇಂ ಮೆಱೆದುದೋ ಸಂಭೋಗ ಕೋಳಾಹಳಂ ೮೨

ವನ್ನು ನಾನು ಅರಿತೆನು. ವ।। ಹಾಗೆ ಇಂಗಿತವನ್ನು ತಿಳಿದು— ೮೦. ಅರಗಿಳಿಯು ಕೆಂಪುಚಿಗುರನ್ನು ಸೊಗಸಾಗಿ ಪ್ರೌಢಿಮೆಯಿಂದ ಕೊಕ್ಕಿನಿಂದ ಕುಕ್ಕುವ ಹಾಗೆ ಆ ಸಂಚರಿಸುವ ಕಲ್ಪಲತೆಯಾದ ಕಲ್ಪವಲ್ಲರಿಯ ತೊಂಡೆಹಣ್ಣಿನ ತುಟಿಯನ್ನು ಶಬ್ದವಾಗುವಂತೆ ಚುಂಬಿಸಿದೆನು. ವ।। ಹಾಗೆ ಅಧರವನ್ನು ಚುಂಬಿಸಿ— ೮೧. ನಿಯಮಸ್ಥಾನದಲ್ಲಿ ಕುಳಿತು ಸತ್ವಗುಣದ ಆವಿರ್ಭಾವವನ್ನು ನೋಡಿ, ಕಾಲಜ್ಞಾನವನ್ನರಿತು, ನಿರಂತರವಾದ ಪ್ರಕೃತಿಯನ್ನು ಮನಸ್ಸಿನ ಇಂಗಿತಜ್ಞಾನದಿಂದ ನಿರ್ಣಯಿಸಿ, ಆತ್ಮಜ್ಞಾನವನ್ನು ಹೃದಯದಲ್ಲಿರುವ ಪ್ರಾಣಗಳಲ್ಲಿ ಕೂಡಿಸಿ ಯೋಗದಿಂದ ತೃಪ್ತಿಯನ್ನು ಪಡೆಯುವಂತೆ, ರತಿಸುಖಕ್ಕೆ ನಿಯಮಿತವಾದ ಸ್ಥಾನಗಳನ್ನು ಸ್ಪರ್ಶಿಸಿ, ಮನಸ್ಸಿನ ಅನುಕೂಲ ಸ್ಥಿತಿಯನ್ನು ನೋಡಿ, ಕಾಲಕ್ಕೆ ಸಹಜವಾದ ತಿಳಿವಳಿಕೆಯಿಂದ, ಸ್ವಭಾವವನ್ನು ಇಂಗಿತಜ್ಞಾನದಿಂದ ನಿರ್ಣಯಿಸಿ, ನನ್ನ ವೀರ್ಯವನ್ನು ಹೃದಯದಿಂದ ಬರುವ ಶ್ವಾಸೋಚ್ಛ್ವಾಸಗಳನ್ನು ಹಚ್ಚಿಸಿ ಧರಿಸಿ ಸಂಭೋಗದಲ್ಲಿ ಅವಳ ಇಷ್ಟವನ್ನು ಸಲ್ಲಿಸಿದೆನು. (ಯೋಗಭೋಗಗಳ ಸಾಮ್ಯವನ್ನು ಇಲ್ಲಿ ಹೇಳಿದೆ-ರಂ.) ೮೨. ಸಹಜವಾದ ಪ್ರೀತಿಯಿಂದ ಮನೋಹರವಾದ ಅಧರಮಣಿಯನ್ನು ಒತ್ತಿಚುಂಬಿಸಿದೆವು. ತಲೆಗೂದಲನ್ನು ಹಿಡಿದೆಳೆದೆವು. ಕೋಮಲವಾದ ದೈನ್ಯವುಳ್ಳ ಪ್ರೀತಿಯ ಮಾತುಗಳನ್ನಾಡಿದೆವು. ನಾಲಗೆಯ ತುದಿಯನ್ನು ನೆಕ್ಕಿದೆವು. ಹಕ್ಕಿಗಳ ಧ್ವನಿಯಂತೆ ಗಳರವವನ್ನು ಮಾಡಿದೆವು. ನಾಚಿಕೆಯನ್ನು ತೊರೆದೆವು. ಮತ್ತೆ ಮತ್ತೆ ಆಲಿಂಗನ ಮಾಡಿಕೊಂಡೆವು. ಹೀಗೆ

ವ॥ ಆ ಸಂಭೋಗದೊಳ್

ನೆಲಸಿದಲಜ್ಜೆಯೋಸರಿಸಿ ಘರ್ಮಜಲಂ ಪೊಜಪೊಣ್ಮೆಬುದ್ಧಿ ಸಂ
ಚಲಿಸಿ ಪೊದಟ್ದುಲಲ್ಲೆ ಮಿಗಿಲಾಗಿಯುಸಿರ್ ನಿಮಿರ್ದೆತ್ತು ಲೋಚನೋ
ತ್ಪಲಮರೆಮುಚ್ಚೆಯಪ್ಪುಗೆ ಸಡಿಲ್ದು ಮನಂಬೆಜಗಾಗಿ ಪುಷ್ಪಕೋಮಲೆ
ಮರವಟ್ಟಿರಲ್ ಸಮರತಿಸ್ಥಿತಿಯಪ್ಪವೊಲಾಂ ನೆಗಟ್ಟಿದೆಂ ೮೩

ವ॥ ಅಂತು ಸಮರತಿಯಾಗೆ

ವಿಲಸದ್ರಕ್ತವಿಲೋಚನಂ ಶ್ರಮಜಲವ್ಯಾಕೀರ್ಣಗಾತ್ರಂ ಮತಿ
ಸ್ಖಲನಂ ಶೀರ್ಣಚಳಾಳಕಂ ಶಿಥಿಲವೇಣೀಬಂಧಮುತ್ತುಂಗ ನಿ
ರ್ಮಳ ಬಿಂಬಾಧರಮಾಸ್ಯ ಸಂಭವಮುದಂ ಚಿತ್ತಪ್ರಸನ್ನಂ ಮನ
ಕ್ಕೊಲವಂಪೆತ್ತುದು ಕಾಂತೆಯಾಕೃತಿ ಕರಂ ರತ್ಯಂತದೊಳ್ ಸಂತತಂ ೮೪

ವ॥ ಅಂತಾದ ರತ್ಯಂತಸಮಯದೊಳ್ ನಲ್ಲಳಂ ಲಲ್ಲೆನುಡಿಯಿಂದೆನಸುಂ ಪರಿತೋಷಂ
ಬಡಿಸಿ ನಿಮಗಾದೊಡೆ ಸಂಕಲ್ಪ ಸಿದ್ಧಿಯಾಯ್ತಾಂದೇವಿಯುರಿಂ ಬೀಟ್ಕೊಂಡೆಪೆನೆಂಬುದುಂ

ಸಂಭೋಗಕೋಲಾಹಲವು ಮೆರೆಯಿತು. ವ॥ ಆ ಸಂಭೋಗದಲ್ಲಿ. ೮೩. ನೆಲೆಸಿದ್ದ ನಾಚಿಕೆ ಜಾರಿತು. ಬೆವರ ನೀರು ಉಕ್ಕಿ ಹರಿಯಿತು. ಬುದ್ಧಿಯು ಚಂಚಲವಾಯಿತು. ಲಲ್ಲೆವಾತುಗಳು ಮಿತಿಮೀರಿದುವು. ಉಸಿರು ವೇಗವಾಯಿತು. ಕಂಗಳೆಂಬ ಕಮಲಗಳು ಅರ್ಧಮುಚ್ಚಿದುವು. ಆಲಿಂಗನದ ಬಿಗಿತವು ಸಡಿಲವಾಯಿತು. ಮನವು ಬೆರಗಾಯಿತು. ಹೀಗೆ ಹೂವಿನಂತೆ ಕೋಮಲೆಯಾದ ಕಲ್ಪವಲ್ಲರಿಯು ಮೈಮರೆತಳು. ಹೀಗೆ ನಾನು ಸಮರತಿಸ್ಥಿತಿಯುಂಟಾಗುವಂತೆ ಮಾಡಿದೆನು. ವ॥ ಹಾಗೆ ಸಮರತಿಯಾಗಲು—೮೪. ರತಿಕೇಳಿಯ ಕೊನೆಯಲ್ಲಿ ಕಾಂತೆಯು ಆಕಾರವು ಮನಸ್ಸಿಗೆ ಪ್ರೀತಿಯನ್ನುಂಟುಮಾಡಿತು. ಆಗ ಅವಳ ಕಂಗಳು ಕೆಂಪಾಗಿದ್ದುವು. ಮೈಯೆಲ್ಲ ಬೆವರ ನೀರು ಉಕ್ಕಿ ಹರಿಯುತ್ತಿತ್ತು. ಮತಿಯು ಚಂಚಲವಾಗಿತ್ತು. ಮುಂಗುರುಳುಗಳು ಕೆದರಿ ಚಲಿಸುತ್ತಿದ್ದುವು. ಜಡೆಯು ಸಡಿಲವಾಗಿ ಬಿಚ್ಚಿಕೊಂಡಿದ್ದಿತ್ತು. ಅವಳ ಬಿಂಬಾಧರವು ನಿರ್ಮಲವಾಗಿದ್ದಿತು. ಮುಖದಲ್ಲಿ ಹರ್ಷವು ಎದ್ದು ಕಾಣುತ್ತಿತ್ತು. ಮನಸ್ಸು ಪ್ರಸನ್ನವಾಗಿತ್ತು. ಇಂಥ ಅವಳ ಆಕೃತಿಯು ಆನಂದವನ್ನುಂಟುಮಾಡಿತು. ವ॥ ರತಿಕೇಳಿಯ ಅವಸಾನದಲ್ಲಿ ನಲ್ಲಳನ್ನು ಲಲ್ಲೆ ನುಡಿಗಳಿಂದ ಸಂತೋಷಪಡಿಸಿದೆನು. ಮತ್ತು 'ನಿಮಗೆ ನಿಮ್ಮ ಇಷ್ಟಾರ್ಥ ಸಿದ್ಧಿಸಿತು. ಇನ್ನು ನಾನು ದೇವಿಯ

ಅಲರ್ದ ಮುಖಾಬ್ಜಮೆಯ್ದೆ ಕುಡುಬಾಡಿ ಸಿತಾಕ್ಷಿಯುಗಂ ಬೆಱಂಗುವೆ
ತ್ತಲಘುನಿತಂಬದೊಳ್ ಮುಡಿ ಸಡಿಲ್ದು ತನುಪ್ರಭೆ ಕಂದಿಬುದ್ಧಿ ಸಂ
ಚಲಿಸಿಮುದಂ ತೊಲಂಗಿಯನುರಾಗರಸಂ ತವೆ ಬತ್ತಿಯಾಕ್ಷಣಂ
ಲಲನೆ ವಿಷಾದದಿಂ ದುಗುಡಮಂ ತಳೆದಳ್ ಮರವಟ್ಟರಂದದಿಂ ೮೫

ವ॥ ಅಂತವಳ್ಗಾದ ದುಗುಡಮನಾಂ ಕಂಡು

ಇನಿತುದ್ವೇಗಕ್ಕದೇಂ ಸಮ್ಮದಮಬಲೆಯೆನಲ್ಕಾಮ ಕೈವಲ್ಯದೊಳ್ಪಿಂ
ದೆನಗೀಗಳ್ ಸಾರ್ದುಮೇಂ ಮತ್ತಧಮಪತಿಯ ದುಸ್ಸಂಗದುರ್ವೇದನಾಯಾ
ತನದೊಳ್ ಬೀೞ್ವಂದಮಾಯ್ತೀತೆಱನನಱಿದು ಮುಂಗೆಟ್ಟಳಂ ಬಾಲೆಯಂ ದುಃ
ಖಿನಿಯಂ ನೀಂ ಕಾವುದೆಂದಂಗನೆ ಮಿಗೆ ಸುರಿದಳ್ ಭೋರೆನಲ್ ಕಣ್ಣನೀರಂ ೮೬

ವ॥ ಬಳಿಕ್ಕಾನವಳ ಕಣ್ಣ ನೀರಂ ತೊಡೆದಿಂತೆಂದೆಂ

ನಿಜಪತಿಗೆನ್ನ ಚಿತ್ರಪಟದೊಪ್ಪಮನೊಯ್ಯನೆ ತೋಱಲಂತವಂ
ತ್ರಿಜಗದೊಳತ್ಯಪೂರ್ವಮೆನಿಸಿರ್ಪ ವಿಚಿತ್ರದ ರೂಪಿದೆಂತು ವಾ
ರಿಜಮುಖಿ ನಿನ್ನ ಕೆಯ್ಯೆಡೆಗೆ ಸಾರ್ದುದು ಪೇೞ್ವನೆ ಪೇೞ್ ಧರಿತ್ರಿಗ
ದ್ರಿಜೆಗೆಣೆ ಧರ್ಮರಕ್ಷಿತೆಯೆನಿಪ್ಪವಳಿಂದೆನಗೆಂದು ಕಾಮಿನೀ ೮೭

ವರಿಂದ ಬೀಳ್ಕೊಳ್ಳುವೆನು' ಎಂದು ಹೇಳಿದೆನು.—ಆಗ. ೮೫. ಕಲ್ಪಸುಂದರಿಯ ಅರಳಿದ್ದ ಮುಖಕಮಲವು ಬಾಡಿ ಹೋಯಿತು. ಬಿಳುಪಾದ ಕಂಗಳೆರಡೂ ಬೆರಗುಗೊಂಡುವು, ದಪ್ಪವಾದ ನಿತಂಬದ ಮೇಲೆ ತಲೆಗೂದಲ ಗಂಟು ಸಡಿಲವಾಗಿ ಹರಡಿತು. ದೇಹಕಾಂತಿಯು ಕಂದಿತು. ಬುದ್ಧಿಯು ಚಂಚಲವಾಯಿತು. ಆನಂದವು ತೊಲಗಿತು. ಅನುರಾಗರಸವು ಬತ್ತಿಹೋಯಿತು, ಆ ಕ್ಷಣದಲ್ಲಿ ಲಲನೆಯು ವಿಷಾದದಿಂದ ಮೈಮರೆತವಳಂತೆ ದುಃಖಿತೆಯಾದಳು. ವ।। ಅವಳಿಗಾದ ದುಃಖವನ್ನು ನಾನು ನೋಡಿ—(ಉಪಹಾರವರ್ಮ) ೮೬. ಅಬಲೆ ! ಇಷ್ಟು ಉದ್ವೇಗಕ್ಕೆ ಕಾರಣವೇನು? ಎಂದು ನಾನು ಕೇಳಿದೆನು. "ಕಾಮಸುಖವೆಂಬ ಕೈವಲ್ಯ ಸುಖದಲ್ಲಿ ಮುಳುಗಿದ ನನಗೆ ಮತ್ತೆ ಅಧಮನಾದ ಪತಿಯ ಸಂಗದಿಂದ ಯಾತನೆಯಲ್ಲಿ ಬೀಯಬೇಕಾಗಿ ಬಂದಿತು. ಏನು ಮಾಡಲಿ.—ಏನು ಮಾಡಬೇಕೆಂದರಿಯದ ದುಃಖಿನಿಯಾದ ನನ್ನನ್ನು ಕಾಪಾಡಬೇಕು." ಎಂದು ಹೇಳಿ ಆ ಕಲ್ಪ ಸುಂದರಿಯು ಕಣ್ಣೀರ್ಗರೆದಳು. ವ।। ಬಳಿಕ ನಾನು ಅವಳ ಕಣ್ಣೀರನ್ನು ಒರಸಿ ಹೀಗೆ ಹೇಳಿದೆನು. ೮೭. ನಿನ್ನ ಗಂಡನಿಗೆ ನನ್ನ ಚಿತ್ರಪಟವನ್ನು ತೋರಿಸು. ಅದನ್ನು ನೋಡಿ ಅವನು 'ಮೂರು ಲೋಕಗಳಲ್ಲಿಯೇ ಅಪೂರ್ವವಾದ ವಿಚಿತ್ರವಾದ ರೂಪವಿದು. ಕಮಲಮುಖಿ! ಇದು ನಿನ್ನ ಕೈಗೆ ಹೇಗೆ ಬಂದಿತು ? ಹೇಳು? ಎಂದು ಕೇಳುತ್ತಾನೆ. ಆಗ ನೀನು 'ಭೂಮಿಯಲ್ಲಿ ಪಾರ್ವತಿಗೆ ಸಮನಾದ ಧರ್ಮರಕ್ಷಿತೆಯೆಂಬವಳು ನನಗೆ ಕೊಟ್ಟಳು' ಎಂದು ಅವನಿಗೆ ಹೇಳು.

ವ॥ ಅಂತು ಚಿತ್ರಪಟಮಂ ತೋಱಿ ಇದನೆನ್ನ ಕುಲಗುರುವಪ್ಪ ಧರ್ಮರಕ್ಷಿತೆಯೆಂಬ ಭಿಕ್ಷುಕಿ ಕೊಟ್ಟು ಮತ್ತಮಿಂತೆಂದಳೆಂದು ಪೇೞ್ದು

ಈ ರೂಪಂ ಪಿಡಿದೊಂದು ಹೋಮಮುಸಲಂಪಿಂ ಗಂಧಕಸ್ತೂರಿ ಕ
ರ್ಪೂರಾಜ್ಯಾಂಬರ ಮಾಂಸಸಂತತಿಗಳಿಂ ಮಾಡಲ್ಕೆ ತಚ್ಚಿತ್ರದಾ
ಕಾರಂ ಕೂರ್ತೆನಗಪ್ಪುದಾಂ ಪದೆಪಿನಿಂದಪ್ಪಲ್ಕೆ ನಿನ್ನಂ ತದಾ
ಕಾರಂ ಕೇಳ್ ನಿನಗಪ್ಪುದಾಂ ಸಹಜದಿಂದಿರ್ಪೆಂ ಧರಾವಲ್ಲಭಾ ೮೮

ಇದು ನಿನ್ನಾಪ್ತ ಪ್ರಧಾನರ್ಗಖಿಳ ಪರಿಜನಕ್ಕಾತ್ಮಚಿತ್ತಕ್ಕೆ ಪೆಂಪಿಂ
ಮುದವಪ್ಪಂತಾದೊಡಂ ಹೋಮಮನೆಸಗಿದಪೆಂ ದೇವ ನೀವೆಲ್ಲರುಂ ಕೇ
ಳ್ದು ದಯಾಚಿತ್ತಪ್ರಸಾದಂಗೊಡಿಮೆನಲರಸಂ ತಾನೊಡಂಬಟ್ಟೆನಿಂ ಮಾ
ಟ್ಟುದು ಮುಂತೀಹೋಮಮಂ ಕಾಮಿನಿಯುಪವನದೊಳ್ ವಸ್ತುಸಾಮಗ್ರ್ಯ
ದಿಂದಂ ೮೯

ವ॥ ಎಂಬುದುಂ

ಕಂ॥ ಹೋಮ ಸಮಾಪ್ತಿಯೊಳೆನಗೆ ಮ
ಹಾ ಮಂತ್ರದಿನಾದ ಮೂರ್ತಿಯಂ ನಿನಗೀಯಲ್
ಭೂಮಿಶ ನಿನ್ನ ಕರೆದೆಂ
ಹೋಮಸಮಭ್ಯರ್ಣ ಘಂಟಿಕಾಧ್ವನಿಯಿಂದಂ ೯೦

ವ।। ಹಾಗೆ ಚಿತ್ರಪಟವನ್ನು ತೋರಿಸಿ 'ಇದನ್ನು ನನ್ನ ಕುಲಗುರುವಾದ ಧರ್ಮರಕ್ಷಿತೆಯೆಂಬ ಭಿಕ್ಷುಕಿಯು ಕೊಟ್ಟು ಹೀಗೆ ಹೇಳಿದಳು' ಎಂದು ಹೇಳಿ ೮೮. ಈ ರೂಪವನ್ನು ಪಡೆಯುವುದಕ್ಕಾಗಿ ಗಂಧ ಕಸ್ತೂರಿ ಕರ್ಪೂರ ತುಪ್ಪ ಬಟ್ಟೆ ಮಾಂಸ ಇವುಗಳಿಂದ ಒಂದು ಹೋಮವನ್ನು ಸಂತೋಷದಿಂದ ಮಾಡಬೇಕು. ಅದರಿಂದ ಆ ಚಿತ್ರದಾಕಾರವು ನನಗೆ (ಕಲ್ಪ ಸುಂದರಿಗೆ) ಬರುವುದು. ನಾನು ನಿನ್ನನ್ನಪ್ಪಿದರೆ ಆ ಆಕಾರವು ನಿನಗೆ (ರಾಜನಿಗೆ) ಬರುವುದು. ರಾಜನೆ! ನಾನು ಮಾತ್ರ ಸಹಜವಾಗಿ ಇದ್ದ ಹಾಗೆಯೇ ಇರುವೆನು. ೮೯. ಇದು ನಿನ್ನ ಆಪ್ತರಾದ ಮಂತ್ರಿಗಳಿಗೂ, ಸೇವಕರೆಲ್ಲರಿಗೂ, ನಿನ್ನ ಮನಸ್ಸಿಗೂ ಸಂತೋಷವನ್ನುಂಟುಮಾಡುವ ಹಾಗಿದ್ದರೆ ನಾನು ಈ ಹೋಮವನ್ನು ಮಾಡುವೆನು. ದೇವ ನೀವೆಲ್ಲರೂ ನನ್ನ ಮಾತನ್ನು ಕೇಳಿ ದಯೆಯಿಂದ ಅನುಜ್ಞೆಯನ್ನು ಕೊಡಿ' ಎಂದು ಹೇಳು. ಅದಕ್ಕೆ ರಾಜನು 'ನಾನು ಒಪ್ಪಿದ್ದೇನೆ. ಈ ಹೋಮವನ್ನು ಕಾಮಿನಿಯರ ಉಪವನದಲ್ಲಿ ಎಲ್ಲ ವಸ್ತುಗಳಿಂದ ಮಾಡು' ವ॥ ಎಂದು ಹೇಳುತ್ತಾನೆ— ೯೦. ಹೋಮವು ಮುಗಿದಾಗ ಮಹಾಮಂತ್ರ ಪ್ರಸಾದದಿಂದ ನನಗೆ ಬಂದ ಆಕಾರವನ್ನು ನಿನಗೆ ಕೊಡುವುದಕ್ಕಾಗಿ 'ರಾಜನೆ' ಹೋಮ ಕುಂಡದ ಹತ್ತಿರವಿರುವ ಗಂಟೆಯ ಧ್ವನಿಮಾಡಿ ಕರೆಯುವೆನು.

ವ॥ ಆ ಘಂಟೆಯ ಧ್ವನಿಯಾಗಲೊಡಂ ನೀಂ ಹೋಮಕುಂಡಕ್ಕೆ ಬಂದೊಡಾಂ ನಿನ್ನ ನಪ್ಪಲೆನಗಾದ ಚಿತ್ರದ ರೂಪು ನಿನಗಾಗಿಯಾಂ ಮುನ್ನಿನಂತಿರ್ಪೆನೆಂದು ಭಿಕ್ಷುಕಿ ಪೇೞ್ದಳೆಂದು ಪೇೞ್ ಮೇಲಪ್ಪ ಕಾರ್ಯಮನಾನೆಸಗುವೆನೆಂದು ಮತ್ತಂ

ಕಂ॥ ಕೋಮಳೆ ನೀನೆಸಗಿದ ತ
ದ್ಧೋಮದ ಧೂಮೋತ್ಕರಂ ಕರಂ ತಲೆದೋಱಲ್
ಪ್ರೇಮದೊಳಾನಲ್ಲಿಗೆ ಬಂ
ದುಂ ಮಾಡುವ ತೆಱನನಱಪುವೆಂ ನಿನಗಾಗಳ್ ೯೧

ವ॥ ಎಂದಿದೆಲ್ಲಮಂ ಕಲ್ಪಸುಂದರಿಗೆ ಕಲಿಸಿಯನಂತರಂ

ಕಂ॥ ಆಂ ಬಂದು ಪೋದ ಪಜ್ಜೆಯ
ನಂಬುಜಮುಖಿ ಪೆಱನದೊರ್ಬನಱಯದ ತೆಱದಿಂ
ಬೆಂಬೞಯಿಂ ಪುಷ್ಕರಿಕೆಯಿ
ನಿಂಬಂ ತೊಡೆಯಿಸುವುದೆನುತುಮಾಂ ಪೊಱಮಟ್ಟೆಂ ೯೨

ವ॥ ಅಂತು ಪೇೞ್ದಾನಾವನದಿಂ ಪೊಱಮಟ್ಟತ್ತಲ್ ಬಂದೆಂ ಅವಳತ್ತಲ್ ತನ್ನ ಪತಿಯ ಸಮೀಪಕ್ಕೆ ಪೋಗಿಯಾಂ ಪೇೞ್ದಂದದಿಂ ವಿಕಟವರ್ಮಂಗೆ ಪೇೞ್ದೊಡವನದರ್ಕೊ ಡಂಬಟ್ಟರೆ

ವ॥ ಆ ಘಂಟೆಯ ಧ್ವನಿಯಾದ ಕೂಡಲೆ ನೀನು ಹೋಮಕುಂಡಕ್ಕೆ ಬಾ. ಕೂಡಲೆ ನಾನು ನಿನ್ನನ್ನಪ್ಪುವೆನು. ನನಗೆ ಬಂದ ವಿಚಿತ್ರವಾದ ರೂಪವು ನಿನಗಾಗುವುದು. ನಾನು ಮೊದಲಿನಂತೆಯೇ ಇರುವೆನು ಎಂದಂ ಭಿಕ್ಷುಕಿಯು ಹೇಳಿದಳು ಎಂದು ಹೇಳು. ಮುಂದಿನ ಕೆಲಸವನ್ನು ನಾನು ನೋಡಿಕೊಳ್ಳುವೆನು. ಮತ್ತು— ೯೧. "ಕೋಮಳೆ! ನೀನು ಮಾಡಿದ ಆ ಹೋಮದ ಹೊಗೆಯನ್ನು ಕಂಡ ಕೂಡಲೆ ಪ್ರೀತಿಯಿಂದ ನಾನು ಅಲ್ಲಿಗೆ ಬಂದು ನಿನಗೆ ಮುಂದೆ ಮಾಡಬೇಕಾದ ರೀತಿಯನ್ನು ತಿಳಿಸುವೆನು" ವ॥ ಎಂದು ಎಲ್ಲ ವಿಷಯವನ್ನು ಕಲ್ಪಸುಂದರಿಗೆ ಕಲಿಸಿದೆ. ಅನಂತರ. ೯೨. 'ಕಮಲಮುಖಿ ! ನಾನು ಬಂದು ಹೋದ ಹೆಜ್ಜೆಯನ್ನು ಬೇರೆ ಯಾರೂ ತಿಳಿಯದಂತೆ, ಪುಷ್ಕರಿಕೆಯಿಂದ ಹೆಜ್ಜೆಯ ಗುರುತನ್ನು ಅಳಿಸಿ ಹಾಕಿಸು" ಎಂದು ಹೇಳಿ ನಾನು ಹೊರಟೆನು. ವ॥ ಹಾಗೆ ಹೇಳಿ ನಾನು ಆ ಉಪವನದಿಂದ ಹೊರಟು ಇತ್ತ ಬಂದೆನು. ಆವಳು ಅತ್ತ ತನ್ನ ಗಂಡನ ಹತ್ತಿರ ಹೋಗಿ ನಾನು ಹೇಳಿದ ಹಾಗೆ ವಿಕಟವರ್ಮನಿಗೆ ಹೇಳಿದಳು. ಅವನು

ದೇವಿಯುದೊಂದಪೂರ್ವತರಮೂರ್ತಿಯನೊಪ್ಪಿರೆ ಮಾಡುವಳ್ ಗಡಂ
ಭೂವರನಪ್ಪ ತದ್ವಿಕಟವರ್ಮ ನೃಪಂಗಿದಜಿ್ಳ್ ವಿತರ್ಕವಿ
ನ್ನಾವುದೆನುತ್ತಶೇಷಜನಮಚ್ಚರಿವಟ್ಟಿರೆ ಕಲ್ಪಸುಂದರೀ
ಭಾವಕಿ ಹೋಮಮಂ ಬನದೊಳೊರ್ವಳೆ ಕೇಳ್ ಸಮಕಟ್ಟಿದಳ್ ನೃಪಾ ೯೩

ಕಂ॥ ರೂಪಪರಾವರ್ತನ ವಿವಿ
ಧೋಪಾಯಮನೆಸಗುವಳ್ ಗಡಂ ನರನಾಥಂ
ಗೋಪಳ್ ಮಣಿಮಂತ್ರೌಷಧಿ
ಗೇ ಪೊಸತಾಧಿಕ್ಯಮೆಂದು ಗುಂಪೊಸೆವಿನೆಗಂ ೯೪

ವ॥ ಅಂತಖಿಳಜನಮಾಶ್ಚರ್ಯಂಬಡುತಿರಲಗುರು ಚಂದನ ಕುಂಕುಮ ಕರ್ಪೂರ ಕಸ್ತೂರಿಕಾದಿ ಸುಗಂಧವಸ್ತುವಂ ಸಿತಸರ್ಷಪ ತಿಲ ವ್ರೀಹಿ ಯವಾದಿಹೋಮಧಾನ್ಯಮಂ ಘೃತ ದುಗ್ಧಪಶುವಸಾದಿರಸದ್ರವ್ಯಮಂ ಚೀನಿ ಮಹಾಚೀನಿ ದೇವಾಂಗ ದುಕೂಲಾದಿಪಟಕರ್ಮಮಂ ಖದಿರದೇವದಾರುನಿಂಬಲವಂಗಾದಿಸುಗಂಧಶುಷ್ಕಚಯಮಂ ಹೋಮಸಾಧನಂಗಳಾಗಿ ಮಾಡಿ

ಕಂ॥ ವನಜಮುಖಿ ವಿಕಟವರ್ಮನ
ತನುಸಾಧನಮಂ ಚಿತಾಗ್ನಿಯೊಳ್ ಬೇಳ್ವಂತಾ
ವನಮಧ್ಯದಗ್ನಿಕುಂಡದೊ
ಳನುನಯದಿಂ ಬೇಳ್ದಳೊಲ್ದು ತತ್ಸಾಧನಮಂ ೯೫

ಅದಕ್ಕೆ ಒಪ್ಪಿದನು. ೯೩. 'ದೇವಿಯು ಮಹಾರಾಜ ವಿಕಟವರ್ಮನಿಗೆ ಒಂದ ಪೂರ್ವವಾದ ಸುಂದರಮೂರ್ತಿಯನ್ನುಂಟುಮಾಡುವಳು. ಇದರಲ್ಲಿ ಸಂದೇಹವೇನು?' ಎಂದು ಎಂದು ಅಶೇಷ ಜನರೂ ಆಶ್ಚರ್ಯಪಡುವಂತೆ ಕಲ್ಪಸುಂದರಿಯು ಉಪವನದಲ್ಲಿ ಹೋಮವನ್ನು ಮಾಡಿದಳು. ೯೪. 'ರಾಣಿಯು ರಾಜನಿಗೆ ರೂಪವನ್ನು ಬದಲಾಯಿಸುವ ವಿವಿಧೋಪಾಯಗಳನ್ನು ಮಾಡುವಳು. ಆಶ್ಚರ್ಯ, ಮಣಿ ಮಂತ್ರ ಔಷಧಿಗಳಿಗೆ ಒಂದು ಹೊಸ ಪ್ರಾಶಸ್ತ್ಯ ಬಂದಂತಾಯಿತು' ಎಂದು ಜನರು ಹೇಳಿದರು. ವ॥ ಜನರೆಲ್ಲರೂ ಆಶ್ಚರ್ಯ ಪಡುವಂತೆ ಅಗರು ಚಕ್ಕೆ, ಚಂದನ, ಕುಂಕುಮ ಕರ್ಪೂರ, ಕಸ್ತೂರಿ– ಮೊದಲಾದ ಸುಗಂಧ ದ್ರವ್ಯಗಳನ್ನೂ, ಬಿಳಿ ಸಾಸುವೆ ಭತ್ತ, ಗೋಧಿ ಮೊದಲಾದ ಹೋಮದ ಧಾನ್ಯಗಳನ್ನೂ, ತುಪ್ಪ, ಹಾಲು, ಪಶುವಿನ ಕೊಬ್ಬು– ಮೊದಲಾದ ರಸದ್ರವ್ಯಗಳನ್ನೂ, ಚೀನಿ ಮಹಾಚೀನಿ ಮೊದಲಾದ ಸೂಕ್ಷ್ಮವಸ್ತ್ರಗಳನ್ನೂ, ದೇವಾಂಗ, ದುಕೂಲ ಮೊದಲಾದ ರೇಶಿಮೆ ವಸ್ತ್ರಗಳನ್ನೂ ಕಗ್ಗಲಿ, ದೇವದಾರು, ಬೇವು, ಲವಂಗ ಮೊದಲಾದ ಸುಗಂಧವುಳ್ಳ ಒಣಗಿದ ಸೌದೆಗಳನ್ನೂ ಹೋಮಂ ಸಾಮಗ್ರಿಗಳಾಗಿ ಸಂಗ್ರಹಿಸಿದಳು. ೯೫. ಆ ಕಮಲಮುಖಿಯು ಆ ವನ ಮಧ್ಯದ ಅಗ್ನಿಕುಂಡದಲ್ಲಿ ಶ್ರದ್ಧೆಯಿಂದ ಹೋಮ ಸಾಧನ ದ್ರವ್ಯಗಳಿಂದ ಹೋಮ ಮಾಡಿದಳು. ಅದು ವಿಕಟವರ್ಮನ ಶರೀರವನ್ನು ಸುಡುವ ಸಾಧನಗಳನ್ನು ಚಿತೆಯ ಅಗ್ನಿಗೆ

ಸಕಲಸುಗಂಧವಸ್ತುಗಳನಂಗನೆ ತದ್ವನಮಧ್ಯದೊಳ್ ಹವಿ
ಪ್ರಕರಮೆನಲ್ಕೆ ಹೋಮಶಿಖಿಯೊಳ್ ಮಿಗೆ ಬೇಳ್ದೊಡೆ ಧೂಮದೇಟ್ಗೆ ದಿ
ಙ್ನಿಕರದೊಳುರ್ಬಿ ಪರ್ಬಿಬರೆ ನಿಶ್ಚಯದಿಂದನಿಶಂ ಸುಗಂಧ ಕೌ
ತುಕಮೆನಿಸಿತ್ತದಲ್ಲದೊಡೆ ಗಂಧಗುಣಂ ಧರೆಗೆಂತು ಸಾರ್ದುದೋ ೯೬

ವ॥ ಆ ಹೋಮಧೂಮಸ್ತೋಮಂ ವ್ಯೋಮಮಂಡಲಮಂ ದಿಶಾಮಂಡಲಮಂ ಮಂಡಿಸಲದನಾಂ ಕಂಡು

ಭರದಿಂ ಬಂದೆನ್ನ ಮೇಗಾಲ್ಗಳನಮ (ವ?)ಳಡಿಯಂ ಮೆಟ್ಟಿದೂಂಟಿಕ್ಕಿ ಹಸ್ತಾಂ
ಬುರುಹಾಗ್ರಶ್ಲೇಷದಿಂ ಬಾಗಿಸಿ ನಯನದಡಾಳಂ ಮದೀಯಾಸ್ಯದೊಳ್ ಪ
ರ್ಬಿರೆ ಮಧ್ಯಂಬಳ್ಕೆ ಕಕ್ಷಂ ಪೊಗರನುಗುಳೆ ರಾಗಂತುಟುಂಕಲ್ಕೆ ತಾವಾ
ಧರಮಂ ತತ್ಕಾಂತೆ ಪೆಂಪಿಂ ಮಗುಟ್ದು ಮಗುಟ್ದವಳ್ ಚುಂಬನಂಗೆಯ್ದಳಾಗಳ್ ೯೭

ವ॥ ಅಂತು ಚುಂಬನಂಗೆಯ್ದನಂತರಮಿಂತೆಂದಳ್

ಕಂ॥ ನೀನೆನ್ನೊಳ್ ಪೇಟ್ದ ಕ್ರಮ
ಮೇನುಂ ತಪ್ಪದವೊಲೆಸಗಿದೆಂ ಹೋಮಮನಿ
ನ್ನೇನೆಸಪುತ್ತರ ಕಾರ್ಯವಿ
ಧಾನಮನೊಲ್ದಂತೆ ಮಾಟ್ಪುದೆಲೆ ಸುಕುಮಾರಾ ೯೮

ಹಾಕುವಂತೆ ಇದ್ದಿತು. ೯೬. ಅಂಗನೆಯು ಆ ವನದ ನಡುವೆ ಹೋಮಾಗ್ನಿಯಲ್ಲಿ ಸಕಲ ಸುಗಂಧ ವಸ್ತುಗಳನ್ನೂ ಹವಿಸ್ಸನ್ನಾಗಿ ಹೋಮ ಮಾಡಿದಳು. ಅದರಿಂದ ಮೇಲೆದ್ದ ಹೊಗೆಯು ದಿಕ್ಕುಗಳಿಗೆಲ್ಲ ವಿಶೇಷವಾಗಿ ಹರಡಿತು. ಮತ್ತು ಅದರ ಸುಗಂಧವು ಆಶ್ಚರ್ಯಕರವಾಗಿದ್ದಿತು. ಅಲ್ಲದಿದ್ದರೆ ಧರೆಗೆ ಗಂಧಗುಣವು ಹೇಗೆ ಬಂದಿತು ? (ಈ ಸುಗಂಧದಿಂದಲೇ ಭೂಮಿಯು ಗಂಧ ಗುಣವುಳ್ಳದಾಯಿತು ಎಂದು ಹೇಳಬಹುದು.) ವ॥ ಆ ಹೋಮಧೂಮವು ಆಕಾಶಮಂಡಲವನ್ನೂ ದಿಕ್ಕುಗಳ ಸಮೂಹವನ್ನೂ ಅಲಂಕರಿಸಿತು. ಅದನ್ನು ನಾನು ನೋಡಿದಾಗ, ೯೭. ಕಲ್ಪಸುಂದರಿಯು ವೇಗದಿಂದ ಬಂದು ನನ್ನ ಕಾಲ ಮೇಲುಭಾಗವನ್ನು ತನ್ನ ಪಾದಗಳಿಂದ ಮೆಟ್ಟಿಕೊಂಡು ಕರಕಮಲಗಳಿಂದ ನನ್ನ ಮುಖವನ್ನು ಹಿಡಿದು ಬಗ್ಗಿಸಿಕೊಂಡಳು. ನಯನ ಕಾಂತಿಯನ್ನು ನನ್ನ ಮುಖದ ಮೇಲೆ ಹರಡಿದಳು. ಸೊಂಟವು ಬಳುಕಿತು. ಕಂಕುಳು ಹೊಳೆಯಿತು. ಪ್ರೀತಿಯು ತುಂಬಿ ತುಳುಕುವಂತೆ ನನ್ನ ಚೆಂದುಟಿಯನ್ನು ಮತ್ತೆ ಮತ್ತೆ ಚುಂಬಿಸಿದಳು. ವ॥ ಹಾಗೆ ಚುಂಬಿಸಿದ ಮೇಲೆ ಹೀಗೆ ಹೇಳಿದಳು— ೯೮. 'ಸುಕುಮಾರನೆ ! ನೀನು ನನಗೆ ಹೇಳಿದ್ದಂತೆ ಒಂದು ತಪ್ಪೂ ಬರವಂತೆ ಹೋಮವನ್ನು ಮಾಡಿದೆನು. ಮುಂದೆ ಮಾಡಬೇಕಾದ ಕಾರ್ಯಗಳನ್ನು ನಿನಗಿಷ್ಟ ಬಂದ

ವ॥ ಎಂದವಳ್ ಮಗುಟ್ದಾಲಿಂಗನಂಗೆಯ್ಯೆ

ಕಂ॥ ಕಾಲಾತಿಕ್ರಮಮಾಗದೆ
ಕಾಲನ ನಿಲಯಕ್ಕೆ ವಿಕಟವರ್ಮನನೀಗಳ್
ಬಾಲೆ ಕಳಿಪಿದಪೆನೆಸೆವ ತ
ಮಾಳದೊಳಿರ್ದೀಕ್ಷಿಸೆಂದೆನಾನಂಗನೆಯಂ ೯೯

ವ॥ ಅಂತವಳನೊಂದು ತಮಾಲಗುಲ್ಮದೊಳಿರಿಸಿಯಾಂ ಹೋಮಕುಂಡದ ಸಮೀಪಕ್ಕೆ ಬರೆ,

ವಿವಿಧಜ್ವಾಳಾಕಳಾಪಂ ತುಡುಕೆ ಗಗನಮಂ ಧೂಮ ಸಂತಾನಕಂ ದಿ
ಗ್ವಿವರಕ್ಕೆಯ್ತರ್ಪಿನಂ ಪನ್ನಗನಿಲಯಮನಂಗಾರದುಗ್ರೋಷ್ಣಮುಂ ತೀ
ವ್ರವಿನಂ ಪಾಯ್ತರ್ಪಿನಂ ಬಲ್ಕಿಡಿಗಳ ಗಡಣಂ ರಂಜಿಸುತ್ತಿರ್ಪ ಹೋ
ಮಾಗ್ನಿ ವಿಶೇಷಂ ಮನ್ಮನಕ್ಕಚ್ಚರಿಯನೆಸಗಿದತ್ತಾಗಳುರ್ವೀವರೇಣ್ಯಾ ೧೦೦

ವ॥ ಅಂತಳುರ್ವ ಹೋಮಕುಂಡದ ಸಮೀಪದೊಳ್ ಕುಳ್ಳಿರ್ದು

ಕಂ॥ ಆ ವಿಕಟವರ್ಮನೃಪತಿಯ
ಜೀವನಮಲ್ಲಾಡುವಂತೆ ಘಂಟೆಯನಾಗಳ್
ಭಾವಿಸಿಯಲ್ಲಾಡಿದೆನಾ
ಶಾವಳಯಮನದಟಿ ಘೋರರವಮೆಯ್ದುವಿನಂ ೧೦೧

ಹಾಗೆ ಮಾಡು.' ವ॥ ಎಂದು ಹೇಳಿ ಅವಳು ಮತ್ತೆ ಆಲಿಂಗಿಸಿಕೊಂಡಳು. ೯೯. ಆಗ ನಾನು ಕಾಲ ಕಳೆಯದೆ ವಿಕಟವರ್ಮನನ್ನು ಈಗಲೆ, ಯಮನ ಮನೆಗೆ ಕಳುಹಿಸುವೆನು. ನೀನು ಹೊಂಗೆಯ ಮರದ ಹಿಂದೆ ಇದ್ದು ನೋಡು" ಎಂದು ನಾನು ಅವಳಿಗೆ ಹೇಳಿದೆನು. ವ॥ ಅವಳನ್ನು ಹೊಂಗೆಯ ಮರದ ಪೊದರಿನಲ್ಲಿರಿಸಿ ನಾನು ಹೋಮಕುಂಡದ ಹತ್ತಿರಕ್ಕೆ ಬಂದೆನು. ೧೦೦. ಮಹಾರಾಜನೆ ! ಹೋಮಾಗ್ನಿಯ ವಿಶೇಷವಾದ ರೂಪವು ನನ್ನ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡಿತು. ವಿಧವಿಧವಾದ ಅಗ್ನಿಜ್ವಾಲೆಗಳ ಗುಂಪು ಆಕಾಶದವರೆಗೆ ಮೇಲೇರಿತ್ತು ಹೊಗೆಯ ಸಮೂಹವು ದಿಕ್ಕುಗಳಿಗೆಲ್ಲ ಹರಡಿದ್ದಿತು. ಕೆಂಡಗಳ ತೀವ್ರವಾದ ಕಾವು ಪಾತಾಳಲೋಕದವರೆಗೆ ಇಳಿದಿದ್ದಿತು. ದೊಡ್ಡ ದೊಡ್ಡ ಬೆಂಕಿಯ ಕಿಡಿಗಳು ಎದ್ದು ಹಾರುತ್ತಿದ್ದುವು. ವ॥ ಹಾಗೆ ಹತ್ತಿ ಉರಿಯುತ್ತಿದ್ದ ಹೋಮಕುಂಡದ ಹತ್ತಿರ ಕುಳಿತು—೧೦೧. ಆ ವಿಕಟವರ್ಮನ ಜೀವವು ಅಲ್ಲಾಡುವಂತೆ ಘಂಟೆಯನ್ನು ಆಗ ಅಲ್ಲಾಡಿಸಿದೆನು. ಅದರ ಘೋರವಾದ

ಅದುಮಿಗೆ [ಪೊಣ್ಮಿತುಂ] ವಿಕಟವರ್ಮನ ಸಂಸ್ಕೃತಿ ಭಾಗ್ಯಮೆಯ್ದೆ
ತೀರ್ದುದನಱಿಪೊಂದು ದುರ್ಧ್ವನಿ ಕೃತಾಂತಲುಲಾಯಗಳ ಪ್ರಬದ್ಧ ಸಂ
ಪದನವಘಂಟಿಕಾಧ್ವನಿ ಯುಗಾಂತ ಮಹೇಶ್ವರನಗ್ರಹಸ್ತದು
ರ್ಬಿದ ಡಮರುಪ್ರತಿಧ್ವನಿಯೆನಲ್ ಮಿಗೆ ಪೊಣ್ಮಿತು ಘಂಟಿಕಾರವಂ ೧೦೨

ವ॥ ಆ ಘಂಟಿಕಾ ಧ್ವನಿಯಂ ವಿಕಟವರ್ಮಂ ಕೇಳ್ದು

ಮಾರಿಯ ಮಂದಿರಕ್ಕೆ ಕುಱಿ ಸಿಂಹಗೃಹಕ್ಕೆ ಮತಂಗಜಂ ಯಮ
ದ್ವಾರಕೆ ಪಾತಕಂ ವಿಷಯ ಸಂತತಿಯಾಶೆಗೆ ಯೋಗಿ ಬರ್ಪವೋಲ್
ಘೋರನೆ ಒರ್ಬನೇ ಮನದ ಸಂಭ್ರಮದಿಂ ನಡೆತಂದನೊಲ್ದು ಘಂ
ಟಾರವದತ್ತಲಾ ವಿಕಟವರ್ಮನೃಪಂ ಸುಭಗತ್ವದಾಸೆಯಿಂ ೧೦೩

ವ॥ ಅಂತು ಬಂದು ಹೋಮಸಮೀಪದೊಳಿರ್ದೆನ್ನಂ ಕಂಡು

ನಿಬಿಡಮತಿನೃಪವರಂ ಬಂ
ದು ಬನದೊಳಾಂಬೇಳ್ವಹೋಮಮಂ ಕಂಡೀಗಳ್
ಅಬಲೇಪೇಳ್ದಂತಾಯ್ತೆಂ
ದು ಬೆಕ್ಕಸಂಬಟ್ಟು ನೋಡಿದಂ ಮದ್ರೂಪಂ ೧೦೪

ಶಬ್ದವು ದಿಗಂತಗಳನ್ನು ತಲಪಿತು. ೧೦೨. ಘಂಟಾಧ್ವನಿಯು ಹರಡಿತು. ಅದು ವಿಕಟವರ್ಮನ ಪೂರ್ವಜನ್ಮದ ಪುಣ್ಯವು ಮುಗಿಯಿತೆಂದು ಸೂಚಿಸುವ ಅಪಶಕುನದ ಧ್ವನಿಯಾಯಿತು. ಅದು ಯಮನ ಕೋಣನ ಕೋರಳಿಗೆ ಕಟ್ಟಿದ ದೊಡ್ಡ ಘಂಟೆಯ ಧ್ವನಿಯಂತಿದ್ದಿತು. ಪ್ರಳಯಕಾಲದ ಮಹೇಶ್ವರನು ತುದಿಗೈಯಲ್ಲಿ ಹಿಡಿದ ಡಮರುಗದ ಪ್ರತಿಧ್ವನಿಯೋ ಎಂಬಂತೆ ತೋರಿತು. ವ॥ ಆ ಘಂಟಾನಾದವನ್ನು ವಿಕಟವರ್ಮನು ಕೇಳಿ—೧೦೩. ಘಂಟಾನಾದವನ್ನು ಕೇಳಿದ ಕೂಡಲೆ ವಿಕಟವರ್ಮರಾಜನು ಒಬ್ಬನೇ ಸಂಭ್ರಮದಿಂದ ಸುಂದರ ರೂಪವನ್ನು ಪಡೆಯುವ ಆಶೆಯಿಂದ ಸಂತೋಷವಾಗಿ ಹೋಮ ಕುಂಡದ ಕಡೆಗೆ ಹೊರಟನು. ಮಾರಿಯ ಮಂದಿರಕ್ಕೆ ಕುಸರಿಯು ನುಸುಳಿದಂತೆ ! ಸಿಂಹದ ವಾಸಸ್ಥಾನಕ್ಕೆ ಆನೆ ಹೋಗುವಂತೆ, ಯಮನ ಮನೆಗೆ ಪಾಪಿಯು ಬರುವಂತೆ, ಯೋಗಿಯು ವಿಷಯ ಸುಖಗಳನ್ನು ಬಯಸಿ ಬರುವಂತೆ ಅವನು ಬಂದನು. ವ॥ ಬಂದು ಹೋಮ ಕುಂಡದ ಹತ್ತಿರವಿದ್ದ ನನ್ನನ್ನು (ಉಪಹಾರವರ್ಮನನ್ನು) ಕಂಡು—೧೦೪. ಮಂದ ಬುದ್ಧಿಯುಳ್ಳ ಆತನು ವನದಲ್ಲಿ ನಾನು ಮಾಡಿದ ಹೋಮವನ್ನು ನೋಡಿ "ಅಬಲೇ ! ಈಗ ನೀನು ಹೇಳಿದ ಹಾಗೆಯೇ ಆಯಿತು." ಎಂದು ಹೇಳಿ ಆಶ್ಚರ್ಯದಿಂದ ನನ್ನ

ವ॥ ಅಂತೆನ್ನಂ ನೋಳ್ಪ ವಿಕಟವರ್ಮನನಾನಿಂತೆಂದು

ಮುನ್ನಮತೀವ ಕಷ್ಟಮೆನಿಪಾಕೃತಿಯಾಗಿಯುಮೊಲ್ದನೇಕ ಧೂ
ರ್ತೋನ್ನತಿಯುಂ ನೆಗಳ್ಚುವೆ ನೃಪಾಲಕ ಕೇಳ್ ನಿನಗಿಂದು ದೈವದಿಂ
ಚೆನ್ನತರಂಬರಲ್ ದ್ವಿಗುಣಮಾಗದೆ ಮಾಳ್ಪುದೆ ನಿನ್ನ ಧೂರ್ತು ಪೇಳ್
ಮುನ್ನಿನಚೆಂದಮಲ್ಲದೊಡೆ ತದ್ವಿಧಮುಂ ನಿನಗೀವೆನೀಕ್ಷಣಂ ೧೦೫

ವ॥ ಎಂದು ಮತ್ತಂ

ಕಂ॥ ನಿನಗಾದೊಡೀಗ ದೇವಾಂ
ಗನೆಯುರನನುಭವಿಪ ಚೆಲ್ವ ರೂಪಾದಪುದೆ
ನ್ನನುದಾಸೀನಂ ಮಾಡದೆ
ಮನವೊಸದಿರ್ಪೊಡೆ ಮದೀಯ ಮೂರ್ತಿಯನೀವೆಂ ೧೦೬

ನೀನಿಂತು ಪೇಳ್ವುದಂ ಮ
ತ್ತಾನೆಂತುಂ ಮೀಱಿದಪ್ಪೆನಾದೊಡೆ ಬೞಿಕಿಂ
ತಾನಿಹಲೋಕ ಸುಖಾತಿಶ
ಮಾನುನಯಕ್ಕೆಯ್ದೆ ಬಾಹ್ಯನಾಗೆನೆ ಸತತಂ ೧೦೭

ವ॥ ಎಂದವಂ ಪೇೞಲ್ ಬೞಿಕಾನಿಂತೆಂದಂ

ರೂಪವನ್ನು ನೋಡಿದನು. ವ॥ ನನ್ನನ್ನು ಹಾಗೆ ನೋಡುತ್ತಿದ್ದ ವಿಕಟವರ್ಮನಿಗೆ ನಾನು ಹೇಳಿದೆನು.—೧೦೫. "ಮಹಾರಾಜನೆ ! ಮೊದಲು ಅತಿ ಕಷ್ಟಕರವಾದ ಕುರೂಪವನ್ನು ಹೊಂದಿರುವಾಗಲೇ ಅನೇಕ ಧೂರ್ತರಿಗೆ ಉನ್ನತಿಯನ್ನುಂಟುಮಾಡಿದೆ. ನಿನಗೀಗ ಅದೃಷ್ಟವಶಾತ್ ಸುಂದರವಾದ ರೂಪವು ಬಂದರೆ ನಿನ್ನ ಧೂರ್ತತನವು ಅದಕ್ಕೆರಡರಷ್ಟು ಆಗದೇ ಇರುತ್ತದೆಯೇ ? ಹೇಳು. ಮೊದಲಿನ ರೀತಿಯಲ್ಲಿ ಧೂರ್ತತನವನ್ನು ಮಾಡದೇ ಇರುವಹಾಗಿದ್ದರೆ ಈ ನನ್ನ ರೂಪವನ್ನು ನಿನಗೆ ಕೊಡುವೆನು." ವ॥ ಎಂದು ಹೇಳಿ ಮತ್ತೆ—೧೦೬. "ನಿನಗಾದರೋ ಈಗ ದೇವಾಂಗನೆಯರು ಅನುಭವಿಸುವಂಥ ಸುಂದರವಾದ ರೂಪವು ಬರುತ್ತದೆ. ನನ್ನನ್ನು ಉದಾಸೀನ ಮಾಡದೆ ಪ್ರೀತಿಯಿಂದ ಇರುವುದಾದರೆ ನನ್ನ ಆಕಾರವನ್ನು ನಿನಗೆ ಕೊಡುವೆನು. ೧೦೭. "ನೀನು ಹೇಳುವ ಮಾತನ್ನು ನಾನೆಂದಾದರೂ ಮೀರಲು ಸಾಧ್ಯವೇ ? ಆದರೆ ಬಳಿಕ ನಾನು ಹೀಗೆ ಇಹಲೋಕದ ವಿಶೇಷವಾದ ಸುಖಾನುಭವಕ್ಕೆ ಬಾಹ್ಯನಾಗುವುದಿಲ್ಲವಷ್ಟೆ ?" ವ॥ ಎಂದು ಅವನು

ಕಂ॥ ಮುನ್ನೆಸೆದ ಕಾರ್ಯಮುಳ್ಳೊಡ
ಮೆನ್ನೊಳ್‌ಪೇೞ್ದಿರಿಸು ರೂಪ ಪಲ್ಲಟಮಾಗಲ್
ನಿನ್ನ ಮತಿಚಲಿಸಿ ನಿಜ ಕಾ
ರ್ಯೋನ್ನತಿ ಕಿಡುಗುಂ ಬೞಿಕ್ಕ ಕೇಳ್ ಭೂಪಾಲಾ ೧೦೮

ವ॥ ಎಂಬುದುಮವಂ ತನ್ನೊಳ್ ಮುನ್ನಂ ನಿಶ್ಚಯಮಾಗಿರ್ದ ಕಾರ್ಯಮನೆನ್ನೊಳಿಂ
ತೆಂದಂ

ಕಂ॥ ಉಱುವಂ ಪ್ರಹಾರವರ್ಮಂ
ಕಿಱಿಯಯ್ಯಂ ತದ್ಧರೇಶನಿನ್ನಾತನನೆ
ಚ್ಚಱದಂತೆ ಜೀರ್ಣಮಾಯ್ತೆಂ
ಬಱಿಕೆಯು ನೆವದಿಂದೆ ಕೊಲ್ವುದಾ ಬಂಧನದೊಳ್ ೧೦೯

ಶತಹಲಿಯನಂತಹಲಿಗಳ್
ಪ್ರತಿಪಕ್ಷಿಗಳಾಗಿ ತಮ್ಮೊಳಿರ್ದಪರಾ ಶೂ
ದ್ರತಮರನೊರ್ಬರನೊರ್ಬರೊ
ಳತಿಮಥನಮನೆಸಗಿ ಕೊಳ್ವುದವರೊಡಮೆಗಳಂ ೧೧೦

ಪದಪಿಂದೆ ಧನಜನಂ ಪೆ
ರ್ಚಿದ ಪೌಂಡ್ರಕದೇಶಮೆಲ್ಲಮಂ ಕಿಡಿಸೆಂದಾ
ಮೊದಲೊಳ್ ಪೇೞ್ದನದಿನ್ನಾ
ಗದೆಂದು ಪೇೞ್ವೆಂ ಮಗುೞ್ದು ಸಚಿವರೊಳೊಲವಿಂ ೧೧೧

ಹೇಳಿದನು. ಬಳಿಕ ನಾನು ಹೀಗೆ ಹೇಳಿದೆನು. ೧೦೮. ಮೊದಲೆ ನೀನು ಯೋಚಿಸಿ ಕೊಂಡಿರುವ ಕೆಲಸಗಳಿದ್ದರೆ ಅವನ್ನು ನನಗೆ ಹೇಳಿಡು. ಭೂಪಾಲ! ರೂಪವ್ಯತ್ಯಾಸವಾದ ಮೇಲೆ ನಿನ್ನ ಬುದ್ಧಿಯು ಬದಲಾಗಿ ಬಳಿಕ ನಿನ್ನ ಕಾರ್ಯಗಳು ಕೆಡುವುವು.” ವ॥ ಎಂದು ನಾನು ಹೇಳಿದೆನು. ಅದನ್ನು ಕೇಳಿ ವಿಕಟವರ್ಮನು ತಾನು ಮೊದಲೆ ನಿಶ್ಚಯಿಸಿ ಕೊಂಡಿದ್ದ ಕಾರ್ಯವನ್ನು ನನಗೆ ಹೀಗೆ ಹೇಳಿದನು. ೧೦೯. “ಚಿಕ್ಕಪ್ಪನಾದ ಮಹಾರಾಜ ಪ್ರಹಾರವರ್ಮನು ಬಲಶಾಲಿ ಆತನನ್ನು ಎಚ್ಚರವಾಗದಂತೆ ಮಾಡಿ ತಾನಾಗಿ ಜೀರ್ಣನಾಗಿ ಸತ್ತನೆಂದು ಎಲ್ಲರೂ ತಿಳಿಯುವಂತೆ ಬಂಧನದಲ್ಲಿಯೇ ಕೊಂದು ಹಾಕಬೇಕು. ೧೧೦. ಶತಹಲಿ ಅನಂತಹಲಿ ಎಂಬವರು ತಮ್ಮ ತಮ್ಮಲ್ಲಿ ಶತ್ರುಗಳಾಗಿದ್ದಾರೆ. ಆ ಶೂದ್ರಶ್ರೇಷ್ಠರು ಒಬ್ಬರು ಇನ್ನೊಬ್ಬರೊಡನೆ ಹೊಡೆದಾಡುವಂತೆ ಮಾಡಿ ಅವರ ಐಶ್ವರ್ಯಗಳನ್ನು ಕಿತ್ತುಕೊಳ್ಳಬೇಕು. ೧೧೧. ಧನ ಬಲ ಜನ ಬಲದಿಂದ ಬಲಶಾಲಿಯಾದ ಪೌಂಡ್ರಕ ದೇಶವನ್ನೆಲ್ಲ ಕೆಡಿಸಬೇಕೆಂದು ಮೊದಲೆ ಹೇಳಿದ್ದೆನು. ಇನ್ನು

ಕಂ॥ ಮಣಿಯೊಂದನಿಲ್ಲಿಗೊರ್ಬಂ
ವಣಿಗ್ವರಂ ತಂದನದಱಮೌಲ್ಯಮನಿಂತೀ
ಕ್ಷಣದೊಳ್ ಲಾಘವಮಪ್ಪಂ
ತಣಿಯುರವಮಾಡುತ್ತೆ ಕೊಳ್ವುದೆಂದಾಂ ಪೇೞ್ದಂ ೧೧೨

ವ॥ ಎಂದೀ ರಹಸ್ಯ ಕಾರ್ಯಮನೆಲ್ಲಮನೆನಗೆ ಪೇೞಲನಂತರಂ

ನಿನಗೀದಿತ್ತೆನಿದಲ್ತೆ ಸಂಸೃತಿಯ ಸೌಖ್ಯಂ ಜೀವನಂ ನಿನ್ನ ಪೂ
ರ್ವ ನಿಬದ್ಧ ಸ್ಥಿತಿ ಪುಣ್ಯ ಪಾಪಫಲಮಿನ್ನೇತಿರ್ದದೇತಿರ್ಕೆ ಪೋ
ಗೆನುತುಂ ತಳ್ಕಿಸಿಕೊಂಡು ಹೋಮಶಿಖಿಯೊಳ್ ತದ್ಭೂಪನಂನೂಂಕಿ
ಚಂ ದನಕರ್ಪೂರಮನಾಂ ಬಿಸುಟ್ಟೆನವಱೊಳ್ ಕೌಣಪೀಟದಂತಿರ್ಪವೋಲ್ ೧೧೩

ವ॥ ಅಂತಾನವನಂ ಹೋಮಶಿಖಿಯೊಳ್ನೂಂಕಲವಂ ಭಸ್ಮಾವಶೇಷನಾಗಲೊಡಂ

ಕಂ॥ ಅತಿಸಾಹಸ ನಿಜಕಾರ್ಯೋ
ನ್ನತಿಯಿಂ ತದ್ವಿಕಟವರ್ಮಭೂಪನ ಮರಣ
ಸ್ಥಿತಿಯಂ ಕಂಡಂಜಿ ಮನೋ
ಗತ ಚಿಂತೆಯೊಳೆಯ್ದೆ ನಡುಗಿದಳ್ ಸತಿಯಾಗಳ್ ೧೧೪

ಅದನ್ನು ಮಾಡಬೇಕಾಗಿಲ್ಲ ಎಂದು ಮತ್ತೆ ಸಚಿವರಿಗೆ ಹೇಳಬೇಕು. ೧೧೨. ಒಬ್ಬ ವರ್ತಕ ಶ್ರೇಷ್ಠನು ಇಲ್ಲಿಗೆ ಒಂದು ಮಣಿಯನ್ನು ತಂದಿದ್ದಾನೆ. ಈ ಕ್ಷಣದಲ್ಲಿ ಅಗ್ಗವಾದ ಬೆಲೆಯಿಂದ ಅದನ್ನು ಬೇಗ ಕೊಳ್ಳಬೇಕು ಎಂದು ನಾನು ಹೇಳಿದ್ದೇನೆ." ವ।। ಹೀಗೆ ತಾನು ಮಾಡಬೇಕಾದ ರಹಸ್ಯ ಕಾರ್ಯಗಳನ್ನೆಲ್ಲ ನನಗೆ ಹೇಳಿದನು. ಅನಂತರ—೧೧೩. "ನಿನಗೆ ಇಂದು ಜನ್ಮಾಂತರ ಕರ್ಮಫಲವಾದ ಸೌಖ್ಯವನ್ನೂ ಜೀವನವನ್ನೂ ಇದೋ ಕೊಟ್ಟಿದ್ದೇನೆ. ನಿನ್ನ ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಪಾಪಗಳ ಫಲವು ಹೇಗಾದರೂ ಇರಲಿ. ಹೋಗು' ಎಂದು ಹೇಳುತ್ತಾ ತಳ್ಳಿಕೊಂಡು ಹೋಗಿ ಆ ವಿಕಟವರ್ಮರಾಜನನ್ನು ಹೋಮಾಗ್ನಿಯಲ್ಲಿ ತಳ್ಳಿದೆನು ! ಕೆಟ್ಟವಾಸನೆ ಬರದ ಹಾಗೆ ಅದರಲ್ಲಿ ಚಂದನ ಕರ್ಪೂರಗಳನ್ನು ಹಾಕಿದೆನು. ವ।। ಹೋಮಾಗ್ನಿಯಲ್ಲಿ ತಳ್ಳಲು ಅವನು ಸುಟ್ಟು ಬೂದಿಯಾಗಿ ಹೋದನು.—೧೧೪. ಅತಿ ಸಾಹಸವುಳ್ಳ ನನ್ನ ಪ್ರಯತ್ನದಿಂದ ವಿಕಟವರ್ಮರಾಜನು ಸತ್ತನು. ಇದನ್ನು ನೋಡಿ ಆಗ ಆ ಕಲ್ಪಸುಂದರಿಯು ಅಂಜಿ ಚಿಂತೆಯಿಂದ ತುಂಬ

ವ॥ ಅಂತು ಭಯಾತುರೆಯಾಗುತ್ತುಂ ಬಂದು

ಆದಿಯೊಳಂಗಜಂ ಜನಕನಾಗಿ ಕರಂ ನಿನಗಿತ್ತನೆನ್ನನಿಂ
ದಾದರದಿಂದೆ ಹೋಮಶಿಖಿಸಾಕ್ಷಿಯೊಳೊಪ್ಪಿರಲೆನ್ನನಾಂ ನಿಜಾ
ಹ್ಲಾದದಿನಿತ್ತೆನೆಂದಬಲೆ ತನ್ನನುರಾಗದೊಳೆನ್ನನಪ್ಪಿ ಸಂ
ಮೋದದೊಳೋಷ್ಠಮಂ ಪಿಡಿದು ಚುಂಬಿಸಿದಳ್ ತಣಿವಪ್ಪ ಮಾಳ್ಕೆಯಿಂ ೧೧೫

ವ॥ ಅಂತಪ್ಪಿದಳಂ

ಮಗುಟಿಪ್ಪಾಲಿಂಗನಚುಂಬನಕ್ರಿಯೆಗಳಿಂ ಸಂತೋಷಸಂಭೂತ ಸೂ
ಕ್ತಿಗಳಿಂ ಪ್ರೇಮರಸಾತಿರೇಕಗತಿಯಿಂದಾನಾಗಳುತ್ಸಾಹದಿಂ
ಮೃಗಶಾಬಾಕ್ಷಿಯ ಭೀತಿಯಂ ಬಿಡಿಸಿ ಪೆಂಪಿಂದವಳ್ಗೂಡಿ ರಾ
ಜ ಗೃಹಕ್ಕೆಯ್ದಿದೆನೆಲ್ಲರೀಕ್ಷಿಸುತಿರಲ್ ಮದ್ಗೇಹಕೆಯ್ತರ್ಪವೋಲ್ ೧೧೬

ಪಳಿಕಿನ ಬದ್ಧಭೂಮಿಕೆಯಿನುಜ್ಜ್ವಲ ಶಂಖನಿಘೃಷ್ಟ ಭಿತ್ತಿ ಮಂ
ಗಳಮಯ ನವ್ಯಚಿತ್ರತತಿಯಿಂ ಮಣಿತೂಣನಿಬದ್ಧ ಪುತ್ರಿಕಾ
ಕುಳದಿನನೂನನಿರ್ಮಳವಿತಾನಸಮುನ್ನತ ಶೋಣ ರತ್ನ ಸ
ತ್ಕಳಶದಿನೊಪ್ಪುತಿರ್ಪನೃಪಗೇಹಮನಾಂ ಪುಗುತಂದೆನುರ್ವಿಪಾ ೧೧೭

ನಡುಗಿದಳು. ವ॥ ಹಾಗೆ ಭಯಗ್ರಸ್ತಳಾಗಿ ಬಂದು—೧೧೫. 'ಮೊದಲು ಮದನನು ತಂದೆಯಾಗಿ ನನ್ನನ್ನು ನಿನಗೆ ಕೊಟ್ಟನು. ಇಂದು ಆದರದಿಂದ ಹೋಮಾಗ್ನಿಯ ಸಾಕ್ಷಿಯಾಗಿ ನಾನು ನನ್ನನ್ನು ಸಂತೋಷದಿಂದ ನಿನಗೆ ಕೊಟ್ಟಿದ್ದೇನೆ.' ಎಂದು ಹೇಳಿ ಕಲ್ಪ ಸುಂದರಿಯು ಅಧಿಕಾನುರಾಗದಿಂದ ನನ್ನನ್ನು ತಬ್ಬಿಕೊಂಡಳು. ಮತ್ತು ನನ್ನ ತುಟಿಯನ್ನು ಬಗ್ಗಿಸಿ ಕೊಂಡು ತೃಪ್ತಿಯಾಗುವವರೆಗೂ ಚುಂಬಿಸಿದಳು. ವ॥ ಹಾಗೆ ತಬ್ಬಿಕೊಂಡವಳನ್ನು— ೧೧೬. ಆಲಿಂಗನ ಚುಂಬನಗಳಿಂದಲೂ, ಸಂತೋಷದಿಂದ ಹೊರ ಹೊಮ್ಮಿದ ಇನಿದಾದ ಮಾತುಗಳಿಂದಲೂ, ಪ್ರೇಮರಸವು ಮೀರಿ ಹರಿಯುವ ವ್ಯಾಪಾರಗಳಿಂದಲೂ, ಉತ್ಸಾಹದಿಂದಲೂ, ಆ ಹರಿಣಾಕ್ಷಿಯ ಭಯವನ್ನು ಬಿಡಿಸಿದೆನು. ಮತ್ತೆ ಅವಳೊಡನೆ ಎಲ್ಲರೂ ನೋಡುತ್ತಿರುವಂತೆ ನನ್ನ ಮನೆಗೇ ಬರುವಂತೆ ಅರಮನೆಯನ್ನು ಪ್ರವೇಶಿಸಿದೆನು. ೧೧೭. ಮಹಾರಾಜನೆ! ನೆಲವು ಸ್ಫಟಿಕ ರತ್ನದಿಂದ ರಚಿತವಾಗಿತ್ತು. ಉಜ್ಜ್ವಲವಾದ ಶಂಖದ ಸುಣ್ಣ ಹಚ್ಚಿ ಹೊಳೆಯುತ್ತಿದ್ದ ಗೋಡೆಯಲ್ಲಿ ಮಂಗಳಮಯವಾದ ನೂತನ ವಿಧವಾದ ಚಿತ್ರಗಳು ರಂಜಿಸುತ್ತಿದ್ದುವು. ರತ್ನದ ಕಂಭಗಳಲ್ಲಿ ಸಾಲಭಂಜಿಕೆಗಳನ್ನು ಕೂಡಿಸಲಾಗಿದ್ದಿತು. ಶ್ರೇಷ್ಠವಾದ ನಿರ್ಮಲವಾದ ಮೇಲು ಕಟ್ಟುಗಳಿಂದ ಶೋಭಿಸುತ್ತಿದ್ದಿತು. ಅರಮನೆಯು ಎತ್ತರವಾದ ಕೆಂಪು ರತ್ನಗಳ ಕಲಶದಿಂದ ಶೋಭಿಸುತ್ತಿತ್ತು. ಇಂಥ ಸುಂದರವಾದ

ಕಂ॥ ಸತಿಬಂದೆಸಗಿದ ಹೋಮೋ
ತ್ಥಿತಧೂಮಸ್ತೋಮಮೆಯ್ದೆ ಪರ್ಬಲ್ಕೆತಿರೋ
ಹಿತನಾದನೆಂಬ ತೆಱದಿಂ
ದೆ ತರಣಿಯಪರಾಂಬುರಾಶಿಯಂ ಮುಱುಗೊಂಡಂ ೧೧೮

ವ॥ ಅಂತು ಸೂರ್ಯಾಸ್ತಮಾನಮಾಗಲೊಡಂ ಸಜ್ಜೆಯ ಮನೆಯೊಳ್ ಕಲ್ಪಸುಂದರಿ ಸಹಿತಮಾನಿರ್ದು

ಕಂ॥ ಅಂತಃಪುರದವರ್ಗಳ್ ಪೆಸ
ರಂ ತರತರದಿಂದೆ ಕಲ್ಪಸುಂದರಿಯಿಂ ಕೇ
ಳ್ದಂ ತವರೆಲ್ಲರನುಪಚಾ
ರಂ ತವೆಮೆಱೆಯಲ್ಕೆ ಕರೆದು ಮಿಗೆ ಮನ್ನಿಸಿದೆಂ ೧೧೯

ವ॥ ಅಂತವರು ಮನ್ನಿಸಿಯಾರಾತ್ರಿಯಂ ಕಳಿಯೆ

ಕಂ॥ ಉದಯಾದ್ರಿ ಸಿಂಹ ಪೀಡಾ
ಭ್ಯುದಯಮನೊಸೆದೆಯ್ದೆ ಪಂಕಜಪ್ರಿಯನುರ್ವೀ
ಮುದವನೊಡರ್ಚಿದನಂತ
ಲ್ತೆದಲುತ್ತಮರಪ್ಪ ಪುರುಷರಾದವರುದಯಂ ೧೨೦

ವ॥ ಅಂತು ಸೂರ್ಯೋದಯಮಾಗಲಾನುದಯ ವ್ಯಾಪಾರಮಂ ತೀರ್ಚಿ ನವರತ್ನ ರಂಜಿತ ಮಣಿಮಯವೇದಿಕಾ ಸುಧಾಮಯ ಭಿತ್ತಿಭಾಗದಿಂ, ಸ್ಫಟಿಕ ಪಾಷಾಣಘಟ್ಟಿತ ಕುಟ್ಟಿಮ ತಳದಿಂ, ಕದಂಬ ಮಣಿ ಕಮನೀಯಾಲಂಬಿತ ಭೂಷಣದಿಂ ದೀಪಿತ ಸೋಪಾನದಿಂ, ಮೆಱೆವಾ

ಅರಮನೆಗೆ ನಾನು ಬಂದೆನು. ೧೧೮. ಕಲ್ಪಸುಂದರಿಯು ಮಾಡಿದ ಹೋಮದಿಂದ ಮೇಲೆದ್ದ ಹೊಗೆಯ ಸಮೂಹವು ವಿಶೇಷವಾಗಿ ಹರಡಿತು. ಅದರಿಂದ ಮರೆಯಾಗಿ ಹೋದನು ಎಂಬ ತೆರದಿಂದ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು. ವ॥ ಹೀಗೆ ಸೂರ್ಯಾಸ್ತವಾದ ಮೇಲೆ ನಾನು ಶಯ್ಯಾಗೃಹದಲ್ಲಿ ಕಲ್ಪಸುಂದರಿಯೊಡನೆ ಕುಳಿತು— ೧೧೯. ಅಂತಃಪುರದ ಪರಿಚಾರಕ ಪರಿಚಾರಿಕೆಯರ ಹೆಸರನ್ನು ಕಲ್ಪಸುಂದರಿಯಿಂದ ಕೇಳಿ ತಿಳಿದುಕೊಂಡೆನು. ಮತ್ತು ಅವರನ್ನೆಲ್ಲ ಕರೆಯಿಸಿ ಉಪಚರಿಸಿ ಗೌರವಿಸಿದೆನು. ವ॥ ಹಾಗೆ ಅವರನ್ನೆಲ್ಲ ಗೌರವಿಸಿ ಆ ರಾತ್ರಿಯನ್ನು ಕಳೆದೆನು. ೧೨೦. ಕಮಲ ಪ್ರಿಯನಾದ ಸೂರ್ಯನು ಉದಯಪರ್ವತವೆಂಬ ಸಿಂಹಾಸನವನ್ನೇರಿ ಭೂಮಂಡಲಕ್ಕೆ ಆನಂದವನ್ನುಂಟುಮಾಡಿದನು. ಉತ್ತಮರಾದ ಪುರುಷರ ಉನ್ನತಿಯು ನಿಶ್ಚಯವಾಗಿ ಹಾಗೆಯೇ ಅಲ್ಲವೇ ? ವ॥ ಸೂರ್ಯೋದಯವಾದಕೂಡಲೆ ಎದ್ದು ಪ್ರಾತಃ ಕರ್ಮಗಳನ್ನು ಮಾಡಿ ಮುಗಿಸಿದೆನು. ಅನಂತರ ಕಲ್ಪಸುಂದರಿಯೊಡನೆ ಆಸ್ಥಾನ ಮಂಟಪಕ್ಕೆ ಹೋದೆನು. ನವರತ್ನಗಳಿಂದ ರಂಜಿತವಾದ ಮಣಿಮಯ ವೇದಿಕೆಗಳಿಂದಲೂ ಅಮೃತದಂತೆ ಪ್ರಕಾಶಿಸುವ ಗೋಡೆಗಳಿಂದಲೂ, ಸ್ಫಟಿಕದ ಕಲ್ಲುಗಳನ್ನು ಹಾಸಿದ

ಸ್ಥಾನಮಂಟಪಕ್ಕೆ ಕಲ್ಪಸುಂದರಿ ಸಹಿತಂಬರಲೆನಗಿದಿರೆೞ್ದು ಪ್ರಧಾನ ಪಸಾಯಿತ ಸಾಮಂತ ಸಂಧಿ ವಿಗ್ರಹಿಮಂಡಲಿಕಮಾನ್ಯರು ರಾಜಪುತ್ರ ರಾವುತರುಂ, ತಂ ತಮ್ಮ ಸ್ಥಾನದೊಳ್ ಕುಳ್ಳಿರವೇೞುತ್ತುಂ ಕಲ್ಪಸುಂದರಿಯುಮಾನುಂ ಸಿಂಹಾಸನಮನಲಂಕರಿಸಿಯುಂ ಕುಳ್ಳಿರ್ದು ಪ್ರಧಾನರ ಮುಖಮಂ ನೋಡಿ

ಮುನ್ನೆಡೆಗೊಂಡ ದುರ್ಗುಣಚಯಂ ವಿಕಟಾಂಗಮುದೆಯ್ದೆ ಪೋಗಿಸಂ
ಪನ್ನಮೆನಲ್ಕೆ ಸದ್ಗುಣಗಣಂ ಸುಭಗಾಕೃತಿ [ಯೆಂಬಿವೆ]ನ್ನೊಳೀ
ಗನ್ನೆಲಸಿ ತದರ್ಕನುಗುಣಂಗಳೆನಲ್ ನಿಜಕಾರ್ಯಮಂ ಮಗು
ೞ್ದನ್ನೆಸಗಲ್ಕೆ ಪೇೞ್ವುದೊಸೆದೆಂದೆನಿದಂ ನಲವಿಂ ಪ್ರಧಾನರೊಳ್ ೧೨೧

ವ॥ ಅದೆಂತೆನೆ–ಮುನ್ನಮಾಳೋಚಿಸಿದ ರಹಸ್ಯ ಕಾರ್ಯಮಂ ನೀಮಿಂತುಗೆಯ್ಯಿಮೆಂದು

ಕಂ॥ ಮುನ್ನಂ ವಿಚಾರಿಸಿದ ಪೊಸ
ರನ್ನಮನತಿಹೀನಮೂಲ್ಯಮಂ ಕಾಣಲ್ಕೇ
ಕಿನ್ನಾ ವಣಿಕ್ಪತಿಯ ಚಿ
ತ್ತನ್ನಲಿವನಿತರ್ಥಮಿತ್ತು ಕೊಳ್ವುದು ಮಣಿಯಂ ೧೨೨

ಇರ್ಬರ್ ಶೂದ್ರರ್ ಕಾಂಚನ
ಗರ್ಬದಿನೊರ್ಬೊರ್ಬರೊಳ್ ವಿವಾದಿಸಿದವರ್ಗಿಂ
ದಿರ್ಬಾಗಮನೆಸಗಿದರಾ
ಕೊರ್ಬಂ ತಗ್ಗಿಸುವೆನವರ್ಗಳಂ ಕರೆಯೆಂದೆಂ ೧೨೩

ನೆಲದಿಂದಲೂ, ಬಗೆ ಬಗೆಯ (?) ರತ್ನಗಳಿಂದ ಮನೋಹರವಾದ ಜೋಲು ಹಾಕಿರುವ ಒಡವೆಗಳಿಂದ ಬೆಳಗುವ ಸೋಪಾನಗಳಿಂದಲೂ, ಅದು ಮೆರೆಯುತ್ತಿತ್ತು. ಆಸ್ಥಾನವನ್ನು ಹೊಕ್ಕ ನಾನು (ಉಪಹಾರವರ್ಮನು) ಎದುರುಗೊಂಡು ಎದ್ದ ಪ್ರಧಾನಮಂತ್ರಿ, ಉಗ್ರಾಣದ ಅಧಿಕಾರಿ, ಸಾಮಂತರು, ಸಂಧಿ ವಿಗ್ರಹಿಗಳು, ಮಂಡಲಿಕರು, ಮಾನ್ಯರಾದ ರಾಜಪುತ್ರರು, ರಾವುತರು–ಎಲ್ಲರನ್ನೂ ಅವರವರ ಸ್ಥಾನದಲ್ಲಿ ಕುಳಿತುಕೊಳ್ಳುವಂತೆ ಹೇಳಿದೆನು. ಅನಂತರ ನಾನೂ ಕಲ್ಪಸುಂದರಿಯೂ ಸಿಂಹಾಸನದಮೇಲೆ ಕುಳಿತು ಪ್ರಧಾನರ ಮುಖವನ್ನು ನೋಡಿ—೧೨೧. ಮೊದಲು ನನ್ನಲ್ಲಿದ್ದ ದುರ್ಗುಣಗಳೂ ವಿಕಾರವಾದ ರೂಪವೂ ಹೋಗಿಬಿಟ್ಟಿತು. ಸದ್ಗುಣಗಳೂ ಸುಂದರ ರೂಪವೂ ಈಗ ನನ್ನಲ್ಲಿ ನೆಲಸಿವೆ. ಅದಕ್ಕೆ ಅನುಗುಣವಾದ ಕೆಲಸಗಳನ್ನು ಮಾಡಲು ಹೇಳಬೇಕೆಂದಿದ್ದೇನೆ. ಎಂದು ಪ್ರಧಾನರಿಗೆ ಹೇಳಿದೆನು. ವ॥ (ಅದು ಹೇಗೆಂದರೆ) ಮೊದಲು ಆಲೋಚಿಸಿದ ರಹಸ್ಯ ಕಾರ್ಯವನ್ನು ನೀವು ಹೀಗೆ ಮಾಡಿರಿ. ೧೨೨. ಮೊದಲು ವಿಚಾರಿಸಿದ್ದ ಹೊಸರತ್ನವನ್ನು ಅತಿ ಕಡಿಮೆ ಬೆಲೆಗೆ ಕೊಳ್ಳಬೇಕಾಗಿಲ್ಲ. ಆ ವರ್ತಕನ ಮನಸ್ಸಿಗೆ ಸಂತೋಷವಾಗುವಷ್ಟು ಹಣವನ್ನು ಕೊಟ್ಟು ರತ್ನವನ್ನು ಕೊಳ್ಳಬೇಕು. ೧೨೩. ಇಬ್ಬರು ಶೂದ್ರರು ಚಿನ್ನ ಹೆಚ್ಚಾಗಿ ಗರ್ವದಿಂದ ಪರಸ್ಪರ ಹೊಡೆದಾಡುತ್ತಿದ್ದಾರೆ. ಅವರಿಗೆ ಅದನ್ನು ಎರಡು ಭಾಗಮಾಡಿಕೊಟ್ಟು ಅವರ ಕೊಬ್ಬನ್ನಿಳಿಸುವೆನು. ಅವರುಗಳನ್ನು ಕರೆ.

ಮುಳಿಸಿಂ ಪೌಂಡ್ರಕದೇಶವ
ನಟಿಯಲ್ ಬೇಡೀಗ ಬಹಳ ದುರ್ಭಿಕ್ಷದ ಕೋ
ಟಲೆಯೊಂದಲ್ಲಿಯು ಜನಮಿ
ತ್ತಲೆಬರ್ಕುಂ ತನಗೆತಾನೆ ಸಮ್ಮುದದಿಂದಂ ೧೨೪

ನೆಲಸಿರ್ಕುಂ ಮಿಗೆ ದುರ್ಯಶಂ ನರಕಮುಕ್ಕುಂ ಪೆರ್ಚಿದಾಯುಷ್ಯಮೆ
ಯ್ದುಬೆಗುಂ ಬಂಧುಜನಂ ಸಮಸ್ತಪರಿವಾರಂ ಪೇಸುಗುಂ ವ್ಯೈಮೆ ದು
ರ್ಬಲಮುಕ್ಕುಂ ಕಿಜಿಯುಯ್ಯನಂ ಕೊಲಿಸಲಿನ್ನಂತಾತನಂ ಬಿಟ್ಟುತ
ನ್ನೊಲವಿಂ ರಾಜ್ಯಮುನಾಳ್ವವೋಲೆಸಗಿಮೆಂದಾಂಪೇಟ್ದೆನುದೆಲ್ಲರೊಳ್ ೧೨೫

ವ॥ ಎಂದಿವು ಮೊದಲಾದ ಪೂರ್ವರಹಸ್ಯ ಕಾರ್ಯಮುಂ ಪ್ರಕಟಿಸುವುದುಂ ಸಭಾಸದರೆಲ್ಲರ್ ವಿಸ್ಮಯ ಸ್ವಾಂತರಾಗಿ

ಭುವನದೊಳೀಕ್ಷಿಸಲ್ಕೆ ಪತಿಭಕ್ತಿಯೊಳಾವಳೊ ಕಲ್ಪ ಸುಂದರೀ
ಯುವತಿಯವೋಲ್ ಮನೋಭವ ಸಮಾನ ನಿಜಾಕೃತಿಯುಂ ಧರಾಧಿಪಂ
ಗವಚಿಜಿದೊಲ್ದುಮಾಡಿದಳೆನುತ್ತೆ ಸಭಾಸದರಟ್ಟಿಯಿಂಮದೀ
ಯ ವಿವಿಧ ಮೂರ್ತಿಯುಂ ಪದೆಪಿನಿಂ ಪರಿಭಾವಿಸಿದರ್ ಧರಾಧಿಪಾ ೧೨೬

ವ॥ ಅಂತವರೆನ್ನ ಮೂರ್ತಿಯನೆವೆಯಿಕ್ಕದೆ ನೋಡಿ ಸಂತೋಷಂಬಟ್ಟು ರಹಸ್ಯ ಕಾರ್ಯಮನಾಂ ಪೇಟ್ದಂದದಿನೆಸಗಲನಂತರಂ

೧೨೪. ಕೋಪದಿಂದ ಪೌಂಡ್ರಕ ದೇಶವನ್ನು ನಾಶಮಾಡಬೇಡ. ಈಗ ಅಲ್ಲಿ ಕ್ಷಾಮದ ತೊಂದರೆ ಹೆಚ್ಚಾಗಿ ಜನರೆಲ್ಲರೂ ತಾವಾಗಿಯೇ ಸಂತೋಷದಿಂದ ಇತ್ತ ಕಡೆ ಬರುತ್ತಿದ್ದಾರೆ. ೧೨೫. ಚಿಕ್ಕಪ್ಪನನ್ನು ಕೊಲ್ಲಿಸಿದರೆ ಕೆಟ್ಟ ಹೆಸರು ಬರುತ್ತದೆ. ನರಕವು ಉಂಟಾಗುತ್ತದೆ. ದೀರ್ಘವಾದ ಆಯುಷ್ಯವು ಕಡಿಮೆಯಾಗುತ್ತದೆ. ಬಂಧುಗಳೂ ಎಲ್ಲ ಪರಿವಾರದವರೂ ಹೇಸಿಕೊಳ್ಳುತ್ತಾರೆ. ಮಹತ್ವವು ಸಡಿಲವಾಗುತ್ತದೆ. ಆದುದರಿಂದ ಅವನನ್ನು ಬಂಧನದಿಂದ ಬಿಟ್ಟು ಬಿಡಿ. ಮತ್ತು ಅವನು ಸಂತೋಷದಿಂದ ರಾಜ್ಯವನ್ನಾಳುವಂತೆ ಮಾಡಿರಿ" ಎಂದು ಎಲ್ಲರ ನಡುವೆ ಹೇಳಿದೆನು. ವ॥ ಇವೇ ಮೊದಲಾದ ಹಿಂದಿನ ರಹಸ್ಯ ಕಾರ್ಯಗಳನ್ನೆಲ್ಲ ಪ್ರಕಟಿಸಲು ಸಭಾಸದರೆಲ್ಲರೂ ಆಶ್ಚರ್ಯಗೊಂಡರು. ೧೨೬. 'ಮಹಾರಾಜನೇ! ಈ ಪ್ರಪಂಚದಲ್ಲಿ ಪತಿಭಕ್ತಿಯಲ್ಲಿ ಕಲ್ಪಸುಂದರಿಗೆ ಸಮಾನರಾದವರು ಯಾರಿದ್ದಾರೆ ? ರಾಜನಿಗೆ ಮದನನಿಗೆ ಸಮಾನವಾದ ಆಕೃತಿಯನ್ನು ತಂದುಕೊಟ್ಟಳು.' ಎಂದು ಸಭಾಸದರೆಲ್ಲರೂ ಹೇಳುತ್ತಾ ನನ್ನ ಸುಂದರವಾದ ಆಕಾರವನ್ನು ರಾಜನದೆಂದೇ ತಿಳಿದರು. ವ॥ ಹಾಗೆ ಅವರು ನನ್ನ ಆಕಾರವನ್ನು ಎವೆಯಿಕ್ಕದೆ ನೋಡಿ ಸಂತೋಷ ಹೊಂದಿದರು. ಮತ್ತು ನಾನು ಹೇಳಿದಂತೆ ರಹಸ್ಯ

ಕಂ॥ ಅತಿಸನ್ಮತದಿಂ ಮಾತಾ
ಪಿತೃಗಳ ಬಂಧನಮನಾಕ್ಷಣಂ ಕಳೆದು ಸುಖ
ಸ್ಥಿತಿಯುವರ್ಗಪ್ಪಂತಂಘ್ರಿ
ದ್ವಿತಯಂಗಳ್ಗೆಱಗಿದೆಂ ಕರಂ ಮಾನಸದೊಳ್ ೧೨೭

ವ॥ ಬಟಿಕೆಕ್ಕಾಲವಿಂದೆಲ್ಲರಂ ಕಳಿಪಿಯಂತಃಪುರಕ್ಕೆ ಬಂದು ಪಿತೃಮಾತೃಗಳಂ ಕರೆಯಿಸಿ

ನಿಜನಾಮ ಗೋತ್ರಮಂ ಪೇ
ಳ್ದುಜಲಕ್ಕನೆ ಮಾತೃಪಿತೃಗಳೊಪ್ಪುವ ಪದವಾ
ರಿಜ ಯುಗಳಕೆಱಗಿ ನಿಮ್ಮಾ
ತ್ಮಜನಾನುಪಹಾರವರ್ಮನೆಂದವರ್ಗುಸಿರ್ದೆಂ ೧೨೮

ವ॥ ಅಂತು ಪೇಟಲೊಡಂ

ತನುಪುಳಕಂಗಳುಣ್ಮೆ ಮನದುತ್ಸವಮುರ್ಬೆ ನಿರಂತರಂ ತದಾ
ನನವನಲಂಪಿನಿಂದಡರೆನೋಡಿ ಬಟಿಕ್ಕಮುರ್ದಪ್ಪಿ ಪೂರ್ವಕ
ಲ್ಪನಕೃತಪುಣ್ಯವೃಕ್ಷಮೆನಸುಂ ಫಲಮಾಯ್ತೆಮಗೆಂದೆನುತ್ತೆ ಮ
ಜ್ಜನಕನುಮಂತೆ ಮಜ್ಜನನಿಯುಂ ಪೊರೆಯೇರಿದರುರ್ವರಾಧಿಪಾ ೧೨೯

ವ॥ ಅಂತು ಸಂತೋಷಮನೆಯ್ದಿದರ್ಗೆ ಪುನಃ ಪುನಃ ಪ್ರಣತನಾಗಿಯನಂತರಂ

ಸವಿನಯದೊಳಂದು ಸಾಮ್ರಾ
ಜ್ಯಮನೆನ್ನಯ ಜನಕನಂಘ್ರಿಗೊಪ್ಪಿಸಿ ತತ್ಪಾ
ದಮನೋಲಗಿಸುತ್ತುಂ ನಾಂ
ದಿವಸಂಗಳ್ ಕೆಲವುಮಂ ಸುಖಂಮಿಗೆ ಕಟಿದೆಂ ೧೩೦

ಕಾರ್ಯಗಳನ್ನೆಲ್ಲ ಮಾಡಿದರು. ೧೨೭. ಕೂಡಲೇ ತಾಯಿ ತಂದೆಗಳನ್ನು ಬಂಧನದಿಂದ ಬಿಡಿಸಿದೆನು. ಅವರ ಮನಸ್ಸಿಗೆ ಸುಖವುಂಟಾಗುವಂತೆ ಅವರ ಎರಡು ಪಾದಗಳಿಗೂ ನಮಸ್ಕಾರ ಮಾಡಿದೆನು. ವ॥ ಬಳಿಕ ಪ್ರೀತಿಯಿಂದ ಎಲ್ಲರನ್ನೂ ಕಳುಹಿಸಿ ಅಂತಃಪುರಕ್ಕೆ ಬಂದು ತಾಯಿ ತಂದೆಗಳನ್ನು ಕರೆಯಿಸಿ ೧೨೮. ನನ್ನ ಹೆಸರು ಗೋತ್ರಗಳನ್ನು ಹೇಳಿ ತಾಯಿ ತಂದೆಗಳ ಪಾದಕಮಲಗಳಿಗೆ ಕೂಡಲೇ ವಂದಿಸಿದೆನು. 'ನಾನು ನಿಮ್ಮ ಮಗ ಉಪಹಾರವರ್ಮನು' ಎಂದು ಹೇಳಿದೆನು. ವ॥ ಹಾಗೆ ಹೇಳಿದೊಡನೆಯೇ— ೧೨೯. ಮಹಾರಾಜನೇ ! ಕೂಡಲೇ ಅವರ ದೇಹದಲ್ಲಿ ರೋಮಾಂಚವುಂಟಾಯಿತು. ಮನಸ್ಸಿನಲ್ಲಿ ಆನಂದವು ಉಕ್ಕಿತು. ಎಡಬಿಡದೆ ನನ್ನ ಮುಖವನ್ನು ನೋಡಿ ನೋಡಿ ಆನಂದಿಸಿದರು. ಬಳಿಕ ಬಿಗಿಯಾಗಿ ಅಪ್ಪಿಕೊಂಡರು. 'ಪೂರ್ವಜನ್ಮದಲ್ಲಿ ಮಾಡಿದ ಪುಣ್ಯವೆಂಬ ಮರವೀಗ ಫಲ ನೀಡಿತು' ಎಂದು ಹೇಳುತ್ತಾ ನನ್ನ ತಾಯಿ ತಂದೆಗಳಿಬ್ಬರೂ ಸಂತೋಷಿಸಿದರು. ವ॥ ಹೀಗೆ ಸಂತೋಷದ ತುದಿ ಮುಟ್ಟಿದ ಅವರಿಗೆ ಮತ್ತೆ ಮತ್ತೆ ನಮಸ್ಕಾರ ಮಾಡಿದೆನು. ಅನಂತರ— ೧೩೦. ವಿನಯದಿಂದ ಆಗ ಸಾಮ್ರಾಜ್ಯವನ್ನು ತಂದೆಗೆ ಒಪ್ಪಿಸಿದೆನು. ಅವನ ಪಾದ ಸೇವೆ ಮಾಡುತ್ತಾ ಕೆಲವು ದಿವಸಗಳನ್ನು

ವ|| ಅಂತಿರ್ದನಂತರಂ ದೇವರನಱಸುವ ಬಗೆ ಬಂದಿರ್ದುದುಂ

ಘನಚಂಪಾಪುರವಲ್ಲಭಂ ಸುಜನಮಿತ್ರಂ ಭಾವಿಸಲ್ ಸಿಂಹವ
ರ್ಮನೃಪೇಂದ್ರಂ ಮಿಗೆಶತ್ರುಪೀಡೆ ತನಗಾಗಲ್ ನಾಡೆಯುಂ ಮಿತ್ರರಾ
ದ ನರೇಂದ್ರರ್ ಬಲವಾಗಿ ಬರ್ಪುದೆನುತುಂ ಸಂಪ್ರೀತಿಯಿಂ ಪತ್ರಲೇ
ಖನಮಂ ತಾಂ ಕಳಿಪಲ್ ಮನೋಮುದದಿನಾವೆಯ್ತಂದೆವುರ್ವೀಶ್ವರಾ ೧೩೧

ಪರಹಿತಮನೆಸಗಲೆಂದಾ
ದರದಿಂದೆಯ್ತಂದ ಪುಣ್ಯಫಲದಿಂದಾಂ ದೇ
ವರಪದಯುಗಮಂ ಕಂಡೆಂ
ಪಿರಿದುಂ ಸಂಕಲ್ಪಸಿದ್ಧಿಯಾಯ್ತೆನಗೀಗಳ್ ೧೩೨

ಎಂದು ಉಪಹಾರವರ್ಮಂ ತಾಂ ಮಾಡಿದ ವೃತ್ತಾಂತಮಂ ಪೇೞ್ದೊಡದರ್ಕೆ ರಾಜವಾಹನಂ ಸಂತೋಷಂಬಟ್ಟು

ನೆಗೞ್ದುಪಹಾರವರ್ಮನವೊಲಾರ್ಗಮಸಾಧ್ಯಮೆನಿಪ್ಪ ಸಾಹಸಂ
ಮಿಗುವ ದುರಂತಕರ್ಮದೊದವಂ ಸಲೆ ಮಾಳ್ಪವನಾವನೆಂದು ಬ
ಲ್ಮೆಗೆ ಮಿಗೆಮೆಚ್ಚಿ ಮಸ್ತಕಮನೊಯ್ಯನೆತೂಗಿ ಮನಃಪ್ರಸಾದದಿಂ
ಪೊಗೞ್ದನುರಾಗಸಾಗರತರಂಗದೊಳಿರ್ದನಭಂಗವಿಕ್ರಮಂ ೧೩೩

ಅಲ್ಲಿಯೇ ಸುಖವಾಗಿ ಕಳೆದೆನು. ವ|| ಹಾಗೆ ಇರುವಾಗ ಒಂದು ದಿನ ಸ್ವಾಮಿಯನ್ನು ಹುಡುಕುವ ಮನಸ್ಸುಂಟಾಯಿತು. ೧೩೧. ರಾಜನೇ ! ಸುಜನರ ಮಿತ್ರನಾದ ಚಂಪಾಪುರದೊಡೆಯನಾದ ಸಿಂಹವರ್ಮಮಹಾರಾಜನಿಗೆ ಶತ್ರು ಪೀಡೆಯುಂಟಾಯಿತು. ಮಿತ್ರರಾಜರು ತನ್ನ ಸಹಾಯಕ್ಕೆ ಬರಬೇಕೆಂದು ಪತ್ರ ಬರೆದು ಕಳುಹಿಸಿದನು. ಆಗ ನಾವು ಅದಕ್ಕಾಗಿ ಸಂತೋಷದಿಂದ ಹೊರಟು ಬಂದೆವು. ೧೩೨. ಪರೋಪಕಾರ ಮಾಡಬೇಕೆಂದು ನಾನು ಆದರದಿಂದ ಬಂದೆನು. ಅದರ ಪುಣ್ಯದ ಫಲದಿಂದ ಇಂದು ಸ್ವಾಮಿಯ ಪಾದಯುಗವನ್ನು ನೋಡಿದೆನು. ವಿಶೇಷವಾಗಿ ನನ್ನ ಬಯಕೆಯು ಸಿದ್ಧಿಸಿತೀಗ". ವ|| ಎಂದು ಉಪಹಾರವರ್ಮನು ತಾನು ಮಾಡಿದ ವೃತ್ತಾಂತವನ್ನೆಲ್ಲ ಹೇಳಿದನು. ಅದನ್ನು ಕೇಳಿ ರಾಜವಾಹನನು ಸಂತೋಷಪಟ್ಟನು. ೧೩೩. "ಯಾರಿಗೂ ಸಾಧ್ಯವಾಗದೇ ಇರುವಂಥ ಸಾಹಸವನ್ನು ತೋರಿ ಭಯಂಕರವಾದ ಕಾರ್ಯವನ್ನು ಮಾಡಬಲ್ಲ ಪ್ರಸಿದ್ಧನಾದ ಉಪಹಾರವರ್ಮನಂಥ ಸಾಹಸಿ ಮತ್ತೊಬ್ಬರಾರಿದ್ದಾರೆ ?" ಎಂದು ಹೇಳಿ ತಲೆದೂಗಿ ತನ್ನ ಮೆಚ್ಚಿಕೆಯನ್ನು ತೋರಿಸಿ ಅಭಂಗ ವಿಕ್ರಮನಾದ ರಾಜಹಂಸನು ಅನುರಾಗ

### ಗದ್ಯ

ವ॥ ಇದು ನಿಖಿಲ ಬುಧಜನ ಮನೋವನಜವನ ದಿವಾಕರಕಿರಣಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜಮತ್ತ ಮಧುಕರ ಮಧುಸೂದನ ನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಉಪಹಾರವರ್ಮ ಕಥಾವೃತ್ತಾಂತಂ

## ದಶಮಾಶ್ವಾಸಂ

ಸಾಗರದ ತರಂಗಗಳಲ್ಲಿ ತೇಲಿದನು. ಇದು ಸಮಸ್ತಬುಧ ಜನರ ಮನಸ್ಸೆಂಬ ಕಮಲ ವನಕ್ಕೆ ಸೂರ್ಯನಾದವನ ಕಿರಣಗಳಿಂದ ಪ್ರಸನ್ನವಾದ ಶ್ರೀಮದಭಂಗ ವಿಠಲನ ಪಾದ ಕಮಲಗಳಲ್ಲಿ ಮದಿಸಿದ ದುಂಬಿಯಾದ ಮದುಸೂದನನ ಮಗನಾದ ಸರಸ ಕವಿಚೌಂಡ ರಾಜನಿಂದ ವಿರಚಿತವಾದ ಅಭಿನವ ದಶಕುಮಾರ ಚರಿತೆಯಲ್ಲಿ ಉಪಹಾರವರ್ಮನ ವೃತ್ತಾಂತ.

# ಏಕಾದಶಾಶ್ವಾಸಂ

## ಪ್ರಮತಿಯ ಕಥೆ

ಕಂ॥ ಶ್ರೀಮನ್ಮಂಗಲವೈಭವ
ಧಾಮಂ ಪ್ರಮತಿಯನಲಂಪಿಂ ಕೇಳ್ದಂ ನೀಂ
ಪ್ರೇಮದೊಳೆಸಗಿತ್ತೇನೆಂ
ದಾಮಹಿಮಂ ಕೂರ್ತಭಂಗವಿಟ್ಠಲಭೃತ್ಯಂ ೧

ವ॥ ಅಂತು ಕೇಳ್ವುದುಂ ಪ್ರಮತಿ ಕೆಯ್ಗಳಂ ಮುಗಿದು

ನಿಮ್ಮಡಿಯಂ ವಿಚಾರಿಸಲನೇಕಧರಾತಳಮಂ ತೊಟಲ್ದು ಮ
ತ್ತೊಮ್ಮೆಯದೊಂದು ಘೋರತರಕಾನನದೊಳ್ ಬರುತಿರ್ಪ ತಾಣದೊಳ್
ಕೆಮ್ಮುಗಿಲಾಯ್ತು ಪಶ್ಚಿಮನಭಸ್ಸ್ಥಳಿ ನೀಡನಿಕಾಯದತ್ತಲಾ
ದಮ್ಮನವಿತ್ತುವೆಣ್ದೆಸೆಯೊಳಳ್ಳಿರಿದಾಡುವ ಪಕ್ಷಿಸಂಕುಳಂ ೨

ವ॥ ಅಂತು ಸಂಧ್ಯಾಲಕ್ಷಣಂ ತಲೆದೋಱಲಂಧಕಾರದ ಭೀತಿಯಿಂದಾಂ ತ್ವರಿತಗತಿಯಿಂ ಪೋಗೆ ಮುಂದೆ

ನಿಮಿರ್ದೊಳ್ಪಂಬೆತ್ತು ಬೀಟಲ್ಗರೆದ ಜಡೆಗಳಿಂ ನೀಳ್ದು ಚೆಲ್ವಾದ ಶಾಖಾ
ಸಮುದಾಯಂ ಪತ್ತು ತೋಳ್ಗಳ್ ಮಿಸುಗುವ ತನಿವಣ್ಗೆಂಪು ಭಾಳಾಕ್ಷಿಯಾಗಲ್
ಕ್ರಮದಿಂದಂ ತಾಂಡವಾಡಂಬರಮನೆಸಗುವೀಶಂಬೊಲೊಪ್ಪಿರ್ದುದಾನಂ
ದಮಯಂ ವಿಸ್ತಾರಿಯಭ್ರಂಕಷವಟತರು ಪತ್ರಪ್ರವಾಳಪ್ರಸಿದ್ಧಂ ೩

೧. ಶ್ರೀಮನ್ಮಂಗಲಕರ ವೈಭವಕ್ಕೆ ಆಶ್ರಯನಾದ ಮಹಾಮಹಿಮೆಯುಳ್ಳ ಅಭಂಗ ವಿಟ್ಠಲ ಭೃತ್ಯನಾದ ರಾಜವಾಹನನು 'ನೀನು ಮಾಡಿದ ಕೆಲಸಗಳೇನು ?' ಎಂದು ಪ್ರಮತಿಯನ್ನು ಪ್ರೀತಿಯಿಂದ ಕೇಳಿದನು. ವ॥ ಪ್ರಮತಿಯು ಕೈಗಳನ್ನು ಮುಗಿದು ಹೀಗೆಂದನು : ೨. "ತಮ್ಮ ಪಾದಗಳನ್ನು ವಿಚಾರಿಸಿ ಕಂಡು ಹಿಡಿಯಲು ನಾನು ಅನೇಕ ದೇಶಗಳಲ್ಲಿ ಅಲೆದಾಡಿದನು. ಒಮ್ಮೆ ಒಂದು ಅತಿ ಭಯಂಕರವಾದ ಕಾಡಿನಲ್ಲಿ ಬರುತ್ತಿದ್ದೆ. ಆಗ ಪಶ್ಚಿಮ ದಿಕ್ಕಿನಲ್ಲಿ ಮೋಡಗಳು ಕೆಂಪಗಾದುವು. ಎಂಟು ದಿಕ್ಕುಗಳಲ್ಲಿಯೂ ಹಾರಾಡುತ್ತಿದ್ದ ಪಕ್ಕಿಗಳು ತಮ್ಮ ತಮ್ಮ ಗೂಡುಗಳ ಕಡೆ ಹೋಗಲು ಮನಸ್ಸು ಮಾಡಿದವು. ವ॥ ಹೀಗೆ ಸಂಜೆಯಾಗುವ ಸೂಚನೆಗಳು ಕಾಣಿಸಲು ಕತ್ತಲೆಯ ಹೆದರಿಕೆಯಿಂದ ಬೇಗ ಬೇಗ ನಡೆದೆನು. ಮುಂದೆ— ೩. ಎಲೆಗಳಿಂದಲೂ ಚಿಗುರುಗಳಿಂದಲೂ ಪ್ರಸಿದ್ಧವಾದ ಆನಂದಕರವಾದ ವಿಸ್ತಾರವಾದ ಆಕಾಶದವರೆಗೆ ಬೆಳೆದ ಆಲದಮರವೊಂದು ಕಾಣಿಸಿತು. ನಿಮಿರಿದ ಉದ್ದವಾದ ಸುಂದರವಾದ ಬಿಳಲುಗಳೇ ಜಡೆ

ವ॥ ಅಂತಿರ್ದುದೊಂದು ವಟಕುಜಮಂ ಕಂಡೆಯ್ದುವ ಸಮಯದೊಳ್

ಲೋಕಮನೆಲ್ಲಮಂ ಸಲೆ ತೊೞಲ್ದು ಬೞಲ್ದು ವರೂಥಮಂ ಹಯಾ
ನೀಕಮನೊಯ್ದು ಪೆಂಪಿನಪರಾದ್ರಿನಿಕುಂಜದೊಳಿಟ್ಟು ಮತ್ತೆ ನಿ
ರ್ವ್ಯಾಕುಳದಿಂ ತದದ್ರಿತಟದೊಳ್ ಸುಖನಿದ್ರೆಯೊಳಿರ್ಪೆನೆಂಬವೋಲ್
ಕೋಕನದಪ್ರಿಯಂ ಪದೆಪಿನಿಂ ಪರಿದೆಯ್ದಿದನಸ್ತಶೈಲಮಂ ೪

ವ॥ ಅಂತು ಗಭಸ್ತಿಮಾಲಿಯಸ್ತಾಚಲಮನೆಯ್ದುವುದುಂ

ಕಂ॥ ಅಲ್ಲಿರ್ದ ಪಲ್ವಲೋದಕ
ದಲ್ಲಿಯೆ ತತ್ಕಾಲಕರ್ಮಮಂ ತೀರ್ಚಿ ಲಸ
ತ್ಪಲ್ಲವದ ಪಾಸಿಕೆಯನಾಂ
ಮೆಲ್ಲಿತ್ತಪ್ಪಂತು ಪಾಸಿದೆಂ ಮರದಡಿಯೊಳ್ ೫

ವ॥ ಅಂತು ಸಂಧ್ಯಾವಂದನಂಗೆಯ್ದು ಪಲ್ಲವಮಂ ಪಾಸಿರ್ಪಿನಂ

ಕಂ॥ ಧರೆಯೊಳ್ ಸತ್ವರಜೋಗುಣ
ಮೆರಡುಂ ಪುಸಿಯಾಗಿ ಘನತಮೋ ಗುಣಮೆಯ್ದಾ
ವರಿಸಿತ್ತುರ್ವಿಯನೆನಲ
ಚ್ಚರಿಯಿಂ ತೀವಿದುದಂಧಕಾರಂ ಕಾರಂ ೬

ಗಳು. ನೀಳವಾದ ಕೊಂಬೆಗಳೇ ಹತ್ತು ತೋಳುಗಳು. ಹೊಳೆಯುವ ಹಣ್ಣುಗಳ ಕೆಂಪು ಬಣ್ಣವೇ ಹಣೆಗಣ್ಣು. ಇವುಗಳಿಂದ ತಾಂಡವನೃತ್ಯವನ್ನೆಸಗುವ ಶಿವನಂತೆ ಅದು ಕಾಣಿಸಿತು. ವ॥ ಆ ಆಲದ ಮರದ ಹತ್ತಿರಕ್ಕೆ ಹೋಗುವ ಸಮಯದಲ್ಲಿ— ೪. ಲೋಕವನ್ನೆಲ್ಲ ಸಂಚರಿಸಿ ಬಳಲಿ ರಥವನ್ನೂ ಕುದುರೆಗಳನ್ನೂ ಕೊಂಡು ಹೋಗಿ ಪಡುವಣಬೆಟ್ಟದ ಉಪವನದಲ್ಲಿಟ್ಟು ಯಾವ ಯೋಚನೆಯೂ ಇಲ್ಲದೆ ಆ ಬೆಟ್ಟದ ತಪ್ಪಲಿನಲ್ಲಿ ಸುಖವಾಗಿ ನಿದ್ದೆ ಮಾಡುತ್ತಿದ್ದಾನೆಯೋ ಎಂಬಂತೆ ಸೂರ್ಯನು ಅಸ್ತಗಿರಿಯನ್ನು ಸೇರಿದನು. ವ॥ ಹಾಗೆ ಸೂರ್ಯನು ಅಸ್ತಾದ್ರಿಯನ್ನು ಸೇರಲು— ೫. ಅಲ್ಲಿದ್ದ ಕೊಳದ ನೀರಿನಲ್ಲಿ ಆ ಸಾಯಂಕಾಲದ ಕರ್ಮಗಳನ್ನು ಮಾಡಿದೆನು. ಮರದ ತಳದಲ್ಲಿ ಮೃದುವಾದ ಚಿಗುರಿನ ಹಾಸಿಗೆಯನ್ನು ಹಾಸಿದೆನು. ವ॥ ಹಾಗೆಯೇ ಸಂಧ್ಯಾವಂದನೆಯನ್ನು ಮಾಡಿ ಚಿಗುರನ್ನು ಹಾಸಿರಲು— ೬. ಕತ್ತಲೆಯು ಆಶ್ಚರ್ಯಕರವಾದ ರೀತಿಯಲ್ಲಿ ಭೂಮಿಯಲ್ಲೆಲ್ಲ ಹರಡಿತು. ಧರೆಯಲ್ಲಿ ಸತ್ವಗುಣವೂ ರಜೋಗುಣವೂ ಹುಸಿಯಾಗಿ ಒತ್ತಾದ ತಮೋಗುಣವು ಆವರಿಸಿದೆಯೋ ಎಂಬಂತೆ ಅದು

ವ॥ ಅಂತುರ್ಬಿದ ಮರ್ಬಿನೊಳ್

ಕಂ॥ ತರುವಿನ ಸುತ್ತಲ್ ನೆಲಸಿದ
ಶರಾರುಕುಲಮೆನಗೆ ಶರಣೆನುತ್ತಾಗಳೆ ನಿ
ಬ್ಬರಮೆನಿಸುವ ಸುಖನಿದ್ರಾ
ಪರವಶನಾಗಿರ್ದೆನಿರ್ದಿನಂ ತಕ್ಷಣದೊಳ್ ೭

ಉಪಮಿಸಲರಿದಂತೀತೆಂ
ದು ಪೇಟಲಳವಲ್ತು ವಚನಿಸಲ್ ವಶಮಲ್ತೆಂ
ಬಪರಿಮಿತ ಸ್ಪರ್ಶೇಂದ್ರಿಯ
ದ ಪರಮಸುಖಮಾಯ್ತು ಮಚ್ಛರೀರಕ್ಕಾಗಳ್ ೮

ವ॥ ಆ ಪರಮಸುಖದೊಡನೆ ನಿದ್ರೆದಿಳಿದೆಡದ ದೆಸೆಯುಂ ನೋಟ್ಪನ್ನೆಗಂ

ರಜತಗಿರೀಂದ್ರಮಂ ಕಡೆದು ಕಂಡರಿಸಿಟ್ಟವೊಲೊಲ್ದು ಭಾವಿಸಲ್
ತ್ರಿಜಗದೊಳತ್ಯಪೂರ್ವಮೆನಿಸಿರ್ಪ ಮನೋಹರ ಸೌಧ ಶಾಲೆಯೊಳ್
ರಜನಿಕರ ಪ್ರಭಾಪಟಲದಂತೆ ಸುಷುಪ್ತಿಯೊಳೊಪ್ಪುತಿರ್ಪ ವಾ
ರಿಜಮುಖಿಯರ್ ಕೆಲರ್ ನಯನಕೌತುಕಮಂ ಪಡೆದರ್ ನೃಪಾಧಿಪಾ ೯

ಅತನುಮದದ್ವಿಪಂ ಬಿನದದಿಂ ಜಲಕೇಳಿಯೊಳಟ್ದಿ ಪದ್ಮಿನೀ
ಲತೆಯೊ ನಿರಾಶ್ರಯಂ ಗಗನಮೆಂದಿಳೆಯೊಳ್ ನೆಲಸಿರ್ದ ಚಂದ್ರಿಕಾ
ತತಿಯೊ ಹರಂಗೆ ಬೆರ್ಚಿ ಮದನಂ ಬಿಸುಟೋಡಿದ ಪುಷ್ಪಬಾಣಸಂ
ತತಿಯೊ ಎನಲ್ಕೆ ಕೂರ್ತು ಸುಖನಿದ್ರೆಯೊಳಿರ್ದುದು ಕಾಮಿನೀಜನಂ ೧೦

ಕಾಣಿಸಿತು. ವ॥ ಹಾಗೆ ಪರಡಿದ ಕತ್ತಲೆಯಲ್ಲಿ— ೭. ಮರದ ಸುತ್ತಲೂ ನೆಲಸಿದ್ದ ಹಿಂಸ್ರ ಪ್ರಾಣಿಗಳು ನನ್ನ ಮೇಲೆ ದಯೆ ತೋರಿದುವು. ಆಗಲೆ ನಾನು ಗಾಢವಾದ ಸುಖ ನಿದ್ರೆಯಲ್ಲಿ ಮೈಮರೆತೆನು. ೮. ಆ ಸಮಯದಲ್ಲಿ ನನಗೆ ಒಂದು ಸುಖದ ಅನುಭವವಾಯಿತು. ಹೋಲಿಕೆ ಕೊಡಲು ಸಾಧ್ಯವಿಲ್ಲ. ಹಾಗೆ ಹೀಗೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ವರ್ಣಿಸಲು ಆಗದು. ನನ್ನ ಶರೀರಕ್ಕೆ ಆಗ ಮಿತಿ ಮೀರಿದ ಸ್ಪರ್ಶೇಂದ್ರಿಯದ (ಚರ್ಮ) ಪರಮ ಸುಖವಾಯಿತು. ವ॥ ಆ ಪರಮ ಸುಖವನ್ನನುಭವಿಸಿ ನಿದ್ರೆ ತಿಳಿದು ಎಡಗಡೆಗೆ ನೋಡಿದೆನು. ಆಗ— ೯. ಮಹಾರಾಜನೆ! ಬೆಳ್ಳಿಯ ಬೆಟ್ಟವನ್ನು ಕಡಿದು ಈ ರೂಪದಲ್ಲಿ ಕಡೆದು ಇಟ್ಟಿದ್ದಾರೆಯೋ ಎಂಬಂತೆ ಅಪೂರ್ವವಾಗಿ ಪ್ರಕಾಶಿಸುವ ಮನೋಹರವಾದ ಸೌಧವು ಕಾಣಿಸಿತು. ಅದರಲ್ಲಿ ಗಾಢನಿದ್ರೆಯಲ್ಲಿದ್ದ ಸುಂದರಿಯರು ಚಂದ್ರನ ಕಾಂತಿ ಸಮೂಹದಂತೆ ಕಾಣಿಸಿದರು. ೧೦ ಮನ್ಮಥನೆಂಬ ಮದ್ದಾನೆಯು ವಿನೋದಕ್ಕಾಗಿ ಜಲಕ್ರೀಡೆಯಾಡುವಾಗ ಮುಳುಗಿಸಿದ ಕಮಲದಬಳ್ಳಿಯೋ? ಗಗನವು ಅಶ್ರಯರಹಿತವೆಂದು ತಿಳಿದು ಭೂಮಿಯಲ್ಲಿ ಬಂದು ನೆಲಸಿದ ಬೆಳದಿಂಗಳಗುಂಪೋ? ಹರನಿಗೆ ಹೆದರಿ ಮದನನು ಬಿಸಾಡಿ ಓಡಿಹೋದ ಹೂಬಾಣಗಳ ಸಮೂಹವೋ? ಎಂಬಂತಿದ್ದ ಆ ನಾರಿಯರು

ಸ್ತನಯುಗಭಾರದಿಂ ಕಚದ ಬಲ್ಪೊಱೆಯಿಂ ಪೃಥುಜಘನಭಾರದಿಂ
ವನಿತೆಯರಾವಗಂ ಪದೆಪಿನಿಂ ನಡೆಗೆಟ್ಟೊಱಗಿರ್ದರೆಂಬಿನಂ
ವನಜನಿಭಾಸ್ಯೆಯರ್ ಕುಟಿಲಕುಂತಳೆಯರ್ ತನುಮಧ್ಯೆಯರ್ ಮನೋ
ಜನೊಳಿದಿರೊಡ್ಡಿ ಕಾದಿ ಪಡಲಿಟ್ಟವೊಲಿರ್ದರನೂನ ನಿದ್ರೆಯಿಂ ೧೧

ಇಂದು ಮನೋಜರಾಜನ ಧನುರ್ಲತೆಗುನ್ಮದಭೃಂಗಮೌರ್ವಿಯಂ
ಸೌಂದರಿಯರ್ ಸಮಂತು ಪಡೆದಪ್ಪರೆನಿಪ್ಪವೊಲೊಪ್ಪುತಿರ್ಪ ಪು
ರ್ಬಿಂದೆಳನೀಲವಣ್ಣದೆವೆಯಿಂ ನಿಡುಗಣ್ಣರೆಮುಚ್ಚಿ ನಿದ್ರೆಯೊಳ್
ಸಂದಬಲಾಜನಂ ನೆನೆಸಿದಪ್ಪರನಂಗನ ಶಸ್ತ್ರಶಾಲೆಯಂ ೧೨

ಒದೆದೊಡೆ ಕೂರ್ತು ನೋಡಿದೊಡೆ ಮಾಣದುಗುಳ್ದೊಡೆ ತೋಳನೀಡಿಯ
ಪ್ಪಿದೊಡೆ ಮರಂ ಕೊನರ್ವುದದುಗೆಟ್ಟು ಮರಂಬೊಲಿದೇಕೆ ಭಾವಿಸಲ್
ಸುದತಿಯರಿರ್ಪರಾನಱಿದೆನಾತರು ಸಂತತಿ ಸೋಲ್ತು ತಮ್ಮ ದೇ
ಹದ ಸೊಬಗಂ ತದಂಗನೆಯರ್ಗಿತ್ತುದಿದಲ್ತೆ ಮಹಾತ್ಮರೊಳ್ಗುಣಂ ೧೩

ವ॥ ಅಂತು ಕುಸುಮಾಸ್ತ್ರಮಂ ಕೆದಱಿದಂತೆಯುಂ ಕಮನೀಯ ಕನಕಪುತ್ರಿಕೆಗಳಂತೆಯುಂ ಮಱಿದೊರಗಿದ ಮಱಿವುಲ್ಲೆಗಳಂತೆಯುಂ ದಳಿತಸ್ಥಳ ಪದ್ಮದಂತೆಯುಂ ನವ

ವಿಶ್ವಾಸದಿಂದ ಸುಖನಿದ್ರೆಯಲ್ಲಿ ಮುಳುಗಿದ್ದರು. ೧೧. ಆ ವನಿತೆಯರು ಸ್ತನಗಳ ಭಾರದಿಂದಲೂ, ತಲೆಗೂದಲ ಹೊರೆಯಿಂದಲೂ, ಜಘನದ ಭಾರದಿಂದಲೂ, ಒಂದೇ ಸಮನಾಗಿ ನಡೆದು ಮುಂದೆ ನಡೆಯಲಾರದೆ ಮಲಗಿರುವಂತೆ ಕಂಡರು. ಕಮಲದಂತೆ ಮುಖವುಳ್ಳ ಕೊಂಕುಗೂದಲುಳ್ಳ ಸಣ್ಣ ನಡುವಿನ ಆ ನಾರಿಯರು ಮನ್ಮಥನನ್ನು ಇದಿರಿಸಿ ಕಾದಿ ಆಯಾಸದಿಂದ ನಿದ್ದೆ ಬಂದು ಮಲಗಿರುವಂತೆ ಕಾಣಿಸಿದರು. ೧೨. ನೀಳವಾದ ಕಂಗಳ ಎಳೆನೀಲಿಬಣ್ಣದ ರೆಪ್ಪೆಗಳನ್ನು ಅರ್ಧಮುಚ್ಚಿ ನಿದ್ರಿಸುತ್ತಿದ್ದ ಆ ಸುಂದರಿಯರ ಹುಬ್ಬುಗಳು ಮದನ ರಾಜನ ಬಿಲ್ಲಿಗೆ ಬೇಕಾದ ನಾರಿಯನ್ನು ಸಂಪಾದಿಸಿ ಇಟ್ಟಿರುವಂತೆ ತೋರುತ್ತಿತ್ತು. ಆದುದರಿಂದ ನಿದ್ರಿಸುತ್ತಿದ್ದ ರಮಣಿಯರು ಅನಂಗನ ಶಸ್ತ್ರಾಗಾರವನ್ನು ನೆನಪಿಗೆ ತರುತ್ತಿದ್ದರು. ೧೩. ಒದ್ದರೆ, ಸ್ನೇಹದಿಂದ ನೋಡಿದರೆ, ತಪ್ಪದೆ ಉಗುಳಿದರೆ, ತೋಳು ನೀಡಿ ತಬ್ಬಿಕೊಂಡರೆ, ಮರವು ಚಿಗುರುತ್ತದೆ! ಹೀಗಿರಲು ಅದಕ್ಕೆ ವ್ಯತಿರಿಕ್ತವಾಗಿ ಈ ಸುದತಿಯರು ಮರದ ಹಾಗೆ ಏಕೆ ಇದ್ದಾರೆ? ನನಗೆ ಕಾರಣ ತಿಳಿಯಿತು. ಆ ಮರಗಳ ಸಮೂಹವು ಇವರಿಗೆ ಸೋತು ತಮ್ಮ ದೇಹದ ಸೊಬಗನ್ನು ಆ ಅಂಗನೆಯರಿಗೆ ಕೊಟ್ಟಿದೆ, ಇದು ಮಹಾತ್ಮರ ಒಳ್ಳೆಯ ಗುಣವಷ್ಟೇ! ವ॥ ಹಾಗೇ ಹೂಬಾಣಗಳನ್ನು ಕೆದರಿದ ಹಾಗೂ ಸುಂದರವಾದ ಚಿನ್ನದ ಬೊಂಬೆಗಳ ಹಾಗೂ, ಮೈಮರೆತು ಮಲಗಿದ ಜಿಂಕೆಯ ಮರಿಗಳಂತೆಯೂ, ಅರಳಿದ ನೆಲದಾವರೆಗಳ ಹಾಗೂ,

ಮಾಣಿಕ್ಯ ಶಲಾಕೆಯಂತೆಯುಂ ಸೋಮಕಳಾ ಸಮೂಹದಂತೆಯುಂ ಕಣ್ಗೆಯ್ವ ಕೇಕಿಗಳಂತೆಯುಂ ಮೆಯ್ಮಱೆದ ಮರಾಳ ಮಂಡಲದಂತೆಯುಂ ಕುಡಿಯಿಡುವ ಕಲ್ಪಲತೆಗಳಂತೆಯುಂ ಪುಂಡರೀಕ ಷಂಡದಂತೆಯುಂ ಕಾಮರಾಜಕೋಶದಂತೆಯುಂ ಜಗನ್ಮೋಹನ ಮಂತ್ರದಂತೆಯುಂ ಸೌಭಾಗ್ಯಶರಧಿಯಂತೆಯುಂ ಸುರಕುಜದ ಸುಮನೋಮಂಜರಿಯಂತೆಯುಂ ಮಱೆದೊರಗಿ ನಿದ್ರೆಯೊಳಿರ್ಪ ಕೆಲಬರ್ ಸತಿಯರಂ ಕಂಡು ಚೋದ್ಯಂಬಟ್ಟು ಬಂದ ದೆಸೆಯಂ ನೋೞ್ಪನ್ನೆಗಂ

ಶ್ರುತಿರಹಿತಂ ದ್ವಿಜಿಹ್ವನಪದಸ್ಥನನಾರತವಕ್ರಗಂ ವಿಷಾ
ನ್ವಿತನುರುಛಿದ್ರವಾಸಿ ಕುಟಿಲಂ ಫಣಿವಲ್ಲಭನೆಂದು ತತ್ಫಣಾ
ಸ್ಥಿತಿಯನದಂ ಬಿಸುಟ್ಟು ಮೃದುಶಯ್ಯೆಗೆ ಬಂದಳೊ ಕೂರ್ತು ಭೂಮಿದೇ
ವತೆಯೆನಿಪಂದದಿಂ ಪವಡಿಸಿರ್ದಳದೊರ್ವ ಕುಮಾರಿಯುರ್ವಿಪಾ ೧೪

ಕಂ॥ ತರುಣಿಯತಿಮೃದುಳ ಚೀನಾಂ
ಬರಮಂ ಮುಸುಕಿಟ್ಟು ನಿದ್ರೆಯೊಳ್ ಮೆಱೆದಿರ್ದಳ್
ತೆರೆಮುಗಿಲ ಮಱೆಯ ಮಿಂಚಿನ
ತಿರುಳುಸಿರಂ ಪಡೆದು ನೆಲೆಗೆ ನಿಂದವೊಲಾಗಳ್ ೧೫

ನೂತನ ಮಾಣಿಕ್ಯದ ಕಿರಣಗಳಂತೆಯೂ, ಚಂದ್ರನ ಕಳಾಸಮೂಹದ ಹಾಗೆಯೂ, ಸುಂದರವಾದ ನವಿಲುಗಳಂತೆಯೂ, ಮೈಮರೆತ ಹಂಸ ಸಮೂಹದಂತೆಯೂ ಹಬ್ಬುತ್ತಿರುವ ಕಲ್ಪಲತೆಯ ಹಾಗೂ, ಬೆಳ್ದಾವರೆಯ ಗುಂಪಿನಂತೆಯೂ, ಕಾಮರಾಜನ ಭಂಡಾರದಂತೆಯೂ, ಜಗತ್ತನ್ನೇ ಮೋಹಿಸುವ ಮಂತ್ರದ ಹಾಗೂ, ಸೌಭಾಗ್ಯದ ಸಮುದ್ರದ ಹಾಗೂ, ಕಲ್ಪವೃಕ್ಷದ ಹೂಗೊಂಚಲಿನಂತೆಯೂ, ಮೈಮರೆತು ನಿದ್ರಿಸುತ್ತಿದ್ದ ಕೆಲವರು ಸತಿಯರನ್ನು ನೋಡಿ ಆಶ್ಚರ್ಯಪಟ್ಟು ಒಂದು ಪಕ್ಕಕ್ಕೆ ನೋಡಿದೆನು, ಆಗ ೧೪. ರಾಜನೆ ! ಅಲ್ಲಿ ಒಬ್ಬಳು ಕುಮಾರಿಯು ಮಲಗಿದ್ದಳು. ನಾಗರಾಜನು ಕಿವಿಗಳಿಲ್ಲದವನು. (ಕಿವುಡ) ಎರಡು ನಾಲಗೆಯವನು (ಎರಡುತರದ ಮಾತನಾಡುವವನು) ಕಾಲಿಲ್ಲದವನು. (ಹೆಳವ) ಯಾವಾಗಲೂ ವಕ್ರವಕ್ರವಾಗಿ ಹೋಗುವವನು (ತಪ್ಪುದಾರಿಯಲ್ಲಿ ಹೋಗುವವನು). ವಿಷವುಳ್ಳವನು. ಹುತ್ತದಲ್ಲಿರುವವನು (ಇತರರ ಛಿದ್ರಗಳನ್ನರಸುವವನು) ವಕ್ರಸ್ವಭಾವವುಳ್ಳವನು. ಎಂದು ಯೋಚಿಸಿ ಆ ಆದಿಶೇಷನ ಹೆಡೆಯ ಮೇಲಿರುವುದನ್ನು ತೊರೆದು ಭೂಮಿದೇವಿಯು ಸ್ನೇಹದಿಂದ ಮೃದುವಾದ ಹಾಸಿಗೆಯಲ್ಲಿ ಬಂದು ಮಲಗಿರುವಳೋ ಎಂಬಂತೆ ಅವಳು ಕಂಡಳು. ೧೫. ಆ ತರುಣಿಯು ಅತಿಮೃದುವಾದ ಚೀನಾಂಬರವನ್ನು ಮುಸುಕು ಹಾಕಿಕೊಂಡು ನಿದ್ರೆಮಾಡುತ್ತಿದ್ದಳು. ಆಗ ಅವಳು, ಮೋಡಗಳ ಮರೆಯಲ್ಲಿ ಮಿಂಚು ಉಸಿರಾಡುತ್ತಾ ರೂಪವನ್ನು ಪಡೆದು ಮಲಗಿರುವಂತೆ, ಕಾಣಿಸಿ

ಕಂ॥ ಸತಿಯ ತಲೆಗಿಂಬಿನೆಡಗೆಯ್
ನುತ ಪೀಠಿಕೆಯಾಗೆ ಪೆಱನೊಸಲ್ಮೆಱವ ಮೊಗಂ
ಸತತಂ ಮೌಕ್ತಿಕಲಿಂಗಾ
ಕೃತಿಯಂತೆಸೆದಿರ್ದುದಾ ಸರೋಜೇಕ್ಷಣೆಯಾ ೧೬

ವನಿತೆಯ ಬಲಗೆಯ್ ಸೆಳ್ಳುಗು
ಗುರ್ಗನೆವೆಳಗಿಂ ಗುರುನಿತಂಬದೊಳ್ ನೀಡಿ ಕರಂ
ನೆನೆಯಿಸಿದತ್ತದ್ರಿಗುಹಾ
ನನದಿಂ ಪೊಱಮಡುವ ನಿರ್ಝರಾಂಬುಪ್ಲವಮಂ ೧೭

ಕೋಕನದ ವದನೆ ಸಲೆ ಸಱು
ಸ್ಯೆಕನೆಯೊರ್ಮಗ್ಗುಲಾಗಿರಲ್ ಕುಚಮೆರಡುಂ
ಏಕೀಕೃತವಾಗಲ್ಕವ
ಳೇಕಸ್ತನಿಯೆಂಬ ಮಾಳ್ಕೆಯಿಂ ಕಣ್ಗೆಸೆದಳ್ ೧೮

ವ॥ ಅಂತು ನಿದ್ರೆಯೊಳಿರ್ದಳಂ ಕಂಡು ದೇವಸ್ತ್ರೀಯೆಂದು ನಿಶ್ಚಯಂ ಮಾಡಿ ಮತ್ತಂ

ಪೆಱನೊಸಲೊಳ್ ಕಪೋಳತಟದೊಳ್ ನಳಿತೋಳ ಮೊದಲ್ಗಳೊತ್ತಿನೊಳ್
ಕಿಱುಬೆಮರುಣ್ಮುತಿರ್ದಪುದು ಮೇಲುದಿನಿಕ್ಕಿದ ಚೀನವಸ್ತ್ರದೊ
ಳ್ಸೆಱಗೆ ನಸುಂ ತೆರಳ್ಚಿದಪುದಂಗವಣಂ ನಸುಗೆತ್ತಿದಪ್ಪುದೇ
ತೆಱದೊಳಿವಳ್ ಮನುಷ್ಯಸತಿಯೆಂದೊಸೆದೀಕ್ಷಿಸಿದೆಂ ಕುಮಾರಿಯಂ ೧೯

ದಳು. ೧೬. ಆ ಕಮಲಲೋಚನೆಯ ಚಂದ್ರನಂತಹ ಹಣೆಯುಳ್ಳ ಸುಂದರ ಮುಖವು ಮುತ್ತಿನ ಲಿಂಗದಂತೆ ಪ್ರಕಾಶಿಸಿತು. ತಲೆಗೆ ಇಟ್ಟುಕೊಂಡಿದ್ದ ಅವಳ ಎಡಗೈ ಆ ಲಿಂಗಕ್ಕೆ ಪೀಠದಂತೆ ತೋರುತ್ತಿತ್ತು. ೧೭. ಆ ವನಿತೆಯು ಬಲಗೈಯನ್ನು ತನ್ನ ಗುರುನಿತಂಬದ ಮೇಲೆ ನೀಡಿಕೊಂಡಿದ್ದಳು. ತೆಳುವಾದ ನೀಳವಾದ ಅವಳ ಉಗುರುಗಳ ಕಾಂತಿಯು ದಟ್ಟವಾಗಿ ಹರಡಿತ್ತು. ಅದು ಬೆಟ್ಟದ ಗುಹೆಯ ಬಾಯಿಂದ ಹೊರಕ್ಕೆ ಹರಿಯುವ ಝರಿಯ ನೀರಿನ ಪ್ರವಾಹವನ್ನು ನೆನಪಿಗೆ ತಂದಿತು. ೧೮. ಆ ಕಮಲಮುಖಿಯು ಒಂದು ಮಗ್ಗುಲಿಗೆ ತಿರುಗಿ ಮಲಗಿರುವಾಗ ಅವಳೆರಡು ಸ್ತನಗಳೂ ಒಡಗೂಡಿ ಒಂದೇ ಸ್ತನವುಳ್ಳವಳಂತೆ ತೋರಿದಳು. ವ॥ ಹಾಗೆ ನಿದ್ರೆಮಾಡುತ್ತಿದ್ದವಳನ್ನು ಕಂಡು ದೇವಸ್ತ್ರೀಯೆಂದು ನಿಶ್ಚಯಿಸಿದೆನು. ಮತ್ತು ೧೯. ಚಂದ್ರನಂತಹ ಹಣೆಯಲ್ಲಿಯೂ, ಕೆನ್ನೆಗಳ ಮೇಲೂ, ಉದ್ದವಾದ ತೋಳುಗಳ ಮೊದಲಲ್ಲಿಯೂ ಕಿರುಬೆವರು ಉಕ್ಕುತ್ತಿದೆ. ಮೇಲೆ ಹೊದ್ದಿರುವ ಚೀನಾಂಬರದ ಸೆರಗು ಪಕ್ಕಕ್ಕೆ ಜಾರುತ್ತಿದೆ. ಶರೀರವು ಸ್ವಲ್ಪ ಬೆಚ್ಚಿ ಅದುರುತ್ತಿದೆ. ಆದುದರಿಂದ ಹೇಗೆ ಯೋಚಿಸಿದರೂ ಇವಳು ಮನುಷ್ಯ ಸ್ತ್ರೀ ಎಂದು ಊಹಿಸಿ ಕುಮಾರಿಯನ್ನು ಪ್ರೀತಿಯಿಂದ

ನವತಾಂಬೂಲರಸಾಧರಂ ಮೃದುಹರಿದ್ರಾರಾಗದೇಹಂ ದುಕೂ
ಲವಿಶೇಷಂ ಶ್ರಮತೋಯಬಿಂದುನಿವಹಂ ಸುಯ್ಗಂಪು ನೋೞಲ್ ಮನೋ
ಭವಕೇಳೀ ನಿಜಲಕ್ಷಣಂ ವಿಮಳನಿದ್ರಾಮುದ್ರಿತಾಕ್ಷಿದ್ವಯಂ
ದಿವಿಜಸ್ತ್ರೀಯರೊಳುಂಟೆ ತತ್ಸುಭಗರೂಪಾಯತ್ತಸಲ್ಲಕ್ಷಣಂ ೨೦

ಪೊರೆದ ದುಕೂಲವೊಂದಿನಿಸು ಮಾಸಿದೆ ಭಾಳದೊಳಿಟ್ಟ ಚಂದನಂ
ತೆರಳಿದೆ ವೇಣಿಯೊಳ್ ತೊಡರ್ದ ಮಲ್ಲಿಗೆ ಬಾಡಿದೆ ನೋಡೆ ನಿದ್ರೆಯು
ಬ್ಬರದೊಳಮರ್ತ್ಯಕಾಂತೆಯಿವಳಲ್ತು ಮನುಷ್ಯಕುಮಾರಿಯೆಂದು ಬಿ
ತ್ತರದಿಂ ಒರಲ್ದು ಕಣ್ದಣಿಯೆ ನೋಡಿದೆನಾನವಳಂ ನೃಪಾಲಕಾ ೨೧

ಅನಿಮಿಷದೃಷ್ಟಿಯಾಗಿಯುಮಮರ್ತ್ಯವಿಳಾಸಿನಿಯಲ್ತು ಸುಪ್ತಿಸಂ
ಜನಿತ ಶರೀರಿಯಾಗಿಯುಮುದಗ್ರ ತಪಸ್ವಿನಿಯಲ್ತು ಭಾವಿಸಲ್
ಜನನುತಿ ರಂಜಿಪಬ್ಜಮುಖಿಯಾಗಿಯುಮಿನಿಕೆ ಕಳಂಕಿಯಲ್ತೆನು
ತ್ತನವಧಿದೃಷ್ಟಿಯಿಂದವಳನೀಕ್ಷಿಸಿದೆಂ ಮಲಗಿರ್ದ ತಾಣದೊಳ್ ೨೨

ಕಂ॥ ಆನಿರ್ದ ಭೂಜಮೆತ್ತಣ
ದೀ ನೃಪಮಂದಿರಮಿದೆತ್ತಣಿಂ ಬಂದತ್ತೆಂ
ದಾನೊಂದರೆ ನಿಮಿಷಂ ತ
ದ್ಧ್ಯಾನದೊಳಿರ್ದೆಂ ನೃಪಾಲಕುಲಮಣಿದೀಪಾ ೨೩

ನೋಡಿದೆನು. ೨೦. ಆಗ ತಾನೇ ಸವಿದ ತಾಂಬೂಲದ ರಸದಿಂದ ಕೆಂಪಾದ ತುಟಿ, ಮನೋಹರವಾದ ಅರಿಶಿನವನ್ನು ಹಚ್ಚಿದ ಶರೀರ, ವಿಶೇಷವಾದ ಬಿಳಿಯ ರೇಶಿಮೆಸೀರೆ, ಆಯಾಸದಿಂದ ಉಂಟಾದ ಬೆವರಿನ ಹನಿಗಳು. ಉಸಿರಿನ ಪರಿಮಳ — ಇವನ್ನೆಲ್ಲ ನೋಡಿದರೆ ಇವು ಕಾಮಕೇಳಿಯನ್ನನುಭವಿಸಿದ ಲಕ್ಷಣಗಳಾಗಿ ತೋರುತ್ತಿವೆ. ಅವಳ ಸುಂದರರೂಪಕ್ಕೆ ಅನುಗುಣವಾದ ಸಲ್ಲಕ್ಷಣವುಳ್ಳ, ವಿಮಲ ನಿದ್ರೆಯಿಂದ ಮುಚ್ಚಿದ ಕಂಗಳು ದೇವಲೋಕದ ಸ್ತ್ರೀಯರಿಗುಂಟೆ? ೨೧. ಉಟ್ಟ ದುಕೂಲವು ಸ್ವಲ್ಪ ಮಾಸಿದೆ. ಹಣೆಯಲ್ಲಿಟ್ಟ ಚಂದನವು ಅಳಿಸಿಹೋಗಿದೆ. ವೇಣಿಯಲ್ಲಿ ಸಿಕ್ಕಿಸಿದ್ದ ಮಲ್ಲಿಗೆಯ ಹೂ ಬಾಡಿ ಹೋಗಿದೆ. ನಿದ್ರೆಯ ಅಬ್ಬರವನ್ನು ನೋಡಿದರೆ ಇವಳು ದೇವಾಂಗನೆಯಲ್ಲ. ಮನುಷ್ಯ ಕುಮಾರಿ—ಎಂದು ಊಹಿಸಿ ಆಸಕ್ತಿಯಿಂದ ಕಣ್ಣುಗಳಿಗೆ ತೃಪ್ತಿಯಾಗುವಂತೆ, ಮಹಾರಾಜನೆ, ನಾನವಳನ್ನು ನೋಡಿದೆನು. ೨೨. ಅನಿಮಿಷ ದೃಷ್ಟಿಯುಳ್ಳವಳಾಗಿದ್ದರೂ ದೇವಾಂಗನೆಯಲ್ಲ. (ಮೀನಲೋಚನೆ—ಎವೆಯಿಕ್ಕದ ನೋಟ) ಸುಪ್ತಿ ಸಂಜನಿತ ಶರೀರೆಯಾಗಿದ್ದರೂ ಶ್ರೇಷ್ಠಳಾದ ತಪಸ್ವಿನಿಯಲ್ಲ. (ನಿದ್ರಾವಶವಾದ ಶರೀರವುಳ್ಳವಳು—ಯೋಗನಿದ್ರೆಯಿಂದ ನಿಶ್ಚಲವಾದ ಶರೀರವುಳ್ಳವಳು ?) ಜನರ ಪ್ರಶಂಸೆಗೆ ಪಾತ್ರವಾದ ಚಂದ್ರನಂತೆ ಮುಖವುಳ್ಳವಳಾಗಿದ್ದರೂ ಸಕಳಂಕೆಯಲ್ಲ ಎಂದು ಎವೆಬಿಡದೆ ಮಲಗಿದ್ದ ಜಾಗದಲ್ಲಿಯೇ ಅವಳನ್ನು ನೋಡಿದೆನು. ೨೩. ನಾನಿರುವ ಮರವು ಎಲ್ಲಿಯದು? ಈ ಅರಮನೆಯು ಎಲ್ಲಿಂದ ಬಂದಿತು ? ರಾಜಕುಲ

ವ॥ ಅಂತು ವಿಸ್ಮಯಂಬಟ್ಟನಂತರಂ,

ಕಂ॥ ಏನಾದೊಡಕ್ಕೆನುತೊ
ಲ್ದಾನೊಯ್ಯನೆ ಪೋಗಿ ತದ್ವಧೂಟಿಯ ಶಯನ
ಸ್ಥಾನದೊಳಾಕೆಯ ತೋಳ್ಗಿನಿ
ಸಾನುಂ ಸೋಂಕುವವೋಲಟ್ತಿಯಿಂದಂ ಸಾರ್ದೆಂ ೨೪

ವ॥ ಅಂತು ಸಾರ್ದಿರ್ಪನ್ನೆಗಂ

ತೀಡುವ ಗಾಳಿಯಿಂ ಕುಸುಮಶಯ್ಯೆಗೆ ಮೆಲ್ನಱುಸುಯ್ಗೆ ಮೇಲೆ ಬಂ
ದಾಡುವ ತುಂಬಿಯಿಂಚರದಿನೆನ್ನಯ ಮುಯ್ಪಿನ ಸೋಂಕಿನಿಂ ಬೆಮ
ರ್ಮೂಡುವ ತಣ್ಪಿನಿಂ ಪುದಿದ ನಿದ್ರೆ ಕರಂ ತಿಳಿದಾಗಳೊಲ್ದವಳ್
ನೋಡಿದಳೆನ್ನ ಸುಂದರತೆಯಂ ಬೆಱಗಾಗಿ ಧರಾಧಿನಾಯಕಾ ೨೫

ನಲವಿಂ ಮೆಯ್ಮುಱಿದೆಟ್ದು ಕೆಯ್ಯ ಚಿಟುಕಂ ಮೆಲ್ಪಿಂಕಳಲ್ದೊಯ್ಯನಾ
ಗಳೆ ತೋಱಲ್ ಚಿಟುಕಿಕ್ಕಿ ಕಣ್ಗಡರ್ದ ನೀರಂ ಚಿಮ್ಮಿ ಜೋಲ್ದಿರ್ದ ಕುಂ
ತಳಮಂ ತಿರ್ದಿ ಮಗುಟ್ದು ಮತ್ತನುವನೊಲ್ದಾಪಾದಮೂರ್ಧಾಂತಮಾ
ಗಲಲಂಪಿಂ ಸತಿ ನೋಡಿ ಮತ್ತೆ ಸುಖದಿಂ ಕಣ್ಮುಚ್ಚಿದಳ್ ಶಯ್ಯೆಯೊಳ್ ೨೬

ವ॥ ಅಂತವಳ್ ಮಗುಟ್ದು ಕಣ್ಗೆಯ್ದುದನಾಂ ಪುಸಿನಿದ್ರೆಯೊಳಿರ್ದಿದೇನೆಂದಾಶ್ಚರ್ಯಂ ಬಡುವನ್ನೆಗಂ,

ಮಣಿದೀಪನಾದ ರಾಜವಾಹನನೇ! ಹೀಗೆಂದು ನಾನು ಅರೆನಿಮಿಷ ಅದನ್ನೇ ಆಲೋಚಿಸುತ್ತಿದ್ದೆನು. ವ॥ ಹಾಗೆ ಆಶ್ಚರ್ಯವನ್ನು ಹೊಂದಿದ ಮೇಲೆ—೨೪. 'ಏನಾದರೂ ಆಗಲಿ' ಎಂದು ಆ ಕುಮಾರಿಯ ಶಯನ ಸ್ಥಾನಕ್ಕೆ ಬೇಗ ಹೋಗಿ ಅವಳ ಪಕ್ಕದಲ್ಲಿ ತೋಳುಗಳಿಗೆ ಸ್ವಲ್ಪ ತಗಲುವಂತೆ ಪ್ರೀತಿಯಿಂದ ಹತ್ತಿರಕ್ಕೆ ಸರಿದೆನು. ವ॥ ಹಾಗೆ ಹತ್ತಿರಕ್ಕೆ ಹೋಗಿರುವಾಗ—೨೫. ಹೂವಿನ ಹಾಸಿಗೆಗೆ ಬೀಸುವ ಗಾಳಿಯಿಂದಲೂ, ಸುಗಂಧವುಳ್ಳ ಮಂದಶ್ವಾಸಕ್ಕೆ ಬಂದೆರಗುವ ದುಂಬಿಯ ಮಧುರಧ್ವನಿಯಿಂದಲೂ, ನನ್ನ ಹೆಗಲಿನ ಸ್ಪರ್ಶದಿಂದಲೂ, ಬೆವರಿನ ತಂಪಿನಿಂದಲೂ, ನಿದ್ರೆಯು ತಿಳಿಯಿತು. ಆಗ ಅವಳು ಧರಾಧಿನಾಯಕನೆ, ನನ್ನ ಸೌಂದರ್ಯವನ್ನು ನೋಡಿ ಬೆರಗಾದಳು. ೨೬. ಎದ್ದು ಸಂತೋಷದಿಂದ ಮೈಯ್ಮುರಿದಳು. ಮೆಲ್ಲಗೆ ಕೈಯ ಚಿಟುಕನ್ನು ಮುರಿದಳು. ಕೂಡಲೆ ಆಕಳಿಸಿ ಚಿಟುಕೆ ಹಾಕಿದಳು. ಕಂಬನಿಯ ನೀರನ್ನು ಒರಸಿಕೊಂಡಳು. ಜೋತು ಬಿದ್ದಿದ್ದ ಕೂದಲನ್ನು ಸರಿಪಡಿಸಿಕೊಂಡಳು. ಕಾಲಿನಿಂದ ತಲೆಯವರೆಗೂ ನನ್ನನ್ನು ನೋಡಿ ಮತ್ತೆ ಹಾಸಗೆಯಲ್ಲಿ ಕಣ್ಮುಚ್ಚಿ ಮಲಗಿದಳು. ವ॥ ಮತ್ತೆ ಅವಳು ಹಾಗೆ ಕಾಣಿಸಲು

ಕಂ॥ ತರುಣಿಯ ಮೆಯ್ಸೋಂಕಿಂ ಬಂ
ಧುರಶಯ್ಯಾಸೌಖ್ಯದಿಂ ಪಥಶ್ರಮದಿಂದಂ
ಪರಿಣಾಮನಿದ್ರೆ ಬಂದಾ
ವರಿಸಿತ್ತೆನಗೇನನೆಂಬೆನತಿ ಕೌತುಕಮಂ ೨೭

ವ॥ ಆಂ ನಿದ್ರೆಯೊಳ್ ಕಿಱಿದು ಬೇಗಮಿರ್ಪುದುಂ

ಮೊಳೆಗಳ್ಗಳೌಂಕೆ ಜಂಝಾ
ನಿಳನಾರ್ಪಿಂ ಬೀಸೆ ಶೀತಮಾವರಿಸಿ ಪಸು
ರ್ದಳಿರೊಟ್ಟಲೊತ್ತೆ ಬೇಗಂ
ತಿಳಿಯಿತ್ತಂದೆನಗೆ ನಿದ್ರೆ ದುಃಖಂದೋಱಲ್ ೨೮

ವ॥ ಅಂತೆನಗೆ ನಿದ್ರೆ ತಿಳಿಯಲೊಡಂ

ಆ ನೃಪ ಮಂದಿರಮಾ ಚಂ
ದ್ರಾನನೆಯಿರ್ಪಾಸುಮಂಚಮಿಲ್ಲದೆ ಮುನ್ನೊ
ಲ್ದಾನಿರ್ದ ಮರದ ಕಠಿಣ
ಸ್ಥಾನಂ ಮಗುೞ್ದನಗೆ ಕಾಣಲಾಯ್ತಾಕ್ಷಣದೊಳ್ ೨೯

ವ॥ ಅಂತು ಮುನ್ನಿರ್ದ ಮರನಂ ಕಂಡು ರಾಜಭವನಮಂ ತತ್ಕುಮಾರಿಯುಮಂ ಕಾಣದೆ

ಇದು ಕನಸೆಂಬೊಡಂ ಕನಸಿದಲ್ತು ದಿಟಂ ದಿಟಮೆಂಬೊಡಂ ಮಗು
ೞ್ದಿದು ದೊರೆಕೊಳ್ಳದಿರ್ದ ದೆಸೆಯಿಂ ದಿಟಮಲ್ತು ಮದೀಯಚಿತ್ತಮಾ
ಸುದತಿಗೆ ಮಾಱುವೋಯ್ತದಱ ಕಾರಣಮಂ ತಿಳಿವನ್ನೆಗಂ ಮನಾಂ
ತರದೊಳೊಱಗಿರ್ಪೆನೆಂದು ಮುಸುಕಂ ಪದೆದೆನ್ನ ಮುಖಕ್ಕೆ ಸಾರ್ಚಿದೆಂ ೩೦

ನಾನು ಹುಸಿನಿದ್ದೆಯಲ್ಲಿದ್ದು 'ಇದೇನೆಂದು' ಆಶ್ಚರ್ಯಪಟ್ಟೆನು. ಆಗ—೨೭. ಆ ತರುಣಿಯ ಮೈಯ ಸೋಂಕಿನಿಂದಲೂ, ಮೃದುವಾದ ಹಾಸಿಗೆಯ ಸೌಖ್ಯದಿಂದಲೂ, ದಾರಿಯ ಆಯಾಸದಿಂದಲೂ, ಪುಂಜಾಪದ ನಿದ್ದೆಯು ನನ್ನನ್ನು ಬಂದಾವರಿಸಿತು. ಆಶ್ಚರ್ಯವನ್ನು ಏನೆಂದು ಹೇಳಲಿ! ವ॥ ಸ್ವಲ್ಪ ಕಾಲ ನಾನು ನಿದ್ದೆಯಲ್ಲಿ ಮುಳುಗಿರಲು—೨೮. ಬೇರುಗಳು ಚುಚ್ಚಿಕೊಂಡುವು. ಮಳೆ ಗಾಳಿಯು ವೇಗವಾಗಿ ಬೀಸಿ ಶೀತವು ಆವರಿಸಿಕೊಂಡಿತು. ಹಸಿರು ಚಿಗುರಿನ ರಾಶಿಯು ಮೈಗೆ ಒತ್ತಿಕೊಂಡಿತು. ಇವುಗಳಿಂದ ನನಗೆ ನಿದ್ದೆಯಿಂದೆಚ್ಚರವಾಯಿತು. ಅದರಿಂದ ದುಃಖವೇ ಆಯಿತು. ವ॥ ಹಾಗೆ ನನಗೆ ನಿದ್ದೆಯಿಂದೆಚ್ಚರವಾಯಿತು—ಆಗ ೨೯. ಆ ಅರಮನೆ, ಆ ಚಂದ್ರಮುಖಿ, ಅವಳ ಹಾಸಿಗೆ, ಮಂಚ, ಒಂದೂ ಕಾಣಿಸಲಿಲ್ಲ. ಮತ್ತೆ ಮೊದಲು ನಾನು ಮಲಗಿದ್ದ ಮರದ ಕೆಳಗಿನ ಕಠಿಣವಾದ ನೆಲವೇ ಕಾಣಿಸಿತು. ವ॥ ಹಾಗೆ ಮೊದಲು ಇದ್ದ ಮರವನ್ನು ಕಂಡೆನು. ಅರಮನೆಯನ್ನೂ ಆ ಕುಮಾರಿಯನ್ನೂ ಕಾಣಲಿಲ್ಲ. ೩೦. ಇದು ಕನಸು ಎಂದು ಹೇಳಬಹುದಾದರೂ ನಿಜವಾಗಿ ಕನಸಲ್ಲ. ನಿಜವೆಂದು ಹೇಳಬಹು

ಕಂ॥ ದೊರೆವೆತ್ತ ಪೂರ್ವದಿಗ್ಭೂ
ಧರಗುಹೆಯುಂ ಕಿರಣನಖರಮಂ ಮಸೆದಿನಕೇ
ಸರಿ ಪೊಱಮಟ್ಟೆಳೆಯ ತಮಃ
ಕರಿಯಂ ಘುಟುಕೆಂದು ನುಂಗಿದತ್ತಾಕ್ಷಣದೊಳ್ ೩೧

ವ॥ ಅಂತು ಸೂರ್ಯೋದಯಮಾಗಲಾಂ ನಿದ್ರೆಯಿಂದೆೞ್ದು ಸಂಧ್ಯಾವಂದನಂಗೆಯ್ದು ತತ್ಕುಜದ ತಣ್ಪಿನೊಳ್ ಕುಳ್ಳಿರ್ದಾರಾತ್ರಿಯ ವೃತ್ತಾಂತಮನೆನ್ನೊಳಾಂ ವಿಚಾರಿಸುತಿರ್ಪನ್ನೆಗಂ

ಬಿಡುಜಡೆ ಕರ್ಣಕುಂಡಲಮುಡರ್ದ ಘಟಸ್ತನಮಿಟ್ಟ ಭಸ್ಮಮು
ಳ್ಳುಡೆಗಳವಟ್ಟ ವಲ್ಕವಸನಂ ಪೊಸಮುತ್ತಿನವಕ್ಷಮಾಲೆಯೊ
ರ್ಪಿಡಿನಡು ತನ್ನೊಳೊಪ್ಪುತಿರಲೊರ್ಬ ತಪಸ್ವಿನಿ ಬಂದು ಕೂರ್ಮೆ ನೂ
ರ್ಮಡಿಸಿರೆ ಮಾತೃಮೋಹಮೆಸೆಯಲ್ ಪದೆದಪ್ಪಿದಳೆನ್ನನುರ್ವಿಪಾ ೩೨

ವ॥ ಅಂತೆನ್ನನಾ ತಪಸ್ವಿನಿಯುಪ್ಪಿ

ಕಂ॥ ಎಲೆ ಮಗನೆ ವನದೊಳೊರ್ಬನೆ
ತೊಲಲುತ್ತಿರ್ಪೇಕೆಯೆಂದೊಡಾಂ ನೀನಾರೆಂ
ದೊಲವಿಂ ಕೇಳಲ್ ತಾರಾ
ವಳಿಯಾನೆಂದಾಕೆ ನಗುತೆ ಮತ್ತಿಂತೆಂದಳ್ ೩೩

ದಾದರೂ ಮತ್ತೆ ಕಾಣಿಸದೇ ಇರುವುದರಿಂದ ನಿಜವಲ್ಲ. ನನ್ನ ಮನಸ್ಸು ಆ ತರುಣಿಗೆ ಮಾರುಹೋಗಿದೆ. ಇದಕ್ಕೆ ಕಾರಣವನ್ನು ತಿಳಿಯುವವರೆಗೂ ಈ ಕಾಡಿನ ನಡುವೆಯೇ ಇರುವೆನು ಎಂದು ಯೋಚಿಸಿ ಮುಖದ ಮೇಲೆ ಮುಸುಕನ್ನು ಎಳೆದುಕೊಂಡು ಮಲಗಿದೆನು. ೩೧. ಸೂರ್ಯನೆಂಬ ಸಿಂಹವು ಪ್ರಸಿದ್ಧವಾದ ಪೂರ್ವದಿಕ್ಕಿನ ಉದಯಾದ್ರಿಯ ಗುಹೆಯಿಂದ ಹೊರ ಬಂದು ಕಿರಣಗಳೆಂಬ ಉಗುರುಗಳನ್ನು ಮಸೆದು ಭೂಮಿಯ ಕತ್ತಲೆಯೆಂಬ ಆನೆಯನ್ನು ಆ ಕ್ಷಣದಲ್ಲಿ ಘುಳುಕ್ಕೆಂದು ನುಂಗಿತು. ಸೂರ್ಯೋದಯವಾಗಿ ಕತ್ತಲೆ ಹರಿಯಿತು. ವ॥ ಸೂರ್ಯೋದಯವಾಗಲು ನಿದ್ದೆ ತಿಳಿದು ಎಚ್ಚತ್ತೆನು. ಸಂಧ್ಯಾವಂದನೆಯನ್ನು ಮಾಡಿದೆನು. ಆ ಮರದ ನೆರಳಿನಲ್ಲಿ ಕುಳಿತು ಆ ರಾತ್ರಿಯ ವೃತ್ತಾಂತವನ್ನು ಮನದಲ್ಲಿ ಆಲೋಚಿಸುತ್ತಿದ್ದೆನು. ಆಗ—೩೨. ಸಡಿಲವಾಗಿ ನೇತಾಡುವ ಜಡೆ, ಕರ್ಣಕುಂಡಲ, ಘಟ ಸ್ತನ, ಹಚ್ಚಿದ ಬೂದಿ, ನಾರು ಸೀರೆ, ಮುತ್ತಿನ ಜಪಸರ, ಒಂದು ಅಂಗೈಗೆ ಅಡಗುವ ಸಣ್ಣ ನಡು—ಇವುಗಳಿಂದ ರಂಜಿಸುವ ತಪಸ್ವಿನಿಯೊಬ್ಬಳು ಅಲ್ಲಿಗೆ ಬಂದಳು. ರಾಜನೆ ! ಅವಳು ತಾಯಿಯಂತೆ ಪ್ರೀತಿದೋರುತ್ತಾ ನನ್ನನ್ನು ಅಪ್ಪಿಕೊಂಡಳು. ವ॥ ಹಾಗೆ ಆ ತಪಸ್ವಿನಿಯು ನನ್ನನ್ನು ಅಪ್ಪಿಕೊಂಡು—೩೩. "ಎಲೆ ಮಗನೆ, ಕಾಡಿನಲ್ಲಿ ಒಬ್ಬನೆ ಏಕೆ ಹೀಗೆ ಅಲೆಯುತ್ತಿದ್ದೀಯೆ ?" ಎಂದು ಕೇಳಿದಳು. ಅದಕ್ಕೆ ನಾನು 'ನೀನಾರು ?' ಎಂದು ಒಲವಿನಿಂದ ಕೇಳಿದೆನು. 'ನಾನು ತಾರಾವಳಿ'

ದೊರೆವೆತ್ತೊರ್ವ ತಪೋಧನಂ ವನದೊಳೆನ್ನಂ ಕಂಡೆಲೆಕಾಂತೆಯೀ
ಪರಿ ವೇಷಂ ನಿನಗಕ್ಕೆನುತ್ತೆ ಮಱುಮಾತಂ ಕೇಳದಾತಂ ನಿರಂ
ತರದಿಂ ಶಾಪಮನಿತ್ತನೀಯಲನಿಶಂ ಚಂಚಜ್ಜಟಾವಲ್ಕಲಾಂ
ಬರಭಸ್ಮಂ ನೆಲಸಿತ್ತು ಮತ್ತನುವಿನೊಳ್ ಕೇಳ್ ಪೆಂಪಿನಿಂ ಪುತ್ರಕಾ ೩೪

ವ॥ ಅಂತಾ ತಪೋಧನಂ ನಿಷ್ಕಾರಣಂ ಶಾಪಮನೆನಗೆ ಕುಡಲ್,

ಕಂ॥ ಈ ಶಾಪಮೋಕ್ಷಕಾರಣ
ಮೀಶಾನಪದಾಬ್ಜಸೇವೆಗೆಯ್ದಘಕುಲಮಂ
ನಾಶಮನೆಯ್ದಿಸೆ ಪುಣ್ಯದ
ರಾಶಿಗೆ ಶ್ರಾವಸ್ತಿನಗರಿಗಾಂ ಪೋಪಾಗಳ್ ೩೫

ಇರುಳೊರ್ಬನೆ ನೀನಾಲದ
ಮರದಡಿಯೊಳ್ ನಿದ್ರೆಗೆಯ್ದಿರಲ್ ಕಂಡಾಂ ಮೋ
ಹರಸಂ ಮಿಕ್ಕೆನ್ನಯ ಕರ
ಸರಸಿಜದೊಳಗಾಂತು ಪೋಗುತಿರ್ಪಾಪದದೊಳ್ ೩೬

ಜನವಿಖ್ಯಾತಿಯನಾಂತು ರಂಜಿಸುವಿನಂ ಶ್ರಾವಸ್ತಿಯೊಳ್ ಧರ್ಮವ
ರ್ಧನರಾಜಾತ್ಮಜೆ ಪೆಂಪಿನುಪ್ಪರಿಗೆಯೊಳ್ ಕಾಂತಾಲಸನ್ಮಧ್ಯದ
ಲ್ಲಿ ನಿತಾಂತಂ ನವಮಾಲಿಕಾಖ್ಯೆ ಮೃದುಶಯ್ಯಾ ಮಂಚದೊಳ್ ನಿದ್ರೆಗೆ
ಯ್ವ ನಿವಾಸಂ ಮೆಱೆದಿರ್ಪುದಂ ಪದೆಪಿನಿಂ ಕಂಡೆಂ ಮನಃಪ್ರೀತಿಯಿಂ ೩೭

ಎಂದು ಹೇಳಿ ಮತ್ತೆ ಹೇಳಿದಳು. ೩೪. "ಒಮ್ಮೆ ಮುನಿಯೊಬ್ಬನು ಕಾಡಿನಲ್ಲಿ ನನ್ನನ್ನು ಕಂಡನು. ಅವನು 'ಎಲೆ ಕಾಂತೆ, ನಿನಗೆ ಈ ಪರಿಯಾದ ವೇಷವು ಬರಲಿ ಎಂದು ಹೇಳಿ ಮರುಮಾತಿಗೆ ಅವಕಾಶ ಕೊಡದೆ ಶಾಪವನ್ನು ಕೊಟ್ಟು ಹೋದನು! ಅಂದಿನಿಂದ ನನ್ನ ಮೈಯ್ಯಲ್ಲಿ ಈ ಜಡೆ ನಾರು ಬಟ್ಟೆ ಭಸ್ಮಗಳು ಬಂದು ಸೇರಿಕೊಂಡಿವೆ. ಮಗನೆ, ಕೇಳು, ಇದು ನನ್ನ ವಿಚಾರ. ವ॥ ಹೀಗೆ ಆ ಮುನಿಯು ಕಾರಣವಿಲ್ಲದೆ ನನಗೆ ಶಾಪವನ್ನು ಕೊಟ್ಟನು—೩೫. ಈ ಶಾಪದ ಬಿಡುಗಡೆಗಾಗಿ ನಾನು ಶಿವನ ಪಾದಕಮಲಗಳ ಸೇವೆ ಮಾಡಿ ಪಾಪವನ್ನು ಕಳೆದುಕೊಳ್ಳುವುದಕ್ಕೋಸ್ಕರ ಶ್ರಾವಸ್ತಿನಗರಿಗೆ ಹೊರಟೆನು. ಆ ನಗರಿಯು ಪುಣ್ಯದ ರಾಶಿ. ಆಗ ೩೬. ರಾತ್ರಿ ನೀನೊಬ್ಬನೆ ಈ ಆಲದ ಮರದ ಕೆಳಗೆ ನಿದ್ದೆ ಮಾಡಿದ್ದೆ. ನೋಡಿ ಪ್ರೀತಿಯಿಂದ ನಿನ್ನನ್ನು ಕೈಯಿಂದ ಎತ್ತಿಕೊಂಡು ಹೊರಟೆ. ಆಗ ೩೭. ಶ್ರಾವಸ್ತಿನಗರವು ಜನರಲ್ಲಿ ಪ್ರಸಿದ್ಧವಾಗಿ ರಂಜಿಸುತ್ತಿದೆ. ಅಲ್ಲಿ ಧರ್ಮವರ್ಧನ ರಾಜನ ಮಗಳು ನವಮಾಲಿಕೆಯು ಅರಮನೆಯ ಹಿರಿಯ ಉಪ್ಪರಿಗೆಯಲ್ಲಿ ಹಲವು ಕಾಂತೆಯರ ನಡುವೆ ಮೃದುವಾದ ಹಾಸಿಗೆಯಲ್ಲಿ ಮಂಚದ ಮೇಲೆ ಮಲಗಿ

ವ॥ ಅಂತು ಶ್ರಾವಸ್ತಿಯ ಧರ್ಮವರ್ಧನನ ಕುವರಿ ನವಮಾಲಿಕೆ ಉಪ್ಪರಿಗೆಯೊಳಿರ್ದುದಂ ಕಂಡು

ಕಂ॥ ಹರೆಯುದವನಂ ಭವಾನೀ
ವರನ ಗಣಸ್ತ್ರೀಯರಿರ್ದ ಠಾವಿಂಗುಯ್ಯಲ್
ಪಿರಿಯರದೇನೆಂಬರೆನು
ತ್ತುರುಮುದದಿಂ ನಿನ್ನನಲ್ಲಿ ಮಡಗಿದೆನೊಲವಿಂ ೩೮

ವ॥ ಅಂತು ನಿನ್ನನಿರಿಸಿಯಾಂ ಶ್ರಾವಸ್ತಿಯ ಪೊಱವೊಟಲ ತ್ರ್ಯಂಬಕನ ದೇವಾಲಯಕ್ಕೆ ಪೋಗಿ

ಅಂಬಿಕೆಯಾಣ್ಮನಂ ಸುರನರೋರಗಕಿನ್ನರ ವೃಂದ ವಂದ್ಯ ಪಾ
ದಾಂಬುಜನಂ ಪುರತ್ರಯುಮನೀಕ್ಷಣದಿಂ ತವೆ ಸುಟ್ಟ ವಿಕ್ರಮಾ
ಡಂಬರನಂ ಮನೋಜಮದ ಕುಂಜರಭಂಜಿತಪಂಚವಕ್ತ್ರನಂ
ತ್ರ್ಯಂಬಕನಂ ನಮಸ್ಕರಿಸಿದೆಂ ಮನದುತ್ಸವದಿಂ ಕುಮಾರಕಾ ೩೯

ಸ್ನಿಗ್ಧಪಿಶಂಗಭಂಗುರ ಜಟಾಭರಮಂಬರಗಂಗೆ ಭಾವಿಸಲ್
ಮುಗ್ಧಹಿಮಾಂಶುಲೇಖೆ ನಿಟಿಲಾಕ್ಷಿಯುದಗ್ರ ಫಣೀಂದ್ರಕಂಕಣಂ
ದಗ್ಧನಿಧಿ ಪ್ರಕಾಶತನು ರಂಜಿಸುವಂಗೆ ಮುನೀಂದ್ರಶಾಪಮಂ
ದಗ್ಧಮನೆಯ್ದೆ ಸಲ್ಕೆಱಗಿದೆಂ ನಿಜಸಂಸ್ತವದಿಂ ಕುಮಾರಕಾ ೪೦

ನಿದ್ರಿಸುತ್ತಿದ್ದಳು. ನಾನವಳನ್ನು ಪ್ರೀತಿಯಿಂದ ಕಂಡೆನು. ವ॥ ಹಾಗೆ ಶ್ರಾವಸ್ತಿಯ ಧರ್ಮವರ್ಧನನ ಕುಮಾರಿ ನವಮಾಲಿಕೆಯು ಉಪ್ಪರಿಗೆಯ ಮೇಲಿದ್ದುದನ್ನು ನೋಡಿ ೩೮. ಪ್ರಾಯದವನನ್ನು ಹರನ ಗಣಸ್ತ್ರೀಯರಿರುವ ಸ್ಥಾನಕ್ಕೆ ಕರೆದುಕೊಂಡು ಹೋದರೆ ಹಿರಿಯರು ಏನು ಹೇಳಿಯಾರೋ–ಎಂದು ಹೆದರಿ ನಿನ್ನನ್ನು ಸಂತೋಷದಿಂದ ಅಲ್ಲಿ ಮಲಗಿಸಿದೆನು. ವ॥ ಹಾಗೆ ನಿನ್ನನ್ನು ಅಲ್ಲಿರಿಸಿ ನಾನು ಶ್ರಾವಸ್ತಿನಗರದ ಹೊರಗಡೆಯ ಶಿವನ ದೇವಾಲಯಕ್ಕೆ ಹೋಗಿ—೩೯. ಕುಮಾರನೆ ! ಅಂಬಿಕೆಯ ಪತಿಯಾದ, ಮುಕ್ಕಣ್ಣನಿಗೆ ಹರ್ಷದಿಂದ ವಂದಿಸಿದೆನು. ಅವನ ಪಾದಕಮಲಗಳಿಗೆ ಸುರ ನರ ಉರಗ ಕಿನ್ನರರೆಲ್ಲರೂ ನಮಸ್ಕರಿಸುತ್ತಾರೆ. ಅವನು ನೋಡುವುದರಿಂದಲೇ ತ್ರಿಪುರಗಳನ್ನು ಸುಟ್ಟು ಪರಾಕ್ರಮವನ್ನು ಮೆರೆದವನು. ಮನ್ಮಥನೆಂಬ ಮದ್ದಾನೆಯನ್ನು ಭಂಗಿಸಿದ ಐದು ಮುಖಗಳ ಪರಮೇಶ್ವರನು. ೪೦. ಸುಂದರವಾದ ಚಿನ್ನದ ಬಣ್ಣದ ಜೋಲಾಡುವ ಜಟೆಯ ಗಂಟು, ಆಕಾಶಗಂಗೆ, ಮನೋಹರವಾದ ಚಂದ್ರಲೇಖೆ, ಹಣೆಗಣ್ಣು, ಬಳೆಯಾದ ಫಣೀಂದ್ರ, ತಪ್ತಸುವರ್ಣದಂತೆ ಪ್ರಕಾಶವುಳ್ಳ ಶರೀರ–ಇವುಗಳಿಂದ ರಂಜಿಸುವ ಶಿವನಿಗೆ ಮುನೀಂದ್ರನ ಶಾಪವನ್ನು ಸುಟ್ಟು ಹಾಕೆಂದು ಸ್ತೋತ್ರಮಾಡಿ ನಮಸ್ಕರಿಸಿದೆನು.

ವ॥ ಅಂತು ತ್ರ್ಯಂಬಕ ದೇವರನುಪಾಸ್ತಿಗೆಯ್ದು ಶಾಪಮೋಕ್ಷಮಂ ಪಡೆದು

ಕಂ॥ ತ್ರ್ಯಂಬಕನಂ ಬೀಳ್ಕೊಂಡ
ಲ್ಲಿಂ ಬರ್ಪಾಗಳ್ ಮಗುಳ್ದು ನಿನ್ನುಮನಾಂ ಕೊಂ
ಡೆಂಬಿನ ವಟಕುಜದಡಿಯೊಳ್
ಮುಂ ಬನದೊಳಗಿರ್ದ ತೆಱದಿನಿರಿಸಿದೆನಾಗಳ್ ೪೧

ವ॥ ಎಂದು ಮತ್ತಮಿಂತೆಂದಳ್

ಕಂ॥ ವಸುಮತಿ ನಿನ್ನೊಡನೇನುಮ
ನುಸಿರ್ದಪಳಿಲ್ಲಕ್ಕುಮೊಯ್ದು ಪುತ್ರನನಾನಿ
ತ್ತೆಸಕದ ಕಾರ್ಯಮನೆಂದೊ
ಲ್ದು ಸರೋರುಹವದನೆ ಕೇಳ್ದಳೆನ್ನನಿಳೇಶಾ ೪೨

ವ॥ ಅಂತು ಕೇಳ್ದನಂತರಮೆನ್ನಂ ತೂಪಿಱಿದು ಪರಸಿ ಎನಗೆ ಶಾಪಮೋಕ್ಷಮಾದುದು; ಆಂ ನಿನ್ನ ಸ್ನೇಹಪಿತೃವಪ್ಪ ಕಾಮಪಾಲನ ಪಾದಸೇವೆಗೆ ಪೋದಪೆನೆಂದು ತಾರಾವಳಿ ಪೋಗ ಲೊಡಂ

ಕಂ॥ ಅವನಿಪ ತಾರಾವಳಿ ಪೇ
ಳ್ದ ವಿಶೇಷಂ ಕರ್ಣಕೌತುಕಂಬಡೆದಿರಲಾಂ
ನವಮಾಲಿಕೆಯೆಂಬಳನೆೊ
ಲ್ದು ವಿಚಾರಿಪೆನೆಂದು ಮನದೊಳುದ್ಯೋಗಿಸಿದೆಂ ೪೩

ವ॥ ಹಾಗೆ ಮುಕ್ಕಣ್ಣನನ್ನು ಸ್ತುತಿಸಿ ಶಾಪದಿಂದ ಬಿಡುಗಡೆ ಹೊಂದಿದೆನು. ೪೧. ಮುಕ್ಕಣ್ಣನ ದರ್ಶನಮಾಡಿ ಹಿಂದಿರುಗುವಾಗ ಮತ್ತೆ ನಿನ್ನನ್ನು ಎತ್ತಿಕೊಂಡು ಹೋಗಿ ಕಾಡಿನಲ್ಲಿ ಅದೇ ಆಲದ ಮರದ ಕೆಳಗೆ ಮೊದಲಿದ್ದ ಹಾಗೆಯೇ ಮಲಗಿಸಿ ದೆನು.” ವ॥ ಅವಳು ಮತ್ತೆ ಹೇಳಿದಳು — ೪೨. “ವಸುಮತಿಯು ನಾನು ಮಗನನ್ನು ಎತ್ತಿಕೊಂಡು ಹೋಗಿ ಕೊಟ್ಟ ಸಂಬಂಧವಾಗಿ ನಿನಗೆ ಏನನ್ನೂ ಹೇಳಿ ದಂತೆ ಕಾಣಿಸಲಿಲ್ಲ”. ಎಂದು, ರಾಜನೇ, ಆ ಕಮಲ ಮುಖಿಯು ನನ್ನನ್ನು ಕೇಳಿದಳು. ವ॥ ಹಾಗೆ ಕೇಳಿದ ಮೇಲೆ ಅವಳು ನನ್ನನ್ನು ಕೈಯಿಂದ ಸವರಿ ಹರಸಿದಳು. ‘ನನಗೆ ಶಾಪದಿಂದ ಬಿಡುಗಡೆಯಾಯಿತು. ನಾನು ನಿನ್ನ ಸ್ನೇಹಪಿತೃವಾದ ಕಾಮಪಾಲನ ಪಾದ ಸೇವೆಗೆ ಹೋಗುತ್ತೇನೆ’ ಎಂದು ಹೇಳಿ ತಾರಾವಳಿಯು ಹೊರಟು ಹೋದಳು. ೪೩. ರಾಜನೇ ! ತಾರಾವಳಿಯು ಹೇಳಿದ ವಿಶೇಷ ವಿಚಾರವು ಕಿವಿಗಳಿಗೆ ಕೌತುಕವನ್ನುಂಟು ಮಾಡಿತು. ನವಮಾಲಿಕೆಯೆಂಬುವಳನ್ನು ವಿಚಾರಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿದೆನು.

ಕಂ|| ದೇವತೆಯೆನ್ನುದ್ಯೋಗ
ಕ್ಕಾವಗಮನುಕೂಲಮಕ್ಕೆನುತ್ತುರುಮುದದಿಂ
ಶ್ರಾವಸ್ತಿಯೆಂಬ ಪಟ್ಟಣ
ದಾವರ್ತಂಬಿಡಿದು ನಡೆದೆನತ್ಯುತ್ಸವದಿಂ ೪೪

ವ|| ಅಂತು ನಡೆಯಲ್ ಮುಂದೆ

ಕಂ|| ಮಿಸುನಿಯ ಕೋಂಟೆಯ ತೆನೆಗಳ್
ನಸು ಪೊಳೆಯಲ್ಕೆನ್ನ ಕಣ್ಗೆ ದೂರದೊಳಾಂ ಕಂ
ಡೊಸೆದೆಂ ಮನದುತ್ಸವದಿಂ
ಪೆಸರಿಂ ಶ್ರಾವಸ್ತಿ ತಾನಿದಪ್ಪುದೆನುತ್ತುಂ ೪೫

ವ|| ಅದಂ ಕಂಡು,

ಕಂ|| ಚರಣಕ್ಕೆ ಗಱಿಗಳೊಗೆದಂ
ತಿರೆ ನವಮಾಲಿಕೆಯನೆಯ್ದೆ ನೋಟ್ಪೆನೆನುತ್ತುಂ
ತ್ವರಿತಗತಿಯಿಂದೆ ನಡೆಯಲ್
ಪುರಮೊಪ್ಪಿತ್ತೆನ್ನಿದಿರ್ಗದೆಂತೆನೆ ಪೇಟ್ವೆಂ ೪೬

ಮನೆಮನೆಗಳ್ಗೆ ರಂಜಿಸುವ ಪೊಂಗಳಸಂ ಮಿಗೆ ಕೇರಿಕೇರಿಯೊಳ್
ಜನನುತಶಸ್ತ್ರಶಾಸ್ತ್ರ ಪರಿಚಿಂತನೆಯುನ್ನತ ರಾಜವೇಶ್ಮದೊ
ಳ್ಪಿನ ನವರತ್ನದುಪ್ಪರಿಗೆಗಳ್ ನಿಜಲೀಲೆಯೊಳೊಪ್ಪುತಿರ್ಪ ಪ
ದ್ಮಿನಿಯರ ಸಂಕುಳಂ ಮೆಱೆವಿನಂ ಪೆಸರ್ವೆತ್ತುದು ನೋಡೆ ತತ್ಪುರಂ ೪೭

೪೪. ‘ದೇವತೆಯು ನನ್ನ ಪ್ರಯತ್ನಕ್ಕೆ ಯಾವಾಗಲೂ ಅನುಕೂಲವಾಗಲಿ’ ಎಂದು ದೇವತೆಗೆ ವಂದಿಸಿದೆನು. ಆ ಮೇಲೆ ಅತ್ಯಾನಂದದಿಂದ ಶ್ರಾವಸ್ತಿಯೆಂಬ ಪಟ್ಟಣದ ದಾರಿ ಹಿಡಿದು ನಡೆದೆನು. ವ|| ಹಾಗೆ ನಡೆಯಲು ಮುಂದೆ ೪೫. ಚಿನ್ನದ ಕೋಟೆಯ ತೆನೆಗಳು ದೂರದಿಂದಲೇ ಕಂಗಳಿಗೆ ಹೊಳೆದು ಕಾಣಿಸಿತು. ಆನಂದದಿಂದ ಇದೇ ಶ್ರಾವಸ್ತಿನಗರವೆಂದು ತಿಳಿದೆನು. ವ|| ಅದನ್ನು ನೋಡಿ—೪೬. ನವಮಾಲಿಕೆಯನ್ನು ನೋಡಬೇಕೆಂದು ಕಾಲಿಗೆ ಗರಿಗಳು ಬಂದ ಹಾಗೆ ಬೇಗ ಬೇಗ ನಡೆದನು. ನನ್ನಿದಿರಿಗೇ ನಗರವು ಕಾಣಿಸಿತು. ಅದನ್ನು ಹೇಗೆಂದು ವರ್ಣಿಸಲಿ. ೪೭. ೪೭. ಆ ಪುರದಲ್ಲಿ ಮನೆ ಮನೆಗೂ ಚಿನ್ನದ ಕಲಶಗಳು ರಂಜಿಸುತ್ತಿದ್ದುವು. ಕೇರಿ ಕೇರಿಯಲ್ಲಿಯೂ ವಿಶೇಷವಾಗಿ ಶಸ್ತ್ರಾಭ್ಯಾಸವೂ ಶಾಸ್ತ್ರಾಭ್ಯಾಸವೂ ನಡೆಯುತ್ತಿತ್ತು. ಎತ್ತರವಾದ ಅರಮನೆಯ ನವರತ್ನಗಳು ಉಪ್ಪರಿಗೆಗಳು ಪ್ರಕಾಶಿಸುತ್ತಿದ್ದುವು. ಪದ್ಮಿನೀ ಜಾತಿಯ ನಾರಿಯರು ತುಂಬಿದ್ದರು. ಇವುಗಳಿಂದ ಆ ಶ್ರಾವಸ್ತಿ ನಗರವು ಹೆಸರು

ವ॥ ಅಂತೆಸೆವ ಪುರದ ಕೇರಿಯೊಳಗೆ ನಾಂ ಬರ್ಪಾಗಳ್

ಕಂ॥ ಪಡುವಣ ಮೂಡಣ ಕೇರಿಗ
ಳೊಡೆಯರ್ ಕೆಲರೊಡ್ಡವಿಕ್ಕಿ ಕೋೞಿಗಳೆರಡಂ
ಸಡಗರದಿಂ ಕಾದಿಸುತಿ
ರ್ಪೆಡೆಯಂ ಕಂಡಲ್ಲಿ ನಿಂದು ನೋಡುತ್ತಿರ್ದೆಂ ೪೮

ತಲೆಯೊಳ್ ವಿದ್ರುಮಮಂ ನಿಜಾಕ್ಷಿಯುಗದೊಳ್ ಮಾಣಿಕ್ಯಮಂ ಪಕ್ಷಸಂ
ಕುಳದೊಳ್ ಪಚ್ಚೆಯನಿಂದ್ರನೀಲಮನಲಂಪಿಂ ಗರ್ಭದೊಳ್ ಮೌಕ್ತಿಕಾ
ವಳಿಯಂ ವಜ್ರಮನುಗ್ರಚಂಚುಪುಟಯೊಳ್ ಪಾದಂಗಳೊಳ್ ಮಿಕ್ಕ ನಿ
ರ್ಮಳರತ್ನಂಗಳನಾವಗಂ ನೆನೆಯಿಸಲ್ಪಾರ್ದಿರ್ದುವಾ ಕೋೞಿಗಳ್ ೪೯

ಚಲಿಸದ ದೃಷ್ಟಿ ಸುಬ್ಬಡರ್ದು ನೀಡಿದ ಗೋಣ್ ಶಿಖಿಯಂ ತುಡುಂಕಲ
ವ್ವಳಿಸುವ ಚಂಚುಘಾತಿಯುೞಿದಾರ್ದೊಡೆ ಪಾರಿ ಮಿಡುಂಕುತಿರ್ಪ ತೊ
ಟ್ಟುೞಿಕೆ ಚಲಂ ಕವಲ್ತು ಪೆಱಮೆಟ್ಟದ ಬಲ್ಪು ವಿರಾಜಿಸಲ್ಕೆ ಮೆ
ಯ್ಗಲಿತನದಿಂ ತೊಡರ್ಚಿದುವು ಕಾಳೆಗಮಂ ಕಡುಕೆಯ್ದು ಕೋೞಿಗಳ್ ೫೦

ವ॥ ಅಂತು ಕಾದಾಡುತಿರ್ಪ ಕೋೞಿಗಳಂ ಕಂಡಾ ಪಡುವಣ ಕೋೞಿಯೊಡೆಯನಪ್ಪ ಮಿತ್ರವರನೆಂಬ ವೃದ್ಧವಿಟನೊಳಿಂತೆಂದೆಂ

ವಾಸಿಯಾಗಿದ್ದಿತು. ವ॥ ಹಾಗೆ ಪ್ರಕಾಶಿಸುತ್ತಿದ್ದ ನಗರದ ಕೇರಿಯಲ್ಲಿ ನಾನು ಬರುತ್ತಿದ್ದೆನು. ಆಗ—೪೮. ಪಶ್ಚಿಮ ಮತ್ತು ಪೂರ್ವದ ಕೇರಿಗಳ ಒಡೆಯರು ಕೆಲವರು ಪಣವನ್ನು ಒಡ್ಡಿ ಸಡಗರದಿಂದ ಎರಡು ಕೋಳಿಗಳನ್ನು ಕಾದಿಸುತ್ತಿದ್ದರು. ನಾನು ಅಲ್ಲಿ ಅದನ್ನು ನೋಡುತ್ತಾ ನಿಂತೆನು. ೪೯. ಆ ಕೋಳಿಗಳು ತಲೆಯಿಂದ ಹವಳವನ್ನೂ, ತಮ್ಮೆರಡು ಕಣ್ಣುಗಳಿಂದ ಮಾಣಿಕ್ಯ ರತ್ನವನ್ನೂ, ರೆಕ್ಕೆಗಳಿಂದ ಪಚ್ಚೆರತ್ನವನ್ನೂ, ತಮ್ಮ ಹೊಟ್ಟೆಯಿಂದ ಇಂದ್ರ ನೀಲರತ್ನವನ್ನೂ, ಹರಿತವಾದ ಕೊಕ್ಕುಗಳಿಂದ ಮುತ್ತನ್ನೂ ವಜ್ರವನ್ನೂ, ಪಾದಗಳಿಂದ ಉಳಿದ ನಿರ್ಮಲವಾದ ರತ್ನಗಳನ್ನೂ ನೆನಪಿಗೆ ಬರುವಂತೆ ಮಾಡುತ್ತಿದ್ದುವು. ೫೦. ನೆಟ್ಟ ನೋಟದಿಂದ ಸ್ಥಿರವಾಗಿ ನೋಡುತ್ತಿದ್ದುವು. ಮೈಗೂದಲನ್ನು ನಿಮಿರಿಸಿಕೊಂಡು ಕುತ್ತಿಗೆಯನ್ನು ನೀಡಿದ್ದುವು ಎದುರಾದ ಕೋಳಿಯನ್ನು ಕೊಕ್ಕಿನಿಂದ ಅಪ್ಪಳಿಸಿ ಹೊಡೆಯುತ್ತಿದ್ದುವು. ಇರಿದು ಕೂಗಿದಾಗ ಬೆವರು ನೀರು ಉಕ್ಕಿ ಹನಿಗಳು ಉದುರುತ್ತಿದ್ದವು. ಛಲವು ಹೆಚ್ಚಿ ಹಿಂದಕ್ಕೆ ಸರಿಯದೆ ಬಲದಿಂದ ಹೋರಾಡುತ್ತಿದ್ದುವು. ಹೀಗೆ ಕೋಳಿಗಳು ಶೌರ್ಯದಿಂದ ಕಾದಾಡಿದುವು. ವ॥ ಹಾಗೆ ಕಾದಾಡುತ್ತಿದ್ದ ಕೋಳಿಗಳನ್ನು ಕಂಡು ಆ ಪಶ್ಚಿಮದ ಕೇರಿಯ ಕೋಳಿ

ಕಂ॥ ನೀಡಿದ ಗೋಣ್ ಸಿತದೇಹಂ
ಪೇಡಿಮನಂ ಭಾವಿಸಲ್ ಮೃದುಪ್ರಾಣಂಗಳ್
ನೋಡೆ ಬಳಾಕಾಜಾತಿಗೆ
ಕೂಡಿರ್ಕುಂ ಕುಕ್ಕುಟಾಧಮಂ ತಾನಕ್ಕುಂ ೫೧

ಕುಸಿದ ಕೊರಲಸಿತದೇಹಂ
ಮಸಕಂಗುಂದದ ಮನಂ ಮಹಾಪ್ರಾಣಂ ರಂ
ಜಿಸುವುದದು ನಾರಿಕೇಳಜ
ನಸಮಾನಬಲಾಢ್ಯಕುಕ್ಕುಟಂ ತಾನಕ್ಕುಂ ೫೨

ವ॥ ಇಂತು ಬಳಾಕಾಜಾತಿ ನಾಳಿಕೇರಜಾತಿಯೆಂದು ಕೋೞಿ ಇರ್ತೆಱಂ ಅಲ್ಲಿ

ಕಂ॥ ನಿನ್ನ ಚರಣಾಯುಧಂ ಸ
ತ್ತ್ವೋನ್ನತನದು ನಾಳಿಕೇರಜಂ ಪ್ರತಿಯದು ಸಂ
ಭಿನ್ನ ಬಳಾಕಾಜಾತಿಯ
ದಿನ್ನೀಗಳೆ ಸೋಲ್ವುದೀಕ್ಷಿಸೆಲೆ ಮಿತ್ರಾ ೫೩

ವ॥ ಎಂದು ನೋೞ್ಪನ್ನೆಗಂ

ಕಂ॥ ಚರಣಾಗ್ರದಿಂ ಬಳಾಕಾ
ಚರಣಾಯುಧನಂ ಕಡಂಗಿಯೊದೆದುರದಿಂ ಬ
ಲ್ಗರುಳುಣ್ಮೆ ಕೆಡಪಿ ಗೆಲ್ದ
ತ್ತ್ಯುರು ಸತ್ವಂ ನಾಳಿಕೇರಜಂ ತತ್‌ಕ್ಷಣದೊಳ್ ೫೪

ಯೊಡೆಯನಾದ ಮಿತ್ರವರನೆಂಬ ಮುದಿವಿಟನಿಗೆ ಹೀಗೆ ಹೇಳಿದೆನು. ೫೧. ಕತ್ತು ನೀಡಿದೆ, ದೇಹ ಬೆಳ್ಳಗಿದೆ, ಮನಸ್ಸಿನಲ್ಲಿ ಹೇಡಿತನ ತುಂಬಿದೆ. ಇದರ ಪ್ರಾಣಗಳು ಸೂಕ್ಷ್ಮವಾಗಿವೆ. ಇಂಥದು ಬಳಾಕಾ ಜಾತಿಗೆ ಸೇರಿದ ಅಧಮಕುಕ್ಕುಟ. ೫೨. ಗಿಡ್ಡವಾದ ಕೊರಳು, ಕಪ್ಪಾದದೇಹ. ಧೈರ್ಯವುಳ್ಳ ಮನಸ್ಸು, ಬಲವಾದ ಪ್ರಾಣಗಳು ಇವುಗಳಿಂದ ರಂಜಿಸುವ ಕೋಳಿಯು ನಾರಿಕೇಳ ಜಾತಿಯೆಂಬ ಅಸಮಬಲವುಳ್ಳ ಕುಕ್ಕುಟ. ವ॥ ಹೀಗೆ ಬಳಾಕಾಜಾತಿ ನಾರಿಕೇಳಜಾತಿಯೆಂದು ಕೋಳಿಗಳು ಎರಡು ವಿಧ–ಅಲ್ಲಿ. ೫೩. ಮಿತ್ರನೆ ! ನೋಡು. ನಿನ್ನ ಕೋಳಿಯು ಅಸಮಾನ ಬಲವುಳ್ಳುದು. ಅದು ನಾಳಿಕೇರಜಾತಿಯದು. ಎದುರಾಗಿರುವ ಕೋಳಿಯು ಬಳಾಕಾಜಾತಿಗೆ ಸೇರಿದುದು. ಅದು ಈಗಲೇ ಸೋಲುವುದು. ವ॥ ಎಂದು ಹೇಳಿ ನೋಡುತ್ತಿರುವಾಗ—೫೪. ಅತಿ ಬಲವುಳ್ಳ ನಾರಿಕೇಳಜಾತಿಯ ಕೋಳಿಯು ಬಳಾಕಾ ಜಾತಿಯ ಕೋಳಿಯನ್ನು ತನ್ನ ಕಾಲ್ತುದಿಯಿಂದ ವೇಗವಾಗಿ ಒದ್ದಿತು. ಹೊಟ್ಟೆಯಿಂದ ಕರುಳುಗಳು ಕಿತ್ತು ಹೊರಕ್ಕೆ ಬರುವಂತೆ ಹೊಡೆದು ತಳ್ಳಿತು. ಆಕ್ಷಣದಲ್ಲಿ ನಾರಿಕೇಳಜಾತಿಯ ಕೋಳಿಯು ಗೆದ್ದಿತು.

ಕಂ॥ ಅಧಿಕತರಸತ್ವದಿಂ ಸಹ
ಜಧೈರ್ಯದಿಂ ನಾಳಿಕೇರಜಂ ಪ್ರತಿಚರಣಾ
ಯುಃಧನಂ ಗೆಲೆ ಮಿತ್ರವರಂ
ನಿಧಿಯಂ ಪಡೆದಂತೆ ಹರ್ಷದೊಳ್ ನೆಲಸಿರ್ದಂ ೫೫

ವ॥ ಅಂತು ಮಿತ್ರವರಂ ತನ್ನ ಕೋೞಿ ಗೆಲ್ದುದಂ ಕಂಡೆನ್ನನಾದಿನಂ ಮೊದಲಾತ್ಮ ಮಿತ್ರನೆಂದು ಬಗೆದು ತನ್ನ ಮನೆಗೊಡಗೊಂಡು ಪೋಗಿ ಎನ್ನಂ ಮನ್ನಿಸಲಲ್ಲಿಯಾದಿನಮಂ ಕಳೆದು ಮಱುದೆವಸಂ

ಕಂ॥ ಶ್ರಾವಸ್ತಿಯ ಪೊಱವೊಟಲಧಿ
ದೈವತ್ರ್ಯಂಬಕನ ಜಾತ್ರೆಗೆಲ್ಲರ್ ನಿಜಸ
ದ್ಭಾವದೊಳೊಲವಿಂ ಪೋಗೆ ಮ
ಹಾ ವಿಭವದೊಳವರ ಬೆನ್ನೊಳಾನುಂ ಪೋದೆಂ ೫೬

ವ॥ ಅಂತು ಪೋಗಿ

ಅರ್ಧಶರೀರಮಂ ಗಿರಿಜೆಗಿತ್ತನನಾತ್ಮನಿಜೋತ್ತಮಾಂಗಮಂ
ಸ್ವರ್ಧುನಿಗಿತ್ತನಂ ಸಕಲಮಂಗಳಕಾರಣ ಮೋಕ್ಷ ಲಕ್ಷ್ಮಿಯಂ
ತರ್ಧನನಂ ಶಶಾಂಕಕಳೆಯಂ ತಳೆದಿರ್ದನನೊಲ್ದು ಪುಣ್ಯ ಸಂ
ವರ್ಧನನಂ ಕರಂ ಸ್ತುತಿಸಿ ಭಕ್ತಿಯೊಳಾಂ ಪೊಡಮಟ್ಟೆನುರ್ವಿಪಾ ೫೭

೫೫. ನಾರಿಕೇಳಜಾತಿಯ ಕೋಳಿಯು ಪ್ರತಿಪಕ್ಷಿಗಿಂತ ಹೆಚ್ಚಾದ ಬಲದಿಂದಲೂ ಸಹಜವಾದ ಧೈರ್ಯದಿಂದಲೂ ಎದುರು ಕೋಳಿಯನ್ನು ಸೋಲಿಸಿ ಗೆದ್ದಿತು. ಇದರಿಂದ ಮಿತ್ರವರನು ನಿಧಿಯನ್ನು ಪಡೆದವನಂತೆ ಹರ್ಷಿಸಿದನು. ವ|| ಮಿತ್ರವರನು ತನ್ನ ಕೋಳಿ ಗೆದ್ದುದನ್ನು ನೋಡಿ ನನ್ನನ್ನು ಅಂದಿನಿಂದ ತನ್ನ ಮಿತ್ರನೆಂದು ತಿಳಿದನು. ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿದನು. ಅಲ್ಲಿ ಆ ದಿನವನ್ನು ನಾನು ಕಳೆದೆನು. ಮರುದಿವಸ—೫೬. ಶ್ರಾವಸ್ತಿನಗರದ ಹೊರವಲಯದಲ್ಲಿ ನಗರಾಧಿದೇವತೆಯಾದ ತ್ರಿಯಂಬಕನ ಜಾತ್ರೆ ನಡೆಯುತ್ತಿತ್ತು. ಎಲ್ಲರೂ ಭಕ್ತಿಯಿಂದ ಆ ಜಾತ್ರೆಗೆ ಸಂಭ್ರಮದಿಂದ ಹೋಗುತ್ತಿದ್ದರು ನಾನೂ ಅವರ ಹಿಂದೆ ಜಾತ್ರೆಗೆ ಹೋದೆನು. ವ|| ಹಾಗೆ ಹೋಗಿ—೫೭. ಶಿವನು ತನ್ನ ಅರ್ಧ ಶರೀರವನ್ನು ಗಿರಿಜೆಗೆ ಕೊಟ್ಟನು. ತನ್ನ ತಲೆಯನ್ನು ಗಂಗೆಗಿತ್ತನು. ಸಕಲ ಮಂಗಳಗಳಿಗೂ ಕಾರಣನಾದ ಮೋಕ್ಷ ಲಕ್ಷ್ಮಿಯನ್ನು ಅಂತರ್ಧನವಾಗಿ ಮಾಡಿಕೊಂಡನು. ಅವನು ಚಂದ್ರಕಲೆಯನ್ನು ಧರಿಸಿದವನು. ಪುಣ್ಯವನ್ನು ಹೆಚ್ಚಿಸುವವನು. ಇಂಥ ಶಿವನನ್ನು ಭಕ್ತಿಯಿಂದ ಚೆನ್ನಾಗಿ ಸ್ತುತಿಸಿ ನಮಸ್ಕರಿಸಿ

ವ॥ ಅಂತಾಂ ಸ್ತ್ರೀಕಾಮನಾದುದಱಿಂ ಸ್ತ್ರೀಮಯನಾಗಿರ್ದ ತ್ರ್ಯಂಬಕನ ಪಾದಕ್ಕೆ ನಮಸ್ಕಾರಂಗೆಯ್ದೊಂದು ಬಿಲ್ವಕುಜದ ತಣ್ಣೆಲಲೊಳ್ ಕುಳ್ಳಿರಿರ್ಪುದುಮಲ್ಲಿಗೆ

ರಣಿತಂ ನೂಪುರದಿಂಚರಂ ಸ್ಮರಧನುರ್ಜ್ಯಾರಾವಮಂ ಗೆಲ್ದಿನಂ
ಮಣಿಹಾರಂ ವಿಟನೇತ್ರವಾಗುರಮೆನಲ್ ಸಾರ್ದಿರ್ಪಿನಂ ಚೆಲ್ಲಗಣ್
ಗಣಿಕಾವಲ್ಲಭ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ ನೀರಜೇ
ಕ್ಷಣೆಯೊರ್ವಳ್ ಸಲೆ ಬಂದಳಾ ರತಿ ಪುಳಿಂದಾಕಾರಮಂ ತಾಳ್ದವೋಲ್ ೫೮

ಕಂ॥ ಆ ರಮಣಿ ಸಕಳಮಂಗಳ
ಕಾರಣಮಂ ಪರಮಪುರುಷಲಕ್ಷಣಶುದ್ಧಾ
ಕಾರಮನದೊಂದು ಚಿತ್ರಮ
ನಾರಾಧಿಪ ದೈವದಂದದಿಂ ತಳೆದಿರ್ದಳ್ ೫೯

ವ॥ ಅಂತೊಂದು ಚಿತ್ರಪಟಮಂ ತಳೆದು

ಕಂ॥ ಅವಳೆನ್ನ ಮೊಗಮನಾ ಚಿ
ತ್ರವನೊಲವಿಂ ಮಗುಟ್ದು ಮಗುಟ್ದು ನೋಡುತ್ತಿರಲಾಂ
ಯುವತೀಭಾವಮಱಿದೇ
ಕೆ ವಿಳಾಸಿನಿ ನಿಲ್ವೆ ಕುಳ್ಳಿರೆಂದೆನಿಳೇಶಾ ೬೦

ವ॥ ಅಂತು ಕುಳ್ಳಿರಲ್ವೇಟ್ದು ಅವಳ ಕೆಯ್ಯ ಚಿತ್ರಪಟಮಂ ನೋಟ್ಪಿನಮಲ್ಲಿ

ದೆನು. ವ॥ ಹಾಗೆ ನಾನು ಸ್ತ್ರೀಕಾಮನಾದುದರಿಂದ ಸ್ತ್ರೀಯೊಡನೆ ಕೂಡಿದ್ದ ಶಿವನ ಪಾದಕ್ಕೆ ನಮಸ್ಕಾರಮಾಡಿ, ಒಂದು ಬಿಲ್ವಪತ್ರೆಮರದ ತಂಪಾದ ನೆರಳಿನಲ್ಲಿ ಕುಳಿತಿದ್ದೆನು. ಆಗ ಅಲ್ಲಿಗೆ—೫೮. ಕಾಲಂದಿಗೆಗಳ ಇಂಚರವು ಮನ್ಮಥನ ಬಿಲ್ಲಿನ ನಾರಿಯ ದನಿಯನ್ನು ಗೆದ್ದಿತು. ರತ್ನಹಾರವು ವಿಟರ ಕಣ್ಣುಗಳು ಸಿಕ್ಕಿಕೊಳ್ಳುವ ಬಲೆಯಂತೆ ಕಾಣಿಸಿತು. ಚಂಚಲವಾದ ಕಣ್ಣುಗಳು ವೇಶ್ಯಾಕಾಮುಕರ ಹೃದಯವನ್ನು ಕಲಕಲು ಸಾಕಾಗಿದ್ದವು ಎಂಬ ರೀತಿಯಲ್ಲಿ ಒಬ್ಬಳು ಕಮಲಾಕ್ಷಿಯು ಬಂದಳು. ಅವಳು ಬೇಡಿತಿಯ ಆಕಾರ ವನ್ನು ತಳೆದ ರತಿಯೋ ಎಂಬಂತೆ ಕಂಡಳು. ೫೯. ಆ ರಮಣಿಯು ಸಕಲ ಮಂಗಳ ಗಳಿಗೂ ಕಾರಣವಾದ ಪರಮಪುರುಷನ ಲಕ್ಷಣಗಳುಳ್ಳ ಶುದ್ಧವಾದ ಆಕಾರವುಳ್ಳ ತಾನು ಆರಾಧಿಸುವ ಚಿತ್ರವೊಂದನ್ನು ಹಿಡಿದಿದ್ದಳು. ವ॥ ಹಾಗೆ ಒಂದು ಚಿತ್ರಪಟವನ್ನು ಹಿಡಿದು—೬೦. ಅವಳು ನನ್ನ ಮುಖವನ್ನೂ ಆ ಚಿತ್ರವನ್ನೂ ಪ್ರೀತಿಯಿಂದ ಮತ್ತೆ ಮತ್ತೆ ನೋಡುತ್ತಿದ್ದಳು. ಆಗ ನಾನು ಆ ತರುಣಿಯ ಅಭಿಪ್ರಾಯವನ್ನು ತಿಳಿದು ಕೊಂಡು, 'ವಿಲಾಸಿನಿ ಏಕೆ ನಿಂತಿರುವೆ ? ಕುಳಿತುಕೋ' ಎಂದು ಅವಳಿಗೆ ಹೇಳಿದೆನು. ವ॥ ಹಾಗೆ ಕುಳಿತುಕೊಳ್ಳಲು ಹೇಳಿ ಅವಳ ಕೈಯಲ್ಲಿದ್ದ ಚಿತ್ರಪಟವನ್ನು ನೋಡಿದೆನು.

ಉನ್ನತವಕ್ಷಮಂ ಘನಭುಜದ್ವಯಮುಂ ವಿಳಸಲ್ಲಲಾಟ ಸಂ
ಪನ್ನ ಮನೀಷದುನ್ಮಿಷಿ ಕಲಾಧರಸನ್ನಿಭಮಂ ಮುಖಾಬ್ಜಮುಂ
ತನ್ನೊಡನಕ್ಕಱಿಂದೊಱಗಿದಂದಮನೊಪ್ಪಿರೆ ಚಿತ್ರರೂಪದಿಂ
ದೆನ್ನಯ ರೂಪನೊಲ್ದು ನವಮಾಲಿಕೆ ಚಿತ್ರಿಸಲಿರ್ದುದುರ್ವಿಪಾ ೬೧

ವ॥ ಅಂತೆನ್ನ ಚಿತ್ರಮಂ ಕಂಡದಱ ಕೆಲದೊಳ್

ಪದಕಮಲಂಗಳಂ ಗುರುನಿತಂಬಮನಲ್ಪಸುಮಧ್ಯಮಂ ಕದ
ಕ್ಕದಿಪ ಕುಚಂಗಳಂ ಮಿಸುಪ ಪಣ್ದುಟಿಯಂ ವಿಳಸತ್ಕಪೋಳಮಂ
ಸದಮಳನೇತ್ರಮಂ ಪದೆಪಿನಿಂ ಸುಖನಿದ್ರೆಯೊಳಿರ್ದ ಭಾವಮಂ
ಸುದತಿಯ ರೂಪನಾಂ ಮಗುಳ್ದು ಚಿತ್ರಿಸಿದೆಂ ಕೆಲದೊಳ್ ವಿಲಾಸದಿಂ ೬೨

ವ॥ ಅಂತಾಂ ಬರೆದ ಚಿತ್ರಪಟಮನವಳ ಕೆಯ್ಯೊಳ್ ಕುಡಲವಳತ್ತಲ್ ಪೋದಳ್ ಇತ್ತಲಾಂ ಕಾರ್ಯಸಿದ್ಧಿಯಾಯ್ತೆಂದು ಮಿತ್ರವರನೆಡೆಗೆ ಬಂದಿಂತೆಂದೆಂ

ಎಡರಡಸಿರ್ದೊಡಂ ಪಗೆಗಳೊತ್ತರಿಸಿರ್ದೊಡಮೆಯ್ದೆ ಮುಂದುಗೆ
ಟ್ಟೊಡಮಳಿಪಿಂ ಮಹಾವ್ಯಸನದೊಳ್ ತೊಡರ್ದಿರ್ದೊಡಮನ್ಯದೇಶಮಾ
ದೊಡಮಿಟೆಕೆಯ್ಯದೊಂದೆ ತನುವೆಂಬವೊಲಾಪ್ತಸಹಾಯನಂ ಕರಂ
ಬಿಡದೊಡನಿರ್ಪವಂ ಸುಜನಮಿತ್ರನವಂ ಕೃತಕೃತ್ಯನುರ್ವಿಯೊಳ್ ೬೩

ಅಲ್ಲಿ—೬೧. ನವಮಾಲಿಕೆಯು, ಚಿತ್ರದಲ್ಲಿ ನನ್ನ ರೂಪವನ್ನೇ ಪ್ರೀತಿಯಿಂದ ಬರೆದಿದ್ದಳು. ಉನ್ನತವಾದ ವಕ್ಷಃಸ್ಥಲ, ಉತ್ತಮವಾದ ಎರಡು ತೋಳುಗಳು, ಹೊಳೆಯುವ ಸುಂದರವಾದ ಹಣೆ, ಸ್ವಲ್ಪ ಅರಳಿದ ಚಂದ್ರನಿಗೆ ಸದೃಶವಾದ ಮುಖ ಕಮಲ ಇವುಗಳಿಂದ ಕೂಡಿದ ನನ್ನ ಚಿತ್ರರೂಪವು ಅವಳ ಜೊತೆಯಲ್ಲಿ ಅಕ್ಕರೆಯಿಂದ ಸೇರಿದಂತೆ ಬರೆದಿದ್ದಳು, ವ|| ನನ್ನ ಚಿತ್ರವನ್ನು ನೋಡಿ ಅದರ ಪಕ್ಕದಲ್ಲಿ—೬೨. ಪಾದಕಮಲ, ಭಾರವಾದ ನಿತಂಬ, ಬಡನಡು, ಚಲಿಸುವ ಕುಚಗಳು, ಹೊಳೆಯುವ ಚೆಂದುಟಿ, ಹೊಳೆಯುವ ಕೆನ್ನೆ, ತಿಳಿಯಾದ ಕಂಗಳು–ಇವುಗಳಿಂದ (ಕೂಡಿದ) ನವಮಾಲಿಕೆಯು ನನ್ನ ಚಿತ್ರರೂಪದ ಮಗ್ಗುಲಲ್ಲಿ ಸುಖವಾಗಿ ನಿದ್ರಿಸುತ್ತಿರುವಂತೆ ಪ್ರೀತಿಯಿಂದ ಬರೆದೆನು. ವ॥ ನಾನು ಬರೆದ ಚಿತ್ರಪಟವನ್ನು ಅವಳ ಕೈಯಲ್ಲಿ ಕೊಟ್ಟೆನು. ಅದನ್ನು ತೆಗೆದುಕೊಂಡು ಅವಳು ಅತ್ತಹೋದಳು ಇತ್ತ ನಾನು ಕಾರ್ಯವು ಸಿದ್ಧಿಸಿತೆಂದು ಮಿತ್ರವರನ ಬಳಿ ಬಂದು ೬೩. "ಕಷ್ಟಗಳು ಬರಲಿ, ಶತ್ರುಗಳು ಆಕ್ರಮಿಸಲಿ, ಮುಂದೇನು ಮಾಡಲು ತೋರದಿರಲಿ, ದುರ್ವ್ಯಸನಗಳಲ್ಲಿ ತೊಡಗಿರಲಿ, ಪರದೇಶದಲ್ಲಿರಲಿ, ಕೈಬಿಡದೆ ಒಂದೇ ಶರೀರವೆಂಬಂತೆ ಭಾವಿಸಿ ಸಹಾಯಮಾಡಿ ಎಡಬಿಡದೆ ಜೊತೆಯಲ್ಲಿರುವವನು ಸನ್ಮಿತ್ರನು, ಭೂಮಿಯಲ್ಲಿ

ವ॥ ಎಂಬುದುಮಾ ಮಿತ್ರವರಂ ತುಷ್ಟನಾಗಿ ನಿನಗಾಂ ಮಾಡಲ್ವೇಟ್ಟ ಕಾರ್ಯಮಂ ಪೇೞೆಂಬುದುಂ

ಕಂ॥ ಆಂ ಪೇೞ್ದ ಕಾರ್ಯಮಂ ನೀಂ
ಭೂಪಾಲಕನೆಡೆಗೆ ಪೋಗಿ ಭೂಸುರರೂಪಿಂ
ದಂ ಪೇೞ್ವುದೆಂದೊಡಾತನ
ದೇಂ ಪೇೞೆನಲಾಂ ಬೞಿಕ್ಕಮಿಂತೆಂದುಸಿರ್ದೆಂ ೬೪

ಎನ್ನ ತನೂಜೆಯಂ ಸಕಲಶಾಸ್ತ್ರವಿಚಕ್ಷಣನಪ್ಪನೊರ್ಬನೊಳ್
ಮುನ್ನಮೆ ವಾಕ್ಪ್ರದಾನಮನೆಲೇ ನಿನಗಿತ್ತಪೆನೆಂದು ಮಾಡಲಾ
ತನ್ನಿಜದೇಶದಿಂದಮಿನಿತುಂ ದಿನಮಾದುದು ಬಾರನೀಗಳಾ
ಕನ್ನೆ ಕರಂ ಪ್ರಬುದ್ಧೆಯೆನಿಸಿರ್ದಪಳೇವೆನಿಳಾಧಿನಾಯಕಾ ೬೫

ಆಂ ಬಡವನೆನ್ನ ಮನೆಯೊಳ್
ತುಂಬಿದ ಜವ್ವನೆಯನಿರಿಸಲಣ್ಮೆಂ ಜಾಮಾ
ತಂ ಬರ್ಪನ್ನೆಗಮಾಕೆಯ
ನಿಂಬಿನೊಳಿಟ್ಟೆನ್ನ ವಂಶಮಂ ಪೊರೆಯರಸಾ ೬೬

ವ॥ ಎಂದು ಧರ್ಮವರ್ಧನಂಗೆ ಪೋಗಿ ಪೇೞೆಂಬುದುಮಾತನಂತೆಗೆಯ್ವೆನೆಂದು ಧರ್ಮವರ್ಧನನೆಡೆಗೆ ಪೋಗಿ ಸಮಯಂಬಡೆದು,

ಅಂಥ ಮಿತ್ರನು ಕೃತಕೃತ್ಯನು" ಎಂದು ಹೇಳಿದೆನು. ವ॥ ನನ್ನ ಮಾತನ್ನು ಕೇಳಿ ಆ ಮಿತ್ರವರನು ಸಂತೋಷ ಹೊಂದಿದನು 'ನಿನಗೆ ನಾನು ಮಾಡಬೇಕಾದ ಕೆಲಸವಿದ್ದರೆ ಹೇಳು' ಎಂದು ಹೇಳಿದನು, ೬೪. 'ನಾನು ಹೇಳಿದ ಕೆಲಸವನ್ನು ನೀನು ಬ್ರಾಹ್ಮಣನ ರೂಪದಿಂದ ಹೋಗಿ ರಾಜನಿಗೆ ಹೇಳು' ಎಂದೆನು. ಆತನು 'ಅದೇನು? ಹೇಳು' ಎಂದನು. ಬಳಿಕ ನಾನು ಹೀಗೆ ಹೇಳಿದೆನು. ೬೫. "ರಾಜನೆ ! ನನ್ನ ಮಗಳನ್ನು ಸಕಲ ಶಾಸ್ತ್ರ ವಿಶಾರದನೊಬ್ಬನಿಗೆ ಕೊಡುವುದಾಗಿ ಮೊದಲೇ ಮಾತನ್ನು ಕೊಟ್ಟಿದ್ದೆನು. ಆದರೆ ಆತನು ತನ್ನ ದೇಶದಿಂದ ಇಷ್ಟು ದಿನಗಳಾದರೂ ಬರಲಿಲ್ಲ. ಈಗ ಆ ಕನ್ಯೆಯು ತುಂಬ ದೊಡ್ಡವಳಾಗಿದ್ದಾಳೆ. ಈಗೇನು ಮಾಡಲಿ? ೬೬. ನಾನು ಬಡವನು ನನ್ನ ಮನೆಯಲ್ಲಿ ಯೌವನ ತುಂಬಿದ ಕನ್ಯೆಯನ್ನು ಇಟ್ಟುಕೊಳ್ಳಲಾರೆ. ಅಳಿಯನು ಬರುವ ವರೆಗೂ ಆಕೆಯನ್ನು ನಿಮ್ಮ ಬಳಿ ಇಟ್ಟುಕೊಂಡು, ರಾಜನೇ ನನ್ನ ವಂಶವನ್ನು ಕಾಪಾಡು" ವ॥ ಎಂದು ಧರ್ಮವರ್ಧನನಿಗೆ ಹೋಗಿ ಹೇಳು' ಆತನು 'ಹಾಗೆಯೇ ಮಾಡುವೆನು' ಎಂದು ಹೇಳಿ ಧರ್ಮವರ್ಧನನ ಹತ್ತಿರಕ್ಕೆ ಹೋದನು.

ಕಂ॥ ಎನ್ನ ತನೂಜೆಯನೊಪ್ಪುವ
ಕನ್ನೆಯನೊರ್ಬುತ್ತಮದ್ವಿಜಂಗಿತ್ತಪೆನೆಂ
ದೆನ್ನಲೊಡವಾತನೂರಿಂ
ದಿನ್ನುಂ ಬಾರಂ ಮಗಳ್ಗೆ ನೆಱೆದುದು ಪರೆಯಂ ೬೭

ಏತೆಱದೊಳವಳನೆನ್ನ ನಿ
ಕೇತನದೊಳ್ ನಿಱಿಸಲರಿದು ಯೌವನೆಯಂ ಜಾ
ಮಾತೃ ತಲೆದೋರ್ಪಿನಂ ಮ
ಜ್ಜಾತೆಯನರಮನೆಯೊಳಿರಿಸಿ ರಕ್ಷಿಪುದರಸಾ ೬೮

ಪ್ರಜೆಯಭಿಮಾನಮಂ ನಿರುಪಮಾಶ್ರಮಮುಮಂ . . . . . . ಲಸ
ದ್ದ್ವಿಜಕುಲಮಂ ಸಕರ್ಮಪರರಂ ಬಡಪಟ್ಟರನಾರ್ಪಿನಿಂದೆ ಭೂ
ಭುಜರೊಲವಿಂದೆ ರಕ್ಷಿಪುದು ಧರ್ಮಮವಂ ತೊಱೆದಿರ್ದೊಡನ್ನೆಗಂ
ಕುಜಮಱೆಯೊಳ್ಪೊದಟ್ಟು ಜನಿಸಿರ್ದವೊಲಿರ್ದಪರಲ್ತೆ ಧಾತ್ರಿಯೊಳ್ ೬೯

ವ॥ ಎಂದು ಮಿತ್ರವರಂ ಧರ್ಮವರ್ಧನಂಗೆ ಬಿನ್ನಪಂಗೆಯ್ಯಲಾತಂ ನಿನ್ನ ಮಗಳ ನೊಡಗೊಂಡುಬಾಯೆಂದು ಕಳಿಪಲ್ ಬೞಿಯಂ

ಪೆಣ್ಣುಡೆಯುಟ್ಟು ಬೈತಲೆಯನೊಳ್ಪಿನಲೊತ್ತಿ ಶಿರೋಜಬಂಧಮಂ
ನುಣ್ಣಿಸಿ ಮೆಯ್ಯೊಳೊಪ್ಪುವ ಹರಿದ್ರಮನಪ್ಪಿ ನಿಮಿರ್ದ ಕಣ್ಗಳೊಳ್
ಸಣ್ಣವೆಸಲ್ಕೆ ಕಾಡಿಗೆಯ ರೇಖೆಯ ನಾಂತು ಬರಲ್ಕೆ ಕಾಡವರ್
ಕಣ್ಣರಡೆಯ್ದುವೀಕ್ಷಿಸಲೆನಲ್ ತಳೆದೆಂ ಸತಿರೂಪನುರ್ವಿಪಾ ೭೦

ಅಲ್ಲಿ ಸರಿಯಾದ ಸಮಯವನ್ನು ನೋಡಿ—೬೭. "ನನ್ನ ಮಗಳಾದ ಸುಂದರಿಯಾದ ಕನ್ಯೆಯನ್ನು ಒಬ್ಬ ಉತ್ತಮನಾದ ಬ್ರಾಹ್ಮಣನಿಗೆ ಕೊಡುವುದಾಗಿ ಹೇಳಿದೆನು. ಆದರೆ ಆತನು ಊರಿನಿಂದ ಇನ್ನೂ ಬರಲಿಲ್ಲ. ಮಗಳಿಗಾದರೋ ಪ್ರಾಯ ತುಂಬಿತು. ೬೮. ಯಾವತೆರದಿಂದಲೂ ಯೌವನ ಬಂದ ಮಗಳನ್ನು ಮನೆಯಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಅಳಿಯನು ಬರುವವರೆಗೂ, ಅರಸನೇ, ನನ್ನ ಮಗಳನ್ನು ಅರಮನೆಯಲ್ಲಿ ಇಟ್ಟುಕೊಂಡು ಕಾಪಾಡು. ೬೯. ಪ್ರಜೆಯ ಅಭಿಮಾನವನ್ನೂ ಹೋಲಿಸಲಾಗದ ಸನ್ಯಾಸಶ್ರಮವನ್ನೂ ಬ್ರಾಹ್ಮಣಕುಲವನ್ನೂ, ಸರಿಯಾಗಿ ಕರ್ಮ ಮಾಡುವವರನ್ನೂ ಬಡವರನ್ನೂ ರಾಜರು ಸಾಹಸತೋರಿ ಪ್ರೀತಿಯಿಂದ ರಕ್ಷಿಸಬೇಕು. ಅದು ರಾಜಧರ್ಮ. ಅದನ್ನು ಬಿಟ್ಟರೆ ಅಂಥವರು ಮರದ ಮರೆಯಲ್ಲಿ ಹುಟ್ಟಿದವರಂತೆ ಭೂಮಿಯಲ್ಲಿ ಅಪ್ರಸಿದ್ಧರಾಗುತ್ತಾರೆ." ವ॥ ಎಂದು ಮಿತ್ರವರನು ಧರ್ಮವರ್ಧನನಿಗೆ ವಿಜ್ಞಾಪಿಸಿಕೊಂಡನು. ಆಗ ಅರಸನು 'ನಿನ್ನ ಮಗಳನ್ನು ಜೊತೆಯಲ್ಲಿ ಕರೆದುಕೊಂಡು ಬಾ' ಎಂದು ಹೇಳಿ. ಮಿತ್ರವರನನ್ನು ಕಳುಹಿಸಿದನು. ಬಳಿಕ ೭೦. ರಾಜನೆ! ನಾನು ಹೆಣ್ಣಿನ ವೇಷವನ್ನು ಹಾಕಿಕೊಂಡೆನು. ಬೈತಲೆಯನ್ನು ಅಂದವಾಗಿ ಬಿಡಿಸಿದನು. ತಲೆಗೂದಲನ್ನು ಅಂದವಾಗಿ ಕಟ್ಟಿದೆನು. ಮೈಗೆ ಅರಿಸಿನ

ವ॥ ಅಂತಾಂ ಸ್ತ್ರೀರೂಪಮಂ ತಳೆದು ಮಿತ್ರವರನಪ್ಪವನ ಪಿಂದನೆ ಧರ್ಮವರ್ಧನನಿರ್ದೆಡೆಗೆ ಪೋಗಿ ನಿಲಲರಸನೊಳ್ ಮಿತ್ರವರನಿಂತೆಂದಂ

ಕಂ॥ ಎನ್ನಳಿಯಂ ಬರಲೊಡಮೀ
ಕನ್ನಿಕೆಯಂ ಧರ್ಮವರ್ಧನಕ್ಷಿತಿಪತಿ ನೀಂ
ಮನ್ನಿಸಿ ವಿವಾಹಮಂ ಧ
ರ್ಮನ್ನಿನಗಪ್ಪಂತು ಮಾಟ್ಪುದಿದನರ್ಥಿಸುವೆಂ ೭೧

ವ॥ ಎಂದೊಡೆ ಧರ್ಮವರ್ಧನನಂತೆಗೆಯ್ವೆನೆಂದು

ಕಂ॥ ನವಮಾಲಿಕೆ ಮೆಚ್ಚುವವೋ
ಲಿವಳೊರ್ವಳ್ ಕೆಳದಿಯಾದಳೆಂದೆನ್ನಂ ಭೂ
ಭುವನಪತಿ ನಲ್ಮೆಯಿಂ ಕ
ನ್ನೆವಾಡಕಾ ಕ್ಷಣದೊಳಟ್ಟಿದಂ ನೃಪತಿಲಕಾ ೭೨

ವ॥ ಅಂತೆನ್ನನರಸಂ ಕನ್ಯಾಂತಃಪುರಕ್ಕೆ ಕಳಿಪಲಾಂ ಮಿತ್ರವರನ ಕಾಲ್ಗೆಱಗಿ ಏಕಾಂತದೊಳಿಂತೆಂದೆಂ

ಕಂ॥ ತ್ರ್ಯಂಬಕನಿದಿರೊಳ್ ಪರಿತ
ರ್ಪಿಂಬಿನ ಕೊಳದೊಳಗೆ ತಿಂಗಳಿಂ ಮೇಲೆ ಮುಗು
ಟ್ದಂಬರವೆರಡಂ ಕೊಂಡೊಲ
ವಿಂ ಬಂದಿರ್ಪುದು ರಹಸ್ಯಮಿದು ಮಿತ್ರವರಾ ೭೩

ವ॥ ಎಂದು ಪೇಟ್ದಾತನನತ್ತಲ್ ಕಳಿಪಿಯಾಂ ನವಮಾಲಿಕೆಯಿರ್ದೆಡೆಗೆ ಪೋಗಲವಳೆನ್ನಂ ಕಂಡು

ವನ್ನು ಹಚ್ಚಿಕೊಂಡೆನು. ಕಂಗಳಿಗೆ ಸಣ್ಣದಾಗಿ ಕಾಡಿಗೆಯನ್ನು ಹಚ್ಚಿಕೊಂಡೆನು. ಬರುತ್ತಿದ್ದರೆ ನೋಡಲು ಎರಡು ಕಂಗಳು ಸಾಲವು ಎಂಬಂತೆ ಸ್ತ್ರೀರೂಪವನ್ನು ಧರಿಸಿದೆನು. ವ॥ ಸ್ತ್ರೀರೂಪಧರಿಸಿ ಮಿತ್ರವರನ ಹಿಂದೆ ಧರ್ಮವರ್ಧನನ ಹತ್ತಿರಕ್ಕೆ ಹೋದೆನು. ಆಗ ಮಿತ್ರವರನು ಅರಸನಿಗೆ ಹೇಳಿದನು. ೭೧. "ಧರ್ಮವರ್ಧನ ರಾಜನೇ ! ನನ್ನ ಅಳಿಯನು ಬಂದೊಡನೆಯೇ ಈ ಕನ್ಯೆಯನ್ನು ಅವನಿಗೆ ಕೊಟ್ಟು ಮದುವೆ ಮಾಡುವುದು. ಇದರಿಂದ ನಿನಗೆ ಧರ್ಮವು ಬರುವುದು. ಇದು ನನ್ನ ಪ್ರಾರ್ಥನೆ." ವ॥ ಇದನ್ನು ಕೇಳಿ ಧರ್ಮವರ್ಧನನು ಹಾಗೆಯೇ ಮಾಡುವುದಾಗಿ ಹೇಳಿದನು—೭೨. ನೃಪತಿಲಕನೇ ! 'ಇವಳು ನವಮಾಲಿಕೆಯು ಮೆಚ್ಚುವಂಥ ಕೆಳದಿಯಾಗುತ್ತಾಳೆ' ಎಂದು ಯೋಚಿಸಿ ನನ್ನನ್ನು ಕೂಡಲೆ ಅಂತಃಪುರಕ್ಕೆ ಕಳುಹಿಸಿದನು. ವ॥ ನನ್ನನ್ನು ಕನ್ಯಾಂತಃಪುರಕ್ಕೆ ಕಳುಹಿಸಲು ನಾನು ಮಿತ್ರವರನ ಕಾಲಿಗೆಬಿದ್ದು ಏಕಾಂತದಲ್ಲಿ ಹೇಳಿದೆನು. ೭೩. ಇಂದಿನಿಂದ ತಿಂಗಳಾದ ಮೇಲೆ ತ್ರ್ಯಂಬಕ ದೇವರ ಎದುರಿನಲ್ಲಿರುವ ಕೊಳಕ್ಕೆ ಎರಡು ಬಟ್ಟೆಗಳನ್ನು ತೆಗೆದುಕೊಂಡು ಬಾ. ಮಿತ್ರವರ, ಇದು ರಹಸ್ಯವಾಗಿರಲಿ." ವ॥ ಎಂದು ಹೇಳಿ ಆತನನ್ನು ಅತ್ತ ಕಳುಹಿಸಿದೆ. ಮತ್ತೆ ನವಮಾಲಿಕೆಯಿದ್ದಲ್ಲಿಗೆ ಹೋದೆನು. ಅವಳು

ಭಾವಕಿಯೆನ್ನನೊರ್ವೊದಲೆ ಕಾಣಲೊಡಂ ಬೆಮರುಣ್ಮೆ ವಿಸ್ಮಯಂ
ತೀವಿ ಮುಖಂ ವಿಳಾಸರಸಮಂ ತಳೆದಂಗರುಹಂ ಕೊನರ್ತು ದೇ
ಹಾವಯವಂ ಕರಂ ಸ್ಫುರಿಸಿ ನಾಣ್ ತಲೆದೋರಿ ಕಳಾಪಬಂಧಶೋ
ಭಾವಳಯಂ ಸಡಿಲ್ದು ಮರವಟ್ಟವೊಲಿರ್ದಳಿಳಾಧಿನಾಯಕಾ ೭೪

ವ॥ ಅಂತಿರ್ದಳಂ ಕಂಡನಂತರಂ

ಅಲಸದ ನೋಟದಿಂ ಸಡಿಲದಪ್ಪುಗೆಯಿಂ ಗಱಿಗಟ್ಟಿದೊಲ್ಮೆಯಿಂ
ಚಲಿಸದ ಚಿತ್ತದಿಂದೆ ತಣಿವಿಲ್ಲದ ಚುಂಬನದಿಂ ನಿರಂತರಂ
ತೊಲಗದ ಕೂಟದಿಂ ಪದೆಪಿನಿಂ ಪೊಸತಾಗೆ ಮನೋನುರಾಗದಿಂ
ಕೆಲವು ದಿನಂಗಳಂ ಕಳೆದೆನಾನವಳೊಳ್ ನೃಪರೂಪಮನ್ಮಥಾ ೭೫

ವ॥ ಅಂತಾನವಮಾಲಿಕೆಯೊಳಿಷ್ಟ ಸುಖ ಕಾಮ ಭೋಗಂಗಳನನುಭವಿಸುತ್ತಿರಲೊಂದು ದಿನಮಾ ನವಮಾಲಿಕೆ

ಆ ನಳಿನಾಸ್ಯೆ ಯೌವನರಸಾಂಬುಧಿರಾಜಮರಾಳಯಾನೆ ಪಾ
ಠೀನ ಸಮಾನನೇತ್ರೆ ವಿಮಳೋತ್ಪಳ ಕೇಸರವರ್ಣೆ ಸೈಕತ
ಸ್ಥಾನನಿತಂಬೆ ಕೋಕಕುಚಮಂಡಲೆಯಾಂ ಸಹಿತಂ ವಯಸ್ಯಸಂ
ತಾನ ಸಮನ್ವಿತಂ ಸಲಿಲಕೇಳಿಗೆ ಬಂದಳದೊರ್ಮೆ ಲೀಲೆಯಿಂ ೭೬

ನನ್ನನ್ನು ಕಂಡು—೭೪. ರಾಜನೇ ! ಇದ್ದಕ್ಕಿದ್ದಂತೆ ನನ್ನನ್ನು ನೋಡಿದ ಕೂಡಲೆ ಅವಳು ಬೆವರಿದಳು. ವಿಸ್ಮಯವುಂಟಾಯಿತು. ಮುಖದಲ್ಲಿ ವಿಲಾಸರಸವು ಹೊಮ್ಮಿತು. ರೋಮಾಂಚವುಂಟಾಯಿತು. ಶರೀರದ ಅವಯವಗಳು ಅದುರಿದುವು. ನಾಚಿಕೆ ತಲೆದೋರಿತು. ನಡುಪಟ್ಟಿಯು ಕಳಚಿತು. ಎಚ್ಚರದಪ್ಪಿದವಳಂತಾದಳು. ವ॥ ಹಾಗಿದ್ದವಳನ್ನು ನೋಡಿ ಅನಂತರ—೭೫. ನೃಪರೂಪ ಮನ್ಮಥನೇ ! ಕೆಲವು ದಿನಗಳು ಮನೋನುರಾಗದಿಂದ ನಾನು ಅವಳೊಡನೆ ಸುಖವಾಗಿ ಕಳೆದೆನು. ಚಂಚಲವಾದನೋಟ, ಗಾಢಾಲಿಂಗನ, ಅತಿಶಯವಾದ ಪ್ರೀತಿ, ಸ್ಥಿರವಾದ ಮನಸ್ಸು, ತೃಪ್ತಿಯಾಗದ ಚುಂಬನ, ಬಿಡೆಬಿಡದ ಸಂಭೋಗ-ಇವುಗಳಿಂದ ಅವಳ ಸಹವಾಸ ಹೊಸ ಬಗೆಯದಾಗಿದ್ದಿತು. ವ॥ ಹೀಗೆ ನಾನು ಆ ನವಮಾಲಿಕೆಯೊಡನೆ ಇಷ್ಟಬಂದಷ್ಟು ಕಾಮಭೋಗ ಸುಖವನ್ನು ಅನುಭವಿಸುತ್ತಿದ್ದೆ. ಹೀಗಿರಲು ಒಂದುದಿನ ಆ ನವಮಾಲಿಕೆಯು—೭೬. ತನ್ನ ಗೆಳತಿಯರೊಡನೆ ಜಲಕ್ರೀಡೆಗೆ ಲೀಲೆಯಿಂದ ಬಂದಳು. ಅವಳು ಕಮಲಮುಖಿ ಯೌವನದ ರಸದಸಮುದ್ರ. ರಾಜ ಹಂಸಗಮನೆ. ಮೀನ ನೇತ್ರೆ, ವಿಮಲವಾದ ಕಮಲದ ಕೇಸರದ ಬಣ್ಣದವಳು. ಮರಳ ಗುಪ್ಪೆಯಂಥ ನಿತಂಬವುಳ್ಳವಳು,

ವ॥ ಅವಳೊಡನೆ

ಜಲರುಹವಕ್ತ್ರೆಯರ್ ಶಫರಲೋಚನೆಯರ್ ನವಕೂರ್ಮಪಾದೆಯರ್
ಪುಳಿನ ನಿತಂಬೆಯರ್ ಮಿಸುಪ ಶೈವಳಬಾಹುಳತಾ ವಿಳಾಸೆಯರ್
ಸುಲಲಿತ ಕಂಬು ಕಂಧರೆಯರೊಪ್ಪುವ ವಿದ್ರುಮ ಸನ್ನಿಭೋಷ್ಠೆಯರ್
ಲಲನೆಯರೊಪ್ಪಿದರ್ ನಲಿದು ಜಂಗಮಜಾಹ್ನವಿಯರ್ ನಿರಂತರಂ ೭೭

ಸುತ್ತಿದ ವೇಣಿಯೊತ್ತಿದ ಕುರುಳ್ ನವಕಂಚುಕಮುಟ್ಟ ಚಲ್ಲಣಂ
ಕತ್ತುರಿಬೊಟ್ಟು ಪಚ್ಚದೊಳೊಡಂಬಡೆ ರೌಪ್ಯಸುವರ್ಣಶೃಂಗಮಂ
ಜೊತ್ತಿನೊಳೊತ್ತಿ ಜೀರ್ಕೊಳವೆಯಂ ಪಿಡಿದೆಯ್ದಿದರಂಬುಕೇಳಿಗಂ
ದುತ್ತಮ ಕಾಂತೆಯರ್ ವಿನಯವಂತೆಯರಂಗಜ ತಾಪಶಾಂತೆಯರ್ ೭೮

ಸೊಕ್ಕಿದ ಹಂಸೆಗಳ್ ನಡೆಗೆ ಕೋಕಯುಗಂ ಕುಚಕೌತುಕಕ್ಕೆ ನೀ
ರ್ವಕ್ಕಿಗಳಿಂಚರಕ್ಕೆ ಶಫರಪ್ರಕರಂ ನಯನಕ್ಕೆ ಭಕ್ತಿಯಿಂ
ಮಿಕ್ಕಿದಿರ್ವರ್ಪಿನಂ ಲಲಿತಯಾನೆಯರುಚ್ಚಕುಚಪ್ರಸಿದ್ಧೆಯರ್
ತಕ್ಕಳಿನಾದೆಯರ್ ವಿಮಳಲೋಚನೆಯರ್ ಜಲಕೇಳಿಗೆಯ್ದಿದರ್ ೭೯

ಚಕ್ರವಾಕದಂತ ಕುಚವುಳ್ಳವಳು. ವ॥ ಅವಳೊಡನೆ. ೭೭. ಅವಳ ಗೆಳತಿಯರು ಸಂಚರಿಸುವ ಗಂಗೆಯರಂತೆ ಎಸೆದರು. ಅವರು ಕಮಲದಂತೆ ಮುಖವುಳ್ಳವರು. ಮೀನುಗಳಂತೆ ಲೋಚನಗಳುಳ್ಳವರು. ನೂತನವಾದ ಕೂರ್ಮದಂತೆ ಪಾದವುಳ್ಳವರು. ಮರಳು ದಿಣ್ಣೆಯಂಥ ನಿತಂಬವುಳ್ಳವರು. ಹೊಳೆಯುವ ಪಾಚಿಯಂಥ ಬಾಹುಲತೆಗಳಿಂದ ಶೋಭಿಸುವವರು. ಸುಂದರವಾದ ಶಂಖದಂಥ ಕುತ್ತಿಗೆಯುಳ್ಳವರು. ಮಿರುಗುವ ಹವಳದಂಥ ತುಟಿಗಳುಳ್ಳವರು. [ಗಂಗೆಯಪರವಾಗಿ :–ಕಮಲವೇಮುಖ. ಮೀನುಗಳೇ ಕಂಗಳು ಕೂರ್ಮಪಾದವೇಪಾದ, ಮರಳು ದಿಣ್ಣೆಯೇ ನಿತಂಬ, ಶೈವಾಲವೇ ಬಾಹುಗಳು. ಶಂಖವೇ ಕುತ್ತಿಗೆ ಹವಳವೇ ತುಟಿ.] ೭೮. ಜಡೆಯನ್ನು ಎತ್ತಿ ಸುತ್ತಿಕೊಂಡು ಮುಂಗುರುಳುಗಳನ್ನು ಪಕ್ಕಕ್ಕೆ ಸರಿಸಿ ಹೊಸರವಿಕೆಯನ್ನು ಧರಿಸಿ, ಚಲ್ಲಣವನ್ನು ಹಾಕಿಕೊಂಡು ಕಸ್ತೂರಿಯ ಬೊಟ್ಟನ್ನು ಹಣೆಗಿಟ್ಟುಕೊಂಡು ಒಡವೆಗಳಿಂದ ಅಲಂಕರಿಸಿಕೊಂಡರು. ಅನಂತರ ಬೆಳ್ಳಿ ಮತ್ತು ಚಿನ್ನದ ಜೀರ್ಕೊಳವಿಗಳನ್ನು ಹಿಡಿದು ವಿನಯವಂತೆಯರಾದ ಕಾಮತಾಪವನ್ನು ಶಾಂತಗೊಳಿಸುವ ಆ ಉತ್ತಮ ಕಾಂತೆಯರು ಜಲಕ್ರೀಡೆಗೆ ಹೊರಟರು. ೭೮. ಸೊಕ್ಕಿದ ಹಂಸಗಳು ಲಲಿತ ಯಾನೆಯರ ನಡೆಗೆ ಭಕ್ತಿಯಿಂದ ಇದಿರುಗೊಂಡು ಬಂದುವು. ಚಕ್ರವಾಕಗಳ ಜೋಡಿಯು ಉನ್ನತವಾದ ಕುಚಗಳಿಗೆ ಪ್ರಸಿದ್ಧರಾದ ಈ ಲಲನೆಯರ ಆಶ್ಚರ್ಯಕರವಾದ ಕುಚಗಳಿಗೆ ಭಕ್ತಿಯಿಂದ ಇದಿರ್ಗೊಂಡು ಬಂದುವು. ನೀರಹಕ್ಕಿಗಳು ದುಂಬಿಯಂತೆ ಮಧುರವಾಗಿ ಮಾತನಾಡುವ ಇವರ ಇಂಚರಕ್ಕೂ, ಮೀನುಗಳು ವಿಮಲ ಲೋಚನೆಯರ ನಯನಕ್ಕೂ ಭಕ್ತಿಯಿಂದ ಎದಿರ್ಗೊಂಡು ಬಂದುವು. ಇಂಥ ಲಲನೆಯರು ಹೀಗೆ ಜಲ ಕೇಳಿಗೆ ಹೋದರು.

ವ॥ ಅಂತು ತ್ರ್ಯಂಬಕದೇವರ ಮುಂದಣ ಸರೋವರಕ್ಕೆ ಬಂದು,

ಸುೞಿ ಸುೞಿನಾಭಿಯಿಂ ವಳಿ ವಳಿತ್ರಯದಿಂ ಕಮಳಂ ಮುಖಾಬ್ಜದಿಂ
ಪೊಳೆವೆಳಮೀಂಗಳಕ್ಷಿಗಳಿಂ. . . . ದ್ವಯದಿಂದೆ ಶೈವಳಂ
ಲಲಿತಭುಜಂಗಳಿಂದೊಗೆದುವೆಂಬಿನಮಂಬುವಿನೊಳ್ ವಿಳಾಸಿನೀ
ಕುಲಮನುರಾಗದಿಂ ಸಲಿಲಕೇಳಿಯನಂದೆಸಗಿತ್ತು ಲೀಲೆಯಿಂ ೮೦

ಮದಭೃಂಗಕ್ಕೆಣೆಯಪ್ಪ ನುಣ್ಗುರುಳ ಕರ್ಪಿಂ ಚಾರುಚಂಚತ್ಕಟಾ
ಕ್ಷದ ಬೆಳ್ಪಿಂ ನವಪಲ್ಲವಾಧರದ ಕೆಂಪಿಂ ನಾರಿಯರ್ ವಾರಿಯೊಳ್
ಮೃದುಕಸ್ತೂರಿಯ ಶುದ್ಧಚಂದನಮನೊಳ್ಪಿಂ ಕುಂಕುಮ ಶ್ರೇಣಿಯಂ
ಕದಡಿಟ್ಟಂತಿರೆ ಮಾಡಿಯಾಕೊಳನೊಳೊಲ್ದೋಲಾಡಿದರ್ ಲೀಲೆಯಿಂ ೮೧

ಕಂ॥ ವಿಕಸದರುಣಾಬ್ಜದೊಳ್ ಚಂ
ದ್ರಕಳಾಕೃತಿ ತೋರ್ಪುದಿದು ವಿಚಿತ್ರಮೆನಲ್ ಯಾ
ವಕರದಿನೆಸೆವ ಕೆಯ್ಗಳ್
ಸುಕರಮೆನಲ್ ಶೃಂಗವಿತತಿಯೇನೊಪ್ಪಿದುದೋ ೮೨

ಅಂಗಜನೃಪಂಗೆ ಬಾಣನಿ
ಷಂಗಮನೊಲ್ದೀವ ರತಿಯವೊಲ್ ಪದೆಪಿಂದು
ತ್ತುಂಗಸ್ತನಿಯರ್ ಜಲ ಯಂ
ತ್ರಂಗಳನುರುಕರದೊಳಾಂತು ಕಣ್ಗೆಸೆದಿರ್ದರ್ ೮೩

ವ॥ ಹೀಗೆ ತ್ರ್ಯಂಬಕದೇವರ ಮುಂದಣ ಸರೋವರಕ್ಕೆ ಬಂದು. ೮೦. ಈ ರಮಣಿಯರ ಸುಳಿ ಹೊಕ್ಕಳಿನಿಂದ ನೀರಿನ ಸುಳಿಯು ಹುಟ್ಟಿತು. ಅಲೆಗಳ ಸಾಲು ಇವರ ವಳಿತ್ರಯಗಳಿಂದ ಕಮಲವು ಇವರ ಮುಖಕಮಲಗಳಿಂದ, ಹೊಳೆಯುವ ಎಳೆ ಮೀನುಗಳು ಇವರ ಕಣ್ಣುಗಳಿಂದ (ಚಕ್ರವಾಕಗಳು ಸ್ತನದ್ವಯದಿಂದ ?) ಪಾಚಿಯು ಲಲಿತವಾದ ತೋಳುಗಳಿಂದ ಹುಟ್ಟಿದುವು—ಎಂಬ ರೀತಿಯಲ್ಲಿ ವಿಲಾಸಿನಿಯರು ನೀರಿನಲ್ಲಿ ಜಲಕ್ರೀಡೆಯನ್ನಾಡಿದರು. ೮೧. ಕಾಂತೆಯರು ಕೊಳದಲ್ಲಿ ಲೀಲೆಯಿಂದ ಕ್ರೀಡಿಸಿದರು. ಆಗ ಮದಿಸಿದ ದುಂಬಿಗಳಿಗೆ ಸಮನಾದ ನುಣುಪಾದ ಮುಂಗುರುಗಳ ಕಪ್ಪಿನಿಂದ ನೀರಿನಲ್ಲಿ ಕಸ್ತೂರಿಯನ್ನು ಕದಡಿದಂತೆ ಕಾಣಿಸಿತು, ಸುಂದರವಾದ ಚಂಚಲವಾದ ಕಡೆಗಣ್ ನೋಟಗಳ ಬಿಳುಪಿನಿಂದ ನೀರಿನಲ್ಲಿ ಚಂದನವನ್ನು ಕದಡಿದಂತೆ ತೋರಿತು, ಹೊಸ ಚಿಗುರಿನಂಥ ಅಧರದ ಕೆಂಪಿನಿಂದ ಕುಂಕುಮವನ್ನು ಕದಡಿದಂತೆ ಕಂಡು ಬಂದಿತು. ೮೨. ಆ ತರುಣಿಯರು ಅರಗಿನ ಬಣ್ಣ ಹಚ್ಚಿದ ಕೈಯಲ್ಲಿ ಜೀರ್ಕೊಳವಿಗಳನ್ನು ಹಿಡಿದಿದ್ದರು. ಅದು ಅರಳುತ್ತಿರುವ ಕೆಂದಾವರೆಯಲ್ಲಿ ಚಂದ್ರನ ಕಲೆಯು ಹರಡಿದಂತೆ ವಿಚಿತ್ರವಾಗಿ ಕಾಣಿಸಿತು. ೮೩. ಜಲಯಂತ್ರಗಳನ್ನು ಕೈಯಲ್ಲಿ ಹಿಡಿದಿದ್ದ ಉನ್ನತ ಸ್ತನಿಯರು ಅಂಗಜ

ಕಡುಪಿಂ ಬಂದೊರ್ಬಳಾರ್ಪಿಂ ಕುಳಿರ್ವ ಜಲವನಾರ್ದಂಡೆಯಿಂ ಪೊಯ್ಯಲಿನ್ನಾ
ವೆಡೆಗೆಂತೌ ಪೋಪೆಯೊಡ್ಡೆನಗೆ ಮಗುೞ್ದು ನೀಂ ಬೆನ್ನನೆಂದಾಗಳೆಯ್ತಂ
ದೆಡಗಾಲಂ ನೀಡಿ ಮುಂದಿಟ್ಟಡರ್ದ ಘಟಕುಚಂ ತೋಳ್ಗೆ ಪರ್ಬಲ್ಕೆ ಶೃಂಗಂ
ಬಿಡದಂಗೈ ಕೆನ್ನೆಗೆಯ್ದಲ್ ನಿಮಿರ್ದು ಕೆಳದಿಯಂ ಪೊಯ್ದು ಪಿಂತಾದಳೊರ್ಬಳ್
೮೪

ಭವನ ಲಲಾಟಲೋಚನದ ವಹ್ನಿಗೆ ಭಾಜನಮಾದ ಕಾಮದಾ
ಹವನುಱೆ ನಂದಿಸಲ್ ಮಗುೞ್ದು ಪುಟ್ಟಿಸಲಾರ್ತಪರಾದೊಡೇಂ ಸದಾ
ಶಿವನ ಪರಾಕ್ರಮಕ್ಕೆ ಪೞಿ ಬಂದಪುದೆಂದುೞಿದಂತರಂಗಸಂ
ಭವನವನೆಂದು ನೀರ್ದಳಿವರೊರ್ಬರದೊರ್ಬರೊಳಾದವಿಗ್ಧೆಯರ್ ೮೫

ತರುಣಿಯರಂಬುಕೇಳಿಗೆ ಲಸಜ್ಜಳವಂ ಪುಗುವಾಗಳೊರ್ಬರೊ
ರ್ಬರ ನೆೞಲೊಂದನೇಕವಿಧದಿಂ ತೆಱೆಯೊಟ್ಟಿಲೊಳೆಯ್ದೆ ತೋಱಲ
ಚ್ಚರಿಯೆನಲೊಪ್ಪುತಿರ್ದುವಹಿ ಲೋಕದಿನೇೞ್ಗೆಯ ನಾಗಕನ್ಯಕಾ
ಪರಿಕರವೊಳ್ಪಿನಿಂ ಸಲಿಲಕೇಳಿಗೆ ಭೋರೆನೆ ಬರ್ಪ ಮಾಳ್ಕೆಯಿಂ ೮೬

ಕೆಳದಿಯರೊರ್ಬರೊರ್ಬರ ಮುಖಾಂಬುಜದೊಳ್ ಪೊಸಪೊನ್ನ ಚೆನ್ನಜೀ
ಕೊರ್ೞವಿಯನೊತ್ತಲಾ ಸಲಿಲಧಾರೆಯ ಬೆಂಬೞಿಯೊಳ್ ಸಿತಾಕ್ಷಿಕೋ
ಮಳರುಚಿ ನೀಳ್ದಿರಲ್ಕೆ ಜಲಯಂತ್ರದ ನೀರ್ ತವೆತೀರ್ದೊಡಂ ದೃಗಂ
ಚಳರುಚಿ ನೀಗಳೆಂದು ಜಲಯಂತ್ರಮನೊತ್ತಿ ಬೞಲ್ವರಾಕೆಯರ್ ೮೭

ರಾಜನಿಗೆ ಬಾಣ ಬತ್ತಳಿಕೆಗಳನ್ನು ನೀಡುತ್ತಿರುವ ರತಿಯಂತೆ ಕಂಡರು, ೮೪. ಒಬ್ಬಳು ವೇಗದಿಂದ ಬಂದು ತಣ್ಣೀರನ್ನು ಅಂಡೆಯಿಂದ ತೆಗೆದು ಅಪ್ಪಳಿಸಿ ಹೊಡೆದಳು. 'ನೀನು ಎಲ್ಲಿಗೆ ಹೋಗುತ್ತೀಯೆ ? ಹೀಗೆ ಹೋಗುತ್ತೀಯೆ ? ನಿನ್ನ ಬೆನ್ನನ್ನು ನನಗೆ ಒಡ್ಡು' ಎಂದು ಹೇಳುತ್ತಾ ಇನ್ನೊಬ್ಬಳು ಎಡಗಾಲನ್ನು ಮುಂದಿಟ್ಟು ಮೈನಿಮಿರಿಸಿ ಕೆಳದಿಯನ್ನು ಹೊಡೆದು ಹಿಂದಿರುಗಿದಳು. ಆಗ ಅವಳ ಕುಂಭಕುಚವು ತೋಳವರೆಗೆ ಹರಡಿತು. ಜೀಕೊರ್ಳವಿಯನ್ನು ಹಿಡಿದ ಅಂಗೈ ಕೆನ್ನೆಯ ಬಳಿ ಸರಿಯಿತು. ೮೫. ಆ ವಿದಗ್ಧರಾದ ಅಂಗನೆಯರು ಹರನ ಹಣೆಗಣ್ಣಿನ ಬೆಂಕಿಗೆ ಗುರಿಯಾದ ಕಾಮನದಾಹವನ್ನು ನಂದಿಸಲೂಬಲ್ಲರು. ಮತ್ತೆ ಹುಟ್ಟಿಸಲೂ ಬಲ್ಲರು. ಆದರೆ ಅವರಿಂದ ಸದಾಶಿವನ ಪರಾಕ್ರಮಕ್ಕೆ ಕುಂದುಂಟಾಗುವುದು ಎಂದು ಆ ಕೆಲಸ ಮಾಡಲಿಲ್ಲ ಮತ್ತೆ ಕಾಮನು ಅಂತರಂಗದಲ್ಲಿ ಹುಟ್ಟುವನೆಂದು (ಕಾಮದಾಹವನ್ನು ತಗ್ಗಿಸಲು) ಅವರು ಒಬ್ಬರ ಮೇಲೆ ಇನ್ನೊಬ್ಬರು ನೀರನ್ನು ಚೆಲ್ಲಿದರು. ೮೬. ತರುಣಿಯರು ಜಲ ಕ್ರೀಡೆಗಾಗಿ ನೀರನ್ನು ಹೊಕ್ಕರು. ಆಗ ಅವರೊಬ್ಬೊಬ್ಬರ ನೆರಳೂ ಅನೇಕ ವಿಧವಾಗಿ ಅಲೆಗಳ ರಾಶಿಯಲ್ಲಿ ಪ್ರತಿಫಲಿಸಿತು ಅಚ್ಚರಿ ! ಅದು ನಾಗಲೋಕದಿಂದ ನಾಗಕನ್ಯೆಯರು ಸಲಿಲ ಕೇಳಿಗಾಗಿ ಎದ್ದು ಬರುತ್ತಿರುವಂತೆ ತೋರಿತು. ೮೭. ಗೆಳತಿಯರು ಒಬ್ಬರು ಇನ್ನೊಬ್ಬರು ಮುಖ ಕಮಲಕ್ಕೆ ಹೊಸ ಹೊನ್ನಿನ ಜೀಕೊರ್ಳವಿಗಳಿಂದ ನೀರನ್ನು ಒತ್ತಿ

ವ॥ ಅಂತು ಜಲದೇವತೆಯರೆ ವಿಳಾಸಿನಿಯರಾದಂತೆಯುಂ ಎಳಮೀಂಗಳೆ ಕೆಳದಿಯರಾದಂತೆಯುಂ ತೆರೆದುಱುಗಳೆ ತರುಣಿಯರಾದಂತೆಯುಂ ಮರಾಳಮಂಡಲಿಯೆ ಮಾನಿನಿಯರಾದಂತೆಯುಂ ಜಲರುಹಪಂಕ್ತಿಯೆ ಲಲನೆಯರಾದಂತೆಯುಂ ಕುಮುದಕುಲಮೆ ರಮಣಿಯರಾದಂತೆಯುಂ ಬಿಸಜಲತೆಯೆ ಶಶಿಮುಖಿಯರಾದಂತೆಯುಂ ಜಲಕೇಳಿಯನೆಸಗುವ ಲಲನೆಯರ ನಡುವೆ

ನೂತನ ತಾರಕಾತತಿಯುತಂ ಶಶಿಲೇಖೆ ಸುಧಾಬ್ಧಿಯೊಳ್ ಪುನ
ರ್ಜಾತವನಾಂತವೊಲ್ ವಿಶದಮಪ್ಪ ಜಲಪ್ಲವದೊಳ್ ವಿಳಾಸಿನೀ
ವ್ರಾತಯುತಂ ವಿದಗ್ಧೆ ನವಮಾಲಿಕೆ ವಾರಿವಿನೋದದಿಂ ಮನೋ
ಜಾತನ ಬೊಂಬೆಯಂತೆಸೆದಳೇವೊಗಟ್ವೆಂ ಸುಕುಮಾರಲೀಲೆಯಂ ೮೮

ವ॥ ಅಂತು ನವಮಾಲಿಕೆ ಸಂಭ್ರಮದಿಂ ಜಲಕ್ರೀಡೆಯನಾಡುವ ಸಮಯದೊಳ್

ಕಂ॥ ನಾರೀವೇಷಮನುೞಿದಾಂ
ನೀರೊಳಗೆ ಮುೞುಂಗಿ ಬೇಗದಿಂ ಪೃಥುಮತ್ಸ್ಯಾ
ಕಾರದಿನುಚ್ಚಳಿಸಿ ಕರಂ
ದೂರದೊಳಿರ್ದೆಟ್ದನಂತಟಂತರ್ಜಲದೊಳ್ ೮೯

ಹಾರಿಸಿದರು. ಆ ನೀರಿನ ಧಾರೆಗಳ ಹಿಂದೆಯೇ ಅವರ ಬೆಳ್ಗಣ್ಣುಗಳ ಕೋಮಲ ಕಾಂತಿಯು ನೀಳವಾಗಿ ಹರಡಿತು. ಆಗ ಅವರು ಜಲಯಂತ್ರದಲ್ಲಿ ನೀರು ತೀರಿ ಹೋದರೂ ಕಡೆಗಣ್ಣಿನ ಕಾಂತಿಯನ್ನೇ ನೀರೆಂದು ತಿಳಿದು ಜಲಯಂತ್ರವನ್ನೊತ್ತಿ ಬಳಲಿದರು. ವ॥ ಜಲದೇವತೆಯರೇ ವಿಳಾಸಿನಿಯರಾದರು. ಎಳೆ ಮೀನುಗಳೇ ಗೆಳತಿಯರಾದರು. ಅಲೆಗಳ ಗುಂಪೇ ತರುಣಿಯರಾದರು. ಹಂಸಗಳ ಸಮೂಹವೇ ಮಾನಿನಿಯರಾದರು. ಕಮಲಗಳ ಸಾಲೇ ಲಲನೆಯರಾದರು. ನೈದಿಲೆ ಹೂಗಳೇ ರಮಣಿಯರಾದರು. ತಾವರೆ ಬಳ್ಳಿಯೇ ಶಶಿಮುಖಿಯರಾದರು. ಲಾವಣ್ಯ ರಸವೇ ಭಾವಕಿಯರಾದರು ಎಂಬಂತೆ ಕಾಣಿಸುವ ಸುಂದರ ಲಲನೆಯರು ಜಲಕೇಳಿಯನ್ನು ನಡೆಸಿದರು. ಅವರ ನಡುವೆ—೮೮. ನಿರ್ಮಲವಾದ ಜಲಪ್ರವಾಹದಲ್ಲಿ ವಿಳಾಸಿನಿಯರ ಜೊತೆ ನವಮಾಲಿಕೆಯು ಚಾತುರ್ಯದಿಂದ ಜಲಕ್ರೀಡೆಯಾಡುತ್ತಿದ್ದಳು. ಆಗ ಅವಳು, ಚಂದ್ರಲೇಖೆಯು ನೂತನ ತಾರಕೆಗಳೊಡನೆ ಸುಧಾ ಸಮುದ್ರದಿಂದ ಪುನರ್ಜನ್ಮವನ್ನು ಪಡೆದಳೋ ಎಂಬಂತೆ ಕಂಡಳು. ಮತ್ತು ಮನ್ಮಥನ ಬೊಂಬೆಯಂತೆ ಹೊಳೆದಳು. ಅವಳ ಸುಕುಮಾರ ಲೀಲೆಯನ್ನು ಏನೆಂದು ಹೊಗಳಲಿ ! ವ॥ ಹಾಗೆ ನವಮಾಲಿಕೆಯು ಸಂಭ್ರಮದಿಂದ ಜಲಕ್ರೀಡೆಯನ್ನಾಡುತ್ತಿರುವಾಗ ೮೯. ನಾನು (ಪ್ರಮತಿ) ನಾರೀವೇಷವನ್ನು ತೆಗೆದುಹಾಕಿ ನೀರಿನಲ್ಲಿ ಮುಳುಗಿದೆನು. ಬೇಗ ದೊಡ್ಡ ಮೀನಿನ ಹಾಗೆ ನೀರಿ

ಕಂ॥ ಮುಂ ನಾಂ ಪೇೞ್ದಂದದೊಳೊಲ
ವಿಂ ನದಿಯೊಳದೊಂದು ಕುಱುವದೊಳ್ ಮಿತ್ರವರಂ
ತನ್ನಟ್ಕಱಿನಿರ್ದಂ ಬರ
ವಂ ನೋಡುತ್ತಿರಡು ಸೀರೆಯುಂ ಪಿಡಿದೆನ್ನಾ ೯೦

ವ॥ ಅಂತಿರ್ದ ಮಿತ್ರವರನಂ ಕಂಡಾತನ ಕೆಯ್ಯೊಳಿರ್ದ ಸೀರೆಯನೀಸಿಕೊಂಡು

ಕಂ॥ ನಿಱಿವಿಡಿದು ದುಗುಲಮಂ ಮುಂ
ಜೆಱಗೆಸೆವಂತುಟ್ಟು ಮೇಲನುದಕಪ್ಲವದಿಂ
ಪೊಱಮಟ್ಟು ಮಿತ್ರವರನೊಳ್
ಮೆಱೆದಿರ್ಪಂತೊಂದು ಮಾತನಾನಿಂತೆಂದೆಂ ೯೧

ವ॥ ಅದೆಂತೆನೆ

ಕಂ॥ ಎನ್ನನೊಡಗೊಂಡು ಪೋಗಿ ಮ
ಹೋನ್ನತಿಯಿಂ ನೃಪನ ಮುಂದೆ ನಿಂದಿರಿಸಿ ಮಗು
ೞ್ದಿನ್ನಳಿಯನಿಂದು ಬಂದಂ
ಕನ್ನಿಕೆಯಂ ಕರೆಸಿ ಕುಡುವುದೆಲೆ ಭೂಪಾಲಾ ೯೨

ವ॥ ಅಂತೆಂಬುದುಂ ಬೞಿಯಂ

ಕನ್ನೆಯನಾತಂ ಕಾಣನೆ
ಮುನ್ನಮೆ ಪೋಯ್ತೆಂಗುಮೆಂದೊಡೆನ್ನಸುವಂ ಕೇಳ್
ನಿನ್ನಲ್ಲಿ ತೊಱೆವೆನೆಂದೊಲ
ವಿನ್ನೆಟ್ಟನೆ ವಹ್ನಿಕುಂಡಮಂ ಸವೆ ಬೇಗಂ ೯೩

ನೊಳಗೇ ಹೋಗಿ ದೂರದಲ್ಲಿ ನೀರಿನಿಂದ ಮೇಲಕ್ಕೆ ಎದ್ದೆನು, ೯೦. ಮೊದಲು ನಾನು ಹೇಳಿದ್ದಂತೆ ಮಿತ್ರವರನು ಎರಡು ಬಟ್ಟೆಗಳನ್ನು ಹಿಡಿದುಕೊಂಡು ನದಿಯ ಒಂದು ನಡುಗಡ್ಡೆಯಲ್ಲಿ ಪ್ರೀತಿಯಿಂದ ನನಗಾಗಿ ಕಾಯುತ್ತಿದ್ದನು. ವ|| ನಡುಗಡ್ಡೆಯಲ್ಲಿ ಕಾಯುತ್ತಿದ್ದ ಮಿತ್ರವರನನ್ನು ಕಂಡು ಅವನ ಕೈಯಿಂದ ಬಟ್ಟೆಗಳನ್ನು ತೆಗೆದುಕೊಂಡು ೯೧ ದುಕೂಲವನ್ನು ನಿರಿಹಿಡಿದು ಮುಂಜೆರಗು ಬರುವಂತೆ ಉಟ್ಟು ನೀರಿನಿಂದ ಮೇಲಕ್ಕೆ ಬಂದೆನು. ಮತ್ತು ಮಿತ್ರವರನಿಗೊಂದು ಮಾತನ್ನು ಹೇಳಿದೆನು. ವ॥ ಅದು ಹೇಗೆಂದರೆ—೯೨. "ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ರಾಜನ ಮುಂದೆ ನಿಲ್ಲಿಸು. ಭೂಪಾಲನೇ ! ನನ್ನ ಅಳಿಯನು ಇಂದು ಬಂದಿದ್ದಾನೆ. ನನ್ನ ಮಗಳನ್ನು ಕರೆಸಿ ಇವನಿಗೆ ಕೊಡು' ಎಂದು ಹೇಳು. ವ॥ ಹಾಗೆ ಹೇಳಿದ ಮೇಲೆ—೯೩. ರಾಜನು ಕನ್ಯೆಯನ್ನು ಕಾಣದೆ 'ಅವಳು ಮೊದಲೇ ಹೊರಟು ಹೋಗಿದ್ದಾಳೆ' ಎಂದು ಹೇಳುತ್ತಾನೆ. ಆಗ ನೀನು 'ರಾಜನೆ ! ನಾನು ನಿನ್ನ ಮುಂದೆ ಪ್ರಾಣಗಳನ್ನು ತೊರೆಯುವೆನು

ವ॥ ಎಂದು ಪೇೞಲಾತನಂತೆ ಗೆಯ್ವೆನೆಂದೆನ್ನಂ ಧರ್ಮವರ್ಧನನೆಡೆಗೆ ಕೊಂಡುಪೋಗಿ

ಕಂ॥ ಎನ್ನಳಿಯನಿಂದು ಬಂದಂ
ಮುನ್ನಂ ನಿನ್ನೊಡನೆ ಪೇೞ್ದ ತೆಱದಿಂ ವಿದ್ಯಾ
ಸನ್ನುತನಾಚಾರಪರಂ
ಮನ್ನಿಸಿ ಕುಡುವೆಡೆಗೆ ತಕ್ಕನೆಂದುಱೆ ಪೇೞ್ದಂ ೯೪

ವ॥ ಅಂತು ಪೇೞ್ದು ಮತ್ತಂ

ಸಕಳಾಮ್ನಾಯಮನೊಪ್ಪುವೆತ್ತುಪನಿಷದ್ವಾಕ್ಯಾರ್ಥಮಂ ಕಾವ್ಯನಾ
ಟಕಮಂ ಲೌಕಿಕವಿದ್ಯೆಯಂ ಗಣಿತಮಂ ಷಟ್ತರ್ಕಮಂ ಗೀತವಾ
ದ್ಯಕಳಾಕೌಶಲಮಂ ಗೃಹಸ್ಥಿತಿಯನಾಯುರ್ದಾಯಮಂ ಶಿಲ್ಪಕೌ
ತುಕಮಂ ಭೂಪತಿ ನೀಂ ಪರೀಕ್ಷಿಸಿವನೊಳ್ ತೋರ್ಪಂ ಮಹಾಚಿತ್ರಮಂ ೯೫

ವಾರಣಶಿಕ್ಷೆಯಂ ತುರಗಶಿಕ್ಷೆಯನೊಪ್ಪುವ ಚಾಪವಿದ್ಯೆಯಂ
ಚಾರಣಚೂರಣಾದಿ ತರವಾರಿಯ ವಿದ್ಯೆಯನಾಗಮಂಗಳಂ
ಮಾರಮತಂಗಳಂ ಸ್ಮೃತಿಪುರಾಣ ಕಥಾಕವಿತಾಪ್ರಸಂಗ ವಿ
ಸ್ತಾರಮನೀತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ ನೃಪಾಲಕಾ ೯೬

ವ॥ ಮತ್ತಂ

ಕನಕಪರೀಕ್ಷೆಯಂ ಸಕಳರತ್ನಪರೀಕ್ಷೆಯನುತ್ತಮಾಂಗನಾ
ಜನದ ಪರೀಕ್ಷೆಯಂ ನವಸುಗಂಧಪರೀಕ್ಷೆಯನುದ್ಧವಸ್ತ್ರ ಸಂ
ಜನಿತ ಪರೀಕ್ಷೆಯಂ ಭರತಶಾಸ್ತ್ರಪರೀಕ್ಷೆಯನೀತನಲ್ಲದಾ
ವನುಮಱಿಯಂ ಮದೀಯತನುಜಾತೆಗೆ ತಕ್ಕನಿಳಾಧಿನಾಯಕಾ ೯೭

ಎಂದು ಹೇಳಿ ಅಗ್ನಿಕುಂಡವನ್ನು ಮಾಡಿಸು. ವ॥ ಎಂದು ಹೇಳಲು ಅವನು 'ಹಾಗೆಯೇ ಮಾಡುವೆ'ನೆಂದು ಹೇಳಿ ನನ್ನನ್ನು ಧರ್ಮವರ್ಧನನ ಬಳಿಗೆ ಕರೆದುಕೊಂಡು ಹೋದನು—೯೪. 'ಮೊದಲು ನಾನು ನಿನಗೆ ಹೇಳಿದ್ದಂತೆ ನನ್ನ ಅಳಿಯನು ಇಂದು ಬಂದಿದ್ದಾನೆ. ಅವನು ವಿದ್ಯಾವಂತನಾಗಿ ಕೀರ್ತಿಶಾಲಿಯಾಗಿದ್ದಾನೆ. ಆಚಾರವಂತನಾಗಿದ್ದಾನೆ. ಗೌರವಿಸಿ ಹೆಣ್ಣುಕೊಡಲು ತಕ್ಕವನು' ಎಂದು ಹೇಳಿದನು. ವ॥ ಹಾಗೆ ಹೇಳಿ ಮತ್ತೆ—೯೫. "ಭೂಪತಿ ! ಸಕಲವೇದಗಳು. ಉಪನಿಷದ್ವಾಕ್ಯಾರ್ಥ, ಕಾವ್ಯಗಳು ನಾಟಕಗಳು ಲೌಕಿಕ ವಿದ್ಯೆಗಳು, ಗಣಿತ, ಆರು ವಿಧವಾದತರ್ಕ, ಗೀತ ವಾದ್ಯಕಲಾಕೌಶಲ, ಗೃಹಶಿಲ್ಪ, ಜೋತಿಷ್ಯ, ಶಿಲ್ಪಶಾಸ್ತ್ರ-ಇವುಗಳೆಲ್ಲಾ ನೀನು ಪರೀಕ್ಷಿಸು. ಈತನು ಆಶ್ಚರ್ಯಗಳನ್ನೇ ತೋರಿಸುವನು. ೯೬. ಆನೆ ಕುದುರೆಗಳಿಗೆ ಶಿಕ್ಷಣ ಕೊಡುವುದು. ಧನುರ್ವಿದ್ಯೆ, ಚಾರಣ ಚೂರಣ ಮೊದಲಾದ ರೀತಿಯ ಕತ್ತಿಯವರಸೆ, ಆಗ ಮಗಳು ಕಾಮಶಾಸ್ತ್ರ, ಸ್ಮೃತಿ, ಪುರಾಣ, ಕಥೆ, ಕವಿತಾ—ಇವುಗಳಲ್ಲಿ ಕೌಶಲ ಇವನಿಗುಂಟು. ಈ ಭೂಮಿಯಲ್ಲಿ ಇವನಿಗಿಂತ ತಿಳಿದವರು ಬೇರೆ ಯಾರೂ ಇಲ್ಲ. ವ॥ ಮತ್ತೂ—೯೭. ಭೂಪಾಲನೆ ! ಚಿನ್ನದ ಪರೀಕ್ಷೆ, ಸಕಲ ರತ್ನಗಳ ಪರೀಕ್ಷೆ, ಉತ್ತಮ ಸ್ತ್ರೀಜನದ ಪರೀಕ್ಷೆ,

ಕಂ॥ ಎಲ್ಲಾ ಭಾಷೆಯನೀತಂ
ಬಲ್ಲಂ ದೇಶಾಂತರಂಗಳೊಳ್ ವಿಖ್ಯಾತಂ
ಸಲ್ಲಲಿತವಂಶಜಂ ಭೂ
ವಲ್ಲಭ ಕೇಳೆನ್ನ ಕನ್ನೆಗೀತಂ ಕಾಂತಂ ೯೮

ವ॥ ಎಂದು ಮಿತ್ರವರಂ ಧರ್ಮವರ್ಧನಂಗೆನ್ನಂ ತೋಱಿ ಶೋಭಾವತಿಯಂ ಕರೆಸೆಂ ಬುದುಮಾತನೊರ್ವ ಕಂಚುಕಿಯಂ ಕನ್ಯಾಂತಃಪುರಕ್ಕೆ ಕಳಿಪಲಾತಂ ಶೋಭಾವತಿಯಂ ಕಾಣದೆ ಮಗುಳ್ದು ಬಂದು

ಕಂ॥ ಅವಧಾನ ಧರ್ಮವರ್ಧನ
ನವಮಾಲಿಕೆ ತನ್ನ ಕೆಳದಿಯಂ ಕಾಣದೆ ದುಃ
ಖವನೆಡೆಗೊಂಡಿರ್ದಪಳೆಂ
ತು ವಿಚಾರಮೆನುತ್ತೆ ಸಾವಿದಲ್ಲಂ ಪೇಳ್ದಂ ೯೯

ವ॥ ಅಂತು ಪೇಟಲೊಡಂ

ಭೂವಳಯಾಧಿಪಂ ಬೆಱಗುವೆತ್ತುಮುದಂ ಪೆಱಪಿಂಗಿ ಪಂದೆಯಂ
ಪಾವಡರ್ದಂತೆ ತೊಟ್ಟನೆ ಕಟಲ್ದಿಲೆ ಭೂಸುರ ನಿನ್ನ ಕನ್ನೆ ಶೋ
ಭಾವತಿಯೆತ್ತಪೋದಳೞಿಯೆಂ ಪರಿಭಾವಿಸಲಿಂತಿದರ್ಕೆ ಪೇ
ೞಾವುದು ಬಟ್ಟೆ ಧರ್ಮಮೞಿಯಿತ್ತೆನುತುಬ್ಬೆಗದೊಳ್ ಮುಟುಂಗಿದಂ ೧೦೦

ಸುಗಂಧದ ಪರೀಕ್ಷೆ, ಉತ್ತಮವಾದ ವಸ್ತ್ರಗಳ ಪರೀಕ್ಷೆ, ಭರತಶಾಸ್ತ್ರದ ಪರೀಕ್ಷೆ–ಇವುಗಳನ್ನೆಲ್ಲದೆ ಬೇರೆ ಯಾರು ಇಷ್ಟು ಚೆನ್ನಾಗಿ ಅರಿಯರು. ಇವನು ನನ್ನ ಮಗಳಿಗೆ ಅನುರೂಪನಾದವರನು. ೯೮. ಭೂವಲ್ಲಭನೇ ! ಕೇಳು. ಈತನು ಎಲ್ಲ ಭಾಷೆಗಳನ್ನು ಬಲ್ಲನು. ದೇಶಾಂತರಗಳಲ್ಲಿ ಸಂಚರಿಸಿ ವಿಖ್ಯಾತನಾಗಿದ್ದಾನೆ. ಸದ್ವಂಶದಲ್ಲಿ ಹುಟ್ಟಿದ್ದಾನೆ. ಇವನು ನನ್ನ ಮಗಳಿಗೆ ತಕ್ಕಪತಿ." ವ॥ ಎಂದು ಹೇಳಿ ಮಿತ್ರವರನು ಧರ್ಮವರ್ಧನಿಗೆ ನನ್ನನ್ನು ತೋರಿಸಿ 'ಶೋಭಾವತಿಯನ್ನು ಕರೆಯಿಸು' ಎಂದನು. ಆಗ ರಾಜನು ಕನ್ಯಾಂತಪುರಕ್ಕೆ ಒಬ್ಬ ಕಂಚುಕಿಯನ್ನು ಕಳುಹಿಸಿದನು. ಆತನು ಶೋಭಾವತಿಯನ್ನು ಅಲ್ಲಿ ಕಾಣದೆ ಹಿಂದಿರುಗಿ ಬಂದು—೯೯. "ಧರ್ಮವರ್ಧನ ! ಗಮನಿಸಿ ಕೇಳು. ನವಮಾಲಿಕೆಯು ತನ್ನ ಗೆಳತಿಯನ್ನು ಕಾಣದೆ ದುಃಖಿಸುತ್ತಿದ್ದಾಳೆ. ಇದು ಇರುವ ವಿಷಯ" ಎಂದು ಕಂಚುಕಿಯು ಹೇಳಿದನು. ವ॥ ಹಾಗೆ ಹೇಳಿದಾಗ—೧೦೦. ಮಹಾರಾಜನು ಬೆರಗುಗೊಂಡನು. ಅವನ ಹರ್ಷವು ಇಂಗಿಹೋಯಿತು. ಹೇಡಿಯ ಮೇಲೆ ಹಾವು ಹತ್ತಿದಂತೆ ಕೂಡಲೆ ಬಲಗುಂದಿದನು. 'ಬ್ರಾಹ್ಮಣ ! ನಿನ್ನ ಮಗಳು ಶೋಭಾವತಿಯು ಎಲ್ಲಿಗೆ ಹೋದಳೆಂದು ತಿಳಿಯಲಿಲ್ಲ. ಇದಕ್ಕೆ ಬೇರಾವುದಾದರೂ ದಾರಿಯಿದೆಯೇ ? ವಿಚಾರಿಸಿ ಹೇಳು 'ನನ್ನ ಧರ್ಮ ನಾಶವಾಯಿತು' ಎಂದು ಹೇಳಿ

ವ॥ ಅಂತು ಚಿಂತಿಸುತಿರ್ದ ಭೂಪನೊಳ್ ಮಿತ್ರವರನಿಂತೆಂದಂ

ಎಲೆ ಭೂಪಾಲಕ ನಿನ್ನ ಮಂದಿರದೊಳಾಂ ನಿಕ್ಷೇಪಮಾಗಿಟ್ಟ ಮ
ತ್ಕುಲ ಚೂಡಾಮಣಿಯಪ್ಪ ಮತ್ತನುಜೆಯಂ ನೀನಿಂತು ಪೋಗಾಡಿ ದು
ರ್ಬಲನಪ್ಪೆನ್ನನುಪಾಯದಿಂ ಕಳಿಪಲಾಂ ಪೋದಪ್ಪೆನೇ ನಿನ್ನ ಕಾ
ಲ್ಗೊಲವಿಂ ಜೀವಮನೆಯ್ದೆ ನೀಗುವೆನಿದಂ ಕೇಳಿಂತು ನೀವೆಲ್ಲರುಂ ೧೦೧

ವ॥ ಎಂದು ಮತ್ತಂ

ಕಂ॥ ಸಕಲೋಪಾಯದಿನಾಕ
ನ್ನಿಕೆಯಂ ತಂದಿತ್ತೊಡುೞಿವೆನಲ್ಲದೊಡತಿ ಕೌ
ತುಕವಾಗಿ ಜೀವಮಂ ಬಿ
ಟ್ಟ್ಪ ಕೆಲರ್ ನಿಂದಿಸಲಧರ್ಮಮಂ ನಿನಗೀವೆಂ ೧೦೨

ವ॥ ಎಂದನಂತರಂ

ರಾಜದ್ವಾರದೊಳಗ್ನಿಕುಂಡಮನಲಂಪಿಂ ಮಾಡಿ ತಂದಿಕ್ಕಿ ನಾ
ನಾಜೀರ್ಣದ್ರುಮಶುಷ್ಕಮಂ ಬೞಿಯಿನಲ್ಲಿ ಪ್ರಾಣಮಂ ನೀಗಲೆಂ
ದಾಜಾಣಂ ಶಿಖಿಯಂ ಸಮಂತು ಬಲವಂದಿರ್ಪಾಗಳೆಟ್ಟುರ್ವಿಪಂ
ರಾಜೀವಾಕ್ಷಿಯನೆನ್ನ ನಂದನೆಯನಾನೊಲ್ದೀವೆನೆಂದಂ ನೃಪಾ ೧೦೩

ಉದ್ವೇಗದಲ್ಲಿ ಮುಳುಗಿದನು. ವ॥ ಹೀಗೆ ಯೋಚಿಸುತ್ತಿದ್ದ ರಾಜನಿಗೆ ಮಿತ್ರವರನು ಹೇಳಿದನು—೧೦೧. "ರಾಜನೇ ! ನನ್ನ ಕುಲಕ್ಕೆ ಚೂಡಾಮಣಿಯಾದ ನನ್ನ ಮಗಳನ್ನು ನಿನ್ನ ಮನೆಯಲ್ಲಿ ನಿಕ್ಷೇಪವಾಗಿ ಇಟ್ಟಿದ್ದೆನು. ನೀನು ಅವಳನ್ನು ಹೋಗಲಾಡಿಸಿ ದುರ್ಬಲವಾದ ನನ್ನನ್ನು ಉಪಾಯವಾಗಿ ಸಮಾಧಾನಮಾಡಿ ಕಳುಹಿಸಲು ಯತ್ನಿಸುತ್ತಿದ್ದೀಯೆ. ಆದರೆ ನಾನು ಹಾಗೆಲ್ಲ ಹೋಗುವುದಿಲ್ಲ. ನಿನ್ನ ಪಾದಗಳಲ್ಲಿ ಪ್ರೀತಿಯಿಂದ ನನ್ನ ಪ್ರಾಣಗಳನ್ನು ಕಳೆದುಕೊಳ್ಳುವೆನು. ಈ ಮಾತನ್ನು ನೀವೆಲ್ಲರೂ ಕೇಳಿರಿ. ವ॥ ಮತ್ತೆ—೧೦೨. ಎಲ್ಲ ಉಪಾಯಗಳನ್ನು ಪ್ರಯೋಗಿಸಿ ನನ್ನ ಮಗಳನ್ನು ತಂದುಕೊಟ್ಟರೆ ನಾನು ಬದುಕುವೆನು. ಅಲ್ಲದಿದ್ದರೆ ಆಶ್ಚರ್ಯಕರವಾದ ರೀತಿಯಲ್ಲಿ ಜೀವವನ್ನು ಬಿಡುತ್ತೇನೆ. ಎಲ್ಲರೂ ನಿನ್ನನ್ನು ನಿಂದಿಸುವರು. ನಿನಗೆ ಅಧರ್ಮವು ಬರುವುದು." ವ॥ ಎಂದು ಹೇಳಿದನು. ಅನಂತರ—೧೦೩. ಅರಮನೆಯ ಬಾಗಿಲಲ್ಲಿ ಅಗ್ನಿ ಕುಂಡವನ್ನು ರಚಿಸಿ ಅದರಲ್ಲಿ ಒಣಗಿದ ಅನೇಕ ಮರಗಳನ್ನು ತರಿಸಿ ಹಾಕಿಸಿದನು. ಆ ಜಾಣನು ಅದರ ಹತ್ತಿರ ನಿಂದು ಪ್ರಾಣ ಬಿಡಲೆಂದು ಅಗ್ನಿಯನ್ನು ಪ್ರದಕ್ಷಿಣೆ ಮಾಡತೊಡಗಿದನು. ಆಗ ಆ ರಾಜನು 'ಕಮಲಾಕ್ಷಿಯಾದ ನನ್ನ ಮಗಳನ್ನೇ ಕೊಡುವೆನು' ಎಂದು ಹೇಳಿದನು.



ವ॥ ಎಂದಾಗಳ್

ಚಿತ್ರಜಸನ್ನಿಭಂ ದ್ವಿಜವರಂ ಶ್ರುತಿನೀತಿಕಳಾಪ್ರವೀಣನ
ತ್ಯುತ್ತಮನೀವರಂಗೆ ನವಮಾಲಿಕೆಯಂ ಕುಡಲಿಪ್ಪರೆಲ್ಲರುಂ
ಸುತ್ತಣರಾಯರುಂ ಪೊಗೞ್ವರೆಂದೊಲವಿಂ ಧರಣೀಶನೊಲ್ಮೆಯಿಂ
ದಿತ್ತನಲಂಪಿನಿಂದೆನಗೆ ತನ್ನ ತನೂಜೆಯನುರ್ವರಾಧಿಪಾ ೧೦೪

ಭೂಮಿಪ ಧರ್ಮವರ್ಧನ ನೃಪಾಲಕನೊಪ್ಪಿರೆ ಕಾಮಧೇನುವಂ
ಕಾಮಿಸಿದಂತೆ ಬೇೞ್ಪನಿತು ಮಂಗಳಸಾಧನದಿಂ ಸಭಾಗ್ರದೊಳ್
ಪ್ರೇಮದೊಳಾಕ್ಷಣಂ ಕರೆಸಿ ತನ್ನ ತನೂಜೆಯನೆನ್ನೊಳಿತ್ತು ಸು
ಕ್ಷೇಮವನಾಗಿಸೆಂದೊಸೆದು ಸೇಸೆಯನಿಕ್ಕಿದನಾ ಮುಹೂರ್ತದೊಳ್ ೧೦೫

ಕಂ॥ ತನಗೆ ಸುತರಿಲ್ಲದುದಱಿಂ
ದೆನಗೈಶ್ವರ್ಯಪ್ರಸಿದ್ಧಿಯಂ ಮಾಡಿದನಾ
ಜನಪಂ ಬೞಿಯಿಂದಾಂ ತ
ದ್ವನಿತೆಯೊಳೊಡಗೂಡಿ ಸುಖದೊಳಿರ್ಪನ್ನೆವರಂ ೧೦೬

ಅಂಗಾಧಿರಾಜನೊಲವಿಂ
ಸಂಗರಸಾಹಾಯ್ಯಮಾಗಲೆನ್ನಂ ಕರೆಸಲ್
ಪೀಗದೆ ಬಂದು ನಿಜಾಂಘ್ರಿಯು
ಗಂಗಳ್ಗೆಱಗಿರ್ಪ ಸೈಪು ದೊರೆದತ್ತಿಗಳ್ ೧೦೭

ವ॥ ಹಾಗೆ ಹೇಳಿದಾಗ, ೧೦೪. 'ರಾಜಹಂಸನೇ ! ಈ ಬ್ರಾಹ್ಮಣನು ಮನ್ಮಥನ ಹಾಗಿದ್ದಾನೆ. ಶ್ರುತಿ ನೀತಿ ಕಲೆಗಳಲ್ಲಿ ಪ್ರವೀಣನು. ಅತ್ಯುತ್ತಮನು, ಈ ವರನಿಗೆ ನವ ಮಾಲಿಕೆಯನ್ನು ಕೊಡುವೆನು. ಎಲ್ಲರೂ ಇದಕ್ಕೆ ಇಷ್ಟ ಪಡುತ್ತಾರೆ. ಸುತ್ತ ಮುತ್ತಣ ರಾಜರೂ ಇದನ್ನು ಮೆಚ್ಚಿ ನನ್ನನ್ನು ಹೊಗಳುತ್ತಾರೆ.' ಎಂದು ಹೇಳಿ ಪ್ರೀತಿಯಿಂದ ಧರ್ಮವರ್ಧನನು ತನ್ನ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಿದನು. ೧೦೫. ರಾಜವಾಹನ ಮಹಾರಾಜನೆ ! ಧರ್ಮವರ್ಧನ ಮಹಾರಾಜನು ಸಭೆಯನ್ನಲಂಕರಿಸಿದನು. ಕಾಮಧೇನುವನ್ನು ಕೇಳಿ ಪಡೆದಂತೆ ಆ ಸಭೆಯು ಕೇಳುವಷ್ಟು ಮಂಗಳ ವಸ್ತುಗಳಿಂದ ಪ್ರಕಾಶಿಸುತ್ತಿತ್ತು. ಕೂಡಲೆ ನನ್ನನ್ನು ಅಲ್ಲಿಗೆ ಕರೆಯಿಸಿ ತನ್ನ ಮಗಳನ್ನು ಕೊಟ್ಟನು. ಶುಭಮುಹೂರ್ತದಲ್ಲಿ 'ಸುಕ್ಷೇಮದಿಂದಿರಿ' ಎಂದು ಪ್ರೀತಿಯಿಂದ ನಮ್ಮ ಮೇಲೆ ಅಕ್ಷತೆ ಚೆಲ್ಲಿದನು. ೧೦೬. ಧರ್ಮವರ್ಧನನು ತನಗೆ ಮಕ್ಕಳಿಲ್ಲದಿದ್ದುದರಿಂದ ನನಗೇ ಐಶ್ವರ್ಯವನ್ನೆಲ್ಲ ಕೊಟ್ಟನು. ಬಳಿಕ ಆ ವನಿತೆಯೊಡನೆ ಕೂಡಿ ಇದುವರೆಗೂ ಸುಖವಾಗಿದ್ದೆನು. ೧೦೭. ಅಂಗರಾಜನು ತನಗೆ ಯುದ್ಧದಲ್ಲಿ ಸಹಾಯ ಮಾಡಬೇಕೆಂದು ಹೇಳಿ ಕಳುಹಿಸಿದನು. ಅದರಿಂದ ಕೂಡಲೆ ಇಲ್ಲಿಗೆ ಬಂದೆನು. ಇದರಿಂದ ಈಗ

ವ॥ ಎಂದು ರಾಜವಾಹನಂಗೆ ಪ್ರಮತಿ ತನ್ನ ವೃತ್ತಾಂತಮಂ ಪೇಟ್ಟಿ,

ಪರರಟಿವಿಲ್ಲದಂತು ತನಗುತ್ಕಟಪಾತಕಮೆಯ್ದದಂತು ಸ
ರ್ವರ ಬಗೆಗೊಪ್ಪುವಂತು ಪುರುಷಾರ್ಥಫಲಂ ತನಗೆಯ್ದುವಂತು ದು
ಸ್ತರತರ ಕಾರ್ಯಮಂ ಪ್ರಮತಿಯಂತಿರೆ ಮಾಟ್ಟುವನಾವನೆಂದು ಬಂ
ಧುರವಚನಂಗಳಿಂ ಪೊಗಟ್ದು ಮೆಚ್ಚಿದನಾಗಳಭಂಗ ವಿಕ್ರಮಂ ೧೦೮

ಗದ್ಯ

ಇದು ನಿಖಿಳಬುಧಜನ ಮನೋವನಜವನ ದಿವಾಕರಕಿರಣಪ್ರತಿಮ ಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜಮತ್ತಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರ ಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಪ್ರಮತಿಕಥಾವೃತ್ತಾಂತಂ

## ಏಕಾದಶಾಶ್ವಾಸಂ

ತಮ್ಮ ಪಾದಗಳಿಗೆ ನಮಸ್ಕರಿಸುವ ಪುಣ್ಯವು ದೊರಕಿತು." ವ॥ ಎಂದು ರಾಜವಾಹನ ನಿಗೆ ಪ್ರಮತಿಯು ತನ್ನ ಕಥೆಯನ್ನು ಹೇಳಿದನು—೧೦೮. "ಪರರಿಗೆ ಕೇಡಾಗಲಿಲ್ಲ. ತನಗೆ ಬಲವಾದ ಪಾಪ ಬರಲಿಲ್ಲ. ಎಲ್ಲರ ಮನಸ್ಸಿಗೂ ಒಪ್ಪಿಗೆಯಾಗುವಂತೆ ಪುರುಷಾರ್ಥ (ಕಾಮ) ಸಿದ್ಧಿಯಾಯಿತು. ಹೀಗೆ ಮಾಡಲು ಕಷ್ಟಕರವಾದ ಕಾರ್ಯವನ್ನು ಪ್ರಮತಿಯು ಹಾಗೆ ಮಾಡುವವರು ಬೇರೆಯಾರಿದ್ದಾರೆ ?" ಎಂದು ಮಧುರವಾದ ಮಾತುಗಳಿಂದ ಅಭಂಗ ವಿಕ್ರಮನಾದ ರಾಜವಾಹನನು ಪ್ರಮತಿಯನ್ನು ಮೆಚ್ಚಿಕೊಂಡು ಹೊಗಳಿದನು. ಇದು ಎಲ್ಲ ವಿದ್ವಾಂಸರ ಮನಸ್ಸೆಂಬ ಕಮಲವನಕ್ಕೆ ಸೂರ್ಯನ ಕಿರಣಕ್ಕೆ ಸಮವಾದ, ಪ್ರಸನ್ನವಾದ ಶ್ರೀಮದಭಂಗ ವಿಟ್ಠಲನ ಪಾದ ಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗ ಸರಸಕವಿ ಚೌಂಡರಾಜ ವಿರಚಿತವಾದ ಅಭಿನವ ದಶ ಕುಮಾರ ಚರಿತೆಯಲ್ಲಿ ಪ್ರಮತಿ ಕಥಾ ವೃತ್ತಾಂತವೆಂಬ ಹನ್ನೊಂದನೆಯ ಆಶ್ವಾಸ

# ದ್ವಾದಶಾಶ್ವಾಸಂ

## ಮಿತ್ರಗುಪ್ತನ ಕಥೆ

ಕಂ|| ಶ್ರೀನಂದನಸನ್ನಿಭನಭಿ
ಮಾನಧನಂ ಮಿತ್ರಗುಪ್ತನಂ ನೋಡಿ ಮನ
ಕ್ಕಾನಂದಮನೆಸಗೆಂದಂ
ಭೂನಾರೀಪತಿಯಭಂಗವಿಟ್ಠಲಭೃತ್ಯಂ ೧

ವ|| ಎಂಬುದುಂ ಮಿತ್ರಗುಪ್ತಂ ಕೆಯ್ಗಳಂ ಮುಗಿದು

ಜನಪತಿ ಬಿನ್ನಪಂ ಸಖರೊಳೆಲ್ಲರ ಮಾೞ್ಕೆಯೊಳಾಂ ತ್ವದೀಯಪಾ
ವನಪದಪದ್ಮಮಂ ಪದೆಪಿನಿಂದಱಿಸಲ್ ಪೊಱಮಟ್ಟು ಸಂತತಂ
ಜನಪದಮೆಲ್ಲಮಂ ತಿರಿಗಿ ಧರ್ಮನಿವಾಸದ ಸಿಂಹದೇಶಮಂ
ಮನವೊಸೆದೆಯ್ದಿ ಸಿಂಹಪುರಮಂ ಮಿಗೆ ಪೊಕ್ಕೆನತೀವರಾಗದಿಂ ೨

ವ|| ಅಂತು ಸಿಂಹಪುರಮಂ ಪೊಕ್ಕಿರ್ಪನ್ನೆಗಂ

ಮನಸಿಜಚಿತ್ತಮೋಹಿನಿಗೆ ಸತ್ಪಥಗಾಮಿನಿಗುಗ್ರಪಾಶಲೋ
ಪಿನಿಗೆ ಪುರಾರಿಕಾಮಿನಿಗೆ ಭೀಕರಶೂಲಿನಿಗಗ್ನಿಭಾಳಲೋ
ಚನಿಗೆ ಮೃಗೇಂದ್ರವಾಹಿನಿಗೆ ವರ್ಣಿತವರ್ಣನಿಗೊಲ್ದು ವಿಂಧ್ಯವಾ
ಸಿನಿಗೆ ಜಗಜ್ಜನಂ ಪರಕೆಯುಂ ಸಲಿಸಲ್ ನೆರೆದಿರ್ದರ್ವಿಪಾ ೩

೧. ಮನ್ಮಥನ ಹಾಗಿದ್ದ ಅಭಿಮಾನಧನನಾದ ಅಭಂಗವಿಟ್ಠಲನ ಸೇವಕನಾದ ಮಹಾರಾಜ ರಾಜವಾಹನನು ಮಿತ್ರಗುಪ್ತನನ್ನು ನೋಡಿ 'ನಿನ್ನ ಕಥೆಯನ್ನು ಹೇಳಿ ಮನಸ್ಸಿಗೆ ಆನಂದವನ್ನುಂಟುಮಾಡು' ಎಂದು ಹೇಳಿದನು. ವ|| ಮಿತ್ರಗುಪ್ತನು ಕೈಗಳನ್ನು ಮುಗಿದು ಹೀಗೆಂದನು : ೨. "ಮಹಾರಾಜನೆ, ಕೇಳು. ನಾನೂ ಎಲ್ಲ ಗೆಳೆಯರಂತೆ ನಿನ್ನ ಪಾದ ಕಾಮಲಗಳನ್ನು ಹುಡುಕಲು ಹೊರಟೆನು. ದೇಶಗಳನ್ನೆಲ್ಲ ಸಂಚರಿಸಿ ಧರ್ಮಕ್ಕೆ ವಾಸಸ್ಥಾನವಾದ ಸಿಂಹದೇಶವನ್ನು ಸೇರಿ ಪ್ರೀತಿಯಿಂದ ಅಲ್ಲಿನ ಸಿಂಹಪುರವನ್ನು ಪ್ರವೇಶಿಸಿದೆನು. ವ|| ಸಿಂಹಪುರವನ್ನು ಪ್ರವೇಶ ಮಾಡಿದಾಗ— ೩. ರಾಜನೆ! ಮದನನ ಮನಸ್ಸನ್ನು ಮೋಹಗೊಳಿಸುವ, ಆಕಾಶ ಗಾಮಿನಿಯಾದ, ಯಮಪಾಶವನ್ನು ಕತ್ತರಿಸಿ ಹಾಕುವ, ಹರನ ಪತ್ನಿಯಾದ, ಭಯಂಕರ ಶೂಲವನ್ನು ಹಿಡಿದ, ಬೆಂಕಿಯುಗುಳುವ ಹಣೆಗಣ್ಣುಳ್ಳ, ಸಿಂಹವಾಹಿನಿಯಾದ, ಪ್ರಶಂಸನೀಯವಾದ ಬಣ್ಣವುಳ್ಳ, ವಿಂಧ್ಯವಾಸಿನೀ ದೇವಿಗೆ ಜಗತ್ತಿನ ಜನರೆಲ್ಲ ಪ್ರೀತಿಯಿಂದ

ವ॥ ಅಂತಾವಿಂಧ್ಯವಾಸಿನಿಗೆ ಜಾತ್ರೆ ನೆರೆದಿರಲಾಂ ಪೋಗಲಲ್ಲಿ

ಕಂ॥ ಏಕಾಂತಸ್ಥಳದೊಳ್ ಚಿಂ
ತಾಕುಳಮಂ ನೀಗಲೆಂದು ಕುಳ್ಳಿರ್ದ್ದ ಏಪಂ
ಚೀಕೇಳಿಯೊಳಿರ್ದಂ ನಿ
ರ್ವ್ಯಾಕುಳದಿಂದೊರ್ಬ ಸೌಮ್ಯನುರ್ವೀನಾಥಾ ೪

ತುದಿವೆರಲಿಂದೆ ಮುಟ್ಟಿಯೆಡಗೆಯ್ಯೊಳಮರ್ಚಿಸುಡಾಳದಿಂಪು ನು
ಣ್ಪೊದವಿರೆ ಕೇಳ್ದ ಕೋವಿದರ ಕರ್ಣರಸಾಯನಮೆಂಬ ಮಾಟಿಕ್ಕೆಯಿಂ
ತೊದಳಿನಿತಿಲ್ಲದೊಳ್ಪಿಸೆವ ವಾಣಿಯ ಜಾಣ್ನುಡಿ ಕೇಳಲಾಯ್ತೆನಲ್
ಸದಮಳವೀಣೆಯಂ ಪದೆದು ಬಾಜಿಸುತಿರ್ದನನೇಕ ರೀತಿಯಿಂ ೫

ವ॥ ಅಂತಿರ್ದ ವೀಣಾಧರನಂ ಕಂಡು,

ಕಂ॥ ನೆರವಿಯನುಟಿದೊರ್ಬನೆ ಬಂ
ದು ರಹಸ್ಯದೊಳಿರ್ಪೆಯೇಕೆ ನಿನ್ನಯ ಪೆಸರೇಂ
ಪರಿವಾದಿನಿಯಂ ಸತತಂ
ಪರಮಪ್ರಿಯತಮೆಯನಪ್ಪುವಂತಪ್ಪಿರಲೇಂ ೬

ಪರಕೆಯನ್ನು ಸಲ್ಲಿಸಲು ಅಲ್ಲಿ ನೆರೆದಿದ್ದರು. ವ॥ ಈ ರೀತಿಯಲ್ಲಿ ವಿಂಧ್ಯವಾಸಿನಿಯ ಜಾತ್ರೆ ಸೇರಿದ್ದಾಗ ನಾನು ಹೊಕ್ಕೆನು. ಅಲ್ಲಿ— ೪. ಭೂಪಾಲನೆ! ಒಂದು ಏಕಾಂತವಾದ ಜಾಗದಲ್ಲಿ ಒಬ್ಬ ಸೌಮ್ಯ ಪುರುಷನು ಚಿಂತೆಯ ಕಳವಳವನ್ನು ಕಳೆದು ಕೊಳ್ಳುವುದಕ್ಕಾಗಿ ಯಾವ ಅಡ್ಡಿಯೂ ಇಲ್ಲದೆ ವೀಣೆಯನ್ನು ನುಡಿಸುತ್ತಾ ಇದ್ದನು. ೫. ಅವನು ಶುದ್ಧವಾದ ವೀಣೆಯನ್ನು ಅನೇಕ ರೀತಿಯಿಂದ ಅಕ್ಕರೆಯಿಂದ ನುಡಿಯಿಸು ತ್ತಿದ್ದನು. ತುದಿ ಬೆರಳಿನಿಂದ ತಂತಿಗಳನ್ನು ಮೀಟುತ್ತಿದ್ದನು. ಎಡಗೈಯಲ್ಲಿ ವೀಣೆ ಯನ್ನು ಧರಿಸಿದ್ದನು. ಗಾನದ ಶೈಲಿಯು ಇಂಪಾಗಿದ್ದಿತು. ಕೇಳಿದವರ ಕಿವಿಗಳಿಗೆ ರಸಾಯನದಂತೆ ಹಿತವಾಗಿತ್ತು. ಸ್ವಲ್ಪವೂ ದೋಷವಿಲ್ಲದ ಮಧುರವಾದ ಸರಸ್ವತಿಯ ನಲ್ನುಡಿಯೇ ಕೇಳಿಸುತ್ತಿದೆ ಎಂಬಂತಿತ್ತು ಆ ವೀಣಾಗಾನ. ವ॥ ಹಾಗೆ ನುಡಿಯಿಸು ತ್ತಿದ್ದ ವೀಣಾಪಾಣಿಯನ್ನು ನೋಡಿ— ೬. “ಗುಂಪಿನಿಂದ ದೂರವಾಗಿ ಒಬ್ಬನೇ ಬಂದು ರಹಸ್ಯವಾಗಿ ಏಕಾಂತ ಸ್ಥಳದಲ್ಲಿ ಏಕೆ ಕುಳಿತಿದ್ದೀಯೆ? ನಿನ್ನ ಹೆಸರೇನು? ಒಂದೇ ಸಮನಾಗಿ ಪ್ರಿಯತಮೆಯನ್ನು ಅಪ್ಪುವಂತೆ ವೀಣೆಯನ್ನೇಕೆ ಅಪ್ಪಿದ್ದೀಯೆ?” ವ॥ ಎಂದು ನಾನು ಪ್ರಶ್ನಿಸಲು ಆತನು ಹೇಳಿದನು— ೭. “ನನ್ನ ಮನಸ್ಸಿಗೆ ಹಿಡಿಯ ದವರು ಎಷ್ಟು ಜನವಿದ್ದರೇನು? ಅದು ಹಾಗಿರಲಿ. ನೀನು ನನ್ನ ಹೆಸರನ್ನು

ವ॥ ಎಂದಾಂ ಬೆಸಗೊಳಲಾತನಿಂತೆಂದಂ

ಕಂ॥ ತನ್ನೆಯ ಮನಕ್ಕೆ ಬಾರದ
ರೆನ್ನರ್ ನೆರೆದಿರ್ದೊಡೇನದಂತಿರ್ಕೆ ನಿಜ
ಕ್ಕೆನ್ನ ಪೆಸರಂ ವಿಚಾರಿಸೆ
ಸನ್ನುತಮತಿ ಕೋಶದಾಸನೆಂಬುದು ಕೆಳೆಯಾ ೭

ವ॥ ಎಂದು ತನ್ನ ಪೆಸರಂ ಪೇೞ್ದೆನ್ನಂ ಮಿತ್ರನಂತಪ್ಪಂತು ಭಾವಿಸಿ ಕೋಶದಾಸಂ ವೀಣೆಯನಪ್ಪಿದ ಕಾರಣಮಂ ಪೇೞಲೆಂದಿಂತೆಂದಂ

ಪೆಸರ್ವೆತ್ತೀ ಶುಭಸಿಂಹಪತ್ತನದಧೀಶಂ ತುಂಗಧನ್ವಂ ತದೀ
ಯಸತಿ ಪ್ರಸ್ತುತಿವೆತ್ತ ಮೇದಿನಿಯವರ್ ಬಂದಿಲ್ಲಿಗೀದುರ್ಗೆಯಂ
ಪಸೆದಿರ್ದರ್ಚಿಸಿ ರತ್ನಸಂತತಿಗಳಿಂ ಮತ್ತಂತವರ್ ಬೇಡಿದರ್
ವಸುಧಾವಂದಿತಪುತ್ರನಪ್ಪ ವರಮಂ ಚಂಚತ್ತಪೋನಿಷ್ಠೆಯಿಂ ೮

ವ॥ ಅಂತವರ್ ತಪೋನಿರ್ಬಂಧದಿಂದಿರಲೊಡಂ ವಿಂಧ್ಯವಾಸಿನಿ ಪ್ರಸನ್ನೆಯಾಗಿ

ಮನಸಿಜ ಮತ್ತ ಹಸ್ತಿನಿಯೆನಿಪ್ಪ ಕುಮಾರಿಯನೊರ್ಬಳಂ ಜಗ
ಜ್ಜನಹಿತಕಾರಿಯಪ್ಪ ಸುತನೊರ್ಬನನಂತವರ್ಗೊಲ್ದು ವಿಂಧ್ಯವಾ
ಸನಿ ಪದೆದಿತ್ತೆನೆಂದು ವರಮಂ ದಯೆಗೆಯ್ಯಲೊಡಂ ನೃಪಾಲನುಂ
ವನಿತೆಯುಮಿರ್ಬರುಂ ಸುಖಸುಧಾಂಬುಧಿಯೊಳ್ ಮುೞುಗಿರ್ದರಳ್ತಿಯಿಂ ೯

ವ॥ ಅಂತು ಸಂಕಲ್ಪಸಿದ್ಧರಾದ ದಂಪತಿಗಳ್ಗೆ ವಿಂಧ್ಯವಾಸಿನಿ ಮಗುೞ್ದಿಂತೆಂದಳ್

ವಿಚಾರಿಸಿದೆ. ಗೆಳೆಯ ನನ್ನ ಹೆಸರು ಕೋಶದಾಸ" ವ॥ ಹೀಗೆ ತನ್ನ ಹೆಸರನ್ನು ಹೇಳಿ ನನ್ನನ್ನು ಮಿತ್ರನೆಂದು ತಿಳಿದನು ಮತ್ತು ತಾನು ವೀಣೆಯನ್ನಪ್ಪಿದುದಕ್ಕೆ ಕಾರಣವನ್ನು ಹೇಳಿದನು. ೮. "ಹೆಸರುವಾಸಿಯಾದ ಈ ಸಿಂಹನಗರದ ರಾಜ ತುಂಗಧನ್ವ. ಅವನ ಹೆಂಡತಿ ಮೇದಿನಿ. ಇಬ್ಬರೂ ಇಲ್ಲಿಗೆ ಬಂದು ದುರ್ಗಿಯನ್ನು ಅನೇಕ ರತ್ನಗಳಿಂದ ಪೂಜಿಸಿದರು. ಮತ್ತೆ ಅವರು ತಪಸ್ಸನ್ನಾಚರಿಸಿ ಲೋಕ ಪ್ರಸಿದ್ಧನಾದ ಮಗನಾಗಬೇಕೆಂದು ವರವನ್ನು ಕೇಳಿದರು. ವ॥ ಅವರು ಕಠಿಣವಾದ ತಪಸ್ಸನ್ನಾಚರಿಸಿದರು. ಆಗ ವಿಂಧ್ಯವಾಸಿನಿಯು ಪ್ರಸನ್ನಳಾಗಿ— ೯. ಮದನನ ಮದ್ದಾನೆಯೆಂದು ಹೇಳುವ ಕುಮಾರಿಯೊಬ್ಬಳನ್ನೂ ಜಗತ್ತಿನ ಜನಕ್ಕೆ ಹಿತಕಾರಿಯಾದ ಮಗನೊಬ್ಬನನ್ನೂ ವರವಾಗಿ ದಯಪಾಲಿಸಿದಳು. ಅರಸನೂ ಅರಸಿಯೂ ಹರ್ಷದಿಂದ ಸುಖಸಾಗರದಲ್ಲಿ ಮುಳುಗಿದರು. ವ॥ ಹಾಗೆ ಸಂಕಲ್ಪವು ಸಿದ್ಧಿಸಿದ ಆ ರಾಜದಂಪತಿಗಳಿಗೆ ವಿಂಧ್ಯವಾಸಿನೀ

ನಿಮಗಾನಿತ್ತ ತನೂಜೆ ಬಂದೆನಗೆ ತತ್ಪೂರ್ವಾಹ್ಣದೊಳ್ ಕೂರ್ತು ಸಂ
ಭ್ರಮದಿಂ ಕಂತುಕ ಕೇಳಿಯಂ ಸಲಿಸುತಿರ್ಕಾಕಾಂತೆಯೊಳ್ ಕೂರ್ತವಂ
ರಮಣಂ ತಾನೆನಿಸಿರ್ಕೆ ತದ್ರಮಣನಂ ನಿಮ್ಮಾತ್ಮಜಂ ಸೇವೆಗೆ
ಯ್ಗೆ ಮಗಳ್ಗೊಪ್ಪುವ ಕಂತುಕಾವತಿಯೆನಿಪ್ಪಾನಾಮಮುಮಕ್ಕಾಪಗಂ ೧೦

ವ॥ ಎಂದು ಮತ್ತಮಿಂತೆಂದಳ್

ನಿನ್ನ ಮಗಳುತ್ಸವಂ ಮಿಗ
ಲೆನ್ನಿದಿರೊಳ್ ಮಾಳ್ಪ ಕಂತುಕಕ್ರೀಡಾ ಸಂ
ಪನ್ನದ ದೆಸೆಯಿಂ ತತ್ಪ
ರ್ವನ್ನೋಡೆ ಸುಕಂತುಕಾಖ್ಯಮುಂ ತಳೆದಿರ್ಕುಂ ೧೧

ವ॥ ಎಂದು ಭವಿಷ್ಯದ್ವರ್ತಮಾನಮಂ ಪೇಳಲಾತುಂಗಧನ್ವಂ ಮಹಾಪ್ರಸಾದಮೆಂದು ವಿಂಧ್ಯವಾಸಿನಿಯಂ ಬೀಳ್ಕೊಂಡು ಮೇದಿನೀಸಹಿತಂ ನಿಜನಿವಾಸಕ್ಕೆ ಬಂದಿರಲ್ ಕೆಲವು ದಿನಕ್ಕೆ

ಧರೆ ಪೊಗಳೆ ತುಂಗಧನ್ವಂ
ಗರವಿಂದಾಮೋದೆ ಮೇದಿನೀದೇವಿಗೆ ಸು
ಸ್ಥಿರದಿಂದೆ ಜನಿಸಿದರ್ ಭಾ
ಸ್ಕರದೀಧಿತಿಸನ್ನಿಭರ್ ಕುಮಾರಿಕುಮಾರರ್ ೧೨

ವ॥ ಅಂತು ಜನಿಸಲೊಡಂ,

ದೇವಿಯು ಮತ್ತೆ ಹೀಗೆ ಹೇಳಿದಳು— ೧೦. "ನಿಮಗೆ ನಾನು ಕೊಟ್ಟ ಮಗಳು ಇಲ್ಲಿಗೆ ಪ್ರೀತಿಯಿಂದ ಬಂದು ಪೂರ್ವಾಹ್ಣದಲ್ಲಿ ನನಗೆ ಸಂಭ್ರಮದಿಂದ ಚೆಂಡಾಟದ ಸೇವೆಯನ್ನು ಸಲ್ಲಿಸಲಿ. ಆ ಕಾಂತೆಯಲ್ಲಿ ಪ್ರೇಮ ತೋರಿಸಿದವನು ಅವಳಿಗೆ ಪತಿಯಾಗಲಿ. ನಿಮ್ಮ ಮಗನು ಅವನ ಸೇವೆ ಮಾಡಲಿ. ನಿಮ್ಮ ಮಗಳಿಗೆ ಕಂತುಕಾವತಿಯೆಂಬ ಹೆಸರು ಬರಲಿ". ವ॥ ಎಂದು ಹೇಳಿ ಮತ್ತೆ ಹೇಳಿದಳು.—೧೧. "ನಿನ್ನ ಮಗಳು ಸಂಭ್ರಮಾದರಗಳಿಂದ ನನ್ನ ಎದುರಿನಲ್ಲಿ ಕಂತುಕ ಕ್ರೀಡೆಯನ್ನು ನಡೆಯಿಸುವುದರಿಂದ ಆ ಹಬ್ಬಕ್ಕೆ ಕಂತುಕೋತ್ಸವವೆಂಬ ಹೆಸರು ಬರಲಿ" ವ॥ ಹೀಗೆ ದೇವಿಯು ಮುಂದೆ ಆಗುವ ವಿಷಯವನ್ನು ಹೇಳಿದಳು. ಆ ತುಂಗಧನ್ವನೂ ಮಹಾಪ್ರಸಾದವೆಂದು ಹೇಳಿ ದೇವಿಯಿಂದ ಬೀಳ್ಕೊಂಡು ಮೇದಿನಿಯೊಡನೆ ತನ್ನರಮನೆಗೆ ಬಂದನು. ಕೆಲವು ದಿನಗಳಾದ ಮೇಲೆ, ೧೨. ತುಂಗಧನ್ವ ಮಹಾರಾಜನಿಗೂ ಕಮಲಗಂಧಿ ಮೇದಿನೀ ದೇವಿಗೂ ಸೂರ್ಯನಿಗೆ ಸಮನಾದ ಕುಮಾರನೂ, ಸೂರ್ಯಕಾಂತಿಗೆ ಸಮಳಾದ ಕುಮಾರಿಯೂ ಜನಿಸಿದರು. ಜಗತ್ತೇ ಅವರನ್ನು ಹೊಗಳಿತು. ವ॥ ಹಾಗೆ ಕುಮಾರ ಕುಮಾರಿಯರು ಹುಟ್ಟಲು—

ತನಯಂಗೆ ಭೀಮಧನ್ವಂ
ತನೂಜೆಗತಿಮುದದೆ ಕಂತುಕಾವತಿಯೆಂದೊ
ಳ್ಪಿನ ಪೆಸರ್ಗಳನೊಸೆದಿಟ್ಟಂ
ಜನನಾಥಂ ತುಂಗಧನ್ವನುತ್ಸವದಿಂದಂ ೧೩

ವ॥ ಅಂತವರ್ಗೆ ಪೆಸರಿಡಲ್ ವರ್ಷಕ್ರಮದಿಂದವರ್ ಪರಿವರ್ಧಿಸೆ

ಪೆಸರ್ವೆತ್ತ ಕಂತುಕಾವತಿ
ಗೆ ಸಖಿತ್ವಮನಾಂತು ಜೀವದಂತಿರ್ಪಳ್ ಭಾ
ವಿಸೆ ಚಂದ್ರಸೇನೆಯೆಂಬಳ್
ಕುಸುಮಾಯುಧನರಲ ಸರಲನೀಟ್ಕುಳಿಗೊಳ್ವಳ್ ೧೪

ಪದನಖಕಾಂತಿ ತಾರಗೆಗಳಂ ಗೆಲೆ ನಿರ್ಮಳದಂತದೀಪ್ತಿ ಕೌ
ಮುದಿಗೊಟಿಗಟ್ಟೆ ಲೋಚನಯುಗಾಂಚಲರಶ್ಮಿ ಚಕೋರಿಗಳ್ಗೆ ಸಂ
ಪದಮನಮರ್ಚೆ ಮೆಲ್ನುಡಿ ಕರಂ ಸುಧೆಗಿಂಪನೊಡರ್ಚೆ ಕಾಮುಕ
ರ್ಗಿಡವಟಿಲಂ ಮುಖೇಂದು ಕುಡೆ ಬಣ್ಣಿಸದಿರ್ಪರೆ ಚಂದ್ರಸೇನೆಯಂ ೧೫

ಆ ಚಂದ್ರಸೇನೆಗೆನಗೆ ಮ
ಹಾಚೇತಃಪ್ರೀತಿ ಪೆರ್ಚಲಂಗಜನಿರ್ಬ
ರ್ಗಾಚಾರ್ಯನಾಗಿ ಮಂಗಳ
ವಾಚಕದಿಂದೊಂದುಗೂಡಿದಂ ಮುದಮೊಸೆಯಲ್ ೧೬

೧೩. ಮಹಾರಾಜ ತುಂಗಧನ್ವನು ಮಗನಿಗೆ ಭೀಮಧನ್ವನೆಂದು ಹೆಸರಿಟ್ಟನು. ಮಗಳಿಗೆ ಕಂತುಕಾವತಿಯೆಂದು ಹೆಸರಿಟ್ಟನು. ದೊಡ್ಡ ಉತ್ಸವವನ್ನು ನಡೆಯಿಸಿದನು. ವ॥ ಹೀಗೆ ಹೆಸರಿಡಲು ಅವರು ವರ್ಷ ವರ್ಷಕ್ಕೂ ಕ್ರಮವಾಗಿ ಬೆಳೆದರು. ೧೪. ಹೆಸರುವಾಸಿಯಾದ ಕಂತುಕಾವತಿಯ ಗೆಳತಿ ಚಂದ್ರಸೇನೆಯೆಂಬವಳು ಅವಳ ಜೀವದಂತಿದ್ದಾಳೆ. ಅವಳು ಮನ್ಮಥನ ಹೂ ಬಾಣವನ್ನೂ ಮೀರಿಸಿದ್ದಾಳೆ– ೧೫. ಚಂದ್ರಸೇನೆಯ ಪಾದಗಳ ಉಗುರುಗಳ ಕಾಂತಿಯು ನಕ್ಷತ್ರಗಳನ್ನು ಮೀರಿಸುತ್ತದೆ. ನಿರ್ಮಲವಾದ ದಂತಕಾಂತಿಯು ಬೆಳದಿಂಗಳಿಗೆ ಸಮನಾಗಿದೆ. ಕಡೆಗಣ್ಣ ಳೆರಡರ ಕಾಂತಿಯು ಚಕೋರಿಗಳಿಗೆ ಆನಂದ ಸಂಪದವನ್ನುಂಟುಮಾಡುತ್ತದೆ. ಮೃದುವಾದ ಮಾತುಗಳು ಅಮೃತದ ಮಾಧುರ್ಯವನ್ನುಂಟುಮಾಡುತ್ತವೆ. ಅವಳ ಮುಖಚಂದ್ರನು ಕಾಮುಕರಿಗೆ ಸಂತಾಪವನ್ನುಂಟುಮಾಡುತ್ತದೆ. ಚಂದ್ರಸೇನೆಯನ್ನು ವರ್ಣಿಸದೇ ಯಾರು ಇದ್ದಾರು ? ೧೬. ಆ ಚಂದ್ರಸೇನೆಗೂ ನನಗೂ ಅತಿಶಯವಾದ ಮನಃ ಪ್ರೀತಿಯು ಬೆಳೆಯಿತು. ಮನ್ಮಥನು ಇಬ್ಬರಿಗೂ ಆಚಾರ್ಯನಾಗಿ ಮಂಗಳ ಮಂತ್ರ ಹೇಳಿ ಒಂದುಗೂಡಿಸಿದನು.

ವ॥ ಅಂತಾ ಚಂದ್ರಸೇನೆಗಮೆನಗಮನ್ಯೋನ್ಯ ಸ್ನೇಹಂ ಸಂದಿರೆ

ಈಗಳ್ ಕಾಮುಕಭೀಮಧನ್ವನವಳಂ ತನ್ನೊಲ್ಮೆಯಿಂ ನಿತ್ಯಸಂ
ಭೋಗಸ್ತ್ರೀಯನೆ ಮಾಡಿಕೊಂಡಿರಲವಂ ಮತ್ಸ್ವಾಮಿಪುತ್ರಂ ಕನ
ಲ್ದೀಗೆಯ್ವಂ ಕೊಲಲಾಗದೆಂದು ಮನದೊಳ್ ಕಟ್ಟೀವಮಯ್ಪಲ್ಕೆ ವೀ
ಣಾಗಾಂಧರ್ವದ ಸೌಖ್ಯದಿಂ ಮಱೆವೆನೆಂದಿರ್ದಪ್ಪೆನೀ ತಾಣದೊಳ್ ೧೭

ಮುದದೆಡೆಗೆ ದುಃಖದೆಡೆಗಂ
ಸುದತಿಯರ ವಿಯೋಗದೆಡೆಗೆ ಕೂಡಿರ್ದೆಡೆಗಂ
ಕದಡಿರ್ದ ಚಿತ್ತದೆಡೆಗಂ
ಪದೆಪಿಂದಂ ಬಂಧುವಲ್ತೆ ಸಂಗೀತರಸಂ ೧೮

ವ॥ ಎಂದು ಕೋಶದಾಸಂ ತನ್ನ ವೃತ್ತಾಂತಮಂ ಪೇೞ್ದ ಸಮಯದೊಳ್

ನೂಪುರದಿಂಚರಂ ನವಕಳಾಪಮನೂನ . . .
. . . ರತ್ನವಳಯಧ್ವನಿ ಚಿತ್ತಜಚಾಪಟಂಕೃತಂ
ವ್ಯಾಪಿಸಿದತ್ತು ನಾಲ್ದೆಸೆಯನೆಂಬನವೊಂದೆಸೆಯಲ್ಕದೊರ್ವ ಶೋ
ಭಾಪರಿಪೂರ್ಣೆ ಬಂದಳತಿ ಸಂಭ್ರಮದಿಂ ಪದೆದಲ್ಲಿಗಾಕ್ಷಣಂ ೧೯

ಆನಂದವಾಯಿತು. ವ॥ ಹೀಗೆ ಚಂದ್ರಸೇನೆಗೂ ನನಗೂ ಪರಸ್ಪರ ಸ್ನೇಹವು ಬಲಿಯಿತು. ೧೭. ಈಗ ಕಾಮುಕನಾದ ಭೀಮಧನ್ವನು ಅವಳನ್ನು ತನ್ನ ನಿತ್ಯ ಸಂಭೋಗದ ನಾರಿಯನ್ನಾಗಿ ಮಾಡಿಕೊಂಡಿದ್ದಾನೆ. ಅವನು ನನ್ನ ಸ್ವಾಮಿಯ ಮಗ. ಕೋಪಿಸಿ ಕೊಂಡು ಏನು ಮಾಡಲಿ ? ಅವನನ್ನು ಕೊಲ್ಲುವಂತಿಲ್ಲ. ಮನಸ್ಸಿನಲ್ಲಿ ಮಾತ್ಸರ್ಯ ತುಂಬಿದೆ. ಆದರಿಂದಾಗಿ ನಾನು ಇಲ್ಲಿ ಕುಳಿತು ವೀಣಾಗಾನ ಮಾಧುರ್ಯದಿಂದ ಮನಸ್ಸನ್ನು ಸಮಾಧಾನ ಮಾಡಿಕೊಳ್ಳುತ್ತಿದ್ದೇನೆ. ೧೮. ಸಂತೋಷದಲ್ಲಿಯೂ, ದುಃಖದಲ್ಲಿಯೂ, ಅಂಗನೆಯರ ವಿರಹದಲ್ಲಿಯೂ, ಅಂಗನೆಯರೊಡನೆ ಕೂಡಿದ್ದಾಗಲೂ ಮನಸ್ಸು ಕ್ಷೋಭೆಗೊಂಡಾಗಲೂ ಸಂಗೀತ ರಸವು ಬಂಧುವಾಗಿ ಶಾಂತಿಯನ್ನು ನೀಡುತ್ತದೆ". ವ॥ ಎಂದು ಕೋಶದಾಸನು ತನ್ನ ವಿಚಾರವನ್ನು ಹೇಳಿದನು. ಆಗ ೧೯. ಅಲ್ಲಿಗೆ ಒಬ್ಬಳು ಸುಂದರಿಯು ಸಂಭ್ರಮದಿಂದ ಬಂದಳು. ಆಗ ಅವಳ ಕಾಲಂದಿಗೆಗಳ ಇಂಪಿದನಿಯೂ, ನೂತನವಾದ ಕಾಂಚಿಯ ಗೆಜ್ಜೆಗಳ ದನಿಯೂ . . . . . . . . . ರತ್ನದ ಬಳೆಗಳ ದನಿಯೂ. ಮನ್ಮಥನ ಬಿಲ್ಲಿನ ಟಂಕೃತಿಯಂತೆ ನಾಲ್ಕು ದಿಕ್ಕುಗಳಿಗೂ

ವ॥ ಅಂತವಳ್ ಬರಲೊಡಂ

ಶಂಕಿಸದೆ ಕೋಶದಾಸಂ
ಭೋಂಕೆನಲೆಟ್ದವಳನಪ್ಪಿಯಂಕದೊಳ್ ಪೆಂ
ಪಿಂ ಕುಳ್ಳಿರಿಸಿ ಬಟಿಕ್ಕಾ
ತಂ ಕಡುಪಿಂದಂ ಪೇಟ್ದನೆನಗೆ ತತ್ಕೌತುಕಮಂ ೨೦

ವ॥ ಅದೆಂತೆನೆ

ನಿನ್ನೊಳ್ ಮುದದಿಂದಾಂ ಪೇ
ಟ್ದಿನ್ನ ಪ್ರಾಣಾಧಿನಾಥೆಯಿಕೆ ಕಳಾಸಂ
ಪನ್ನಗುಣೆ ಚಂದ್ರಸೇನೆ ಮ
ಹೋನ್ನತ ಸೌಭಾಗ್ಯವಂತೆ ಭಾವಿಸು ಕೆಳೆಯಾ ೨೧

ವ॥ ಎಂದಾ ಚಂದ್ರಸೇನೆಯನೆನಗೆ ತೋಱಿ ಮಗುಟ್ದಾಕೆಯೊಳಾತನಿಂತೆಂದಂ (ಇಲ್ಲಿ ಗ್ರಂಥವು ಉಪ್ತವಾಗಿದೆ. ರಂ)

ಪೀನನಿತಂಬೆಯರ್ ಗುರುಪಯೋಧರೆಯರ್ ನಳಿತೋಳ ಬಾಲೆಯರ್
ಮೀನನಿಭಾಕ್ಷಿಯರ್ ಕುಟಿಲಕುಂತಳೆಯರ್ ನವಕಂಬುಕಂಠೆಯರ್
ಮಾನಿನಿಯರ್ ಕೆಲರ್ ಮದನಲಕ್ಷ್ಮಿಯರಂತಿರೆ ವಿಂಧ್ಯವಾಸಿನೀ
ಸ್ಥಾನಮನೆಯ್ದಿದರ್ ಪದೆದು ನೋಟ್ಪರ ಕಣ್ಗಳ ಪರ್ವಮೆಂಬಿನಂ ೨೨

ಹರಡುತ್ತಿತ್ತು. ವ॥ ಹಾಗೆ ಅವಳು ಬಂದಾಗ— ೨೦. ಕೋಸದಾಸನು ಸ್ವಲ್ಪವೂ ಸಂಕೋಚವಿಲ್ಲದೆ ಥಟ್ಟನೆ ಎದ್ದು ಅವಳನ್ನಪ್ಪಿಕೊಂಡನು. ಪ್ರೀತಿಯಿಂದ ಅವಳನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು, ಬಳಿಕ ಆವೇಗದಿಂದ ಆ ಆಶ್ಚರ್ಯವನ್ನು ನನಗೆ ಹೇಳಿದನು. ವ॥ ಅದು ಹೇಗೆಂದರೆ—೨೧. "ನಿನಗೆ ನಾನು ಸಂತೋಷದಿಂದ ಹೇಳಿದ ನನ್ನ ಪ್ರಾಣನಾಯಿಕೆಯು ಇವಳೇ. ಇವಳು ಕಳಾಸಂಪನ್ನೆ. ಗುಣವತಿ. ಮಹೋನ್ನತವಾದ ಸೌಭಾಗ್ಯವುಳ್ಳ ಚಂದ್ರಸೇನೆ. ಗೆಳೆಯನೇ ಇದನ್ನು ನೀನು ತಿಳಿದುಕೋ" ವ॥ ಎಂದು ಹೇಳಿ ಚಂದ್ರಸೇನೆಯನ್ನು ನನಗೆ ತೋರಿಸಿದನು. ಮತ್ತೆ ಆತನು ಅವಳಿಗೆ ಹೇಳಿದನು. (ಇಲ್ಲಿ ಕೋಶದಾಸನು ಹೇಳಿದ ಗ್ರಂಥಭಾಗ ಲುಪ್ತವಾಗಿದೆ. ರಂ) ೨೨. ಕೆಲವು ರಮಣಿಯರು ವಿಂಧ್ಯಾವಾಸಿನೀದೇವಿಯ ಸ್ಥಾನಕ್ಕೆ ನೋಡುವವರ ಕಂಗಳಿಗೆ ಹಬ್ಬವನ್ನುಂಟುಮಾಡುತ್ತಾ ಬಂದರು. ಅದರ ನಿತಂಬಗಳು ದಪ್ಪ. ಸ್ತನಗಳು ದೊಡ್ಡವು. ಕಂಗಳು ಮೀನಿನಂತಿದ್ದುವು. ತಲೆಗೂದಲು ಸುರುಳಿ ಸುರುಳಿಯಾಗಿದ್ದುವು. ಕುತ್ತಿಗೆಯು ಶಂಖದಂತಿದ್ದುವು. ಅವರು ಮಾನವತಿಯರು. ಕೆಲವರು ರತಿ

ವ॥ ಅಂತು ನೆರೆದು ಬಂದ ತರುಣಿಯರ ನಡುವೆ

ನಗೆಗಣ್ ಮಿಂಚಿನ ಗೊಂಚಲಂ ಮಿಗುವಿನಂ ಕರ್ಪಿಂ ಲಸದ್ವೇಣಿ ಕಾ
ರ್ಮುಗಿಲಂಗೆಲ್ವಿನಮಿಂದ್ರ ಚಾಪರುಚಿಯಂ ಭೂಷಾಮಣಿಜ್ಯೋತ್ಸ್ನೆಗಳ್
ನಗುವಂತಿರ್ಪಿನಮಾತ್ತಯೌವನರಸಂ ತೇರ್ರೈಪಿನಂ ಧೂರ್ತರಂ
ಚೆಗಳಂತಂಜುವಿನಂ ಪಯೋಧರೆಯುದೊರ್ಬಳ್ ಕಣ್ಗೆವಂದಳ್ ನೃಪಾ ೨೩

ವ॥ ಅಂತಿರ್ದ ವಿಳಾಸಿನಿಯಂ ಕಂಡಿವಳಾರೆಂದಾಂಚಂದ್ರಸೇನೆಯಂ ಕೇಳಲವಳಿಂತೆಂದಳ್

ಇವಳಲ್ತೆ ಕಂತುಕಾವತಿ
ಭುವನೇಶ್ವರಿಯೆನಿಪ ವಿಂಧ್ಯವಾಸಿನಿಗೆ ಮಹೋ
ತ್ಸವದಿಂ ಕಂತುಕಕೇಳಿಯು
ನವಿರಳದಿಂದೆಸಗಲೆಂದು ಬಂದಳ್ ನಲವಿಂ ೨೪

ವ॥ ಎಂದು ಮತ್ತಂ

ನಿಮ್ಮಯ ಕಣ್ಗಳ ಪರ್ವಮ
ನೆಮ್ಮರಸಿಯ ಸೆಂಡಿನಾಟದೊಳ್ ಪಡೆದೊಡೆ ನೀ
ವುಮ್ಮಹದಿಂ ನೋಟ್ಕೆಯೆನು
ತ್ತೆಮ್ಮಿರ್ಬರನಾಕೆಯೆಡೆಗೆ ಸಖಿ ಕೊಂಡುಯ್ದಳ್ ೨೫

ಯುಂತಿದ್ದರು. ವ॥ ಹಾಗೆ ಗುಂಪಾಗಿ ಬಂದ ತರುಣಿಯರ ನಡುವೆ— ೨೩. ರಾಜನೇ! ಒಬ್ಬಳು ಯುವತಿಯು ಕಾಣಿಸಿದಳು. ಅವಳ ನಗೆಗಣ್ಣು ಮಿಂಚಿನ ಗೊಂಚಲನ್ನು ಮೀರಿಸಿತು. ಹೊಳೆಯುವ ಜಡೆಯು ತನ್ನ ಕಪ್ಪುಬಣ್ಣದಿಂದ ಮಳೆಗಾಲದ ಮೋಡವನ್ನು ಸೋಲಿಸಿತು. ಒಡವೆಗಳ ರತ್ನಗಳ ಕಾಂತಿಯೆಂಬ ಬೆಳುದಿಂಗಳು ಕಾಮನಬಿಲ್ಲಿನ ಕಾಂತಿಯನ್ನು ನೋಡಿ ನಗುವಂತಿತ್ತು. ಯೌವನರಸವು ಧೂರ್ತರಾದ ವಿಟರನ್ನು ಗುಂಪು ಕೂಡುವಂತೆ ಮಾಡುತ್ತಿತ್ತು. ಹಂಸಗಳು ಅಂಜಿದುವು. ವ॥ ಹಾಗಿದ್ದ ವಿಳಾಸಿನಿಯನ್ನು ನೋಡಿ 'ಇವಳಾರು' ಎಂದು ನಾನು (ಮಿತ್ರಗುಪ್ತ) ಚಂದ್ರಸೇನೆಯನ್ನು ಕೇಳಿದೆನು. ಅದಕ್ಕೆ ಅವಳು ಹೇಳಿದಳು.—೨೪. "ಇವಳೇ ಕಂತುಕಾವತಿ. ಭುವನೇಶ್ವರಿಯೆಂದು ಹೆಸರು ವಾಸಿಯಾದ ವಿಂಧ್ಯವಾಸಿನೀದೇವಿಗೆ ಕಂದುಕಕೇಳೀ ಸೇವೆಯನ್ನು ಮಾಡಲು ಸಂಭ್ರಮದಿಂದ ಬಂದಿದ್ದಾಳೆ. ವ॥ ಎಂದು ಹೇಳಿ ಮತ್ತೆ—೨೫. "ನಮ್ಮ ಅರಸಿಯ ಚೆಂಡಾಟದಿಂದ ನಿಮ್ಮ ಕಣ್ಣುಗಳಿಗೆ ಹಬ್ಬವನ್ನುಂಟುಮಾಡಿಕೊಳ್ಳುವ ಆಸೆಯಿದ್ದರೆ, ಬನ್ನಿರಿ, ನೀವು ಉತ್ಸಾಹದಿಂದ ನೋಡಿ" ಎಂದು ಹೇಳಿ ನಮ್ಮಿಬ್ಬರನ್ನೂ

ವ॥ ಅಂತೆವಿರ್ಬರುಂ ಚಂದ್ರಸೇನೆ ರಂಗಭೂಮಿಗೊಡಗೊಂಡು ಪೋಗಲ್ ಆಗಳ್ ಕಂತುಕಾವತಿ

ಅಳಕಂ ಜೋಲ್ದಿರೆ ಹಾರವೊರ್ಗುಡಿಸೆ ಚಂಚತ್ಕರ್ಣಪತ್ರಂ ಕರಂ
ಪೊಳೆಯಲ್ ವೇಣಿ ಕೆಲಕ್ಕೆ ಜಾಱೆ ವಿಳಸತ್ಸಂವ್ಯಾನಬಂಧಂ ಕುಚ
ಸ್ಥಳದಿಂದೊಯ್ಯನೆ ಪಿಂಗೆ ತೋಳ್ಗಳ ಮೊದಲ್ ಚೆಲ್ವಾಗಿರಲ್ ಕೋಮಳಾಂ
ಜಳಿಹಸ್ತಂಗಳಿನೊಲ್ದು ಕಾಂತೆ ಪೊಡೆಮಟ್ಟಳ್ ದೇವಿಗಾನಂದದಿಂ ೨೬

ವ॥ ಅಂತು ಕಂತುಕಾವತಿ ವಿಂಧ್ಯವಾಸಿನಿಗೆ ನಮಸ್ಕರಿಸಿಯನಂತರಂ

ಮಣಿಮಯಕಾಂಚಿಯುಂ ಬಿಗಿದು ಕಂಚುಕಮಂ ಕುಚಮಂಡಲಕ್ಕೆ ಕೇ
ವಣಿಸಿಯೆಚಲ್ವ ಮುಂಜೆಱಗನೊಯ್ಯನೆ ಸೆಕ್ಕಿ ನವೀನರತ್ನ ಕಂ
ಕಣಮುಸೆವಂಗದಂ ದನಿಗುಡಲ್ಕೆ ಭವಾನಿಯ ಮುಂದೆ ಯಾವಕಾ
ರುಣಕರದೊಳ್ ಕುಮಾರಿ ತಳೆದಳ್ ಪೊಸಸೆಂಡನನಂಗಪಿಂಡಮಂ ೨೭

ಮದನನ ಶೃಂಗಾರಮನೊ
ರ್ವೊದಲಂಗನೆ ಮುದ್ದೆಮಾಡಿ ತೋರ್ಪವೊಲೊಪ್ಪಿ
ರ್ದುದು ಚೆಲ್ವ ಸೆಂಡು ವಿಟರ
ಳ್ಕೆರ್ದೆಯೊಯ್ಕನೆ ಕಂತುಕಾವತಿಯ ಬಲಗೆಯ್ಯೊಳ್ ೨೮

ವ॥ ಅಂತಿರ್ದ ಸೆಂಡಂ ಕೊಂಡು

ಗೆಳತಿ ಚಂದ್ರಸೇನೆಯು ಆಕೆಯಿದ್ದ ಸ್ಥಳಕ್ಕೆ ಕರೆದುಕೊಂಡು ಹೋದಳು. ವ॥ ಹಾಗೆ ನಮ್ಮಿಬ್ಬರನ್ನೂ ಚಂದ್ರಸೇನೆಯು ರಂಗಭೂಮಿಗೆ ಕರೆದುಕೊಂಡು ಹೋದಳು. ಆಗ ಕಂತುಕಾವತಿಯು—೨೬. ಕೋಮಲವಾದ ಅಂಜಲಿಗಳನ್ನು ಜೋಡಿಸಿ ದೇವಿಗೆ ಆನಂದ ದಿಂದ ನಮಸ್ಕರಿಸಿದಳು. ಆಗ ಅವಳ ಮುಂಗುರುಳು ಮುಂದೆ ಜೋತವು. ಹಾರವು ಪಕ್ಕಕ್ಕೆ ವಾಲಿತು. ಓಲೆಗಳು ಚೆನ್ನಾಗಿ ಹೊಳೆದುವು. ಜಡೆಯು ಪಕ್ಕಕ್ಕೆ ಜಾರಿತು. ಸ್ತನಗಳ ಮೇಲೆ ಕಟ್ಟಿದ್ದ ಬಟ್ಟೆಯು ಕುಚಸ್ಥಳದಿಂದ ಹಿಂದೆ ಜರುಗಿತು. ಆಗ ಅವಳ ಕಂಕುಳು ಸುಂದರವಾಗಿ ಹೊಳೆಯಿತು. ವ॥ ಹಾಗೆ ಕಂತುಕಾವತಿಯು ವಿಂಧ್ಯವಾಸಿನಿಗೆ ನಮಸ್ಕರಿಸಿದಳು. ಅನಂತರ—೨೭. ರತ್ನಮಯವಾದ ಒಡ್ಯಾಣವನ್ನು ಬಿಗಿಪಡಿಸಿದಳು. ಕಂಚುಕವನ್ನು ಕುಚಮಂಡಲದಲ್ಲಿ ಸಿಕ್ಕಿಸಿದಳು. ನೇತಾಡುತ್ತಿದ್ದ ಮುಂಜೆರಗನ್ನು ಬಿಗಿ ಯಾಗಿ ಬಿಗಿದಳು. ಅನಂತರ ಭವಾನಿಯ ಮುಂದೆ ಅರಗಿನ ರಸದಿಂದ ಕೆಂಪಾದ ಕೈಯಲ್ಲಿ ಅನಂಗಪಿಂಡದಂತಿದ್ದ ಚೆಂಡನ್ನು ಹಿಡಿದಳು, ಆಗ ಅವಳ ರತ್ನದ ಕೈಬಳೆಗಳೂ ತೋಳಬಳೆಗಳೂ ಸದ್ದು ಮಾಡಿದುವು, ೨೮. ಅವಳ ಕೈಯಲ್ಲಿದ್ದ ಅಂದವಾದ ಚೆಂಡು ಮದನನ ಶೃಂಗಾರವನ್ನೆಲ್ಲ ಮೊಟ್ಟ ಮೊದಲೇ ಒಟ್ಟಿಗೆ ಸೇರಿಸಿ ಮುದ್ದೆಮಾಡಿ ತೋರಿ ಸುವಂತಿತ್ತು. ವಿಟರ ಅಳುಕುವ ಹೃದಯವೇ ಕಂತುಕಾವತಿಯ ಬಲಗೈಯ್ಯಲ್ಲಿದ್ದಂತೆ ಚೆಲುವಾದ ಚೆಂಡು ಕಾಣಿಸಿತು. ವ॥ ಹಾಗಿದ್ದ ಚೆಂಡನ್ನು ಹಿಡಿದುಕೊಂಡು—

ಮೊದಲೊಳ್ ಮೆಲ್ಲನೆ ಸೆಂಡನಿಟ್ಟು ನೆಗೆಯಲ್ ಮೆಲ್ಪಿಂದವಳ್ ಪೊಯ್ದು ಪೊ
ಣ್ಮಿದ ಸೆಂಡಂ ನಖದೀಪ್ತಿ ರಂಜಿಸುವಿನಂ ಮೇಗೆಯ್ಯೊಳಾಂತಳಾಗಳಂ
ತದನಾರ್ಪಿಂ ಮಗುೞ್ದುರ್ವಿಯೊಳ್ ಪೊಡೆದು ಗೋಮೂತ್ರೀಬೊಲೊರ್ಪೆ
ಯ್ಗ್ಗತಾ
ಳದ ಸೂಟಂ ತಿಳಿದಾಡಿದಳ್ ಸುದತಿ ಪೇೞಿಂ ಕಂತುಕಕ್ರೀಡೆಯಂ ೨೯

ಮಲ್ಲಿಕಾಮಾಲೆ

ವಾರಿಜಾನನೆ ಸೆಂಡನಿರ್ಕೆಲದೊಳ್ ನಿಮಿರ್ದು ಕರಾಗ್ರದಿಂ
ಜಾಱಿ ಮೆಟ್ಟುತೆ ಪೊಯ್ಯಲಂಗದರತ್ನ ಕಂಕಣನೂತ್ನಮಂ
ಜೀರಕಧ್ವನಿ ಪಂಚಬಾಣಶರಾಸನ ಧ್ವನಿಯಂತೆ ವಿ
ಸ್ತಾರದಿಂ ಪೊಱಪೊಣ್ಮಲಾಡಿದಳಂತು ಕಂತುಕಕೇಳಿಯಂ ೩೦

ಭ್ರಮರಿಗುಡುತ್ತೆ ಕಂತುಕಮನಂಗನೆ ಪೊಯ್ಯಲಲಾತಚಕ್ರದಂ
ತಮರ್ದಿರೆ ಸೆಂಡು ವೃತ್ತತೆಯೊಳಂಗನೆ ಮಧ್ಯದೊಳೊಪ್ಪುತಿರ್ದಳು
ತ್ತಮಪರಿವೇಷ ಮಧ್ಯದ ಶಶಾಂಕಕಳಾಕೃತಿಯಂತೆ ಚಿತ್ತ ವಿ
ಭ್ರಮಮನೊಡರ್ಚುತೆಲ್ಲರೊಳದೇವೊಗೞ್ವೆಂ ಕಮನೀಯ ಕೇಳಿಯಂ ೩೧

೨೯. ಮೊದಲು ಮೆಲ್ಲಗೆ ಚೆಂಡನ್ನು ನೆಲದ ಮೇಲೆ ಹೊಡೆದಳು. ಅದು ಮೇಲೆ ನೆಗೆಯಿತು. ಮತ್ತೆ ಮೃದುವಾಗಿ ಹೊಡೆದಳು. ಮತ್ತೆ ಮೇಲೆದ್ದ ಚೆಂಡನ್ನು ಉಗುರುಗಳ ಕಾಂತಿಯು ಹೊಳೆಯುತ್ತಿರಲು ಮೇಗಯ್ಯಿಂದ ಹಿಡಿದಳು. ಮತ್ತೆ ಅದನ್ನು ನೆಲದ ಮೇಲೆ ಒತ್ತಿ ಹೊಡೆದಳು, ಗೋಮೂತ್ರ ಚೆಲ್ಲಿದಂತೆ ತಾಳಕ್ಕೆ ಸರಿಯಾಗಿ ಚೆಂಡನ್ನಾಡಿದಳು. ೩೦. ಕಮಲಮುಖಿ ಕಂತುಕಾವತಿಯು ಎರಡು ಪಕ್ಕಕ್ಕೂ ಮೇಲಕ್ಕೆ ಹಾರುತ್ತ ಕೈ ತುದಿಯಿಂದ ಜಾರಿದ ಚೆಂಡನ್ನು ಕಾಲಿನಿಂದ ಹೊಡೆಯುತ್ತಿದ್ದಳು. ಆಗ ಅವಳ ತೋಳು ಬಳೆಗಳೂ ರತ್ನದ ಕೈಬಳೆಗಳೂ ಕಾಲಂದಿಗೆಗಳೂ ಮನ್ಮಥನ ಬಿಲ್ಲಿನ ಧ್ವನಿಯಂತೆ ಧ್ವನಿಮಾಡಿದುವು. ಹೀಗೆ ಅವಳು ಬಹುಕಾಲ ಚೆಂಡಾಟವನ್ನಾಡಿದಳು. ೩೧. ಕಂತುಕಾವತಿಯು ಸುತ್ತ ತಿರುಗುತ್ತಾ ಚೆಂಡನ್ನು ಹೊಡೆದಳು. ಆಗ ಚೆಂಡು ಕೊಳ್ಳಿಯ ಸುತ್ತಿನಂತೆ ಕಾಣಿಸಿತು. ಅವಳು ಆ ವೃತ್ತದ ನಡುವೆ ನಿಂತು ಪರಿವೇಷದ ನಡುವಿನ ಚಂದ್ರಕಲೆಯಂತೆ ಕಾಣಿಸಿ ನೋಡಿದವರಲ್ಲೆಲ್ಲ ಚಿತ್ತಭ್ರಾಂತಿಯನ್ನುಂಟು ಮಾಡಿದಳು. ಅವಳ ಕಮನೀಯವಾದ ಚೆಂಡಾಟವನ್ನು ಏನೆಂದು ಹೊಗಳಲಿ?

ವ॥ ಅಂತು ಭ್ರಮರಿಗುಡುವಾಗಳ್

ಸೊಗಸೆಸೆಯೆ ಕೋಶದಾಸನ
ಪೆಗಲೊಳ್ ಮುಂಗೆಯ್ಯನಿಟ್ಟಿಸಿ ನಿಂದಿರ್ದೆನ್ನಂ
ಮೃಗನೇತ್ರೆ ಕಂಡು ಚಿತ್ತಂ
ಬುಗುವಂತಿರೆ ಮಗುಳ್ದು ಮಗುಳ್ದು ನೋಡಿದಳಾಗಳ್ ೩೨

ವ॥ ಅಂತು ನೋಡಿ ಮತ್ತಂ

ಬಡನಡುವಿಂಗೆ ಲಂಘಿಸಿ ಕುಚಕ್ಕಡರ್ದಿಂದುಟಿಯಂ ತುಡುಂಕಿ ಮೇ
ಣುಡಿಗಿರದೆಯ್ದೆ ಮುಂದಲೆಗೆ ಪಾಯ್ದು ವಿಟಾಗ್ರಣಿಯಂತೆ ಕಂತುಕಂ
ತೊಡರ್ದಪುದೆಂದು ಕಾಂತೆ ಮೃದುಹಸ್ತದಿನೋವದೆ ಪೊಯ್ಯೆ ಮತ್ತೆ ಮೆ
ಲ್ಲಡಿಗಳನಂಟಿ ಪೆರ್ಚುವುದದಲ್ತೆ ಗುಣಾಧಿಕ ನೀತಿ ಧಾತ್ರಿಯೊಳ್ ೩೩

ವಿಲಸತ್ಕಂತುಕಮಂ ಪುಟಂನೆಗೆವವೋಲ್ ಮಾರ್ಪೊಯ್ದು ಸೆಂಡೆಯ್ತರಲ್
ನಲವಿಂದಂ ಪೊಜಕೆಯ್ಯೊಳಾಂತು ಮಗುಟ್ದಾರ್ಪಿಂ ಮಾಣದೋರಂತೆ ತಾ
ಳಲಯಂ ರಂಜಿಸೆ ಚಿತ್ರಬಂಧಗತಿಯೊಳ್ ಸೂಟ್ಕೆಟ್ಟನೊಳ್ ಪೊಯ್ದು ಕೋ
ಮಳೆ ಪುಪ್ಪಾಸ್ತ್ರವನೀಟ್ದ ಮೂಡಿಗೆಗಳಿಂ ಪುಪ್ಪಾಸ್ತ್ರಮಂ ಪೊಯ್ಯಳೇ ೩೪

ವ॥ ಹಾಗೆ ಸುತ್ತತಿರುಗುತ್ತಾ ಆಡುವಾಗ— ೩೨. ಸೊಗಸಾದ ರೀತಿಯಲ್ಲಿ ಕೋಶದಾಸನ ಹೆಗಲ ಮೇಲೆ ಕೈಹಾಕಿಕೊಂಡು ನಿಂತಿದ್ದ ನನ್ನನ್ನು ಆ ಹರಿಣಾಕ್ಷಿಯು ನೋಡಿದಳು. ನನ್ನ ಮನಸ್ಸಿನಲ್ಲಿ ಪ್ರವೇಶಿಸುವಂತೆ ಮತ್ತೆ ಮತ್ತೆ ನೋಡಿದಳು. ವ॥ ಹಾಗೆ ನೋಡಿ ಮತ್ತೆ—೩೩. ಚೆಂಡು ಜಾಣನಾದ ವಿಟಪುರುಷನಂತೆ ಬಡವಾದ ಸೊಂಟಕ್ಕೆ ಹಾರಿ ಕುಚದ ಮೇಲೇರಿ ಸಿಹಿಯಾದ ತುಟಿಯನ್ನು ಸ್ಪರ್ಶಿಸಿ ಮತ್ತೆ ಅಲ್ಲಿಗೇ ನಿಲ್ಲದೆ ಮುಂದಲೆಗೆ ಹಾಯುತ್ತದೆ—ಎಂದು ಕಾಂತೆಯು ತನ್ನ ಮೃದುವಾದ ಹಸ್ತದಿಂದ ಒಂದೇ ಸಮನಾಗಿ ಹೊಡೆದಳು. ಆದರೆ ಅದು ಮತ್ತೆ ಮೆಲ್ಲಡಿಗಳಿಗೆ ಬಿದ್ದು ಮತ್ತೆ ಮೇಲೆಕ್ಕೆರಗುತ್ತದೆ. ಭೂಮಿಯಲ್ಲಿ ಇದು ಗುಣಾಧಿಕರನೀತಿಯಷ್ಟೆ! ಹೆಚ್ಚು ಗುಣವುಳ್ಳವರು ಕೆಳಕ್ಕೆ ಬಗ್ಗಿ ಕಾಲಿಗೆಬಿದ್ದು ಶರಣಾಗತರಾಗಿ ವೃದ್ಧಿಯನ್ನು ಹೊಂದುತ್ತಾರಲ್ಲವೇ ? ಹಾಗೆಯೇ ಚೆಂಡು ಅವಳ ಕಾಲಿಗೆ ಬಿದ್ದು ಮತ್ತೆ ಮೇಲಕ್ಕೆ ಪುಟಿಯಿತು. ೩೪. ಸುಂದರವಾದ ಚೆಂಡು ಪುಟ ನೆಗೆದು ಎದುರಿಗೆ ಹೊಡೆದು ಹಿಂದಿರುಗಿತು. ಆಗ ಅದನ್ನವಳು ಹೊರ ಕೈಯಿಂದ ಒತ್ತಿ ತಾಳಲಯಕ್ಕೆ ಸರಿಯಾಗಿ ಚಿತ್ರ ಬಂಧಗತಿಯಲ್ಲಿ ಮತ್ತೆ ಮತ್ತೆ ಹೊಡೆದಳು. ಆಗ ಆ ಕೋಮಲೆಯು ಮನ್ಮಥನ ಬತ್ತಳಿಕೆಯಿಂದ ಹೂ

ನಡೆಸೆಂಡಂ ಪೊಡೆಸೆಂಡನಾರ್ಪಿನೊದೆಸೆಂಡಂ ಪಾರ್ವಸೆಂಡಂ ಕರಂ
ಪಡಿಸೆಂಡಂ ಸುೞಿಸೆಂಡನಿರ್ದೆಸೆಗಳೊಳ್ ಪೊಯ್ಸೆಂಡನೂರ್ಧ್ವಕ್ಕೆ ಪೊ
ಯ್ದಿಡುಸೇಡಂ ಪೊಱಕೆಯ್ಯೊಳಪ್ಪಳಿಪ ಸೆಂಡಂ ಚಿತ್ರಬಂಧಂಗಳೊಳ್
ತೊಡರ್ದೊಪ್ಪಂಬಡೆದಾಡಿದಳ್ ವಿಟಜನಂ ಕೊಂಡಾಡಿ ಬೆಂಡಪ್ಪಿನಂ ೩೫

ವ॥ ಅಂತು ಕಂತುಕಕ್ರೀಡೆಯುಂ ಮಾಡಿ ಕಾಮನಂ ಕಾಡಿ ವಿಂಧ್ಯವಾಸಿನಿಯಂ ಬೀೞ್ಕೊಂಡು ವಿಳಾಸಿನೀಜನಂಬೆರಸು ನಿಜನಿವಾಸಕ್ಕೆ ಪೋಗುತ್ತೆ

ಅಂತಾಕೆ ಮನೆಗೆ ಪೋಗು
ತ್ತುಂ ತಿರಿಗಿ ಮದೀಯವಕ್ತ್ರಮಂ ನೋಡಿದಳೋ
ರಂತೆಸೆವ ತನ್ನ ಜೀವಂ
ಪಿಂತಿರ್ದತ್ತೆಂಬ ತೆಱನನನುಕರಿಸುತ್ತುಂ ೩೬

ಏಣವಿಶಾಲನೇತ್ರೆ ಪದೆದೆನ್ನ ಮನೋಹರವಕ್ತ್ರಪದ್ಮಮಂ
ಕೋಣೆತದೃಷ್ಟಿಯಿಂದಡರ್ದು ನೋಡಲೊಡಂ ಕಡುಕೆಯ್ದು ಮನ್ಮಥಂ
ಬಾಣಸಮೂಹಮಂ ಮುಳಿಸಿನಿಂ ಪದೆದಾರ್ದುಮದೆನ್ನ ಮೇಲವಂ
ಮಾಣದೆ ಸೂಸಲಾಂ ಮನದ ಧೈರ್ಯದ ಬಲ್ಪಿನೊಳಿರ್ದೆನುರ್ವಿಪಾ ೩೭

ವ॥ ಅಂತೆನ್ನಂ ನೋಡುತ್ತವಳತ್ತಲ್ ಪೋದಳ್ ಇತ್ತಲಾನುಂ ಕೋಶದಾಸನುಂ ಪೂರ್ವಸ್ಥಾನಕ್ಕೆ ಬಂದಿರ್ಪುದುಮಲ್ಲಿಗೆ ಚಂದ್ರಸೇನೆ ಬಂದು

ಬಾಣಗಳನ್ನೆಳದು ಹೊಡೆಯುತ್ತಿರುವಂತೆ ಕಂಡಳು. ೩೫. ನಡೆದಾಡುತ್ತಾ ಚೆಂಡಾಡಿದಳು. ಕೈಯಿಂದ ಹೊಡೆದು ಕಾಲಿನಿಂದ ವೇಗವಾಗಿ ಒದ್ದು ಚೆಂಡಾಡಿದಳು. ಮೇಲಕ್ಕೆ ಎಸೆದು, ಹೊಡೆದು, ತಿರುಗಿಬರುವುದನ್ನು ಮತ್ತೆ ಹೊಡೆದು ಚೆಂಡಾಡಿದಳು. ಎರಡು ಕಡೆಗೂ ಸುಳಿಯುತ್ತಾ ಮೇಲಕ್ಕೆ ಎಸೆದು ಚೆಂಡಾಡಿದಳು, ನೆಲಕ್ಕೆ ಹೊಡೆದು ಹೊರಗೈಯಿಂದ ಅಪ್ಪಳಿಸಿ ಚೆಂಡಾಡಿದಳು. ಹೀಗೆ ಅನೇಕ ಚಿತ್ರಬಂಧಗಳಿಂದ ಚೆಂಡನ್ನು ವಿಲಾಸದಿಂದ ಆಡಿದಳು. ವಿಟಜನರು ಇವಳ ಆಟವನ್ನು ಹೊಗಳಿ ಹೊಗಳಿ ಬಳಲಿದರು. ವ॥ ಹೀಗೆ ಅವಳು ಚೆಂಡಾಟವನ್ನಾಡಿ ಕಾಮನನ್ನು ಕಾಡಿದಳು. ವಿಂಧ್ಯವಾಸಿನೀ ದೇವಿಯನ್ನು ಬೀಳ್ಕೊಂಡು ಪರಿಜನರೊಡನೆ ತನ್ನರ ಮನೆಗೆ ಹೊರಟಳು. ಹೋಗುವಾಗ— ೩೬. ಅವಳು 'ತನ್ನ ಜೀವವು ಹಿಂದೆ ಉಳಿದಿದೆ' ಎಂಬ ಅರ್ಥವನ್ನು ಅನುಕರಿಸುತ್ತಾ ನನ್ನ ಮುಖವನ್ನು ಹಿಂದಿರುಗಿ ನೋಡಿದಳು. ೩೭. ರಾಜನೇ ! ಕೇಳು. ಹುಲ್ಲೆಯಂತೆ ವಿಶಾಲವಾದ ಕಂಗಳುಳ್ಳ ಆ ಕಂತುಕಾವತಿಯು ನನ್ನ ಮನೋಹರವಾದ ಮುಖಕಮಲವನ್ನು ಆಸೆಯಿಂದ ಕಡೆಗಣ್ ನೋಟದಿಂದ ನೋಡಿದಳು. ಕೂಡಲೇ ಮನ್ಮಥನು ಒಂದೇ ಸಮನಾಗಿ ಎಡೆಬಿಡದೆ ಕೋಪದಿಂದ ನನ್ನ ಮೇಲೆ ಬಾಣಗಳನ್ನು ಬಿಟ್ಟನು, ಧೈರ್ಯದಿಂದ ಮನಸ್ಸನ್ನು ತಡೆದುಕೊಂಡಿದ್ದೆನು. ವ॥ ಹಾಗೆ ನನ್ನನ್ನು ನೋಡುತ್ತಾ ಅವಳತ್ತ ಹೋದಳು. ಇತ್ತ ನಾನೂ ಕೋಶದಾಸನು ಮೊದಲಿದ್ದ ಸ್ಥಾನಕ್ಕೆ ಬಂದನು.

ಪಾಪಾತ್ಮಭೀಮಧನ್ವಂ
ಕೋಪಿಸುವಂ ಪಿಂದೆ ತಡೆದಿರಲ್ಕೆನ್ನಂ ಕಾಂ
ತಾ ಪತಿಯೊಡನಾಂ ಬೇಗಂ
ಪೋಪೆಂ ಕೇಳ್ ಕೋಶದಾಸ ಬೆಸಸೇಗೆಯ್ವೆಂ ೩೮

ವ॥ ಎಂದು ಚಂದ್ರಸೇನೆ ಕೋಶದಾಸಂಗೆ ಪೇೞ್ದು ಪೋಪೆನೆಂಬಾಗಳಾನವಳ್ಗಿಂತೆಂದೆಂ

ಆನೋಂದೌಷಧಿಯೀಯಲ್
ವಾನರಿಯಾಗಿರ್ಪೆಯವನ ಕಣ್ಗಳ್ಗೆ ಚಂ
ದ್ರಾನನೆಯದಱಿಂ ಬಿಡುಗುಂ
ಮಾನಿನಿ ನಿನ್ನಾಸೆ ಭೀಮಧನ್ವಂಗಾಗಳ್ ೩೯

ವ॥ ಎಂಬುದುಮವಳಿಂತೆಂದಳ್

ಇನಿತೊಂದಾಯಾಸಮೇತರ್ಕೆನಗೆ ಕಪಿಮುಖಂ ತಾನದೇತರ್ಕೆ ಕಾಂತಾ
ಜನರತ್ನಂ ತುಂಗಧನ್ವಾತ್ಮಜೆ ನಿನಗೆನಸುಂ ಕಾಂತೆಯಾಗಲ್ಕೆ ನಿನ್ನಾ
ಳೆನಿಸಿರ್ಕುಂ ಭೀಮಧನ್ವಂ ಜನನಫಲವವಂಗಾಂ ಬೞಿಕ್ಕಾತನಿಂ ಭೋಂ
ಕೆನೆ ಪಿಂಗಿರ್ಪಂತುಟಕ್ಕುಂ ಸತಿಯೆನಿಸುವೆನೀ ಕೋಶದಾಸಂಗೆ ಸತ್ಯಂ ೪೦

ವ॥ ಎಂದವಳ್ ಪೇೞ್ ಕಂತುಕಾವತಿ ಕಾಂತೆಯಪ್ಪ ಕಾರಣಮಂತೆಂದಾಂ ಕೇಳ್ವುದುಮವಳಿಂತೆಂದಳ್

ಅಲ್ಲಿಗೆ ಚಂದ್ರಸೇನೆಯು ಬಂದು—೩೮. "ಪಾಪಿಷ್ಠನಾದ ಭೀಮಧನ್ವನು ತಡ ಮಾಡಿದರೆ ನನ್ನ ಮೇಲೆ ಕೋಪಿಸಿಕೊಳ್ಳುತ್ತಾನೆ. ಆದುದರಿಂದ ನಾನೀಗ, ಕಾಂತನೆ, ಪತಿಯೊಡನೆ ಸೇರಲು ಬೇಗ ಹೋಗುವೆನು. ಹೇಳು. ಕೋಶದಾಸ ಹೇಳು. ನಾನೇನು ಮಾಡಲಿ ?" ವ॥ ಎಂದು ಚಂದ್ರಸೇನೆಯು ಕೋಶದಾಸನಿಗೆ ಹೇಳಿ 'ಹೋಗುವೆನು' ಎಂದು ಹೇಳಿದಳು. ಆಗ ನಾನು ಅವಳಿಗೆ ಹೇಳಿದೆನು.—೩೯. "ಚಂದ್ರಮುಖಿ ! ನಾನು ನಿನಗೆ ಒಂದು ಔಷಧಿಯನ್ನು ಕೊಡುವೆನು, ಅದರಿಂದ ನೀನು ಅವನ ಕಂಗಳಿಗೆ ವಾನರಿಯಾಗಿ ಕಾಣಿಸುವೆ ! ಆಗ ಭೀಮಧನ್ವನಿಗೆ ನಿನ್ನ ಮೇಲಿನ ಆಸೆಯು ಬಿಟ್ಟು ಹೋಗುವುದು" ವ॥ ಎಂದು ಹೇಳಲು ಅವಳು ಹೇಳಿದಳು— ೪೦. "ನನಗೆ ಇಷ್ಟೊಂದು ಆಯಾಸ ವೇಕೆ ಆಗಬೇಕು ? ನನಗೆ ಕಪಿಯ ಮುಖ ತಾನೇ ಏಕಾಗಬೇಕು ? ಸ್ತ್ರೀರತ್ನವಾದ ತುಂಗಧನ್ವನ ಮಗಳು ನಿನಗೆ ಹೆಂಡತಿಯಾದರೆ ಭೀಮಧನ್ವನು ನಿನಗೆ ಆಳಾಗುತ್ತಾನೆ. ಅದು ಅವನ ಜನ್ಮಕಾಲದ ಫಲ. ಬಳಿಕ ನಾನು ಆತನಿಂದ ಬೇರೆಯಾಗಿ ಈ ಕೋಶ ದಾಸನಿಗೆ ಸತಿಯೆನಿಸುವೆನು." ವ॥ ಎಂದು ಚಿತ್ರಸೇನೆಯು ಹೇಳಿದಳು, "ಕಂತು ಕಾವತಿಯು ನನಗೆ ಹೆಂಡತಿಯಾಗುವ ದಾರಿ ಯಾವುದು ?" ಎಂದು ನಾನು ಅವಳನ್ನು

ಚೆಂಡಾಡುತ್ತುಮಾ ಕಂತುಕಾವತಿ ಕಳಾಸಂಪನ್ನೆ ನಿನ್ನಾಸ್ಯಮಂ
ಕಂಡುನ್ಮಾದಮನೆಯ್ದೆ ಮೆಯ್ಮಱೆದು ತನ್ನೊಳ್ತಾನೆ ಮತ್ತಮ್ಮನಂ
ಗಂಡಪ್ಪರ್ಕೆಲರೆಂದು ವಂಚಿಸಿಯನಂಗೋದ್ರೇಕದಿಂ ಪೋಗಲಾಂ
ಕಂಡೆಂ ಕಾಂತೆಯ ಭಾವಮಂ ನಿನಗವಳ್ ಸ್ತ್ರೀಯಪ್ಪಳೆಂಬಂದಮಂ ೪೧

ಭವಮೂರ್ತಿ ವಿಂಧ್ಯವಾಸಿನಿ
ಭವಿಷ್ಯದರ್ಥಮನಲಂಪಿನಿಂ ಪೇೞ್ದಳ್ ಕೇಳ್
ಯುವತಿಗೆ ವಲ್ಲಭನಾಗಿ
ರ್ಪವಂಗೆ ಮಿಗೆ ಭೀಮಧನ್ವನಾಳೆಂದೊಲವಿಂ ೪೨

ವ॥ ಅದಱಿಂ ನಿನಗೆ ಕಂತುಕಾವತಿ ಕಾಂತೆಯುಂ ಭೀಮಧನ್ವಂ ಭೃತ್ಯನುಮಪ್ಪುದು ತಪ್ಪದೆಂದು ಚಂದ್ರಸೇನೆ ಪೇೞ್ದು ಮತ್ತಂ

ಎನ್ನಯ ಮಾತೃ ತನ್ನೃಪತನೂಜೆಗೆ ಧಾತ್ರಿಕೆಯಪ್ಪಳಾನಿದಂ
ತನ್ನೊಡನಿಂದು ಪೇೞಲವಳೊಪ್ಪುವ ಮೇದಿನಿಗೊಲ್ದು ಪೇೞ್ಗೊಡ
ತ್ಯುನ್ನತ ತುಂಗಧನ್ವನೃಪನೊಳ್ ಸಲೆ ಮೇದಿನಿ ಪೇೞಲಾಕ್ಷಣಂ
ನಿನ್ನಯ ಕಾರ್ಯಮಪ್ಪುದಿದು ದೇವತೆಯಾಜ್ಞೆ ಕುಮಾರಶೇಖರಾ ೪೩

ಕೇಳಿದೆನು. ಅದಕ್ಕೆ ಅವಳು ಹೀಗೆ ಉತ್ತರಗೊಟ್ಟಳು.—೪೧. "ಕಂತುಕಾವತಿಯು ಕಳಾಸಂಪನ್ನೆ. ಅವಳು ಚೆಂಡಾಡುತ್ತಾ ನಿನ್ನ ಮುಖವನ್ನು ನೋಡಿ ಉನ್ಮಾದವನ್ನು ಪಡೆದು ತನ್ನಲ್ಲಿ ತಾನೇ ಮೆಯ್ಮರೆತಳು. ಮತ್ತೆ ಯಾರಾದರೂ ನೋಡಿಯಾರೆಂದು ಅಮ್ಮನನ್ನು ಪ್ರಕಾರಾಂತರದಿಂದ ವಂಚಿಸಿ ಕಾಮೋದ್ರೇಕದಿಂದ ಹೋದಳು. ನಾನು ಆ ಕಾಂತೆಯ ಅಭಿಪ್ರಾಯವನ್ನು ಕಂಡಿದ್ದೇನೆ. ನಿನಗೆ ಅವಳು ಹೆಂಡತಿಯಾಗುವಳು ! ಸಂಶಯವಿಲ್ಲ. ೪೨. ಶಿವರೂಪಿಣಿಯಾದ ವಿಂಧ್ಯವಾಸಿನಿಯು ಕಂತುಕಾವತಿಯ ಪತಿಗೆ ಭೀಮಧನ್ವನು ಆಳಾಗಿರಬೇಕೆಂದು ಭವಿಷ್ಯವನ್ನು ಸಂತೋಷದಿಂದ ಹೇಳಿದ್ದಾಳೆ. ವ॥ ಆದುದರಿಂದ ಕಂತುಕಾವತಿಯು ತಪ್ಪದೆ ನಿನಗೆ ಕಾಂತೆಯಾಗುವಳು. ಹಾಗೆಯೇ ಭೀಮಧನ್ವನೂ ನಿನಗೆ ತಪ್ಪದೆ ಸೇವಕನಾಗುವನು" ಎಂದು ಚಂದ್ರಸೇನೆಯು ಹೇಳಿದಳು. ಮತ್ತೆ—೪೩. "ಕುಮಾರ ಶ್ರೇಷ್ಠನೇ ! ನನ್ನ ತಾಯಿಯು ಆ ರಾಜಕುಮಾರಿ ಕಂತುಕಾವತಿಯ ದಾದಿ. ನಾನು ಈ ವಿಚಾರವನ್ನು ಇಂದು ಅವಳಿಗೆ ಹೇಳುವೆನು. ಅವಳು ಇದನ್ನು ಮೇದಿನೀ ದೇವಿಗೆ ಹೇಳುವಳು. ಮೇದಿನಿಯು ಮಹಾರಾಜ ತುಂಗಧನ್ವನಿಗೆ ಹೇಳಿದರೆ ನಿನ್ನ ಕೆಲಸವಾಯಿತೆಂದು ತಿಳಿ. ಇದು ದೇವತೆಯ ಆಜ್ಞೆ."

ವ॥ ಎಂದು ಪೇೞ್ದು ಚಂದ್ರಸೇನೆ ಪೋಗಲೊಡಂ

ಎನ್ನಯ ಹೃದಯದ ತಾಪಂ
ತನ್ನಂ ಬಂದೆಯ್ದಲುಷ್ಣಮಿಮ್ಮಡಿಸುಗುಮೆಂ
ದುನ್ನತಚಿಂತೆಯಿನೆಯ್ದಿದ
ನನ್ನೆಗಮಪರಾಬ್ಧಿಗಬ್ಜಿನೀ ಪ್ರಾಣೇಶಂ ೪೪

ವ॥ ಅಂತು ಸೂರ್ಯಾಸ್ತಮಯಮಾಗಲೊಡಂ

ಒಂದಿರುಳನೇಕಯುಗದಂ
ತೊಂದಿರಲೆಂತಾನುಮೆನ್ನ ಪುಣ್ಯೋದಯಮೆಂ
ಬಂದದಿನುದಯಾಚಲದೊಳ್
ಬಂದಿರ್ದಂ ಕೂರ್ತು ಪದ್ಮಿನೀನಿಜಕಾಂತಂ ೪೫

ವ॥ ಅಂತುದಯಮಾಗಲ್ ಸಂಧ್ಯಾವಂದನಂಗೆಯ್ದು ವಿಂಧ್ಯವಾಸಿನಿಗೆ ನಮಸ್ಕಾರಂಗೆಯ್ಯಲೆಂದಾಂ ಪೋಪಾಗಳ್

ಪೊಡವಿಪತಿ ಕೂರ್ತು ಕೆಲಬರ
ಗಡಣದಿನಾಭೀಮಧನ್ವನೊಲವೆಂದಾನಿ
ರ್ದೆಡೆಗೇಟ್ತಂದೆನ್ನಂ ತ
ನ್ನೊಡನೆ ಬರಲ್ವೇೞ್ದು ಪಿರಿದು ಮನ್ನಿಸಿ ಕರೆದಂ ೪೬

ವ॥ ಅಂತು ಕರೆಯಲ್ಕಾನದಕ್ಕೊಡಂಬಡಲೊಡಂ ಭೀಮಧನ್ವನೆನ್ನಂ ಮನೆಗೊಡಗೊಂಡು ಪೋಗಿ ಮಜ್ಜನಭೋಜನಾದಿಕ್ರಿಯೆಗಳಂ ಮಾಡಿಸಿ ಪಗಲಂ ಕಳೆಯಲೊಡಂ

ವ॥ ಎಂದು ಹೇಳಿ ಚಂದ್ರಸೇನೆಯು ಹೋದಳು. ಆಗ ೪೪. ನನ್ನ ಹೃದಯದ ತಾಪವು ತನಗೆ ಬಂದು ಬಡಿದರೆ ತನ್ನ ಉಷ್ಣವು ಇಮ್ಮಡಿಯಾಗುವುದು !- ಎಂದು ಯೋಚಿಸಿ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು. ವ॥ ಹಾಗೆ ಸೂರ್ಯನು ಮುಳುಗಲು—೪೫. ಆ ಒಂದು ರಾತ್ರಿಯನ್ನು ಅನೇಕ ಯುಗದಂತೆ ಕಳೆದನು. ಹೇಗೋ ನನ್ನ ಪುಣ್ಯವು ಉದಯಿಸಿತೋ ಎಂಬಂತೆ ಸೂರ್ಯನು ಉದಯ ಗಿರಿಯೇರಿದನು. ವ॥ ಉದಯವಾದ ಕೂಡಲೆ ಸಂಧ್ಯಾವಂದನೆಯನ್ನು ಮಾಡಿ ವಿಂಧ್ಯ ವಾಸಿನೀ ದೇವಿಗೆ ನಮಸ್ಕಾರ ಮಾಡಲು ನಾನು ಹೋದೆನು. ಆಗ—೪೬. ರಾಜನೇ ! ಆ ಭೀಮಧನ್ವನು ಕೆಲವರೊಡನೆ ಸ್ನೇಹದಿಂದ ನಾನಿದ್ದ ಸ್ಥಳಕ್ಕೆ ಬಂದನು. ಮತ್ತು ನನ್ನನ್ನು ತನ್ನ ಜೊತೆಯಲ್ಲಿ ಬರಬೇಕೆಂದು ತುಂಬ ಗೌರವದಿಂದ ಕರೆದನು. ವ॥ ಹಾಗೆ ಕರೆಯಲು ನಾನು ಒಪ್ಪಿಕೊಂಡೆನು. ಕೂಡಲೆ ಭೀಮಧನ್ವನು ನನ್ನನ್ನು ಮನೆಗೆ ಕರೆದುಕೊಂಡು ಹೋಗಿ ಸ್ನಾನ ಭೋಜನಾದಿಗಳನ್ನು ಮಾಡಿಸಿದನು. ಹಗಲು

ಗಗನಸ್ಥಲದೊಳ್ ತಿರುಗುವ
ಖಗನಪರಾದ್ರೀಂದ್ರ ಕೋಟರಕ್ಕತಿಮುದದಿಂ
ದೊಗೆಯಲ್ ಪದೆಪಿಂದಾಗಳ್
ಜಗಜ್ಜನಂ ನಿದ್ರೆಗೆಳಸಿಯೊಱಗಿತ್ತಾಗಳ್ ೪೭

ವ॥ ಅಂತಸ್ತಮಾನವಾಗಲೊಡಂ ಪ್ರಾಪ್ತಕಾಲದೊಳ್ ಸಜ್ಜೆವನೆಯೊಳಾನೊಱಗಿಪ್ಪಾಗಳ್

ನಡುವಿರುಳೆಟ್ಟೆಂದು ಕೆಲರ್
ಪಿಡಿದೆನ್ನಂ ಪೊಡೆದು ಕಟ್ಟಿ ಕುಳ್ಳಿರಿಸಲ್ಕೆ ವಿ
ಗಡ ಭೀಮಧನ್ವನಲ್ಲಿಗೆ
ಸಡಗರದಿಂ ಬಂದು ನಸುನಗುತ್ತಿಂತೆಂದಂ ೪೮

ನಿಮ್ಮೇಕಾಂತ ವಿಚಾರದ
ಸಮ್ಮಂಧಮನೆಮ್ಮ ದೂಡಿ ವಾತಾಯನದಿಂ
ಸುಮ್ಮನೆ ಬಂದಿರ್ದಱಿಂದಿ
ನ್ನೆಮ್ಮೊಳ್ ಪೇಳ್ದಳ್ ವಿಚಾರವಾದು ದಿಟಮಲ್ತೇ ೪೯

ನೀನರಸಾಗಳ್ ನಿನಗಾಂ
ಮಾನಸನಾಗಿರ್ದು ಪೇಳ್ದುದಂ ಗೆಯ್ವೆಂ ಸ
ನ್ಮಾನನಿಧಿ ಕಂತುಕಾವತಿ
ಮಾನಿನಿ ನಿನಗಾದವಳ್ ಗಡಂ ದಿಟಮಲ್ತೇ ೫೦

ಕಳಿದಕೂಡಲೆ— ೪೭. ಆಕಾಶದಲ್ಲಿ ತಿರುಗುವ ಸೂರ್ಯನು ಅಸ್ತ ಪರ್ವತದ ಗುಹೆಯನ್ನು, ಹಕ್ಕಿಯು ಪೊಟರೆಯನ್ನು ಸೇರುವಂತೆ, ಹರ್ಷದಿಂದ ಸೇರಿದನು. ಆಗ ಜಗತ್ತಿನ ಜನರೆಲ್ಲರೂ ನಿದ್ದೆಯನ್ನು ಬಯಸಿ ಮಲಗಿದರು. ವ॥ ಸೂರ್ಯನು ಮುಳುಗಿದ ಮೇಲೆ ನಾನು ಶಯ್ಯಾಗೃಹದಲ್ಲಿ ಸಕಾಲದಲ್ಲಿ ಮಲಗಿದೆನು. ಆಗ ೪೮. ನಟ್ಟಿರುಳಿನಲ್ಲಿ ಕೆಲವರು ಬಂದು ನನ್ನನ್ನು ಹಿಡಿದು ಹೊಡೆದು ಕಟ್ಟಿ ಕುಳ್ಳಿರಿಸಿದರು. ಆಗ ಅಲ್ಲಿಗೆ ವಿಗಡ ಭೀಮಧನ್ವನು ಬಂದು ನಸು ನಗುತ್ತಾ ಹೇಳಿದನು. ೪೯. "ನಿಮ್ಮ ಏಕಾಂತ ವಿಚಾರಕ್ಕೆ ಸಂಬಂಧಿಸಿದ ವಿಷಯವನ್ನು ನಮ್ಮ ದೂತಿಯು ಕಿಟಕಿಯ ಬಳಿ ಬಂದು ನಿಂತು ತಿಳಿದು ಬಂದು ನಮಗೆ ಹೇಳಿದ್ದಾಳೆ. ಆ ವಿಚಾರವು ನಿಜತಾನೇ ! ೫೦. ನೀನು ಅರಸನಾಗುವೆ. ನಾನು ನೀನು ಹೇಳಿದಂತೆ ಮಾಡುವ ಸೇವಕನಾಗುವೆನು. ಮಾನನಿಧಿ !

ವ॥ ಎಂದೆನ್ನಂ ಭೀಮಧನ್ವಂ ಜಡಿದು

ನಿರ್ಬಂಧಿಸಿ ಸಂಕಲೆಯಿಂ
ಸರ್ಬಾಂಗದೊಳಿಕ್ಕಿ ಕಡಲ ನಡುನೀರೊಳ್ ತ
ನ್ನುರ್ಬಿೞಿಯೆ ಬಿಸುಟು ಬಾಯೆಂ
ದೊರ್ಬನ ಕೆಯ್ಗಿತ್ತನೆನ್ನನಾನೃಪತನಯಂ ೫೧

ವ॥ ಅಂತು ಕುಡಲವನೆನ್ನಂ ಕೊಂಡು ಪೋಗಿ

ಲಲಿತಪ್ರೋದ್ಯತ್ತರಂ ಗೋಚ್ಚಳಿತಕಮಠಪಾಠೀನ ನೀರೇಭಕೋಳಾ
ಹಳಚಂಚಚ್ಚೀಕರೋದ್ಯತ್ಕುಸುಮಿತನವವೇಳಾವನಪ್ರಾಂತದಿಂ ಕ
ಟ್ಟಲೆಯೆಂದುಂ ಪಿಂಗದೆಂಬಂತೆಸೆವ ಕಡಲ ತನ್ಮಧ್ಯದೊಳ್ ನಿರ್ದಯಂ ಸಂ
ಕಲೆಯಿಂಕ್ಕಿರ್ದೆನ್ನನನ್ಯಾಯದಿನಱಿ ಬಿಸುಟಂ ನೀರ್ಗಳಿರ್ಬಾಗವಾಗಲ್ ೫೨

ವ॥ ಅಂತವನೆನ್ನಂ ಸಮುದ್ರಮಧ್ಯದೊಳ್ ಬಿಸುಟು ಪೋಗಲ್

ವಡಬಾಜ್ವಾಲೆಯೊಳುಣ್ಬೊಡಂ ವಿಷಧರಂ ಬಾಯ್ವಿಟ್ಟು ಮೇಲ್ವಾಯ್ದೊಡಂ
ಕಡಲೊಳ್ ಬಿೞ್ದೊಡಮದ್ರಿಶೃಂಗದಿನಿಳಾಭಾಗಕ್ಕೆ ಪಾಯ್ತರ್ಪೊಡಂ
ಸಿಡಿಲಾರ್ಪಿಂ ಮಿಗೆ ಪಾಯ್ದೊಡಂ ನಿಜಲಲಾಟಪ್ರಾಪ್ತಸಿದ್ಧಾಕ್ಷರಂ
ತೊಡೆವನ್ನಂ ಭಯವೇಕೆ ದೇಹಿಗೆ ಬೞಿಕ್ಕಾರ್ ಬಾಧಿಪರ್ ಬಾಧೆಯುಂ ೫೩

ಕಂತುಕಾವತಿಯು ನಿನಗೆ ಹೆಂಡತಿಯಾಗುವಳು ! ಇದು ನಿಜವಲ್ಲವೇ ?" ವ॥ ಎಂದು ನನ್ನನ್ನು ಭೀಮಧನ್ವನು ಹಂಗಿಸಿ—೫೧. ಸರ್ವಾಂಗಗಳಿಗೂ ಸಂಕೋಲೆಯನ್ನು ಹಾಕಿ ಬಿಗಿದು 'ಇವನನ್ನು ಕಡಲ ನಡುನೀರಿನಲ್ಲಿ ಬಿಸಾಡಿ ಬಾ' ಎಂದು ಹೇಳಿ ಆ ರಾಜ ಕುಮಾರನು ನನ್ನನ್ನು ಒಬ್ಬನ ಕೈಗೆ ಒಪ್ಪಿಸಿದನು. ವ॥ ಅವನು ನನ್ನನ್ನು ಕರೆದು ಕೊಂಡು ಹೋದನು. ೫೨. ಸುಂದರವಾದ ಎತ್ತರಕ್ಕೇಳುವ ತರಂಗಗಳು. ಅವು ಗಳೊಡನೆಯೇ ಮೇಲಕ್ಕೆ ಹಾರುವ ಆಮೆ, ಮೀನು, ನೀರಾನೆಗಳು, ಚಂಚಲ ವಾದ ಮೇಲೆದ್ದ ತುಂತುರು ಹನಿಗಳು ಹೂವರಳಿದ ತೀರದ ವನಪ್ರಾಂತ ಇವುಗಳಿಂದ ಕತ್ತಲೆಯು ಎಂದೂ ಹೋಗುವುದೇ ಇಲ್ಲ ಎಂಬಂತೆ ಕಡಲು ಪ್ರಕಾಶಿಸಿತು. ಆ ನಿರ್ದಯಿಯು ಸಂಕೋಲೆಯಿಂದ ಬಿಗಿಯಲ್ಪಟ್ಟ ನನ್ನನ್ನು ಅನ್ಯಾಯದಿಂದ ಅಂಥ ಕಡಲ ನಡುವೆ ಎಸೆದನು. ಎಸೆದಾಗ ಬಿದ್ದ ವೇಗಕ್ಕೆ ನೀರು ಇಬ್ಭಾಗವಾಯಿತು. ವ॥ ಹಾಗೆ ಅವನು ನನ್ನನ್ನು ಸಮುದ್ರ ಮಧ್ಯದಲ್ಲಿ ಎಸೆದು ಹೋಗಲು—೫೩. "ಬಡಬಾಗ್ನಿಯ ಉರಿಗಳು ನುಂಗಿದರೂ. ವಿಷ ಸರ್ಪವು ಬಾಯಿ ತೆರೆದುಕೊಂಡು ಮೇಲೆ ನುಗ್ಗಿದರೂ. ಕಡಲಿನಲ್ಲಿ ಬಿದ್ದರೂ. ಬೆಟ್ಟದ ತುದಿಯಿಂದ ನೆಲಕ್ಕೆ ಹಾರಿದರೂ. ಸಿಡಿಲು ವೇಗದಿಂದ ಹೊಡೆದರೂ. ತನ್ನ ಹಣೆ ಬರಹವು ಅಳಿಸದೆ

**ವ॥ ಎಂದೆನ್ನೊಳ್ ಪರಿಭಾವಿಸುತಿರ್ಪನ್ನೆಗಂ,**

**ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂವಕಂಭಮೊ**
**ಟ್ಟೈಟ್ಟ ಸುವರ್ಣರತ್ನತತಿ ಗಾಳಿಯ ಕೋಟ್ಗನುಕೂಲಮಪ್ಪಿನಂ**
**ಬಿಟ್ಟಪಟಂ ಪ್ರಮಾದಫಲಕಸ್ಥಿತನಾದ ವಣಗ್ವರಂ ಕರಂ**
**ದಿಟ್ಟಗೆ ಚೆಲ್ವನಾಗಿ ಕಡಲೊಳ್ ಬರುತಿರ್ದುದು ಯಾನಪಾತ್ರಕಂ** ೫೪

**ವ॥ ಅಂತೊಂದು ಬಹಿತ್ರಂ ಬರಲದರೊಳಿರ್ದ ವಣಿಕ್ಪತಿ**

**ಮುಡುಪಿಂದೀಸಾಡುತ್ತುಂ**
**ಕಡಲೊಳಗಿರ್ದೆನ್ನನಾವಣಿಕ್ಪತಿಯೊಲವಿಂ**
**ಕಡುಪಿಂ ಕಂಡತಿದಯೆಯಿಂ**
**ನಿಡುನೇಣಂ ನೀಡಿ ತೆಗೆದುಕೊಂಡನಿಳೇಶಾ** ೫೫

**ವ॥ ಅಂತೆನ್ನಂ ತೆಗೆದು ಮದ್ವೃತ್ತಾಂತಮನಾವಣಿಕ್ಪತಿ ಕೇಳುತ್ತುಮಿರ್಍ಾಗಳ್**

**ತಂಬಟಮಂ ಸೂಟ್ಯೈಸು**
**ತ್ತಂಬುಧಿಯೊಳ್ ಕಳ್ಳ ಪಡಗಿನವರ್ಗಳ್ ರತ್ನಂ**
**ತುಂಬಿರ್ದ ತದ್ಬಹಿತ್ರಮ**
**ನಂಬುಗಳಿಂದೆಚ್ಚು ಮುಂದುಗಿಡಿಸಿದರಾಗಳ್** ೫೬

**ವ॥ ಅಂತೋಂದು ಕಳ್ಳಪಡಗು ಬಂದು ಮುಂದುಗೆಡಿಸಲದಂ ಕಂಡು ತದ್ಬಹಿತ್ರದ ವಣಿಕ್ಪತಿಯೊಳಾನಿಂತೆಂದೆಂ**

ಇರುವವರೆಗೂ ಪ್ರಾಣಿಗೇಕೆ ಹೆದರಿಕೆ? ಯಾರು ತಾನೇ ಹಿಂಸಿಸಬಲ್ಲರು?" ವ॥ ಎಂದು ನಾನು ಮನಸ್ಸಿನಲ್ಲಿ ಯೋಚಿಸುತ್ತಿದ್ದೆನು. ಆಗ, ೫೪. ಕಡಲಿನಲ್ಲಿ ಒಂದು ಹಡಗು ಬರುತ್ತಿತ್ತು. ಅದಕ್ಕೆ ಚೌರಿಗಳನ್ನು ಕಟ್ಟಿತ್ತು. ನಡುವಿನ ಹಾಯ್ಗಂಬವು ಗಗನವನ್ನು ಚುಂಬಿಸುತ್ತಿತ್ತು. ಅದರಲ್ಲಿ ಚಿನ್ನ, ರತ್ನ, ಮೊದಲಾದುವು ತುಂಬಿದ್ದವು. ಗಾಳಿಯ ಸೆಳೆತಕ್ಕೆ ಅನುಕೂಲವಾಗಿ ಹಾಯಿಬಟ್ಟೆಯನ್ನು ಬಿಚ್ಚಿದ್ದಿತು. ಅದರಲ್ಲಿ ಹಲಗೆಯ ಮೇಲೆ ಸುಂದರನಾದ ವರ್ತಕ ಶ್ರೇಷ್ಠನೊಬ್ಬನು ಕುಳಿತಿದ್ದನು. ವ॥ ಹಾಗೆ ಬಂದು ಹಡಗು ಬರಲು ಅದರಲ್ಲಿದ್ದ ವರ್ತಕ ಶ್ರೇಷ್ಠನು ೫೫. ಕಡಲಿನಲ್ಲಿ ಹೆಗಲಿನಿಂದ ಈಜಾಡುತ್ತಿದ್ದ ನನ್ನನ್ನು ಕಂಡು ಉದ್ದವಾದ ಹಗ್ಗವನ್ನು ನೀಡಿ, ರಾಜನೇ, ನನ್ನನ್ನು ಎಳೆದುಕೊಂಡನು. ವ॥ ಹಾಗೆ ನನ್ನನ್ನು ಹೊರಕ್ಕೆ ತೆಗೆದು ನನ್ನ ವೃತ್ತಾಂತವನ್ನು ಆ ವರ್ತಕ ಶ್ರೇಷ್ಠನು ಕೇಳುತ್ತಿರುವಾಗ, ೫೬. ಕಳ್ಳಹಡಗಿನವರು (ಹಡಗಿನ ಕಳ್ಳರು) ಸಮುದ್ರದ ಮೇಲೆ ತಮಟೆಗಳನ್ನು ಹೊಯಿಸುತ್ತಾ, ರತ್ನ ತುಂಬಿದ್ದ ಆ ಹಡಗನ್ನು ಮುತ್ತಿ ಬಾಣಗಳನ್ನು ಬಿಟ್ಟು ಮುಂದೆ ಹೋಗದಂತೆ ತಡೆದರು. ವ॥ ಹಾಗೆ ಬಂದು ಕಳ್ಳರು ತುಂಬಿದ ಹಡಗು ಬಂದು ಮುಂದೆ ಹೋಗದಂತೆ ತಡೆಯಲು ಅದನ್ನು ನೋಡಿ, ಆ ಹಡ

ಮುಳಿದಾಂತ ಪಡಗಿನವರ್ಗಳ
ಬಲಮಂ ತತ್‌ಕ್ಷಣದೊಳಾಂತು ಕಿಡಿಸಿದಪೆಂ ಮ
ದ್ಬಲದಿಂದೆನಗಿಕ್ಕಿದ ಸಂ
ಕಲೆಯುಂ ಬಿಡಿಮೆಂದೊಡಾತನಾಗಳೆ ಬಿಟ್ಟಂ ೫೭

ವ॥ ಅಂತೆನ್ನಂ ಬಿಡಲೊಡಂ,

ಕಡುಕೆಯ್ದಾನಾರ್ಪಿನಿಂ ಬಿಲ್ವಿಡಿದು ನಿಶಿತಬಾಣೋತ್ಕರಾಸಾರದಿಂ ಮಾ
ರ್ಪಡಗಂ ಪೊಣ್ದೆಯ್ದಿ ಬೇಗಂ ತುಡುಕಿ ಪಿಡಿದು ಕಳ್ಳರ್ಕಳಂ ನೀಳ್ದ ನೇಣಿಂ
ಪೆಡಗೆಯ್ಯಂ ಕಟ್ಟಿಯಲ್ಲಿರ್ದವರೊಡೆಯನೆನಿಪ್ಪಾತನಂ ನೋಡಲಿನ್ನೇಂ
ಪಡಿಮಾತಂ ಪೇಟ್ವೆನೆನ್ನಾನಿಜರಿಪುವೆನಿಪಾಭೀಮಧನ್ವಾಂಕನಾದಂ ೫೮

ವ॥ ಅಂತಾಂ ಪಿಡಿದ ಪಡಗಿನೊಡೆಯಂ ಭೀಮಧನ್ವನಾಗಿರೆ

ಮಾಡಿತ್ತಂ ಪರಲೋಕದೊ
ಳಾಡುತ್ತನುಭವಿಪರೆಂಬರದು ಪುಸಿಯಿಹದೊಳ್
ನೋಡಲನುಭವಿಪುದದು ದಿಟ
ಮಾಡಂಬರಮೇಕದರ್ಕೆ ರಾಜಕುಮಾರಾ ೫೯

ವ॥ ಎಂದಾತನಂ ಮುಟ್ಟೆ ಮೂದಲಿಸಿಯನಂತರಂ

ಗಿನ ವಣಿಕ್ಪತಿಗೆ ನಾನು ಹೀಗೆ ಹೇಳಿದೆನು ೫೭. "ಕೋಪಗೊಂಡು ಮುತ್ತಿದ ಕಳ್ಳ ಪಡಗಿನವರ ಬಲವನ್ನು ಕೂಡಲೆ ಎದುರಿಸಿ ನಾಶಮಾಡುತ್ತೇನೆ. ನನ್ನ ಬಲವನ್ನು ತೋರಿಸುತ್ತೇನೆ. ಈಗಲೆ ನನಗೆ ತೊಡಿಸಿರುವ ಸಂಕೋಲೆಗಳನ್ನು ಬಿಡಿಸಿರಿ." ಆತನು ಹಾಗೆಯೇ ನನ್ನನ್ನು ಸಂಕೋಲೆಗಳಿಂದ ಬಿಡಿಸಿದನು. ವ॥ ಹಾಗೆ ನನ್ನನ್ನು ಬಿಡಲು ಕೂಡಲೆ— ೫೮. ಪರಾಕ್ರಮದಿಂದ ಬಿಲ್ಲನ್ನು ಹಿಡಿದು ಎದುರು ಪಡಗಿನಮೇಲೆ ಹರಿತವಾದ ಬಾಣಗಳ ಮಳೆಗರೆದೆನು. ಹಡಗಿಗೆ ನುಗ್ಗಿ ಕಳ್ಳರನ್ನು ಹಿಡಿದು ಉದ್ದವಾದ ಹಗ್ಗದಿಂದ ಕೈಗಳನ್ನು ಹಿಂದಕ್ಕೆ ಸೇರಿಸಿ ಬಿಗಿದೆನು. ಆ ಕಳ್ಳರ ಒಡೆಯನು ಯಾರು ? ಎಂದು ನೋಡಲು ಏನು ಹೇಳಲಿ ! ಅವನು ನನ್ನ ಶತ್ರುವಾದ ಭೀಮಧನ್ವನೇ ಆಗಿದ್ದನು ! ವ॥ ನಾನು ಹಿಡಿದ ಹಡಗಿನೊಡೆಯನು ಭೀಮಧನ್ವನಾಗಿರಲು, ೫೯. "ಮಾಡಿದ ಕರ್ಮಫಲಗಳನ್ನು ಪರಲೋಕದಲ್ಲಿ ಅನುಭವಿಸುವರು ಎಂದು ಹೇಳುವ ಮಾತು ಸುಳ್ಳು. ನೋಡಿದರೆ ಇಹಲೋಕದಲ್ಲಿಯೇ ಅನುಭವಿಸುವರು. ಇದು ನಿಜ. ರಾಜಕುಮಾರನೆ ಹೀಗಿರುವಾಗ ಈ ಆಡಂಬರವು ಏತಕ್ಕೆ ?" ವ॥ ಎಂದು ಆತನ ಮನಸ್ಸಿಗೆ ತಗಲುವಂತೆ

ಮುನ್ನೆನಗಿಕ್ಕಿದ ಸಂಕಲೆ
ಯನ್ನೀಳ್ದ ಶರೀರದಲ್ಲಿ ತುಡಿಸಿ ಕುಮಾರಂ
ಗಿನ್ನೇಗೆಯ್ವೆನೆನುತ್ತುಂ
ಬಿನ್ನವಿಸಲ್ ಭೀಮಧನ್ವನೆರ್ದೆಗೆಟ್ಟಿರ್ದಂ ೬೦

ವ॥ ಅಂತು ಕಳ್ಳರಂ ಗೆಲ್ದು ಆತನಂ ಸಂಕಲೆಯೊಳಿಕ್ಕಿದುದರ್ಕೆ ಮೆಚ್ಚಿ ವಣಿಗ್ವರನೆನ್ನಂ ಮನ್ನಿಸಿ ಬಳಿಯಂ

ಸ್ವಾದೂದಕದಶನಂ ಚೆ
ಲ್ವಾದಾತಾಂಬೂಲಮೆಯ್ದೆ ಸವಿಯಲ್ ತತ್ಸಂ
ಪಾದನೆಗೆ ವಣಿಗ್ವರನ
ತ್ಯಾದರದಿಂ ಪಟಮನೆತ್ತಿ ತಡಿಗೇಱುಂದಂ ೬೧

ವ॥ ಅಂತು ತಡಿಗೆ ಬರ್ಪಿನಮಾನುಂ ತಡಿಗಿೞಿದೊಂದು ಕಡೆಯಂ ನೋೞ್ಪನ್ನೆಗಂ

ಭಾರತದಂತೆ ಭೀಮನಕುಲಾರ್ಜುನವಿಕ್ರಮದಿಂ ನೆಗೞ್ದ ದೈ
ತ್ಯಾರಿಯ ವಕ್ಷದಂತೆ ಭೃಗುಸಂಪದದಿಂ ಹರನಂತೆ ಸದ್ಗುಹಾ
ಕಾರವಿಳಾಸದಿಂ ರಘುಜನಂತೆ ವಿಚಿತ್ರಧರಿತ್ರಿಸಂಭವೋ
ದಾರದಿನಿರ್ದುದೊಂದು ಕುಧರಂ ಗಗನಸ್ಥಳಮಂ ತುಡುಂಕುತುಂ ೬೨

ಮೂದಲಿಸಿ ನುಡಿದೆನು. ಅನಂತರ, ೬೦. ಮೊದಲು ನನಗೆ ಹಾಕಿದ್ದ ಸಂಕೋಲೆಗಳನ್ನೇ ಅವನ ಉದ್ದವಾದ ಶರೀರಕ್ಕೆ ತೊಡಿಸಿದೆನು. ರಾಜಕುಮಾರನಿಗೆ "ನಿನಗಿನ್ನೇನು ಮಾಡಲಿ" ಎಂದು ಕೇಳಿದೆನು. ಭೀಮಧನ್ವನು ಧೈರ್ಯಕಳೆದುಕೊಂಡಿದ್ದನು. ವ॥ ಹಾಗೆ ಕಳ್ಳರನ್ನು ಗೆದ್ದು ಆ ಭೀಮಧನ್ವನಿಗೆ ಸಂಕೋಲೆಯನ್ನು ತೊಡಿಸಿದುದಕ್ಕೆ ಆ ವಣಿಗ್ವರನು ಮೆಚ್ಚಿಕೊಂಡು ನನ್ನನ್ನು ತುಂಬ ಗೌರವಿಸಿದನು. ಬಳಿಕ, ೬೧. ಸಿಹಿ ನೀರನ್ನು ಕುಡಿದು ಊಟಮಾಡಿ ಸೊಗಸಾದ ತಾಂಬೂಲವನ್ನು ಸವಿದೆನು. ಅನಂತರ ವ್ಯಾಪಾರಮಾಡಿ ಸಂಪಾದಿಸುವುದಕ್ಕಾಗಿ ಆ ವರ್ತಕನು ಹಡಗಿನ ಹಾಯಿಬಟ್ಟೆಯನ್ನು ಇಳಿಸಿ ದಡಕ್ಕೆ ಬಂದನು. ದಡಕ್ಕೆ ಬರಲು ನಾನೂ ಹಡಗಿನಿಂದ ಇಳಿದು ದಡಸೇರಿ ಒಂದುಕಡೆ ನೋಡಿದೆನು. ೬೨. ಆಕಾಶವನ್ನು ಮುಟ್ಟುತ್ತಿದ್ದ ಒಂದು ಬೆಟ್ಟದಲ್ಲಿ ಕಾಣಿಸಿತು. ಅದು ಭಾರತದ ಹಾಗೆ ಭೀಮ, ನಕುಲ, ಅರ್ಜುನರ ವಿಕ್ರಮದಿಂದ ಕೂಡಿದ್ದಿತು. (ಭಯಂಕರವಾದ ಮುಂಗುಸಿಗಳ ಸಂಚಾರ ಮತ್ತು ವಿಶಾಲವಾದ ಮತ್ತಿಮರ) ಪ್ರಸಿದ್ಧನಾದ ಶ್ರೀ ಕೃಷ್ಣನ ವಕ್ಷಸ್ಥಳದಂತೆ ಭೃಗು ಸಂಪದದಿಂದ ಕೂಡಿದ್ದಿತು. (ಕಮರಿ ಮತ್ತು ಲಕ್ಷ್ಮಿ) ಹರನ ಹಾಗೆ ಒಳ್ಳೆಯ ಗುಹೆಗಳಿಂದ ರಂಜಿಸುತ್ತಿತ್ತು. [ಗುಹೆ ಮತ್ತು ಕುಮಾರಸ್ವಾಮಿ] ರಾಮನಂತೆ ವಿಚಿತ್ರವಾದ ಧರಿತ್ರಿ ಸಂಭವದಿಂದ ಉದಾರಿಯಾಗಿ

ವ॥ ಅದಂ ಕಂಡಲ್ಲಿಗೆಯ್ದಲದಱ ನಿತಂಬದಲ್ಲಿ

ಕುಮುದಾಬ್ಜಸ್ಥಿತಿ ರಾಜಹಂಸಗತಿಯಿಂ ಚೆಲ್ವಪ್ಪಿನಂ ತಣ್ಣನ
ಪ್ಪಮೃತಂ ಸಾರ್ದನಿಮೇಷಸಂತತಿಗೆ ಪೆರ್ಚಂ ಮಾಳ್ಪಿನಂಕೂಲವಿ
ದ್ರುಮವೊಳ್ಪಿಂದನುರಾಗಮಂ ಪಥಿಕರೊಳ್ ಕೂರ್ತೀವಿನಂ ಚಿತ್ತವಿ
ಭ್ರಮಮಂ ಪುಟ್ಟಿಸುತಿರ್ದುದದ್ರಿತಟದೊಳ್ ತಾನಾಗಳುಂ ಪೂಗೊಳಂ ೬೩

ವ॥ ಅಂತಿರ್ದ ಪೂಗೊಳನಂ ಕಂಡಲ್ಲಿ ನೀರ್ಗುಡಿಯಲೆಂದು ಪೋಪಲ್ಲಿ

ಕಿಡಿಯಂ ಸೂಸುವ ಕಣ್ ಕರಾಳವದನಂ ಕೂರ್ದಾಡೆ ಕೆಮ್ಮೀಸೆ ನಿ
ಟ್ಟೊಡಲೌರ್ವಾನಳದೇಹದೀಪ್ತಿಯಡರ್ದಿರ್ದೂರುದ್ವಯಂ ನೀಳ್ದ ಕೆಂ
ಜೆಡೆ ಕಾಳಾಯಸದಂಡಹಸ್ತಮೆನಸುಂ ಚೆಲ್ವಾಗಲೊರ್ಬಂ ಕರಂ
ದಡಿಗಂ ರಕ್ಕಸನೆನ್ನಿದಿರ್ಗೆ ಮುಳಿಸಿಂದೇಟ್ತಂದನಾಶೈಲದಿಂ ೬೪

ವ॥ ಅಂತು ಬಂದೊರ್ಬ ಬ್ರಹ್ಮರಾಕ್ಷಸನೆನ್ನ ಪ್ರಶ್ನೆಗುತ್ತರಮಂ ಕೊಟ್ಟು ನೀರ್ಗುಡಿಯೆಂದಿಂತೆಂದಂ

ಪ್ರಶ್ನೆಗಳ್

ದ್ದಿತು. [ಮರಗಳು—ಸೀತೆ] ವ॥ ಅದನ್ನು ನೋಡಿ ಅಲ್ಲಿಗೆ ಹೋದೆನು. ಅದರ ಮಧ್ಯಪ್ರದೇಶದಲ್ಲಿ, ೬೩. ಬೆಟ್ಟದ ಪಕ್ಕದಲ್ಲಿದ್ದ ಹೂಗೊಳವೊಂದು ದಾರಿಗರಿಗೆ ಚಿತ್ತಭ್ರಾಂತಿಯನ್ನು ಹುಟ್ಟಿಸುತ್ತಿತ್ತು. ಕುಮುದ, ಅಬ್ಜ ಮತ್ತು ರಾಜಹಂಸಗಳ ಸಂಚಾರದಿಂದ ಸುಂದರವಾಗಿದ್ದಿತು. [ಚಂದ್ರ, ಸೂರ್ಯ, ರಾಜಹಂಸ] ತಣ್ಣಗಿರುವ ಅಮೃತದಂಥ ನೀರು ಅನಿಮೇಷಗಳಿಗೆ [ದೇವತೆಗಳಿಗೆ-ಮೀನುಗಳಿಗೆ] ಆನಂದವನ್ನುಂಟುಮಾಡುತ್ತಿದೆ. ದಡದ ವಿದ್ರುಮದ [ಹವಳ_ವಿಶಾಲವಾದ ಮರ] ಚೆಲುವಿನಿಂದ ದಾರಿಗರಲ್ಲಿ ಅನುರಾಗವನ್ನುಂಟುಮಾಡುತ್ತಿದೆ. ಆದುದರಿಂದ ಚಿತ್ತವಿಭ್ರಮಣೆಯುಂಟಾಗುತ್ತಿದೆ. ವ॥ ಹಾಗಿದ್ದ ಹೂಗೊಳವನ್ನು ನೋಡಿ ನೀರು ಕುಡಿಯಬೇಕೆಂದು ಹತ್ತಿರ ಹೋದೆನು. ಆಗ, ೬೪. ಆ ಬೆಟ್ಟದಿಂದ ಒಬ್ಬ ದಡಿಗನಾದ ರಾಕ್ಷಸನು ನನ್ನೆದುರಿಗೇ ಬಂದನು. ಕಂಗಳಿಂದ ಕಿಡಿಗಳನ್ನು ಹಾರಿಸುತ್ತಿದ್ದನು. ಮುಖ ಭಯಂಕರವಾಗಿದ್ದಿತು. ಕೋರೆ ಹಲ್ಲು ಹರಿತವಾಗಿತ್ತು. ಮೀಸೆ ಕೆಂಪಾಗಿದ್ದಿತು. ಶರೀರವು ಎತ್ತರವಾಗಿದ್ದಿತು. ಎರಡು ತೊಡೆಗಳು ಬಡವಾಗ್ನಿಯು ಉರಿಯುಂತೆ ಹೊಳೆಯುತ್ತಿದುವು. ಕೆಂಪಾದ ಜಡೆಗಳು ಉದ್ದವಾಗಿದ್ದವು. ಉದ್ದವಾದ ಕಬ್ಬಿಣದ ದಂಡವನ್ನು ಕೈಯಲ್ಲಿ ಹಿಡಿದಿದ್ದನು. ಹೀಗೆ ಅವನು ಆಕರ್ಷಕನಾಗಿದ್ದನು. ವ॥ ಹಾಗೆ ಬಂದ ಒಬ್ಬ ಬ್ರಹ್ಮರಾಕ್ಷಸನು 'ನನ್ನ ಪ್ರಶ್ನೆಗೆ ಉತ್ತರವನ್ನು ಕೊಟ್ಟು ನೀರನ್ನು ಕುಡಿ' ಎಂದು

ಕ್ರೂರಮದಾವುದಃ ಗೃಹವಿ
ಸ್ತಾರಂ ತಾನಾವುದೆಸೆವ ಕಾಮದ ನೆಲೆಯೇಂ
ಚಾರಿಯ ದುಃಖದ ಸಾಧನ
ಮಾರಯ್ಯಲದಾವುದೆನಗೆ ಪೇಟನುನಯದಿಂ ೬೫

ವ॥ ಎಂದೊಡಾನಿಂತೆಂದೆಂ

ಸ್ತ್ರೀಹೃದಯಂ ಕ್ರೂರಂ ನಿಜ
ಗೇಹಸುಖಂ ಸತಿಯರೊಳ್ಪು ಕಾಮಂ ಚಿತ್ತ
ಸ್ನೇಹದ ಸಂಕಲ್ಪಂ ಮತಿ
ಯೂಹೆ ಮಹತ್ಕಾರ್ಯಸಾಧನಂ ತಾನಲ್ತೇ ೬೬

ವ॥ ಎಂದು ಮತ್ತಂ

ಧೂಮಿನಿ ನೆಗೞ್ತೆ ರಂಜಿಪ
ಗೋಮಿನಿ ಪೆಂಪಿಂ ನಿತಂಬವತಿ ನಿಂಬವತೀ
ನಾಮಂ ಮೆಱೆವಬಲೆಯರೊಳ್
ಧೀಮರ್ಗತ್ವತ್ಪ್ರಶ್ನೆಯರ್ಥಮೆಸೆದಪುವಸುರಾ ೬೭

ವ॥ ಅದೆಂತೆಂದು ರಾಕ್ಷಸಂ ಕೇಳಲಾನಿಂತೆಂದೆಂ

ಮೇದಿನಿಯೊಳ್ ಪ್ರಸಿದ್ಧಿವಡೆದಿರ್ಪ ತ್ರಿಗರ್ತದ ದೇಶದೊಳ್ ನಿಜಾ
ಹ್ಲಾದದಿನಾವಗಂ ಧನಿಕಧನ್ಯಕಧಾನ್ಯಕರೆಂಬ ಮೂವರುಂ
ಸೋದರರಾದ ವೈಶ್ಯಪತಿಗಳ್ ಮೆಱೆಯುತ್ತಿರೆ ತದ್ದರಿತ್ರಿಗಂ
ದಾದುದು ಘೋರಮಪ್ಪ ಬಜನೊರ್ಬರನೊರ್ಬರಡುರ್ತು ತಿಂಬವೋಲ್ ೬೮

ಹೇಳಿ ಹೀಗೆ ಪ್ರಶ್ನಿಸಿದನು–೬೫. 1 "ಕ್ರೂರವಾದುದು ಯಾವುದು ? 2 ಮನೆಯಲ್ಲಿ ಹಿತವುಂಟುಮಾಡುವುದು ಯಾವುದು? 3 ಕಾಮದ ನೆಲೆಯಾವುದು ? 4 ಕಷ್ಟಕರವಾದುದನ್ನು ಸಾಧಿಸಿಕೊಡುವುದು ಯಾವುದು ? ಯಾವುದೆಂದು ಆಲೋಚಿಸಿ ನನಗೆ ಹೇಳು." ವ॥ ಎಂದು ಪ್ರಶ್ನಿಸಲು ನಾನು ಉತ್ತರಿಸಿದೆನು—೬೬. "ಕ್ರೂರವಾದುದು ಹೆಂಗಸಿನ ಹೃದಯ 2 ಸತಿಯರ ಸದ್ಗುಣಗಳು ಗೃಹಸುಖವನ್ನುಂಟುಮಾಡುತ್ತವೆ. 3 ಮನಸ್ಸಿನಲ್ಲಿಸ್ನೇಹದ ಸಂಕಲ್ಪವು ಕಾಮದನೆಲೆ. 4 ಬುದ್ಧಿಯಲ್ಲಿ ಆಳವಾಗಿ ಊಹಿಸುವುದು ಮಹಾಸಾಧಕವು." ವ॥ ಎಂದು ಹೇಳಿ ಮತ್ತೆ—೬೭. "ಅಸುರನೇ ! ಧೂಮಿನಿ, ಪ್ರಸಿದ್ಧಳಾದ ಗೋಮಿನಿ, ನಿತಂಬವತಿ, ನಿಂಬವತೀ—ಎಂದು ಹೆಸರುಳ್ಳ ಅಬಲೆಯರಲ್ಲಿ ನಿನ್ನ ಪ್ರಶ್ನೆಗಳಿಗೆ ಉತ್ತರ ಸಿಕ್ಕುತ್ತದೆ." ವ॥ 'ಅದು ಹೇಗೆ' ಎಂದು ರಾಕ್ಷಸನು ಕೇಳಿದನು. ಅದಕ್ಕೆ ನಾನು ಉತ್ತರ ಕೊಟ್ಟೆನು. ೬೮. "ಮೇದಿನಿಯಲ್ಲಿ ಪ್ರಸಿದ್ಧವಾದ ತ್ರಿಗರ್ತ ದೇಶದಲ್ಲಿ ಧನಿಕ ಧನ್ಯಕ ಧಾನ್ಯಕರೆಂಬ ಮೂವರು ವೈಶ್ಯಪತಿಗಳು ಆನಂದದಿಂದ ವಾಸಿಸುತ್ತಿದ್ದರು. ಒಂದುಸಲ ಒಬ್ಬರು ಇನ್ನೊಬ್ಬರನ್ನು ಹಿಡಿದು ತಿನ್ನುವಂಥ

ಕ್ಷಾಮಮುಡುರ್ತು ಧಾನ್ಯತೃಣಪತ್ರಜಲಂ ತವಿಲಾಗಲೆಲ್ಲರುಂ
ಗೋಮಹಿಷೀಪ್ರತಾನದಡಗಂ ತವೆ ತಿಂದು ನಿರಂತರ ಮನು
ಷ್ಯಾಮಿಷಮುಂ ತಿನಲ್ತೊಡಗಲನ್ಯಜನಂ ನೆಱೆ ತೀರ್ದರ್ ಪೆಂಡಿರಂ
ಪ್ರೇಮದ ಪುತ್ರರಂ ಸೊಸೆಯರಂ ಕ್ರಮದಿಂ ತಿನುತಿರ್ದರಾವಗಂ ೬೯

ವ|| ಅಂತು ಬಱನಱಿಯಟ್ಟಲೊರ್ಬರನೊರ್ಬರ್ ತಿನುತ್ತಿರೆ
ಧನಿಕಂ ಧನ್ಯಂ ಧಾನ್ಯಕ
ನನುಪೂರ್ವಕ್ರಮದಿನೊರ್ಬರೊರ್ಬರ ವನಿತಾ
ಜನಮಂ ತಿನಲನುಗೆಯ್ದರ್
ಮನಮೇಳಿಸಲ್ ಜಠರವಹ್ನಿಯೇಂ ಕೇವಲಮೋ ೭೦

ವ|| ಅಂತು ಧನಿಕ ಧನ್ಯಕರ್ ತಮ್ಮಿರ್ಬರ ಕಾಂತೆಯರನೆಲ್ಲರ್ ಕೂಡಿ ತಿಂದನಂತರಂ ಧಾನ್ಯಕನ ಕಾಂತೆಯಪ್ಪ ಧೂಮಿನಿಯಂ ನಾಳೆ ತಿನಲೆಂದುದ್ಯೋಗಿಸುವುದಂ ಧಾನ್ಯಕನಱಿದು

ಇವರ್ಗಳ ಸಂಗಮಂ ತೊಱೆದು ಕಾನನದೊಳ್ ನವಕಂದಮೂಲಪ
ಲ್ಲವಚಯಭೈಕ್ಷದಿಂ ಬಱನನೊಯ್ಯನೆ ನೀಗುವೆನೆಂದು ಧಾನ್ಯಕಂ
ಯುವತಿಯನಾರ್ಪಿನಿಂ ಪೆಗಲನೇಱಿಸಿಕೊಂಡಿರುಳೆಟ್ದರಣ್ಯಮಾ
ರ್ಗವನೊಲವಿಂದೆ ಪತ್ತಿ ಬರುತಿರ್ದನವಂ ಮಿಗೆ ರಾಕ್ಷಸೇಶ್ವರಾ ೭೧

ಘೋರವಾದ ಕ್ಷಾಮವೊಂದುಂಟಾಯಿತು. ೬೯. ಕ್ಷಾಮವು ಉಗ್ರವಾಯಿತು. ಧಾನ್ಯ ಹುಲ್ಲು ಎಲೆನೀರು ಎಲ್ಲ ತಿಂದು ಮುಗಿದುಹೋಯಿತು. ಅನಂತರ ಎಲ್ಲರೂ ಎಮ್ಮೆ ಹಸು ಮೊದಲಾದ ಪ್ರಾಣಿಗಳ ಮಾಂಸವನ್ನೂ ತಿಂದು ಮುಗಿಸಿದರು, ಕೊನೆಗೆ ಮನುಷ್ಯರ ಮಾಂಸವನ್ನೂ ತಿನ್ನತೊಡಗಿದರು. ಬೇರೆ ಜನ ಮುಗಿಯಲು ಜನರು ತಮ್ಮ ಹೆಂಡಿರನ್ನು ಪ್ರೇಮದ ಮಕ್ಕಳನ್ನೂ ಸೊಸೆಯರನ್ನೂ ಕ್ರಮವಾಗಿ ತಿನ್ನತೊಡಗಿದರು. ವ|| ಹೀಗೆ ಬರವು ಬೆನ್ನುಹತ್ತಲು ಒಬ್ಬರು ಇನ್ನೊಬ್ಬರನ್ನು ತಿನ್ನುತ್ತಿದ್ದರು. ೭೦. ಧನಿಕ ಧನ್ಯ ಧಾನ್ಯಕ ಈ ಮೂವರೂ ಒಂದು ಕ್ರಮದಿಂದ ಒಬ್ಬೊಬ್ಬರ ಹೆಂಡಿರನ್ನು ತಿನ್ನಲು ಸಿದ್ಧರಾದರು. ಜಠರಾಗ್ನಿಯು ಏನು ಸಾಮಾನ್ಯವೇ ? ವ|| ಹೀಗೆ ಧನಿಕ, ಧನ್ಯಕರು ತಮ್ಮಿಬ್ಬರ ಹೆಂಡಿರನ್ನು ಎಲ್ಲರೂ ಸೇರಿ ತಿಂದರು ಅನಂತರ ಧಾನ್ಯಕನ ಹೆಂಡತಿ ಧೂಮಿನಿಯನ್ನು ಮಾರನೆಯದಿನ ತಿನ್ನಲು ಪ್ರಯತ್ನಿಸುತ್ತಿದ್ದರು. ಅದನ್ನು ಧಾನ್ಯಕನು ತಿಳಿದು ೭೧. ರಾಕ್ಷಸರಾಜನೇ ! ಕೇಳು. 'ಇವರ ಸಂಗವನ್ನು ತೊರೆದು ಕಾಡಿನಲ್ಲಿ ಗೆಡ್ಡೆಗೆಣಸು ಎಲೆಗಳನ್ನು ತಿಂದು ಬರಗಾಲವನ್ನು ಕಳೆಯುವೆನು' ಎಂದು ಯೋಚಿಸಿ ಅವನು ಹೆಂಡತಿಯನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ರಾತ್ರಿಯಲ್ಲಿ ಕಾಡಿನ ದಾರಿಯಿಂದ

ವ॥ ಅಂತರಣ್ಯಮಾರ್ಗಕ್ಕೆ ಪೋಪಾಗಳ್

ಕರಚರಣರಹಿತನೊರ್ವಂ
ಪೊರಳುತ್ತಿರಲೂರ ಪೊಱಗೆ ಪೋಟನನೆನ್ನಂ
ಕರುಣಿಸಿ ಪೊರೆದಪರಾರೆಂ
ದು ರೋದನಂಗೆಯ್ಯುತುಂ ಕರಂ ಸುಯ್ಯುತ್ತುಂ ೭೨

ವ॥ ಅಂತಿರ್ದ ಪೋಟನಂ ಧಾನ್ಯಕಂ ಕಂಡು

ಕರುಣಿಸಿಯುವನಂ ಧಾನ್ಯಕ
ನುರುಮುದದಿಂದೊಂದು ಪೆಗಲನೇಱಿಸಿಕೊಂಡಾ
ದರದಿಂ ಮೆಲ್ಲನೆ ನಡೆಗೊಂ
ಡರಣ್ಯಮಂ ಪೊಕ್ಕದೊಂದು ತಾಣದೊಳಿರ್ದಂ ೭೩

ಚೂತಕುಜಾತಪಿಪ್ಪಲಿಯರನೇಱಿಲು ಬಿಕ್ಕೆ ಬೆಳಲ್ ತಳಿರ್ತ ನಾ
ನಾತರು ಶೀವಿದೊಂದು ತರುಮಧ್ಯದೊಳೊಪ್ಪುವಗಾಧಕೂಪದಿಂ
ನೂತನ ಶೋಭೆಯಿಂ ತಳೆದ ತಾಣಮದೊಪ್ಪಿರಲಿರ್ದನಲ್ಲಿ ಸೌ
ಖ್ಯಾತಿಶಯಂ ಕರಂ ನೆಲಸೆ ಧೂಮಿನಿಸಂಯುತನೊಲ್ದು ಧಾನ್ಯಕಂ ೭೪

ವ॥ ಅಂತಿರ್ದು

ಫಲ ಕಂದ ಮೂಲ ನಾನಾ
ಜಲಂಗಳಾನಾರ್ಜಿನಿಂದೆ ತಂದು ನಿತಾಂತಂ
ಲಲನೆಯುಮಾಪೋಟನನ
ಗ್ಗಳದಿಂ ಪೊರೆಯುತ್ತೆ ಧಾನ್ಯಕಂ ಸುಖಮಿರ್ದಂ ೭೫

ಬರುತ್ತಿದ್ದನು. ವ॥ ಹಾಗೆ ಕಾಡಿನ ದಾರಿಯಲ್ಲಿ ಹೋಗುತ್ತಿರುವಾಗ—೭೨. ಊರಿನ ಹೊರಗೆ ಕೈಕಾಲುಗಳಿಲ್ಲದವನೊಬ್ಬನು ನೆಲದ ಮೇಲೆ ಹೊರಳುತ್ತಿದ್ದನು. 'ಅಂಗಹೀನನಾದ ನನ್ನನ್ನು ದಯೆದೋರಿಸಿ ಕಾಪಾಡುವರಾರು ?' ಎಂದು ನಿಟ್ಟುಸುರುಬಿಡುತ್ತಾ ಅವನು ಅಳುತ್ತಾ ಇದ್ದನು. ವ॥ ಹಾಗಿದ್ದ ಅಂಗವಿಕಲನನ್ನು ಧಾನ್ಯಕನು ನೋಡಿ—೭೩. ಕರುಣೆಯಿಂದ ಅವನನ್ನು ತನ್ನ ಒಂದು ಹೆಗಲ ಮೇಲೆ ಏರಿಸಿಕೊಂಡು ಆದರದಿಂದ ನಡೆದನು. ಕ್ರಮವಾಗಿ ಕಾಡನ್ನು ಹೊಕ್ಕು ಒಂದು ಸ್ಥಳ ಸೇರಿಸಿದನು. ೭೪. ಮಾವಿನ ಮರ, ಹಿಪ್ಪೆಮರ, ಅರನೇರಿಲು ಮರ-ಮೊದಲಾದ ಚಿಗುರಿದ ಬಗೆಬಗೆಯ ಮರಗಳು ತುಂಬಿದ್ದ ಸ್ಥಳದಲ್ಲಿ ಮರಗಳ ನಡುವೆ ಒಂದು ಆಳವಾದ ಭಾವಿಯಿದ್ದಿತು. ಅದರಿಂದ ಶೋಭಿಸುತ್ತಿದ್ದ ಒಂದು ಸ್ಥಳದಲ್ಲಿ ನೆಲಸಿ ಧೂಮಿನಿಯೊಡನೆ ಧಾನ್ಯಕನು ಅತಿಸೌಖ್ಯದಿಂದ ಇದ್ದನು. ವ॥ ಹಾಗಿದ್ದು—೭೫. ಹಣ್ಣು ಗೆಣಸುಗೆಡ್ಡೆಗಳನ್ನೂ ನೀರನ್ನೂ ತಂದುಕೊಟ್ಟು ಧೂಮಿನಿಯನ್ನೂ ಅಂಗವಿಕಲನನ್ನೂ ಚೆನ್ನಾಗಿ ಸಾಕುತ್ತಾ ಧಾನ್ಯಕನು

ವ|| ಅಂತಿರ್ದೊಂದು ದಿವಸಂ

ಪಲವು ದಿನಕ್ಕೆ ತಕ್ಕಶನಮಂ ಕಡುಪಿಂ ಗಳಿಸಲ್ಕೆ ವೇಟ್ಕುಮೆಂ
ದಲಸದೆ ಧಾನ್ಯಕಂ ಪಿರಿದು ದೂರದರಣ್ಯಕೆ ಪೋಗಲಿತ್ತಲ
ಗ್ಗಲಿಸಿದಸಂಗತಾಪದೊದವಿಂ ನಿಲಲಾಱದೆ ಮೋಟನೊಳ್ ಮನಂ
ಚಲಿಸದ ಕೂಟಮಂ ಬಯಸಿದಳ್ ಮಿಗೆ ಧೂಮಿನಿ ಸೀಮೆಗೆಟ್ಟವಳ್ ೭೬

ಏಕಾಕಿನಿ ಪತಿವಿರಹಿಣಿ
ಯೇಕಾಂತಸ್ಥಾನಮೊರ್ವ ಪುರುಷಸಮೀಪಂ
ಪ್ರಾಕೃತಸತಿ ತಾನಾಗಿರ
ಲಾಕೆಯ ನಿಜಬುದ್ಧಿ ಚಲಿಸದಿರ್ಪುದೆ ಸತತಂ ೭೭

ವ|| ಅದು ಕಾರಣಂ

ಮೋಟನೊಡಂಬಡದಿರೆಯುಂ
ಬೇಟದ ಕೋಟಲೆಯೊಳವನ ಮೇಲ್ವಾಯ್ದು ಕರಂ
ಕೂಟಮನೊಡರ್ಚಿದಳ್ ಸ್ತ್ರೀ
ನಾಟಕಮಂ ನಂಬುವವನೆ ಗಾವಿಲನಲ್ತೇ ೭೮

ವ|| ಅಂತಾಧೂಮಿನಿ ಕಾಮೋದ್ರೇಕದಿಂ ಮೋಟನೊಳ್ ಕೂಟಮನೆಸಗುತ್ತಿರೆ ಮಱು ದೆವಸಂ

ಸುಖವಾಗಿದ್ದನು. ವ|| ಹಾಗಿದ್ದಾಗ ಒಂದು ದಿವಸ—೭೬. ಹಲವು ದಿನಗಳಿಗೆ ಬೇಕಾಗುವಷ್ಟು ಆಹಾರವನ್ನು ಕೂಡಿಹಾಕಬೇಕೆಂದು ಆಲಸ್ಯವಿಲ್ಲದೆ ಧಾನ್ಯಕನು ದೂರದ ಕಾಡಿಗೆ ಹೋದನು. ಇತ್ತ ಮಿತಿಮೀರಿದ ಕಾಮತಾಪವನ್ನು ತಡೆಯಲಾರದೆ ನೀತಿಗೆಟ್ಟ ಧೂಮಿನಿಯು ಅಂಗವಿಕಲನೊಡನೆ ಸಂಭೋಗವನ್ನು ಬಯಸಿದಳು. ೭೭. ಏಕಾಕಿನಿ, ಪತಿಯಿಂದ ಅಗಲಿದವಳು. ಯಾರೂ ಇಲ್ಲದ ಏಕಾಂತವಾದ ಜಾಗ, ಪುರುಷನ ಸಾಮೀಪ್ಯ, ಸಂಸ್ಕೃತಿಯಿಲ್ಲದ ಹೆಂಗಸು. ಹೀಗಿರುವಾಗ ಆವಳ ಬುದ್ಧಿಯು ಚಲಿಸದೆ ಇರುತ್ತದೆಯೇ ? ವ|| ಆದರೆ ೭೮. ಅಂಗವಿಕಲನು ಅವಳೊಡನೆ ಸಂಭೋಗಕ್ಕೆ ಒಪ್ಪಲಿಲ್ಲ. ಆಗ ಅವಳು ಕಾಮಪೀಡೆಯನ್ನು ತಡೆಯಲಾರದೆ ಬಲಾತ್ಕಾರವಾಗಿ ಅವನ ಮೇಲೆ ಬಿದ್ದು ಸಂಭೋಗವನ್ನು ಮಾಡಿದಳು. ಸ್ತ್ರೀಯರ ನಾಟಕವನ್ನು ನಂಬುವವನು ದಡ್ಡನಲ್ಲವೇ ? ವ|| ಹಾಗೆ ಧೂಮಿನಿಯು ಕಾಮೋದ್ರೇಕದಿಂದ ಅಂಗವಿಕಲನೊಡನೆ

ವನತೃಣಧಾನ್ಯಮಂ ಸುರಸಪಕ್ವಫಲಂಗಳನಿಂಪುವೆತ್ತ ಮಾಂ
ಸಮನತಿಶೀಪೆಯುಪ್ಪ ಮಧುವಂ ಪಲವುಂ ದಿವಸಕ್ಕೆ ತಕ್ಕ ವ
ಸ್ತುವನನುರಾಗದಿಂ ಗಳಿಸಿಕೊಂಡು ನಿಜಾಂಗನೆಯಿರ್ದ ತಾಣಮಂ
ತವಕದಿನೆಯ್ದಿದಂ ಪದೆದು ಧಾನ್ಯಕನುಗ್ರನಿದಾಘ ಕಾಲದೊಳ್ ೭೯

ವ॥ ಅಂತು ಧಾನ್ಯಕಂ ಬಂದು ಪೊತ್ತ ಪೊಱೆಯಂ ಪೊಱಗಿರಿಸಿ

ಮಾರ್ಗಶ್ರಮದಿಂ ಬೆಮರ್ಗಳ್
ಭೋರ್ಗರೆದವಯವದೊಳೆಯ್ದೆ ಸುರಿಯುತ್ತಿರೆ ಸ
ನ್ಮಾರ್ಗನಿಧಿ ವೈಶ್ಯಪುತ್ರಂ
ನೀರ್ಗುಡಿಯಲ್ ಬೇಡಿದಂ ನಿಜಪ್ರಿಯಸತಿಯಂ ೮೦

ವ॥ ಅಂತು ನೀರ್ಗುಡಿಯಲ್ ಬೇಡಲೊಡಂ

ನರಳುತ್ತುಂ ಸುಯ್ಯುತ್ತುಂ
ಶರೀರ ಪಶಮಲ್ತೆನುತ್ತೆ ಧೂಮಿನಿ ಪತಿಗ
ಚ್ಚರಿಯೆನೆ ಸೇದೆಯ ನೇಣಂ
ಕರಗಮನೊಲ್ದಿತ್ತು ಸೇದಿ ನೀರ್ಗುಡಿಯೆಂದಳ್ ೮೧

ವ॥ ಎಂದೊಡಾತಂ ನೀರನೆಯ್ದುತಿರ್ಪಾಗಳ್

ಸಲೆ ಸಂಧ್ಯಾಂಗನೆ ಪಶ್ಚಿಮ
ಜಲನಿಧಿಯೊಳ್ ಜಲಜಮಿತ್ರನಂ ನೂಂಕುವವೋಲ್
ಮುಳಿಸಿಂ ಧೂಮಿನಿ ಕೂಪ
ಸ್ಥಲದೊಳ್ ಧಾನ್ಯಕಪನಳುರ್ದು ನೂಂಕಿದಳಾಗಳ್ ೮೨

ಸಂಭೋಗವನ್ನು ನಡೆಯಿಸುತ್ತಿರಲು ಮೂರನೆಯ ದಿವಸ—೭೯. ಕಾಡಿನ ಒಂದು ಜಾತಿಯ ಹುಲ್ಲಿನಿಂದ ಬೆಳೆಯುವ ಧಾನ್ಯವನ್ನೂ, (ಸಾವೆ) ರಸಭರಿತವಾದ ಮಾಗಿದ ಹಣ್ಣುಗಳನ್ನೂ, ಸೊಗಸಾದ ಮಾಂಸವನ್ನೂ ತುಂಬ ಸಿಹಿಯಾದ ಜೇನನ್ನೂ, ಹಲವು ದಿವಸಗಳಿಗೆ ಸಾಕಾಗುವಷ್ಟು ಇತರ ವಸ್ತುಗಳನ್ನೂ ಪ್ರೀತಿಯಿಂದ ಸಂಗ್ರಹಿಸಿಕೊಂಡು ಧಾನ್ಯಕನು ಉಗ್ರವಾದ ಬೇಸಿಗೆಯಲ್ಲಿ ತನ್ನ ಹೆಂಡತಿಯಿದ್ದ ಸ್ಥಳಕ್ಕೆ ತವಕದಿಂದ ಬಂದನು. ವ॥ ಹಾಗೆ ಧಾನ್ಯಕನು ಬಂದು ಹೊತ್ತ ಹೊರೆಯನ್ನು ಹೊರಗೆ ಇರಿಸಿ— ೮೦. ಸನ್ಮಾರ್ಗ ನಿಧಿಯಾದ ವೈಶ್ಯಪುತ್ರನು ನಡೆದು ತುಂಬ ಆಯಾಸಗೊಂಡಿದ್ದನು. ಮೈಯಲ್ಲಿ ಬೆವರು ಉಕ್ಕಿ ಹರಿಯುತ್ತಿತ್ತು. ಈ ಸ್ಥಿತಿಯಲ್ಲಿ ಆವನು ತನ್ನ ಹೆಂಡತಿಯನ್ನು ಕುಡಿಯಲು ನೀರು ಕೇಳಿದನು. ವ॥ ಹಾಗೆ ಕುಡಿಯಲು ನೀರನ್ನು ಬೇಡಿದಾಗ ೮೧. ನರಳುತ್ತಾ ನಿಟ್ಟುಸಿರುಬಿಡುತ್ತಾ ಶರೀರ ಸ್ಥಿತಿಯು ಸರಿಯಾಗಿಲ್ಲವೆಂದು ಹೇಳಿ ಧೂಮಿನಿಯು ಗಂಡನಿಗೆ ಸೇದುವ ಹಗ್ಗವನ್ನು ಬಿಂದಿಗೆಯನ್ನೂ ಕೊಟ್ಟು 'ಸೇದಿ ನೀರು ಕುಡಿ' ಎಂದು ಹೇಳಿದಳು. ಧಾನ್ಯಕನಿಗೆ ಆಶ್ಚರ್ಯವಾಯಿತು. ವ॥ ಅವನು ನೀರಿನ ಹತ್ತಿರಕ್ಕೆ ಹೋಗುತ್ತಿರುವಾಗ--೮೨. ಸಂಧ್ಯಾ ಎಂಬ ನಾರಿಯು ಸೂರ್ಯನನ್ನು

ತೊಲಗದ ಮೃತ್ಯುದೇವತೆಯುವೊಲ್ ಸತಿ ಪಿಂತನೆ ಬಂದು ಗಂಡನಂ
ತಲೆಕೆಳಗಾಗಿ ಗುಣ್ಪೆಸೆವ ಬಾವಿಯೊಳೋವದೆ ನೂಂಕಿ ಮೋಟನೊಳ್
ಚಲಿಸದ ಸಂಗಮಂ ತಳೆದು ತದ್ವನದೊಳ್ ಸಲೆ ನಾಲ್ಕೆರಟ್ದಿನಂ
ನೆಲಸಿ ಬಟಿಕ್ಕವಳ್ ಪದೆದು ಮೋಟನನಾಂತು ತಳರ್ದಳಟ್ತಿಯಿಂ ೮೩

ತಾಟಕೆಯಂತೆ ವರ್ತಿಸುವ ಧೂಮಿನಿ ಬಾವಿಗೆ ನೂಂಕಿಯಳ್ದನಂ
ಮೋಟನನೆತ್ತಿಕೊಂಡು ಮನವೊಲ್ದು ಪತಿವ್ರತೆಯೆಂಬುದೊಂದು ಬ
ಲ್ನಾಟಕಮಂ ಕರಂ ನಟಿಸಿ ನಾಲ್ದೆಸೆಯೊಳ್ ತೊಟಲುತ್ತದೊಂದು ಭ
ದ್ರಾಟವಿಯೆಂಬ ಪತ್ತನಮನೆಯ್ದಿದಳಾಕೆ ಮನೋನುರಾಗದಿಂ ೮೪

ವ॥ ಅಂತು ಭದ್ರಾಟವಿಯೆಂಬ ಪತ್ತನಕ್ಕೆ ಬಂದು ಅಲ್ಲಿ ನೀತಿವಿಳಾಸನೆಂಬರಸಿನಿಂ ಮನ್ನಿಸಿಕೊಳುತ್ತಿರೆ

ಮಡದಿಯ ಭರ್ತೃಭಕ್ತಿ ಪೊಸತಲ್ತೆ ಕರಂ ಪತಿ ಮೋಟನಾದೊಡಂ
ಬಿಡದನುರಾಗದಿಂ ಪೆಗಲನೇಱಿಸಿಕೊಂಡು ತೊಟಲ್ದು ನಿಂದೆಯೊಳ್
ತೊಡರದೆ ಸರ್ವರುಂ ತನಗೆ ಕೆಯ್ಮುಗಿದಿರ್ಪತಿಭಾಗ್ಯದೊಳ್ಪಮಂ
ಪಡೆದವಳಾವಳೀಕೆಯುವೊಲೆಂದೊಸೆದಿರ್ಪುದು ಪೌರನಾರಿಯರ್ ೮೫

ಪಶ್ಚಿಮ ಸಮುದ್ರಕ್ಕೆ ನೂಕುವ ಹಾಗೆ, ಧೂಮಿನಿಯು ಕೋಪದಿಂದ ಧಾನ್ಯಕನನ್ನು ಭಾವಿಗೆ ನೂಕಿದಳು. ೮೩. ಬೆನ್ನು ಬಿಡದ ಮೃತ್ಯುದೇವತೆಯಂತೆ ಧೂಮಿನಿಯು ಗಂಡನ ಹಿಂದೆಯೇ ಬಂದು ಅವನನ್ನು ತಲೆಕೆಳಗಾಗಿ ಭಾವಿಗೆ ದಯೆತೋರದೆ ತಳ್ಳಿದಳು. ಅಂಗವಿಕಲನಲ್ಲಿ ಎಡಬಿಡದೆ ಕೂಡಿದಳು. ಆ ಕಾಡಿನಲ್ಲಿ ನಾಲ್ಕೆರಡು ದಿನಗಳು ವಾಸ ಮಾಡಿದಳು. ಬಳಿಕ ಅವಳು ಆ ಅಂಗವಿಕಲನನ್ನು ಕರೆದುಕೊಂಡು ಅಲ್ಲಿಂದ ಹೊರಟಳು. ೮೪. ತಾಟಕೆಯಂತೆ ನಡೆದುಕೊಳ್ಳುವ ಧೂಮಿನಿಯು ಗಂಡನನ್ನು ಭಾವಿಗೆ ತಳ್ಳಿ ಮೋಟನನ್ನು ಹೊತ್ತುಕೊಂಡು ಹೊರಟಳು. ಆನಂದದಿಂದ ಪತಿವ್ರತೆಯೆಂಬಂತೆ ನಾಟಕವನ್ನಾಡಿದಳು. ನಾಲ್ಕು ದಿಕ್ಕುಗಳಲ್ಲಿಯೂ ಅಲೆದಾಡಿದಳು. ಕೊನೆಗೆ ಅನುರಾಗದಿಂದ ಭದ್ರಾಟವಿಯೆಂಬ ಪಟ್ಟಣವನ್ನು ಸೇರಿದಳು. ವ॥ ಹಾಗೆ ಭದ್ರಾಟವಿಯೆಂಬ ನಗರಕ್ಕೆ ಬಂದು ಅಲ್ಲಿ ನೀತಿವಿಲಾಸನೆಂಬ ಅರಸನಿಂದ ಮನ್ನಣೆಯನ್ನು ಪಡೆದಳು. ೮೫. 'ಈ ಹೆಂಡತಿಯ ಪತಿಭಕ್ತಿಯು ಹೊಸರೀತಿಯದು. ಪತಿಯು ಅಂಗವಿಕಲನಾಗಿದ್ದರೂ ಬಿಡದೆ ನಿಂದಿಸದೆ ಅನುರಾಗದಿಂದ ಹೆಗಲಮೇಲೆ ಏರಿಸಿಕೊಂಡು ತಿರುಗುತ್ತಾಳೆ. ಎಲ್ಲರೂ ಹೀಗೆಂದು ಅವಳಿಗೆ ಕೈಮುಗಿಯುತ್ತಾರೆ. ಇಂಥ ಭಾಗ್ಯವಿಶೇಷವನ್ನು ಪಡೆದವಳು ಇವಳಿಗಿಂತ ಬೇರೆ ಯಾರಿದ್ದಾರೆ ? ಎಂದು ನಗರದ

ವ॥ ಅಂತು ಭದ್ರಾಟವಿಯೊಳಿರಲಿತ್ತಲ್

ಕೆಲವರ್ ಪಥಿಕರ್ ಬರುತ
ಗ್ಗಲಿಸಿದ ತೃಷೆಯಿಂ ಬಿಗುರ್ತು ತತ್ಕಾನನದೊಳ್
ಜಲಮನರಸುತ್ತೆ ಬಂದಾ
ಗಳೆ ಕಂಡರ್ ವೈಶ್ಯನಿರ್ದ ಕೂಪಸ್ಥಲಮಂ ೮೬

ವ॥ ಅಂತಾಪಥಿಕರಾಬಾವಿಯಂ ನೋಟ್ಪಿನಂ

ಸ್ತ್ರೀಗೆ ಕಡುಕೂರ್ತ ಮನುಜರ
ಧೋಗತಿಯೊಳ್ ಬೀಟ್ವರೆಂಬುದಂ ಸಲೆ ತೋರ್ಪಂ
ತಾಗಳ್ ಧಾನ್ಯಕನಿರ್ದ
ನಾಗಾಲಯದಂತಿರೆಸೆದ ಕೂಪಾಂತರದೊಳ್ ೮೭

ವ॥ ಅಂತಿರ್ದನಂ ಕಂಡು

ತೋಳ ಕಡುಪಿಂದದೊರ್ಬ ದ
ಯಾಳು ಮಹಾಕೂಪದಿಂದೆ ಧಾನ್ಯಕನಂ ನೇ
ಣ್ಗೊಲಿಂ ತೆಗೆಯಲ್ ಬಂದಂ
ಗಾಳದ ನೇಣ್ ತೊಡರ್ದ ಮೀನವೋಲ್ ತಡಿಗಾಗಲ್ ೮೮

ವ॥ ಅಂತು ತೆಗೆಯೆ ಧಾನ್ಯಕಂ ಪುನರ್ಜಾತನಾಗಿ

ಕೃಪೆಯಿಂದಂ ಪ್ರಾಣಮನೊ
ಲ್ದುಪಕರಿಸಿದವಂಗೆ ಮಾಟ್ಪನಾವಂ ಕೇಳ್ ಪ್ರ
ತ್ಯುಪಕಾರಮನೆಂದು ನಿಪಾ
ಧಿಪನವನಂ ಪಲವು ತೆಱದೊಳೊಲವಿಂ ಪೊಗಟ್ಪಂ ೮೯

ಸಾರಿಯರೆಲ್ಲರೂ ಹೊಗಳಿದರು. ವ॥ ಹೀಗೆ ಅವಳು ಭದ್ರಾಟವಿ ನಗರದಲ್ಲಿದ್ದರು-ಅತ್ತ ೮೬. ಕೆಲವರು ದಾರಿಗರು ಆ ದಾರಿಯಲ್ಲಿ ಬರುತ್ತಾ ವಿಪರೀತ ಬಾಯಾರಿಕೆಯಿಂದ ಪೀಡಿತರಾಗಿ ನೀರನ್ನು ಹುಡುಕುತ್ತಾ ಆ ವೈಶ್ಯನು (ಧಾನ್ಯಕನು) ಬಿದ್ದಿದ್ದ ಬಾವಿಯನ್ನು ಕಂಡರು. ವ॥ ಹಾಗೆ ಆ ದಾರಿಗರು ಆ ಬಾವಿಯನ್ನು ನೋಡಲು-೮೭. ಸ್ತ್ರೀವ್ಯಾಮೋಹವುಳ್ಳ ಮನುಷ್ಯರು ಅಧೋಗತಿಯನ್ನು ಪಡೆಯುವರು ಎಂಬ ವಿಷಯವನ್ನು ತೋರಿಸುವಂತೆ ಆಗ ಆ ಧಾನ್ಯಕನು ಪಾತಾಳದಂತಿದ್ದ ಬಾವಿಯಲ್ಲಿ ಕಾಣಿಸಿದನು. ವ॥ ಹಾಗಿದ್ದವನನ್ನು ಕಂಡು – ೮೮. ಒಬ್ಬ ದಯಾಳು ತೋಳಬಲದಿಂದ ಆ ಧಾನ್ಯಕನನ್ನು ಗಾಳದ ಹಗ್ಗಕ್ಕೆ ಸಿಕ್ಕಿದ ಮೀನನ್ನು ದಡಕ್ಕೆಳೆಯುವಂತೆ ಹಗ್ಗ ಕಟ್ಟಿದ ಕೋಲಿನಿಂದ ಹೊರಕ್ಕೆ ತೆಗೆದನು. ವ॥ ಹಾಗೆ ಹೊರಕ್ಕೆ ತೆಗೆಯಲು ಧಾನ್ಯಕನು ಪುನರ್ಜನ್ಮ ಹೊಂದಿದನು. ೮೯. 'ದಯೆಯಿಂದ ಪ್ರಾಣಗಳನ್ನು ಉಳಿಸಿ ಉಪಕಾರ ಮಾಡಿದವನಿಗೆ ಪ್ರತ್ಯುಪಕಾರವನ್ನು ಮಾಡಬಲ್ಲವನು ಯಾವನಿದ್ದಾನೆ? ಎಂದು

ವ॥ ಅಂತು ಪೊಗೞ್ದು ಸಂತೋಷಮನೆಯ್ದಿಯನಂತರಂ

ಅವಿರಳ ದೇಶಾಂತರವಾ
ರ್ಗವಿನೋದದಿನೆಯ್ದಿ ಧಾನ್ಯಕಂ ಬರೆವರೆ ಸಂ
ಭವಿಸಿದ ಮುದದಿಂ ಭದ್ರಾ
ಟವಿಗೇೞ್ತಂದಂ ಯದೃಚ್ಛೆಯಿಂ ಕೇಳಸುರಾ ೯೦

ವ॥ ಅಂತು ಭದ್ರಾಟವಿಗೆ ಬಂದು

ಕೇರಿಯ ಚೆಲ್ವನಂಗಡಿಯ ಸೊಂಪನಿಳಾಧಿಪಗೇಹರಮ್ಯಮಂ
ವಾರವಿಳಾಸಿನೀಗೃಹವಿಳಾಸಮನೊಪ್ಪುವ ಸೂಳೆಗೇರಿಯಾ
ಕಾರಮನಾನೆಸಾಲೆಗಳ ಸಂಭ್ರಮಮಂ ಪುರಮಧ್ಯದೇವತಾ
ಗಾರವಿಶೇಷಮಂ ಪದೆದು ಧಾನ್ಯಕನೀಕ್ಷಿಸುತಿರ್ದನಾವಗಂ ೯೧

ವ॥ ಅಂತೆಲ್ಲೆಡೆಯೊಳ್ ತೊಟಲುತ್ತಿರ್ದ ಧಾನ್ಯಕನಂ ಕೈತವಪತಿವ್ರತೆಯಪ್ಪ ಧೂಮಿನಿ ಕಂಡು

ನೀತಿವಿಳಾಸ ನೃಪಾಲಂ
ಗೋತಱಿಪುವನಿವನನೀಕ್ಷಣಂ ಕೊಲಿಸುವೆನೆಂ
ದಾತುರದೊಳೆಯ್ದಿದಳ್ ದು
ರ್ನೀತಿಯೊಳರಮನೆಗೆ ಧೂರ್ತೆ ಧೂಮಿನಿಯಾಗಳ್ ೯೨

ವ॥ ಅಂತರಮನೆಗೆ ಪೋಗಿ ಬಾಗಿಲೊಳಿರ್ದು ಪತಿವ್ರತೆ ಬಂದಿರ್ಪಳೆಂದು ನೀತಿವಿಳಾಸಂಗಱಿಪೆಂದು ದೌವಾರಿಕರ್ಗೆ ಪೇೞಲವರ್ ಪೋಗಿ

ಧಾನ್ಯಕನು ಅವನನ್ನು ಬಗೆಬಗೆಯಿಂದ ಹೊಗಳಿದನು. ವ॥ ಹಾಗೆ ಹೊಗಳಿ ಸಂತೋಷವನ್ನು ಪಡೆದನು. ಅನಂತರ– ೯೦. ಅಸುರನೇ ಕೇಳು. ಧಾನ್ಯಕನು ಎಡೆಬಿಡದೆ ಬೇರೆಬೇರೆ ದೇಶಗಳಲ್ಲಿ ಸಂಚರಿಸುತ್ತಾ ಯದೃಚ್ಛೆಯಿಂದ ಭದ್ರಾಟವೀನಗರಕ್ಕೆ ಬಂದನು. ವ॥ ಹಾಗೆ ಭದ್ರಾಟವಿಗೆ ಬಂದು– ೯೧. ಕೇರಿಗಳ ಅಂದ, ಅಂಗಡಿಗಳ ಸೊಂಪು, ಅರಮನೆಯ ಚೆಂದ, ಸೂಳೆಯರ ಮನೆಗಳ ವಿಲಾಸ, ಸೂಳೆಗೇರಿಯ ಆಕಾರ, ಗಜಶಾಲೆಗಳ ಸಂಭ್ರಮ, ನಗರದ ಮಧ್ಯದಲ್ಲಿದ್ದ ವಿಶೇಷವಾದ ದೇವಾಲಯ–ಇವುಗಳನ್ನೆಲ್ಲ ಧಾನ್ಯಕನು ಸಂತೋಷದಿಂದ ನೋಡುತ್ತಾ ಬಂದನು. ವ॥ ಹೀಗೆ ಎಲ್ಲಕಡೆ ತಿರುಗುತ್ತಿದ್ದ ಧಾನ್ಯಕನನ್ನು ಪತಿವ್ರತೆಯಂತೆ ನಟಿಸುತ್ತಿದ್ದ ಧೂಮಿನಿಯು ನೋಡಿ ೯೨. 'ನೀತಿವಿಳಾಸ ಮಹಾರಾಜನಿಗೆ ಹೇಳಿ ಈ ಕ್ಷಣ ಇವನನ್ನು ಕೊಲ್ಲಿಸುವೆನು' ಎಂದು ಯೋಚಿಸಿಕೊಂಡು ಕೆಟ್ಟಭಾವನೆಯಿಂದ ಆ ಧೂರ್ತೆ ಧೂಮಿನಿಯು ಅರಮನೆಗೆ ಆತುರವಾಗಿ ಹೋದಳು. ವ॥ ಅವಳು ಅರಮನೆಗೆ ಹೋಗಿ ಬಾಗಿಲಲ್ಲಿ ನಿಂತಳು. 'ಪತಿವ್ರತೆಯು ಬಂದಿದ್ದಾಳೆ ಎಂದು ನೀತಿವಿಳಾಸನಿಗೆ ತಿಳಿಸಿ. ಎಂದು ಬಾಗಿಲು ಕಾಯುವ

ನೃಪತಿ ಪತಿವ್ರತೆ ಬಂದಿ
ರ್ದಪಳರಮನೆಯೆಸೆವ ಬಾಗಿಲೊಳ್ ಸಮಯಂಬಾ
ರ್ದುಪಚರಿಸಿ ಕರೆಯಲ್ಲೋ ಕಾ
ಣ್ಬ ಪೊೞ್ತಿದಲ್ಲೆಂದು ಕಳಿಪಲೋ ಬೆಸಸೊಲವಿಂ ೯೩

ವ|| ಎಂಬುದುಮರಸಂ ಪರಮಪತಿಭಕ್ತೆಯಂ ಕರೆಯೆಂದು ಕರೆಯಿಸಲವಳ್ ಬಂದರಮನೆಯಂ ಪೊಕ್ಕರಸನಂ ಕಂಡೀತೆಂದಳ್

ನೀತಿವಿಳಾಸ ಕೇಳ್ ಪೆಗಲೊಳಾಂತ ಮದೀಶನ ಹಸ್ತಪಾದಮಂ
ಘಾತಕನಾರ್ಪಿನಿಂ ಕಡಿದ ಪಾತಕನಿಲ್ಲಿಗೆ ಬಂದನಾತನಂ
ಭೂತಪಿಶಾಚ ಸಂತತಿಗೆ ದಿಗ್ಬಲಿಗೊಟ್ಟು ಕರಂ ಪತಿವ್ರತಾ
ಪ್ರೀತಿಯನೀವುದೆಂದು ನೃಪನೊಳ್ ಮಿಗೆ ಧೂಮಿನಿ ಪೇಳ್ದಳಾಕ್ಷಣಂ ೯೪

ವ|| ಅಂತು ಪೇೞ್ದು ಮತ್ತಂ

ಅತಿದುಷ್ಟಶಾಸ್ತಿ ಶಿಷ್ಟ
ಪ್ರತಿಪಾಲನೆಯಿಲ್ಲದರಸಿನರಸುತನಂ ಹಾ
ಸ್ಯತೆವಡೆದು ಹಗರಣಿಗರರ
ಸುತನಂ ತನಗಕ್ಕುಮಲ್ತೆ ಕಜ್ಜದ ಕಡೆಯೊಳ್ ೯೫

ವನಿಗೆ ಹೇಳಿದಳು. ಅವರು ಒಳಕ್ಕೆ ಹೋಗಿ - ೯೩. 'ಮಹಾರಾಜನೆ! ಪತಿವ್ರತೆಯು ಅರಮನೆಯ ಬಾಗಿಲಿನಲ್ಲಿ ಬಂದು ನಿಂತಿದ್ದಾಳೆ. ಸಮಯೋಚಿತವಾಗಿ ಉಪಚರಿಸಿ ಒಳಕ್ಕೆ ಕರೆಯಲೋ? ಇದು ಕಾಣುವ ಸಮಯವಲ್ಲೆಂದು ಹೇಳಿ ಕಳುಹಿಸಿಬಿಡಲೋ? ಅಪ್ಪಣೆಮಾಡಿ. ವ|| ಎಂದು ಹೇಳಲು ರಾಜನು 'ಪರಮಪತಿಭಕ್ತೆಯನ್ನು ಒಳಕ್ಕೆ ಕರೆ' ಎಂದು ಹೇಳಿದನು. ಕರೆಯಿಸಲು ಅವಳು ಬಂದು ಅರಮನೆಯನ್ನು ಪ್ರವೇಶಿಸಿದಳು. ಮತ್ತು ರಾಜನನ್ನು ಕಂಡು (ಹೇಳಿದಳು) ೯೪. 'ನೀತಿವಿಲಾಸನೇ ! ಕೇಳು. ಹೆಗಲಮೇಲೆ ನಾನು ಹೊರುವ ನನ್ನ ಪತಿಯ ಕೈಕಾಲುಗಳನ್ನು ಕಡಿದ ಘಾತುಕನು ಈ ಊರಿಗೆ ಬಂದಿದ್ದಾನೆ! ಆತನನ್ನು ಭೂತಪಿಶಾಚಿಗಳಿಗೆ ದಿಗ್ಬಲಿ ಹಾಕಿ ಈ ಪತಿವ್ರತೆಗೆ ಪ್ರೀತಿಯನ್ನುಂಟುಮಾಡಬೇಕು' ಎಂದು ಧೂಮಿನಿಯು ಅರಸನಿಗೆ ಹೇಳಿದಳು, ವ|| ಹಾಗೆ ಹೇಳಿ ಮತ್ತೆ- ೯೫. "ಅತಿದುಷ್ಟರನ್ನು ದಂಡಿಸುವುದು ಸಾಧುಗಳನ್ನು ರಕ್ಷಿಸುವುದು ರಾಜಧರ್ಮ. ಇದನ್ನು ಮಾಡದ ಅರಸನ ಅರಸುತನವು ಹಾಸ್ಯಾಸ್ಪದವಾಗುತ್ತದೆ. ಮತ್ತು ಕಾರ್ಯದ ಕೊನೆಯಲ್ಲಿ ಒಣಜಂಭದವರ ಅರಸು

ಮೞೆಕೊಳ್ಳದು ಕಾಲದೊಳಿಳೆ
ಫಲವಾಗದು ಧಾನ್ಯವಸ್ತು ವಾಹನನಿಚಯಂ
ನೆಲಸದು ಪತಿವ್ರತಾವಾ
ಕ್ಯಲಂಘನಂಗೆಯ್ಯಲರಸ ಕೇಳಿದು ಸತ್ಯಂ ೯೬

ವ॥ ಎಂದು ದೃಢಮಪ್ಪಂತು ಪೇೞ್ದವನಂ ಕೊಲ್ಲಿಸಿದೊಡಲ್ಲದೆ ಇಲ್ಲಿಂ ಪೋಗೆನೆಂದಿರ್ಪುದುಂ

ಪುರಮಿದು ಚೋದ್ಯಮೆನಲಾ
ದುರಾತ್ಮನಂ ಕೇರಿಕೇರಿಯೊಳ್ ಮೆಱಸಿ ದಿಶಾಂ
ತರದೊಳ್ ಕಡಿದು ಬಿಸುಟ್ಟತಿ
ನಿರವಯಲೆಯ್ದಿಸುವುದೆಂದು ಬೆಸಸಿದನರಸಂ ೯೭

ವ॥ ಅಂತು ಬೆಸಸಲೊಡಂ ತಳವಱರ್ ಪತಿವ್ರತೆಯ ಗಂಡನ ಕೆಯ್ ಕಾಲ್ಗಳಂ ಕಡಿದ ದುರಾತ್ಮಂ ಸಿಲ್ಕಿದನೆಂದಾತನಂ ಪಿಡಿದು

ಪೆಡಗೆಯ್ಯಂ ಪಿಡಿದೀೞ್ದು ಕಟ್ಟಿ ತಲೆಯೊಳ್ ಪೂಮಾಲೆಯಂ ಸುತ್ತಿ ಬೊ
ಬ್ಬಿಡುತುಂ ಭಂಡಿಯ ಮೇಲೆ ಕುಳ್ಳಿರಿಸಿ ನಾನಾವಾದ್ಯದಿಂ ಪೆರ್ಚಿನಿಂ
ಗಡಿಯೊಳ್ ಕೇರಿಯೊಳಾತನಂ ಮೆಱಸಿ ಖಂಡಂಗೊಯ್ವನೆಂಬಾಗಳಾಂ
ಕಡಿದಂಗಂಗಳ ಮೋಟನಂ ಕರಸಿಮೆಂದಂ ಧಾನ್ಯಕಂ ಧೈರ್ಯದಿಂ ೯೮

ತನವು ನಿನಗೆ ಬರುತ್ತದೆ. ಸತ್ವವಿಲ್ಲದ ಜಂಭಗಾರರಾಜನೆನ್ನುತ್ತಾರೆ. ೯೬. ಅರಸನೇ ! ಕೇಳು. ಪತಿವ್ರತೆಯ ಮಾತನ್ನು ಮೀರಿದರೆ ಸಕಾಲದಲ್ಲಿ ಮಳೆಬೀಳುವುದಿಲ್ಲ. ಭೂಮಿಯಲ್ಲಿ ಧಾನ್ಯಾದಿಗಳು ಬೆಳೆದು ಫಲ ನೀಡುವುದಿಲ್ಲ. ವಾಹನಗಳು ಸ್ಥಿರವಾಗಿರುವುದಿಲ್ಲ. ಇದು ಸತ್ಯ" ವ॥ ಎಂದು ಧೃಢವಾಗುವಂತೆ ಹೇಳಿ 'ಇವನನ್ನು ಕೊಲ್ಲಿಸಿದ ಹೊರತು ನಾನು ಇಲ್ಲಿಂದ ಹೋಗುವುದಿಲ್ಲ' ಎಂದು ಹೇಳಿದಳು, ಆಗ ೯೭. 'ಪುರವೇ ಆಶ್ಚರ್ಯಪಡುವಂತೆ ಆ ದುರಾತ್ಮನನ್ನು ಹಿಡಿಸಿ ಕೇರಿಕೇರಿಯಲ್ಲಿ ಮೆರವಣಿಗೆ ಮಾಡಿ ಮೆರೆಯಿಸಬೇಕು. ಅನಂತರ ದಿಗಂತಕ್ಕೆ ಕೊಂಡು ಹೋಗಿ ಕಡಿದು ಬಿಸಾಡಿ ನಿಶ್ಶೇಷವಾಗಿ ಕೊಲ್ಲಬೇಕು' ಎಂದು ಅರಸನು ಅಪ್ಪಣೆ ಮಾಡಿದನು. ವ॥ ಹಾಗೆ ಹೇಳಲು ಕೂಡಲೇ ತಳವಾರರು ಪತಿವ್ರತೆಯ ಗಂಡನ ಕೈಕಾಲುಗಳನ್ನು ಕಡಿದ ದುರಾತ್ಮನು ಸಿಕ್ಕಿದನೆಂದು ಆ ಧಾನ್ಯಕನನ್ನು ಹಿಡಿದು – ೯೮. ಕೈಗಳನ್ನು ಹಿಂದಕ್ಕೆ ಎಳೆದು ಸೇರಿಸಿ ಕಟ್ಟಿದರು. ತಲೆಗೆ ಹೂಮಾಲೆಯನ್ನು ಸುತ್ತಿದರು. ಬೊಬ್ಬೆಹಾಕುತ್ತಾ ಬಂಡಿಯ ಮೇಲೆ ಕುಳ್ಳಿರಿಸಿದರು. 'ವಿಧವಿಧವಾದ್ಯಗಳನ್ನು ಬಾರಿಸುತ್ತಾ ಕೇರಿಕೇರಿಗಳಲ್ಲೂ ಮೆರೆಯಿಸಿ ತುಂಡು ಮಾಡುವೆವು !' ಎಂದು ಹೇಳಿದರು, ಆಗ ಧಾನ್ಯಕನು ಧೈರ್ಯದಿಂದ 'ನಾನು ಕೈಕಾಲುಗಳನ್ನು ಕಡಿದ ಮೋಟನನ್ನು ಕರೆಯಿಸಿ'

ವ॥ ಎಂಬುದುಮಾ ತಳವಱರಿವನಂ ದಿಗ್ಬಲಿಗುಡುವುದಂ ನೋಡಲ್ವೇೞ್ಕೆಂದು ಮೋಟನಂ ಧಾನ್ಯಕನೆಡೆಗೆ ಕೊಂಡು ಬರ್ಪುದುಂ

ಕಾಣಲೊಡನಶ್ರುವಿಂ ಮುಂ
ಗಾಣದೆ ಗಡಗಡನೆ ನಡುಗಿ ಮೋಟಂ ತನ್ನಾ
ಪ್ರಾಣಂ ಬಂದಂತಾಗಳ್
ಮಾಣದೆ ಧಾನ್ಯಕನ ಮೆಱೆವ ಕಾಲ್ಗೆಱಗಿರ್ದಂ ೯೯

ವ॥ ಅಂತು ಕಾಲ್ಗೆಱಗಿ

ಅರೆವೆಣನಾಗಿರೆ ಪುಣ್ಗಳ್
ಮಱುಗುತ್ತಿರ್ದೆನ್ನನೆತ್ತಿ ಕೊಂಡಾವನದೊಳ್
ಬಱನೊಳ್ ಸಾಕಿದ ನಿನ್ನಂ
ಮಱೆದೊಡೆ ನರಕಕ್ಕೆ ಭಾಜನಂ ತಾನಲ್ತೇ ೧೦೦

ವ॥ ಎಂಬ ಮೋಟನ ಮಾತಿಂಗ ತಳವಱರ್ ವಿಸ್ಮಯಂಬಟ್ಟು ಧಾನ್ಯಕನಂ ಮೋಟನಂ ನೀತಿವಿಳಾಸನೆಡೆಗೆ ತಂದು ತತ್ಕೌತುಕಮಂ ಪೇೞೆ ನೀತಿವಿಳಾಸಂ ಮೋಟನೊಳಿಂತೆಂದಂ

ಎಲೆ ಮಹಿಮ ಪಾತಕನ ಕಾ
ಲ್ಗಳ ಮೇಲೆಱಗಿರ್ದೆಯೇಕೆ ನಿನ್ನಯ ಕೈಕಾ
ಲ್ಗಳನೋವದೆ ಕಡಿದುಂ ಮಗು
ೞ್ದಿಳೆಯೊಳ್ ಸಾಧುವಿನ ತೆಱದಿನಿರ್ದಪನಲ್ತೇ ೧೦೧

ಎಂದು ಹೇಳಿದನು. ವ॥ ಇದನ್ನು ಕೇಳಿ ಆ ತಳವಾರರು 'ಇವನನ್ನು ದಿಕ್ಕುಗಳಿಗೆ ಕತ್ತರಿಸಿ ಬಲಿಹಾಕುವುದನ್ನು ನೋಡು ಬಾ' ಎಂದು ಹೇಳಿ ಆ ಮೋಟನನ್ನು ಧಾನ್ಯಕನ ಬಳಿಗೆ ಕರೆದುಕೊಂಡು ಬಂದರು. ಆಗ ೯೯. ಅವನು ಧಾನ್ಯಕನನ್ನು ಕಂಡ ಕೂಡಲೆ ಕಣ್ಣೀರು ಹರಿದು ಮುಂಗಾಣದಾದನು. ಮೋಟನು ಗಡಗಡ ನಡುಗಿದನು. ಅವನಿಗೆ ಪ್ರಾಣಬಂದಂತಾಯಿತು. ಕೂಡಲೆ ಅವನು ಧಾನ್ಯಕನ ಕಾಲ್ಗೆರಗಿದನು. ವ॥ ಹಾಗೆ ಕಾಲುಗಳಿಗೆ ಬಿದ್ದು ನಮಸ್ಕರಿಸಿ ೧೦೦. "ಅರ್ಧ ಹೆಣವಾಗಿದ್ದ, ಹುಣ್ಣುಗಳಿಂದ ಸಂಕಟಪಡುತ್ತಿದ್ದ, ನನ್ನನ್ನು ಎತ್ತಿಕೊಂಡು ಆ ವನದಲ್ಲಿ ಬರಗಾಲದಲ್ಲಿ ಸಾಕಿ ಸಲಹಿದೆ. ನಿನ್ನನ್ನು ಮರೆತರೆ ನಾನು ನರಕಕ್ಕೆ ಬೀಳುವುದು ಖಂಡಿತ." ಎಂದನು. ವ॥ ಮೋಟನ ಮಾತುಗಳನ್ನು ಕೇಳಿ ತಳವಾರರು ವಿಸ್ಮಯ ಹೊಂದಿದರು. ಧಾನ್ಯಕನನ್ನೂ ಮೋಟನನ್ನೂ ನೀತಿ ವಿಲಾಸನ ಬಳಿ ಕರೆ ತಂದರು. ಅರಸನಿಗೆ ಈ ಕೌತುಕವನ್ನು ಹೇಳಿದರು. ಅದನ್ನು ಕೇಳಿ ನೀತಿವಿಲಾಸನು ಮೋಟನಿಗೆ ಹೇಳಿದನು. ೧೦೧. ಎಲೆ ಮಹಿಮಾಶಾಲಿಯೇ! ಈ ಪಾಪಿಯ ಕಾಲುಗಳ ಮೇಲೆ ಏಕೆ ಬಿದ್ದು ನಮಸ್ಕರಿಸಿದೆ? ಇವನು ನಿನ್ನ ಕೈಕಾಲುಗಳನ್ನು ದಯೆಯಿಲ್ಲದೆ ಕಡಿದು ಮತ್ತೆ ಸಾಧು

ವ॥ ಎಂಬುದುಂ ಮೋಟನಿಂತೆಂದಂ

ಎನ್ನ ಪಿತೃಮಾತೃ ಗುರುವೀ
ತನ್ನೆಟ್ಟನೆ ಪುತ್ರನಪ್ಪೆನೀತಂಗಾಂ ಕೇ
ಳೆನ್ನ ಕರಚರಣಮಾಂ ಮಿಗೆ
ಮುನ್ನೆಸಗಿದ ಕರ್ಮದಿಂದೆ ಪೋದುವಿಳೇಶಾ ೧೦೨

ವ॥ ಎಂದರಸಂಗೆ ಪೂರ್ವವೃತ್ತಾಂತಮೇನುಮುೞಿಯದಂತು ಪೇೞ್ದು ಮತ್ತಮಿಂತೆಂದಂ

ಏಗೆಯ್ವೆಂ ದುರ್ಬಲಂ ಧೂಮಿನಿ ಮನದಳುಪಿಂ ಮೇಲೆ ಬೀೞಲ್ಕೆ ಬೇಡೆಂ
ದಾಗಂ ನೂಂಕಲ್ಕೆ ಕೆಯ್ಯಿಲ್ಲಳವಿಗೞಿದು ಪೋಗಲ್ಕೆ ಕಾಲಿಲ್ಲ ತನ್ನೊಳ್
ಕೂಗಿಟ್ಟಾಂ ಪೇೞ್ದೊಡಂ ತನ್ನಯ ಬರವನಿತಂ ಕಾಣೆನಂತಿರ್ದೊಡೆನ್ನೊಳ್
ಬೇಗಂ ನಾಣ್ಗೆಟ್ಟು ತನ್ನಂಗನೆ ನಗೆಗೆಡೆಯುಂ ಮಾಡಿದಳ್ ಪೇೞ್ವೆನೇನಂ ೧೦೩

ವ॥ ಎಂಬುದುಂ ನೀತಿವಿಳಾಸಂ ವಿಸ್ಮಯಂಬಟ್ಟು ಅವಿಚಾರದಿಂದೆನಗೆ ದೋಷಂ ಬರುತಿರ್ದುದೆಂದು ಕೆಲದೊಳಿರ್ದ ಧೂಮಿನಿಯುಂ ನೋಡಿ

ಎಲೆ ಪಾತಕಿ ನಿಜಕಾಂತನ
ನುೞಿದೀ ಮೋಟಂಗೆ ಕೂರ್ತು ಪತಿಹಿತೆಯೆಂಬೀ
ಬಲೆಯುಂ ಬೀಸಿ ಧರಾಮಂ
ಡಲಮಂ ವಂಚಿಸಿದೆ ನೋಡಲಾಗದು ನಿನ್ನಂ ೧೦೪

ಏನಂತೆ ನಟಿಸುತ್ತಿದ್ದಾನಷ್ಟೆ?" ವ॥ ಎಂದು ಹೇಳಲು ಮೋಟನು ಹೇಳಿದನು– ೧೦೨. "ನನಗೆ ತಂದೆತಾಯಿ ಗುರು ಎಲ್ಲರೂ ಇವನೇ. ಈತನಿಗೆ ನಾನು ಮಗನಿದ್ದಂತೆ. ಕೇಳು. ರಾಜನೇ ! ನನ್ನ ಕೈಕಾಲುಗಳು ಹಿಂದೆ ನಾನು ಮಾಡಿದ ಪಾಪಕರ್ಮಗಳಿಂದ ಹೋದುವು." ವ॥ ಎಂದು ಅರಸನಿಗೆ ತನ್ನ ಹಿಂದಿನ ವೃತ್ತಾಂತವನ್ನೆಲ್ಲ ಏನೂ ಉಳಿಯದಂತೆ ಪೂರ್ತಿಯಾಗಿ ಹೇಳಿದನು, ಮತ್ತೆ ಹೇಳಿದನು. ೧೦೩. "ಏನು ಮಾಡಲಿ! ನಾನು ಬಲಹೀನನು. ಧೂಮಿನಿಯು ಮನದ ಉದ್ರೇಕದಿಂದ ಮೇಲೆ ಬಿದ್ದಳು. ಬೇಡವೆಂದು ಆಗ ಅವಳನ್ನು ನೂಕಲು ಕೈಗಳಿಲ್ಲ. ತಪ್ಪಿಸಿಕೊಂಡು ಹೋಗಲು ಕಾಲಿಲ್ಲ. ಗಟ್ಟಿಯಾಗಿ ಕೂಗಿ ಹೇಳಿದರೂ ನೀನು ಬರುವ ಸುಳಿವು ಕೂಡ ಇಲ್ಲ. ಆ ಸ್ಥಿತಿಯಲ್ಲಿದ್ದ ನನ್ನೊಡನೆ ನಿನ್ನ ಹೆಂಡತಿಯು ನಾಚಿಕೆ ಬಿಟ್ಟು ಕೂಡಿ ಹಾಸ್ಯಕ್ಕೆ ಗುರಿಮಾಡಿದಳು. ಏನು ಹೇಳಲಿ!" ವ॥ ಎಂದು ಹೇಳಲು ನೀತಿವಿಳಾಸನು ಕೇಳಿ ಆಶ್ಚರ್ಯಪಟ್ಟನು, ಅವಿಚಾರದಿಂದ ನನಗೆ ದೋಷವು ಬರುತ್ತಿತ್ತು ಎಂದು ಪರಿತಪಿಸಿ ಪಕ್ಕದಲ್ಲಿದ್ದ ಧೂಮಿನಿಯನ್ನು ನೋಡಿ, ೧೦೪. "ಎಲೆ ಪಾತಕಿ, ನಿನ್ನ ನಿಜವಾದ ಗಂಡನನ್ನು ತೊರೆದು ಈ ಮೋಟನಲ್ಲಿ ಸ್ನೇಹತೋರಿಸಿದೆ. ಪತಿವ್ರತೆಯೆಂಬ ಬಲೆಯನ್ನು ಬೀಸಿ ಭೂಮಂಡಲ

ವ॥ ಎಂದು ಧಾನ್ಯಕಂಗೆ ಮಾಡುವ ಶಾಸ್ತಿಯಂ ಧೂಮಿನಿಗೆ ಮಾಡಿಯನಂತರಂ

ಗುಣನಿಧಿ ಧಾನ್ಯಕಂಗೆ ಸುಮುಹೂರ್ತದೊಳೊಲ್ದು ವಿಳಾಸಿನೀಕುಲಾ
ಗ್ರಣಿಯೆನಿಸಿರ್ಪ ವೈಶ್ಯಕುಲ ಕನ್ನಿಕೆಯಂ ತರಿಸಿತ್ತು ನಲ್ಮೆಯಿಂ
ವಣಗಧಿನಾಥನೆಂಬ ಪೆಸರಿಟ್ಟೊಲವಿಂ ಪೊರೆದಂ ನೆಗಟ್ದ ಧಾ
ರಿಣಿಪತಿ ಕೇಳ್ ನಿಶಾಚರ ದುರಾತ್ಮಿಕೆ ಧೂಮಿನಿ ಮಾಡಿದರ್ಥಮಂ ೧೦೫

ವ॥ ಅದಱಿಂ ಸ್ತ್ರೀಹೃದಯಂ ಕ್ರೂರಮೆಂದು ಬ್ರಹ್ಮರಾಕ್ಷಸಂಗೆ ಪೇಟ್ದು ಗೋಮಿನೀ ವೃತ್ತಾಂತಮಂ ಪೇಟಲ್ ತಗುಳ್ದಿನದಂತೆನೆ

ಪ್ರಕಟ ಪ್ರಸ್ತುತಿವೆತ್ತ ಕಾಂಚಿಪುರದೊಳ್ ವಿಖ್ಯಾತಿಯಿಂದಿರ್ಪ ಶ
ಕ್ತಿ ಕುಮಾರಾಖ್ಯನದೊರ್ಬ ತಾಂ ಮದುವೆಯಾಗಲ್ವೇಟ್ಕುಮೊಲ್ದೆನ್ನಂತೆ
ತ್ತಕೆ ಬರ್ಪಂತು ಸಲಕ್ಷಣಂ ಮೆಱೆವ ಜಾಯಾಸದ್ಗುಣಂ ತೋರ್ಪ ಕ
ನ್ನಿಕೆಯಂ ಕಾಣೆನೆನುತ್ತಮಂ ಮನದೊಳಂದುದ್ವೇಗಮಂ ತಾಳ್ದಿದಂ ೧೦೬

ವ॥ ಅಂತು ಚಿಂತೆಯಂ ತಾಳ್ದು ಮತ್ತಂ

ಪತಿಹಿತಕಾರ್ಯೆಯಂ ವಿನಯ ಭಾಷಿಣಿಯಂ ಕಮನೀಯಲಕ್ಷಣಾ
ನ್ವಿತೆಯನತೀವ ಶೀಲವತಿಯಂ ಗೃಹಕಾರ್ಯನಿಮಗ್ನಚಿತ್ತೆಯಂ
ಸತತ ವಿಕಾಸವಕ್ತ್ರೆಯನಪಾರಗುಣಾಧಿಕೆಯಂ ಕಳತ್ರಮಂ
ದತಿಶಯದಿಂದೆ ಪಾಲಿಸುವುದಲ್ಲದೆ ಪೆಂಡಿರನಿಕ್ಕು ಕಿಚ್ಚಿನೊಳ್ ೧೦೭

ವನ್ನೇ ಮೋಸಗೊಳಿಸಿದೆ. ನಿನ್ನನ್ನು ನೋಡಬಾರದು," ವ॥ ಎಂದು ಹೇಳಿ ಧಾನ್ಯಕನಿಗೆ ಮಾಡಬೇಕಾದ ದಂಡನೆಯನ್ನು ಧೂಮಿನಿಗೆ ವಿಧಿಸಿದನು, ಅನಂತರ – ೧೦೫. ಗುಣನಿಧಿಯಾದ ಧಾನ್ಯಕನಿಗೆ ರಾಜನು ಸುಮುಹೂರ್ತದಲ್ಲಿ ವೈಶ್ಯಜಾತಿಯ ಶ್ರೇಷ್ಠಳಾದ ಕನ್ಯೆಯನ್ನು ತಂದು ವಿವಾಹ ಮಾಡಿಸಿದನು. ಅವನಿಗೆ ವಣಿಗಧಿನಾಥನ ಪದವಿಯನ್ನಿತ್ತು ಸನ್ಮಾನಿಸಿದನು. ರಾಕ್ಷಸನೆ, ದುಷ್ಟಳಾದ ಧೂಮಿನಿಯು ಮಾಡಿದ ವ್ಯವಹಾರಗಳನ್ನು ಕೇಳಿದೆಯಾ? ವ॥ ಆದುದರಿಂದ ಸ್ತ್ರೀ ಹೃದಯವು ಕ್ರೂರವಾದುದು ಎಂದು ಬ್ರಹ್ಮರಾಕ್ಷಸನಿಗೆ ಹೇಳಿ ಗೋಮಿನಿಯ ವೃತ್ತಾಂತವನ್ನು ಹೇಳತೊಡಗಿದನು. ೧೦೬. ಪ್ರಸಿದ್ಧವಾದ ಕಾಂಚೀಪುರದಲ್ಲಿ ಶಕ್ತಿಕುಮಾರನೆಂಬುವನು ಹೆಸರುವಾಸಿಯಾಗಿದ್ದನು. 'ನಾನು ಮದುವೆಮಾಡಿಕೊಳ್ಳಬೇಕು. ಆದರೆ ನನ್ನನ್ನು ಪ್ರೀತಿಸಿ ನನಗೆ ಬೇಕಾದಂಥ ಸಲ್ಲಕ್ಷಣಗಳಿಂದ ಕೂಡಿದ ಹೆಂಡತಿಯಲ್ಲಿರಬೇಕಾದ ಸದ್ಗುಣಗಳಿಂದ ಕನ್ಯೆಯೆಲ್ಲೂ ಕಾಣಿಸುತ್ತಿಲ್ಲ' ಎಂದು ಯೋಚಿಸಿ ಮನಸ್ಸಿನಲ್ಲಿ ಕಳವಳಗೊಂಡನು, ವ॥ ಹಾಗೆ ಚಿಂತೆಯನ್ನು ಹೊಂದಿ ಮತ್ತೆ ೧೦೭. 'ಪತಿಗೆ ಹಿತವಾದ ಕಾರ್ಯಗಳನ್ನು ಮಾಡುವವಳಾಗಿರಬೇಕು. ವಿನಯದಿಂದ ಮಾತನಾಡುವವಳಾಗಿರಬೇಕು, ಸುಂದರವಾದ ಲಕ್ಷಣಗಳಿಂದ ತುಂಬಿರಬೇಕು. ಒಳ್ಳೆಯ ಶೀಲವತಿಯಾಗಿರಬೇಕು, ಯಾವಾಗಲೂ ಮನೆಗೆಲಸದಲ್ಲಿ ನಿರತಳಾಗಿರಬೇಕು. ಯಾವಾಗಲೂ ಮುಖದಲ್ಲಿ ನಗು

ವ॥ ಅಂತೆಂದು

ಇಳೆಯೊಳ್ ಪುಟ್ಟಿದ ಕನ್ಯಾ
ಕುಳಮಂ ತವೆ ನೋೞ್ಪೆನೆಂದು ಶಕ್ತಿಕುಮಾರಂ
ಘುಳಿಲನೆ ಸೆಱಗಿನೊಳಂದೂ
ರ್ಬಳ ನೆಲ್ಲಂ ಕಟ್ಟಿಕೊಂಡವಂ ಪೊಱಮಟ್ಟಂ ೧೦೮

ಕಾಂತಾಲಕ್ಷಣಮಂ ನಾ
ನಾತೆಱದಿಂ ನೋಡಲಱಿವೆನೆಂದೆಲ್ಲರುಮಂ
ಕೈತವದಿಂ ನೋಡುತ್ತುಂ
ಜ್ಯೋತಿಷ್ಕನುಮೆನಿಪನಾಮುಮಂ ತಳೆದಿರ್ದಂ ೧೦೯

ವ॥ ಅಂತು ಶಕ್ತಿಕುಮಾರಂ ಕಾಂತಾರ್ಥಿಕನಾಗಿ ಕಂಡ ಕಂಡ ಕನ್ನಿಕೆಯ ಲಕ್ಷಣಮಂ ನೋಡಿ ನೋಡಿ

ಎಲ್ಲೆಲ್ಲಿ ಪುಗುವನವನೊ
ಲ್ದಲ್ಲಲ್ಲಿಯ ಕನ್ಯಕಾಗೃಹಂಗಳೊಳೆನಗೊ
ಲ್ದೊಳ್ಳುಣಿಸನಿಕ್ಕಿಮೊರ್ಬಳ
ನೆಲ್ಲಂ ಕೊಂಡೆಂದು ಕೇಳ್ವಸತಿ ಮುದದಿಂದಂ ೧೧೦

ವ॥ ಅಂತಾತಂ ಕೇಳಲೊಡಂ

ಇನ್ನೊರ್ಬಳ ನೆಲ್ಲಂ ನಿನ
ಗನ್ನಂ ನೆಱೆವಂತು ಕುಡುವೆನೆಂದವರೆಲ್ಲರ್
ತನ್ನಂ ಕಳಿಪಲ್ ನಡೆಗೂ
ಳ್ವಂ ನಯದಿಂ ಮುಗುಟ್ದು ಮತ್ತಮೊಂದೆಡೆಗಾಗಳ್ ೧೧೧

ವಿರಬೇಕು. ಅಮಿತವಾದ ಗುಣಗಳಿಂದ ಶ್ರೇಷ್ಠಳಾಗಿರಬೇಕು. ಇಂಥವಳನ್ನು ಹೆಂಡತಿಯೆಂದು ಪಾಲಿಸಬೇಕು. ಇದಕ್ಕೆ ವಿರುದ್ಧವಾದ ಹೆಂಡತಿಯರನ್ನು ಬೆಂಕಿಗೆ ಹಾಕಬೇಕು!' ವ|| ಎಂದು ಹೇಳಿದನು – ೧೦೮. 'ಭೂಮಿಯಲ್ಲಿ ಹುಟ್ಟಿರುವ ಕನ್ಯೆಗಳನ್ನೆಲ್ಲ ನೋಡುವೆನು, ಎಂದು ಯೋಚಿಸಿ ಶಕ್ತಿಕುಮಾರನು ಬೇಗ ಸೆರಗಿನಲ್ಲಿ ಒಂದು ಬಳ್ಳ ಭತ್ತವನ್ನು ಕಟ್ಟಿಕೊಂಡು ಹೊರಟನು. ೧೦೯. ಸ್ತ್ರೀಯರ ಲಕ್ಷಣಗಳನ್ನು ಅನೇಕ ರೀತಿಯಿಂದ ನೋಡಿ ಪರೀಕ್ಷಿಸಬಲ್ಲೆನು-ಎಂದು ಹೇಳಿಕೊಂಡು ಜೋಯಿಸನೆಂದು ಮರೆಮಾಚಿ ಎಲ್ಲರನ್ನೂ ನೋಡುತ್ತಾ ಹೋದನು. ವ|| ಹೀಗೆ ಶಕ್ತಿಕುಮಾರನು ಹೆಂಡತಿಯನ್ನು ಅರಿಸಲು ಕಂಡಕಂಡ ಕನ್ಯೆಯರ ಲಕ್ಷಣವನ್ನು ನೋಡಿ ನೋಡಿ ೧೧೦. ಅವನು ಪ್ರವೇಶಿಸಿದ ಕನ್ಯೆಯರ ಮನೆಗಳಲ್ಲೆಲ್ಲ ನನ್ನಲ್ಲಿರುವ ಒಂದು ಬಳ್ಳ ಭತ್ತವನ್ನು ತೆಗೆದುಕೊಂಡು ನನಗೆ ಒಳ್ಳೆಯ ಊಟವನ್ನು ಹಾಕಿರಿ ಎಂದು ಮುದದಿಂದ ಕೇಳುತ್ತಿದ್ದನು. ವ|| ಹಾಗೆ ಅವನು ಕೇಳಿದಾಗ – ೧೧೧. 'ಇನ್ನು ಒಂದು ಬಳ್ಳಭತ್ತವನ್ನು ತೆಗೆದುಕೊಂಡು ನಿನಗೆ ಅನ್ನವನ್ನು ಮಾಡಿ ಹಾಕಬೇಕೋ' ಎಂದು

ವ॥ ಅಂತೆಲ್ಲಿಯುಂ ತನ್ನ ಮನಕ್ಕನುಗುಣಮಪ್ಪ ಕನ್ನಿಕೆ ದೊರಕದಿರ್ಪುದುಂ

ನಿರವಧಿದೇಶಮುಂ ಸಕಳಪತ್ತನಮುಂ ಸತತಂ ತೊಟಿಲ್ದು ಬಂ
ಧುರಕುಲಕನ್ಯಕಾವಿತತಿಯುಂ ತನಗಪ್ಪವೊಲೆಲ್ಲಿ ನೋಡೆಯುಂ
ದೊರಕದಿರಲ್ಕೆ ಚಿಂತೆ ತಲೆದೋಱೆ ಮಗುಳ್ದುತಿಧೈರ್ಯವೃತ್ತಿಯಿಂ
ಭರವಸದಿಂದವಂ ಶಿಬಿಕದೇಶದ ರತ್ನಪುರಕ್ಕೆ ಸಾರಿದಂ ೧೧೨

ವ॥ ಅಂತು ರತ್ನಪುರಕ್ಕೆ ಬಂದು

ಮನೆಮನೆದಪ್ಪದೆ ಸತತಂ
ವನಿತಾಲಕ್ಷಣಮನೊಲ್ದು ನೋಡುತ್ತುಂ ಬ
ರ್ಪನವೊಂದು ಭವನದೊಳ್ ಗೋ
ಮಿನಿಯೆಂಬ ಕುಮಾರಿಯಂ ಕುಮಾರಂ ಕಂಡಂ ೧೧೩

ವ॥ ಅಂತವಳಂ ಕಂಡು ಲಕ್ಷಣಮಂ ನೋೞ್ಪಿನಂ

ಪೊಂಗಿದ ಪಾದಮುಂ ಸಮಪದಾಂಗುಲಿಯುಂ ಮೃದುಗೂಢ ಗುಲ್ಫಮುಂ
ಮಂಗಳವೃತ್ತ ಜಂಘೆಗಳುಮೊಪ್ಪುವ ಕೋಮಳಪೂರ್ಣ ಜಾನುಯು
ಗ್ಮಂಗಳುಮೊಲ್ಮೆವೆತ್ತುರು ನಿತಂಬಮುಮಲ್ಪಸುಮಧ್ಯಮುಂ ಸಮು
ತ್ತುಂಗಕುಚಂಗಳುಂ ವಿಕಸಿತಾನನಮುಂ ಮೆಱೆದಿರ್ಪುವಾಕೆಯೊಳ್ ೧೧೪

ಎಲ್ಲರೂ ಹಾಸ್ಯಮಾಡಿ ಕಳುಹಿಸಿದರು. ಆದರೂ ಮುಂದೆ ನಡೆಯುತ್ತ ವಿನಯದಿಂದ ಮತ್ತೊಂದು ಮನೆಗೆ ಹೋದನು. ವ॥ ಎಲ್ಲಿಯೂ ತನಗೆ ಅನುಗುಣವಾದ ಕನ್ಯೆಯು ಸಿಕ್ಕದಿರಲು, ೧೧೨. ಎಲ್ಲೆಯಿಲ್ಲದೆ ಬೇರೆಬೇರೆ ದೇಶಗಳನ್ನೂ ಅನೇಕ ಪಟ್ಟಣಗಳನ್ನೂ ಅಲೆದನು. ಒಳ್ಳೆಯ ಕುಲದ ಆತನಿಗೆ ಅನುಗುಣವಾದ ಕನ್ಯೆಯು ಹುಡುಕಿದರೂ ಸಿಕ್ಕಲಿಲ್ಲ. ಇದರಿಂದ ಅವನ ಚಿಂತೆ ಹೆಚ್ಚಿತು. ಕೊನೆಗೆ ಧೈರ್ಯವನ್ನು ತಂದುಕೊಂಡು ನಂಬಿಕೆಯಿಂದ ಶಿಬಿಕ ದೇಶದ ರತ್ನಪುರಕ್ಕೆ ಹೋದನು. ವ॥ ಹಾಗೆ ರತ್ನಪುರಕ್ಕೆ ಬಂದು, ೧೧೩. ಒಂದು ಮನೆಯನ್ನೂ ಬಿಡದೆ, ಒಂದೇ ಸಮನಾಗಿ ಸ್ತ್ರೀ ಲಕ್ಷಣಗಳನ್ನು ಪರೀಕ್ಷಿಸುತ್ತಾ ಹೋದನು. ಆಗ ಒಂದು ಮನೆಯಲ್ಲಿ ಶಕ್ತಿಕುಮಾರನು ಗೋಮಿನಿಯೆಂಬ ಕುಮಾರಿಯನ್ನು ಕಂಡನು. ವ॥ ಅವಳನ್ನು ಕಂಡು ಅವಳ ಲಕ್ಷಣವನ್ನು ನೋಡಿದಾಗ ೧೧೪. ಅವಳ ಪಾದವು ಉಬ್ಬಿದ್ದಿತು. ಕಾಲಬೆರಳುಗಳು ಸಮವಾಗಿ ಸೇರಿಕೊಂಡಿದ್ದವು. ಮೃದುವಾದ ಹಿಮ್ಮಡಿಗಳು ಅಡಗಿದ್ದುವು. ಕಾಲುಗಳು ಮಂಗಳಕರವಾಗಿ ದುಂಡಗಿದ್ದುವು. ಅವಳ ಮೊಣಕಾಲುಗಳು ಕೋಮಲವಾಗಿ ಪುಷ್ಟವಾಗಿ ಸುಂದರವಾಗಿದ್ದುವು. ನಿತಂಬವು ಭಾರವಾಗಿ ಸುಂದರವಾಗಿದ್ದಿತು. ಸೊಂಟವು ತೆಳುವಾಗಿದ್ದಿತು. ಸ್ತನಗಳು ದಪ್ಪಗೆ ಎತ್ತರವಾಗಿದ್ದುವು. ಮುಖವು ನಗುವಿನಿಂದ ಅರಳಿದ್ದಿತು. ಇವುಗಳಿಂದ

ಎವೆ ವಜ್ರಾಂಕುಶಚಕ್ರಚಾಪಚಮರೋದ್ಯಚ್ಚಿಹ್ನಮಂಗಯ್ಯೊಳಿ
ರ್ಪವಳಂ ನೀರಜಮೂರ್ಧ್ವರೇಖೆಪದೆಪಿಂದಂಗಾಲೊಳೊಪ್ಪಿರ್ಪಳಂ
ಕಿವಿಯಂ ಚುಂಬಿಪ ಕಣ್ಗಳೊಳ್ ಧವಳನೀಲಾರುಣ್ಯ ಚಂಚತ್ರಿಭಾ
ಗವನಾಂತಿರ್ದವಳಂ ವಿಳಾಸಪರನೊಲ್ದಾನಂದದಿಂ ನೋಡಿದಂ ೧೧೫

ಮುಡಿಯನೆಟಿಲ್ವ ನೀಳಕಚಮುದ್ಘಲಲಾಟಮರೋಮಜಂಘೆ ಮೆ
ಲ್ನುಡಿ ಮದಗಂಧಮಾಂಸಳ ಮನೋಹರವಕ್ಷಮದಭ್ರಗಂಡಮಿ
ಟ್ಟೆಡೆಯೆನಿಸಿರ್ಪಡರ್ದ ಜಘನಂ ಪರಿಪೂರ್ಣ ಪಯೋಧರಂ ಕರಂ
ಕುಡಿನಿಮಿರ್ದಕ್ಷಿಗಳ್ ಮೆಱೆವ ಕನ್ನೆಯನೀಕ್ಷಿಸಿದಂ ಕಳಾವಿದಂ ೧೧೬

ಸಲೆ ಚೆನ್ನೆಯ್ದಿಲ ಕಾವನಿರ್ಮಡಿಸಿದಂತೊಪ್ಪಿರ್ದ ಕರ್ಣಂ ನಿಮಿ
ರ್ದೆಳನೀಲಚ್ಛವಿಯಂತೆ ರಂಜಿಪ ಲಸದ್ಭ್ರೂಲೇಖೆಗಳ್ ಕುಂದಕು
ಟ್ಮಲಮಂ ಸೇರಿಸಿದಂತೆ ತೋರ್ಪ ರದನೋದ್ಯತ್ಪಙ್ತಿನೂತ್ನಪ್ರವಾ
ಳಲತಾಸಾರದೊಳಟ್ದಿದಂತೆಸೆದುದಾಬಿಂಬಾಧರಂ ಕನ್ನೆಯಾ ೧೧೭

ವ॥ ಅಂತಿರ್ದ ಗೋಮಿನಿಯನಾಪಾದಮಸ್ತಕ ಸಂಪೂರ್ಣ ಲಕ್ಷಣಮಂ ಶಕ್ತಿಕುಮಾರಂ ನೋಡಿ ಸಂತೋಷಂಬಡುತ್ತಿಂತೆಂದಂ

ಆಕೆಯು ಮನೋಹರಳಾಗಿದ್ದಳು. ೧೧೫. ಅವಳ ಅಂಗೈಯಲ್ಲಿ ಗೋಧಿ, ವಜ್ರಾಯುಧ, ಅಂಕುಶ, ಚಕ್ರ, ಬಿಲ್ಲು, ಚಾಮರಗಳ ಚಿಹ್ನೆಗಳು ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ಅಂಗಾಲಿನಲ್ಲಿ ಕಮಲ ಮತ್ತು ಮೇಲ್ಗೆರೆಗಳು ಅಂದವಾಗಿ ಕಾಣಿಸುತ್ತಿದ್ದುವು. ಕಿವಿಯವರೆಗೂ ಹರಡಿದ ಕಣ್ಣುಗಳಲ್ಲಿ ತುದಿಗಣ್ಣು ಬಿಳುಪು, ನೀಲಿ, ಕೆಂಪುಬಣ್ಣಗಳಿಂದ ಪ್ರಕಾಶಿಸುತ್ತಿತ್ತು. ಇಂಥ ವಿಲಾಸಿನಿಯನ್ನು ವಿಲಾಸಪರನಾದ ಕುಮಾರನು ಆನಂದದಿಂದ ಪ್ರೀತಿಸಿ ನೋಡಿದನು. ೧೧೬. ತಲೆಯಿಂದ ಕೆಳಕ್ಕೆ ಜೋಲುವ ನೀಲಿಯಾದ ಕೇಶ, ಶ್ರೇಷ್ಠವಾದ ಹಣೆ, ಕೂದಲಿಲ್ಲದ ಕಾಲುಗಳು, ಮೃದುವಾದ ಮಾತು, ಮದವನ್ನುಂಟುಮಾಡುವ ಪುಷ್ಟವಾದ ಮನೋಹರವಾದ ವಕ್ಷಸ್ಥಲ, ಅತಿಶಯವಾದ ಕೆನ್ನೆ, ಒತ್ತಾಗಿ ಸೇರಿ ವಿಶಾಲವಾದ ಜಘನ, ತುಂಬಿದ ಕುಚಗಳು, ಬಳ್ಳಿಯಂತೆ ದೀರ್ಘವಾದ ಕಂಗಳು—ಇವುಗಳಿಂದ ಮನೋಹರಳಾದ ಕನ್ಯೆಯನ್ನು ಆ ಕಲಾವಿದನಾದ ಕುಮಾರನು ನೋಡಿದನು. ೧೧೭. ಆ ಕನ್ಯೆಯ ಕಿವಿಗಳು ಸುಂದರವಾದ ನೆಯ್ದಿಲೆ ಹೂವಿನ ಕಾವನ್ನು ಎರಡರಷ್ಟು ಮಾಡಿ ಇಟ್ಟಂತೆ ರಂಜಿಸಿದುವು. ಹೊಳೆಯುವ ಹುಬ್ಬಿನ ಗೆರೆಗಳು ನೀಳವಾದ ನೀಲಕಾಂತಿಯಂತೆ ಕಾಣಿಸಿದುವು. ಹಲ್ಲಿನ ಸಾಲು ಮೊಲ್ಲೆಮೊಗ್ಗುಗಳನ್ನು ಸೇರಿಸಿದಂತೆ ತೋರಿತು. ತೊಂಡೆ ಹಣ್ಣಿನಂಥ ತುಟಿಯು ಹವಳದ ಬಳ್ಳಿಯ ರಸದಲ್ಲಿ ಅದ್ದಿದಂತೆ ಕಂಗೊಳಿಸಿತು. ವ॥ ಕಾಲಿನಿಂದ ತಲೆಯವರೆಗೂ ಸಂಪೂರ್ಣ ಲಕ್ಷಣಗಳಿಂದ

ಈ ನೆಲ್ಲೊಲ್ಬಳನಂ ಕೊಂ
ಡೇನಂ ಮತ್ತಱಸದೆನಗೆ ಪರ್ಯಾಪ್ತಮೆನಲ್
ಸಾನಂದದಿನುಣಲಿಕ್ಕಲ್
ಮಾನಿನಿ ನೀನಾರ್ಪೆಯೆಂದು ಕೇಳ್ದನಲಂಪಿಂ ೧೧೮

ವ॥ ಎಂದು ಕೇಳ್ದೊಡವಳಂತೆಗೆಯ್ವೆನೆಂದು ನೆಲ್ಲನೀಸಿಕೊಂಡು

ಕಟ್ಟೊಣಗಿಲಾಗದೊಣಗಿಸಿ
ಕುಟ್ಟಲ್ ನುಚ್ಚಾಗದಂತೆ ನುಣ್ಪೆಸೆವಿನೆಗಂ
ನೆಟ್ಟಕ್ಕಿ ಮಾಡಿಯುಯ್ಯಂ
ಕೊಟ್ಟಳ್ ಸತಿ ಕರೆದು ತನ್ನ ದಾದಿಯ ಕೆಯ್ಯೊಳ್ ೧೧೯

ವ॥ ಅಂತಾದಾದಿಯ ಕೆಯ್ಯೊಳುಯ್ಯಂ ಕೊಟ್ಟು

ಇದನಕ್ಕಸಾಲೆಗಳ್ಗ
ತ್ತದಱಿಂದಂ ಬಂದ ಕಾಸಿನಿಂ ಮಡಕೆಗಳಂ
ಪದೆದಿಂಧನೋಪದಂಶಮ
ನೊದವಿಸಿಕೊಂಡೀಗ ಬರ್ಪುದೊಲವಿಂ ಧಾತ್ರೀ ೧೨೦

ವ॥ ಎಂಬುದುಮವಳಾಪರಿಯೊಳುಯ್ಯಂ ಕೊಟ್ಟು ಮಡಕೆಯಿಂಧನಮಾದುರಂಗಳಂ ತಪ್ಪುದುಂ ಬಟಿಯುಂ

ಕೂಡಿದೆ ಆ ಗೋಮಿನಿಯನ್ನು ಶಕ್ತಿಕುಮಾರನು ನೋಡಿ ಸಂತೋಷಿಸಿದನು. ೧೧೮. 'ಈ ಒಂದು ಬಳ್ಳ ಭತ್ತವನ್ನು ತೆಗೆದುಕೊಂಡು ಮತ್ತೆ ಏನನ್ನೂ ಹುಡುಕದೆ ಕೇವಲ ಇದರಿಂದಲೇ ನನಗೆ ಸಾಕಷ್ಟು ಊಟವನ್ನಿಡಲು ನಿನಗೆ ಸಾಧ್ಯವೇ ?' ಎಂದು ಹರ್ಷದಿಂದ ಅವಳನ್ನು ಕೇಳಿದನು. ವ॥ ಅವಳು ಹಾಗೆಯೇ ಮಾಡುವೆನೆಂದು ಹೇಳಿ ಆ ಭತ್ತವನ್ನು ತೆಗೆದುಕೊಂಡಳು. ೧೧೯. ಕಟ್ಟೊಣಗಿಲಾಗದಂತೆ ಬೇಕಾದಷ್ಟು ಮಾತ್ರ ಭತ್ತವನ್ನು ಒಣಗಿಸಿ ನುಚ್ಚಾಗದಂತೆ ಕುಟ್ಟಿದಳು. ಅಕ್ಕಿಯನ್ನು ಬೇರೆಮಾಡಿದಳು. ಹೊಟ್ಟನ್ನು ತೆಗೆದು ದಾದಿಯ ಕೈಯಲ್ಲಿ ಕೊಟ್ಟಳು. ವ॥ ದಾದಿಯ ಕೈಯಲ್ಲಿ ಹೊಟ್ಟನ್ನು ಕೊಟ್ಟು—೧೨೦. 'ದಾದಿ ! ಇದನ್ನು ಅಕ್ಕಸಾಲಿಗನಿಗೆ ಮಾರು. ಬಂದ ಕಾಸಿನಿಂದ ಮಡಕೆಗಳನ್ನೂ, ಸೌದೆಯನ್ನೂ ಮಸಾಲೆ ವಸ್ತುವನ್ನೂ ಹೊಂದಿಸಿಕೊಂಡು ಬೇಗ ಬಾ' ವ॥ ಎಂದು ಹೇಳಿದಳು. ದಾದಿಯು ಹಾಗೆಯೇ ಹೊಟ್ಟನ್ನು ಮಾರಿ

ಹದನಱಿದೆಸಱಿಟ್ಟೊಯ್ಯನೆ
ಮೃದುವಹ್ನಿಯನೆಸಗಿ ಪದೆದೆಸಱ್ ಕಾಯಲ್ ನಿ
ಲ್ಲದೆಯಕ್ಕಿಯೆರಡನೊಲೆಯೊಳ್
ಬಿದಿರ್ದೆಸಱೊಳ್ ಪೊಯ್ದಳಕ್ಕಿಯುಮಂ ಸತಿಯಾಗಳ್ ೧೨೧

ವ|| ಅಂತಕ್ಕಿಯುಂ ಪೊಯ್ದು ತೊಳಸಿ

ಕುದಿ ಬರಲೊಯ್ಯನೆ ಮೇಲು
ಬ್ಬಿದ ನೊರೆಯುಂ ತೆಗೆದು ಬಿಸುಟು ಮೇಲೆಸಱುಂ ಸಾ
ಲ್ದುದನೆಱಿದು ಮಗುಳ್ದಗುಳ್ಗಳ
ಹದನಂ ತೆಗೆದೊತ್ತಿ ನೋಡಿ ಬಾಗಿದಳಾಗಳ್ ೧೨೨

ವ|| ಅಂತು ಓಗರಮಂ ಬಾಗಿ

ತಿಳಿಗಂಜಿಯನೊಪ್ಪುವ ತಂ
ಗಳಸದೊಳೆಱದಿರಿಸಿ ದೊರಕಿದುಪದಂಶಮನಾ
ಗಳೆ ಪಾಕಂಗೆಯ್ದೊಲೆಯೊಳ್
ತಿಳಿನೀರಂ ತಳಿದು ಮುಸಿಯನಾಗಳ್ ತೆಗೆದಳ್ ೧೨೩

ವ|| ಅಂತಾಮುಸಿಯುಂ ತೆಗೆದು ತನ್ನ ದಾಸಿಯುಂ ಕರೆದು

ಏರಣೆಗರ್ಗೀಮುಸಿಯಂ
ಭೋರನೆ ಕೊಟ್ಟವರ್ಗಳಿತ್ತ ಕಾಸಿಂಗೀಗಳ್
ಗೋರಸಮಂ ದೊರಕಿಸಿ ಕೊಂ
ಡೋರಂತಿರೆ ಬರ್ಪುದೆಂದು ಕಳಿಪಿದಳವಳಂ ೧೨೪

ಮಡಕೆ, ಸೌದೆ, ಮಸಾಲೆಗಳನ್ನು ಕೊಂಡುತಂದಳು. ಬಳಿಕ ೧೨೧. ಅಳತೆಯನ್ನನುಸರಿಸಿ ಎಸರಿಟ್ಟಳು. ಕೂಡಲೆ ನಿಧಾನವಾಗಿ ಬೆಂಕಿಯನ್ನುರಿಸಿದಳು. ಎಸರು ಕಾದ ಕೂಡಲೆ ಎರಡಕ್ಕಿಯನ್ನು ಒಲೆಗೆ ಹಾಕಿ ಅಕ್ಕಿಯನ್ನು ಅವಳು ಎಸರಿಗೆ ಸುರಿದಳು. ವ|| ಹಾಗೆ ಅಕ್ಕಿಯನ್ನು ಸುರಿದು ತೊಳಸಿದಳು. ೧೨೨. ಕುದಿಬಂದಕೂಡಲೆ ಮೇಲಕ್ಕೆ ಉಬ್ಬಿಬಂದ ನೊರೆಯನ್ನು ತೆಗೆದು ಬಿಸಾಡಿದಳು. ಮೇಲೆಸರನ್ನು ಸ್ವಲ್ಪ ಸುರಿದಳು. ಮತ್ತೆ ಅಗುಳು ಹದವಾಗಿ ಬೆಂದಿದೆಯೋ ಎಂದು ಕೈಯಲ್ಲಿ ಒತ್ತಿನೋಡಿ ಗಂಜಿಯನ್ನು ಬಸಿದಳು. ವ|| ಹಾಗೆ ಅನ್ನವನ್ನು ಬಸಿದು—೧೨೩. ತಿಳಿಯಾದ ಗಂಜಿಯನ್ನು ಮಡಕೆಯಲ್ಲಿ ತುಂಬಿಸಿದಳು. ತಂದಿದ್ದ ತರಕಾರಿ ಮಸಾಲೆ ಮೊದಲಾದ್ದನ್ನು ಕೂಡಲೆ ಬೇಯಿಸಿದಳು. ತಿಳಿನೀರನ್ನು ಚುಮುಕಿಸಿ ಇದ್ದಲನ್ನು ತೆಗೆದಳು. ವ|| ಇದ್ದಲನ್ನು ತೆಗೆದು ದಾಸಿಯನ್ನು ಕರೆದು—೧೨೪. 'ಬೇಗ ಹೋಗಿ ಈ ಇದ್ದಲನ್ನು ಅಕ್ಕಸಾಲಿಗರಿಗೆ ಮಾರಿ ಅವರು ಕೊಟ್ಟ ಕಾಸಿನಿಂದ ಮಜ್ಜಿಗೆಯನ್ನು ದೊರಕಿಸಿಕೊಂಡು ಬೇಗ ಬಾ ಎಂದು

ವ॥ ಎಂದು ಕಳಿಪಲವಳಾಕ್ರಮದಿಂ ಸ್ನೇಹದ್ರವ್ಯಮಂ ಕೊಂಡು ಬರಲೊಡಂ ಶಕ್ತಿ ಕುಮಾರನಂ ಕರೆದು

ತಿಂಗಳ ಬೆಳಗಿನ ದಾರೆಯು
ಸಂಗಡಮೆನೆ ಮೆಱೆಯುತಿರ್ಪ ಗಂಜಿಯನಾಗಳ್
ತೇಂಗಿನ ತಿಳಿವಟ್ಟಲೊಳಾ
ತಂಗೆಱೆದಳ್ ತೊಳಸಿ ತೊಳಸಿ ಸವಿಯಪ್ಪಿನೆಗಂ ೧೨೫

ವ॥ ಅಂತೆಱೆಯಲಾಗಂಜಿಯಂ ಕುಡಿಯಲೊಡಂ

ನೆರೆಯಮೃತರಸಕ್ಕನಿದಂ
ದೊರೆಗಟ್ಟುವ ಗಂಜಿ ಪೊಕ್ಕು ತತ್ತನುರಸಮಂ
ಪೊಱಮಡಿಸಿದಂತೆ ಬೆಮರ್ಗಳ್
ಪೊಱಪೊಣ್ಮಿದುವವನ ರೋಮಕೂಪದೊಳಾಗಳ್ ೧೨೬

ವ॥ ಅಂತವನ ದೇಹಂ ಬೆಮರಲ್

ಅರೆದಿರಿಸಿದ ನೆಲ್ಲಿಯ ಸ
ಟ್ಟುರುಳಿಯೊಳತಿನಯಮದಾಗಲೆಣ್ಣೆಯ ಪನಿಯಂ
ಬೆರಸಿಟ್ಟು ಕೊಟ್ಟಳಾತಂ
ಗಿರದೀಗಳೆ ಮಿಂದು ಬರ್ಪುದೆಂದವಳಾಗಳ್ ೧೨೭

ವ॥ ಅಂತಾತನಂ ಮೀಯಲ್ ಕಳಿಪಿ ಮನೆಯೊಳೆಡೆಮಾಡಿಯಿಡಿಸಿ ಮಗುೞ್ದಾತಂ ಬರಲೊಡಂ

ಹೇಳಿ ಕಳುಹಿಸಿದಳು. ವ॥ ಅವಳು, ಹೇಳಿದ ರೀತಿಯಲ್ಲಿ ಜಿಡ್ಡಿನ ಪದಾರ್ಥವನ್ನು (ಹಾಲು, ಮೊಸರು, ತುಪ್ಪ) ಕೊಂಡು ಬಂದಳು. ಕೂಡಲೆ ಶಕ್ತಿಕುಮಾರನನ್ನು ಕರೆದು– ಬೆಳದಿಂಗಳ ಬೆಳಕಿನಂತೆ ಪ್ರಕಾಶಿಸುತ್ತಿದ್ದ ಗಂಜಿಯನ್ನು ಆಗ ತೆಂಗಿನ ಕರಟದಲ್ಲಿ ಸವಿಯಾಗುವಂತೆ ಕಲಕಿ ಕಲಕಿ ಅವನಿಗೆ ಸುರಿದುಕೊಟ್ಟಳು. ವ॥ ಹಾಗೆ ಸುರಿದ ಗಂಜಿಯನ್ನು ಕುಡಿದನು. ೧೨೬. ಅಮೃತರಸದಂತೆ ಇನಿದಾದ ಗಂಜಿಯು ಶರೀರದೊಳಕ್ಕೆ ಹೋದಕೂಡಲೆ ಅವನ ರೋಮ ಕೂಪಗಳಿಂದ ಬೆವರು ಚಿಮ್ಮಿತು. ಅದು ಶರೀರದ ರಸವನ್ನೇ ಗಂಜಿಯು ಹೊರಕ್ಕೆ ಉಕ್ಕಿಸಿತೋ ಎಂಬಂತೆ ಕಾಣಿಸಿತು. ವ॥ ಹಾಗೆ ಅವನ ಶರೀರವು ಬೆವರಲು—೧೨೭. ನಯವಾಗಿ ಅರೆದು ಇಟ್ಟಿದ್ದ ನೆಲ್ಲಿಚಟ್ಟಿನ ಉಂಡೆಯಲ್ಲಿ ಎಣ್ಣೆಯ ಹನಿಗಳನ್ನು ಬೆರಸಿದಳು. ಅದನ್ನು ಅವನಿಗೆ ಕೊಟ್ಟು ಇದನ್ನು ಹಚ್ಚಿಕೊಂಡು ಬೇಗ ಸ್ನಾನ ಮಾಡಿಕೊಂಡು ಬಾ ಎಂದು ಹೇಳಿದಳು. ವ॥ ಅವನನ್ನು ಸ್ನಾನಕ್ಕೆ ಕಳುಹಿಸಿ ಮನೆಯಲ್ಲಿ ಊಟಕ್ಕೆ ಸಿದ್ಧಮಾಡಿದಳು. ಮತ್ತೆ ಆತನು ಬಂದ

ಎಳೆಯುಳ್ ಪಿತ್ತಿಲ ಬಾೞೆಗ
ೞೆಲೆಯೊಳ್ ಮೂಱನೆಯ ಬಾಗಮಂ ಬಿಟ್ಟಗ್ರಂ
ತಳಿರೆಸೆಯುತ್ತಿರ್ಪ ಕದಳೀ
ದಳಮಂ ಮೆಲ್ಪಸೆಯೆ ಚಿವುಟಿ ತಂದಳ್ ಬೇಗಂ ೧೨೮

ವ|| ಅನಂತರಂ

ನೆಲದೊಳ್ ಕುಡಿತೆಯ ನೀರಂ
ತಳಿದೊಯ್ಯನೆ ತೊಡೆದು ಪೆಂಪಿನಿಂ ಚತುರಶ್ರ
ಸ್ಥಳಮನೊಸೆದಿಟ್ಟು ರಂಭಾ
ದಳಮಂ ನೀರ್ಗೊಟ್ಟಳೊಂದು ಪೊಸತಂಬುಗೆಯಿಂ ೧೨೯

ವ|| ಅಂತು ನೀರ್ಗುಡಲಾತಂ ಕರಚರಣಪ್ರಕ್ಷಾಳನಂಗೆಯ್ದು ಕುಳ್ಳಿರ್ಪುದುಂ

ಪವಣಱಿದಿಕ್ಕಿಯೋಗರಮನುಪ್ಪಿನ ಕಾಯ್ಗಳನಿಕ್ಕಿದೊಂದು ಶಾ
ಕವನೊಸೆದಿಕ್ಕಿಯಲ್ಪಘೃತಮಂ ತಳೆದೋಱಿ ಮಗುಳ್ದು ತುತ್ತುಗಳ್
ಸವಿವಡೆವಂತು ಪೊಂಬೆಸಱ ಸೂಪವನೊಪ್ಪುವ ಮಾದುರಂಗಳಂ
ಯುವತಿ ತೆರಳ್ಚಿ ಬಡ್ಡಿಸಿದಳಾಸುಖಿಯೊಳ್ ಪರಿತೃಪ್ತಿಯಪ್ಪಿನಂ ೧೩೦

ವ|| ಅಂತಾತಂ ಭೋಜನದಿಂ ತುಷ್ಟನಾಗೆ

ಸುರುಚಿರಮಪ್ಪ ತೆಂಗಿನೆಳನೀರ್ಗಳಸಂದಳದಂತೆ ಕಾಂತೆ ತ
ಣ್ಗರಗಮನೆತ್ತಿ ಶೈತ್ಯಜಲಮಂ ಪದೆಪಿಂದೆಱಿಯಲ್ಕೆ ಶೀಕರೋ
ತ್ಕರಮೆರ್ದೆಯೊಳ್ ನಿಮಿರ್ದ್ದೆಸೆವ ಮೀಸೆಗಳೊಳ್ ತುಱುಗಲ್ ಪೊದಟ್ಟು ಕ
ಣ್ಣರಿಮುಗಿವಂತಿರೀಂಟಿ ಕಡೆಯೊಳ್ ತಲೆದೂಗಿ ಮಗುೞ್ದು ತೇಗಿದಂ ೧೩೧

ಕೂಡಲೆ—೧೨೮. ಆ ಕುಮಾರಿಯು ಹಿತ್ತಿಲಿನಲ್ಲಿದ್ದ ಬಾಳೆಮರಗಳ ಎಲೆಗಳಲ್ಲಿ ಮೂರನೇ ಒಂದು ಭಾಗವನ್ನು ಬಿಟ್ಟು ಚಿಗುರಾದ ಒಂದು ಬಾಳೆಯೆಲೆಯ ಅಗ್ರವನ್ನು ಮೃದುವಾಗಿ ಉಗುರಿನಿಂದ ಚಿವುಟಿತಂದಳು. ವ|| ಅನಂತರ ೧೨೯. ನೆಲದ ಮೇಲೆ ಕುಡಿಕೆಯ ನೀರನ್ನು ಚುಮುಕಿಸಿ ಒರೆಸಿದಳು. ಮತ್ತೆ ಚೌಕವಾಗಿ ಸ್ಥಳಮಾಡಿದಳು. ಬಾಲೆ ಎಲೆ ಹಾಸಿದಳು. ಒಂದು ಹೊಸ ತಂಬಿಗೆಯಲ್ಲಿ ನೀರನ್ನು ಕೊಟ್ಟಳು. ವ|| ಅವನು ಆ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡು ಕುಳಿತುಕೊಳ್ಳಲು—೧೩೦. ಪ್ರಮಾಣ ವನ್ನರಿತು ಅನ್ನವನ್ನು ಬಡಿಸಿದಳು. ಉಪ್ಪಿನ ಕಾಯ್ಗಳನ್ನೂ ಒಂದು ತರಕಾರಿಯನ್ನೂ ಬಡಿಸಿದಳು. ಸ್ವಲ್ಪ ತುಪ್ಪ ಹಾಕಿದಳು. ತುತ್ತುಗಳು ರುಚಿಯಾಗುವಂತೆ ತೊವ್ವೆಯನ್ನು ಹಾಕಿದಳು. ಮತ್ತೆ ಮಧುರವಾದ ವಸ್ತುಗಳನ್ನು ಬಡಿಸಿದಳು. ಅವನಿಗೆ ತೃಪ್ತಿಯಾಗು ವಂತೆ ಬಡಿಸಿದಳು. ವ|| ಆತನು ಭೋಜನದಿಂದ ತುಷ್ಟನಾಗಲು—೧೩೧. ತೆಂಗಿನ ಎಳ ನೀರಿನಂತೆ ಸಿಹಿಯಾದ ತಣ್ಣೀರನ್ನು ಅವಳು ತಣ್ಣಗಿರುವ ಗಡಿಗೆಯಿಂದ ಎತ್ತಿಸುರಿದಳು. ನೀರಿನ ತುಂತುರುಗಳು ಎದೆಯ ಮೇಲೂ ನೀಳವಾದ ಮೀಸೆಗಳ ಮೇಲೂ ಒಟ್ಟುಗೂಡಿ ನಿಂತು ಕಣ್ಣುಗಳನ್ನು ಅರ್ಧಮುಚ್ಚಿದನು. ಕೊನೆಯಲ್ಲಿ ತಲೆದೂಗಿ ಮೆಚ್ಚಿ ತೇಗಿದನು.

ವ॥ ಅಂತು ತೇಗಿ ಗೊಟ್ಟಂಗೊಂಡು ಕೈದೊಳೆದು ಗೃಹೀತತಾಂಬೂಲನಾಗಿ ಸಂತೋಷಂಬಟ್ಟವಳಂ ವಿವಾಹವಾಗಿ ಸುಖದಿನಿರ್ದಂ ಅದಱಿಂ ಗೃಹಸುಖಂ ಸತಿಯರೊಳ್ಪೆಂದು ರಾಕ್ಷಸಂಗೆ ಪೇೞಲ್ ಸಂತೋಷಂಬಟ್ಟು ನಿಂಬವತಿಯ ಕ್ರಮಮೆಂತೆಂದು ಕೇಳಲಾತಂ ಪೇೞಲ್ ತಗುಳ್ದನದೆಂತೆನೆ

ಪದೆಪಿಂ ಸೌರಾಷ್ಟ್ರದೊಳ್ ರಂಜಿಪುದು ವಳಭಿ ವಾಣೀವಿಲಾಸಕ್ಕೆ ಶೋಭಾ
ಸದನಂ ತಾನೆಂಬಿನಂ ತತ್ಪುರದೊಳೆ ಗೃಹಗುಪ್ತಂ ವಣಿಙ್ಮುಖ್ಯನಿರ್ಪಂ
ಮುದದಿಂ ಕಲ್ಯಾಣದಿಂದಂ ತವೆಯದ ನವರತ್ನಂಗಳಿಂ ರಾಜರಾಜಾ
ಭ್ಯುದಯಂ ತನ್ನೇಕದೇಶಕ್ಕೆಣೆವಡೆಯದೆನಿಪ್ಪಂದದಿಂ ಸಂದಗುರ್ಬಿಂ ೧೩೨

ವ॥ ಅಂತಿರ್ಪ ಗೃಹಗುಪ್ತಂಗೆ

ಸತತಂ ರೋಹಣಶೈಲದೊಳ್ ಮಣಿ ಸುಧಾಂಭೋರಾಶಿಯೊಳ್ ಚಂದ್ರಲೇ
ಖೆ ತಪಶ್ಶಕ್ತಿಯೊಳುದ್ಧಶಾಂತಿ ಕವಿತಾವಿಸ್ತಾರದೊಳ್ ಪ್ರೌಢಿ ಪು
ಷ್ಪಿತಪದ್ಮಸ್ಥಳದೊಳ್ ಲಸತ್ಕಮಳೆ ಪೆಂಪಿಂ ಪುಟ್ಟುವಂತಾವಣಿ
ಕ್ಷಿತಿಯೊಳ್ ಪುಟ್ಟಿದಳೊಲ್ದು ರತ್ನವತಿಯೆಂಬಳ್ ಶಂಬರಾರಿಪ್ರಿಯಳ್ ೧೩೩

ವ॥ ಅನಂತರ ಗೊಟ್ಟವನ್ನು ತೆಗೆದುಕೊಂಡು ಕೈತೊಳೆದುಕೊಂಡನು. ತಾಂಬೂಲವನ್ನು ಸವಿದು ಸಂತೋಷಪಟ್ಟನು. ಆಮೇಲೆ ಅವಳೊಡನೆ ಮದುವೆಯಾಗಿ ಸುಖವಾಗಿದ್ದನು. ಆದುದರಿಂದ ಸತಿಯರ ಒಳ್ಳೆಯ ಗುಣಗಳೇ ಗೃಹಸುಖ ಎಂದು ರಾಕ್ಷಸನಿಗೆ ಹೇಳಲು ಅವನು ಸಂತೋಷಪಟ್ಟನು. ಮತ್ತೆ ರಾಕ್ಷಸನು 'ನಿಂಬವತಿಯ ಕ್ರಮವೆಂಥದು ಹೇಳು' ಎಂದು ಕೇಳಿದನು. ಅದಕ್ಕೆ ಮಿತ್ರಗುಪ್ತನು ಹೇಳತೊಡಗಿದನು. ೧೩೨. ಸೌರಾಷ್ಟ್ರದೇಶದಲ್ಲಿ ವಲಭೀ ಎಂಬ ನಗರವು ರಂಜಿಸುತ್ತದೆ. ಅದು ಸರಸ್ವತಿಯ ನಿವಾಸ ಸ್ಥಾನ. ಆ ನಗರದಲ್ಲಿ ಗೃಹಗುಪ್ತನೆಂಬ ವೈಶ್ಯ ಶ್ರೇಷ್ಠನಿದ್ದಾನೆ. ಸಂತೋಷದಿಂದ ಸುಖವಾಗಿದ್ದಾನೆ. ನವರತ್ನಗಳಿಂದ ತುಂಬಿದ ಅವನ ಐಶ್ವರ್ಯದ ಮುಂದೆ ಕುಬೇರನ ಐಶ್ವರ್ಯವು ಒಂದು ಭಾಗಮಾತ್ರ. ಹೀಗೆ ವೈಭವದಿಂದ್ದನು. ವ॥ ಹಾಗಿದ್ದ ಗೃಹಗುಪ್ತನಿಗೆ ೧೩೩. ರೋಹಣ ಶೈಲದಲ್ಲಿ ರತ್ನ, ಅಮೃತಸಾಗರದಲ್ಲಿ ಚಂದ್ರಲೇಖೆ, ತಪಶ್ಶಕ್ತಿಯಲ್ಲಿ ಶ್ರೇಷ್ಠವಾದ ಶಾಂತಿ, ವಿಸ್ತಾರವಾದ ಕವಿತೆಯಲ್ಲಿ ಪ್ರೌಢಿಮೆ, ಅರಳಿದ ಕಮಲವನದಲ್ಲಿ ಲಕ್ಷ್ಮಿ—ಇವು ಹುಟ್ಟುವ ಹಾಗೆ ಮನ್ಮಥನಿಗೆ ಪ್ರಿಯಳಾದ ರತಿಯಂತೆ

ವಿಲಸನ್ಮಾಣಿಕ್ಯಮಂ ಚೆಲ್ವಧರದ ರುಚಿಯಿಂ ನಿರ್ವ್ಯಸೈರ್ಮಲ್ಯಮುಕ್ತಾ
ವಲಿಯಂ ದಂತಪ್ರಭಾಸಂಪದದಿನುರುಮರುನ್ನೀಲಮಂ ಸಂತತಂ ಕುಂ
ತಲಚಂಚತ್ಕಾಂತಿಯಿಂ ವಿದ್ರುಮಮನಮಳಹಸ್ತಾಬ್ಜದಿಂ ಗೆಲ್ದು ತತ್ಕೋ
ಮಳೆ ಮತ್ತಂ ರತ್ನಪಾಂಚಾಲಿಕೆಯೆನಲೆಸೆವಳ್ ತನ್ನದೃಗ್ದೀಪ್ತಿಯಿಂದಂ ೧೩೪

ಅಂತೆಸೆದಿರ್ಪ ರತ್ನವತಿಯಂ ಗೃಹಗುಪ್ತನೊಱಲ್ದು ತತ್ಕಳಾ
ವಂತನೆನಲ್ಕೆ ಸಾಲ್ವ ಬಲಭದ್ರನೆನಿಪ್ಪ ವಣಿಗ್ವರಂಗೆ ಕೊ
ಟ್ಟಂ ತಪನೀಯರತ್ನವಿವಿಧಾಂಬರ ಸಂತತಿಯಿಂ ಸುಹೃಜ್ಜನಂ
ಸಂತತವರ್ತಿಗಳ್ ತಣಿವಿನಂ ವಿಭವಸ್ಥಿತಿ ಚೆಲ್ವನಪ್ಪಿನಂ ೧೩೫

ವ॥ ಅಂತು ರತ್ನವತಿಯಂ ಮಧುರಾಪುರಿಯ ಬಲಭದ್ರಂಗೆ ಗೃಹಗುಪ್ತಂ ಕುಡಲೊಡಂ

ರಜನಿಕರಾಸ್ಯೆ ರತ್ನವತಿ ಪೂರ್ವದೊಳಾರ್ಜಿಸಿದುಗ್ರಕರ್ಮದಿಂ
ನಿಜಪತಿ ಸಂತತಂ ಮದುವೆಯಾದ ದಿನಂ ಮೊದಲಾಗಿ ತನ್ನ ವಾ
ರಿಜಮುಖಮಂ ನಿರೀಕ್ಷಿಸದೆ ತನ್ನೊಡಗೂಡದಿರಲ್ ದುರಾತ್ಮನಂ
ಗಜನ ಸುಮಾಸ್ತ್ರಸಂತತಿಗೆ ತತ್ಸತಿಯಂ ಗುಱಿಮಾಡಿ ಕಾಡಿದಂ ೧೩೬

ರತ್ನವತಿಯೆಂಬ ಮಗಳು ಹುಟ್ಟಿದಳು. ೧೩೪. ಆ ರತ್ನವತಿಯು ತನ್ನ ಅಧರ ಕಾಂತಿಯಿಂದ ಹೊಳೆಯುವ ಮಾಣಿಕ್ಯವನ್ನು ಗೆದ್ದಳು. ಹಲ್ಲುಗಳ ಕಾಂತಿಯಿಂದ ನಿರ್ಮಲವಾದ ಹೊಳೆಯುವ ಮುತ್ತಿನಸರದ ಕಾಂತಿಯನ್ನು ಗೆದ್ದಳು. ತನ್ನ ತಲೆಗೂಂದಲ ಕಾಂತಿಯಿಂದ ಶ್ರೇಷ್ಠವಾದ ನೀಲರತ್ನವನ್ನು ಗೆದ್ದಳು. ನಿರ್ಮಲವಾದ ಕರಕಮಲದಿಂದ ಹವಳವನ್ನು ಗೆದ್ದಳು. ಹೀಗೆ ಆ ಕೋಮಲೆಯು ಕಣ್‌ಬೆಳಕಿನಿಂದಲೂ ರತ್ನಗಳಿಂದ ಮಾಡಿದ ಬೊಂಬೆಯಂತೆ ಪ್ರಕಾಶಿಸಿದಳು. ೧೩೫. ಹೀಗಿದ್ದ ರತ್ನವತಿಯನ್ನು ಸ್ನೇಹಿತರು ತೃಪ್ತಿಪಡುವಂತೆ ತನ್ನ ವೈಭವಕ್ಕೆ ತಕ್ಕಂತೆ ಗೃಹಗುಪ್ತನು ಕಲಾವಿದನಾದ ಬಲಭದ್ರನೆಂಬ ವರ್ತಕ ಶ್ರೇಷ್ಠನಿಗೆ ಕೊಟ್ಟು ಮದುವೆಮಾಡಿದನು. ಚಿನ್ನ ರತ್ನ ಮತ್ತು ವಿಧವಿಧವಾದ ಬಟ್ಟೆಗಳನ್ನು ಬಳುವಳಿಯಾಗಿತ್ತನು. ವ॥ ಗೃಹಗುಪ್ತನು ಮಧುರಾಪುರಿಯ ಬಲ ಭದ್ರನಿಗೆ ರತ್ನವತಿಯನ್ನು ಕೊಟ್ಟನು. ಆಗ—೧೩೬. ಚಂದ್ರಮುಖಿಯಾದ ರತ್ನವತಿಯು ಪೂರ್ವಜನ್ಮದಲ್ಲಿ ಮಾಡಿದ ಕರ್ಮಫಲದಿಂದ ಅವಳ ಗಂಡನು ಮದುವೆಯಾದ ದಿನದಿಂದಲೂ ಅವಳ ಮುಖವನ್ನು ನೋಡದೇ ಇದ್ದನು. ಅವಳೊಡನೆ ಬೆರೆಯಲೇ ಇಲ್ಲ. ಮನ್ಮಥನು ಆ ಸತಿಯನ್ನು ತನ್ನ ಹೂಬಾಣಗಳಿಗೆ ಗುರಿಮಾಡಿ ಕಾಡಿದನು.

ವ॥ ಅಂತಿರ್ದ ರತ್ನವತಿಯಂ ಕಂಡು

ಈ ವನಿತೆ ರತ್ನವತಿಯ
ಲ್ಲಾವಗಮಿನ್ನೀಕೆ ನಿಂಬವತಿಯೆಂದು ಪುರ
ಸ್ತ್ರೀವೃಂದಂ ಪೆಸರಿಡೆ ತ
ದ್ಭಾವಕಿ ಕಡುನಾಣ್ಚಿ ಚಿಂತೆಯಂ ತಳೆದಿರ್ದಳ್ ೧೩೭

ವ॥ ಅಂತು ಚಿಂತಿಸುತ್ತಿರ್ಪಾಗಳ್

ತನಗನುರಕ್ತೆಯೆನಲ್ ಮು
ನ್ನನುಕೂಲೆಯೆನಲ್ಕೆ ಮೆಱೆವ ಭಿಕ್ಷುಕಿಯೊರ್ವಳ್
ಮನೆಗೆ ಬರಲ್ಕಾಕೆಗೆ ಭೋಂ
ಕೆನೆ ದುಗುಡಮನಾಂತ ರತ್ನವತಿಯಿಂತೆಂದಳ್ ೧೩೮

ಎನ್ನಿನಿಯನೆನ್ನನೆಂದುಂ
ಮನ್ನಿಸನೇನೆಂದು ನುಡಿಸನೇಕಾರಣಮಾಂ
ಮುನ್ನೆಸಗಿದ ದುಷ್ಕರ್ಮಮೊ
ತನ್ನಯ ದೌರ್ಭಾಗ್ಯಲಕ್ಷಣಮೊ ಪೇೞಲವಿಂ ೧೩೯

ವ॥ ಅದಂ ಕಂಡಲ್ಲಿಯ ವಿಳಾಸಿನಿಯರ್ ರತ್ನವತಿಯೆಂಬುದಂ ಮಾಣ್ದು ನಿಂಬವತಿಯೆಂಬ ಪೆಸರಂ ಕೊಟ್ಟರೆಂದು ಭಿಕ್ಷುಕಿಗೆ ಪೇೞಲವಳಿಂತೆಂದಳ್

ವ॥ ಹಾಗಿದ್ದ ರತ್ನವತಿಯನ್ನು ನೋಡಿ-೧೩೭. 'ಈ ವನಿತೆಯು ರತ್ನವತಿಯಲ್ಲ. ಈಕೆ ನಿಂಬವತಿ' ಎಂದು ಹೆಂಗಸರೆಲ್ಲರೂ ಹೆಸರಿಟ್ಟರು. ಆ ತರುಣಿಯು ನಾಚಿಕೊಂಡು ಚಿಂತಿತಳಾದಳು. ವ॥ ಹಾಗೆ ಯೋಚಿಸುತ್ತಿರುವಾಗ ೧೩೮. ಅವಳಲ್ಲಿ ಅನುರಕ್ತಳಾಗಿದ್ದ ಮೊದಲಿನಿಂದಲೂ ಅನುಕೂಲೆಯಾಗಿದ್ದ ಭಿಕ್ಷುಕಿಯೊಬ್ಬಳು ಅವಳ ಮನೆಗೆ ಬರುತ್ತಿದ್ದಳು. ರತ್ನವತಿಯು ಅವಳಲ್ಲಿ ತನ್ನ ದುಃಖವನ್ನು ಹೇಳಿಕೊಂಡಳು. ೧೩೯. ನನ್ನ ಗಂಡನು ನನ್ನನ್ನು ಎಂದೂ ಗೌರವಿಸುತ್ತಿಲ್ಲ. ಏನೆಂದು ಮಾತನಾಡಿಸುವುದಿಲ್ಲ. ಏನು ಕಾರಣವೋ ? ನಾನು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕರ್ಮದ ಫಲವೋ ? ನನ್ನ ದೌರ್ಭಾಗ್ಯದ ಲಕ್ಷಣವೋ ? ತಿಳಿಯದು. ನೀನು ಪ್ರೀತಿಯಿಂದ ಕಾರಣವನ್ನು ಹೇಳು. ವ॥ ಇದನ್ನು ನೋಡಿ ಇಲ್ಲಿಯ ಸ್ತ್ರೀಯರು ರತ್ನವತಿ ಎಂಬ ಹೆಸರನ್ನು ಬಿಟ್ಟು ನಿಂಬವತಿ ಎಂಬ ಹೆಸರನ್ನು ಕೊಟ್ಟಿದ್ದಾರೆ' ಎಂದು

ವನಜಮುಖಿ ರತ್ನವತಿ ನಿ
ನ್ನಿನಿಯಂ ನಿಧಿಪತಿ ವಣಿಗ್ವರೇಣ್ಯನ ಸುತೆ ತ
ತ್ಕನಕಲತಾಖ್ಯೆಗೆ ಕೂರ್ಪಂ
ನಿನಗಮವಳ್ಗಂ ಸ್ವರೂಪವೊಂದೆನಿಸಿರ್ಕುಂ ೧೪೦

ವ॥ ಎಂಬುದುಮಾಭಿಕ್ಷುಕಿಗೆ ರತ್ನವತಿಯಿಂತೆಂದಳ್

ಆದೊಡೆ ನಿಧಿಪತಿಯ ಪ್ರಾ
ಸಾದದ ಮೇಲಿರ್ದು ಕನಕಲತೆಯವೊಲಾಂ ಸ
ಮ್ಮೋದದೆ ಸೆಂಡಾಡುವ ಪೊ
ೞ್ತಾದರದಿಂದಲ್ಲಿಗಧಿಪನಂ ಬರಿಸೊಲವಿಂ ೧೪೧

ವ॥ ಅಂತು ಬರಿಸಲೊಡಂ

ಸೆಂಡಂ ಭೋಂಕೆನೆ ಕಾಂತನ
ಮಂಡೆಯೊಳಾಂ ಮೆಲ್ಲನಿಡಲೊಡಂ ನೀನಾಗಳ್
ಕಂಡಾಸತಿಯೊಲವಂ ನೀಂ
ಕೊಂಡುಯ್ಯೆಲ್ಲಿಂದೆ ಕನಕಲತೆಯಂ ಬೇಗಂ ೧೪೨

ವ॥ ಎಂದು ನೀಂ ಪೇೞ್ದೊಡಾತನೆನ್ನಂ ಕನಕಲತೆಯೆಂಬ ಭಾವನೆಯಿಂದಿಲ್ಲಿಂದಂ ಕೊಂಡುಯ್ಯಲಾಂ ಕೂಡೆ ಸುಖದಿನಿರ್ಪೆನೆಂಬುದುಂ ಭಿಕ್ಷುಕಿಯುಂತೆಗೆಯ್ವೆನೆಂದು

ಭಿಕ್ಷುಕಿಗೆ ಹೇಳಿದಳು. ಅದನ್ನು ಕೇಳಿ ಅವಳು ಹೇಳಿದಳು. ೧೪೦. "ಕಮಲ ಮುಖಿ, ರತ್ನವತಿ! ನಿನ್ನ ಗಂಡನು ನಿಧಿಪತಿಯೆಂಬ ವರ್ತಕ ಶ್ರೇಷ್ಠನ ಮಗಳಾದ ಕನಕಲತೆಯಲ್ಲಿ ಅನುರಕ್ತನಾಗಿದ್ದಾನೆ. ನಿಮ್ಮಿಬ್ಬರ ಆಕೃತಿ ಒಂದೇ ತೆರನಾಗಿದೆ." ವ॥ ಎಂದು ಹೇಳಲು ರತ್ನವತಿಯು ಆ ಭಿಕ್ಷುಕಿಗೆ ಹೇಳಿದಳು—೧೪೧. "ಹಾಗಾದರೆ ನಿಧಿ ಪತಿಯ ಪ್ರಾಸಾದದ ಮೇಲೆ ನಿಂತು ಕನಕಲತೆಯ ಹಾಗೆ ನಾನು ಸಂತೋಷದಿಂದ ಚೆಂಡಾಟವಾಡುವ ಸಮಯದಲ್ಲಿ ನನ್ನ ಪತಿಯುನ್ನು ಆದರದಿಂದ ಅಲ್ಲಿಗೆ ಬರಿಸು. ವ॥ ಹಾಗೆ ಬರಿಸಿದಾಗ—೧೪೨. ಚೆಂಡನ್ನು ನಾನು ಭೋಂಕೆಂದು ಪತಿಯ ತಲೆಗೆ ಮೆಲ್ಲನೆ ಹೊಡೆಯುತ್ತೇನೆ. ಆಗ ನೀನು ಕನಕಲತೆಯುನ್ನು ಕಂಡು 'ಆ ಸತಿಯ ಪ್ರೀತಿಯುನ್ನನು ಸರಿಸಿ ಅವಳನ್ನು ಅಲ್ಲಿಂದ ಬೇಗ ಬೇರೆ ಕಡೆಗೆ ಕರೆದುಕೊಂಡು ಹೋಗು.' ವ॥ ಹೀಗೆ ನೀನು ಬಲದ್ರನಿಗೆ ಹೇಳಿ ಅದರಂತೆ ಮಾಡಿದರೆ, (೮೦) ಆತನು ನನ್ನನ್ನು ಕನಕಲತೆಯೆಂಬ ಭಾವನೆಯಿಂದ ಇಲ್ಲಿಂದ ಕರೆದುಕೊಂಡು ಹೋಗುವನು. ಆಗ ನಾನು ಅವನೊಡನೆ ಕೂಡಿ ಸುಖವಾಗಿರುವೆನು. ಎಂದು ಹೇಳಿದೆನು. ಭಿಕ್ಷುಕಿಯು 'ಹಾಗೆಯೇ ಮಾಡುವೆನು' ಎಂದು

ಬಲಭದ್ರನೆಡೆಗೆ ಭಿಕ್ಷುಕಿ
ನಲವಿಂದಂ ಪೋಗಿ ಕೇಳ್ ಮನೋಹರೆ ತತ್ಕೋ
ಮಲೆ ಸೆಂಡನಾಡುವಳ್ ಕನ
ಕಲತಾವಧು ನೋಟ್ಪುದೆಂದು ಪೇಳ್ದಳ್ ೧೪೩

ವ॥ ಅಂತು ಪೇಟಲಾತನಾಗಳೆ ನಿಧಿಪತಿಯರಮನೆಯ ಪ್ರಾಸಾದದ ಕೆಳಗೆ ಬಂದಿರ್ಪುದುಂ

ತ್ರಿಜಗನ್ಮೋಹನಮಿಶ್ರಿತಾಂಜನಕರಂಡಂ ವಶ್ಯಕುಂಡಂ ಝಷ
ಧ್ವಜಕಾಂಡಂ ವಿಟಚಿತ್ತಖಂಡಮನುರಾಗಾಪೂರ್ಣಭಾಂಡಂ ಗುಣ
ವ್ರಜಪಂಡಂ ಖರದಂಡತುಂಡಮುಕುಳೋದ್ದಂಡಂ ದಿಟಕ್ಕೆಂಬಿನಂ
ನಿಜದಿಂ ರಂಜಿಪ ಸೆಂಡನಿಟ್ಟಳಿದಿರೊಳ್ ತತ್ಕಾಂತೆ ತನ್ಮೋಹನಾ ೧೪೪

ವ॥ ಅಂತು ನಿಂಬವತಿ ಕನಕಲತಾವ್ಯಾಜದಿಂ ಕಂತುಕಮಂ ಕಾಂತನ ಮೇಲಿಡಲೊಡಮಾತಂ ಪರಮಾನಂದದಿಂ ಪ್ರಾಸಾದದ ಮೇಲಂ ನೋಟ್ಪಿನಂ

ಪ್ರಾಸಾದಶಿಖರಗಗನಾ
ವಾಸದೊಳಮಳಾಂಗಿ ನಿಂಬವತಿ ರುಚಿರಾಂಶು
ನ್ಯಾಸಂ ಬಲಭದ್ರನ ಕ
ಣ್ಣಾಸುರಮೆನಿಪಂತು ತೋಱಿಸಿತ್ತನುನಯದಿಂ ೧೪೫

ಹೇಳಿದಳು. ೧೪೩. ಭಿಕ್ಷುಕಿಯು ಬಲಭದ್ರನ ಹತ್ತಿರಕ್ಕೆ ಹೋಗಿ 'ಕೇಳು, ಮನೋಹರಳಾದ ಕೋಮಲಳಾದ ಕನಕಲತೆಯು ಚೆಂಡನ್ನಾಡುವಳು. ನೋಡು' ಎಂದು ಹೇಳಿದಳು. ವ॥ ಹಾಗೆ ಹೇಳಲು ಆ ಬಲಭದ್ರನು ಆಗ ನಿಧಿ ಪತಿಯ ಅರಮನೆಯ ಮಹಡಿಯ ಕೆಳಭಾಗಕ್ಕೆ ಬಂದು ನಿಂತಿರಲು—೧೪೪. ಮೂರು ಲೋಕಗಳನ್ನೂ ಮೋಹಗೊಳಿಸುವ ಅಂಜನ ಮಿಶ್ರಿತವಾದ ಭರಣಿ, ಎಲ್ಲರನ್ನೂ ವಶಪಡಿಸಿಕೊಳ್ಳುವ ಕುಂಡ, ಮನ್ಮಥನ ಕಾಂಡ (ಬಾಣ) ವಿಟರ ಮನಸ್ಸನ್ನು ಖಂಡಿಸುವ ಅನುರಾಗ ತುಂಬಿದ ಭಾಂಡ, ಗುಣಸಮೂಹದ ಬಂದುಂಡೆ, ಒರಟಾದ ಕೋಲಿನ ಬಾಯಲ್ಲಿ ಮೊಗ್ಗಿನಂತೆ ಎದ್ದು ಹೊಳೆಯುವುದು. ಹೀಗೆ ಮನೋಹರವಾದ ಚೆಂಡನ್ನು ಆ ಕಾಂತೆಯು ತನ್ನ ಪತಿಗೆ ಎದುರಾಗಿ ಎಸೆದಳು. ವ॥ ಹೀಗೆ ನಿಂಬವತಿಯು ಕನಕಲತೆಯ ವ್ಯಾಜದಿಂದ ಚೆಂಡನ್ನು ಗಂಡನ ಮೇಲೆ ಎಸೆದ ಕೂಡಲೆ ಆತನು ಪರಮಾನಂದದಿಂದ ಉಪ್ಪರಿಗೆಯ ಮೇಲೆ ನೋಡಿದನು. ಆಗ ೧೪೫. ಉಪ್ಪರಿಗೆಯ ತುದಿಯೆಂಬ ಗಗನ ಪ್ರದೇಶದಲ್ಲಿ ಅಮಲಾಂಗಿ ಯಾದ ನಿಂಬವತಿಯ ಆಕರ್ಷಕವಾದ ದೇಹ ಕಾಂತಿಯ ಪ್ರಸರವು ಬಲಭದ್ರನ

ವ॥ ಅಂತಿರ್ದ ಸತಿಯಾತಂ ನೋಡಲ್ ಭಿಕ್ಷುಕಿಯಿಂತೆಂದಳ್

ಮನಸಿಜನವ್ಯಮೂರ್ತಿ ಬಲಭದ್ರವಣಿಗ್ವರ ಕೇಳ್ ನಿರಂತರಂ
ಕನಕಲತಾಖ್ಯೆ ನಿನ್ನೊಡನಿರಲ್ ಬಯಸಿರ್ದಪಳಿಲ್ಲಿರಲ್ಕೆ ತ
ಜ್ಜನಕನ ಬಾಧೆಗಂಜುವಳಿರುಳ್ ಕವಿದಾಕ್ಷಣಮನ್ಯದೇಶದ
ತ್ತನುನಯದಿಂದೆ ಪೋಪುದವಳಂ ಧನಮಂ ಮಿಗೆ ಕೊಂಡು ಬೇಗದಿಂ ೧೪೬

ವ॥ ಎಂದು ಮತ್ತಂ

ಇಂದಿರುಳಾಂ ಕನಕಲತಾ
ಸುಂದರಿಯಂ ಬೇಟ್ಪ ರತ್ನಮಂ ಬಹುಧನಮಂ
ತಂದಿತ್ತಪೆನಾಂ ನೀನಿ
ಲ್ಲಿಂದಂ ಪೋಗನ್ಯದೇಶದತ್ತಲ್ ನಲವಿಂ ೧೪೭

ವ॥ ಎಂದೊಡಾತನಂತೆಗೆಯ್ವೆನೆಂಬುದುಮೊಂದುದಿನಂ

ದೆಸೆಯಂ ಬಾಸಣಿಸಿರ್ಪ ಕಟ್ಟಲೆಯೊಳಂದೀರ್ಷ್ಯಾಳುಮೋಹಂ ಮಿಗು
ರ್ವಿನೆ ತದ್ಭಿಕ್ಷುಕಿ ಕೂರ್ತು ನಿಂಬವತಿಯಂ ಬೇಟ್ಪರ್ಥಮಂ ರತ್ನಮಂ
ಪೊಸತಪ್ಪಂಬರಮಂ ನೆಗಟ್ದ ಬಲಭದ್ರಂಗಾಕೆ ತಂದಿತ್ತು ಪೋ
ಗು ಸುಖಂ ರಂಜಿಸುವಂತಿವಂ ತಳೆದು ನೀಂ ದೂರಕ್ಕೆನುತ್ತಾತನೊಳ್ ೧೪೮

ಕಣ್ಣಿಗೆ ಮಿತಿಮೀರಿ ಸುಂದರವಾಗಿ ಕಾಣಿಸಿತು. ವ॥ ಹಾಗಿದ್ದ ಕಾಂತೆಯನ್ನು ಆತನು ನೋಡಲು ಭಿಕ್ಷುಕಿಯು ಹೇಳಿದಳು–೧೪೬. "ಮನ್ಮಥನ ಹೊಸ ಬಗೆಯ ಆಕಾರವನ್ನು ತಳೆದ ಬಲಭದ್ರವಣಿಗ್ವರನೆ ಕೇಳು, ಕನಕಲತೆಯು ಎಡೆಬಿಡದೆ ನಿನ್ನೊಡನೆ ಇರಲು ಬಯಸುತ್ತಾಳೆ. ಇಲ್ಲಿರಲು ಅವಳಿಗೆ ತಂದೆಯ ಹೆದರಿಕೆ. ಕತ್ತಲೆಯಾದ ಕೂಡಲೆ ಅವಳನ್ನೂ ಧನವನ್ನೂ ತೆಗೆದುಕೊಂಡು ಬೇರೆ ದೇಶದ ಕಡೆ ಬೇಗ ಹೋಗು," ವ॥ ಎಂದು ಹೇಳಿ ಮತ್ತು ಇಂದು ರಾತ್ರಿ ಕನಕಲತಾ ಸುಂದರಿಯನ್ನೂ ಬೇಕಾದಷ್ಟು ರತ್ನವನ್ನೂ ಬಹುಧನವನ್ನೂ ನಾನು ನಿನಗೆ ತಂದು ಕೊಡುವೆನು. ನೀನು ಆನಂದದಿಂದ ಬೇರೆ ದೇಶದ ಕಡೆ ಹೊರಡು." ವ॥ ಎಂದು ಹೇಳಿದಳು. ಅವನು 'ಹಾಗೆಯೇ ಮಾಡುವೆನು' ಎಂದು ಹೇಳಿದನು. ಒಂದು ದಿನ–೧೪೮. ದಿಕ್ಕುಗಳನ್ನು ಆವರಿಸಿಕೊಂಡಿದ್ದ ಕತ್ತಲೆಯಲ್ಲಿ (ಈರ್ಷ್ಯೆಯುಳ್ಳವರ ಮೋಹವು ವೃದ್ಧಿ ಹೊಂದಲು ?) ಆ ಭಿಕ್ಷುಕಿಯು ಸ್ನೇಹದಿಂದ ನಿಂಬವತಿಯನ್ನೂ ಬೇಕಾದ ಹಣವನ್ನೂ ರತ್ನವನ್ನೂ ಹೊಸ ಬಟ್ಟೆಗಳನ್ನೂ ಬಲಭದ್ರನಿಗೆ ತಂದು ಕೊಟ್ಟಳು, 'ಹೋಗು, ಇವನ್ನು ತೆಗೆದುಕೊಂಡು ಸುಖವಾಗಿ ದೂರಕ್ಕೆ ಹೋಗು' ಎಂದು

ವ॥ ಅಂತೆನಲವಂ ನಿಂಬವತಿಯುಂ ಕನಕವತಿಯುಮೊಂದೆ ಚಂದಮಪ್ಪುದಱಿಂದವಳಂ ಕೊಂಡು ನಿಶಾಮಾರ್ಗದಿಂದೆ ವಳಭಿಯಂ ಪೊಱಮಟ್ಟು ಪೋಗುತುಂ ದಾರಿಯೊಳ್

ಪ್ರಿಯೆಗೆ ನುಡಿ ನೆರವು ಪರಿಚ
ರ್ಯೆಯುಮೊಲವಿಂ ಮಾಟ್ಪಳೆಂದು ಬಲಭದ್ರಂ ದಾ
ಸಿಯನೊರ್ಬಳಂ ನಿತಾಂತ
ಕ್ರಯಮಾಗಲ್ಕೊಂಡು ಪೊಱಿಸಿದಂ ಬಲ್ಪೊಱೆಯಂ ೧೪೯

ವ॥ ಅಂತವಳ ಮಂಡೆಯೊಳ್ ಪೊಱೆಯನಿಟ್ಟು

ದಿವಸಕ್ರಮದಿಂ ಪೊಕ್ಕಂ
ಯುವತಿಯುತಂ ಶೂರಸೇನದೇಶದೊಳಂದೊ
ಪ್ಪುವ ಮಧುಮತಿಪತ್ತನಮಂ
ನವರತ್ನಾಧಿಪ ವಣಿಗ್ವರಂ ಬಲಭದ್ರಂ ೧೫೦

ವ॥ ಅಂತಾ ಮಧುಮತಿಪತ್ತನಮಂ ಪೊಕ್ಕು

ದಿನದಿನದೊಳ್ ಬಲಭದ್ರಂ
ಧನಕನಕ ಸಮೃದ್ಧಿಯಿಂ ಕರಂ ಪೆರ್ಚಿ ದಿಶಾ
ನನದೊಳ್ ಕೀರ್ತಿಯನಾಂತಂ
ತನಗಾರ್ಜಿತ ಪುಣ್ಯಮುಳ್ಳೊಡೆಲ್ಲಿರ್ದೊಡಮೇಂ ೧೫೧

ಬಲಭದ್ರನಿಗೆ ಹೇಳಿದಳು. ವ॥ ಹಾಗೆನ್ನಲು ನಿಂಬವತಿಯೂ, ಕನಕವತಿಯೂ ಒಂದೇ ರೀತಿಯಾಗಿದ್ದುದರಿಂದ ನಿಂಬವತಿಯನ್ನು ಕರೆದುಕೊಂಡು ರಾತ್ರಿಯಲ್ಲಿ ನಗರದಿಂದ ಹೊರಟನು. ದಾರಿಯಲ್ಲಿ. ೧೪೯. "ದಾಸಿಯೊಬ್ಬಳಿದ್ದರೆ ಪ್ರಿಯೆಯೊಡನೆ ಮಾತನಾಡುವಳು. ಸಹಾಯ ಮಾಡುವಳು. ಪ್ರೀತಿಯಿಂದ ಸೇವೆ ಮಾಡುವಳು"–ಎಂದು ಯೋಚಿಸಿ ಬಲಭದ್ರನು ಒಬ್ಬಳು ದಾಸಿಯನ್ನು ದೊಡ್ಡ ಬೆಲೆ ಕೊಟ್ಟು ಕೊಂಡು ಕೊಂಡನು ಮತ್ತು ಅವಳ ತಲೆಯ ಮೇಲೆ ಆ ದೊಡ್ಡ ಹೊರೆಯನ್ನು ಹೊರಿಸಿದನು. ವ॥ ಹಾಗೆ ಅವಳ ತಲೆಯ ಮೇಲೆ ಹೊರೆಯನ್ನು ಇಟ್ಟು—೧೫೦. ನವರತ್ನಗಳಿಗೊಡೆಯನಾದ ವಣಿಗ್ವರ ಬಲಭದ್ರನು ಕೆಲವು ದಿವಸಗಳಲ್ಲಿ ಯುವತಿಯೊಡನೆ ಶೂರಸೇನ ದೇಶದಲ್ಲಿ ಪ್ರಸಿದ್ಧವಾದ ಮಧುಮತಿ ನಗರವನ್ನು ತಲಪಿದನು. ವ॥ ಹಾಗೆ ಆ ಮಧುಮತಿ ನಗರವನ್ನು ಪ್ರವೇಶಿಸಿ—೧೫೧. ದಿನ ದಿನಕ್ಕೆ ಬಲಭದ್ರನು ಧನ ಕನಕ ಸಮೃದ್ಧಿಯಿಂದ ಅತ್ಯುನ್ನತಿಯನ್ನು ಪಡೆದು ದಿಗಂತರಗಳವರೆಗೆ ಕೀರ್ತಿಶಾಲಿಯಾದನು.

ವ॥ ಅಂತಿರ್ಪುದುಂ

ಇತ್ತಲ್ ಗೃಹಗುಪ್ತಂ ನಿಜ
ಚಿತ್ತದೊಳತಿ ಚಿಂತಿಸುತ್ತುಮೆನ್ನಳಿಯುಂ ತಾ
ನೆತ್ತಲ್ ಪೋದಪನೊಡಗೊಂ
ಡುತ್ತಮಗಜಗಮನೆ ರತ್ನವತಿಯನಲಂಪಿಂ ೧೫೨

ವ॥ ಎಂದು ಚಿಂತಿಸುತ್ತಿರ್ಪುದುಮತ್ತಲ್ ಮಧುಮತಿ ಪತ್ತನದೊಳ್

ಅಡಿಗಳನೊತ್ತುತ್ತುಂ ತೂಂ
ಕಡಿಸುವ ನಿಜದಾಸಿಯುಂದಮುಂ ಕಂಡಾಗಳ್
ತುಡುಗುಣಿ ತೊಟ್ಟಿಯೆನುತ್ತುಂ
ಪೊಡೆದಳ್ ಕಡುಮುಳಿದು ನಿಂಬವತಿಯಂತವಳಂ ೧೫೩

ವ॥ ಅಂತು ಆ ತೊಟ್ಟಿಂ ಜಡಿದು ಪೊಡೆಯಲವಳ್

ಕಂಡವರೆಲ್ಲರೊಳ್ ಕಪಟದಿಂ ಬಲಭದ್ರನದೊರ್ಬ ಸೆಟ್ಟಿಯಾ
ಪೆಂಡತಿಯುಂ ಸಮಸ್ತಧನಮುಂ ನವರತ್ನಮನೀಟ್ಟು ತಂದು ಭೂ
ಮಂಡಲದೊಳ್ ಕರಂ ಶುಚಿಯೆನಿಪ್ಪವೊಲಿರ್ದಪನೆಂದು ಕೋಪದು
ದ್ದಂಡತೆಯಿಂದೆ ಪೇಟ್ದಳತಿ ಚೋದ್ಯಮೆನಲ್ ನಿಜದಾಸಿ ಸಾಸದಿಂ ೧೫೪

ವ॥ ಅಂತು ಪೇಟ್ವುದುಮಲ್ಲಿಯ ಸಮಯಸಂಕೇತದವರೊಂದುಗೂಡಿ ಬಲಭದ್ರನಂ ಕರೆಯಿಸಿ

ಹಿಂದೆ ಸಂಪಾದಿಸಿದ ಪೂರ್ವ ಪುಣ್ಯವಿದ್ದರೆ ಎಲ್ಲಿದ್ದರೇನು ? ವ॥ ಹಾಗಿರಲು—೧೫೨. ಇತ್ತ ಗೃಹಗುಪ್ತನು ತನ್ನ ಅಳಿಯನು ಗಜಗಾಮಿನಿಯಾದ ರತ್ನವತಿಯನ್ನು (ನಿಂಬವತಿಯನ್ನು) ಕರೆದುಕೊಂಡು ಎತ್ತಕಡೆ ಹೋದೆನೋ ಎಂದು ಮನಸ್ಸಿನಲ್ಲಿ ತುಂಬ ಆಲೋಚಿಸಿದನು. ವ॥ ಎಂದು ಚಿಂತಿಸುತ್ತಿರುವಾಗ ಅತ್ತ ಮಧುಮತಿ ನಗರದಲ್ಲಿ—೧೫೩. ಒಂದು ದಿನ ಕಾಲುಗಳನ್ನು ಒತ್ತುತ್ತಾ ದಾಸಿಯು ಹಾಗೆಯೇ ತೂಕಡಿಸುತ್ತಿದ್ದಳು. ಅದನ್ನು ನೋಡಿ ನಿಂಬವತಿಯು 'ಏ ಕಳ್ಳಿದಾಸಿ' ಎಂದು ಹೇಳುತ್ತಾ ಅವಳನ್ನು ಹೊಡೆದಳು. ವ॥ ಹಾಗೆ ಆ ದಾಸಿಯನ್ನು ಜರಿದು ಹೊಡೆಯಲು, ಅವಳು—೧೫೪. ಬಲಭದ್ರನೆಂಬ ಶೆಟ್ಟಿ ಇನ್ನೊಬ್ಬನ ಹೆಂಡತಿಯನ್ನೂ ಧನವನ್ನೂ ನವರತ್ನಗಳನ್ನೂ ಮೋಸದಿಂದ ಕದ್ದು ತಂದಿದ್ದಾನೆ. ಭೂಮಂಡಲದಲ್ಲಿ ತಾನು ಪವಿತ್ರನೆಂದು ನಟಿಸುತ್ತಿದ್ದಾನೆ. ಎಂದು ಕೋಪದಿಂದ ಕಂಡವರ ಮುಂದೆಲ್ಲ ಹೇಳಿದಳು. ಆ ದಾಸಿಯ ಸಾಹಸವು ಆಶ್ಚರ್ಯಕರವಾಗಿದ್ದಿತು. ವ॥ ಆಗ ಅಲ್ಲಿಯ ಸಮಯವನ್ನೂ ರಹಸ್ಯವನ್ನೂ ಅರಿತವರೆಲ್ಲ ಒಟ್ಟು

ಪರಸತಿಯುಂ ಪರಾತ್ತಧನಮುಂ ಮಿಗೆ ವಂಚಿಸಿ ತಂದ ದೋಷಿ ಮ
ತ್ಪುರದೊಳಿರಲ್ಕೆ ನಿಂದೆಯೆಮಗಪ್ಪುದೆನುತ್ತೆ ವಣಿಗ್ವರ್ಗಳುಂ
ಪರಿಭವಮಪ್ಪಿನಂ ಪೊಱಮಡೀಪೊಟಲಿಂ ಪರಪತ್ನಿಯುಂ ಪರರ್
ದೊರಕಿಸಿದರ್ಥಮುಂ ಸುಖದೊಳಿಲ್ಲಿರಿಸೆಂದವರೆಲ್ಲರಾತನಂ ೧೫೫

ವ॥ ಅಂತೆಂಬುದುಮಾಬಲಭದ್ರಂ ಚಿಂತಾಕ್ರಾಂತನಾಗಿ ಮನೆಗೆ ಬಂದು ಸತಿಯೊಳ್ ಪೇಟಲಾಕೆಯಿಂತೆಂದಳ್

ಪರಸತಿಯಲ್ತು ಮತ್ಸತಿ ಪರಾರ್ಥಮುದಲ್ತು ಮದೀಯ:ವಿತ್ತಮೆಂ
ದರಸಿನ ಮುಂದೆ ನಿಂದು ಕಡುಬಾಸೆಯನೊಲ್ಲದೊಡೋಲೆಯುಂ ಮನು
ಷ್ಯರನತಿವೇಗದಿಂ ವಳಭಿಗಟ್ಟಿ ವಿಚಾರಿಪುದೆನ್ನ ಕಾಂತೆಯು
ರ್ದಿರವನ . . . . . . . . . . . . . . . . . . † ೧೫೬

ವ॥ ಏದೊಡಾತಂ ಮಗುಟ್ದರಸನಿರ್ದೆಡೆಗೆ ಪೋಗಿ ಬಿನ್ನವಿಸಿ ಸಕಲರಂ ಕರೆಯಿಸಿ ತನ್ನ ಕಾಂತೆ ಪೇಟ್ದ ಕ್ರಮಮುಂ ಪೇಟಲವರಿದು ನ್ಯಾಯಮೆಂದು ವಳಭಿಗೋಲೆಯುಂ ಕಳಿಪಲದಱ³ೊಳ್

ಗೂಡಿ ಬಲ ಭದ್ರನನ್ನು ಕರೆಯಿಸಿ—೧೫೫. "ಪರಸ್ತ್ರೀಯನ್ನೂ ಪರಧನವನ್ನೂ ಮೋಸದಿಂದ ತಂದಿರುವ ದೋಷಿಯು ನೀನು. ನೀನು ನಮ್ಮ ನಗರದಲ್ಲಿದ್ದರೆ ನಮಗೆಲ್ಲ ನಿಂದೆಯು ಬರುವುದು. ಅಪಮಾನವಾಗುವುದಕ್ಕೆ ಮೊದಲೇ ಈ ನಗರದಿಂದ ಹೊರಕ್ಕೆ ಹೊರಡು. ಪರಪತ್ನಿಯನ್ನೂ ಪರಧನವನ್ನೂ ಇಲ್ಲಿಯೇ ಇರಿಸು" ಎಂದು ಅವರೆಲ್ಲರೂ ಅವನಿಗೆ ಹೇಳಿದರು. ವ॥ ಆಗ ಆ ಬಲಭದ್ರನು ಚಿಂತಾಕ್ರಾಂತನಾಗಿ ಮನೆಗೆ ಬಂದು ತನ್ನ ಹೆಂಡತಿಗೆ ಇದನ್ನು ಹೇಳಿದನು. ಅವಳದಕ್ಕೆ ಹೀಗೆಂದಳು. ೧೫೬. ಇವಳು ಪರಸ್ತ್ರೀಯಲ್ಲ. ನನ್ನ ಹೆಂಡತಿ. ಇದು ಪರಧನವಲ್ಲ. ನನ್ನ ಹಣ ಎಂದು ರಾಜನ ಮುಂದೆ ನಿಂತು ಭಾಷೆಯನ್ನು ಮಾಡು. ಒಪ್ಪಿಗೆಯಾಗದಿದ್ದರೆ ಈ ಕೂಡಲೆ ಪತ್ರವನ್ನು ಕೊಟ್ಟು ವೇಗದಿಂದ ವಲಭಿಗೆ (ಮಧುರಾಪುರಿಗೆ) ಕಳುಹಿಸಿ ನನ್ನ ಹೆಂಡತಿಯ ವಿಚಾರವನ್ನು ವಿಚಾರಿಸಿರಿ . . . . . . . . . ಎಂದು ಹೇಳು." ವ॥ ಅದರಂತೆ ಮತ್ತೆ ರಾಜನ ಬಳಿ ಹೋಗಿ ಎಲ್ಲರನ್ನೂ ಕರೆಯಿಸಿ ತನ್ನ ಹೆಂಡತಿಯು ಹೇಳಿದಂತೆ ಹೇಳಿದನು. ಅವರು ಇದು ನ್ಯಾಯವೆಂದು ತಿಳಿದು ವಲಭಿಗೆ ಪತ್ರವನ್ನು

† ದಲ್ಮದೀಯೆಪೆಗೆ ಬಂದನು ಪಡೆದಿಂದ:ವಲಭಾ ಎಂದು ಒಂದು ಪ್ರತಿಯಲ್ಲಿದೆ

ಇಲ್ಲಿ ಬಲಭದ್ರನೆಂಬವ
ನಲ್ಲಿಂದಂ ಕನಕಲತೆಯೆನಿಪ್ಪಂಗನೆಯುಂ
ಬಲ್ಲಿದತನದಿಂ ತಂದೆ
ಮ್ಮೆಲ್ಲರೊಳಿವಳೆನ್ನ ಕಾಂತೆಯೆಂದೆನುತಿರ್ಪಂ ೧೫೭

ವ॥ ಎಂದಿರ್ಪ ಲೇಖಾರ್ಥಮಂ ಗೃಹಗುಪ್ತಂ ಕಂಡು

ಇಂದು ತನೂಜೆಯುಂ ಪಡೆದೆನೆನ್ನಳಿಯಂ ನಲವಿಂದೆ ಕೂರ್ತುಮ
ನ್ನಂದನೆಯೊಳ್ ಸುಖಂಬಡೆಯುತಿರ್ದನಿಲ್ಲಿಗೆ ನಾಣ್ಚಿ ಮತ್ತೆ ಬೇ
ಱೊಂದು ವಿಳಾಸದಿಂ ಮಧುಮತೀಪುರವೆಂಬುದಱೊಳ್ ಪ್ರಸಿದ್ಧಿಯಿಂ
ದೆಂದು ಮನೋನುರಾಗದೊದವಿಂ ಗೃಹಗುಪ್ತನವರ್ಗೆ ಮೆಚ್ಚಿದಂ ೧೫೮

ವ॥ ಅಂತು ಗೃಹಗುಪ್ತನೋಲೆಯುಂ ತಂದವರ್ಗೆ ಬೇಟ್ಪುದಂ ಕೊಟ್ಟನಂತರಂ

ಬಹಳಾಲಂಕಾರವಮಂ ಮಾಡಿಸಿ ನಿಜಸುತೆಯುಂ ನೋಡಲೆಂದಿಷ್ಟವರ್ಗಂ
ಸುಹೃದಾಪ್ತರ್ ಬಂಧುಗಳ್ ಸೇವಕತತಿ ಬುಧಸಂತಾನಕಂ ತನ್ನ ಕಾಂತಾ
ಸಹಿತಂ ಸಂರಂಭದಿಂದಂ ಮಧುಮತಿ ನಗರಕ್ಕಿಯ್ದಿದಂ ನಲ್ಮೆಯಿಂದಂ
ಗೃಹಗುಪ್ತಂ ಲೇಖ್ಯಮಂ ತಂದವರೊಡನೊಲವಿಂ ಸಂತತಂ ಶೀಘ್ರಯಾನಂ ೧೫೯

ವ॥ ಅಂತು ಮಧುಮತೀ ಪತ್ತನಕ್ಕೆ ಬಂದು ಬಲಭದ್ರನ ಮನೆಯುಂ ಪುಗುವುದುಂ

ಬರೆದರು. ಅದರಲ್ಲಿ–೧೫೭. "ಇಲ್ಲಿ ಬಲ ಭದ್ರನೆಂಬುವನು ಕನಕಲತೆಯೆಂಬ ಅಂಗನೆಯನ್ನು ಬಲಾತ್ಕಾರದಿಂದ ತಂದು ನಮ್ಮೆಲ್ಲರೊಡನೆ ಅವಳು ತನ್ನ ಹೆಂಡತಿಯೆಂದು ಹೇಳುತ್ತಾನೆ" ಎಂದು ಬರೆದಿತ್ತು, ವ॥ ಆ ಲೇಖನದ ಅರ್ಥವನ್ನು ಗೃಹಗುಪ್ತನು ಗ್ರಹಿಸಿ—೧೫೮. "ಇಂದು ನಾನು ಮಗಳನ್ನು ಮತ್ತೆ ಪಡೆದನು ! ನನ್ನ ಅಳಿಯನು ಸಂತೋಷದಿಂದ ಸ್ನೇಹವನ್ನು ತೋರಿಸುತ್ತಾ ನನ್ನ ಮಗಳೊಡನೆ ಸುಖಪಡುತ್ತಿದ್ದಾನೆ. ಇಲ್ಲಿಗೆ ಬರಲು ನಾಚಿಕೊಂಡು ಬೇರೊಂದು ಹೆಸರಿನಿಂದ ಮಧುಮತೀಪುರದಲ್ಲಿ ಪ್ರಸಿದ್ಧಿ ಪಡೆದು ಮನೋನುರಾಗದಿಂದ ವಾಸಿಸುತ್ತಿದ್ದಾರೆ" ಎಂದು ಯೋಚಿಸಿ ಗೃಹಗುಪ್ತನು ಅವರ ವಿಷಯದಲ್ಲಿ ಮೆಚ್ಚಿಕೊಂಡನು. ವ॥ ಗೃಹಗುಪ್ತನು ಪತ್ರವನ್ನು ತಂದವರಿಗೆ ಬೇಕಾದುದನ್ನೆಲ್ಲ ಕೊಟ್ಟನು. ಅನಂತರ, ೧೫೯. ಗೃಹಗುಪ್ತನು ಪತ್ರ ತಂದವರೊಡನೆ ಬೇಗಬೇಗ ಮಧುಮತೀಪುರಕ್ಕೆ ಪ್ರಯಾಣ ಮಾಡಿದನು. ಚೆನ್ನಾಗಿ ಸಿಂಗರಿಸಿ ಮಗಳನ್ನು ನೋಡಬೇಕೆಂದು ಇಷ್ಟಜನರು, ಮಿತ್ರರು. ಆಪ್ತರು, ಬಂಧುಗಳು, ಸೇವಕರು, ವಿದ್ವಾಂಸರು ಮತ್ತು ತನ್ನ ಹೆಂಡತಿ ಇವರೆಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ಹೋದನು. ವ॥ ಮಧುಮತೀಪುರಕ್ಕೆ ಬಂದು ಬಲ

ಜನಕಂ ಮಾತೃಸಹೋದರರ್ ಪರಮಬಂಧುಶ್ರೇಣಿಗಳ್ ಭೋಂಕೆನಲ್
ಮನೆಗೇಱ್ತಂದೊಡೆ ಪೆರ್ಚಿ ನಿಂಬವತಿಯುತ್ಕ್ಮತ್ಸಾಹದಿಂ ತಂದೆಗೊ
ಲ್ದಿನಸುಂ ವಂದಿಸಲಂದು ಕಂಡು ಬಲಭದ್ರಂ ವಿಸ್ಮಯಂಬಟ್ಟಿದೇ
ನೆನುತಂ ನೋಡಿದನಲ್ತೆ ರತ್ನವತಿಯಂ ಮತ್ಕಾಂತೆಯೆಂದಾವಗಂ ೧೬೦

ವ॥ ಬೞಿಕ್ಕಂ ಬಲಭದ್ರಂ ತನ್ನ ಕಾಂತೆಯಪ್ಪ ರತ್ನವತಿಯೆ ಕನಕಲತಾಭ್ರಾಂತಿಯಂ ಮಾಡಿದಳ್ ಇಂದೆನ್ನ ಮಾನಮುೞಿಯಿತ್ತೆಂದು ಸಂತೋಷಂಬಟ್ಟು

ನೆಲೆದಪ್ಪಿದೆಡೆಗೆ ಮತಿ ಸಂ
ಚಲಿಸಿರ್ದೆಡೆಗನ್ಯದೇಶಮಾದೆಡೆಗೆ ಖಳರ್
ಮುಳಿದೆಡೆಗೆ ಬುದ್ಧಿವೇೞಲ್
ಕುಲವಧುವೇ ಕಾರಣಂ ಪರೀಕ್ಷೆಯಿದಲ್ತೇ ೧೬೧

ವ॥ ಎಂದು ಬೞಿಕಂ ಬಲಭದ್ರಂ ಗೃಹಗುಪ್ತಂಗೆ ನಮಸ್ಕರಿಸಿ ಕ್ಷೇಮ ಕುಶಲಮಂ ಕೇಳ್ದನಂತರಂ

. . . . . . . . ಮಧುಮತಿಪತ್ತನ
ದವರೆಲ್ಲರ್ ಬಂದು ಬಂದು ಸಮ್ಮದದಿಂದೊ
ಪ್ಪುವ ಗೃಹಗುಪ್ತನನಪ್ಪಲ್
ಸವಿಲಾಸದಿನಂದು ನೋಡಿದಂ ಬಲಭದ್ರಂ ೧೬೨

ಭದ್ರನ ಮನೆಯನ್ನು ಹೊಕ್ಕನು. ಆಗ, ೧೬೦. ತಂದೆ, ತಾಯಿ, ಸಹೋದರರು, ಪರಮ ಬಂಧುಗಳು ಎಲ್ಲರೂ ಇದ್ದಕ್ಕಿದ್ದ ಹಾಗೆ ಮನೆಗೆ ಬಂದುದನ್ನು ನೋಡಿ ನಿಂಬವತಿಯು ಅತ್ಯಾನಂದಭರಿತಳಾದಳು. ಉತ್ಸಾಹದಿಂದ ತಂದೆಗೆ ನಮಸ್ಕಾರ ಮಾಡಿದಳು. ಇದನ್ನು ಕಂಡು ಬಲಭದ್ರನಿಗೆ ಆಶ್ಚರ್ಯವಾಯಿತು. ಇದೇನೆಂದು ನೋಡಿದಾಗ ಅವಳು ತನ್ನ ಹೆಂಡತಿ ರತ್ನವತಿಯೆಂದು ತಿಳಿಯಿತು! ವ॥ ಬಳಿಕ ಬಲಭದ್ರನು ತನ್ನ ಹೆಂಡತಿಯಾದ ರತ್ನವತಿಯೇ ಕನಕಲತೆಯ ಭ್ರಾಂತಿಯನ್ನುಂಟುಮಾಡಿದಳು. ಇಂದು ನನ್ನ ಮಾನವುಳಿಯಿತು—ಎಂದು ಸಂತೋಷಪಟ್ಟನು. ೧೬೧. "ನೆಲೆದಪ್ಪಿದಾಗ. ಬುದ್ಧಿಯು ಚಲಿಸಿದಾಗ, ಅನ್ಯದೇಶಕ್ಕೆ ಹೋದಾಗ ದುಷ್ಟರು ಕೋಪಿಸಿಕೊಂಡಾಗ, ಬುದ್ಧಿಹೇಳಲು ಕುಲವಧುವೇ ಸಮರ್ಥಳು. ಇದು ಪರೀಕ್ಷಿಸಿದ ಅನುಭವಕ್ಕೆ ಬಂದ ಸತ್ಯ." ವ॥ ಎಂದು ಹೇಳಿ ಬಳಿಕ ಬಲಭದ್ರನು ಗೃಹಗುಪ್ತನಿಗೆ ನಮಸ್ಕರಿಸಿ ಕುಶಲ ಸಮಾಚಾರವನ್ನು ಕೇಳಿದನು. ಅನಂತರ ೧೬೨. . . . ಮಧುಮತಿನಗರದ ಜನರೆಲ್ಲರೂ ಬಂದು ಬಂದು ಆನಂದದಿಂದ ಗೃಹಗುಪ್ತನನ್ನು ತಬ್ಬಿ

ವ॥ ಅಂತು ನೋೞ್ಪ ಬಲಭದ್ರನಂ ತನ್ನಳಿಯನೆಂದೆಲ್ಲರ್ಗೆ ಪೇೞಲವರ್ ಬೞಿಕಾತನಂ ಸಂಪ್ರೀತಿಯಿಂದೊಡಗೂಡಿರ್ದರ್ ಅದಱಿಂ ಕಾಮಸಂಕಲ್ಪಮೆಂದಾರಾಕ್ಷಸಂಗೆ ನಿಂಬವತೀವೃತ್ತಾಂತಮಂ ಪೇೞ್ದೊಡದರ್ಕಾತಂ ಮೆಚ್ಚಿ ನಿತಂಬವತಿ ಏಗೆಯ್ದಳೆಂದು ಕೇಳಲಾಂ ಪೇೞಲ್ ತಗುಳ್ದಿನದೆಂತೆನೆ

ಒದವಿದ ಪೆಂಪಿನಿಂ ವಸುಮತೀಮುಖದರ್ಪಣಮಾದವಂತಿದೇ
ಶದೊಳೆಸೆದಿರ್ಪುದುಜ್ಜಯಿನಿಯೆಂಬ ಪುರಂ ಸಲೆ ತತ್ಪುರಾಧಿಪಂ
ಮದವದರಾತಿಮತ್ತಗಜಮರ್ದನಸಿಂಹನನಂತಕೀರ್ತಿಯೆಂ
ಬುದಿತಯಶೋಧಿಕಂ ಭುವನಸಾಧಕನರ್ಥಿದರಿದ್ರಬಾಧಕಂ ೧೬೩

ವ॥ ಅಂತಿರ್ಪನಂತಕೀರ್ತಿಗೆ

ಅತಿರೂಪವಂತೆ ಕುಸುಮಾ
ಯಿತತನು ಪೆಂಪಿಂ ನಿತಂಬವತಿಯೆಂಬಳ್ ಭೂ
ಪತಿಯಪ್ಪನಂತ ಕೀರ್ತಿಗೆ
ಸತಿಯಾದಳ್ ನಿಚ್ಚ ನಲ್ಮೆಯೆಸೆದಿರ್ಪಿನೆಗಂ ೧೬೪

ಲತೆಯಿಂ ಕಲ್ಪಕುಜಂ ಮದಾಳಿಯಿನರಲ್ದೋಂಟಂ ಮರಾಳೀಲಸ
ದ್ಗತಿಯಿಂ ಪುಷ್ಪಸರೋವರಂ ಪ್ರತಿಭೆಯಿಂ ವಾಕ್ಯಂ ಶಮಾಸಂಗದಿಂ
ಯತಿ ದಾನೋನ್ನತಿಯಿಂ ಧನಂ ಮೆಱೆವವೋಲ್ ಪ್ರಾಣೇಶ್ವರೀಸ್ನೇಹದಿಂ
ಸತತಂ ರಂಜಿಸುವಂ ನಿತಂಬವತಿಯಿಂ ತದ್ರಾಜಭುಜಂ ಭೂಮಿಯೊಳ್ ೧೬೫

ಕೊಂಡರು. ಆಗ ಬಲಭದ್ರನು ವಿಲಾಸದಿಂದ ಅದನ್ನು ನೋಡಿದನು. ವ|| ಹಾಗೆ ನೋಡುತ್ತಿದ್ದ ಬಲಭದ್ರನನ್ನು ತನ್ನ ಅಳಿಯನೆಂದು ಎಲ್ಲರಿಗೂ ಗೃಹಗುಪ್ತನು ಹೇಳಿದನು. ಬಳಿಕ ಅವರೆಲ್ಲ ಆತನನ್ನು ಪ್ರೀತಿಯಿಂದ ಜೊತೆಗೂಡಿಸಿಕೊಂಡು ಗೌರವಿಸಿದರು. ಅದರಿಂದ ಕಾಮದ ನೆಲೆಯು ಚಿತ್ತಸ್ನೇಹದ ಸಂಕಲ್ಪವೆಂದು ಆ ರಾಕ್ಷಸನಿಗೆ ನಿಂಬವತೀ ವೃತ್ತಾಂತವನ್ನು ಹೇಳಿದೆನು. ಆತನು ಅದನ್ನು ಕೇಳಿ ಮೆಚ್ಚಿದನು. "ನಿತಂಬವತಿಯು ಏನು ಮಾಡಿದಳು ?" ಎಂದು ಮತ್ತೆ ರಾಕ್ಷಸನು ಕೇಳಲು ನಾನು ಅದನ್ನು ಹೇಳತೊಡಗಿದೆನು. ೧೬೩. ಭೂದೇವಿಯು ಮುಖಕ್ಕೆ ಕನ್ನಡಿಯಾದ ಅವಂತಿದೇಶದಲ್ಲಿ ಪ್ರಸಿದ್ಧವಾದ ಉಜ್ಜಯಿನಿಯೆಂಬ ನಗರವಿದೆ. ಅನಂತಕೀರ್ತಿಯು ಆ ಪುರದ ರಾಜನು. ಅವನು ಮದಿಸಿದ ಶತ್ರುಗಳೆಂಬ ಮದ್ದಾನೆಗಳನ್ನು ಮರ್ದಿಸುವ ಸಿಂಹ. ಅಧಿಕ ಕೀರ್ತಿಶಾಲಿ. ಲೋಕಗಳನ್ನು ಗೆದ್ದವನು. ದರಿದ್ರರ ಬಡತನವನ್ನು ಹೋಗಲಾಡಿಸುವವನು. ವ॥ ಹಾಗಿದ್ದ ಅನಂತಕೀರ್ತಿಗೆ- ೧೬೪. ನಿತಂಬವತಿಯೆಂಬುವಳು ಹೆಂಡತಿಯಾದಳು. ಅವಳು ಅತಿಶಯ ರೂಪವತಿ. ಕುಸುಮದಂತೆ ಮೃದುವಾದ ಮಿರುಗುವ ಶರೀರವವಳದು. ಅವಳು ಯಾವಾಗಲೂ ಪ್ರೀತಿಯುಳ್ಳವಳಾಗಿದ್ದಳು. ೧೬೫. ಭೂಮಿಯಲ್ಲಿ ಆ ರಾಜನು ಪ್ರಾಣೇಶ್ವರಿಯಾದ ನಿತಂಬವತಿಯ

ವ॥ ಅಂತಾ ನಿತಂಬವತಿ

ಕುವಲಯನೇತ್ರೆ ಸುರ್ಪದರ್ಪ ವೇಣಿ ಸುಕೋಮಳ ದೇಹದೀಪ್ತಿ ಸಂ
ಭವೆ ವಿಲಸತ್ಪಯೋಧರಿಯೆನಿಪ್ಪುದಱಿಂ ರವಿರಶ್ಮಿಗಳ್ಗೆ ಬೀ
ಸುವ ಬಿರುಗಾಳಿಗಳ್ಕೆಯೊಳಗಿರ್ದೊಡಮೇಂ ಸೊಗಸು ಪ್ರಸಿದ್ಧಿ ದಿ
ಗ್ವಿವರದೊಳೊಪ್ಪುಗುಂ ಸ್ಫಟಿಕಭಾಂಡದ ದೀಪ್ತಿಕೆಪೋಲ್ ನಿರಂತರಂ ೧೬೬

ವ॥ ಅಂತು ನಿತಂಬವತಿ ಮಾನ್ಯತೆಯು ಮಹಿಮೆಯಿಂ ಪ್ರಸಿದ್ಧಿವಡೆದಿರೆ

ಬೆಸನಮನಾರತಂ ತನುವನಾಂತುದೊ ಕೈತವಮೆಯ್ದೆ ರೂಪುವೆ
ತ್ತೆಸೆದುದೊ ಧೂರ್ತವಿದ್ಯೆ ಮಿಗೆ ಮೆಯ್ವಡೆದಿರ್ದುದೊ ವಂಚನಾಗುಣಂ
ಪುಸಿ ಕುಟಿಲ ಪ್ರಸಿದ್ಧಿ ನಿಜಮೂರ್ತಿಯೊಳಿರ್ದುದೊ ಪೇೞನಲ್ಕೆ ರಂ
ಜಿಸಿದನದೊರ್ಬನಂ ಕಲಹ ಕಂಟಕನೆಂಬನನೇಕಬುದ್ಧಿಯಿಂ ೧೬೭

ವ॥ ಅಂತಿರ್ದ ಕಲಹ ಕಂಟಕನೆಂಬ ಧೂರ್ತಂ ನಿತಂಬವತಿಯ ಪ್ರಸಿದ್ಧಿಯಂ ಕೇಳ್ದು ಜ್ಜಯಿನಿಗೆ ಬಂದು

ಸ್ನೇಹದಿಂದ ಎಡಬಿಡದೆ ರಂಜಿಸಿದನು. ಕಲ್ಪವೃಕ್ಷವು ಬಳ್ಳಿಯಿಂದ, ಹೂದೋಟವು ಮದಿಸಿದ ತುಂಬಿಯಿಂದ. ಹೂಕೊಳವು ಹಂಸಗಳ ಗಮನದಿಂದ, ವಾಕ್ಯವು ಪ್ರತಿಭಾ ಶಕ್ತಿಯಿಂದ, ಯತಿಯು ಶಮಗುಣದಿಂದ, ಹಣವು ದಾನದಿಂದ ಮೆರೆಯುವಂತೆ ರಾಜನು ಕಾಂತಾಸ್ನೇಹದಿಂದ ಪ್ರಕಾಶಿಸಿದನು. ವ॥ ಹಾಗೆ ಆ ನಿತಂಬವತಿಯು–
೧೬೬. ನೈದಿಲೆ ಹೂವಿನಂತೆ ಕಣ್ಣುಳ್ಳವಳು, ಸುರುಳಿಸುರುಳಿಯಾದ ಜಡೆಯುವಳದು(?) ಕೋಮಲವಾದ ದೇಹಕಾಂತಿಯುಳ್ಳವಳು, ಸುಂದರವಾದ ಕುಚಗಳುಳ್ಳವಳು. ಅದರಿಂದ ಸೂರ್ಯನ ಕಿರಣಗಳಿಗೆ ಮತ್ತು ಬಿರುಗಾಳಿಗೆ ಹೆದರಿ ಮನೆಯೊಳಗೇ ಇದ್ದರೂ ಸ್ಫಟಿಕದ ಪಾತ್ರೆಯ ಬೆಳಕಿನಂತೆ ಅವಳ ಅಂದವೂ ಕೀರ್ತಿಯೂ ದಿಗಂತಗಳವರೆಗೂ ಹರಡಿ ಪ್ರಕಾಶಿಸುತ್ತದೆ. [ನೈದಿಲೆ ಹೂವು ಮತ್ತು ಕೋಮಲಕಾಂತಿ ಸೂರ್ಯನ ಕಿರಣಗಳಿಗೆ ಹೆದರುತ್ತದೆ. ಸರ್ಪದಂತಿರುವ ಜಡೆ ಮತ್ತು ಪಯೋಧರ ಎಂದರೆ ಮೋಡವು ಬಿರುಗಾಳಿಗೆ ಹೆದರುತ್ತವೆ.] ವ॥ ಹೀಗೆ ನಿತಂಬವತಿಯು ಮನ್ನಣೆಯನ್ನೂ ಪ್ರಸಿದ್ಧಿಯನ್ನೂ ಪಡೆದಿದ್ದಳು ೧೬೭. ಕಲಹಕಂಟಕನೆಂಬ ಬಹುಬುದ್ಧಿಯ ಧೂರ್ತನೊಬ್ಬ ನಿದ್ದನು. ಅವನು ದುರಭ್ಯಾಸಗಳು ಈ ರೂಪವನ್ನು ಧರಿಸಿದುವೋ? ಮೋಸ ಮಾಡುವುದೇ ಈ ಆಕಾರವನ್ನು ಪಡೆಯಿತೋ? ಧೂರ್ತರವಿದ್ಯೆಯು ಹೀಗೆ ಶರೀರವನ್ನೆತ್ತಿದೆಯೋ? ವಂಚನೆ ಮಾಡುವುದು, ಸುಳ್ಳು, ಕುಟಿಲಬುದ್ಧಿ ಇವು ಈ ರೂಪ

ಕಾಲಜ್ಞಂ ಜ್ಯೋತಿಷ್ಕಂ
ಸ್ತ್ರೀ ಲಕ್ಷಣದೊಳ್ಪನಱಿವನತಿಮಂತ್ರಜ್ಞಂ
ಭೂಲೋಕದೊಳಾನಲ್ಲದೆ
ಮೇಲಾರೆನಗೆಂದು ಪೊಟಲೊಳಾಡುತ್ತಿರ್ಪಂ ೧೬೮

ಪಗಲೆಲ್ಲಂ ಪೊಟಲೊಳ್ ತಿರು
ಗಿ ಗಿರೀಶವಿಹಾರದೆಡೆಯೊಳಿರುಳೆಲ್ಲಂ ಕ
ಣ್ಮುಗಿದು ತಪಸಿಯುವೊಲಿರ್ಪಂ
ಮಿಗೆ ಧೂರ್ತನೆನಿಪ್ಪ ಕಲಹಕಂಟಕನೊಲವಿಂ ೧೬೯

ವ|| ಅಂತು ಕೆಲವು ದಿನಮಲ್ಲಿರ್ದುಕೊಂಡೊಂದು ದಿನಂ ನಿತಂಬವತಿಯ ಪರಿಚರ್ಯೆಯ ನುಳ್ಳೊರ್ಬ ಭಿಕ್ಷುಕಿಯಂ ಕಂಡು

ಭಿಕ್ಷುಕಿ ಕೇಳ್ ನಿನ್ನರಸಿಯ
ಚಕ್ಷುಃಕರಪಾದದೆಡೆಗಳಂ ನೋಡಿ ಲಸ
ಲ್ಲಕ್ಷಣಮಂ ಪೇೞ್ವೆಂ ನೀಂ
ಸುಕ್ಷೇಮದೊಳುಯ್ವುದೆನ್ನನರಮನೆಗೀಗಳ್ ೧೭೦

ವ|| ಎಂದು ಕಲಹಕಂಟಕಂ ಪೇೞ್ದೊಡವಳಂತೆ ಗೆಯ್ವೆನೆಂದು ಭಿಕ್ಷುಕಿಯವನನಾರು ಮಱಿಯದಂತೊಡಗೊಂಡು ಪೋಗಿಯರಮನೆಯ ಬಾಗಿಲೊಳಿರಿಸಿ ತತ್ಪ್ರಪಂಚಮನರಸಿಗೆ ಪೇೞೆ ನಿತಂಬವತಿಯೀತೆಂದಳ್

ದಲ್ಲಿವೆಯೋ ? ಹೇಳು–ಎನ್ನುವಂತೆ ಅವನು ಕಾಣಿಸಿದನು. ವ|| ಆ ಕಲಹಕಂಟಕನೆಂಬ ಧೂರ್ತನು ನಿತಂಬವತಿಯ ಕೀರ್ತಿಯನ್ನು ಕೇಳಿ ಉಜ್ಜಯಿನಿಗೆ ಬಂದು. ೧೬೮. "ನಾನು ತ್ರಿಕಾಲದ ವಿಷಯಗಳನ್ನು ಬಲ್ಲ ಜೋಯಿಸ. ಸ್ತ್ರೀಲಕ್ಷಣದ ರೀತಿಗಳನ್ನರಿತವನು. ಒಳ್ಳೆಯ ಮಂತ್ರಜ್ಞ. ಭೂಲೋಕದಲ್ಲಿ ಈ ವಿಷಯಗಳನ್ನರಿತವರು ನನಗಿಂತ ಮೇಲಾದವರು ಯಾರೂ ಸಿಗರು" ಎಂದು ನಗರದಲ್ಲಿ ಕೂಗುತ್ತ ತಿರುಗುತ್ತಿದ್ದನು. ೧೬೯. ವಿಶೇಷ ಧೂರ್ತನಾದ ಕಲಹಕಂಟಕನು ಹಗಲೆಲ್ಲ ನಗರದಲ್ಲಿ ತಿರುಗಾಡುತ್ತಿದ್ದನು. ರಾತ್ರಿ ಶಿವನ ದೇವಾಲಯದಲ್ಲಿ ಮಲಗಿ ನಿದ್ರಿಸುತ್ತಾ ತಪಸ್ವಿಯಂತೆ ನಟಿಸುತ್ತಿದ್ದನು. ವ|| ಹೀಗೆ ಕೆಲವು ದಿನಗಳು ಅಲ್ಲಿ ಕಾಲ ಹಾಕಿದನು. ಅನಂತರ ಒಂದು ದಿನ ನಿತಂಬವತಿಯ ಸೇವೆಮಾಡುವ ಭಿಕ್ಷುಕಿಯೊಬ್ಬಳನ್ನು ನೋಡಿ—೧೭೦. ಭಿಕ್ಷುಕಿ, ಕೇಳು. ಕಣ್ಣು ಕೈಕಾಲುಗಳನ್ನು ನೋಡಿ ನಿನ್ನರಸಿಯ ಒಳ್ಳೆಯ ಲಕ್ಷಣಗಳನ್ನು ಹೇಳುತ್ತೇನೆ. ನೀನು ನನ್ನನ್ನು ಅಪಾಯವಿಲ್ಲದಂತೆ ಅರಮನೆಗೆ ಕರೆದುಕೊಂಡು ಹೋಗು. ವ|| ಎಂದು ಕಲಹ ಕಂಟಕನು ಹೇಳಿದನು. ಅವಳು ಹಾಗೆಯೇ ಮಾಡುವೆನೆಂದಳು. ಅನಂತರ ಆ ಭಿಕ್ಷುಕಿಯು ಅವನನ್ನು ಯಾರೂ ತಿಳಿಯದಂತೆ ಅರಮನೆಯ ಬಾಗಿಲಿಗೆ ಕರೆದುಕೊಂಡು ಹೋಗಿ ನಿಲ್ಲಿಸಿ ಈ ವಿಷಯವನ್ನೆಲ್ಲ ಅವಳು ನಿತಂಬವತಿಗೆ ತಿಳಿಸಿದಳು. ಅದಕ್ಕೆ ಅವಳು

ಪರಪುರುಷಮುಖನಿರೀಕ್ಷಣ
ನರಕಕ್ಕಾಂ ಪಾತ್ರಮಲ್ತೆನಲ್ ಕೇಳ್ ಸತಿಯಿ
ರ್ಬರ ನಡುವೆ ತೆಱೆಯನಿಟ್ಟಾ
ದರದಿಂ ಪೊಱಗಣ್ಗೆ ನೀಡು ಚರಣಮನರಸೀ ೧೭೧

ವ॥ ಎಂದು ಭಿಕ್ಷುಕಿ ಪೇೞ್ದೊಡಾತನನೊಡಗೊಂಡು ಬಾಯೆಂಬುದುಂ ಅವಳೊಡಗೊಂಡು ಬಂದು ನಿತಂಬವತಿಯು ಕಲಹಕಂಟಕನ ನಡುವೆ ತೆಱೆಯನಿಟ್ಟನ್ನು ದೇವಿ ಪಾದಮಂ ಲಕ್ಷಣಮಂ ನೋಡಲ್ ಪೊಱಗೆ ನೀಡೆಂಬುದುಂ

ಸೋಲದೊಳಾತ್ಮವಲ್ಲಭನಲಂಪುಮಿಗಲ್ ಪರಿಚುಂಬಿಸಲ್ಕೆ ತಾಂ
ಬೞಲರಸದ್ರವಂ ವಿಮಳತದ್ದಶನದ್ಯುತಿ ಪತ್ತಿದಂತೆ ಸ
ಲ್ಲೀಲೆಯೊಳಾಂತಲಕ್ತಕರಸಂ ನಖದೀಪ್ತಿ ಕರಂ ಕವಲ್ತಿರಲ್
ಬಾಲಕಿ ನೀಡಿದಳ್ ಪದೆದು ನೂಪುರರಂಜಿತ ಪಾದಪದ್ಮಮಂ ೧೭೨

ವ॥ ಅಂತು ನಿತಂಬವತಿ ಪೊಱಗಣ್ಗೆ ಪಾದಮಂ ನೀಡಲದಂ ಕಲಹ ಕಂಟಕಂ ಪಿಡಿದು

ಜಗತೀಕಾಂತನ ಸತಿಯಂ
ಘ್ರಿಗೆ ಲಕ್ಷಣಮಂ ನಿದಾನಿಸಲ್ಕಱಿಯೆಂ ಕೇಳ್
ಮೃಗನಯನೆ ನಿನ್ನ ಪದಮಂ
ಬಗೆ ಮಿಗಲಾಂ ಸೋಂಕಿ ಲಕ್ಷಣಂಬಡೆದಿರ್ದೆಂ ೧೭೩

ಹೇಳಿದಳು—೧೭೧. 'ಪರಪುರುಷನ ಮುಖವನ್ನು ನೋಡಿದರೆ ನಾನು ನರಕಕ್ಕೆ ಪಾತ್ರಳಾಗುವೆನು.' ಅದಕ್ಕವಳು 'ಅರಸಿ, ಇಬ್ಬರ ನಡುವೆ ತೆರೆಹಾಕಿ ಕಾಲನ್ನು ಹೊರಕ್ಕೆ ನೀಡು' ಎಂದು ಹೇಳಿದಳು. ವ॥ ಅದಕ್ಕೆ 'ಆತನನ್ನು ಕರೆದುಕೊಂಡು ಬಾ' ಎಂದು ನಿತಂಬವತಿಯು ಭಿಕ್ಷುಕಿಗೆ ಹೇಳಿದಳು. ಅವಳು ಅವನನ್ನು ಕರೆತಂದಳು. ಮತ್ತೆ ಇಬ್ಬರ ನಡುವೆ ತೆರೆಹಾಕಿ 'ದೇವಿ, ಲಕ್ಷಣವನ್ನು ನೋಡಲನುಕೂಲಿಸುವಂತೆ ಪಾದವನ್ನು ಹೊರಕ್ಕೆ ನೀಡು' ಎಂದು ಹೇಳಿದಳು. ೧೭೨. ಆ ಬಾಲಿಕೆಯು ನೂಪುರದಿಂದ ರಂಜಿಸುತ್ತಿದ್ದ ತನ್ನ ಪಾದಕಮಲವನ್ನು .ಹೊರಕ್ಕೆ ನೀಡಿದಳು. ಅದರಿಂದ ಅರಗಿನ ರಸವೂ ಉಗುರಿನ ಕಾಂತಿಯೂ ಕವಲುಕವಲಾಗಿ ಹರಡಿತ್ತು. (ದ್ಯೂತದಲ್ಲಿ) ಸೋತ ಪತಿಯು ಹರ್ಷದಿಂದ ಚುಂಬಿಸಿದಾಗ ಅವನು ಮೆದ್ದ ತಾಂಬೂಲದ ರಸವೂ ವಿಮಲವಾದ ಹಲ್ಲಿನ ಕಾಂತಿಯೂ ಹತ್ತಿಕೊಂಡಿದ್ದಂತೆ ಅವು ರಂಜಿಸಿದುವು. ವ॥ ನಿತಂಬವತಿಯು ತನ್ನ ಕಾಲನ್ನು ಹೊರಕ್ಕೆ ನೀಡಲು ಅದನ್ನು ಕಲಹಕಂಟಕನು ಹಿಡಿದುಕೊಂಡು—೧೭೩. "ಜಗದೊಡೆಯನ ಸತಿಯ ಪಾದಕ್ಕೆ ಲಕ್ಷಣವನ್ನು ವಿವರಿಸಲು ನಾನು ಶಕ್ತನಲ್ಲ. ಆದರೆ ಹರಿಣಾಕ್ಷಿ,

ವ॥ ಎಂದನಂತರಂ

ಚರಣಾಂಗುಷ್ಠಮನೀಟ್ದು ನೂಪುರಮನಾರ್ಪಿಂದುರ್ಚಿ ಕೈನೀಡಿ ಬಂ
ಧುರಮಪ್ಪೊಳ್ದೊಡೆಯೊಳ್ ನಖಾಗ್ರಹತಿಯಿಂ ಸೀಟ್ವಂದದಿಂ ರೇಖೆಯೊಂ
ದೆರಡಂ ಮಾಡಿ ಕಟಿಲ್ದ ನೂಪುರಮನೊಂದಂ ಕೊಂಡು ತದ್ರಾಜಮಂ
ದಿರದಿಂದಂ ತಳರ್ದಂ ಮಹಾತ್ವರಿತದಿಂದಾಧೂರ್ತನಿಂದ್ರದ್ವಿಷಾ ೧೭೪

ವ॥ ಅಂತವನೊಳ್ದೊಡೆಯುಂ ಕೀಱಿ ನೂಪುರಮಂ ಕೊಂಡು ಪೋಗಲೊಡಂ

ಏಗೆಯ್ವೆನಿದೇಕಾರಣ
ಮೀಗಳ್ ಧೂರ್ತಂಗೆ ಚರಣಮಂ ತೋಱಿದೆನು
ದ್ವೇಗಮನೇ ತೆಱದಿಂದಂ
ನೀಗುವೆನಾನೆಂದು ಕಾಂತೆ ತಳವೆಳಗಾದಳ್ ೧೭೫

ವ॥ ಅಂತು ನಿತಂಬವತಿ ದುಗುಡದಿಂ ಮುಸುಕಿಟ್ಟೊಱಗಿರಲಿತ್ತಲ್

ಸುರಗಿರಿಯೊಳ್ ದಿನನಾಯಕ
ಕಿರಣಂ ಮೆಱೆವಂತೆ ತಪ್ತಹೇಮಾಶ್ರಯಬಂ
ಧುರರತ್ನದಿನೊಪ್ಪುವ ನೂ
ಪುರಮಂ ಪೌರರ್ಗೆ ತೋಱಿದಂ ತದ್ಧೂರ್ತಂ ೧೭೬

ನಿನ್ನ ಪಾದವನ್ನು ಸ್ಪರ್ಶಿಸಿ ನಾನು ಒಳ್ಳೆಯ ಲಕ್ಷಣವನ್ನು ಪಡೆದೆನು. ವ॥ ಎಂದು ಹೇಳಿದನು. ಅನಂತರ ೧೭೪. ಆ ಧೂರ್ತನು, ರಾಣಿಯ ಕಾಲ ಹೆಬ್ಬೆರಳನ್ನು ಎಳೆದು ಕೊಂಡು ಬಲಾತ್ಕಾರವಾಗಿ ಕಾಲಂದಿಗೆಯನ್ನು ಕಳಚಿಕೊಂಡನು. ಕೈನೀಡಿ ಸುಂದರವಾದ ಅವಳ ತೊಡೆಯಮೇಲೆ ಉಗುರಿನ ತುದಿಯಿಂದ ಸೀಳಿದ ಹಾಗೆ ಗೀರಿ ಒಂದೆರಡು ಗೆರೆಗಳನ್ನುಂಟುಮಾಡಿದನು. ಅನಂತರ ಕಳಚಿದ ನೂಪುರವೊಂದನ್ನು ತೆಗೆದುಕೊಂಡು ಅರಮನೆಯಿಂದ ಬೇಗ ಓಡಿಹೋದನು. ವ॥ ಹಾಗೆ ಅವನು ಅವಳ ಸುಂದರವಾದ ತೊಡೆಯನ್ನು ಗೀರಿ ನೂಪುರವನ್ನು ಕೊಂಡುಹೋಗಲು—೧೭೫. 'ಏನುಮಾಡಲಿ! ಏತಕ್ಕಾಗಿ ನಾನು ಧೂರ್ತನಿಗೆ ಕಾಲನ್ನು ತೋರಿಸಿದೆನು. ಈ ಉದ್ವೇಗವನ್ನು ಹೇಗೆ ಕಳೆದುಕೊಳ್ಳಲಿ' ಎಂದು ಕಾಂತೆಯು ಯೋಚಿಸಿ ತಳವೆಳಗಾದಳು. ವ॥ ನಿತಂಬವತಿಯು ಹೀಗೆ ದುಃಖದಿಂದ ಮುಸುಕು ಹಾಕಿಕೊಂಡು ಮಲಗಿದಳು. ೧೭೬. ಮೇರುಗಿರಿಯಲ್ಲಿ ಹೊಳೆಯುವ ಸೂರ್ಯನ ಕಿರಣದಂತೆ ಇದ್ದ ಪುಟ ಹಾಕಿದ ಚಿನ್ನದಿಂದ ಮಾಡಿದ ಸುಂದರವಾದ ನೂಪುರವನ್ನು ಆ ಧೂರ್ತನು ಪಟ್ಟಣಿಗರಿಗೆ

ಅಲ್ಲಲ್ಲಿ ತೋಱಿಸುತ್ತುಂ
ಮೆಲ್ಲನೆ ಕೊಂಡುಯ್ದನಂತಕೀರ್ತಿಗೆ ತೋಱಲ್
ವಲ್ಲಭೆಯ ನೂಪುರಂ ತಾ
ನಿಲ್ಲಿಗೆ ಬಂದಂದಮಾವುದೆಂದನಿಳೇಶಂ ೧೭೭

ವ॥ ಎಂದನಂತ ಕೀರ್ತಿಯೆಂಬುದುಂ ಕಲಹಕಂಟಕನಿಂತೆಂದಂ

ನಿನ್ನಿರುಳಾಂ ಶ್ಮಶಾನದೆಡೆಯಲ್ಲಿ ಸಮಾಧಿಯೊಳಿರ್ದ ವೇಳೆಯೊಳ್
ಕನ್ನೆಯ ರೂಪಿನಿಂ ಪೆಣನನೀಟ್ಡು ತಿನಲ್ಬರುತಿರ್ದ ದೈತ್ಯೆಯುಂ
ಬನ್ನಮನೆಯ್ದಿನಲ್ಪಿಡಿದು ಸೂಲದೊಳಾನಿಱಿಯಲ್ಕೆ ನೊಂದವಳ್
ತನ್ನನಡರ್ತು ಪೋಗುತಿರೆ ಬಿಟ್ಟುದು ನೂಪುರಮಾಕೆಯಂಘ್ರಿಯಿಂ ೧೭೮

ವ॥ ಎಂಬುದುಮನಂತಕೀರ್ತಿ ವಿಚಾರಂಗೆಯ್ದು

ಪರಿಕಿಸಿ ನಿತಂಬವತಿ ತ
ನ್ನೆರಡುಂ ನೇವುರಮನೊಲ್ದು ಕಳಿಪುವುದೆಂದಾ
ದರದಿಂ ಕಂಚುಕಿಯುಂ ನೃಪ
ವರನಟ್ಟಲ್ ಪೋಗಿ ಬಂದನವನನಾಕ್ಷಣದಿಂ ೧೭೯

ವ॥ ಅಂತಾ ಕಂಚುಕಿ ಬಂದು

ದೇವಿಯುರದೊಂದು ನೇವುರ
ಮಾವೆಡೆಯೊಳ್ ಬಿಟ್ಟುದೆಂದು ತಿಳಿಯೆಂ ನೀನೊ
ಲ್ದೀವೊಂದು ನೇವುರಮನವ
ನೀವಲ್ಲಭನೆಡೆಗೆ ಕೊಂಡು ಪೋಗೆಂದಿತ್ತಳ್ ೧೮೦

ತೋರಿಸಿದನು. ೧೭೭. ಅಲ್ಲಲ್ಲಿ ತೋರಿಸುತ್ತಾ ಮೆಲ್ಲಗೆ ಎತ್ತಿಕೊಂಡು ಹೋಗಿ ಅನಂತಕೀರ್ತಿಗೆ ತೋರಿಸಿದನು. "ಪ್ರಿಯಳ ನೂಪುರವು ಇಲ್ಲಿಗೆ ಹೇಗೆ ಬಂದಿತು' ? ಎಂದು ಅನಂತಕೀರ್ತಿಯು ಕೇಳಿದನು. ವ॥ ಅದಕ್ಕೆ ಕಲಹಕಂಟಕನು ಹೇಳಿದನು— ೧೭೮. ನಿನ್ನೆರಾತ್ರಿ ಶ್ಮಶಾನದಲ್ಲಿ ನಾನು ಸಮಾಧಿಯಲ್ಲಿದ್ದೆನು. ಆ ಸಮಯದಲ್ಲಿ ಕನ್ಯೆಯ ರೂಪಿನಿಂದ ಹೆಣವನ್ನು ಕಿತ್ತು ತಿನ್ನುವುದಕ್ಕಾಗಿ ಒಬ್ಬಳು ರಾಕ್ಷಸಿ ಬಂದಳು. ನಾನು ಅವಳನ್ನು ಕಾಡಿಸಿ ಹಿಡಿದು ಶೂಲದಿಂದ ಇರಿದೆನು. ಅದರಿಂದ ನೊಂದ ಅವಳು ನನ್ನನ್ನು ಮೇಲೇರಿ ತಳ್ಳಿ ಓಡಿದಳು, ಆಗ ಆಕೆಯ ಕಾಲಿನಿಂದ ಈ ನೂಪುರವು ಜಾರಿಬಿದ್ದಿತು. ವ॥ ಇದನ್ನು ಕೇಳಿ ಅನಂತಕೀರ್ತಿಯು ವಿಚಾರಮಾಡಿ—೧೭೯. "ನಿತಂಬವತಿ, ಸರಿಯಾಗಿ ನೋಡಿ ನಿನ್ನೆರಡು ನೂಪುರಗಳನ್ನೂ ಕಳುಹಿಸು" ಎಂದು ಹೇಳಿ ಕಂಚುಕಿಯನ್ನು ಕಳುಹಿಸಿದನು. ಅವನು ಆ ಕ್ಷಣವೇ ಹೋಗಿಬಂದನು. ವ॥ ಆ ಕಂಚುಕಿಯು ಹೋಗಿಬಂದು– ೧೮೦. ಒಂದುನೂಪುರವು ಅದೆಲ್ಲಿ ಬಿತ್ತೆಂದು ತಿಳಿಯದು. ನೀನು ಈ ಒಂದು ನೂಪುರವನ್ನು ರಾಜನಿಗೆ ತೆಗೆದುಕೊಂಡು ಹೋಗಿ

ವ॥ ಅದಲ್ಲದೆಯುಂ

ತೊಡೆಯೊಳ್ ಪುಣ್ಣೊಂದಾದ
ತ್ತಡಿಯಾನಿಡಲ್ಬಾರದೆಂದು ನರಳುತ್ತುಂ ತೂಂ
ಕಡಿಕೆಯನೊಳಕೊಂಡಿರ್ದಳ್
ಮಡದಿ ಕರಂ ದುಗುಡದಿಂ ಧರಿತ್ರೀನಾಥಾ ೧೮೧

ವ॥ ಎಂದು ಪೇೞಲೊಡಂ

ಪೆಱತೇಂ ವಿಚಾರಮಂಗನೆ
ನೆಱೆ ರಕ್ಕಸಿಯಾದಳಲ್ಲದಿರ್ದೊಡೆ ರತ್ನಂ
ತುಱುಗಿದ ಪೊಸಕಾಲ್ತೊಡವೇ
ತೆಱದಿಂದೀತಂಗೆ ಬಂದುದಾ ಪಿತೃವನದೊಳ್ ೧೮೨

ವ॥ ಎಂದನಂತಕೀರ್ತಿ ಮತ್ತಂ

ಇಲ್ಲಿರ್ದೊಡೆ ತತ್ಸತಿ ನ
ಮ್ಮೆಲ್ಲರನಿಂದಿರುಳೆ ತಿಂದು ನುಂಗುವಳದಱಿಂ
ಮೆಲ್ಲನೆ ತತ್ಪಿತೃವನದೊಳ್ ಬ
ಲ್ಲಂದದಿನಿರ್ಪುದೆಂದು ನೂಂಕುವೆನವಳಂ ೧೮೩

ವ॥ ಎಂದನಂತಕೀರ್ತಿ ನಿತಂಬವತಿಯುಂ ನಡುವಿರುಳೊಳೆಯ್ದಿ ಶ್ಮಶಾನದೊಳ್ ನೂಂಕಿ ಪೋಗೆ

ಕೊಡು' ಎಂದು ದೇವಿಯು ಇದನ್ನು ಕೊಟ್ಟಿರುತ್ತಾಳೆ. ವ॥ ಅದೂ ಅಲ್ಲದೆ- ೧೮೧. ರಾಜನೆ! 'ತೊಡೆಯಲ್ಲಿ ಹುಣ್ಣೊಂದಾಗಿದೆ. ಹೆಜ್ಜೆಯಿಡಲು ಸಾಧ್ಯವಿಲ್ಲ.' ಎಂದು ನರಳುತ್ತಾ ಮಡದಿಯು ತಂಬ ದುಃಖದಿಂದ ಮಲಗಿ ತೂಕಡಿಸುತ್ತಿದ್ದಳು." ವ॥ ಎಂದು ಹೇಳಿದನು-ಆಗ ೧೮೨. "ಬೇರೆ ವಿಧವಾಗಿ ವಿಚಾರಮಾಡಬೇಕಾಗಿಯೇ ಇಲ್ಲ. ಅಂಗನೆಯು ರಾಕ್ಷಸಿಯಾಗಿದ್ದಾಳೆ. ಹಾಗಿಲ್ಲದಿದ್ದರೆ ರತ್ನಗಳನ್ನು ಸೇರಿಸಿ ಮಾಡಿದ ಈ ಹೊಸ ಕಾಲಂದಿಗೆಯು ಶ್ಮಶಾನದಲ್ಲಿ ಹೇಗೆ ಇವನಿಗೆ ಸಿಕ್ಕಿತು. ?" ವ॥ ಎಂದು ಯೋಚಿಸಿ ಅನಂತಕೀರ್ತಿಯು ಮತ್ತೆ- ೧೮೩. "ಇಲ್ಲಿದ್ದರೆ ಅವಳು ಇಂದಿನ ರಾತ್ರಿಯೇ ನಮ್ಮನ್ನೆಲ್ಲ ತಿಂದು ನುಂಗುವಳು, ಅದರಿಂದ ಮೆಲ್ಲಗೆ 'ಆ ಶ್ಮಶಾನದಲ್ಲಿಯೇ ಇಷ್ಟಬಂದಂತೆ ಇರು' ಎಂದು ಹೇಳಿ ಅವಳನ್ನು ತಳ್ಳುವೆನು" ವ॥ ಎಂದು ನಿತಂಬ

ಮದಮಱಿಯಲ್ ನಿತಂಬವತಿ ತನ್ನ ಮನೋವ್ಯಥೆಯಿಂ ಶ್ಮಶಾನಮ
ಧ್ಯದೊಳಿಸೆದಿರ್ದ ತತ್ಕಲಹ ಕಂಟಕನಂ ತವೆ ಕಂಡು ನೀನೆ ಮಾ
ಡಿದ ಕುಹಕಂ ಫಲಂಬಡೆದುದಿನ್ನೆನಗಾರ್ ಗತಿ ನೀನೆ ರಕ್ಷಿಸೋ
ಐದೆ ತನುವೆಂದು ಬಿಟ್ಟಳಡಿಯೊಳ್ ಕರುಣಂ ಕಡೆಗಣ್ಮುತಿರ್ಪಿನಂ ೧೮೪

ವ॥ ಅಂತವಳ್ ದೈನ್ಯಭಾವದಿಂ ಪೇೞಲೊಡಂ

ತಾನೆಸಗಿದ ಕಾರ್ಯಂ ಸ
ನ್ಮಾನದಿನೆಯ್ತಂದುದಿರ್ದ ಠಾವಿಂಗೆಂದಾ
ಮಾನಿನಿಯಂ ಕೊಂಡೊಯ್ದಂ
ತಾನೊಲವಿಂ ಕಲಹ ಕಂಟಕಂ ಸುರವೈರೀ ೧೮೫

ವ॥ ಅದಱಿಂ ಮತಿಯೂಹೆಗೆ ಸಾಧ್ಯಮಪ್ಪುದಿಲ್ಲೆಂದು ಬ್ರಹ್ಮರಾಕ್ಷಸಂಗಾಂ ಪೇೞಲಾತನತಿತುಷ್ಟನಾಗಿ ಎನ್ನಂ ಮನ್ನಿಸಿದಪೆನೆಂಬ ಸಮಯದೊಳ್

ಆಲಿವರಲ್ಗಳುಂ ಮೞೆಯ ಬಲ್ವನಿಯುಂ ಮುಗಿಲಿಂದೊಸರ್ವವೋಲ್
ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತುಗಳುಂ ನಭೋಂತದೊಳ್
ಸಾಲಿಡಲುರ್ವಿಯೊಳ್ ಪದೆದು ಕಂಡಿದು ಚೋದ್ಯಮೆನುತ್ತೆ ಭೋಂಕೆನಲ್
ಮೇಲನೊಱಲ್ದು ನೋಡಿ ಮಿಗೆ ಕಂಡೆನದೊರ್ಬ ಮಹೋಗ್ರದೈತ್ಯನಂ ೧೮೬

ಪತಿಯನ್ನು ಅರ್ಧರಾತ್ರಿಯಲ್ಲಿ ಶ್ಮಶಾನದಲ್ಲಿ ತಳ್ಳಿ ಹೋದನು . ೧೮೪. ನಿತಂಬವತಿಯು ಎಚ್ಚೆತ್ತಳು. ಮನೋವ್ಯಥೆಯಿಂದ ಶ್ಮಶಾನಮಧ್ಯದಲ್ಲಿದ್ದ ಆ ಕಲಹಕಂಟಕನನ್ನು ಕಂಡು "ನೀನು ಮಾಡಿದ ಕುಹಕದಿಂದ ನನಗೀಗತಿ ಬಂದಿತು. ಇನ್ನು ನನಗೆ ಗತಿ ಯಾರು? ನೀನೇ ಕಾಪಾಡು" ಎಂದು ಮಿತಿಮೀರಿ ಅಳುತ್ತಾ ಅವನ ಪಾದಗಳ ಮೇಲೆ ಬಿದ್ದಳು. ವ॥ ಅವಳು ಹಾಗೆ ದೈನ್ಯಭಾವದಿಂದ ಹೇಳಲು– ೧೮೫. "ತಾನು ಮಾಡಿದ ಕಾರ್ಯವು ನಾನಿರುವ ಸ್ಥಳಕ್ಕೆ ಬಂದು ಫಲಿಸಿತು." ಎಂದು ಹೇಳುತ್ತಾ ಆ ರಾಕ್ಷಸ ಕಲಹಕಂಟಕನು ಆ ಮಾನಿನಿಯನ್ನು ತನ್ನೊಡನೆ ಕರೆದುಕೊಂಡು ಹೋದನು. ವ॥ ಆದುದರಿಂದ ಬುದ್ಧಿಶಕ್ತಿಯ ಊಹೆಗೆ ಸಾಧ್ಯವಾಗದುದು ಯಾವುದೂ ಇಲ್ಲ" ಎಂದು ನಾನು ಬ್ರಹ್ಮರಾಕ್ಷಸನಿಗೆ ಹೇಳಿದೆನು. ಅದರಿಂದ ಸಂತುಷ್ಟನಾಗಿ ಅವನು 'ನನ್ನನ್ನು ಕ್ಷಮಿಸಿ ಗೌರವಿಸುವೆನೆಂದು' ಹೇಳಿದನು. ಆ ಸಮಯದಲ್ಲಿ– ೧೮೬. ಮೇಲೆ ಆಕಾಶದಲ್ಲಿ ಹೋಗುತ್ತಿದ್ದ ಒಬ್ಬ ಭಯಂಕರಾಕಾರದ ದೈತ್ಯನನ್ನು ನೋಡಿದೆನು. ಅವನ ಹೊಳೆಯುವ ಕಂಗಳ ನೀರಿನ ಹನಿಗಳೂ ಹೊಸಮುತ್ತುಗಳು ಆಕಾಶದಲ್ಲಿ ಸಾಲಾಗಿ ಸುರಿಯುತ್ತಿದ್ದುವು. ಅವು ಮೋಡಗಳಿಂದ ಸುರಿಯುವ ಆಲಿಕಲ್ಲು ಮತ್ತು ಮಳೆಯ ದಪ್ಪಹನಿಗಳಂತೆ ತೋರುತ್ತಿದ್ದುವು. ಇದು ಲೋಕದಲ್ಲಿ

ಕಡುಪೆಸೆಯುಲ್ಕೆ ಪೂರ್ಣಶಶಿಮಂಡಲಮಂ ಮುಳಿಸಿಂ ವಿಧುಂತುದಂ
ಪಿಡಿದೆೞೆವಂತೆ ಚಂದ್ರಮುಖಿಯೊರ್ಬಳನಂದು ಮಹೋಗ್ರ ರಾಕ್ಷಸಂ
ಜಡಿಯುತ ತಾರಕಾ ಪಥದೊಳಾರ್ಪಿನೊಳಂಜದೆ ಕೊಂಡು ಪೋಪನಂ
ತಡೆಯದೆ ಕಂಡು ವಿಸ್ಮಯದೊಳೀಕ್ಷಿಸುತಿರ್ದೆನಿಳಾಧಿನಾಯಕಾ ೧೮೭

ವ॥ ಅಂತು ನೋಡಿ

ಸುಡುಸುಡುಮಚ್ಛರೀರದಿರವಂ ಪವನಾಧ್ವದೊಳಾರ್ದು ರಾಕ್ಷಸಂ
ಮಡದಿಯನೊರ್ಬಳಂ ಕಡುಪಿನಿಂದೆೞೆದುಯ್ದುದನೆಯ್ದೆ ಕಂಡು ಬೆಂ
ಬಿಡಿಯದೆ ನೋಡುತಿರ್ಪ ತೆಱದಿನಾಯ್ತೆನಗಂಬರ ಯಾನ ವಿದ್ಯೆಯಂ
ಕುಡನ ವಿಧಾತ್ರನೆಂದುಸಿರ್ದೆನೆನ್ನೊಡನಿರ್ದ ನಿಶಾಚರೇಂದ್ರನೊಳ್ ೧೮೮

ವ॥ ಅಂತೆನ್ನೊಡನಿರ್ದ ಬ್ರಹ್ಮರಾಕ್ಷಸಂಗೆ ಪೇೞ್ದಾಕಾಶದೊಳ್ ಪೋಪ ರಾಕ್ಷಸನಂ ತೋಱಲವನಂ ಬ್ರಹ್ಮರಾಕ್ಷಸಂ ಕಂಡು

ಬಿಡುಬಿಡು ದೈತ್ಯ ಕೋಮಳೆಯನೆಲ್ಲಿಗೆ ಪೋದಪೆಯೆಂದು ದಾಡೆಯಂ
ಜಡಿದು ಪದಾಗ್ರದಿಂ ನೆಲಮನುಯ್ದು ಪುಟಂನೆಗೆದಂಬರಕ್ಕೆ ಬೆಂ
ಬಿಡದೆ ತುಡುಂಕಿ ತದ್ದನುಜನಂ ಗಗನಸ್ಥಳದಲ್ಲಿ ಮೀಱಿಯೊಂ
ದಡಿಯಿಡಲೀಸದಂತು ಕಡುಪಿಂ ಪೊಣರ್ದಂ ಕಲಿ ಬೊಮ್ಮರಕ್ಕಸಂ ೧೮೯

ಆಶ್ಚರ್ಯ ಕರ. ೧೮೭. ಆ ಮಹೋಗ್ರರ್ರಾಕ್ಷಸನು ಚಂದ್ರಮುಖಿಯೊಬ್ಬಳನ್ನು ಆಕಾಶ ಮಾರ್ಗದಲ್ಲಿ ಅಂಜದೆ ಹೆದರಿಸುತ್ತಾ ಎಳೆದುಕೊಂಡು ಹೋಗುತ್ತಿದ್ದನು. ರಾಹುವು ಪೂರ್ಣಚಂದ್ರನನ್ನು ಕೋಪದಿಂದ ಬಲಾತ್ಕರಿಸಿ ಹಿಡಿದು ಎಳೆಯು ವಂತೆ ಕಾಣಿಸಿತು. ರಾಜನೆ ! ನಾನು ನೋಡಿದರೂ ವಿಸ್ಮಯದಿಂದ ಅವ ನನ್ನು ತಡೆಯದೆ ನಿಂತು ನೋಡುತ್ತಿದ್ದೆನು. ವ॥ ಹಾಗೆ ನೋಡಿ, ೧೮೮. "ನನ್ನ ಈ ಶರೀರವನ್ನು ಸುಡಬೇಕು, ಆಕಾಶಮಾರ್ಗದಲ್ಲಿ ರಾಕ್ಷಸನೊಬ್ಬನು ಕೂಗುತ್ತಾ ತರುಣಿಯೊಬ್ಬಳನ್ನು ಎಳೆದುಕೊಂಡು ಹೋಗುತ್ತಿದ್ದಾನೆ. ನಾನು ಅವನ ಬೆಂಬತ್ತದೆ ನೋಡುತ್ತಾ ಇದ್ದೇನೆ. ಬ್ರಹ್ಮನು ನನಗೆ ಆಕಾಶದಲ್ಲಿ ಹೋಗುವ ವಿದ್ಯೆಯನ್ನು ಕೊಡ ಲಿಲ್ಲವಲ್ಲ" ಎಂದು ನನ್ನೊಡನೆ ಇದ್ದ ಬ್ರಹ್ಮರಾಕ್ಷಸನಿಗೆ ಹೇಳಿದೆನು. ವ॥ ಮತ್ತು ಆಕಾಶದಲ್ಲಿ ಹೋಗುತ್ತಿದ್ದ ರಾಕ್ಷಸನನ್ನು ಬ್ರಹ್ಮರಾಕ್ಷಸನಿಗೆ ತೋರಿಸಿದೆನು. ಬ್ರಹ್ಮ ರಾಕ್ಷಸನು ಅವನನ್ನು ನೋಡಿ. "ದೈತ್ಯ, ಕೋಮಲೆಯನ್ನು ಬಿಟ್ಟುಬಿಡು. ಎಲ್ಲಿಗೆ ಹೋಗುತ್ತಿದ್ದಿಯೆ ?" ಎಂದು ಹೇಳುತ್ತಾ ತನ್ನ ಕೋರೆಹಲ್ಲನ್ನು ಆಡಿಸುತ್ತಾ ತನ್ನ ಕಾಲ ತುದಿಯಿಂದ ನೆಲವನ್ನು ಊರಿಕೊಂಡು ಮೇಲಕ್ಕೆ ಹಾರಿದನು. ರಾಕ್ಷಸನನ್ನು ಬೆಂಬತ್ತಿ ಹಿಡಿದನು. ಆಕಾಶದಲ್ಲಿ ಮುಂದೆ ಒಂದು ಹೆಜ್ಜೆಯನ್ನೂ ಇಡಲಾಗದಂತೆ

ವ॥ ಅದೆಂತೆನೆ

ದಾಡೆಗೆ ದಾಡೆ ಗರ್ಜನೆಗೆ ಗರ್ಜನೆ ಘಾತಿಗೆ ಘಾತಿ ತೋಳ ಬ
ಲ್ಲಾಡಿಗೆ ಗಾಡಿ ವಂಚನೆಗೆ ವಂಚನೆಯುಗ್ರತೆಗುಗ್ರಮಸ್ತ್ರ ಸಂ
ಪೀಡೆಗೆ ಪೀಡನಂ ನಿಜಕರಾಳಮುಖಕ್ಕೆ ಕರಾಳವಕ್ತ್ರಮ
ಲ್ಲಾಡದೆ ನಿಂದು ತಳ್ತಿಱಿದರೊರ್ಬರನೊರ್ಬರುದಗ್ರದಾನವರ್ ೧೯೦

ವ॥ ಅಂತವರಿರ್ಬರಾಕಾಶದೊಳತ್ಯಾಸುರವಾಗಿ ಕಾದುವ ಸಮಯದೊಳ್

ಸೂಸುವ ಕುಂತಳಂ ನಸು ಬಬಲ್ದ ಕುಚಂ ಪಱಿಪಟ್ಟ ಹಾರಮು
ಚ್ಛ್ವಾಸವದೊಳ್ ತೊಡರ್ದ ನಱುಸುಯ್ ಕುಚದಿಂ ತೆರಳ್ದುತ್ತರೀಯಕಂ
ಗಾಸಿಗೆ ಕಂದಿದಂಗಮೆನಸುಂ ಭಯಮಂ ತಳೆದಿರ್ದ ಚಿತ್ತಮ
ತ್ಯಾಸುರಮಪ್ಪಿನಂ ಗಗನದಿಂ ಸತಿ ಭೋಂಕೆನೆ ಬಿಟ್ದಳುರ್ವಿಯೊಳ್ ೧೯೧

ವ॥ ಅಂತೊರ್ಬ ಕಾಂತೆ ಗಗನದಿಂದವನಿಗೆ ಬಿಟ್ದುದಂ ಭೋಂಕೆನೆ ಕಂಡಾಂ ಪೊರ್ದಿ ನೋಟ್ಪಿನಂ

ಅದನೇವೇಟ್ದುದೊ ಕಂತುಕಾವತಿಯವಳ್ ತಾನಾದಳಾಂ ನೋಟ್ಪುದಂ
ಕದಪು ಕೆಯ್ಯೊಳವರ್ಚಿ ಪೂರ್ಣಕುಚಯುಗ್ಮಕ್ಕೊಪ್ಪೆ ಸಂವ್ಯಾನಮಂ
ಪದುಳಂ ಮಾಡಿ ನಭೋಂತದಿಂದಿಳೆಗೆ ಬಿಟ್ದಳ್ ಕ್ಲೇಶದಿಂ ನಾಣ್ಚಿ ಬಾ
ಡಿದ ವಕ್ತ್ರಾಂಬುಜದಿಂ ಮದೀಯ ಮುಖಮಂ ಸಾಪೇಕ್ಷದಿಂ ನೋಡಿದಳ್ ೧೯೨

ತಡೆದು ಪರಾಕ್ರಮದಿಂದ ಹೋರಾಡಿದನು, ವ॥ ಅದು ಹೇಗೆಂದರೆ, ೧೯೦. ಆ ಶೂರರಾದ ದಾನವರು ಒಬ್ಬರಿನ್ನೊಬ್ಬರನ್ನು ಎದುರಿಸಿ ಇರಿದರು. ಕೋರೆಹಲ್ಲಿಗೆ ಕೋರೆಹಲ್ಲು, ಗರ್ಜನೆಗೆ ಪ್ರತಿಗರ್ಜನೆ, ಹೊಡೆತಕ್ಕೆ ಹೊಡೆತ, ತೋಳಿನ ಗಾಂಭೀರ್ಯಕ್ಕೆ ತೋಳಿನ ಗಾಂಭೀರ್ಯ, ವಂಚನೆಗೆ ವಂಚನೆ, ಉಗ್ರತೆಗೆ ಉಗ್ರತೆ, ಅಸ್ತ್ರಪೀಡೆಗೆ ಅಸ್ತ್ರಪೀಡೆ, ಕರಾಳವಾದ ಮುಖಕ್ಕೆ ಕರಾಳವಾದ ಮುಖ—ಹೀಗೆ ಪರಸ್ಪರ ಒಡ್ಡಿನಿಂತು ಹೋರಾಡಿದರು. ವ॥ ಹೀಗೆ ಅವರಿಬ್ಬರು ಅತಿಭಯಂಕರವಾದ ರೀತಿಯಲ್ಲಿ ಕಾದುವ ಸಮಯದಲ್ಲಿ, ೧೯೧. ತಲೆಗೂದಲು ಬಿಚ್ಚಿಹೋಗಿದ್ದಿತು. ಕುಚಗಳು ಸ್ವಲ್ಪ ಬಳಲಿದ್ದುವು. ಹಾರವು ಹರಿದು ಹೋಗಿದ್ದಿತು. ಕಮಲ ರಸದಂತೆ ಸುವಾಸನೆಯುಳ್ಳ ಉಸಿರು ಹೊಮ್ಮುತ್ತಿದ್ದಿತು. ಉತ್ತರೀಯವು ಕುಚಗಳಿಂದ ಜಾರಿಹೋಗಿದ್ದಿತು, ಎಳೆದಾಟದ ಗಾಸಿಯಿಂದ ಅವಯವಗಳು ಕಂದಿಹೋಗಿದ್ದುವು. ಮನಸ್ಸಿನಲ್ಲಿ ಭಯ ತುಂಬಿದ್ದಿತು. ಹೀಗಿದ್ದ ಆ ಸತಿಯು ಗಗನದಿಂದ ಭೋಂಕನೆ ನೆಲದ ಮೇಲೆ ಬಿದ್ದಳು. ವ॥ ಗಗನದಿಂದ ನೆಲದ ಮೇಲೆ ಬಿದ್ದ ಕಾಂತೆಯನ್ನು ಹತ್ತಿರಕ್ಕೆ ಹೋಗಿ ನಾನು ನೋಡಲು, ೯೨. ಅದನ್ನು ಏನೆಂದು ಹೇಳಲಿ! ಅವಳು ಕಂತುಕಾವತಿಯಾಗಿದಳು. ಕೆನ್ನೆಯ ಮೇಲೆ ಕೈಯಿಟ್ಟುಕೊಂಡು ಸೆರಗನ್ನು ತುಂಬಿದ ಕುಚಗಳೆರಡರ ಮೇಲೆ ಎಳೆದುಕೊಂಡು ಆಕಾಶದಿಂದ ನೆಲದ ಮೇಲೆ ಬಿದ್ದಳು. ಕಷ್ಟದಿಂದ ನಾಚಿ ಬಾಡಿದ್ದ

ವ॥ ಅಂತವಳೆನ್ನಂ ನೋೞ್ಪ ಸಮಯದೊಳ್

ಗಗನಸ್ಥಳದೊಳ್ ದಾನವ
ರಗಣಿತಶಸ್ತ್ರಾಸ್ತ್ರಹತಿಗಳಿಂ ತಳ್ತಿಱಿದು
ರ್ವಿಗೆ ಕಡಿಗಳಾಗಿ ಬಿೞ್ದರ್
ಮಿಗೆ ರೌದ್ರಶರೀರಿಗಳ್ ಗತಪ್ರಾಣರ್ಕಳ್ ೧೯೩

ವ॥ ಅಂತಿರ್ಬರ್ ದೈತ್ಯರ್ ಗತಪ್ರಾಣರಾಗಿ ಬಿೞ್ದುದಂ ಕಂಡನಂತರಂ ಕಂತುಕಾವತಿಯನಾಶ್ವಾಸಿಸಿ ತತ್ಕಾಂತೆಸಹಿತಲ್ಲಿಂ ತೆರಳ್ದು ಪೂರ್ವ ಬಹಿತ್ರಮನೇಱಲೊಡಂ

ಸ್ಫುಟದಿಂ ಭಾವಿಸಿ ಸಿಂಹದೇಶದ ದಿಶಾಭಾಗಕ್ಕೆ ಪೋವಂದದೊಳ್
ಪಟಮಂ ಬಿಟ್ಟೊಡೆ ತದ್ಬಹಿತ್ರಮನಿಲೋದ್ಯನ್ಮಾರ್ಗದೊಳ್ ಬೇಗದಿಂ
ತಟಮಂ ಸಾರ್ದಿರೆ ಕಂತುಕಾವತಿಯನಾಗಳ್ ಭೀಮಧನ್ವಾಂಕನಂ
ದಿಟವಾಂ ಕೊಂಡಿೞಿದೆಂ ನೆಲಕ್ಕೆ ಪದೆಪಿಂದಾಯಿರ್ವರಂ ಭೂಮಿಪಾ ೧೯೪

ವ॥ ಅಂತಾಂ ತಡಿಗಿೞಿಯಲೊಡಂ

ಸುತೆಯಂ ರಾಕ್ಷಸನುಯ್ದನಾತ್ಮತನಯಂ ವಾರಾಸಿಯೊಳ್ ಪೋದನೆ
ನ್ನ ತನೂಜೀವನಮೇವುದೆಂಬ ಬಹುಚಿಂತಾವಹ್ನಿಯಿಂ ಜೀವಮಂ
ಕ್ಷಿತಿನಾಥಂ ಮಿಗೆ ತುಂಗಧನ್ವನೊಲವಿಂ ಬಿಟ್ಟಂದವೊಂದೆಂಬ ವಾ
ರ್ತೆ ತರಂಗೊಂಡಿರೆ ಕೇಳ್ದೆನಲ್ಲಿ ತಡಿಯೊಳ್ ಭೂಪಾಲಚೂಡಾಮಣೀ ೧೯೫

ಮುಖ ಕಮಲದಿಂದ ಕೂಡಿ ಅವಳು ನನ್ನ ಮುಖವನ್ನು ಆಸೆಯಿಂದ ನೋಡಿದಳು. ವ|| ಹಾಗೆ ಅವಳು ನನ್ನನ್ನು ನೋಡುವ ಸಮಯದಲ್ಲಿ –೧೯೩. ರೌದ್ರ ಶರೀರವುಳ್ಳ ದಾನವರಿಬ್ಬರೂ ಗಗನದಲ್ಲಿ ಅಗಣಿತ ಶಸ್ತ್ರಾಸ್ತ್ರಗಳಿಂದ ಹೊಡೆದಾಡಿದರು. ನುಗ್ಗಿ ಇರಿದಾಡಿದರು. ಕೊನೆಗೆ ತುಂಡಾಗಿ ಸತ್ತು ಇಬ್ಬರೂ ಕೆಳಕ್ಕೆಬಿದ್ದರು. ವ|| ಹಾಗೆ ಇಬ್ಬರು ದೈತ್ಯರೂ ಸತ್ತು ಬಿದ್ದುದನ್ನು ಕಂಡ ಮೇಲೆ ನಾನು ಕಂತುಕಾವತಿಯನ್ನು ಸಮಾಧಾನಗೊಳಿಸಿದೆನು. ಅನಂತರ ಅಲ್ಲಿಂದ ಆ ಕಾಂತೆಯೊಡನೆ ಹೊರಟು ಹಿಂದಿನ ಹಡಗನ್ನು ಹತ್ತಿದೆನು. ಆಗ ೧೯೪, ಸ್ಫುಟವಾಗಿ ಯೋಚಿಸಿ ಸಿಂಹ ದೇಶವಿರುವ ಕಡೆಗೆ ಹೋಗುವಂತೆ ಹಡಗಿನ ಹಾಯಿ ಬಟ್ಟೆಯನ್ನು ಬಿಚ್ಚಿದೆನು ಕೂಡಲೆ ಆ ಹಡಗು ವಾಯು ವೇಗದಿಂದ ದಡವನ್ನು ತಲಪಿತು. ರಾಜವಾಹನನೇ, ನಾನು ಆಗ ಕಂತುಕಾವತಿಯನ್ನೂ ಭೀಮಧನ್ವನನ್ನೂ ಕರೆದುಕೊಂಡು ಸುಖವಾಗಿ ದಡಕ್ಕಿಳಿದೆನು. ವ|| ಹಾಗೆ ನಾನು ದಡದಲ್ಲಿಳಿಯಲು—೧೯೫. “ಮಗಳನ್ನು ರಾಕ್ಷಸನು ಎತ್ತಿಕೊಂಡು ಹೋದನು. ಮಗನು ಸಮುದ್ರದಲ್ಲಿ ಮುಳುಗಿದನು. ತನಗೆ ಇನ್ನು ಬದುಕುವುದು ಬೇಕಾಗಿಲ್ಲ ಎಂದು ಚಿಂತಾಗ್ನಿಯಲ್ಲಿ ಬೆಂದು ತುಂಗಧನ್ವನು ಪ್ರಾಣಬಿಟ್ಟನು. ಭೂಪಾಲ

ವ॥ ಅಂತಾನಾವಾರ್ತೆಯುಂ ಕೇಳುತ್ತುಂ ಸಿಂಹಪುರಕ್ಕೆ ಬಂದು

ಅನುವಾಗಿರ್ದ ನೃಪಾಲಯಂ ವಿವಿಧಲೋಕಂ ನೂತ್ನಸಾಮ್ರಾಜ್ಯಮುಂ
ಗನೆಯರ್ ತಚ್ಚತುರಂಗಸೇನೆ ಜನತಾವಿಸ್ತಾರ ಸಂಪತ್ತಿಯುಂ
ದೆನಗಾಗಲ್ ಸಲೆ ಭೀಮಧನ್ವನದಱಿಂ ಮದ್ಭೃತ್ಯನಾದಂ ಮನ
ಕ್ಕನುರಾಗಂ ಮಿಗೆ ಕಂತುಕಾವತಿಯೊಳಾಂ ಕೂಡಿರ್ದೆನುರ್ವೀಶ್ವರಾ ೧೯೬

ವ॥ ಅಂತು ಭೀಮಧನ್ವನೆನಗೆ ಭೃತ್ಯನಾಗಿ ಕಂತುಕಾವತಿ ಸತಿಯೆನಗಾಗಿರೆ ಕೋಶದಾಸಂಗೆ ಚಂದ್ರಸೇನೆಯುಂ ಕೊಟ್ಟನಂತರಂ ನಿಮ್ಮಡಿಯನಱಸಲೆಂದಿರ್ಪಾಗಳ್

ನಿಮ್ಮಡಿಗಳ್ಗೆ ಮಿತ್ರನೆನಲೊಪ್ಪುವ ಸದ್ಗುಣಿಯಂಗರಾಜನೆ
ನ್ನಮ್ಮುದದಿಂ ಸಹಾಯ ಗುಣಮಂ ಮೆಱೆಯಲ್ಕಱಸಲ್ಕೆ ಸೇನೆಯುಂ
ಗಮ್ಮನೆ ಕೂಡಿಕೊಂಡು ಮನದುತ್ಸವದಿಂ ನಡೆತಂದು ದೇವ ಕಂ
ಡೆಮ್ಮಿದುಪಾದಪದ್ಮಯುಗಮಂ ನಿಜಮೂರ್ತಿಯನೆನ್ನ ಪುಣ್ಯದಿಂ ೧೯೭

ವ॥ ಎಂದು ಮಿತ್ರಗುಪ್ತಂ ತನ್ನ ವೃತ್ತಾಂತಮಂ ರಾಜವಾಹನಂಗೆ ಪೇಳ್ವುದುಂ

ಕೂಡಿದ ವಿಂಧ್ಯವಾಸಿನಿಯ ಜಾತ್ರೆಗೆ ಪೋಗಿ ವಿಪಂಚಿನಾದಮಂ
ಗಾಡಿ ಮಿಗಲ್ಕೆ ಕೇಳ್ದು ನಯನೇಂದ್ರಿಯಮುರ್ಬುತಿರಲ್ಕೆ ಕಂತುಕ
ಕ್ರೀಡೆಯನೊಲ್ದು ನೋಡಿ ಸುಖದಿಂ ಪರರಾಜ್ಯಮನಿಂತು ಸಾಧ್ಯಮಂ
ಮಾಡಿದ ಮಿತ್ರಗುಪ್ತಂ ನೀನಗಾರ್ ಸರಿಯೆಂದನಭಂಗವಿಕ್ರಮಂ ೧೯೮

ಶ್ರೇಷ್ಠನೇ, ಈ ದುಃಖ ಸಮಾಚಾರವು ದಡ ಸೇರುತ್ತಲೇ ತಿಳಿಯಿತು. ವ।। ನಾನು ಆ ವಾರ್ತೆಯನ್ನು ಕೇಳಿ ಸಿಂಹಪುರಕ್ಕೆ ಬಂದೆನು. ಅಲ್ಲಿ—೧೯೬. ಅನುಕೂಲವಾಗಿದ್ದ ಅರಮನೆ. ವಿವಿಧವಾದ ಲೋಕ ನೂತನವಾದ ಸಾಮ್ರಾಜ್ಯ, ಅಂಗನೆಯರು, ಚತುರಂಗಸೇನೆ, ಜನರ ಸಮೂಹದ ಸಂಪತ್ತು, ಇವೆಲ್ಲ ನನ್ನ ವಶವಾದುವು. ಅದರಿಂದ ಭೀಮಧನ್ವನು ನನ್ನ ಸೇವಕನಾದನು. ರಾಜವಾಹನನೇ ! ನಾನು ಅತಿಶಯವಾದ ಆನುರಾಗದಿಂದ ಕಂತುಕಾವತಿಯೊಡನೆ ಕೂಡಿ ಸುಖವಾಗಿದ್ದೆನು. ವ।। ಹೀಗೆ ಭೀಮಧನ್ವನು ನನಗೆ ಆಳಾದನು. ಕಂತುಕಾವತಿಯು ಹೆಂಡತಿಯಾದಳು. ಕೋಶದಾಸನಿಗೆ ಚಂದ್ರಸೇನೆಯನ್ನು ಕೊಟ್ಟೆನು. ಅನಂತರ ತಮ್ಮ ಪಾದಗಳನ್ನು ಹುಡುಕಬೇಕೆಂದಿದ್ದೆನು. ಆಗ ೧೯೭ ನಿಮಗೆ ಮಿತ್ರನಾದ ಸದ್ಗುಣಿಯಾದ ಅಂಗರಾಜನು ತನಗೆ ಸಹಾಯ ಮಾಡಬೇಕೆಂದು ಹೇಳಿ ಕಳುಹಿಸಿದನು. ಅದಕ್ಕಾಗಿ ನಾನು ಸಂತೋಷದಿಂದ ಸೇನೆಯೊಡನೆ ಇಲ್ಲಿಗೆ ಬಂದೆನು. ದೇವ, ನನ್ನ ಪೂರ್ವ ಪುಣ್ಯದಿಂದ ನಿಮ್ಮ ಪಾದ ಕಮಲಗಳನ್ನೂ ನಿಮ್ಮನ್ನೂ ನೋಡಿದೆನು.” ವ।। ಎಂದು ಮಿತ್ರ ಗುಪ್ತನು ತನ್ನ ವೃತ್ತಾಂತವನ್ನು ರಾಜವಾಹನನಿಗೆ ಹೇಳಿದನು.– ೧೯೮. “ಸೇರಿದ್ದ ವಿಂಧ್ಯವಾಸಿನಿಯ ಜಾತ್ರೆಗೆ ನೀನು ಹೋದೆ. ಇಂಪಾದ ವೀಣಾ ಗಾನವನ್ನು ಕೇಳಿದೆ. ಕಣ್ಣುಗಳಿಗೆ ಆನಂದವಾಗುವಂತೆ ಚೆಂಡಾಟವನ್ನು ನೋಡಿದೆ.

ಇದು ನಿಖಿಲಬುಧಜನಮನೋವನಜವನ ದಿವಾಕರ ಕಿರಣ ಪ್ರತಿಮ ಪ್ರಸನ್ನ ಶ್ರೀಮದ ಭಂಗವಿಟ್ಠಲಪದಾಂಭೋಜ ಮತ್ತ ಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಮಿತ್ರಗುಪ್ತ ಕಥಾ ವೃತ್ತಾಂತಂ

## ದ್ವಾದಶಾಶ್ವಾಸಂ

ಸುಖವಾಗಿ ಪರರಾಜ್ಯವನ್ನು ಸಾಧಿಸಿಕೊಂಡೆ. ಮಿತ್ರಗುಪ್ತ, ನಿನಗೆ ಸಮಾನರಾರು?" ಎಂದು ಅಭಂಗ ವಿಕ್ರಮ ರಾಜವಾಹನನು ಅವನನ್ನು ಮೆಚ್ಚಿ ಹೊಗಳಿದನು. ಇದು ಸಕಲ ವಿದ್ವಾಂಸರಮನಸ್ಸೆಂಬ ಕಮಲವನಕ್ಕೆ ಸೂರ್ಯನ ಕಿರಣಗಳಿಗೆ ಸಮನಾದ ಪ್ರಸನ್ನ ನಾದ ಶ್ರೀಮದಭಂಗವಿಟ್ಠಲನ ಪಾದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧು ಸೂದನನ ಮಗ ಸರಸಕವಿ ಚೌಂಡರಾಜನಿಂದ ವಿರಚಿತವಾದ ಅಭಿನವ ದಶಕುಮಾರ ಚರಿತೆಯ ಹನ್ನೆರಡನೆಯ ಆಶ್ವಾಸ

# ತ್ರಯೋದಶಾಶ್ವಾಸಂ

## ಮಂತ್ರಗುಪ್ತನ ನಿರೋಷ್ಠ್ಯದ ಕಥೆ

ಶ್ರೀರಂಜಿತವಕ್ಷಂ ಧಾ
ತ್ರೀರಮಣಂ ಮಂತ್ರಗುಪ್ತನಂ ನೋಡಿ ತದಾ
ಕಾರಸ್ಥಿತಿಯುಂ ಕೇಳ್ದಂ
ಧೀರಂ ಕದುಗೂರ್ತಭಂಗವಿಟ್ಠಲಭೃತ್ಯಂ ೧

ವ॥ ಅಂತು ರಾಜವಾಹನಂ ಮಂತ್ರಗುಪ್ತನ ಮುಖಮಂ ನೋಡಿ ನೀನೆಸಗಿದ ಕಾರ್ಯಮಂ ಪೇೞೆಂಬುದುಂ

ತನ್ನಧರಂ ಮನೋರಮೆಯ ದಂತಪರಿಕ್ಷತದಿಂ ಪಿಸುಳ್ದು ರ
ಕ್ತಂ ನೆಲೆಗಟ್ಟಿರಲ್ಕೆ ತುಟಿಮುಟ್ಟದೆ ಕೂರ್ತುಕಥಾಪ್ರಪಂಚಮಂ
ಬಿನ್ನವಿಸಲ್ಕೆವೇೞ್ವುದೆನುತುಂ ಸುಭಗಂ ಸಖಿ ಮಂತ್ರಗುಪ್ತನ
ತ್ಯುನ್ನತಬುದ್ಧಿಯಿಂ ಸಹಜಕಾರ್ಯಮನಂದುಸಿರ್ದಂ ನಿರೋಷ್ಠ್ಯದಿಂ ೨

ವ॥ ಅದೆಂತೆನೆ

ಧರಣೀನಾಯಕ ಕೇಳ್ ನಿಜಾಂಘ್ರಿಸರಸೀಜಾತಂಗಳಂ ಕಾಣಲಾ
ದರದಿಂ ಸಾಗರಚೇಲಧಾರಿಣಿಯನೆಲ್ಲಾ ಚೆಂದದಿಂ ಸಂತತಂ
ತಿರುಗಿ ಶ್ರೀಗೆ ನಿರಂತರಂ ನೆಲೆಯೆನಲ್ ಸಾರ್ದಿರ್ದ ಸಲ್ಲಕ್ಷಣಂ
ಸ್ಥಿರದಿಂದಿರ್ದ ಕಳಿಂಗದೇಶದೆಡೆಯಂ ಸಾರ್ದೆಂ ಸದಾನಂದದಿಂ ೩

೧. ಪ್ರಕಾಶಮಾನವಾದ ವಕ್ಷಃಸ್ಥಲವುಳ್ಳ ಧರಾಕಾಂತನಾದ ಅಭಂಗ ವಿಟ್ಠಲ ಭೃತ್ಯ ರಾಜವಾಹನನು ಮಂತ್ರಗುಪ್ತನನ್ನು ನೋಡಿ ಅವನ ವೃತ್ತಾಂತವನ್ನು ಸ್ನೇಹದಿಂದ ಕೇಳಿದನು. ವ॥ ರಾಜವಾಹನನು ಮಂತ್ರಗುಪ್ತನ ಮುಖವನ್ನು ನೋಡಿ ನೀನು ಮಾಡಿದ ಕೆಲಸವನ್ನು ಹೇಳು' ಎಂದು ಕೇಳಿದನು. ೨. "ನನ್ನ ಅಧರವು ಮನೋರಮೆಯ ದಂತಕ್ಷತದಿಂದ ಊದಿ ರಕ್ತಗಟ್ಟಿದೆ ! ತುಟಿಯನ್ನು ಮುಟ್ಟದಂತೆ ಕಥಾವಿಸ್ತಾರವನ್ನು ಹೇಳಬೇಕು." ಎಂದು ಯೋಚಿಸಿ ಆ ಸುಂದರನಾದ ಸುಖಿಯಾದ ಮಂತ್ರಗುಪ್ತನು ತುಟಿ ಮುಟ್ಟದಂತೆ ಜಾಣತನದಿಂದ ತನ್ನ ಕೆಲಸಗಳನ್ನು ಹೇಳಿದನು.[1] ವ॥ ಅದು ಹೇಗೆಂದರೆ—೩. "ಭೂಪತಿಯೇ ಕೇಳು. ನಿಮ್ಮ ಪಾದಕಮಲವನ್ನು ನೋಡುವ ಆಸಕ್ತಿಯಿಂದ ಸಮುದ್ರ ವಸನೆಯಾದ ಭೂಮಿಯನ್ನೆಲ್ಲ ಹುಡುಕಿದೆ.

---

1. ಓಷ್ಠ್ಯವರ್ಣಗಳೆಂದರೆ–ಉಕಾರ, ಪ, ಫ, ಬ, ಭ, ಮ ಇವುಗಳನ್ನುಚ್ಚರಿಸುವಾಗ ತುಟಿಗಳು ಕೂಡುತ್ತವೆ. ಈ ವರ್ಣಗಳು ಬರದಂತೆ ಚೌಂಡರಸನು ಕಾವ್ಯದ ಈ ಭಾಗವನ್ನು ರಚಿಸಿದ್ದಾನೆ. (ರಂ)

ವ॥ ಅಂತು ಕಳಿಂಗದೇಶಮಂ[1]ನೆಯ್ದಿ

ಧರಣಿಯ ಕಂಠದೇಕಸರದಂದದಿನಗ್ಗಳದಿಂ ನೆಗೞ್ಕೆಯಿಂ
ದಿರೆಯ ನಿಜಾನನಕ್ಕಡರ್ದ ರತ್ನದ ಕನ್ನಡಿಯಂದದಿಂ ನಿರಂ
ತರನಯಕಾಂತಿಯಂ ತಳೆವ ಸಜ್ಜನಸಂತತಿಯಿಂದೆ ಕೀರ್ತಿಯಂ
ಧರಿಸಿದ ತತ್ಕಳಿಂಗನಗರಾವತಿಯಂ ಸಲೆ ಕಂಡೆನುರ್ವಿಪಾ ೪

ವ॥ ಅಂತಾಕಳಿಂಗನಗರಿಯಂ ಕಂಡಾಕ್ಷಣದಿಂ

ಸಂತತರಥಾಂಗತತಿಗತಿ
ಚಿಂತಾಹತಿ ನೆಲಸೆ ಧರೆಗೆ ನಿದ್ರಾಲಸ್ಯಂ
ತಿಂತಿಣಿಯಿನಾಗೆ ಸರಸಿಜ
ಕಾಂತಂ ತಾನಸ್ತಗಿರಿಗೆ ನೆಟ್ಟನೆ ಸಾರ್ದಂ ೫

ವ॥ ಅಂತಸ್ತಗಿರಿಯನೆಯ್ದಲ್ಕಾ ಕಳಿಂಗನಗರಿಯಂತಿಕ ಶಾಖೆಗಳಲ್ಲಿ ಕಣ್ಗೆಯ್ಯಲೆಂದಿರ್ದ ಕಿನ್ನರಜಾಯಾಕಾಂತರ

ಇನಿತಾಯಾಸಂಗೆಯ್ಯಲ್
ತನಗೇತಱ ಸಿದ್ಧಿ ತಾನದೆಲ್ಲಿಯ ಸಿದ್ಧಂ
ಸನಯಂ ತಾನಲ್ತೆನಿಸಿದ
ದನಿ ಕರ್ಣಕ್ಕೆಯ್ದಲದಱ ಸರಿಸಕೆ ನಡೆದೆಂ ೬

ಕೊನೆಗೆ ಲಕ್ಷ್ಮಿಯು ಎಡೆಬಿಡದೆ ವಾಸಮಾಡುವ ಒಳ್ಳೆಯ ಲಕ್ಷಣಗಳಿಂದ ತುಂಬಿದ ಕಳಿಂಗ ದೇಶವನ್ನು ಆನಂದದಿಂದ ಹೊಕ್ಕೆನು. ವ॥ ಕಳಿಂಗ ದೇಶವನ್ನು ಸೇರಿ—೪. ಮಹಾರಾಜನೇ ! ಅಲ್ಲಿ ಹೆಸರುವಾಸಿಯಾದ ಕಳಿಂಗ ನಗರಾವತಿಯನ್ನು ಕಂಡೆನು. ಅದು ಭೂಮಿಯ ಕುತ್ತಿಗೆಯಲ್ಲಿರುವ ಮುತ್ತಿನ ಏಕಾವಳೀ ಸರವಂತೆ ರಂಜಿಸಿತು. ಮತ್ತೆ ತನ್ನ ಮುಖಕ್ಕೆದುರಾಗಿ ಹಿಡಿದ ರನ್ನಗನ್ನಡಿಯಂತೆ ಪ್ರಕಾಶಿಸಿತು. ನಿರಂತರವಾಗಿ ನಯನಕಾಂತಿಯುಳ್ಳ ಸಜ್ಜನರ ಸಮೂಹದಿಂದ ತುಂಬಿ ಅದು ಕೀರ್ತಿಶಾಲಿಯಾಗಿದ್ದಿತು. ವ॥ ಆ ಕಳಿಂಗನಗರಿಯನ್ನು ನೋಡಿದ ಕ್ಷಣದಲ್ಲಿಯೇ—೫. ಕಮಲಗಳಿಗೆ ನಾಥನಾದ ಸೂರ್ಯನು ನೇರವಾಗಿ ಅಸ್ತಗಿರಿಯನ್ನು ಸೇರಿದನು, ಆಗ ಚಕ್ರವಾಕಗಳ ಎಡೆಬಿಡದ ಸಂಚಾರವು ನಿಂತುಹೋಯಿತು. ಅವು ಚಿಂತಾಕ್ರಾಂತವಾದುವು. ಧರೆಯಲ್ಲಿ ನಿದ್ರೆಯಿಂದ ಆಲಸ್ಯವು ದಟ್ಟವಾಗಿ ಹರಡಿತು. ವ॥ ಸೂರ್ಯನು ಮರೆಯಾಗಲು ಆ ಕಳಿಂಗನಗರಿಯ ಹತ್ತಿರದ ಮರಗಳ ಕೊಂಬೆಗಳ ಮೇಲೆ ನಿದ್ರಿಸಬೇಕೆಂದಿದ್ದ ಕಿನ್ನರ ದಂಪತಿಯ—೬. "ಇಷ್ಟು ಆಯಾಸಪಡಲು ನನಗೆ ಅಂಥ ಸಿದ್ಧಿಯಿದೆಯೇ ? ನಾನೇನು ಸಿದ್ಧನೆ ? ನಾನು ನೀತಿವಿದನಲ್ಲ." ಎಂಬ ಧ್ವನಿಯು ಕಿವಿಗೆ ಬೀಳಲು ಅವರ ಹತ್ತಿರಕ್ಕೆ

[1] 'ದೇಶವನೆಯ್ದಿ' ಎಂದಿರಬಹುದು. ಏಕೆಂದರೆ; ಮಕಾರವು ಓಷ್ಠ್ಯ. ವಕಾರವು ದಂತೋಷ್ಠ್ಯವಾದರೂ ಅದಕ್ಕೆ ವಿನಾಯಿತಿ ಕೊಟ್ಟಿರಬಹುದು (ರಂ).

ವ॥ ಆ ದನಿಯಂ ಪಿಂದನೆ ನಡೆಯೆ

ಹರಯದ ಜಾಯಾಕಾಂತರ್
ತರದಿಂ ಕಿನ್ನರಶರೀರಿಗಳ್ ಸಡಗರದಿಂ
ದಿರದೆಯ್ದಿದರಾಕ್ಷಣದಿಂ
ಹರಧರಣಿಗೆ ಕಂಡೆನಾನದಂ ಧರಣೀಶಾ ೭

ವ॥ ಅಂತಾಕಿನ್ನರಜಾಯಾಕಾಂತರ್ ಚಿತಾಗ್ನಿಸ್ಥಾನಕ್ಕೆಯ್ದುಲೊಡಂ

ಜಡೆ ಚಂಚತ್ಕಂಥೆ ರಕ್ಷಾಂಕಿತನಿಖಿಳಶರೀರಂ ಸಸಿದ್ಧಾರ್ಥಹಸ್ತಂ
ಕಿಡಿಗಣ್ ಕಾರ್ಯಾರ್ಥಚಿತ್ತಂ ನರನಿಕರಲಸಜ್ಜಾಂಗಲಸ್ಥಾಲಿ ಲೆಕ್ಕಂ[1]
ಗಡಿಗೆಟ್ಟಿದ್ದಿಂಧನಂ ತನ್ನಿದಿರ್ಗತಿಶಯದಿಂದಿರ್ದ ಕಿರ್ಚೆಯ್ದೆ ಚೆನ್ನಿಂ
ಗೆಡೆಯಾಗಲ್ಕಿರ್ದನಂದಗ್ಗಳದ ಯತಿಗಣಶ್ರೇಷ್ಠನಾಗಳ್ ಯಥೇಷ್ಟಂ ೮

ಏತಱಿದಱಿಯೆಂ ಘನಶಾ
ಖಾತತಿಯಿಂದಲರ್ಗಳೀಟ್ಗಿಯಿಂದೆಸೆದಿರ್ದ
ತ್ತಾತನ ಕೆಲದಲ್ಲಿ ದಳ
ವ್ರಾತಂ ತಱ್ತಿರ್ದ ಶಾಖಿದೆಸೆಗಡರ್ದನಿಶಂ ೯

ವ॥ ಅಂತಾಪರಧರಣಿಯ ಶಾಖೆಯುಲ್ಲಿರ್ದ ಯತಿಶ್ರೇಷ್ಠಂ ಕಿನ್ನರ ಜಾಯಾಕಾಂತರಂ ನಿರೀಕ್ಷಿಸಿಂತೆಂದಂ

ಹೋದೆನು. ವ॥ ಆ ಧ್ವನಿಯ ಹಿಂದೆಯೇ ನಡೆಯಲು– ೭. ಪ್ರಾಯದ ಪತಿ ಪತ್ನಿಯರು ಕಿನ್ನರ ಶರೀರ ಧಾರಿಗಳಾಗಿ ಸಡಗರದಿಂದ ಆ ಕ್ಷಣದಲ್ಲಿ, ಶ್ಮಶಾನ ಭೂಮಿಗೆ ಇಳಿದರು. ವ॥ ಹಾಗೆ ಆ ಕಿನ್ನರ ಪತಿ ಪತ್ನಿಯರು ಚಿತಾಗ್ನಿಯ ಸ್ಥಾನಕ್ಕೆ ಹೋದ ಕೂಡಲೇ—೮. ಅಲ್ಲೊಬ್ಬ ಯತಿಶ್ರೇಷ್ಠನಿದ್ದನು. ಜಟಾಧಾರಿಯಾಗಿದ್ದನು· ಚೀವರವು ಗಾಳಿಗೆ ಆಡುತ್ತಿತ್ತು. ಮೈಗೆಲ್ಲ ಬೂದಿ ಹಚ್ಚಿಕೊಂಡಿದ್ದನು. ಕೈಯಲ್ಲಿ ಬಿಳಿಸಾಸುವೆ ಹಿಡಿದಿದ್ದನು. ಕಂಗಳಿಂದ ಕಿಡಿ ಹಾರುತ್ತಿತ್ತು. ಅವನ ಮನಸ್ಸು ಕಾರ್ಯದಲ್ಲಿ ಆಸಕ್ತವಾಗಿದ್ದಿತು. ಹೆಣಗಳ ಗುಂಪಿನಿಂದ ಕೂಡಿದ ಮಾಯಾ ವಿದ್ಯೆಯ ಪಾತ್ರೆಗಳ ಸಾಲು, ವನಪ್ರದೇಶದ ಲೆಕ್ಕವಿಲ್ಲದಷ್ಟು ಸೌದೆಯರಾಶಿ ಮುಂದೆ ಬಿದ್ದಿತು' ಎದುರಿಗೆ ಬೆಂಕಿ ಹತ್ತಿ ಉರಿಯುತ್ತಿತ್ತು. ಇವುಗಳಿಂದ ಅವನು ವಿಶಿಷ್ಟನಾಗಿ ಕಾಣಿಸುತ್ತಿದ್ದನು. ೯. ಯಾವ ಬಗೆಯದೆಂದು ತಿಳಿಯಲಿಲ್ಲ. ಆತನ ಪಕ್ಕದಲ್ಲಿ ಎಲೆಗಳು ತುಂಬಿದ್ದ ರೆಂಬೆಯೊಂದು ಉದ್ದಕ್ಕೆ ಚಾಚಿಕೊಂಡಿದ್ದಿತು. ಅದು ಅನೇಕ ಕೊಂಬೆಗಳಿಂದಲೂ ತುಂಬ ಹೂವುಗಳಿಂದಲೂ ರಂಜಿಸುತ್ತಿತ್ತು. ವ॥ ಹಾಗೆ ಆ ಶ್ಮಶಾನದ ಒಂದು ಮೂಲೆಯಲ್ಲಿದ್ದ ಯತಿ ಶ್ರೇಷ್ಠನು ಕಿನ್ನರ ದಂಪತಿಗಳನ್ನು

[1] 'ಲಸಜ್ಜಾಂಗಲಸ್ಥಾಲಿರೇಖಂ' ಎಂದು ಪಾಠವಿರಬಹುದು (ರಂ).

ಸರಸಿಜನೇತ್ರೆಯಂ ಘನಚಳಾಳಕಿಯಂ ಕಳಕಂಠನಾದೆಯಂ
ತರಳಕಟಾಕ್ಷೆಯಂ ಕನಕಕಾಂತಿ ಶರೀರೆಯನಿಲ್ಲಿಗೆಯ್ದಿಸಾ
ದರದೆ ಕಳಿಂಗಕನ್ಯಕೆಯನೆಂದೆನೆ ಸಾಹಸದಲ್ಲಿ ಸಂದ ಕಿ
ನ್ನರನಿರದೆಯ್ದೆ ತತ್ಸತಿಯನಾಯತಿಯಾಜ್ಞೆಗೆ ತಂದನಾಕ್ಷಣಂ ೧೦

ಕನಕಘಟಸ್ತನಂ ರಜನಿರಂಜಿತದೀರ್ಘಲಸತ್ಕಳಾಳಕಾ
ನನ ಗಜಯಾನಸದ್ಗತಿಯನಂಗಶರಾಗ್ರ ಕಟಾಕ್ಷಕಾಂತಿ ಚಂ
ದನ ಘನಸಾರಗಂಧ ನಿಜದೇಹಲತಾಸ್ಥಿತಿ ಜಾತರಕ್ಷೆಗಳ್
ಮುನಿದೆರ್ದೆಗಿರ್ಚನೀಯದೆಲೆ ರಾಜಗಣೇಶ ಶಶಾಂಕಲೇಖೆಯಾ ೧೧

ವ॥ ಅಂತಿರ್ದ ಕಳಿಂಗಕನ್ನೆಯೆನಿಸಿರ್ದ ಶಶಾಂಕಲೇಖೆಯನಾಕಷ್ಟಯತಿಗಾ ಕಿನ್ನರಂ ತಂದೀಯೆ

ಯತಿಯತಿಶೀಘ್ರದಿನಾಗಳ್
ಸತಿಯಡಗಿಂದಗ್ನಿಯಾನನಕ್ಕಾನಂದ
ಸ್ಥಿತಿಯನೆಸಗಲ್ಕೆ ತಾಂ ತ
ತ್ಸತಿಯಂ ನೆನೆದಸಿಯನಂಗಲತೆಗಾಗಿಸಿದಂ ೧೨

ವ॥ ಅಂತಾಯತಿ ಶಶಾಂಕಲೇಖೆಯಂ ಹತಂಗೆಯ್ಯಲಾನದಂ ಕಾಣಲಾಜಿದೆ

ನೋಡಿ (ಹೇಳಿದನು) ೧೦. "ತಾವರೆಯಂತೆ ಕಣ್ಣುಳ್ಳ, ಒತ್ತಾದ ಚಂಚಲವಾದ ಮುಂಗುರುಳುಗಳುಳ್ಳ, ಇಂಪಾಗಿ ಮಾತನಾಡುವ, ಚಂಚಲವಾದ ಕಡೆಗಣ್ ನೋಟವುಳ್ಳ, ಚಿನ್ನದಂತೆ ಹೊಳೆಯುವ ಶರೀರವುಳ್ಳ, ಕಳಿಂಗ ಕನ್ಯೆಯನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ಹೇಳಿದನು. ಕೂಡಲೆ ಆ ಸಾಹಸಿಯಾದ ಕಿನ್ನರನು ಆ ಯತಿಯ ಅಪ್ಪಣೆಯಂತೆ. ಆ ಸತಿಯನ್ನು ಅಲ್ಲಿಗೆ ಕರೆತಂದನು. ೧೧. ಕಳಿಂಗಕುಮಾರಿಯಾದ ಶಶಾಂಕಲೇಖೆಗೆ, ಚಿನ್ನದ ಕೊಡಗಳಂಥ ಸ್ತನಗಳು, ರಾತ್ರಿಯಂತೆ ರಂಜಿಸುವ ಉದ್ದವಾದ ಹಾರುವ ಮುಂಗುರುಳುಗಳುಳ್ಳ ಮುಖ, ಆನೆಯಂಥ ಸುಂದರವಾದ ನಡಿಗೆ, ಮದನನ ಬಾಣದ ತುದಿಯಂತೆ ಚೂಪಾದ ಕಟಾಕ್ಷದ ಕಾಂತಿ, ಮೈಗೆ ಹಚ್ಚಿದ ಪಚ್ಚಕರ್ಪೂರ ಮಿಶ್ರಿತವಾದ ಚಂದನದ ಸುವಾಸನೆ. ಬಳ್ಳಿಯಂಥ ದೇಹದ ಮಾಟ, ಮೈಗೆ ಹಚ್ಚಿದ ರಕ್ಷೆ(ಬೂದಿ) ಇವು, ರಾಜವಾಹನನೇ, ಹೃದಯದಲ್ಲಿ ಕಾಮಾಗ್ನಿಯನ್ನು ಹೊತ್ತಿಸವೇ? ವ॥ ಹಾಗಿದ್ದ ಕಳಿಂಗಕುಮಾರಿಯಾದ ಶಶಾಂಕಲೇಖೆಯನ್ನು ಆ ಕಷ್ಟಪಡುವ ಯತಿಗೆ ಕಿನ್ನರನು ತಂದುಕೊಡಲು– ೧೨. ಯತಿಯು ಅತಿಶೀಘ್ರದಿಂದ ಆ ಕಾಂತೆಯ ಮಾಂಸದಿಂದ ಬೆಂಕಿಯಜ್ವಾಲೆಯಲ್ಲಿ ಹೋಮಮಾಡಿ ಅಗ್ನಿಗೆ ಆನಂದವನ್ನುಂಟು ಮಾಡುವುದಕ್ಕಾಗಿ ಅವಳ ಅಂಗಲತೆಗೆ ಕತ್ತಿಯನ್ನು ಬೀಸಿದನು. ವ॥ ಹಾಗೆ ಆ ಯತಿಯು ಶಶಾಂಕಲೇಖೆಯನ್ನು ಹೊಡೆಯಲು ನಾನ

ಎಲೆಲಿಲೆ ಕಪ್ಪ ನೀಂ ಯತಿಯೆ ಅಂತಕನಲ್ಲದೆ ಖಡ್ಗಧಾರೆಯುಂ
ಲಲನೆಯ ಕಂಧರಕ್ಕೆ ಜಡಿದಾನಿಸದಿರ್ ತೆಗೆಯೆಂದಗಲ್ಚಿ ತ
ತ್ಪ್ರಳಯತಿನಾಥನಂ ನಿಜಕರಾಸಿಯಿನಿರ್ಕಡಿಗೆಯ್ದನಾತನಾಂ
ತೆಳೆ ಜಡೆ ಕಂಥೆಯಂ ಸಸಿನೆಶಾಖೆಯ ಸಂಧಿಗೆ ಸ್ಸೈತೆ ಸಾರ್ಚಿದೆಂ ೧೩

ವ॥ ಅದಲ್ಲದಾಯತಿಯ ಕಡಿಖಂಡಂಗಳಂ ಚಿತಾಗ್ನಿಗೀಡಾಡಲದಂ ಶಶಾಂಕಲೇಖೆ ನಿರೀಕ್ಷಿಸಿ

ಎನ್ನ ಶರೀರಂ ಸತತಂ
ನಿನ್ನಿಂ ವಿಶಸನದ ದೆಸೆಯಿನಗಲಿತ್ತದಱಿಂ
ನಿನ್ನೆಡೆಗೆ ತೆರಳ್ಚಲ್ಲದೊ
ಡೆನ್ನೆಡೆಗೆಯ್ತಂದೊಡೆನಗೆ ಸಲೆ ನೀಂ ಕೆಳೆಯಂ ೧೪

ವ॥ ಅದಲ್ಲದೆಯುಂ

ಹರಣಕ್ಕೆ ನೀನೆ ಕರ್ತಂ
ನಿರಾಶೆಯಿನ್ನಿತರಕಾಂತರೆನಗದಱಿಂದಾ
ದರದಿಂ ಕಳಿಂಗನಗರಿಗೆ
ತೆರಳಲ್ದಿನಿತರ್ಥಸಿದ್ಧಿಯೆಂದಳ್ ನಯದಿಂ ೧೫

ವ॥ ಎಂದೆನ್ನಂ ಶಶಾಂಕಲೇಖೆ ತನ್ನ ನಗರಿಗೆ ತೆರಳ್ಚಲೆಂದಾಗ್ರಹಿಸಲನಂತರಂ ಕಿನ್ನರ ನಿಂತೆಂದಂ

ದನ್ನು ನೋಡಲಾರದೆ– ೧೩. 'ಎಲೆಲೇ! ಕಷ್ಟ! ನೀನು ಯತಿಯೇ ? ಯಮನಾಗಿರುವೆ. ಕತ್ತಿಯ ಅಲಗನ್ನು ಲಲನೆಯ ಕೊರಳಿಗೆ ಒಡ್ಡಿ ಹೆದರಿಸಬೇಡ. ತೆಗೆ' ಎಂದು ಕೂಗುತ್ತಾ ಆ ಯತೀಶ್ವರನನ್ನು ತಳ್ಳಿದೆನು. ಕೈಯ್ಯಲ್ಲಿದ್ದ ಕತ್ತಿಯಿಂದ ಅವನನ್ನು ತುಂಡುಮಾಡಿದೆನು. ಅತನು ಧರಿಸಿದ್ದ ನೀಳವಾದ ಜಡೆ ಮತ್ತು ನಾರುಬಟ್ಟೆಯನ್ನು ಕೊಂಬೆಯ ಸಂಧಿಯಲ್ಲಿ ಸರಿಯಾಗಿ ಸಿಕ್ಕಿಸಿದೆನು. ವ॥ ಅದಲ್ಲದೆ ಆ ಯತಿಯ ಶರೀರದ ತುಂಡುಗಳನ್ನು ಚಿತಾಗ್ನಿಯಲ್ಲಿ ಎಸೆದೆನು. ಅದನ್ನು ಶಶಾಂಕಲೇಖೆಯು ನೋಡಿ– ೧೪. "ನನ್ನನ್ನು ಕೊಲೆಯಿಂದ ತಪ್ಪಿಸಿ ಕಾಪಾಡಿದೆ. ಅದರಿಂದ ನೀನು ನಿನ್ನ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗು. ಅಥವಾ ಕೂಡಲೆ ನಾನಿರುವ ಸ್ಥಳಕ್ಕೆ ನನ್ನೊಡನೆ ಬಾ. ನೀನು ನನಗೆ ಇನ್ನು ಗೆಳೆಯನು. ವ॥ ಅದೂ ಅಲ್ಲದೆ- ೧೫. ನನ್ನ ಪ್ರಾಣಗಳಿಗೆ ನೀನೇ ಒಡೆಯ. ನನಗೆ ಬೇರೆ ಕಾಂತರ ವಿಷಯದಲ್ಲಿ ಆಸೆಯಿಲ್ಲ. ಅದುದರಿಂದ ನೀನು ಕಳಿಂಗನಗರಿಗೆ ಬಾ. ಇಷ್ಟು ಅರ್ಥ ಸಿದ್ಧಿಯಾಗಲಿ" ಎಂದು ನಯವಾಗಿ ಹೇಳಿದಳು. ವ॥ ಹೀಗೆ ಶಶಾಂಕಲೇಖೆಯು ನನ್ನನ್ನು ತನ್ನ ನಗರಿಗೆ ಬರಬೇಕೆಂದು ಒತ್ತಾಯ

ಜಾಯಾಕಾಂತರ ನಿಚ್ಚ
ಕ್ಕಾಯಾಸಂ ನಿನ್ನ ದೆಸೆಯಿಂ ನೀಗಳ್ ಕಟಿದ
ತ್ರೀಯೆಡೆಗಾನೇಗೆಯ್ಯಲ್
ಶ್ರೇಯಸ್ಕರ ಕಾರ್ಯದೀಕ್ಷೆಯಂ ದಯೆಗೆಯ್ಯಾ ೧೬

ವ॥ ಎನಲಾತಂಗಿಂತೆಂದೆಂ

ಎನ್ನಂ ಶಶಾಂಕಲೇಖಾ
ಕನ್ನಿಕೆಯಂ ತತ್ಕಳಿಂಗನಗರಿಗೆ ತೀವ್ರಂ
ಕಿನ್ನರ ನಡಸೆನಲಾತಂ
ತನ್ನಾಜ್ಞೆಯಿನಾಗಳಿಟ್ಟನಲ್ಲಿ ನಿತಾಂತಂ ೧೭

ವ॥ ಅಂತೆನ್ನಂ ಕಳಿಂಗಕನ್ನೆಯಂ ಕಿನ್ನರಂ ಕಳಿಂಗನಗರಿಯಲ್ಲಿರಿಸಿ ತಾಂ ತನ್ನ ದೇಶಕ್ಕೆ ತೆರಳ್ದಂ ಇತ್ತಲ್ ಕಳಿಂಗಕನ್ಯೆ ತನ್ನ ಕನ್ಯಾಸ್ಥಾನದಲ್ಲಿ

ತನ್ನ ಸಖಿ ಚಂದ್ರಲೇಖೆಯ
ನೆನ್ನಯ ಕೆಲದಲ್ಲಿ ನಿಱಿಸಿ ತದನಂತರದಿಂ
ಕನ್ನೆ ನಿಜಜನನಿಜನಕ
ರ್ಗನ್ನೆಟ್ಟನೆ ತಿಳುಹಲೆಯ್ದಿದಳ್ ತತ್ಕಥೆಯಂ ೧೮

ವ॥ ಅಂತಾಕೆ ರಾಜಾಲಯಕ್ಕೆಯ್ದಿ ತನಗಾಯತಿಯಿಂದಾದ ಸಂಕಟಸ್ಥಿತಿಯನಱುಹಿಯನಂತರಂ

ಮಾಡಲು ಕಿನ್ನರನು ಹೀಗೆ ಹೇಳಿದನು. ೧೬. "ಪತಿಪತ್ನಿಯರಾದ ನಮ್ಮ ದಿನದಿನದ ಕಷ್ಟ ಇಂದು ನಿನ್ನ ದೆಸೆಯಿಂದ ನಾಶವಾಯಿತು. ಇದಕ್ಕೆ ನೀನು ಹೇಳುವ ಶ್ರೇಯಸ್ಕರವಾದ ಯಾವ ಕೆಲಸವನ್ನಾದರೂ ಮಾಡುವೆನು. ದಯೆಯಿಟ್ಟು ಹೇಳು" ವ॥ ಅವನಿಗೆ ನಾನು ಹೇಳಿದೆನು.– ೧೭. "ಕಿನ್ನರ ನನ್ನನ್ನೂ ಈ ಶಶಾಂಕ ಲೇಖೆಯನ್ನೂ ಬೇಗ ಕಳಿಂಗ ನಗರಿಗೆ ಕರೆದುಕೊಂಡು ಹೋಗು." ಅವನು ಕೂಡಲೆ ನನ್ನ ಆಜ್ಞೆಯಿಂದ ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋದನು. ವ॥ ನನ್ನನ್ನೂ ಕಳಿಂಗಕುಮಾರಿಯನ್ನೂ ಕಿನ್ನರನು ಕಳಿಂಗನಗರಿಯಲ್ಲಿ ಇರಿಸಿ ತನ್ನ ದೇಶಕ್ಕೆ ಹೋದನು. ಇತ್ತ ಕಳಿಂಗ ಕನ್ಯೆಯು ತನ್ನ ಅಂತಃಪುರದಲ್ಲಿ, ೧೮. ತನ್ನ ಗೆಳತಿ ಚಂದ್ರಲೇಖೆಯನ್ನು ನನ್ನ ಪಕ್ಕದಲ್ಲಿ ನಿಲ್ಲಿಸಿದಳು. ಅನಂತರ ಅವಳು ತನ್ನ ತಾಯಿತಂದೆಗಳಿಗೆ ತನ್ನ ಕತೆಯನ್ನು ತಿಳಿಸಲು ಹೋದಳು. ವ॥ ಅವಳು ಅರಮನೆಗೆ ಹೋಗಿ ತನಗಾದ ಕಷ್ಟವನ್ನು ವಿಸ್ತಾರ

ತೆರಳದ ನೇಹದಿಂ ಧರಣಿನಾಥನ ನಂದನೆ ನಿಚ್ಚನಿಚ್ಚಲಾ
ದರಿಸಿಯನೇಕ ತಂತ್ರಿಗಳಿನಗ್ಗದ ಗೀತರಸಾತಿರೇಕದಿಂ
ಸ್ಥಿರತರಸಂಗದಿಂ ಸಕಲಗಂಧದಿನೆಟ್ಟಿಗೆಯಲರ್ಗಳಿಂ ಕಳಾ
ಧರೆ ನಲಿದೆನ್ನನೀತೆಱದಿನಲ್ಲಿರಿಸಿಟ್ಟಳಿಳಾಧಿನಾಯಕಾ ೧೯

ವ॥ ಅಂತಾನಲ್ಲಿರಲಾಕೆ ನಾಲ್ಕೆರಡುದಿನಂ ಕಳಿಯೆ ಚಂದ್ರಲೇಖೆಯಾದಿಯಾದ ಸಖೀಜನರ್ ಸಹಿತಂ

ನೆರೆವ ಸಖೀಜನಂ ಸಹಿತ ಸತ್ವರಕೆಯ್ದಿ ಶಶಾಂಕಲೇಖೆಯ
ಚ್ಚರಿಯೆನಲಾಗಳಲ್ಲಿ ಜಲಕೇಳಿಯನಂದೆಸಗಲ್ಕೆ ನೀಳ್ದು ತ
ತ್ಸರಸಿಯನೆಯ್ದಲಂತ್ರದರಸಂ ಜಯಸಿಂಹನಗಲ್ಚಿ ತಾಣದಿಂ
ತರಳೆಯನಾಕ್ಷಣಂ ನಡೆಸಿದಂ ನಿಜದೇಶಕೆ ತನ್ನ ಕಾಂಕ್ಷೆಯಿಂ ೨೦

ವ॥ ಅಂತಂತ್ರದೇಶದರಸಂ ಜಯಸಿಂಹಂ ಶಶಾಂಕಲೇಖೆ ಜಲಕ್ರೀಡೆಯಾಡಲದಂ ಕಂಡಾಕೆಯುಂ ಚಂದ್ರಲೇಖೆಯಾದಿಯಾದ ಸಕಲಸ್ತ್ರೀಯರುಂ ನೇಹದಿಂ ತನ್ನ ದೇಶಕ್ಕೆ ನಡೆಯಿಸಲಂತದನಾಂ ಕೇಳ್ದೆನ್ನಲ್ಲಿಯಾನಿಂತೆಂದೆಂ

ಎಲ್ಲಿಯ ಕಿನ್ನರಯತಿಯದೆಲ್ಲಿದನೆಲ್ಲಿಯ ದೇಶಧಾತ್ರಿ ಕಾ
ನೆಲ್ಲಿದಳಾಕಳಿಂಗ ಸರನಾಥನ ನಂದನೆಯಾಕೆಯಿಂದೆನಾ
ನಿಲ್ಲಿರಲಂತ್ರರಾಜಜಯಸಿಂಹನರೇಶನಗಲ್ಚಿಯಾಕೆಯುಂ
ನಿಲ್ಲದೆ ತಾಳ್ದಿ ತನ್ನ ಧರೆಗೆಯ್ದಿದನೇಂದಟಿಲ್ದಿಂ ನಿರಂತರಂ ೨೧

ವಾಗಿ ಹೇಳಿದಳು. ಅನಂತರ ೧೯. ರಾಜಕುಮಾರಿಯು ವಿಶೇಷವಾದ ಸ್ನೇಹದಿಂದ ದಿನದಿನವೂ ನನ್ನನ್ನು ಅನೇಕ ಉಪಾಯಗಳಿಂದ ಆದರಿಸಿದಳು. ಅತ್ಯುತ್ತಮವಾದ ಸಂಗೀತ ರಸಾನುಭವದಿಂದಲೂ, ಸ್ಥಿರವಾದ ಸಂಗದಿಂದಲೂ ಸಂತೋಷಪಡಿಸಿದಳು. ಸಕಲವಿಧ ಸುಗಂಧ ದ್ರವ್ಯಗಳಿಂದಲೂ, ಉತ್ತಮವಾದ ಹೂಗಳಿಂದಲೂ, ಆ ಕಳಾಧರೆ ಕಳಿಂಗ ಕನ್ಯೆಯು ಸಂತೋಷದಿಂದ ನನ್ನನ್ನು ಅಲ್ಲಿಟ್ಟು ಆದರಿಸಿದಳು. ವ॥ ಹಾಗೆ ನಾನು ಅಲ್ಲಿ ಇರಲು ಕೆಲವು ದಿನಗಳು ಕಳೆದವು. ಚಂದ್ರಲೇಖೆ ಮೊದಲಾದ ಸಖಿಯರೊಡನೆ ಒಂದು ದಿವಸ ೨೦. ಶಶಾಂಕಲೇಖೆಯು ಆಶ್ಚರ್ಯ ಪಡುವಂತೆ ಜಲಕ್ರೀಡೆಯನ್ನಾಡಲು ವಿಶಾಲವಾದ ಸುಂದರ ಸರೋವರಕ್ಕೆ ಹೋದಳು. ಆಗ ಅಲ್ಲಿ ಆಂಧ್ರ (ಅಂತ್ರ) ರಾಜ ಜಯಸಿಂಹನು ಅವಳನ್ನು ನನ್ನಿಂದ ಬೇರ್ಪಡಿಸಿ ತನ್ನ ದೇಶಕ್ಕೆ ಕರೆದುಕೊಂಡು ಹೋದನು. ವ॥ ಅಂತ್ರ (ಆಂಧ್ರ) ದೇಶದ ರಾಜ ಜಯಸಿಂಹನು ಶಶಾಂಕಲೇಖೆಯು ಜಲಕ್ರೀಡೆಯಾಡುವುದನ್ನು ನೋಡಿ ಆಕೆಯನ್ನೂ ಚಂದ್ರಲೇಖೆಯೇ ಮೊದಲಾದ ಸಕಲ ಸ್ತ್ರೀಯರನ್ನೂ ತನ್ನ ದೇಶಕ್ಕೆ ಕರೆದೊಯ್ದನು. ಅದನ್ನು ಕೇಳಿ ನಾನು ನನ್ನಲ್ಲಿ (ಹೀಗೆ ಹೇಳಿಕೊಂಡೆನು.)—೨೧. "ಎಲ್ಲಿಯ ಕಿನ್ನರ ? ಯತೀಶ್ವರ ಎಲ್ಲಿಯವನು ? ಈ ದೇಶದ ನೆಲವೆಲ್ಲಿಯದು ? ನಾನೆಲ್ಲಿಯವನು ? ಕಳಿಂಗ

ವ॥ ಎಂದಾಚಿಂತೆಯಿಂ ಕಳಿಂಗನಗರಿಯಲ್ಲಿರೆ

ನಾನಾ ದೇಶಂಗಳನ
ತ್ಯಾನಂದದಿನೆಯ್ದಿ ತಿರುಗಿದಾಯಾಸಂ ತ
ನ್ನಾನನದೊಳಱಿಯಲಾಗಿರೆ
ದೀನಂ ನಡೆತಂದನಲ್ಲಿಗಾರೆಂದಱಿಯೆಂ ೨೨

ವ॥ ಅಂತಿರ್ದ ದೇಶಾಂತರಿಯಾನಿರ್ದಲ್ಲಿಗೆಯ್ತರಲಾತನಂ ಕಂಡಿಂತೆಂದೆಂ

ನೀನೆತ್ತಣನೆಂದಾಂ ತ
ದ್ದೀನನನತ್ಯಾರ್ತದಿಂದೆ ಕೇಳಲ್ ನೀ ಕೇ
ಳಾನಂತ್ರದೇಶದಿಂ ತತ್
ಸ್ಥಾನಕ್ಕೆಯ್ತಂದೆನೆಂದನಾತಂ ನಯದಿಂ ೨೩

ವ॥ ಆದೊಡಂತ್ರದೇಶದಲ್ಲಿಯ ಹದನೇನೆಂದಾಂ ಕೇಳಲಾತನಿಂತೆಂದಂ

ಜಯಸಿಂಹಕ್ಷಿತಿನಾಥನೀಯೆಡೆಯಿನಂದೇಟ್ತಂದ ಚಂದ್ರಾಸ್ಯೆ ನಿ
ಶ್ಚಯದಿಂ ಚೆನ್ನೆ ಕಳಿಂಗಕನ್ನೆ ನಿಜದಿಂ ಕಷ್ಟಗ್ರಹಾವಿಷ್ಟೆಯಾ
ಗಿಯದಾರಂ ನೆನೆದೀಕ್ಷಿಸಳ್ ಕರೆಯೆ ಕೇಳಳ್ ನಾಡೆ ತಜ್ಜಾತಚಿಂ
ತೆಯಿನಿರ್ದಂ ತದಿಳೇಶನೀಹದನನಾಂ ಕೇಳ್ದಿಂ ಕರಂ ಸಂತತಂ ೨೪

ರಾಜಕುಮಾರಿಯೆಲ್ಲಿಯವಳು ? ಅವಳಿಂದ ನಾನು ಇಲ್ಲಿದ್ದೆನು. ಅಂತ್ರ ರಾಜನಾದ ಜಯಸಿಂಹನು ಅವಳನ್ನು ನನ್ನಿಂದ ಅಗಲಿಸಿ ತನ್ನ ದೇಶಕ್ಕೆ ಕರೆದೊಯ್ದನಲ್ಲ. ಎಲ್ಲವೂ ಆಶ್ಚರ್ಯ" ಎಂದು ಒಂದೇಸಮನೆ ದುಃಖಿಸಿದೆನು. ವ॥ ನಾನು ಹಾಗೆ ಚಿಂತಿಸುತ್ತಾ ಕಳಿಂಗ ನಗರಿಯಲ್ಲಿರಲು—೨೨. ಒಬ್ಬ ದೀನನು ನನ್ನ ಬಳಿಗೆ ಒಂದು ದಿನ ಬಂದನು. ಅವನ ಮುಖದಲ್ಲಿ ನಾನಾ ದೇಶಗಳನ್ನು ಸಂಚರಿಸಿದುದರಿಂದ ಉಂಟಾದ ಆಯಾಸವು ಎದ್ದು ಕಾಣುತ್ತಿತ್ತು. ಅವನಾರೆಂದು ನನಗೆ ತಿಳಿಯಲಿಲ್ಲ. ವ॥ ಆ ರೀತಿಯಲ್ಲಿ ದೀನನಾಗಿದ್ದ ಪರದೇಶಿಯು ನಾನಿದ್ದಲ್ಲಿಗೆ ಬಂದನು. ನಾನು ಅವನನ್ನು ನೋಡಿ—೨೩. 'ನೀನು ಯಾವ ದೇಶದವನು ?' ಎಂದು ಕೇಳಿದೆನು. ಅವನು 'ನಾನು ಅಂತ್ರದೇಶದವನು. ಅಲ್ಲಿಂದ ಇಲ್ಲಿಗೆ ಬಂದಿದ್ದೇನೆ' ಎಂದು ನಯವಾಗಿ ಹೇಳಿದನು. ವ॥ "ಹಾಗಾದರೆ ಅಂತ್ರ ದೇಶದಲ್ಲಿಯ ಸಮಾಚಾರವೇನು ?" ಎಂದು ಕೇಳಿದೆನು. ಅದಕ್ಕೆ ಅವನು ಹೇಳಿದನು. ೨೪. ಜಯಸಿಂಹರಾಜನು ಇಲ್ಲಿಂದ ಕರೆತಂದ ಕಳಿಂಗ ಕನ್ಯೆಯು ನಿಶ್ಚಯವಾಗಿ ಚಂದ್ರಮುಖಿ ತುಂಬ ಚೆಲುವೆ. ಆದರೆ ಅವಳು ಕಷ್ಟಕರವಾದ ಗ್ರಹಾವಿಷ್ಟಳಾಗಿ ಯಾರನ್ನೂ ನೆನೆದು ನೋಡುವುದಿಲ್ಲ. ಕರೆದರೆ ಮಾತನಾಡುವುದಿಲ್ಲ. ಆ ರಾಜನು ಇದರಿಂದ ಚಿಂತಾಕುಲನಾಗಿದ್ದಾನೆ. ಈ ವಿಷಯವನ್ನು

ಪೃಥ್ವೀ

ಗ್ರಹಂ ನೆಲಸಿ ಕಾಂತೆ ಕಣ್ದೆಱೆಯಳಾಗಳನ್ನಕ್ಕೆ ಕಾ
ಯ್ದಹಂ ಸತತರಾತ್ರಿಯೆಂದಱಿಯದೆಯ್ದೆ ಚಿಂತಾಕುಲಂ
ರಹಸ್ಯದೆಡೆಗೆಯ್ದೆ ತನ್ನಯ ಸಖೀಜನಂ ಕಾಯ್ದಿರ
ಲ್ಕಿಹಂ ತನಗೆ ಹೇಟ್ಟೀನಿಖಿಲವೃತ್ತವಂ ಕಾಣ್ಕೆಯಿಂ ೨೫

ವ॥ ಅಂತಾಕೆಯಿರಲ್ ಜಯಸಿಂಹಂ

ಈ ಕನ್ನಿಕೆಯಂಗದಿನಾ
ರೀಕಷ್ಟಗ್ರಹದ ಚೇಷ್ಟೆಯಂ ಸಲೆ ಯಂತ್ರಾ
ನೀಕದಿನೀಗಳೆ ಕಳೆಯಲ್
ಸಾಕೆನಿಸಿರ್ದರ್ಥತತಿಯನೀಯೆನೆ ಸತತಂ ೨೬

ವ॥ ಎಂದತಿಚಿಂತೆಯಂ ಧರಿಸಿ

ಎಲ್ಲಾದೇಶದ ಹಿರಿಯರ
ನಲ್ಲಲ್ಲಿಗೆ ಚರರನಟ್ಟಿ ಕರಸಿದನಾತಂ
ನಲ್ಲಳ್ಗಾದ ಗರಂ ತಾಂ
ನಿಲ್ಲದುದರ್ಕೆಯ್ದೆ ಚಿಂತೆಯಾಂತನಿಳೇಶಂ ೨೭

ವ॥ ಇದಾನಱಿದ ಹದನೆಂದಾದೇಶಾಂತರಿಯೆನಗಱುಹಲೆನ್ನ ಚಿತ್ತದೊಳಾನಿಂತೆಂದೆಂ

ನಾನಲ್ಲಿ ಕೇಳಿದೆನು. ೨೫. ಗ್ರಹ ಹಿಡಿದು ಕಾಂತೆಯು ಕಣ್ಣನ್ನು ತೆರೆಯುವುದೇ ಇಲ್ಲ. ಆಗ ಊಟಮಾಡಿಸುವುದಕ್ಕಾಗಿ ಹಗಲುರಾತ್ರಿ ಎಂಬ ಪರಿವೆಯೇ ಇಲ್ಲದೆ ಇದ್ದಾಳೆ. ಹೀಗಿರಲು ಒಮ್ಮೆ ಸಖೀಜನರ ಕಾವಲಿನಲ್ಲಿ ಬಂದು, ಇಲ್ಲಿನ ವಿಷಯವನ್ನು ತಿಳಿಸಿ, ನಿನಗೆ ಇದನ್ನು ಹೇಳಬೇಕೆಂದು ನನ್ನನ್ನು ಕಳಿಸಿದ್ದಾಳೆ. ವ॥ ಆಕೆಯು ಹಾಗಿರಲು ಜಯಸಿಂಹನು — ೨೬. "ಈ ಕನ್ಯೆಯ ಶರೀರದಿಂದ ಕಷ್ಟಕರವಾದ ಗ್ರಹದ ಚೇಷ್ಟೆಯನ್ನು ಯಂತ್ರಾದಿಗಳಿಂದ ಯಾರು ಹೋಗಲಾಡಿಸುತ್ತಾರೋ ಅವರಿಗೆ ಬೇಕಾದಷ್ಟು ಹಣವನ್ನು ಕೊಡುತ್ತೇನೆ" ವ॥ ಎಂದು ಘೋಷಿಸಿ ಚಿಂತಾಕ್ರಾಂತನಾಗಿ—೨೭. ಎಲ್ಲ ದೇಶಗಳ ಹಿರಿಯರನ್ನು ದೂತರನ್ನಟ್ಟಿ ಕರೆಯಿಸಿದನು. ಆದರೆ ಪ್ರಿಯಳಿಗೆ ಹಿಡಿದಿದ್ದ ಗ್ರಹವು ಹೋಗಲಿಲ್ಲ. ಇದರಿಂದ ಜಯಸಿಂಹನು ವಿಶೇಷವಾದ ಚಿಂತೆಗೊಳಗಾದನು. ವ॥ ಇದು ನನಗೆ ತಿಳಿದ ವಿಚಾರ" ಎಂದು ಆ ಪರದೇಶಿಯು ನನಗೆ ಹೇಳಿದನು. ಅದನ್ನು ಕೇಳಿ ಆಗ ನನ್ನ ಮನಸ್ಸಿನಲ್ಲಿ ಆಲೋಚಿಸಿ

ಕದಡಿಲ್ಲದೆನ್ನ ಕಾರ್ಯ
ಕ್ಕಿದಲ್ತೆ ಹದನಾಶಶಾಂಕಲೇಖೆಯನೀಯಂ
ದದಿನಿಲ್ಲಿಗೆಯ್ದಿಸಲ್ಕಿಂ
ದದಟಿಂದಾಂ ನೆನೆದೆನಧಿಕ ಧಿಷಣಸ್ಥಿತಿಯಿಂ ೨೮

ವ॥ ಅದೆಂತೆನೆ

ಹಿಂದೆ ಶಶಾಂಕಶೇಖರಧರಾತಳದಂತಿಕದಲ್ಲಿ ಶಾಖೆಯಿಂ
ಚೆಂದದಿನಿರ್ದ ಶಾಖೆಯೆಡೆಯಲ್ಲಿರಿಸಿಟ್ಟ ಜಟಾಳಿಕಂಥೆಯಂ
ತಂದತಿರಾಗದಿಂ ತಳೆದೆನಾಯತಿಯಿಂತಿರಲಂತ್ರದೇಶಕಾ
ನಂದದಿನೆಯ್ದಿ ರಾಜನಗರಕ್ಕಿರದಾಂ ಸಲೆ ಸಾರ್ದೆನಾಕ್ಷಣಂ ೨೯

ವ॥ ಅಂತಾನಂತ್ರನಗರಕ್ಕೆಯ್ದಲದರಂತಿಕದಲ್ಲಿ

ಕಳಹಂಸಯಾನದಿಂ ಶೀ
ತಳಜಳದಿಂ ಸರಸಿಜಾತಸಂತತಿಯಿಂದಂ
ತಿಳಿದಿರ್ದ ತೀರಸಹಕಾ
ರಳತಾಳಿಯಿನಲ್ಲಿ ರಂಜಿಸಿತ್ತಧಿಕಸರಂ ೩೦

ಧೀರನರೇಂದ್ರನೀತಿಸಯದಂತನಿಶಂ ಖರದಂಡರಂಜಿತಂ
ತಾರಗೆದಾಣದಂತೆ ಯತಿಸಂತತಿಯಂತಿರೆ ಹಂಸಸಂಗತಂ
ನಾರಿಯರಗ್ರಹಸ್ತಚಯದಂತೆ ನಿರಂತರಕಂಕಣಸ್ಥಿತಂ
ಸಾರಸದೇಟಿಗ್ಗಿಯಿಂ ಸರಸಿ ಕಣ್ಗೆಸೆದಿರ್ದುದಿಳಾಧಿನಾಯಕಾ ೩೧

ದೆನು. ೨೮. "ಸಂಶಯವಿಲ್ಲದೆ ನನ್ನ ಕೆಲಸಕ್ಕೆ ಇದು ಸರಿಯಾದ ಉಪಾಯ. ಆ ಶಶಾಂಕಲೇಖೆಯನ್ನು ಈ ರೀತಿಯಿಂದ ಇಲ್ಲಿಗೆ ಕರೆತರುವೆನು." ಎಂದು ನಾನು ಸೂಕ್ಷ್ಮ ಬುದ್ಧಿಯಿಂದ ಆಲೋಚಿಸಿದೆನು. ವ॥ ಅದು ಹೇಗೆಂದರೆ—೨೯. ಹಿಂದೆ ಶ್ಮಶಾನದ ಕೊಂಬೆಯಲ್ಲಿ ಸಿಕ್ಕಿಸಿಟ್ಟಿದ್ದ ಜಡೆ ಚೀವರಾದಿಗಳನ್ನು ತಂದೆನು. ಅವನ್ನು ಧರಿಸಿ ಅಂತ್ರದೇಶಕ್ಕೆ ಆನಂದದಿಂದ ಹೋದೆನು. ಅನಂತರ ಕೂಡಲೆ ರಾಜನಗರವನ್ನು ಹೊಕ್ಕೆನು. ವ॥ ಹಾಗೆ ಅಂತ್ರನಗರವನ್ನು ಸೇರಲು ಅದರ ಸಮೀಪದಲ್ಲಿ—೩೦. ಒಂದು ಶ್ರೇಷ್ಠವಾದ ಸರೋವರವು ರಂಜಿಸಿತು. ಅದರಲ್ಲಿ ಕಳಹಂಸಗಳು ಸಂಚರಿಸುತ್ತಿದ್ದುವು. ಶೀತಳವಾದ ನೀರು ತುಂಬಿತ್ತು. ಗುಂಪುಗುಂಪಾಗಿ ಕಮಲಗಳು ಅರಳಿದ್ದುವು. ದಡದಲ್ಲಿ ಸೀಮಾವಿನ ಮರಗಳ ಸಾಲು ಸೊಗಸಾಗಿ ಕಾಣುತ್ತಿದ್ದುವು. ೩೧. ಆ ಸರೋವರವು ಧೀರನಾದ ರಾಜನ ನೀತಿಯಂತೆ ಖರದಂಡದಿಂದ ರಂಜಿಸುತ್ತದೆ. ರಾಜ–ತೀಕ್ಷ್ಣದಂಡವುಳ್ಳವನು. ಸರ–ಒರಟಾದ ತಾವರೆಯ ದಂಟುಳ್ಳದ್ದು ಆಕಾಶದಂತೆ, ಯತಿಗಳ ಸಮೂಹದಂತೆ ಹಂಸಸಿಂದ ಕೂಡಿದೆ [ಕ್ರಮವಾಗಿ ಸೂರ್ಯ, ಪರಮ ಹಂಸ ಯತಿ, ಹಂಸ] ನಾರೀಯರ ಕೈತುದಿಯಂತೆ ಒತ್ತಾದ ಕಂಕಣಗಳಿಂದ ಕೂಡಿದೆ, [ಬಳೆ ಮತ್ತು ನೀರಿನ ಹನಿಗಳು] ಹೀಗೆ ಆ ಸರೋವರವು ಸಾರಸ ಪಕ್ಷಿಗಳ ಉನ್ನತಿಯಿಂದ

ವ|| ಅಂತಿರೆ

ಜಯಸಿಂಹನ ನಗರಿಗೆ ಸಾ
ರೆಯಾದ ಖರದಂಡಷಂಡದಂತಿಕದಲ್ಲಿ
ಕೆಯ್ಯನೆಸಗಿ ಯತಿಯ ಚಂದದೆ
ನಿಯತಿಯಿನಿರ್ದಂತ್ರರಾಜನುಂ ನಲಿದೆಱಗಲ್ ೩೨

ಆಗಳ್ ಕೆಲರಂ ಶಿಷ್ಯರ
ನಾಗಿಸಿಯಾರಾಧ್ಯನಾದೆನಧಿಕಧ್ಯಾನ
ಕ್ಕಾಗರನಾದಂತೆ ನಿಜಕ್ಕಾ
ಗಗನಕ್ಕಡರ್ದ ದೃಷ್ಟಿಯಿಂದೆಸೆದಿರ್ದೆಂ ೩೩

ಅರಿದೆನೆ ಧರಾತಳಕ್ಕ
ಕ್ಷರಜ್ಞನಾಯಂತ್ರ ತಂತ್ರಸಾಧನನೆಂದೆ
ಲ್ಲರ ಸನ್ನಿಧಿಯಲ್ಲಿ ನಿರಂ
ತರದಿಂದೆಟ್ಟಱಿಸೆ ಕೇಳ್ದನಾ ಜಯಸಿಂಹಂ ೩೪

ವ|| ಅಂತಾನಾಸರಸಿಯ ತಡಿಯಲ್ಲಿಕೆಯ್ಯನೆಸಗಿಯನಿಲಧಾರಣೆಯಿನಿರ್ದತೆಱನಂ ಜಯಸಿಂಹನಾಗಳ್ ಕೇಳ್ದು

ತಡೆಯದೆಯಂತ್ರದೇಶದರಸಂ ಸಲೆಯೆನ್ನೆಡೆಗೆಯ್ದಿ ತ್ರೀವದಿಂ
ದಡಿಗೆಱಗಿರ್ದಲೇ ಯತಿಯೆ ಕೇಳ್ ದಯೆಯಿಂದೆ ಶಶಾಂಕಲೇಖೆಯಂ
ಹಿಡಿದ ಗರಕ್ಕೆ ಶಾಸ್ತಿಗಳನಂಜದೆ ನೀನೆಸಗಂತದಂ ಕರಂ
ಜಡಿಯದೊಡೆನ್ನ ದೇಹಗತಿ ನಿಲ್ಲದಿದೇ ನೆಲೆಯೆಂದನಾಕ್ಷಣಂ ೩೫

ಮನೋಹರವಾಗಿದ್ದಿತು. ವ|| ಹಾಗಿರಲು—೩೨. ಜಯಸಿಂಹ ರಾಜನ ನಗರಿಗೆ ಹತ್ತಿರದಲ್ಲಿದ್ದ ಸರೋವರದ ತಾವರೆ ಹೂಗಳ ಸಮೀಪದಲ್ಲಿ ಯತಿಯ ಹಾಗೆ ವಾಸಮಾಡಿದೆನು. ಅಂತ್ರ ರಾಜನು ಬಂದು ನಲವಿಂದ ನನಗೆ ನಮಸ್ಕರಿಸಲೆಂಬ ಉದ್ದೇಶದಿಂದ ಹಾಗೆ ಮಾಡಿದೆನು. ೩೩. ಆಗ ನಾನು ಕೆಲವರನ್ನು ಶಿಷ್ಯರನ್ನಾಗಿ ಮಾಡಿಕೊಂಡು ಅವರಿಗೆ ಆರಾಧ್ಯನಾದೆನು. ಅಧಿಕವಾಗಿ ಧ್ಯಾನ ಮಾಡುವವನಂತೆ ನಿಜವಾಗಿ ಆಕಾಶದ ಕಡೆ ನೋಡುತ್ತಾ ರಂಜಿಸಿದೆನು. ೩೪. 'ಈ ಧರಾತಳದಲ್ಲಿಯೇ ಶ್ರೇಷ್ಠನಾದ ವಿದ್ವಾಂಸ. ಯಂತ್ರತಂತ್ರಗಳ ಸಾಧನೆಯಲ್ಲಿ ಚತುರ ! ಎಂದು ಎಲ್ಲರ ಮುಂದೆ ಪ್ರಕಟಿಸಿದೆನು. ಇದನ್ನು ಆ ಜಯಸಿಂಹನು ಕೇಳಿದನು. ವ|| ಹಾಗೆ ನಾನು ಆ ಸರೋವರದ ದಡದಲ್ಲಿ ವಾಸಮಾಡುತ್ತಾ ವಾಯುವನ್ನು ನಿಗ್ರಹಿಸಿ ತಪಸ್ಸು ಮಾಡುತ್ತಿದ್ದ ರೀತಿಯನ್ನು ಜಯಸಿಂಹನು ಕೇಳಿದನು. ಆಗ ೩೫. ಕೂಡಲೆ ಅಂತ್ರ ದೇಶದ ಅರಸನು ನನ್ನ ಹತ್ತಿರಕ್ಕೆ ಬಂದು ಆತುರದಿಂದ ಪಾದಗಳಿಗೆ ನಮಸ್ಕರಿಸಿದನು. 'ಯತಿಯೇ ಕೇಳು. ದಯೆಯಿಂದ ಶಶಾಂಕಲೇಖೆಗೆ ಹಿಡಿದಿರುವ ಗ್ರಹಕ್ಕೆ ತಕ್ಕ ದಂಡನೆಯನ್ನು ಮಾಡು. ಹಿಂಜರಿಯಬೇಕಾಗಿಲ್ಲ. ಅದನ್ನು ಹೆದರಿಸದಿದ್ದರೆ ನಾನು ಬದುಕಲಾರೆ. ಇದೇ ನನ್ನ ನಿಶ್ಚಯ'

ವ॥ ಅಂತೆನಲಾಗಳಾನತಿಧ್ಯಾನದಿಂ ಕಣ್ದೆಱೆಯದಿರ್ದೊಡೆ

ಕೆಲದಲ್ಲಿ ನಿಂದ ಶಿಷ್ಯರ್
ಕೆಲರೆಲೆ ಯತಿನಾಥ ಜಾನದಿಂದೆ ನಿತಾಂತಂ
ನೆಲಸಿರದೆ ದಯೆಯಿನೀಕ್ಷಿಸಿ
ಸಲಹಂತ್ರಧರೇಶನಂ ಧರಾಧರಧೈರ್ಯಾ ೩೬

ಕಂಗಳನರೆದೆಱೆದೀಕ್ಷಿಸಿ
ಯಂಗಜಹರರಕ್ಷೆ ನಿನಗೆ ನೆಲಸಲಿ ಘನದೇ
ಶಂಗಳ್ ನಿನಗಾಗಲಿ ನಿಜ
ಸಂಗತಜಯಸಿದ್ಧಿಯಕ್ಕೆ ಕೇಳ್ ಜಯಸಿಂಹಾ ೩೭

ವ॥ ಎಂದಾತನಂ ಹರಸಿಯನಂತರಂ ಶಶಾಂಕಲೇಖೆಗಾದ ಗ್ರಹಸಂಹಾರ ಸ್ಥಿತಿಯ ನಿಂತೆಂದೆಂ

ಧರೆಯಧಿನಾಥ ಕೇಳ್ ನಿನಗೆ ರಕ್ಷೆಯನಂತಿಕದಲ್ಲಿ ಕಟ್ಟಿ ತ
ಳ್ತಿರೆ ನಿಜಕರ್ಣದಲ್ಲಿ ಕಿಱಿದಕ್ಕರದಾಯತಿಯಿಂ ತೆರಳ್ದಲೀ
ಸರಸಿಯ ನೀಳ್ದಗಾಧಜಲದಲ್ಲಿರಲನ್ಯಶರೀರಿಯಾಗಿ ನೀಂ
ತರಳೆಯನಂಟಲಾಕೆಯ ಗರಂ ಸಲೆ ನಿಲ್ಲದಿದಲ್ತೆ ಸಾಧನಂ ೩೮

ಎಂದು ಹೇಳಿದನು. ವ॥ ಅವನು ಹಾಗೆ ಹೇಳಿದರೂ ನಾನು ಅತಿ ಧ್ಯಾನದಿಂದ ಕಣ್ ತೆರೆಯಲಿಲ್ಲ. ಆಗ—೩೬. ಪಕ್ಕದಲ್ಲಿದ್ದ ಶಿಷ್ಯರಲ್ಲಿ ಕೆಲವುರು 'ಪರ್ವತದಂತೆ ಧೈರ್ಯಶಾಲಿ ಯಾದ ಯತಿಪತಿಯೇ ! ಬಹು ಸಮಯ ಧ್ಯಾನದಲ್ಲಿ ಆಸಕ್ತನಾಗಿರದೆ ದಯೆಯಿಂದ ನೋಡಿ ಈ ಅಂತ್ರ ದೇಶದ ರಾಜನನ್ನು ಸಲಹು' ಎಂದು ಹೇಳಿದರು. ೩೭. ಕಣ್ಣು ಗಳನ್ನು ಅರ್ಧತೆರೆದು ನೋಡಿದೆನು. 'ನಿನಗೆ ಶಿವನ ರಕ್ಷೆ ನೆಲಸಲಿ ! ವಿಸ್ತಾರವಾದ ದೇಶ ಗಳು ನಿನಗೆ ಸಿಕ್ಕಲಿ ! ನಿನಗೆ ಯಾವಾಗಲೂ ಜಯವು ಲಭಿಸಲಿ ! ಜಯಸಿಂಹ ಕೇಳು' ವ॥ ಎಂದು ಆತನನ್ನು ಹರಸಿದೆನು. ಅನಂತರ ಶಶಾಂಕಲೇಖೆಗೆ ಹಿಡಿದ ಗ್ರಹವನ್ನು ಪರಿಹರಿಸುವ ರೀತಿಯನ್ನು ಹೀಗೆ ಹೇಳಿದೆನು. ೩೮. "ಧರಾನಾಥನೆ, ಕೇಳು. ನಿನಗೆ ರಕ್ಷೆಯನ್ನು ಕಟ್ಟುತ್ತೇನೆ. ಈ ಸರೋವರದ ಹತ್ತಿರದಲ್ಲಿಯೇ ನಿನ್ನ ಕಿವಿಯಲ್ಲಿ ಮಂತ್ರ ವೊಂದನ್ನುಸುರುತ್ತೇನೆ. ಇವುಗಳ ಬಲದಿಂದ ಈ ಸರೋವರದ ವಿಶಾಲವಾದ ಆಳವಾದ ನೀರಿನಲ್ಲಿ ಮುಳುಗಿ ಬೇರೆ ಶರೀರವನ್ನು ಪಡೆದು ನೀನು ಆ ಬಾಲೆಯನ್ನು ಮುಟ್ಟಿದರೆ,

ವ॥ ಎಂದಾತನನಾ ಸರಸಿಯ ಜಲಾಂತರದಲ್ಲಿರಲಾಜ್ಞೆಗೆಯ್ಯಲಾತನದನಂಗೀಕರಿಸಿ ಆದೊಡೆ ರಕ್ಷೆಯ ಸಿದ್ಧಾಕ್ಷರಂಗಳಂ ನೀನೆನಗೆ ದಯೆಗೆಯ್ಯೆನಲಾನಿಂತೆಂದೆಂ

ಕಡೆಗಣಿಸಿ ನಾಲ್ಕೆರಟ್ಟಿನ
ದೆಡೆಯಂ ಸೈರಿಸಿಯನಂತರಂ ನೀನಾನಿ
ರ್ದೆಡೆಗೆಯ್ತರೆ ತದ್ರಕ್ಷೆಯ
ನಡಿಯಿಡದಿತ್ತಲ್ಲದಿಲ್ಲಿ ಜಾನಂಗೆಯ್ಯೆಂ ೩೯

ವ॥ ಎಂದೊಡಂತೆಗೆಯ್ವೆನೆಂದಾತಂ ನಿಜಾಲಯಕ್ಕೆಯ್ದಿದಂ ಇತ್ತಲಾಂ

ಸಿಕ್ಕಿದನರಸಂ ಸತಿಯಂ
ಚಕ್ಕನೆ ತದ್ಧರೆಯನೀಗಳಾಳಲ್ಕಾನೇ
ತಕ್ಕನೆನಿಸಲ್ಕೆ ಸಂದೆಗ
ದಕ್ಕಜದೆಡೆಯಿಲ್ಲ ನಿಶ್ಚಯಂ ತಾನಲ್ತೇ ೪೦

ವ॥ ಎಂದನಂತರಂ

ಸರಸಿಯ ನೀಳ್ದಗಾಧಜಲದಲ್ಲಿ ನಿಜೇಚ್ಛೆಯಿನಗ್ರಶಾಲೆಯಂ
ಸರಸದಿನಾಗಳಾನೆಸಗಿಯಿಟ್ಟಗೆಯಿಂ ನೆರೆ ಕಟ್ಟಿ ಚಿಕ್ಕ ಛಿ
ದ್ರರಚನೆಯಂ ತೆರಳ್ಚಿಯಗಲಂ ನೆಱೆದಿರ್ದಱೆಗಲ್ಲನಲ್ಲಿ ತಂ
ದಿರಿಸಿಯನಂತರಂ ಸರಸಿಯಿಂ ತಳರ್ದೆಂ ತಡಿಗಂಜದಟ್ಟಿಯಿಂ ೪೧

ಅವಳನ್ನು ಹಿಡಿದಿರುವ ಗ್ರಹವು ಬಿಟ್ಟು ಹೋಗುತ್ತದೆ. ಅದಕ್ಕೆ ಇದೇ ಸಾಧನ." ವ॥ ಎಂದು ಹೇಳಿ ಆತನಿಗೆ ನೀರಿನೊಳಗೆ ನಿಂಬೇಕೆಂದು ಆಜ್ಞೆ ಮಾಡಿದೆನು. ಅವನು ಅದಕ್ಕೆ ಒಪ್ಪಿ 'ರಕ್ಷೆಯಾದ ಸಿದ್ಧಾಕ್ಷರಗಳನ್ನು ನೀನು ನನಗೆ ದಯೆಯಿಟ್ಟು ಉಪದೇಶಿಸು' ಎಂದು ಕೇಳಿದನು. ಅದಕ್ಕೆ ನಾನು—೩೯. ಕೆಲವು ದಿನಗಳ ಕಾಲ ಅವನ ಮಾತಿಗೆ ಒಪ್ಪಲಿಲ್ಲ. ಅನಂತರ 'ನೀನು ನಾನಿರುವ ಜಾಗಕ್ಕೆ ಬಾ. ಆ ರಕ್ಷೆಯನ್ನು ನಿನಗೆ ಕೊಟ್ಟಲ್ಲದೆ ನಾನು ಧ್ಯಾನಮಗ್ನನಾಗುವುದಿಲ್ಲ" ವ॥ ಎಂದು ಹೇಳಿದೆನು. 'ಹಾಗೆಯೇ ಮಾಡುವೆನು' ಎಂದು ಹೇಳಿ ಅವನು ತನ್ನರಮನೆಗೆ ಹೋದನು. ಇತ್ತ ನಾನು ೪೦. "ರಾಜನು ಕೈಗೆ ಸಿಕ್ಕಿದನು. ಸತಿಯನ್ನೂ ಅವನ ಭೂಮಿಯನ್ನೂ ಆಳಲು ನಾನೇ ತಕ್ಕವನು. ಇದರಲ್ಲಿ ಸಂದೇಹವಾಗಲೀ ಆಶ್ಚರ್ಯವಾಗಲೀ ಇಲ್ಲ. ಇದು ನಿಶ್ಚಯ" ವ॥ ಎಂದುಕೊಂಡೆನು. ಅನಂತರ—೪೧. ಸರೋವರದ ವಿಶಾಲವಾದ ಆಳವಾದ ನೀರಿನಲ್ಲಿ ನನಗೆ ತೋರಿದಂತೆ ಒಂದು ಒಳ್ಳೆಯ ಮನೆಯನ್ನು ಇಟ್ಟಿಗೆಗಳಿಂದ ಚೆನ್ನಾಗಿ ಕಟ್ಟಿ ಅದಕ್ಕೊಂದು ಸಣ್ಣ ರಂಧ್ರವನ್ನು ಮಾಡಿದೆ. ಅನಂತರ ಅದರ ಅಗಲಕ್ಕೆ ಸರಿಯಾದ ಒಂದು ಬಂಡೆಗಲ್ಲನ್ನು ತಂದಿರಿಸಿದೆನು. ಆಮೇಲೆ ಆ ಸರೋವರದಿಂದ ಭಯಪಡದೆ

ವ॥ ಅಂತಾನೀರಲ್ಲಿ ಶಾಲೆಯನೆಸಗಿ ತಡಿಗೆಯ್ದಿ ನಾಲ್ಕೆರೞ್ದಿನಂ ಕೞಿಯೆ

ಉಪೇಂದ್ರವಜ್ರೆ

ಕಳಿಂಗಕನ್ಯಾಗ್ರಹದೇಹದಾಹ
ಕ್ಕಿಳಾಧಿನಾಥಂ ಸರಸೀತಟಕ್ಕಂ
ಸಲೀಲೆಯಿಂದೆಯ್ತರಲಾತನಂತ
ರ್ಜಳಾಶಯಕ್ಕಾನಿೞಿಸಲ್ ನೆಗೞ್ದಂ ೪೨

ವ॥ ಅಂತಾತಂಗೆ

ರಕ್ಷೆಗಳಂ ಕಟ್ಟಿ ಲಸ
ದ್ದೀಕ್ಷೆಯನಾನೆಸಗಿ ಸರಸಿಯಲ್ಲಿ ನಿತಾಂತಂ
ರಕ್ಷೆಯನಿರ್ಕೆಲದಿಂದಾ
ನಕ್ಷಯನಿಧಿಗೆಯ್ದಿ ತಂತ್ರಿಸಿದೆನತಿನಯದಿಂ ೪೩

ವ॥ ಅಂತಾನಾತಂಗೆ ರಕ್ಷೆಯಂ ಕಟ್ಟಿ

ಎಲೆ ಜಯಸಿಂಹನೆ ಸರಸಿಯ
ಕೆಲನಂ ನಾಲ್ದೆಸೆಯನನ್ಯರಿಲ್ಲದ ತೆಱದಿಂ
ತಿಳಿದಾಗಳ್ ಜೇಗಟೆಯಂ
ಸಲೆ ತಾಟಿಸಲಾಗಳಿೞಿ ಜಲಕ್ಕತಿಶಯದಿಂ ೪೪

ತಳತಂತ್ರ ಸಂತತಿಯನಾ
ಜಳಜಾಕರದೆಲ್ಲ ದೆಸೆಗಳಲ್ಲಿರಿಸಿ ಜಲ
ಕ್ಕಿೞಿದಾಗಳ್ ಜಾನದೊಳಿರೆ
ಲಳನೆಯ ಗರದೇೞ್ಗೆ ನಿಲ್ವುದಿದು ಸಿದ್ಧಾಂತಂ ೪೫

ದಡಕ್ಕೆ ಬಂದೆನು. ವ॥ ಹಾಗೆ ಆ ನೀರಿನಲ್ಲಿ ಮನೆಯನ್ನು ಕಟ್ಟಿ ದಡಕ್ಕೆ ಬಂದು ನಾಲ್ಕೆರಡು ದಿನ ಕಳೆಯಲು ಕಳಿಂಗಕುಮಾರಿಯ ಗ್ರಹಹಿಡಿದ ಶರೀರದ ತಾಪಕ್ಕೆ ಹೆದರಿ ಜಯಸಿಂಹನು ಸರೋವರದ ದಡಕ್ಕೆ ಬಂದನು. ಅವನನ್ನು ಜಲಾಂತರ್ಗೃಹಕ್ಕೆ ಇಳಿಸಲು ಯತ್ನಿಸಿದೆನು. ವ॥ ಹಾಗೆ ಅದನಿಗೆ—೪೩. ರಕ್ಷೆಗಳನ್ನು ಕಟ್ಟಿ ದೀಕ್ಷೆಯನ್ನು ಕೊಟ್ಟೆನು. ಸರೋವರದಲ್ಲಿಯೂ ಎರಡು ಕಡೆಗೂ ರಕ್ಷೆಯನ್ನು ಕಟ್ಟಿದೆನು. ಅನಂತರ ನಾನು ಅಕ್ಷಯ ನಿಧಿಗೆ ಹೋಗಿ (?) ಉಪಾಯವನ್ನು ಮಾಡಿದೆನು. (ಅಂತರ್ಗೃಹ ?) ವ॥ ಹಾಗೆ ನಾನು ಆತನಿಗೆ ರಕ್ಷೆಯನ್ನು ಕಟ್ಟಿ. ೪೪. "ಎಲೆ ಜಯಸಿಂಹ, ಸರೋವರದ ಪಕ್ಕದಲ್ಲಿ ನಾಲ್ಕು ಕಡೆಗಳಲ್ಲಿಯೂ ಯಾರೂ ಇಲ್ಲದಾಗ ಜಾಗಟೆಯ ಶಬ್ದವನ್ನು ಕೇಳಿದೊಡನೆ ನೀರಿಗಿಳಿ. ೪೫. ಸೈನಿಕರನ್ನು ಆ ಸರೋವರದ ಎಲ್ಲ ದಿಕ್ಕುಗಳಲ್ಲಿಯೂ ನಿಲ್ಲಿಸಿ ನೀರಿಗಿಳಿದು ಧ್ಯಾನ ಮಾಡುತ್ತಿದ್ದರೆ ಆ ಲಲನೆಯ ಗ್ರಹ

ನಿನಗಲ್ಲದೆ ದೀಕ್ಷೆಯನ
ನ್ಯನರರ್ಗಾನೀಯೆನದಱಿನನ್ಯಶರೀರಂ
ನಿನಗಾಗಿ ಕಡೆಗೆ ನಿನ್ನಂ
ಗನಯ ಗರಂ ನಿಲ್ವುದೀಗಳೀಕ್ಷಿಸಿಯಲ್ತೇ ೪೬

ಈತೆಱನಂ ನಾಳೆಸಗಿಂ
ದೀ ತಡಿಯಿಂದಿಚ್ಛೆಯಾದ ತಾಣಕ್ಕಾನಿಂ
ದೇತಿರುಗಿ ತೆರಳಿ ನಾನಾ
ಖ್ಯಾತಿಯನಱಸಲ್ಕೆ ಹದನಿದಂ ಕೇಳ್ ನಯದಿಂ ೪೭

ವ|| ಎಂದಾಗಳಾನಾತನಿದಿರಿಂ ತೆರಳ್ದಂತೆಗೆಯ್ದಾ ರಾತ್ರಿಯಲ್ಲಿಗೆ ತಿರುಗಿಯಾಸರಸಿಯಡಿಯಲ್ಲಿಯಾನೆಸಗಿದ ಶಾಲೆಗೆ

ಆನಾರಱಿಯದ ತೆಱದಿಂ
ಸಾನಂದದಿನೆಯ್ದಿ ರಾತ್ರಿಯಲ್ಲಿ ನಯಂಗಂ
ಡಾನಳಿನಾಕರಜಲದೆಡೆ
ಗಾನೆಸಗಿದ ಶಾಲೆಯಲ್ಲಿ ನೆಲಸಿದೆನರಸಾ ೪೮

ವ|| ಅಂತಾನಲ್ಲಿಯಡಂಗಿರೆ,

ಜಲಜಾತಕರದೆಣ್ದೆಸೆಯಂ
ತಳತಂತ್ರದಿನೆಯ್ದಿ ರಕ್ಷೆಗೆಯ್ದರಸಂ ತ
ಜ್ಜಳದಂತಕ್ಕತಿಶಯದಿಂ
ಗಳಿಲನೆ ಜೇಗಟೆಯ ದನಿಯನೆಸಗಲ್ಕಾಗಳ್ ೪೯

ಬಾಧೆಯು ನಿಲ್ಲುವುದು. ಇದು ನಿಜ. ೪೬. ನಿನಗಲ್ಲದೆ ಈ ದೀಕ್ಷೆಯನ್ನು ಬೇರೆಯವರಿಗೆ ನಾನು ಕೊಡುವುದಿಲ್ಲ. ಇದರಿಂದ ನಿನಗೆ ಇನ್ನೊಂದು ಶರೀರವು ಬರುವುದು. ನಿನ್ನ ಅಂಗನೆಗೆ ಹಿಡಿದಿರುವ ಗ್ರಹವೂ ಹೋಗುವುದು. ಈಗ ನೀನೇ ಅದನ್ನು ನೋಡುವಿಯಲ್ಲವೇ ? ೪೭. ನಾಳೆ ನೀನು ಈ ರೀತಿಯಲ್ಲಿ ಮಾಡು. ನಾನಿಂದು ಇಷ್ಟ ಬಂದ ಕಡೆಗೆ ಈ ಸರೋವರದ ದಡದಿಂದ ತಿರುಗಿ ಹೋಗುತ್ತೇನೆ. ಇನ್ನೂ ಕೆಲವು ಸಿದ್ಧಿಗಳನ್ನು ಸಾಧಿಸಬೇಕಾಗಿದೆ. ಈ ವಿಷಯವನ್ನು ನಿಧಾನವಾಗಿ ಕೇಳು.” ವ|| ಎಂದು ಹೇಳಿ ಆತನ ಎದುರಿನಲ್ಲಿ ಅಲ್ಲಿಂದ ಹೊರಟಂತೆ ಮಾಡಿದೆನು. ರಾತ್ರಿ ಮತ್ತೆ ಅಲ್ಲಿಗೆ ಹಿಂದಿರುಗಿ ಆ ಸರೋವರದ ತಳದಲ್ಲಿ ನಾನು ಕಟ್ಟಿದ್ದ ಮನೆಗೆ—೪೮. ಯಾರೂ ತಿಳಿಯದಂತೆ ಸಂತೋಷದಿಂದ ಬಂದು, ರಾಜವಾಹನನೇ, ನಾನು ಅಡಗಿ ಕುಳಿತೆನು. ವ|| ಹಾಗೆ ನಾನು ಅಲ್ಲಿ ಅಡಗಿರಲು—೪೯. ಜಯಸಿಂಹನು ಆ ಸರೋವರದ ಎಂಟು ದಿಕ್ಕುಗಳಲ್ಲಿಯೂ ಸೇನೆಯ ಕಾವಲು ಹಾಕಿದನು. ಜಾಗಟೆಯ ದನಿಯನ್ನು ಮಾಡಿ ಆ ಸರೋವರದ

ವ॥ ಅಂತಲ್ಲಿರ್ದ ಜೇಗಟೆಯ ದನಿಯುನೆಸಗಲಾನಿರ್ದ ಶಾಲೆಯ ಛಿದ್ರದಿಂದಾದನಿಯುಂ ಕೇಳ್ದು

ಜಯಸಿಂಹಕ್ಷಿತಿನಾಥನಿರ್ದ ಜಲದತ್ತಲ್ ಶೀಘ್ರದಿಂದಾಗಳಾ
ಲಯದಿಂದಾಂನಿಜಕಾರ್ಯ ಸಿದ್ಧಿತರದಿಂದೀಸಾಡಿ ಕಂಡಾಗ ನಿ
ರ್ದಯದಿಂದಾತನನೆನ್ನ ಶಾಲೆಗೆಟಿ³ತಂದಲ್ಲಿರ್ದ ಕಲ್ಲಿಂ ಕರಂ
ರಯದಿಂದಿಕ್ಕಿದೆನಳ್ಳಿಯಟಿ³ಸದೆದೆಂ ತದ್ಬಾಹುಜನಂ ಶೀವ್ರದಿಂ ೫೦

ದಾನಗಜಂ ಲಸತ್ಸರಸಿಗಾರ್ತಿಟಿ³ದಲ್ಲಿಯ ನೀರಜಂಗಳಂ
ತಾನೆ ಕರಾಗ್ರದಿಂ ಕದಡಿ ಕಿಟ್ತಿಡಿಯಿಕ್ಕಿದೊಡಂದದಿಂ ನೆಗ
ಟ್ದಾನರನಾಥನೇಟಿ³ಗೆಯೆನಿಸಿರ್ದ ಶಿರಸ್ಸರಸೀಜದಿಂಡೆಯುಂ
ಜಾನಿಸದಾಗಳಾಂ ಜಲದ ಜಕ್ಕಿಯರ್ಗೇಜಿ³ಸಿದೆಂ ನಿರಂತರಂ ೫೧

ಇಡಿದಿಡಿದಜಿ³ಗಲ್ಲಿಂದಾ
ಜಡನಂ ಗಟ್ಟಿಸಿದೆನಾಗಳಿಟ್ಟಿಗೆಯಿಂದಾ
ಯೆಡೆಯುಂ ಕಟ್ಟಿದೆನಾತನ
ಕಡೆ ತೀರಿತನಜಿ³ದೆನಾಕ್ಷಣಂ ನರನಾಥ ೫೨

ವ॥ ಅಂತದನಜಿ³ದನಂತರಂ

ಜಡೆಯುಂ ಕಂಥೆಯುನಾಸರಸ್ಸಲಿಲದಲ್ಲೀಡಾಡಿ ಕೇಶಾಳಿಯುಂ
ಕಡೆಗಂಟಿಕ್ಕಿ ಧರೇಶನಾಂತ ಸಿಚಯಾಲಂಕಾರ ರತ್ನಾದಿಯುಂ
ಗಡಣಂ ರಂಜಿಸೆ ತಾಳ್ದಿ ಸಂಶಯದ ಚಿಹ್ನಂ ಚೇಷ್ಟೆಯೊಂದಿಲ್ಲದಾಂ
ತಡಿಗೇಟ್ತಿಂದೆಸನೇಕರೀಕ್ಷಿಸಿ ಲಸಚ್ಚಿತ್ರಂ ಜಗಕ್ಕೆಂದೆನಲ್ ೫೩

ನೀರಿನ ಒಳಕ್ಕೆ ಹೋದೆನು. ವ॥ ಜಾಗಟೆಯ ಧ್ವನಿಯನ್ನು ನಾನಿದ್ದ ಮನೆಯ ರಂಧ್ರದಿಂದ ಕೇಳಿ ೫೦. ಬೇಗ ಕಾರ್ಯಸಿದ್ಧಿಗಾಗಿ ನಾನು ಜಯಸಿಂಹ ರಾಜನಿದ್ದ ಕಡೆಗೆ ಈಸಿಕೊಂಡು ಹೋದೆನು. ಅವನನ್ನು ನನ್ನ ಶಾಲೆಗೆ ದಯೆಯಿಲ್ಲದೆ ಹಿಡಿದು ಎಳೆದು ತಂದೆನು. ಅಲ್ಲಿದ್ದ ಕಲ್ಲಿನಿಂದ ಅವನನ್ನು ಜಜ್ಜಿದೆನು. ಶೀಘ್ರವಾಗಿ ಆ ರಾಜನ ಪಕ್ಕೆಗಳನ್ನು ಮುರಿದೆನು. ೫೧. ಮದಿಸಿದ ಆನೆಯು ಸರೋವರದಲ್ಲಿಳಿದು ಅಲ್ಲಿರುವ ಕಮಲಗಳನ್ನೆಲ್ಲ ಸೊಂಡಲಿನಿಂದ ಕಲಕಿ ಕಿತ್ತು ಪಾದಗಳಿಂದ ತುಳಿದು ತೀಡುತ್ತವೆ. ಅದರ ಹಾಗೆ ನಾನು ಆ ರಾಜನ ಶ್ರೇಷ್ಠವಾದ ತಲೆಯೆಂಬ ಕಮಲದ ದಂಡೆಯನ್ನು ಯೋಚಿಸದೆ ಕಿತ್ತು ತುಳಿದು ಜಲಯಕ್ಷಿ ದೇವತೆಗೆ ಬಲಿ ಹಾಕಿದೆನು. ೫೨. ಆ ಜಡನಾದ ಜಯಸಿಂಹನನ್ನು ಬಂಡೆಗಲ್ಲಿಂದ ಕುಟ್ಟಿ ಕುಟ್ಟಿ ಗಟ್ಟಿಸಿದೆನು. ಅನಂತರ ಇಟ್ಟಿಗೆಯಿಂದ ಆ ಸ್ಥಳವನ್ನು ಕಟ್ಟಿ ಮುಚ್ಚಿದೆನು. ರಾಜವಾಹನನೇ, ! ಆತನ ಜೀವಹೋಯಿತೆಂದು ಆಗಲೆ ತಿಳಿದುಕೊಂಡೆನು. ವ॥ ಹಾಗೆ ಅದನ್ನರಿತ ಮೇಲೆ— ೫೩. ನಾನು ನನ್ನ ಜಡೆಯನ್ನೂ ಚಿಂದಿಯನ್ನೂ ಕೊಳದ ನೀರಿನಲ್ಲಿ ತೇಲಿಬಿಟ್ಟೆನು. ತಲೆಗೂದಲನ್ನು ಬಾಚಿ ಕಡೆಗಂಟುಹಾಕಿದೆನು. ಜಯಸಿಂಹನ ವಸ್ತ್ರಗಳನ್ನು ರತ್ನಾಲಂಕಾರ

ಇದೆ ಚಿತ್ರಂ ಜಯಸಿಂಹನೀಸರಸಿಯಲ್ಲಿದಿರ್ಗಳಿಂ ಕೇಳಲಿ
ಕ್ಕಿದಲಂಕಾರಚಯಂ ಲಸತ್ಸಿಚಯ ಸಂಘಂ ದೇಹದಿಂದಂ ಕಟಿ
ಲ್ಚದೆ ತಾನನ್ಯ ಶರೀರಿಯಾದನಿದೆ ಯಂತ್ರಂ ತಂತ್ರಸಂಸಿದ್ಧಿಯೆಂ
ದದನೆಲ್ಲರ್ ಸಲೆ ಕೀರ್ತಿಸಲ್ಕೆ ನಡೆದೆಂ ರಾಜಾಲಯಕ್ಕಾಕ್ಷಣಂ ೫೪

ವ॥ ಅಂತಾಂ ನಡೆಯೆ

ಎನಗಿದಿರಲ್ಲಿ ರಂಜಿಸಿತಳಂಕೆಯ ದೇಹಳಿಯಿಂ ನೆಗಟ್ದ ಕಾಂ
ಚನಕಲಶಂಗಳಿಂ ಸಕಲರತ್ನನಿಘಟ್ಟಿತ ಚಂದ್ರಶಾಲೆಯಿಂ
ಘನತರ ನಿಸ್ತುಳಸ್ಥಗಿತಜಾಳಕದಿಂ ಶಶಿಕಾಂತ ಖಂಡಸಂ
ಜನಿತಧರಾರ್ಚಿಯಿಂ ನಿಖಿಳಚಿತ್ರದಿನಾ ನರನಾಥನಾಲಯಂ ೫೫

ವ॥ ಅಂತಾ ರಾಜಶಾಲೆಯನೀಕ್ಷಿಸಿ ನಡೆಯಲಿದಿರಲ್ಲಿ

ನಯನಾನಂದಕರಂ ನಿರಂತರಲಸದ್ರತ್ನಾರ್ಚಿಕಾಂತಂ ಕಥಾ
ಶ್ರಯಚಿತ್ರಂ ಜಯಘಂಟಿಕಾಂಚಿತದಿಶಂ ಸಿಂಹಾಸನಾಧಿಷ್ಠಿತಂ
ಜಯಸಿಂಹಕ್ಷಿತಿನಾಥನಾದರಿಸಿದತ್ಯುನ್ನತಾಸ್ಥಾನಶಾ
ಲೆಯನಾನೀಕ್ಷಿಸಿಯಾಕ್ಷಣಂ ನೆಲಸಿದೆಂ ಸಂದೇಹಿಗಳ್ ಕಣ್ಣಡಲ್ ೫೬

ಗಳನ್ನು ಮೈಯಲ್ಲಿ ಧರಿಸಿದೆನು. ಸಂಶಯದ ಚಿಹ್ನೆಯೂ ತೋರದಂತೆ ನಾನು ನೀರಿನಿಂದ ಎದ್ದು ದಡಕ್ಕೆಬಂದೆನು. ಅನೇಕರು ನನ್ನನ್ನು ನೋಡಿ 'ಇದು ಜಗತ್ತಿಗೇ ಆಶ್ಚರ್ಯ' ಎಂದು ಹೇಳಿದರು. ೫೪. "ಇದು ಆಶ್ಚರ್ಯ. ಜಯಸಿಂಹನು ಈ ಸರೋವರದ ನೀರಿನಲ್ಲಿ ಮುಳುಗಿ ಧರಿಸಿದ್ದ ವಸ್ತ್ರಾಲಂಕಾರಗಳನ್ನು ಕಳೆದುಕೊಳ್ಳದೆ ಬೇರೆ ಶರೀರವನ್ನು ಪಡೆದಿದ್ದಾನೆ. ಇದಲ್ಲವೆ ಯಂತ್ರ ತಂತ್ರಗಳ ಸಿದ್ಧಿ ? ಆಶ್ಚರ್ಯ !" ಎಂದು ಎಲ್ಲರೂ ಹೊಗಳುತ್ತಿರಲು ನಾನು ಕೂಡಲೆ ಅರಮನೆಗೆ ಹೋದೆನು. ವ॥ ಹಾಗೆ ನಾನು ನಡೆಯಲು–೫೫. ಎದುರಿನಲ್ಲಿ ರಾಜನ ಅರಮನೆಯು ಪ್ರಕಾಶಿಸಿತು. ಅದರ ಹೊಸ್ತಿಲು ಪ್ರಕಾಶಮಾನವಾಗಿದ್ದಿತು (?) ಚಿನ್ನದ ಕಲಶಗಳು ಹೊಳೆಯುತ್ತಿದ್ದುವು. ವಿಧವಿಧವಾದ ರತ್ನಗಳು ಇದ್ದ ಚಂದ್ರಶಾಲೆಯು ಸುಂದರವಾಗಿದ್ದಿತು. ಕಿಟಕಿಗಳಿಗೆ ಶ್ರೇಷ್ಠವಾದ ಒತ್ತಾಗಿ ಪೋಣಿಸಿದ ಮುತ್ತುಗಳ ಹಾರಗಳನ್ನೂ ಮುಚ್ಚಲಾಗಿತ್ತು. ನೆಲಕ್ಕೆ ಚಂದ್ರಕಾಂತ ಶಿಲೆಯನ್ನು ಹಾಸಿದ್ದಿತು. ಆಶ್ಚರ್ಯಕರವಾದ ರೀತಿಯಲ್ಲಿ ಅದು ಸುಂದರವಾಗಿದ್ದಿತು. ವ॥ ಹಾಗೆ ಆ ಅರಮನೆಯನ್ನು ನೋಡಿ ಮುಂದೆ ನಡೆಯಲು ಇದಿರಲ್ಲಿ—೫೬. ಜಯಸಿಂಹರಾಜನು ಆದರಿಸಿದ್ದ ಅತ್ಯುನ್ನತವಾದ ಆಸ್ಥಾನ ಮಂಟಪವನ್ನು ನೋಡಿ ಸಂದೇಹಿಗಳಿಗೆ ಸಂದೇಹಬರದಂತೆ ಆಕ್ಷಣ ಅಲ್ಲಿ ಕುಳಿತೆನು. ಅದು ನಯನಗಳಿಗೆ ಆನಂದಕರವಾಗಿದ್ದಿತು. ಒತ್ತಾಗಿ ಹೊಳೆಯುವ ರತ್ನಗಳ ಕಿರಣಗಳಿಂದ ಸುಂದರವಾಗಿ ಕಾಣಿಸುತ್ತಿತ್ತು. ಕಥೆಗಳನ್ನು ಚಿತ್ರರೂಪದಲ್ಲಿ ಬರೆದಿತ್ತು. ಜಯಸೂಚಕವಾದ ಘಂಟೆಗಳನ್ನು ಎಲ್ಲಾಕಡೆಗೂ ಕಟ್ಟಿದ್ದಿತು. ನಡುವೆ ಸಿಂಹಾಸನವನ್ನು ಹಾಕಿದ್ದರು.

ವ॥ ಅದಲ್ಲದೆ ಆಸ್ಥಾನಗೇಹಂ ಚಿತ್ರಾಂಕಿತದಿಂದಾಕಾಶದೇಟಿಗ್ಗಿಯಂ ಚಂದ್ರಶಾಲಾ ರಂಜಿತದಿಂ ಚಂದ್ರಿಕಾರಾತ್ರಿಯಂ ಸಿಂಹಾಸನಾಸ್ಥಾನದಿಂದರಣ್ಯ ರಾಜಿಯಂ ಜಾಳಕಸಂತಾನದಿಂದಲರ್ಗಳ ಲತೆಯಂ ಘನಸಾರ ಖಂಡಿತದಿಂ ಕಾರ್ಗಾಲದಗ್ಗಳಿಕೆಯಂ ರತ್ನರಜಸ್ಸಲ್ಲೀಢದಿಂ ಕನಕಾದ್ರಿಯಂ ಕಾಷ್ಠಾದಿಜಾತಕನ್ಯಾಕಾರದಿಂ ದಿಶಾರಾಶಿಪಙ್ಕ್ತಿಯಂ ಗೆಲಲ್ಕೆ ಸಾರ್ದಿರ್ದಾಸ್ಥಾನದೆಡೆಗೆ

ನರನಾಥಂಗೆ ಕಳಿಂಗಕನ್ನಿಕೆಯ ದೇಹಗ್ರಪ್ತಕಷ್ಟ ಗ್ರಹ
ಕ್ಕಿರದೀಗಳ್ ಘನಶಾಸ್ತ್ರಿಯಂ ನೆಗಟಲೆಂದಾಯ್ತನ್ಯದೇಹಂ ಗಡಾ
ದರದಿಂದಾನದನೀಕ್ಷಿಸಲ್ ಮಱೆದೆನೆಂದೆಯ್ತಂದಳಾ ಚಂದ್ರಲೇ
ಖೆ ರಣತ್ಕಂಕಣಕಿಂಕಿಣೀಹಸನದಿಂದಾಸ್ಥಾನಕಂದಟಿಸ್ತಿಯಿಂ ೫೭

ವ॥ ಅಂತಾಶಶಾಂಕಲೇಖೆಯ ಕೆಳದಿ ಚಂದ್ರಲೇಖೆಯಾಸ್ಥಾನದಲ್ಲಿರ್ದೆನ್ನನೀಕ್ಷಿಸಿ

ಈಯರಸಂ ಕಳಿಂಗಸತಿಯಂ ದಯೆಯಿಂ ಹರನಿಕ್ಕಿದಾಣದಿಂ
ದಾಯತಿನಾಥನಂ ಹತಿಸಿ ತಂದತಿಸಾಹಸಿಯಂತಿರಿರ್ಪನೆಂ
ದಾಯತನೇತ್ರೆಯಿಕ್ಷಿಸಿದ ರೀತಿ ತದಾಸ್ಯದ ಚೇಷ್ಟೆಯಿಂ ಧರಾ
ಶ್ರೀಯಧಿನಾಥ ಕೇಳಱಿಯಲಾಯ್ತೆನಗಂದಿದಿರಲ್ಲಿ ನಿಶ್ಚಯಂ ೫೮

ವ॥ ಅದಲ್ಲದೆ ಆ ಆಸ್ಥಾನವು ಚಿತ್ರಾಂಕಿತದಿಂದ ಆಕಾಶದ ಸೊಬಗನ್ನು ಪಡೆದಿದ್ದಿತು. [ಚಿತ್ರಗಳು—ಚಿತ್ತಾನಕ್ಷತ್ರ] ಚಂದ್ರಶಾಲೆಯ ಸೊಗಸಿನಿಂದ ಚಂದ್ರಿಕೆ ಹರಡಿದ ರಾತ್ರಿಯಂತಿತ್ತು. ಸಿಂಹಾಸನವುಳ್ಳ ಆಸ್ಥಾನದಿಂದ ಕಾಡುಗಳ ಸಾಲನ್ನು ಅನುಕರಿಸಿತು. [ಸಿಂಹಾಸನ—ಸಿಂಹವಾಸ] ಜಾಳಕ ಸಮೂಹದಿಂದ ಹೂಬಳ್ಳಿಯನ್ನು ಹೋಲಿತು. [ಕಿಟಕಿಗಳು—ಮೊಗ್ಗುಗಳು] ಘನಸಾರ ಖಂಡಿತದಿಂದ ಮಳೆಗಾಲದ ವೈಭವವನ್ನು ಪಡೆಯಿತು. [ಕರ್ಪೂರದ ಹಳಕು—ನೀರಿನ ಹನಿಗಳು] ರತ್ನಗಳ ಧೂಳಿನಿಂದ ವ್ಯಾಪ್ತವಾಗಿ ಮೇರುಪರ್ವತದಂತಿತ್ತು. ಕಾಷ್ಠಾದಿಗಳಿಂದ ಮಾಡಿದ ಕನ್ಯಾ ಮೂರ್ತಿಗಳಿಂದ ದಿಕ್ಕುಗಳ ಸಾಲನ್ನು ಮೀರಿಸಿತು [ಮರ ಮೊದಲಾದುವುಗಳಿಂದ ಮಾಡಿದ ಬೊಂಬೆಗಳು ದಿಕ್ಕನ್ನಿಕೆಯರು] ಇಂಥ ಆಸ್ಥಾನ ಮಂದಿರಕ್ಕೆ—೫೭. "ಕಳಿಂಗ ಕನ್ನಿಕೆಯ ದೇಹದಲ್ಲಿ ಸೇರಿಕೊಂಡಿದ್ದ ಕಷ್ಟ ಕೊಡುತ್ತಿದ್ದ ಗ್ರಹವನ್ನು ದಂಡಿಸುವುದಕ್ಕಾಗಿ ಜಯಸಿಂಹನಿಗೆ ಬೇರೆ ಶರೀರವು ಬಂದಿದೆ. ನಾನದನ್ನು ಅಕ್ಕರೆಯಿಂದ ನೋಡಲು ಮರೆತೆನು." ಎಂದು ಯೋಚಿಸಿ ಚಂದ್ರಲೇಖೆಯು ಬಳೆಗಳನ್ನೂ ಗೆಜ್ಜೆಗಳನ್ನೂ ಸದ್ದುಮಾಡುತ್ತಾ ಹಸನ್ಮುಖಿಯಾಗಿ ಆಸ್ಥಾನಕ್ಕೆ ಬಂದಳು. ವ॥ ಹಾಗೆ ಆ ಶಶಾಂಕಲೇಖೆಯ ಗೆಳತಿ ಚಂದ್ರಲೇಖೆಯು ಆಸ್ಥಾನ ಮಂದಿರದಲ್ಲಿ ಕುಳಿತಿದ್ದ ನನ್ನನ್ನು ನೋಡಿ—೫೮. 'ಈ ಅರಸನು ಶ್ಮಶಾನದಲ್ಲಿ ಯತಿಯನ್ನು ಕೊಂದು ದಯೆಯಿಂದ ಕಳಿಂಗ ಕುಮಾರಿಯನ್ನು ರಕ್ಷಿಸಿದ ಸಾಹಸಿಯಂತೆ ಕಾಣಿಸುತ್ತಾನೆ.' ಎಂದು ಅವಳು ತಿಳಿದಳು. ರಾಜವಾಹನ ! ಅವಳು ನೋಡಿದ ರೀತಿ,

ವ॥ ಅಂತಾಕೆಯಾಸ್ಯ ಚೇಷ್ಟೆಯನಱಿದಾಗಳಿಂತೆಂದೆಂ

ಕಂಡೆಗೆ ಚಂದ್ರಲೇಖೆ ಜಯಸಿಂಹನನಂತಕನಿಕ್ಕೆಗಟ್ಟಿಯಾಂ
ಗಂಡಿಗನಾಗಿ ತನ್ನಿಲಯಕೆಯ್ದಿದೆನೀಹದನಂ ಸಶೀಘ್ರದಿಂ
ಖಂಡಶಶಾಂಕಸನ್ನುತಲಲಾಟೆಗೆ ಚೆನ್ನೆ ಕಳಿಂಗಕನ್ನೆಗಾ
ದಂಡಿಗಳೀಗಳೆಂತಱಿಯದಂತಱುಹೆಂದೆನಿಳಾಧಿನಾಯಕಾ ೫೯

ವ॥ ಎನಲಾ ಚಂದ್ರಲೇಖೆ

ಸಲಿಸದೆಯಿಾಯಾಕಾರಂ
ನೆಲೆಯಾದೊಡೆ ತತ್ಕಳಿಂಗಕನ್ನಿಕೆಯ ಗರಂ
ನೆಲೆಯಲ್ತದಲ್ಲದಿರ್ದೊಡೆ
ನೆಲೆಯಾಕೆಗೆ ಕಡೆಗೆ ಗರದ ಚೇಷ್ಟೆ ನಿತಾಂತಂ ೬೦

ವ॥ ಎಂದೊಡಾಕೆಗಿಂತೆಂದೆಂ

ಸಂದೇಹಂ ನಿನಗೇಕೆ ಶಂಕರಧರಾಸ್ಥಾನಾಂತದಿಂ ಕನ್ನೆಯಂ
ತಂದಾತಂ ಜಯಸಿಂಹನಂ ಹತಿಸಿ ತದ್ರಾಜ್ಯಕ್ಕೆ ಕೇಳೀಗಳೆ
ಯ್ತಂದಾತಂ ನಿಜರೀತಿಯೆಂದಱಿಯಲಿಂ ನಿನ್ನಾಕೆಯೆಂದಾಕೆಯಂ
ಚಂದಂ ರಂಜಿಸಲಟ್ಟಿದೆಂ ಕೆಳದಿಯಿರ್ದಾ ತಾಣಕಾನಂದದಿಂ ೬೧

ವ॥ ಅಂತಾಕೆಯನತ್ತಲ್ ಕಳುಹಿ ಇತ್ತಲಾಸ್ಥಾನದಲ್ಲಿರ್ದೆಲ್ಲರಂ ಸತ್ಕರಿಸಿ ಕಳಿಂಗ ಕನ್ನೆಯ ಗ್ರಹಕಾರಣಂ ತದಾಕಾರಸ್ಥಿತಿಯೆನಗಾಯ್ತೆಂದಱುಹಿಯನಂತರಂ ಶಶಾಂಕಲೇಖೆ ಯಿರ್ದೆಡೆಗೆಯ್ದಿ

ಮತ್ತು ಮುಖಭಾವಗಳಿಂದ ಇದನ್ನು ನಾನರಿತೆನು! ಇದು ನಿಶ್ಚಯ. ವ॥ ಅವಳ ಮುಖ ಚೇಷ್ಟೆಯನ್ನರಿತು ನಾನು ಅವಳಿಗೆ ಹೇಳಿದೆನು—೫೯. "ಚಂದ್ರಲೇಖೆ! ನಾನು ಶೌರ್ಯದಿಂದ ಜಯಸಿಂಹನನ್ನು ಯಮನಗಿರಿಗೆ ಕಳುಹಿಸಿ ಅವನರಮನೆಗೆ ಬಂದಿ ದ್ದೇನೆ ಈ ವಿಷಯವನ್ನು ಬೇಗ ಚಂದ್ರಲೇಖೆಯ ಹಾಗೆ ಮುಖವುಳ್ಳ ಕಳಿಂಗಕನ್ಯೆಗೆ ಅಂತಃಪುರದ ಅಧಿಕಾರಿಗಳಿಗೆ ತಿಳಿಯದಂತೆ ಹೇಳು" ವ॥ ಅದನ್ನು ಕೇಳಿ ಚಂದ್ರಲೇಖೆಯು— ೬೦. "ಈ ನಿನ್ನ ಆಕಾರವು ಹೀಗೆಯೇ ಸ್ಥಿರವಾಗಿದ್ದರೆ ಆ ಕಳಿಂಗ ಕನ್ಯೆಗೆ ಹಿಡಿದಿರುವ ಗ್ರಹವು ಬಿಟ್ಟುಹೋಗುತ್ತದೆ. ಅಲ್ಲದಿದ್ದರೆ ಅವಳಿಗೆ ಗ್ರಹಚೇಷ್ಟೆಯು ಶಾಶ್ವತ." ವ॥ ಎಂದು ಹೇಳಲು ನಾನು ಆಕೆಗೆ ಹೇಳಿದೆನು—೬೧. 'ನಿನಗೆ ಸಂದೇಹಬೇಡ. ಶ್ಮಶಾನದಿಂದ ಕಳಿಂಗ ಕನ್ಯೆಯನ್ನು ರಕ್ಷಿಸಿ ತಂದವನು ನಾನೇ! ಜಯಸಿಂಹನನ್ನು ಕೊಂದು ಅವನ ರಾಜ್ಯಕ್ಕೀಗ ಬಂದಿರುವನೂ ನಾನೇ! ನಿನ್ನವಳು ಇದನ್ನು ನಿಜವೆಂದು ತಿಳಿಯಲಿ.' ಎಂದು ಹೇಳಿ ರಂಜಿಸಿ ಅವಳನ್ನು ನನ್ನ ಗೆಳತಿಯಿದ್ದ ಜಾಗಕ್ಕೆ ಹರ್ಷದಿಂದ ಕಳುಹಿಸಿದೆನು. ವ॥ ಹೀಗೆ ಆಕೆಯನ್ನು ಅತ್ತ ಕಳುಹಿಸಿದೆನು. ಇತ್ತ "ಕಳಿಂಗ ಕನ್ಯೆಯ ಗ್ರಹ ನಿವಾರಣೆಗಾಗಿ ಈ ಆಕಾರವು ನನಗೆ ಬಂದಿದೆ" ಎಂದು ಹೇಳಿ ಆಸ್ಥಾನದಲ್ಲಿದ್ದವರನ್ನೆಲ್ಲ

ಎನ್ನಂ ಕಂಡಾಗಳಾಕನ್ನಿಕೆಯತಿಶಯದಿಂ ಕಾಂತಿಯಂ ತಾಳ್ದಿಯೆನ್ನಂ
ತನ್ನಿರ್ಕೆಯ್ಯಿಂ ಕರಂ ತಳ್ಕಿಸಿಯಧರಲಸತ್ಸಾರದಿಂ ಪೆಚ್ಚಿ ನಿಚ್ಚಂ
ತನ್ನಂಗ ಶ್ರೇಷ್ಠ ಸಂಗಸ್ಥಿತಿಯಿನಧಿಕರಾಗಾಧಿಕಂ ಸಂದಿರಲ್ ಕಂ
ಡೆನ್ನಂ ತನ್ನಿಂದೆ ಕಾರ್ಯಂ ನೆಲೆಯೆನಿಸಿರಲಾನಂದದಿಂದಿರ್ದೆನಾಗಳ್ ೬೨

ವ॥ ಅಂತೆನ್ನ ಸ್ನೇಹದಿಂ ಕಳಿಂಗಕನ್ನೆಗಾದ ಗರಂ ಕಱಿದಾಕಾರ್ಯದೇಟ್ಗಿಯಂ ಕಳಿಂಗ ರಾಜಂಗಱುಹಲ್ ಚರರಂ ಕಳುಹಿಯನಂತರಂ ನಿಸ್ನಂಘ್ರಿಯಂನಱಿಸಲೆಂದಿರಲನ್ನೆಗಂ

ಜಗದಧಿನಾಥ ಕೇಳ್ ನಿಜಸಹಾಯನೆನಲ್ ನೆಱೆದಂಗರಾಜನೇ
ಟ್ಗಿಗೆ ನಿಜದಿಂ ಸಹಾಯವೆನಗೆಂದೆನಗಾಜ್ಞೆಯನಟ್ಟಲೀಗಳಿ
ಲ್ಲಿಗೆ ನಲಿದಯ್ದಿ ನಿನ್ನ ಚರಣಂಗಳನೀಕ್ಷಿಸಿ ಧನ್ಯನಾದೆ ನಿಂ
ದಗಣಿತಕಾರ್ಯಸಿದ್ಧಿ ನೆಲೆಯಾಯ್ತೆನಗೆಂದಱಿದೆಂ ನಿರಂತರಂ ೬೩

ವ॥ ಎಂದು ರಾಜವಾಹನಂಗೆ ಮಂತ್ರಗುಪ್ತಂ ತನ್ನ ವೃತ್ತಾಂತಮಂ ಪೇಳ್ವುದುಂ

ಧರಣಿಗೆ ನಿನ್ನ ಮಂತ್ರಮೆ ಫಲಂ ನಿಜಸತ್ವಮತೀವವಿಸ್ಮಯಂ
ಪಿರಿಯ ತಪಂ ಕರಂ ಪೊಸತು ಬುದ್ಧಿ ವಿಚಿತ್ರಮೆನುತನೇಕ ಸೌಂ
ದರವಚನಂಗಳಿಂ ಪದೆದು ಮನ್ನಿಸಿ ಸನ್ನುತಮಂತ್ರಗುಪ್ತನಂ
ನಿರವಧಿತುಷ್ಟಿಯಿಂ ನಲಿದು ಮೆಚ್ಚಿದನಾಗಳಭಂಗವಿಕ್ರಮಂ ೬೪

ಸತ್ಕರಿಸಿ ಕಳುಹಿಸಿದೆನು. ಅನಂತರ ಶಶಾಂಕಲೇಖೆಯಿದ್ದಲ್ಲಿಗೆ ಹೋದೆನು. ೬೨. ಆ ಕನ್ನಿಕೆಯು ನನ್ನನ್ನು ಕಂಡ ಕೂಡಲೆ ಅತಿಶಯವಾದ ಕಾಂತಿಯನ್ನು ಪಡೆದಳು. ನನ್ನನ್ನು ತನ್ನ ಎರಡು ಕೈಗಳನ್ನೂ ನೀಡಿ ತಬ್ಬಿಕೊಂಡಳು. ಅಧರ ಸುಧೆಯನ್ನು ಪಾನಮಾಡಿಸಿದಳು. ತನ್ನ ಶ್ರೇಷ್ಠವಾದ ಶರೀರ ಸಂಗದಿಂದ ಅಧಿಕವಾದ ಪ್ರೀತಿಯನ್ನು ತೋರಿಸಿದಳು. ಹೀಗೆ ಕಾರ್ಯ ಸಿದ್ಧಿಯನ್ನು ಪಡೆದು ಆನಂದದಿಂದ ಇದ್ದೆನು, ವ॥ ಹೀಗೆ ನನ್ನ ಸ್ನೇಹದಿಂದ ಕಳಿಂಗ ಕನ್ಯೆಗಾದ ಗ್ರಹಪೀಡೆಯು ಕಳೆಯಿತು, ಈ ಕಾರ್ಯ ಸಿದ್ಧಿಯ ವಿಚಾರವನ್ನು ಕಳಿಂಗ ರಾಜನಿಗೆ ತಿಳಿಸಲು ದೂತರನ್ನು ಕಳುಹಿಸಿದೆನು. ಅನಂತರ ನಿಮ್ಮ ಪಾದಗಳನ್ನು ಹುಡುಕಬೇಕೆಂದಿದ್ದೆನು–ಅಷ್ಟರಲ್ಲಿ—೬೩. ಜಗದೊಡೆಯನಾದ ರಾಜವಾಹನನೇ ಕೇಳು. ನಿನಗೆ ಸಹಾಯಕನಾದ ಅಂಗರಾಜನು ತನಗೆ ಸಹಾಯ ಮಾಡುವುದಕ್ಕೆ ಬರಬೇಕೆಂದು ನನಗೆ ಹೇಳಿಕಳುಹಿಸಿದನು. ಅದಕ್ಕಾಗಿ ಇಲ್ಲಿಗೆ ಬಂದು ನಿನ್ನ ಚರಣಗಳನ್ನು ನೋಡಿ ಧನ್ಯನಾದೆನು. ತಮ್ಮ ಅನುಗ್ರಹದಿಂದ ಅಗಣಿತವಾದ ಕಾರ್ಯಸಿದ್ಧಿಯಾಯಿತು." ವ॥ ಎಂದು ರಾಜವಾಹನನಿಗೆ ಮಂತ್ರಗುಪ್ತನು ತನ್ನ ವೃತ್ತಾಂತವನ್ನೆಲ್ಲ ಹೇಳಿದನು—೬೪, "ಧರಣಿಯಲ್ಲಿ ನಿನ್ನ ಮಂತ್ರವೇ ಫಲಿಸುವುದು. ನಿನ್ನ ಪರಾಕ್ರಮವು ತುಂಬ ಆಶ್ಚರ್ಯಕರವಾದದು. ನಿನ್ನ ತಪಸ್ಸು ಹೊಸ ಬಗೆಯುದು ನಿನ್ನ ಬುದ್ಧಿಯು ವಿಚಿತ್ರವಾದುದು." ಎಂದು ಹೇಳುತ್ತಾ ಅನೇಕ ಸುಂದರವಾದ ಮಾತುಗಳಿಂದ ಆ ಅಭಂಗ ವಿಕ್ರಮನಾದ ರಾಜವಾಹನನು ಮಂತ್ರಗುಪ್ತನನ್ನು ಹೊಗಳಿ

## ಗದ್ಯ

ಇದು ನಿಖಿಲಬುಧಜನಮನೋವನಜವನ ದಿವಾಕರಕಿರಣಪ್ರತಿಮ ಪ್ರಸನ್ನ ಶ್ರೀಮದ ಭಂಗವಿಟ್ಠಲ ಪದಾಂಭೋಜ ಮತ್ತಮಧುಕರ ಮಧುಸೂದನನಂದನ ಸರಸಕವಿ ಚೌಂಡರಾಯ ವಿರಚಿತಮಪ್ಪ ಅಭಿನವ ದಶಕುಮಾರ ಚರಿತೆಯೊಳ್ ಮಂತ್ರಗುಪ್ತ ನಿರೋಷ್ಠ್ಯ ಕಥಾವೃತ್ತಾಂತಂ

## ತ್ರಯೋದಶಾಶ್ವಾಸಂ

ಅಧಿಕ ತೃಪ್ತಿಯಿಂದ ನಲಿದು ಮೆಚ್ಚಿದನು. ಇದು ಸಕಲ ವಿದ್ವಾಂಸರ ಮನಸ್ಸೆಂಬ ಕಮಲ ವನಕ್ಕೆ ಸೂರ್ಯನ ಕಿರಣ ಸಮನಾದ, ಪ್ರಸನ್ನನಾದ ಶ್ರೀಮದಭಂಗ ವಿಟ್ಠಲನ ಪದ ಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನಿಂದ ವಿರಚಿತವಾದ ಅಭಿನವ ದಶಕುಮಾರ ಚರಿತೆಯಲ್ಲಿ ಮಂತ್ರಗುಪ್ತನ ತುಟಿಗಳ ಸ್ಪರ್ಶವಿಲ್ಲದೆ ಹೇಳಿದ ಕತೆ, ಹದಿಮೂರನೆಯ ಆಶ್ವಾಸ

# ಚತರ್ದಶಾಶ್ವಾಸಂ

## ವಿಶ್ರುತನ ಕಥೆ

ಶ್ರೀನಂದನಮೂರ್ತಿ ಕಳಾ
ಸ್ಥಾನಂ ವಿಶ್ರುತನ ಮುಖಮನೀಕ್ಷಿಸಿ ಕೇಳ್ದಂ
ನೀನೆಸಗಿತ್ತೇನೆಂದಭಿ
ಮಾನಧನಂ ಕೂರ್ತಭಂಗವಿಟ್ಠಲಭೃತ್ಯಂ ೧

ವ|| ಅಂತು ಕೇಳ್ವ ರಾಜವಾಹನಂಗೆ ವಿಶ್ರುತಂ ಕೆಯ್ಗಳಂ ಮುಗಿದು

ಸೋದರರೆಲ್ಲರಂದದಿನಿಳಾತಳದೆಣ್ದೆಸೆಯೊಳ್ ತ್ವದೀಯಸ
ತ್ಪಾದಪಯೋಜಮಂ ತ್ವರಿತದಿಂದಱಸುತ್ತಿರಲೆನ್ನ ಪೂರ್ವಪು
ಣ್ಯೋದಯದಿಂದನೇಕಸುಕೃತಂ ನೆಲೆಗೊಂಡವೊಲಿರ್ಪುದೊಂದು ಚೆ
ಲ್ವಾದೆಡೆಯಂ ಮನೋಮುದದಿನೆಯ್ದಿದೆನಾಂ ಭುವನಾಧಿನಾಯಕಾ ೨

ವ|| ಅದಾವುದೆನೆ

ಹರಿಪದಸಂಗಮಂ ವಿವಿಧಮೋಕ್ಷವಧೂನವ ನೃತ್ಯರಂಗಮಂ
ಪರಮದಯಾಂಗಮಂ ಸುಖಸುಧಾಬ್ಧಿತರಂಗಮನುಗ್ರಪಾಪಸಿಂ
ಧುರಮಧುಭಂಗಮಂ ಭುವನಮಂಗಳಗೇಹಮೃದಂಗಮಂ
ಸ್ಥಿರಗಿರಿಶೃಂಗಮಂ ಭರದಿನೆಯ್ದಿದೆನೊಪ್ಪುವ ಪಾಂಡುರಂಗಮಂ ೩

೧. ರಾಜ್ಯಲಕ್ಷ್ಮಿಗೆ ಆನಂದಕರವಾದ ಶರೀರವುಳ್ಳ, ಕಲೆಗಳಿಗೆ ಆಶ್ರಯನಾದ, ಅಭಿಮಾನಧನನಾದ ಅಭಂಗವಿಟ್ಠಲನ ಸೇವಕನಾದ ರಾಜವಾಹನನು ವಿಶ್ರುತನ ಮುಖವನ್ನು ನೋಡಿ 'ನೀನು ಮಾಡಿದ ಕೆಲಸಗಳನ್ನು ಹೇಳು' ಎಂದು ಕೇಳಿದನು. ವ|| ಹಾಗೆ ಕೇಳಿದ ರಾಜವಾಹನನಿಗೆ ವಿಶ್ರುತನು ಕೈಗಳನ್ನು ಮುಗಿದು ಹೀಗೆಂದನು. ೨. "ಎಲ್ಲ ಸಹೋದರರರ ಹಾಗೆ ಭೂಮಂಡಲದ ಎಂಟು ದಿಕ್ಕುಗಳಲ್ಲಿಯೂ ನಿನ್ನ ಪಾದ ಕಮಲಗಳನ್ನು ಹುಡುಕಿದೆನು. ಆಗ ನನ್ನ ಪೂರ್ವಜನ್ಮದ ಪುಣ್ಯದಿಂದ ಧರೆಯೊಡೆಯನೇ, ಒಂದು ಸುಂದರವಾದ ಪ್ರದೇಶಕ್ಕೆ ಹೋದೆನು. ಅದು ಪುಣ್ಯಕ್ಕೆ ಆಶ್ರಯವಾದ ಸ್ಥಳದಂತೆ ಶೋಭಿಸುತ್ತಿತ್ತು. ವ|| ಅದು ಯಾವುದೆಂದರೆ– ೩. ಹೆಸರುವಾಸಿಯಾದ ಪಾಂಡುರಂಗಕ್ಷೇತ್ರ. ಅಲ್ಲಿಗೆ ನಾನು ಹೋದೆನು. ಅದು ಹರಿಯ ಪಾದಗಳ ಸಂಬಂಧವುಳ್ಳುದು. ಮೋಕ್ಷವೆಂಬ ವಧುವಿಗೆ ವಿಧವಿಧವಾಗಿ ನರ್ತಿಸುವ ರಂಗಭೂಮಿ, ಪರಮದಯಾಸ್ವರೂಪವು. ಸುಖವೆಂಬ ಅಮೃತ ಸಮುದ್ರದಲ್ಲಿದ್ದ ಅಲೆ, ಉಗ್ರವಾದ ಪಾಪವೆಂಬ ಆನೆಯ ಮದವನ್ನು ಭಂಗಿಸುವುದು. ಪ್ರಪಂಚದ ಮಂಗಳದ ಮನೆಯು

ಅದರ ಮಹತ್ವಮಂ ಪೊಗಟಲೆನ್ನಳವಲ್ತು ಸಮಸ್ತದೇವತಾ
ಸದನಮನಂತತೀರ್ಥನಿಲಯಂ ಸಕಲೋತ್ತಮಭೂಮಿ ವಿಷ್ಣುಮೆ
ಚ್ಚಿದ ಮನೆ ಲೋಕಲೋಚನಮನೋಹರಮಾಗಮ ಶಾಸ್ತ್ರಕೋಟಿ ಪು
ಟ್ಟಿದ ನೆಲೆ ಪಾಂಡುರಂಗೆ ಮದನಂಗೆಡೆಯಾಟದ ತಾಣಮೆಂಬಿನಂ ೪

ವ॥ ಅದಲ್ಲದೆಯುಂ

ಅದಱೊಳ್ ಗೋಪಾಲಕೇಳೀ ವ್ಯಸನಮನುಱೆದಾನಂದದಿಂ ಕೃಷ್ಣರಾಯಂ
ಪದುಳಂ ನಿಂದಿರ್ದು ಬೇಟ್ಪರ್ಗಭಿಮತಫಲಮಂ ಕೊಟ್ಟು ಸನ್ಮೂರ್ತಿಸಾಕಾ
ರದ ಚೆಲ್ವಿಂದಂ ನಿರಾಕಾರಿಗಳ ಬಗೆಯನೀಡಾಡಿ ಸಂದೇಹಮಂ ಪೊ
ರ್ದದೆ ತೋರ್ಪಂ ದಿವ್ಯರೂಪಂ ಮನುಜತತಿಗೆ ಕೇಳ್ ವಿಟ್ಠಲಾಖ್ಯಾನದಿಂದಂ ೫

ವ॥ ಮತ್ತಮಲ್ಲಿ

ತಾಪಿಪಯೋಷ್ಣಿ ನರ್ಮದೆ ಸುಗೌತಮಿ ಜಾಹ್ನವಿ ಕೃಷ್ಣವೇಣಿ ಗೋ
ದಾವರಿ ತುಂಗಭದ್ರೆ ಸುರಗಂಗೆ ಕವೇರತನೂಜೆಯೆಂಬ ನಾ
ನಾವಿಧಮಪ್ಪನೇಕ ನದಿಗಳ್ಗಧಿಕಂ ಹರಿಸನ್ನಿಧಾನಮು
ರ್ವೀವಳಯಪ್ರಸಿದ್ಧಮೆನೆ ಭೀಮರಥೀನದಿಯೆಂಬುದೊಪ್ಪುಗುಂ ೬

ಮೃದಂಗ. ಸ್ಥಿರವಾದ ಗಿರಿಶಿಖರದಲ್ಲಿರುವುದು. ೪. ಅದರ ಮಹತ್ವವನ್ನು ಹೊಗಳಲು ನನಗೆ ಶಕ್ತಿಯಿಲ್ಲ. ಅದು ಸಮಸ್ತ ದೇವತೆಗಳು ವಾಸಮಾಡುವ ಮನೆ. ಅನಂತ ತೀರ್ಥಗಳಿಗೆ ಆಶ್ರಯ. ಸಕಲ ಕ್ಷೇತ್ರಗಳಲ್ಲಿ ಉತ್ತಮವಾದ ಕ್ಷೇತ್ರ. ವಿಷ್ಣುವು ಮೆಚ್ಚಿಕೊಂಡಿರುವ ಮನೆ. ಜನರ ಕಂಗಳಿಗೆ ಮನೋಹರವಾದುದು. ಕೋಟಿ ಆಗಮ ಶಾಸ್ತ್ರಗಳು ಹುಟ್ಟಿದ ಸ್ಥಾನ. ಹೀಗೆ ಪಾಂಡುರಂಗಕ್ಷೇತ್ರವು ಮದನನ ಕ್ರೀಡಾಂಗಣವಾಗಿದ್ದಿತು. ವ॥ ಅದೂ ಅಲ್ಲದೆ—೫. ಅಲ್ಲಿ ಕೃಷ್ಣನು ಗೊಲ್ಲರ ಆಟಗಳಲ್ಲಿ ಆಸಕ್ತಿಯನ್ನು ತೊರೆದು ಆನಂದದಿಂದ ಕ್ಷೇಮವಾಗಿ ನಿಂತಿದ್ದಾನೆ. ವಿಟ್ಠಲನೆಂಬ ಹೆಸರಿನಿಂದ ಬೇಡಿದವರಿಗೆಲ್ಲ ಇಷ್ಟವಾದ ಫಲಗಳನ್ನು ಕೊಡುತ್ತಾನೆ. ಸುಂದರವಾದ ಸಾಕಾರಮೂರ್ತಿಯ ಸೌಂದರ್ಯವನ್ನು ತೋರಿ ದೇವರು ನಿರಾಕಾರನೆಂಬ ಸಂಶಯವನ್ನು ಹೋಗಲಾಡಿಸಿ ಮನುಷ್ಯರಿಗೆ ತನ್ನ ದಿವ್ಯರೂಪವನ್ನು ತೋರಿಸುತ್ತಾನೆ. ವ॥ ಮತ್ತೂ ಅಲ್ಲಿ– ೬. ಭೀಮರಥೀ ಎಂಬ ನದಿಯು ಹರಿಯುತ್ತದೆ. ತಾಪೀ, ಪಯೋಷ್ಣೀ, ನರ್ಮದೆ, ಗೌತಮಿ, ಜಾಹ್ನವಿ, ಕೃಷ್ಣವೇಣಿ, ಗೋದಾವರಿ, ತುಂಗಭದ್ರೆ, ದೇವಗಂಗೆ, ಕಾವೇರಿ ಮೊದಲಾದ ನಾನಾವಿಧವಾದ ನದಿಗಳೆಲ್ಲಕ್ಕಿಂತ ಇದು ಭೂಮಂಡಲದಲ್ಲಿ ಶ್ರೇಷ್ಠವೆನಿಸಿದೆ. ಹರಿಯ ಸನ್ನಿಧಾನವೇ

ಹರಿ ಗೋಪಾಲರೊಳಾಡಿದೊಂದೆಡೆ ಪೆಗಲ್ಗೂಟುಂಡ ತಾಣಂ ಮನೋ
ಹರಕೇಳೀಸ್ಥಳಿ ಗೋವ್ರಜಂ ನಡೆದ ಚಿಹ್ನಂ ತನ್ನದೀತೀರದೊಳ್
ಕರದಿಂ ರಂಜಿಪುವೆಲ್ಲರೀಕ್ಷಿಸಲೆನಲ್ ಸತ್ಪಾಂಡುರಂಗಕ್ಕೆ ಭೀ
ಮರಥೀದೇವಿ ಸುದರ್ಪಣಂ ಗಡಮೆನಲ್ ಚೆಲ್ವಾಗಿ ಕಣ್ಗೊಪ್ಪುಗುಂ ೭

ವ॥ ಮತ್ತಮಲ್ಲಿ

ಪಲವುಯುಗಂ ಸಮುದ್ರನದಿಕಾನನದೇವಗೃಹಾದ್ರಿಯೆಂಬ ಸು
ಸ್ಥಳದೊಳತೀವ ಘೋರತಪದಿಂ ಯತಿಗಳ್ ಮಿಗೆ ಕಾಣದಿರ್ಪ ವಿ
ಟ್ಠಲನನಂತರೀಕ್ಷಿಸಿ ನಿಜೇಚ್ಛೆಗೆ ಬೆಂಬಟಿಯಾಗಿ ತಂದ ನಿ
ಶ್ಚಳಮತಿ ಪುಂಡರೀಕಮುನಿ ತೀರದೊಳಿರ್ದನಿಳಾಧಿನಾಯಕಾ ೮

ವ॥ ಅಂತಿರ್ದ ದಿವ್ಯಕ್ಷೇತ್ರಮಂ ಕಂಡು

ಎಲ್ಲಾತೀರ್ಥಂಗಳಿಂದಗ್ಗಳಮೆನಿಸುವ ತತ್ತೀರ್ಥಮಂ ಮಿಂದು ಮತ್ತಾ
ನಲ್ಲಿಂ ಮೆಯ್ಯಿಕ್ಕುತುಂ ವಿಟ್ಠಲ ಜಯಜಯ ಎಂಬುತ್ತಮಾಧ್ಯಾನದಿಂ ಚಿ
ತ್ತೋಲ್ಲಾಸಂಮಿಕ್ಕು ಬರ್ಪನ್ನೆಗಮೆನಗಿದಿರೊಳ್ ತೋಱಿದತ್ತುಚ್ಚಶಾಖಾ
ಸಲ್ಲೀಲಂ ರಂಜಿಪೋದುನ್ನತತರಪಿಚು ಮಂದಾಳವಾಳಂ ಕುಜಾಳಂ ೯

ಇದಕ್ಕೆ ಕಾರಣ. ೭. ಹರಿಯು ಗೋಪಾಲರೊಡನೆ ಆಟವಾಡಿದ ಜಾಗ, ಬುತ್ತಿಯ ಅನ್ನವನ್ನು ತಿಂದ ಜಾಗ, ಮನೋಹರವಾದ ಕ್ರೀಡಾಸ್ಥಾನ. ಹಸುಗಳ ಗುಂಪು ತಿರುಗಿದ ಗುರುತು–ಇವೆಲ್ಲ ಆ ನದಿಯ ದಡದಲ್ಲಿ ಈಗಲೂ ನೋಡಲು ಕಾಣಿಸುತ್ತವೆ. ಆ ಪಾಂಡುರಂಗಕ್ಕೆ ಭೀಮರಥೀ ನದಿಯೇ ಸೊಗಸಾದ ಕನ್ನಡಿ, ಎಂಬಂತೆ ಆ ಕ್ಷೇತ್ರವು ಸುಂದರವಾಗಿ ಕಾಣಿಸುತ್ತದೆ. ವ॥ ಮತ್ತೂ ಅಲ್ಲಿ ೮. ಹಲವು ಯುಗಗಳ ಕಾಲ ಸಮುದ್ರನದಿಕಾಡು ದೇವಾಲಯ ಬೆಟ್ಟ ಇತ್ಯಾದಿ ಪುಣ್ಯಸ್ಥಳಗಳಲ್ಲಿ ಘೋರವಾದ ತಪಸ್ಸನ್ನು ಮಾಡಿದರೂ ಯತಿಗಳು ಕಾಣಲಾಗದಂಥ ವಿಟ್ಠಲನನ್ನು ನೋಡಿ, ತನ್ನ ಇಷ್ಟದಂತೆ ತನ್ನ ಹಿಂದೆಯೇ ಕರೆದುಕೊಂಡು ಬಂದ ನಿಶ್ಚಲಮತಿಯಾದ ಪುಂಡರೀಕನು ಈ ನದಿಯ ತೀರದಲ್ಲಿ ವಾಸಿಸುತ್ತಿದ್ದಾನೆ. ವ॥ ಹಾಗಿದ್ದ ದಿವ್ಯಕ್ಷೇತ್ರವನ್ನು ನೋಡಿ—೯, ಎಲ್ಲ ತೀರ್ಥಗಳಿಗೂ ಶ್ರೇಷ್ಠವಾದ ಆ ತೀರ್ಥದಲ್ಲಿ ಸ್ನಾನಮಾಡಿದೆನು. ಮತ್ತು ಅಲ್ಲಿಂದ ನಮಸ್ಕಾರಮಾಡಿ 'ವಿಟ್ಠಲ ಜಯ ಜಯ' ಎಂದು ಹೇಳುತ್ತಾ ಮುಂದೆ ಉಲ್ಲಾಸದಿಂದ ನಡೆದೆನು. ಬರುತ್ತಿರುವಾಗ ಒಂದು ಎತ್ತರವಾದ ಕೊಂಬೆಗಳಿಂದ ಕೂಡಿದ ಪಾತಿಮಾಡಿದ ಒಂದು ಬೇವಿನ ಮರದ ಕಟ್ಟೆಯು ಎದುರಿನಲ್ಲಿ ಕಾಣಿಸಿತು,

ಬೇವಿನ ಕಟ್ಟೆ ಪುಣ್ಯವಧು ತನ್ನೊಲವಿಂ ಬರುತಿರ್ಪ ಬಟ್ಟೆ ನಾ
ನಾವಿಧಪಾಪದುಃಷ್ಟಮೃಗಮಂ ಕೆಡೆಯೊಟ್ಟುವ ಮಿಟ್ಟೆ ನವ್ಯಪು
ಣ್ಯಾವಳಿರತ್ನಮಂ ಬಯಸಿ ಕಟ್ಟಿದ ಮೊಟ್ಟೆ ಕುಶಾಸ್ತ್ರಮಾರ್ಗಮಂ
ಭಾವಿಸೆ ಗೆಲ್ದ ಬಟ್ಟೆಯೆನೆ ರಂಜಿಪುದಲ್ತೆ ಧರಾಧಿನಾಯಕಾ ೧೦

ಸನಕಾದಿಗಳಖಿಳಾಗಮ
ವಿನಿಶ್ಚಯಕ್ಕಿರ್ಪ ತಾಣಮೆಂದಾನಾಗಳ್
ಮನವೊಲ್ದರ್ಕೆ ಪೊಡೆಮ
ಟ್ಟನುನಯದಿಂ ಮತ್ತೆ ಮುಂದೆ ನಡೆಗೊಳ್ವಾಗಳ್ ೧೧

ನಲಿನಭವಾದಿದೇವನಿಕರಕ್ಕಮಗೋಚರಮಾದಭಂಗವಿ
ಟ್ಠಲನ ಮನೋಹರಾಕೃತಿಯನಾತನ ಪಾದಪಯೋಜಯುಗ್ಮಮಂ
ಚಲಿಸದ ದೃಷ್ಟಿಯಿಂ ಪದೆದು ನೋಡುತೆ ಕೆಯ್ಮುಗಿದಿರ್ಪ ಪಕ್ಷಿಸಂ
ಕುಲಪತಿಯಪ್ಪ ಭೀಕರಗರುತ್ಮನನಾಂ ಮಿಗೆ ಕಂಡೆನುರ್ವಿಪಾ ೧೨

ವ॥ ಅಂತಾಗರುಡಂಗೆ ನಮಸ್ಕರಿಸಿ ಮತ್ತಂ ಪೋಗೆ ಮುಂದೆ

ಮದಗಂಧಕ್ಕೆ ಮದಾಳಿಗಳ್ ಮುಸುಱಿದೋಲ್ ಸರ್ವಾಂಗದೊಳ್ ನೀಲರ
ತ್ನದಲಂಕಾರಮನಾಂತ . . . . ಪರಮಹಸ್ತಂ ಶೂರ್ಪಕರ್ಣದ್ವಯಂ
ರದನೈಕಂ ನವರಕ್ತ ಚಂದನವಿಲಿಪ್ತಾಂಗಂ ಗಜಾಸ್ಯಂ ವರ
ಪ್ರದನಿರ್ದಂ ಪೊಡೆಮಟ್ಟೆನೆನ್ನ ಬಗೆಯಕ್ಕೆಂದಾಗಳುರ್ವೀಶ್ವರಾ ೧೩

೧೦. ರಾಜವಾಹನನೇ ಆ ಬೇವಿನ ಕಟ್ಟೆಯು ಪುಣ್ಯವೆಂಬ ವಧುವು ಪ್ರೀತಿಯಿಂದ ಬರುತ್ತಿರುವ ದಾರಿ. ನಾನಾ ಬಗೆಯ ಪಾಪಗಳೆಂಬ ದುಷ್ಟಮೃಗಗಳನ್ನು ಹಿಂದಕ್ಕೆ ತಡೆದಟ್ಟುವ ದಿಣ್ಣೆ, ನೂತನವಾದ ಪುಣ್ಯಗಳೆಂಬ ರತ್ನಗಳನ್ನು ಬಯಸಿಕಟ್ಟಿದ ಗಂಟು, ಕುತ್ಸಿತ ಶಾಸ್ತ್ರಗಳಲ್ಲಿ ಹೇಳಿರುವ ಮಾರ್ಗವನ್ನು ಗೆದ್ದದಾರಿ–ಎನ್ನುವಂತೆ ರಂಜಿಸುತ್ತದೆ; ೧೧. 'ಸನಕಾದಿ ಮುನಿಗಳು ಅಖಿಳಾಗಮಗಳ ಅರ್ಥವನ್ನು ನಿರ್ಣಯಿಸುವ ಸ್ಥಾನವಿದು ಎಂದು ನಿಶ್ಚಯಿಸಿ ನಾನಾಗ ಪ್ರೀತಿಯಿಂದ ಅದಕ್ಕೆ ನಮಸ್ಕಾರ ಮಾಡಿದೆನು. ಮತ್ತೆ ಅಲ್ಲಿಂದ ಮುಂದೆ ನಡೆದೆನು. ೧೨. ಅಭಂಗ ವಿಟ್ಠಲನ ಮನೋಹರವಾದ ಆಕೃತಿಯು ಬ್ರಹ್ಮನೇ ಮೊದಲಾದ ದೇವತಾ ಸಮೂಹಕ್ಕೂ ಗೋಚರವಾಗತಕ್ಕದ್ದಲ್ಲ. ಅಂಥ ವಿಟ್ಠಲನ ಪಾದ ಕಮಲಗಳೆರಡನ್ನೂ ನೆಟ್ಟ ನೋಟದಿಂದ ನೋಡುತ್ತಾ ಕೈ ಮುಗಿದು ಕೊಂಡಿದ್ದ ಪಕ್ಷಿರಾಜನಾದ ಭಯಂಕರ ಗರುಡನನ್ನು ನೋಡಿದೆನು. ವ॥ ಆ ಗರುಡನಿಗೆ ನಮಸ್ಕಾರ ಮಾಡಿ ಮತ್ತೆ ಮುಂದೆ ಹೋದೆನು. ಮುಂದೆ—೧೩. ವರಪ್ರದನಾದ ಗಣೇಶನಿದ್ದನು. ಅವನ ಸರ್ವಾಂಗಗಳಲ್ಲಿಯೂ ಮಾಡಿದ್ದ ನೀಲ ರತ್ನಗಳ ಅಲಂಕಾರವು ಮದೋದಕದ ಸೊಗಡಿಗೆ ಬಂದು ಮುತ್ತಿ ಕೊಂಡಿದ್ದ ಮದಿಸಿದ ದುಂಬಿಗಳಂತಿದ್ದಿತು. ಶ್ರೇಷ್ಠವಾದ ಸೊಂಡಿಲು, ಮೊರದಹಾಗಿದ್ದ ಕಿವಿಗಳೆರಡು ಒಂದು ಹಲ್ಲು ನೂತನವಾದ ಕೆಂಪುಗಂಧ ಹಚ್ಚಿದ ಶರೀರ ಇವುಗಳಿಂದ ರಂಜಿಸುತ್ತಿದ್ದ ಗಣೇಶನಿಗೆ ನಮಸ್ಕರಿಸಿ

ವ॥ ಅಂತಾ ವಿನಾಯಕಂಗೆ ಪೊಡಮಟ್ಟಲ್ಲಿಂ ತಳರ್ದು ಮುಂದೆ

ಜ್ವಲನಾಕ್ಷಂ ಕ್ರೂರದಂಷ್ಟ್ರಾಪ್ರಹಸಿತವದನಂ ಕುಂಡಲಂ ರುಂಡಮಾಲಾ
ಗಲನುಗ್ರಾಹೀಂದ್ರಹಾರಂ ಡಮರುಗವಿಲಸತ್ಶೂಲಕಾಪಾಲಖಡ್ಗಾ
ವಿಲಹಸ್ತಂ ಕ್ಷುದ್ರಘಂಟಾಂಚಿತಜಘನತಟಂ ರಂಜಿಸಲ್ ಕ್ಷೇತ್ರಪಾಲಂ
ನೆಲಸಿರ್ದಂ ಬಾಗಿಲೊಳ್ ಕಂಡೆಱಗಿದೆನೆನಸುಂ ಭಕ್ತಿಯಿಂದಂ ನೃಪಾಲಾ ೧೪

ವ॥ ಅಂತಾ ಕ್ಷೇತ್ರಪಾಲಂಗೆಱಗಿ ಮುಂದಂ ನೋೞ್ಪಿನಂ

ಅಭಿನವರತ್ನ ತೋರಣಮನೇಕಲಸತ್ಕಲಶಂ ಗರುತ್ಮವ
ಲ್ಲಭನ ಪತಾಕೆ ವೈಷ್ಣವಜಯಧ್ವನಿ ನಿರ್ಮಳಭಿತ್ತಿಕಾಸುಧಾ
ಪ್ರಭೆ ನವಧೂಪಧೂಮಲತೆ ಮಂಗಳವಾದಕಗೇಯನರ್ತಕೀ
ರಭಸಮನಾರತಂ ಮೆಱೆವ ವಿಟ್ಠಲರಾಯಗೃಹಂ ವಿರಾಜಿಕುಂ ೧೫

ವ॥ ಅಂತಾ ದೇವತಾಯತನಮಂ ಕಂಡಾಂ ಪ್ರದಕ್ಷಿಣಂಗೆಯ್ಯುತ್ತಲ್ಲಿ

ದೇವನಿತಂಬಿನೀಸಮುದಯಂ ಬೆಸಕೆಯ್ವ ಸಮಸ್ತಭಾಗ್ಯ ಜ
ನ್ಮಾವನಿಯಾದ ತನ್ನ ನಯನಾಂಚಲದಿಂ ಭುವನಕ್ಕೆ ಸಂತತಂ
ಜೀವನಮಂ ಪ್ರತಿಷ್ಠಿಸುವ ವಿಟ್ಠಲರಾಯನ ರಾಣಿ ರುಕ್ಮಿಣೀ
ದೇವಿಯರಂಘ್ರಿಗಾಂ ನಲಿದು ದೂರದೊಳಿರ್ದೆಱಗಿರ್ದೆನುರ್ವಿಪಾ ೧೬

ಇಷ್ಟಾರ್ಥವು ಸಿದ್ಧಿಸಲೆಂದು ಪ್ರಾರ್ಥಿಸಿದೆನು. ವ॥ ವಿನಾಯಕನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಮುಂದೆ—೧೪. ನೃಪಾಲನೆ, ಬಾಗಿಲಿನಲ್ಲಿಯೇ ನೆಲಸಿದ್ದ ಕ್ಷೇತ್ರಪಾಲನನ್ನು ಕಂಡೆನು. ಉರಿಗಣ್ಣು ಕ್ರೂರವಾದ ಕೋರೆಹಲ್ಲುಗಳನ್ನು ತೋರುತ್ತಾ ನಗುತ್ತಿರುವ ಮುಖ, ಕಿವಿಯಲ್ಲಿ ಕುಂಡಲ, ಕುತ್ತಿಗೆಯಲ್ಲಿ ರುಂಡಮಾಲೆ, ಉಗ್ರನಾದ ಸರ್ಪರಾಜನಹಾರ, ಕೈಗಳಲ್ಲಿ ಡಮರುಗ ಶೂಲ ಕಪಾಲ ಕತ್ತಿಗಳು, ಸೊಂಟಕ್ಕೆ ಕಿರುಗೆಜ್ಜೆಗಳ ಉಡಿದಾರ—ಇವುಗಳಿಂದ ಕ್ಷೇತ್ರಪಾಲನು ರಂಜಿಸುತ್ತಿದ್ದನು. ಅವನಿಗೆ ಭಕ್ತಿಯಿಂದ ನಮಸ್ಕಾರಮಾಡಿದೆನು. ವ॥ ಆ ಕ್ಷೇತ್ರಪಾಲನಿಗೆ ನಮಸ್ಕರಿಸಿ ಮುಂದೆ ನೋಡಲು—೧೫. ನೂತನವಾದ ರತ್ನಗಳ ತೋರಣ, ಹೊಳೆಯುವ ಹಲವು ಕಲಶಗಳು ಗರುಡಧ್ವಜ, ವಿಷ್ಣುಭಕ್ತರು ಮಾಡುತ್ತಿದ್ದ ಜಯಶಬ್ದ, ನಿರ್ಮಲವಾದ ಗೋಡೆಗಳಿಗೆ ಹಚ್ಚಿದ ಸುಣ್ಣದಕಾಂತಿ, ಬಳ್ಳಿಯ ಹಾಗೆ ಕಾಣಿಸುವ ಮೇಲೇಳುತ್ತಿದ್ದ ಧೂಪದ ಹೊಗೆ, ಮಂಗಳ ವಾದ್ಯ, ಸಂಗೀತ, ನರ್ತಕಿಯರ ನಾಟ್ಯದ ರಭಸ—ಇವುಗಳಿಂದ ವಿಟ್ಠಲರಾಯನ ಮಂದಿರವು ಪ್ರಕಾಶಿಸುತ್ತಿತ್ತು. ವ॥ ಆ ದೇವಾಲಯವನ್ನು ನೋಡಿ ನಾನು ಪ್ರದಕ್ಷಿಣೆ ಮಾಡಿದೆನು. ಅಲ್ಲಿ—೧೬. ರಾಜವಾಹನನೇ, ವಿಟ್ಠಲರಾಯನ ರಾಣಿ ರುಕ್ಮಿಣಿದೇವಿಯರ ಪಾದಗಳಿಗೆ ದೂರದಿಂದಲೇ ನಮಸ್ಕರಿಸಿದೆನು. ದೇವತಾ ಸ್ತ್ರೀಯರಿಂದ ಸೇವಿತಳಾದವಳು ಅವಳು. ಸಮಸ್ತ ಭಾಗ್ಯಕ್ಕೂ ಜನ್ಮಭೂಮಿಯಾದ ಕಡೆಗಣ್ ನೋಟದಿಂದ

ವ॥ ಅಂತಾ ದೇವಿಯರಂ ನಮಸ್ಕರಿಸಿಯನಂತರಂ

ಹಿಮಕರವಕ್ತ್ರೆಯರ್ ತ್ರಿದಶಕಾಮಿನಿಯರ್ ನವತಾರಕಾಸಮು
ದ್ಗಮಮನಲರ್ಚಿ ತಮ್ಮ ನಯನಪ್ರಭೆಯಿಂ ಸಮಕಟ್ಟಿ ರುಕ್ಮಿಣೀ
ರಮಣನ ಕೋಮಳಾಂಘ್ರಿಯುಗಳಕ್ಕೆ ನಿವೇದಿಸುವಂದದಿಂ ಸವಿ
ಭ್ರಮಮನೊಡರ್ಚಿ ಪೊಚ್ಚಪೊಸಮಾಲೆಯನೆತ್ತುವರಲ್ಲಿ ಬಾಲೆಯರ್ ೧೭

ವ॥ ಅಂತವಱೊಳ್ ಪವಣಿಲ್ಲದ ಪೂಗಳಂ ಪರಮಪುರುಷಂಗೆ ಪಡೆದನಂತರಂ

ಪುಲಕಂಗಳ್ ಮೆಯ್ಯೊಳಕ್ಷಿದ್ವಯದೊಳಸುರಜಿನ್ಮೂರ್ತಿ ಜಿಹ್ವಾಗ್ರದೊಳ್ ನಿ
ರ್ಮಲನಾಮಂ ಫಾಳದೊಳ್ ಸಂಪುಟಕರಮೆನಸುಂ ಚಿತ್ತದೊಳ್ ಭಕ್ತಿಭಾವಂ
ನೆಲಸಲ್ ಮದ್ಭಾಗ್ಯಸಂವೃದ್ಧಿಗೆ ಮಿಗೆ ನಲಿಯುತ್ತುಂ ಮನಃಪ್ರೀತಿಯಿಂ ವಿ
ಟ್ಠಲನಂ ಕಂಡಾರ್ತದಿಂ ಮೆಲ್ಲಡಿಗೆಱಗಿ ಕೃತಾರ್ಥಾತ್ಮನಾದೆಂ ನೃಪಾಲಾ ೧೮

ವ॥ ಅಂತೆಱಗಿ

ಅಡಿಗೆಱಗಿರ್ದೊಡೆ ರೂಪಿನ
ಸಡಗರಮಂ ಕಾಣಲರಿದೆನುತ್ತಾನಾಗಳ್
ಕಡುಪಿಂ ವಿಟ್ಠಲಮೂರ್ತಿಯ
ನಡವಱಿಯದೆ ನೋಡುತಿರ್ದೆನನಿಮಿಷಗತಿಯಿಂ ೧೯

ಪ್ರಪಂಚಕ್ಕೆ ಜೀವನವನ್ನು ಕೊಡುತ್ತಾಳೆ ಅವಳು. ವ॥ ಆ ದೇವಿಯರನ್ನು ನಮಸ್ಕರಿಸಿದೆನು—ಅನಂತರ ೧೭. ಅಲ್ಲಿ ಬಾಲೆಯರು ವಿಲಾಸದಿಂದ ಹೊಚ್ಚ ಹೊಸ ಮಾಲೆಯನ್ನು ದೇವರಿಗೆ ಸಮರ್ಪಿಸುವುದಕ್ಕಾಗಿ ಕೈಯಲ್ಲಿ ಎತ್ತಿಹಿಡಿದು ಮಾರುತ್ತಾರೆ. ಅವರು ಚಂದ್ರಮುಖಿಯರಾದ ಅಪ್ಸರಸ್ಸುಗಳು ನೂತನವಾದ ತಾರಕೆಗಳನ್ನು ಅರಳಿಸಿ ತಮ್ಮ ನಯನ ಕಾಂತಿಯಿಂದ ಸುಂದರವಾಗಿ ಕಟ್ಟಿ ರುಕ್ಮಿಣೀದೇವಿಯ ಪಾದಗಳೆರಡಕ್ಕೂ ನಿವೇದಿಸುತ್ತಿರುವಂತೆ ಕಾಣಿಸಿದರು. ವ॥ ಅವರಿಂದ ಅಳತೆಗೆ ಮೀರಿದಷ್ಟು ಹೂಗಳನ್ನು ಪರಮಪುರುಷನಿಗೆ ಅರ್ಪಿಸುವುದಕ್ಕಾಗಿ ಪಡೆದೆನು. ಅನಂತರ—೧೮. ನೃಪಾಲನೇ, ವಿಟ್ಠಲನ ಮೃದುವಾದ ಪಾದಗಳಿಗೆ ನಮಸ್ಕರಿಸಿ ಕೃತಾರ್ಥನಾದೆನು. ಮೈಯಲ್ಲಿ ರೋಮಾಂಚವುಂಟಾಯಿತು. ಅಸುರರನ್ನು ಗೆದ್ದ ವಿಟ್ಠಲನಮೂರ್ತಿ ಎರಡು ಕಂಗಳಲ್ಲಿಯೂ ಪ್ರತಿಬಿಂಬಿಸಿತು. ನಾಲಿಗೆಯಿಂದ ಅವನ ನಿರ್ಮಲವಾದ ನಾಮವನ್ನು ಹೇಳುತ್ತಿದ್ದೆನು. ಕೈಗಳೆರಡನ್ನೂ ಹಣೆಯ ಮೇಲೆ ಎತ್ತಿ ಮುಗಿದುಕೊಂಡಿದ್ದೆನು. ಮನಸ್ಸಿನಲ್ಲಿ ಭಕ್ತಿಯು ನೆಲೆಸಿತು. ಈ ರೀತಿಯಾಗಿ ಭಗವದ್ದರ್ಶನವನ್ನು ನನ್ನ ಭಾಗ್ಯಾತಿಶಯವೆಂದು ತಿಳಿದು ಮನಸ್ಸಿನಲ್ಲಿ ಪ್ರೀತಿಯಿಂದ ನಲಿದೆನು. ವ॥ ಹಾಗೆ ಎರಗಿ—೧೯. ಪಾದಗಳಿಗೆ ನಮಸ್ಕಾರ ಮಾಡುತ್ತಾ ಇದ್ದರೆ ವಿಟ್ಠಲನ ರೂಪದ ವೈಭವವನ್ನು ನೋಡಲು ಸಾಧ್ಯವಿಲ್ಲ ಎಂದು ಯೋಚಿಸಿದೆನು. ಅನಂತರ ಎದ್ದು ನಾನು ವಿಟ್ಠಲ

ವರಮಕುಟಂ ಮುಗುಳ್ನಗೆ ತುಳುಂಕುವ ಮುದ್ದುಮೊಗಂ ಜಗನ್ಮನೋ
ಹರಕರಕುಂಡಲಂ ಪೆಗಲಕಲ್ಲಿ ಲಸತ್ಪದಕಂ ನಿತಂಬದೊಳ್
ಸ್ಥಿರಮೆನಲಿಟ್ಟ ಹಸ್ತಯುಗಳಂ ಪೊಸಗೋವಳಗೋಲ್ ನಿಲೀನಸ
ಚ್ಚರಣಸರೋರುಹಂ ಮೆಱೆವ ಚೆನ್ನಿಗ ವಿಟ್ಠಲರಾಯನೊಪ್ಪಿದಂ ೨೦

ನವಮೇಘಚ್ಛವಿ ಮೆಯ್ಗೆ ಮಂದಹಸಿತಂ ವಕ್ತ್ರಕ್ಕೆ ಶಂಖಂ ನವೀ
ನವೆನಲ್ ವಾಮಕರಕ್ಕೆ ಸತ್ಕಟಿಗೆ ಸತ್ಪಾಣಿದ್ವಯಂ ಪಾದಪ
ಲ್ಲವಯುಗ್ಮಕ್ಕೆ ನೆಗಱ್ತೆಯಿಟ್ಟಿಗೆ ಲಸತ್ಸೌಂದರ್ಯಭಾಗ್ಯಂ ಸಮ
ಸ್ತವಿಶೇಷಂ ಸಮುದಾಯ ಶೋಭೆಯೆಸೆಯಲ್ಕಂದೊಪ್ಪಿದಂ ವಿಟ್ಠಲಂ ೨೧

ವ॥ ಅಂತಿರ್ದ ವಿಟ್ಠಲದೇವನಂ ಕಂಡು

ಪದ್ದ॥

ಜಯ ಜಯ ಜಯ ಜಗನ್ಮೋಹನಮೂರ್ತಿ ।
ಜಯ ದೇವ ಸುರಾಸುರ ಚಕ್ರವರ್ತಿ ॥
ಜಯ ಭಾಗವತ ಸ್ಥಿರಭಾಗ್ಯರೂಪ ।
ಜಯ ನಾಗನಿವಾಸಚಿತಪ್ರತಾಪ ॥
ಜಯ ನಿತ್ಯನಿರ್ಮಳಮುಖಪ್ರಸಾದ ।

ಮೂರ್ತಿಯನ್ನೇ ಎಡೆಬಿಡಿದೆ ರೆಪ್ಪಹಾಕದೆ ಆಸಕ್ತಿಯಿಂದ ನೋಡುತ್ತಾನಿಂತೆನು. ೨೦. ಶ್ರೇಷ್ಠವಾದ ಕಿರೀಟವನ್ನು ಧರಿಸಿದ್ದಾನೆ. ಮುದ್ದಾದ ಮುಖದಲ್ಲಿ ಮುಗುಳ್ನಗೆ ತುಂಬಿ ತುಳುಕುತ್ತಿದೆ. ಕಿವಿಯಲ್ಲಿನ ಕುಂಡಲವು ಜಗತ್ತನ್ನೇ ಮೋಹಗೊಳಿಸುತ್ತಿದೆ. ಹೆಗಲ ಮೇಲೆ ಉತ್ತರೀಯ ಧರಿಸಿದ್ದಾನೆ. ಎದೆಯ ಮೇಲೆ ಪಾದಕವು ಹೊಳೆಯುತ್ತಿದೆ. ಎರಡು ಸುಂದರವಾದ ಕೈಗಳನ್ನೂ ಸೊಂಟದ ಮೇಲೆ ಚಲಿಸದಂತೆ ಇರಿಸಿದ್ದಾನೆ. ಹೊಸದಾದ ಗೊಲ್ಲರ ಕೋಲನ್ನು ಹೊಂದಿದ್ದಾನೆ. ಪಾದಕಮಲಗಳು ಅಡಗಿವೆ. ಹೀಗೆ ಚೆನ್ನಿಗನಾದ ವಿಟ್ಠಲರಾಯನು ಪ್ರಕಾಶಿಸಿದನು. ೨೧. ಮೈಗೆ ಹೊಸ ಮೋಡದ ಕಾಂತಿಯೂ, ಮುಖಕ್ಕೆ ಮಂದಹಾಸವೂ, ಎಡಗೈಗೆ ಶಂಖವೂ, ಸುಂದರವಾದ ಸೊಂಟಕ್ಕೆ ಎರಡು ಕೈಗಳೂ, ಪಾದಪಲ್ಲವಗಳೆರಡಕ್ಕೆ ಪ್ರಸಿದ್ಧವಾದ ಇಟ್ಟಿಗೆಯೂ ಶೋಭೆಯನ್ನೂ ಸೌಂದರ್ಯ ಸೌಭಾಗ್ಯವನ್ನೂ ನೀಡಿದುವು. ಈ ಎಲ್ಲ ರೀತಿಯ ಸಮುದಾಯ ಶೋಭೆಯಿಂದ ವಿಟ್ಠಲರಾಯನು ಪ್ರಕಾಶಿಸಿದನು. ವ॥ ಹಾಗಿದ್ದ ವಿಟ್ಠಲ ದೇವರನ್ನು ನೋಡಿ—

ಜಗತ್ತನ್ನು ಮೋಹಗೊಳಿಸುವ ಮೂರ್ತಿ ವಿಟ್ಠಲನೇ ಜಯಜಯಜಯ !
ಸುರರಿಗೂ ಅಸುರರಿಗೂ ಸ್ವಾಮಿಯಾದವನೇ ನಿನಗೆ ಜಯವಾಗಲಿ !
ಭಗವದ್ಭಕ್ತರ ಸ್ಥಿರವಾದ ಭಾಗ್ಯ ರೂಪಿಯೇ ನಿನಗೆ ಜಯವಾಗಲಿ !
ಪಾತಾಳದವರೆಗೆ ಹರಡಿದ ಪ್ರತಾಪವುಳ್ಳವನೇ ನಿನಗೆ ಜಯವಾಗಲಿ !

ಜಯ ಸತ್ಯಲೋಕಲಂಘಿತ ಸುಪಾದ ॥
ಜಯ ಸರ್ವಲೋಕ ಪರಿಪೂರ್ಣದೇಹ ।
ಜಯ ಗರ್ವಿತಾಸುರ ಮುಖಾಬ್ಜದಾಹ ॥
ಜಯ ಜನ್ಮದುರ್ಘಟ ಮಹಾಬ್ಧಿ ತೀರ ।
ಜಯ ಮನ್ಮಥಾದಿ ವಿಜಯೋಪಕಾರ ॥
ಜಯ ಪೂತನಾಪ್ರಬಲಜೀವಘಾತ ।
ಜಯ ದೂತದುಶ್ಶಕಟನಪ್ಪಭೂತ ॥
ಜಯ ವೃಕ್ಷರೂಪಯಮಳಾರ್ಜುನಾರಿ ।
ಜಯ ರಾಕ್ಷಸಪ್ರಕರಜನ್ಮವೈರಿ ॥
ಜಯ ನಂದಗೋಪಕುಲ ಕಲ್ಪವೃಕ್ಷ ।
ಜಯ ಚಂದ್ರಸೂರ್ಯರಂಜಿತನಿಜಾಕ್ಷ ॥
ಜಯ ಧೇನುವೃಂದ ನಿತ್ಯಪ್ರಸಾದ ।

ನಿತ್ಯವೂ ನಿರ್ಮಲವಾದ ಮುಖ ಪ್ರಸಾದವುಳ್ಳವನೇ ನಿನಗೆ ಜಯವಾಗಲಿ !
ಸತ್ಯಲೋಕದವರೆಗೆ ಪಾದವನ್ನು ಚಾಚಿದವನೇ ನಿನಗೆ ಜಯವಾಗಲಿ !
ಸರ್ವಲೋಕಗಳಲ್ಲಿ ಅಂತರ್ಯಾಮಿಯಾದವನೇ ನಿನಗೆ ಜಯವಾಗಲಿ !
ಕೊಬ್ಬಿದ ರಾಕ್ಷಸನ ಮುಖ ಕಮಲಗಳನ್ನು ಸುಟ್ಟವನೇ ನಿನಗೆ ಜಯವಾಗಲಿ !
ಜನನವೆಂಬ ದಾಟಲು ಕಷ್ಟಕರವಾದ ಮಹಾಸಮುದ್ರದ ದಡವೇ ನಿನಗೆ ಜಯವಾಗಲಿ !
ಮನ್ಮಥನೇ ಮೊದಲಾದವರಿಗೆ ವಿಜಯವನ್ನು ಕೊಟ್ಟು ಉಪಕರಿಸಿದವನೇ ನಿನಗೆ ಜಯವಾಗಲಿ !
ಪೂತನೆಯ ಪ್ರಬಲವಾದ ಜೀವವನ್ನು ತೆಗೆದವನೇ ನಿನಗೆ ಜಯವಾಗಲಿ !
ಕಂಸದೂತನಾದ ದುಷ್ಟಶಕಟಾಸುರನನ್ನು ಸಂಹರಿಸಿದವನೇ ನಿನಗೆ ಜಯವಾಗಲಿ !
ಮರದ ರೂಪ ಧರಿಸಿದ ಯಮಳಾರ್ಜುನರನ್ನು ಸಂಹರಿಸಿದವನೇ ನಿನಗೆ ಜಯವಾಗಲಿ !
ರಾಕ್ಷಸರ ಸಮೂಹಕ್ಕೆ ಜನ್ಮವೈರಿಯೇ ನಿನಗೆ ಜಯವಾಗಲಿ !
ನಂದಗೋಪನ ಕುಲಕ್ಕೆ ಕಲ್ಪವೃಕ್ಷವಾದವನೇ ನಿನಗೆ ಜಯವಾಗಲಿ !
ಚಂದ್ರ ಸೂರ್ಯರೇ ಕಂಗಳಾದವನೇ ನಿನಗೆ ಜಯವಾಗಲಿ !
ಹಸುಗಳ ಸಮೂಹಕ್ಕೆ ನಿತ್ಯವೂ ಅನುಗ್ರಹಿಸುವವನೇ ನಿನಗೆ ಜಯವಾಗಲಿ !
ವೇಣುಗಾನ ಪ್ರಿಯನೇ (ಹಾಡಾಗಿ ಹರಿದ ವೇಣುನಾದಕರನೇ) ನಿನಗೆ ಜಯವಾಗಲಿ !

ಜಯ ಗಾನನಿರ್ಗಳಿತ ವೇಣುನಾದ ॥
ಜಯ ಘೋರಕಾಳಿಯ ಭುಜಂಗಕಾಲ ।
ಜಯ ವೀರಕೇಶಿದುರ್ಹೃದಯಶೂಲ ॥
ಜಯ ಕಷ್ಟಕುಕ್ಕುಟ ಕೃತಾಂತನೀಡ ।
ಜಯ ದುಷ್ಟರಜಕದಾನವವಿಭಾಡ ॥
ಜಯ ಪಂಡರೀಪುರವರಪ್ರಮೋದ ।
ಜಯ ಪುಂಡರೀಕ ಮುನಿಪ್ರಸಾದ ॥
ಜಯ ಪಾಂಡವಪ್ರಕರ ಜೀವರೂಪ ।
ಜಯ ಪಾಂಡವಪ್ರಚುರರತ್ನದೀಪ ॥
ಜಯ ಭುಕ್ತಿ ಮುಕ್ತಿ ಫಲ ಸಿದ್ಧಿ ಕಾರ್ಯ ।
ಜಯ ಭಕ್ತವತ್ಸಲ ಸುರೇಂದ್ರಧೈರ್ಯ ॥
ಜಯ ರುಕ್ಮಿಣೀಮುಖ ಸರೋಜಭೃಂಗ ।
ಜಯ ರುಕ್ಮಿಣೀ ವಿಮಳ ಹೃದಯಸಂಗ ॥
ಜಯ ಪನ್ನಗೇಂದ್ರ ಕಮನೀಯತಲ್ಪ ।
ಜಯ ಚೆನ್ನ ವಿಟ್ಠಲ ಸುರದ್ರುಕಲ್ಪ ॥

ಘೋರವಾದ ಕಾಳಿಯ ಸರ್ಪಕ್ಕೆ ಮೃತ್ಯುಸ್ವರೂಪವೇ ನಿನಗೆ ಜಯವಾಗಲಿ !
ವೀರನಾದ ಕೇಶಿಯೆಂಬ ರಾಕ್ಷಸನ ದುಷ್ಟ ಹೃದಯಕ್ಕೆ ಶೂಲವಾದವನೇ ನಿನಗೆ ಜಯವಾಗಲಿ !
ಕಷ್ಟಕರವಾದ ಕುಕ್ಕುಟಾಸುರನಿಗೆ ಯಮ ನಿಲಯವಾದವನೇ ನಿನಗೆ ಜಯವಾಗಲಿ
ದುಷ್ಟನಾದ ರಜಕ (ಅಗಸ) ರೂಪಿಯ ದಾನವನನ್ನು ಸಂಹರಿಸಿದವನೇ ನಿನಗೆ ಜಯವಾಗಲಿ !
ಪಂಡರೀಪುರದ ಶ್ರೇಷ್ಠವಾದ ಆನಂದ ಸ್ವರೂಪನೇ ನಿನಗೆ ಜಯವಾಗಲಿ !
ಪುಂಡರೀಕಮುನಿಗೆ ಅನುಗ್ರಹ ಮಾಡಿದವನೇ ನಿನಗೆ ಜಯವಾಗಲಿ !
ಪಂಚಪಾಂಡವರಿಗೆ ಜೀವರೂಪಿಯಾದವನೇ ನಿನಗೆ ಜಯವಾಗಲಿ !
ಪಾಂಡವರಿಗೆ ಪ್ರಕಾಶಮಾನವಾದ ರತ್ನದ ದೀವಿಗೆಯಾದವನೇ ನಿನಗೆ ಜಯವಾಗಲಿ !
ಭುಕ್ತಿ ಮುಕ್ತಿಗಳೆಂಬ ಫಲ ಸಿದ್ಧಿ ಸ್ವರೂಪನೇ ನಿನಗೆ ಜಯವಾಗಲಿ !
ಭಕ್ತರಲ್ಲಿ ಪ್ರೀತಿಯುಳ್ಳ ಸುರೇಂದ್ರನಿಗೆ ಧೈರ್ಯ ಕೊಡುವವನೇ ನಿನಗೆ ಜಯವಾಗಲಿ !
ರುಕ್ಮಿಣಿಯ ಮುಖವೆಂಬ ಕಮಲದಲ್ಲಿ ದುಂಬಿಯಾದವನೇ ನಿನಗೆ ಜಯವಾಗಲಿ !
ಆದಿಶೇಷನೆಂಬ ಸುಂದರವಾದ ಹಾಸಿಗೆಯುಳ್ಳವನೇ ನಿನಗೆ ಜಯವಾಗಲೀ !
ಕಲ್ಪವೃಕ್ಷಕ್ಕೆ ಸಮವಾದ ಸುಂದರನಾದ ವಿಟ್ಠಲನೇ ನಿನಗೆ ಜಯವಾಗಲಿ !

## ವಿಟ್ಠಲಾಷ್ಟಕಂ

ಶ್ರೀಗೆ ನಿರಂತರಂ ಬಯಸಿ ದುರ್ಜನರಂ ಸಲೆ ಸೇವೆಗೆಯ್ದು ಬೆ
ಳ್ಕಾಗಿ ದುರಾಸೆಯಿಂದಿಹಪರಕ್ಕತಿನಿಂದಿತನಾಗಿ ತೀವ್ರ ದೈ
ನ್ಯಾಗಮುಮಂ ಕಟಲ್ಚಿ ನಿಜಪಾದಪಯೋರುಹಭಕ್ತಿಭಾಗ್ಯ ಸಂ
ಯೋಗದೊಳಿರ್ಪ ಚಿತ್ತಮನಲಂಪಿನೊಳೀವುದಭಂಗವಿಟ್ಠಲಾ ೧

ಸಿರಿ ದೊರಕಲ್ಕೆ ಮೆಯ್ಮರೆದು ಗರ್ವಿಸಿ ಮತ್ತೆ ದರಿದ್ರನಾಗಲೆ
ಲ್ಲರ ಮನೆಗಳ್ಗೆ ಮಾಣದೆಡೆಯಾಡಿ ನಿವಾರಿಸಿಕೊಂಡು ಸುಯ್ದು ಕಾ
ತರಿಸುವ ದುರ್ವಿವೇಕಗುಣಮಂ ಬೇಗೆ ಮಾಣಿಸಿ ನಿನ್ನ ಭಕ್ತಿಯೊಳ್
ಪರಿಣತಮಪ್ಪ ಬುದ್ಧಿಯುನಲಂಪಿನೊಳೀವುದಭಂಗವಿಟ್ಠಲಾ ೨

ನಿಜಗುಣನಾಮಮಂ ಭುವನಮೋಹನಮಂಗಳ ಮೂರ್ತಿಯಂದಮಂ
ಭಜಿಸುವೆನೆಂಬ ಪೊಟ್ತು ಧನಪುತ್ರಕಳತ್ರ ನಿವಾಸಚಿಂತೆಯೆಂ
ಬಜಗರಮೆಯ್ದು ನುಂಗಿ ನೆರೆ ದುರ್ಗತಿಗಿಕ್ಕುವುದಂ ಖಗೇಶ್ವರ
ಧ್ವಜ ಪೆಜಗಿಕ್ಕಿ ನಿನ್ನಧಿಕಭಕ್ತಿಯನೀವುದಭಂಗವಿಟ್ಠಲಾ ೩

ಪೊಡವಿಯೊಳೊರ್ಮೆ ದೈವವಶದಿಂ ಬೇಗೆ ಮಾನುಷ ಜನ್ಮಮಪ್ಪುದಾ
ದೊಡೆ ನಿಜದೈವಮಂ ಭಜಿಸಲೊಲ್ಲದೆ ದುರ್ಜನರಂ ಪೊಗಟ್ದು ಬೆಂ
ದೊಡಲನನಾರತಂ ಪೊರೆವೆನೆಂಬ ದುರಾಸೆಯನೊಕ್ಕು ನಿನ್ನ ಮೆ
ಲ್ಲಡಿಗಳನಾವಗಂ ಭಜಿಪ ಬುದ್ಧಿಯನೀವುದಭಂಗವಿಟ್ಠಲಾ ೪

೧. ನಾನು ಎಡೆಬಿಡದೆ ಹಣಕ್ಕೆ ಆಸೆಪಟ್ಟೆನು. ದುರ್ಜನರ ಸೇವೆಮಾಡಿದೆನು. ದಡ್ಡನಾಗಿ ದುರಾಸೆಯಿಂದ ಇಹಪರಗಳಿಗೆ ನಿಂದ್ಯನಾದೆನು. ಇಹಲೋಕ ಪರಲೋಕಗಳ ಸುಖವಿಲ್ಲವಾಯಿತು. ತೀವ್ರವಾದ ದೈನ್ಯಭಾವವನ್ನು ಹೋಗಲಾಡಿಸಿ, ಅಭಂಗ ವಿಟ್ಠಲ, ಹೇ ನಿನ್ನ ಪಾದಕಮಲಗಳಲ್ಲಿ ಭಕ್ತಿಯುಳ್ಳ ಮನಸ್ಸನ್ನು ಅನುಗ್ರಹಿಸು. ೨. ಅಭಂಗವಿಟ್ಠಲನೇ, ಮನುಷ್ಯನು ಸಿರಿಬಂದಾಗ ಮೈಮರೆತು ಗರ್ವಿತನಾಗುತ್ತಾನೆ. ಮತ್ತೆ ಬಡವನಾದ ಕೂಡಲೆ ಎಲ್ಲರ ಮನೆಗಳಿಗೂ ತಿರುಗಿ ಅಲೆದು ಹಸಿವನ್ನು ಹೋಗಲಾಡಿಸಿಕೊಳ್ಳುತ್ತಾನೆ. ನಿಟ್ಟುಸಿರೆಳೆದು ಕಾತರಿಸುತ್ತಾನೆ. ಇಂಥ ದುರ್ವಿವೇಕ ಗುಣವನ್ನು ಹೋಗಲಾಡಿಸಿ ನಿನ್ನ ಭಕ್ತಿಯಲ್ಲಿ ಪರಿಪಕ್ವವಾದಂಥ ಬುದ್ಧಿಯನ್ನು ಕೊಡು. ೩. ಗರುಡಧ್ವಜನಾದ ಅಭಂಗವಿಟ್ಠಲನೇ, ನಿನ್ನ ಗುಣಗಳಿಂದ ತುಂಬಿದ ನಾಮವನ್ನೂ, ಭುವನಮೋಹನ ಮಂಗಳಮೂರ್ತಿಯ ಚೆಲುವನ್ನೂ ಭಜಿಸುವೆನು—ಎಂದು ಯೋಚಿಸುವಾಗ ಹಣ ಮಗ ಹೆಂಡತಿ ಮನೆ ಇವುಗಳ ಚಿಂತೆಯೆಂಬ ಹೆಬ್ಬಾವು ಆ ಚಿಂತೆಯನ್ನು ನುಂಗಿ ದುರ್ಗತಿಗೆ ತಳ್ಳುತ್ತದೆ. ಇದನ್ನು ತಪ್ಪಿಸಿ ನಿನ್ನಲ್ಲಿ ಅಧಿಕವಾದ ಭಕ್ತಿಯನ್ನು ಕೊಡು. ೪. ಭೂಮಿಯಲ್ಲಿ ಒಮ್ಮೆ ದೈವವಶದಿಂದ ಶ್ರೇಷ್ಠವಾದ ಮನುಷ್ಯ ಜನ್ಮವು ಬರುತ್ತದೆ. ಆದುದರಿಂದ ದೇವರನ್ನು ಭಜಿಸದೆ ದುಷ್ಟಜನರನ್ನು ಹೊಗಳಿ ಸುಟ್ಟ ಈ ಶರೀರವನ್ನು ಪೊರೆಯುವೆನು ಎಂಬ ದುರಾಸೆಯನ್ನು

ಪೆಱರ ಗುಣಾಗುಣಂಗಳನನೇಕವಿಧಂ ಪೞಿಯಲ್ ನಿಮಿರ್ವುದ
ಚ್ಚರಿಯೆನೆ ಜಿಹ್ವೆಯಾತ್ಮಗುಣಮಂ ಪೊಗೞಲ್ ಮಿಗಿಲಪ್ಪುದಂಬುಜೋ
ದರ ನಿಜನಾಮಮಂ ಭಜಿಸಲೊಲ್ಲದದರ್ಕೆ ಸುಬುದ್ಧಿವೇೞ್ದು ನಿ
ನ್ನುರುತರನಾಮಮಂ ಭಜಿಪ ಚಿತ್ತಮನೀವುದಭಂಗ ವಿಟ್ಠಲಾ ೫

ಹಿತಮಹಿತಂಗಳೆಂಬೆರಡಱೊಳ್ ತಿಳಿವಿಲ್ಲದೆ ದೈವನಿಂದೆಯುಂ
ಶ್ರುತಿಮತಹಾಸ್ಯಮುಂ ಸಮಯಭೇದಮನಗ್ಗಳಮಾಗೆ ಮಾಡಿ ದು
ರ್ಗತಿಗಳವಪ್ಪ ಮನ್ಮತಿಗೆ ಸತ್ಪಥಮಂ ಮಿಗೆ ತೋಱಿಯಿಂದಿರಾ
ಪತಿ ಭವದೀಯಭಕ್ತಿಯನಲಂಪಿನೊಳೀವುದಭಂಗವಿಟ್ಠಲಾ ೬

ಮಾನವಭೋಗಭೂಮಿಯೊಳನಂತಸುಖಕ್ಕೆ ಮದೀಯ ದೇಹಮಂ
ನೀನೊಲವಿಂದೆ ಪುಟ್ಟಿಸಿ ಮಗುೞ್ದದಱಲ್ಲಿ ಗುಣಾಗುಣಂಗಳಂ
ದಾನವವೈರಿ ಭಾವಿಪುದು ನೀತಿಯೆ ಮತ್ತನಿಮಿಂಗೆ ಸೌಖ್ಯಸಂ
ತಾನಮನಿತ್ತು ನಿನ್ನ ದಯೆಯಿಂ ಪರಿರಕ್ಷಿಸಭಂಗವಿಟ್ಠಲಾ ೭

ಎನಿತು ದಿನಂ ಬದುರ್ಕುವನಿತುಂ ದಿನಮೆನ್ನ ಶರೀರ ಭೋಗ ಚಿಂ
ತನೆಯನತೀವಪೂಜ್ಯಮೆನೆ ಮಾಡಿ ಬೞಿಕ್ಕವಸಾನಕಾಲದೊಳ್
ನವರತಿಮೋಹದಿಂ ಚಲಿಸದಂತು ನಿಜಾಂಘ್ರಿನಿವಾಸದಲ್ಲಿ ನೆ
ಟ್ಟನೆ ನೆಲಸಿರ್ಪ ಬಲ್ಪಗೆಯನೀವುದು ಬೇೞ್ಪೆನಭಂಗವಿಟ್ಠಲಾ ೮

ತೊರೆದು ನಿನ್ನ ಮೆಲ್ಲಡಿಗಳನ್ನು ಭಜಿಸುವ ಬುದ್ಧಿಯನ್ನು, ಅಭಂಗವಿಟ್ಠಲನೇ, ಕೊಡು ೫. ಅಭಂಗವಿಟ್ಠಲನೇ ! ಬೇರೆಯವರ ಗುಣಾವಗುಣಗಳನ್ನು ಅನೇಕ ವಿಧವಾಗಿ ಹಳಿಯಲು ನಾಲಿಗೆಯು ಉದ್ದವಾಗುತ್ತದೆ. ಆಶ್ಚರ್ಯ ! ತನ್ನ ಗುಣಗಳನ್ನು ಹೊಗಳಿಕೊಳ್ಳಲು ಮತ್ತೂ ಉದ್ದವಾಗುತ್ತದೆ. ಆದರೆ ಕಮಲನಾಭನಾದ ನಿನ್ನ ನಾಮಗಳನ್ನು ಭಜಿಸಲಾರದು. ಅದಕ್ಕೆ ಬುದ್ಧಿ ಹೇಳಿ ನಿನ್ನ ಶ್ರೇಷ್ಠವಾದ ನಾಮವನ್ನು ಭಜಿಸುವ ಬುದ್ಧಿಯನ್ನು ಕೊಡು. ೬. ಇದು ಹಿತ ಇದು ಅಹಿತ ಎಂಬ ತಿಳಿವಳಿಕೆಯಿಲ್ಲದೆ ದೈವವನ್ನು ನಿಂದಿಸುವುದು. ವೇದಮತವನ್ನು ಹಾಸ್ಯಮಾಡುವುದು. ಸಿದ್ಧಾಂತಗಳಲ್ಲಿ ಭೇದವನ್ನು ಹೆಚ್ಚುಮಾಡುವುದು ಇವುಗಳಿಂದ ನನ್ನ ಮತಿಯು ದುರ್ಗತಿಗೆ ಇಳಿದಿದೆ. ಇಂದಿರಾಪತಿಯಾದ ಅಭಂಗವಿಟ್ಠಲನೇ ನನ್ನ ಬುದ್ಧಿಗೆ ಒಳ್ಳೆಯ ದಾರಿಯನ್ನು ತೋರಿಸಿ ನಿನ್ನಲ್ಲಿ ಅತಿಶಯವಾದ ಭಕ್ತಿಯನ್ನು ಕೊಡು. ೭. ಮಾನವರು ಭೋಗಭೂಮಿಯಲ್ಲಿ ಅನಂತ ಸುಖವನ್ನು ಅನುಭವಿಸುವುದಕ್ಕಾಗಿ ಈ ನನ್ನ ದೇಹವನ್ನು ಸೃಷ್ಟಿಸಿದೆ. ದಾನವ ವೈರಿ, ಮತ್ತೆ ಅದರಲ್ಲಿ ಗುಣಾವಗುಣಗಳನ್ನು ಹುಡುಕುವುದು ನೀತಿಯೇ? ೮. ಅಭಂಗವಿಟ್ಠಲನೆ! ನೀನು ಅನೇಕ ಸೌಖ್ಯಗಳನ್ನು ಕೊಟ್ಟು ದಯೆಯಿಂದ ಕಾಪಾಡು ಅಭಂಗವಿಟ್ಠಲನೇ ! ಬದುಕಿರುವಷ್ಟು ದಿನ ನನ್ನ ಶರೀರದ ಸುಖದ ಚಿಂತನೆಯನ್ನು ಯೋಗ್ಯವಾದ ರೀತಿಯಲ್ಲಿ ಮಾಡುವಂತಾಗಬೇಕು. ಬಳಿಕ ಅವಸಾನ ಕಾಲದಲ್ಲಿ ನೂತನವಾದ ಆನಂದದಿಂದ ಮೋಹಗೊಂಡು ಚಲಿಸದ ಹಾಗೆಮಾಡಿ ನನ್ನ ಮನಸ್ಸನ್ನು ನಿನ್ನ ಪಾದಗಳಲ್ಲಿ ನೇರವಾಗಿ

ವ॥ ಎಂದು ಮನೋರಥಸಿದ್ಧಿಯಂ ಪಡೆಯಲೆಂದಾನಭಿಷ್ಟುತಿಗೆಯ್ದನಂತರಂ

ಹೃದಯ ಸರೋಜದೊಳ್ ಸಲಿದು ವಿಟ್ಠಲರಾಯನ ಮೂರ್ತಿಲಕ್ಷ್ಮಿಯಂ
ಪದುಳದೊಳಿಟ್ಟು ನಾಮಬಲದಿಂದಘಕೋಟಿಯನೆಯ್ದೆ ಗೆಲ್ದು ಪೆ
ರ್ಚಿದ ಸುಖರಾಜ್ಯಮಂ ಪಡೆದು ವೈಷ್ಣವಬಂಧು ಸಮೂಹ ಸಂಗದಿಂ
ಸದಮಳಬೋಧೆಯಂ ತಿಳಿದು ಸತ್ಪಥಮಂ ಮಿಗೆ ಕಂಡೆನುರ್ವಿಪಾ ೯

ವ॥ ಬಳಿಯಂ

ಜೀಯ ನಿಜಾಂಘ್ರಿಯನಱಸ
ಲ್ಕಾಯೆಡೆಯಿಂದಂ ತೆರಳ್ದು ಪೋಪಾಗಳ್ ಕಂ
ಜಾಯಿತಸುಪುಣ್ಯವೃಕ್ಷನಿ
ಕಾಯಂ ತೀವಿರ್ದರಣ್ಯಮಂ ಮಿಗೆ ಕಂಡೆಂ ೧೦

ಫಲಮೆಸೆದಿರ್ದ ಮಾಮರನಮಳ್ಳಿರೊಪ್ಪುವ ಶಾಖೆ ಪುಷ್ಪಸಂ
ಕುಲಮಲರ್ದಿರ್ದ ಸಂಪಗೆ ಮುಗುಳ್ಗಳನಾಂತದಿಮುಕ್ತೆ ನವ್ಯಶೀ
ತಲಧವಲಾಂಗಮುಳ್ಳಲರ್ದ ಪಾದರಿ ಕಂಪಿನ ನುಣ್ಪುವೆತ್ತ ಕೋ
ಮಲಸುರಪರ್ಣಿಕಾವಿತತಿ ರಂಜಿಪರಣ್ಯಮನೆಯ್ದಿದೆಂ ನೃಪಾ ೧೧

ವ॥ ಅಂತೆಯ್ದಲಲ್ಲಿ

ನೆಲಸುವಂತೆ ಅನುಗ್ರಹಿಸು. ವ॥ ಹೀಗೆ ಮನೋರಥ ಸಿದ್ಧಿಗಾಗಿ ನಾನು ನಾಮ ಸ್ತೋತ್ರ ಮಾಡಿದೆನು. ಅನಂತರ ೯. ಮಹಾರಾಜ ರಾಜವಾಹನನೆ, ಹೃದಯ ಕಮಲದಲ್ಲಿ ವಿಟ್ಠಲರಾಯನ ಮೂರ್ತಿ ಲಕ್ಷ್ಮಿಯನ್ನು ನಲಿದು ಭದ್ರವಾಗಿ ಇಟ್ಟುಕೊಂಡೆನು. ಅವನ ನಾಮದ ಬಲದಿಂದ ಪಾಪಕೋಟಿಯನ್ನು ಪೂರ್ಣವಾಗಿ ಸೋಲಿಸಿದೆನು. ಅತಿ ಶಯವಾದ ಸುಖರಾಜ್ಯವನ್ನು ಪಡೆದು ವೈಷ್ಣವ ಬಂಧುಗಳ ಸಂಗದಿಂದ ಅಮಲ ಜ್ಞಾನ ವನ್ನು ಪಡೆದು, ಸನ್ಮಾರ್ಗವನ್ನು ತಿಳಿದೆನು, ವ॥ ಬಳಿಕ, ೧೦. ಒಡೆಯನೆ! ನಿಮ್ಮ ಚರಣಗಳನ್ನು ಹುಡುಕುವ ಸಲುವಾಗಿ ಅಲ್ಲಿಂದ ಹೊರಟೆನು. ಆಗ ಎಲ್ಲೆಲ್ಲೂ ಪೊದರು ಗಳು ಹರಡಿದ ಅನೇಕ ಪುಣ್ಯವೃಕ್ಷಗಳು ತುಂಬಿದ ಒಂದು ಕಾಡನ್ನು ಕಂಡೆನು. ೧೧. ಹಣ್ಣುಗಳು ತುಂಬಿದ ಮಾವಿನಮರ, ಸುಂದರವಾಗಿರುವ ಚಿಗುರುಗಳಿಂದ ಹೊಳೆಯುವ ಕೊಂಬೆ, ತುಂಬ ಹೂಗಳರಳಿದ ಸಂಪಗೆಮರ, ಮೊಗ್ಗುಗಳು ಬಿಟ್ಟ ವಾಸಂತೀ ಲತೆ, ಹೊಸ ಬಗೆಯ ತಂಪಾದ ಬಿಳುಪಾದ ಆಕಾರವುಳ್ಳ ಹೂವರಳಿದ ಪಾದರಿಗಿಡ, ಪರಿಮಳ ವುಳ್ಳ ನುಣುಪಾದ ಮೃದುವಾದ ಸುರಹೊನ್ನೆ ಮರಗಳ ಸಮೂಹ, ಇವುಗಳಿಂದ "ಮಹಾರಾಜನೆ" ರಂಜಿಸುತ್ತಿದ್ದ ಅರಣ್ಯವನ್ನು ಹೊಕ್ಕೆನು. ವ॥ ಹೋಗಲು ಅಲ್ಲಿ,

ಜಿತಸಂವರ್ಧಿತತಾಪಮಂ ಘನಪಿಪಾಸಾಲೋಪಮಂ ತೀರ್ಥಸಂ
ತತಿ ಸಂಕ್ಷೇಪಮನುರ್ವಿಸಂಕುಲಲಸತ್ಸಂವೇ ಪಮಂ ಭೀಕರಾ
ಕೃತಿ ಘೋರಾಂಬುಚರಾವಲೀಃಪಮುಮನೂನದ್ವೀಪಮಂ ಪಕ್ಷಿ ಸಂ
ತತಿ ಸಲ್ಲಾಪಮನೊಲ್ದು ಕಂಡೆನೆನಸುಂ ಸದ್ರೂಪಮಂ ಕೂಪಮಂ ೧೨

ವ॥ ಅದಲ್ಲದೆಯುಂ

ತ್ರಿದಶಾಂಗನೆಯರ್ ಪನ್ನಗ
ಸುದತಿಯರಂ ನೋಡಲಿೞಿವ ಪಾತಾಳನಿವಾ
ಸದ ಬಟ್ಟೆಯಂತೆ ಪೊಱೆದಿ
ರ್ದುದು ಕೂಪಂ ಸಲಿಲದೇವತಾ ನಿಜರೂಪಂ ೧೩

ಆ ಕೂಪದ ತಡಿಯೊಳ್ ಸೌ
ಮ್ಯಾಕಾರಂ ಸೂರ್ಯಸನ್ನಿಭಂ ಕುಳ್ಳಿರ್ದಂ
ಕೋಕನದಷಂಡತಟದೊಳ್
ತೊಳಗುವ ಹಂಸನಂತಿರೊರ್ಬ ಕುಮಾರಂ ೧೪

ಆತನ ಕೆಲದೊಳ್ ದೀರ್ಘಮ
ಹಾತನು ನಿಶ್ಶಂಕಚಿತ್ತನಧಿಕಬಲಂ ಸಂ
ಪ್ರೀತಿಯಿನಿರ್ದಂ ನೀತಿ ಕ
ಳಾತತಿ ಸನ್ಮೂರ್ತಿವಡೆದವೋಲ್ ಮತ್ತೊರ್ಬಂ ೧೫

೧೨. ಒಂದು ಸುಂದರವಾದ ಭಾವಿಯನ್ನು ನೋಡಿದೆನು. ಅದು ಮಿತಿ ಮೀರಿದ ತಾಪವನ್ನು ಹೋಗಲಾಡಿಸುತ್ತದೆ. ಹೆಚ್ಚಿದ ಬಾಯಾರಿಕೆಯನ್ನು ನಾಶಮಾಡುತ್ತದೆ. ಎಲ್ಲ ತೀರ್ಥಗಳೂ ಅದರಲ್ಲಿ ಸೇರಿವೆ. ಲೋಕಗಳಿಗೆಲ್ಲ ನಡುಕವುಂಟುಮಾಡುತ್ತದೆ. ಭಯಂಕರವಾದ ಆಕಾರವುಳ್ಳ ಘೋರವಾದ ಜಲಜಂತುಗಳಿಗೆ ಗರ್ವವನ್ನುಂಟು ಮಾಡುತ್ತದೆ. ಶ್ರೇಷ್ಠವಾದ ದ್ವೀಪವು ಅದರ ಮಧ್ಯದಲ್ಲಿದೆ. ಅಲ್ಲಿ ಪಕ್ಷಿಗಳ ಸಮೂಹವು ಶಬ್ದ ಮಾಡುತ್ತಿದೆ. ವ॥ ಅದೂ ಅಲ್ಲದೆ— ೧೩. ದೇವಾಂಗನೆಯರು ನಾಗಾಂಗನೆಯರನ್ನು ನೋಡುವುದಕ್ಕಾಗಿ ಇಳಿಯುವ ಪಾತಾಳ ಲೋಕದ ದಾರಿಯಂತೆ ಆ ಭಾವಿಯು ಪ್ರಕಾಶಿಸಿತು. ಮತ್ತು ಅದು ನಿಜರೂಪವನ್ನು ಧರಿಸಿದ ಜಲದೇವತೆಯಂತೆ ಕಂಗೊಳಿಸಿತು. ೧೪. ಆ ಭಾವಿಯ ದಡದಲ್ಲಿ ಒಬ್ಬ ಕುಮಾರನು ಕುಳಿತಿದ್ದನು. ಅವನ ಆಕಾರವು ಸೌಮ್ಯವಾಗಿದ್ದಿತು. ಸೂರ್ಯನ ಹಾಗೆ ಪ್ರಕಾಶಿಸುತ್ತಿದ್ದನು. ಕಮಲದ ಹೂಗಳ ನಡುವೆ ತೂಕಡಿಸುತ್ತಿದ್ದ ಹಂಸದಂತೆ ಕಂಡನು. ೧೫. ಅವನ ಪಕ್ಕದಲ್ಲಿ ಮತ್ತೊಬ್ಬನು ಕುಳಿತಿದ್ದನು. ಅವನು ಎತ್ತರವಾಗಿದ್ದನು. ಮನಸ್ಸಿನಲ್ಲಿ ಭಯವಿರಲಿಲ್ಲ. ಅಧಿಕ ಬಲಶಾಲಿಯಾಗಿದ್ದನು. ಸಂತೋಷದಿಂದ ಕೂಡಿದ್ದನು.

ವ॥ ಅಂತವರಿರ್ಬರುಂ ಕಂಡುನಾಂಬಾವಿಯ ತಡಿಗೆ ಪೋಗಿ

ನಯನದಿನೀಂಟುವಂತೆ ತಡಿಯೊಳ್ ಮಿಗೆ ನಿಂದು ಕುನುಂಗಿ ಕೂಪವಾ
ರಿಯುಂ ಮಿಗೆ ನೋಡಿ ನೀರ್ವೊಗೆವುಪಾಯಮನಾಂ ಮಿಗೆ ಕಂಡದೊಂದು ಬ
ಳ್ಳಿಯ ಕಡೆಯಲ್ಲಿ ಪೆರ್ಬಿದಿರ ನಾಳಿಯನಾರ್ಪಿನೆ ಕಟ್ಟಿ ಮೆಲ್ಲನ
ಲ್ಲಿಯ ಲಲಿತಾಂಬುವಂ ಪದೆದು ಸೇಂದಿದೆನಾಗಳಿಳಾಧಿನಾಯಕಾ ೧೬

ವ॥ ಅಂತು ಸೇಂದಿ

ಕರಚರಣಾದ್ಯವಯವಮಂ
ಭರವಶದಿಂ ಕರ್ಚಿ ಮಿಕ್ಕ ಶೀತಾಂಬುವನಾ
ದರದಿಂದೀಂಟಿ ಬಳಿಕ್ಕಂ
ಪರಿಹರಿಸಿದೆನಧ್ವಖೇದಮಂ ನೃಪತಿಲಕಾ ೧೭

ವ॥ ಅಂತು ಬಳಲ್ಕೆಯಂ ಪಿಂಗಿಸಿಯಾ ಕುಮಾರನ ಕೆಲದೊಳಿರ್ದಾತನ ಮೊಗಮಂ ನೋಡಿ ನೀನೆತ್ತಣವನೆಂದಾಂ ಕೇಳಲಾತನಿಂತೆಂದಂ

ಕೇಳೆಲೆ ಜೀವದಯಾಪರ
ಭೂಲೋಕ ವಿಳಾಸಮಖಿಳವಿದ್ಯಾವಾಸಂ
ಶ್ರೀಲಲನಾಜನ್ಮಗೃಹಂ
ಲೀಲೆಯೊಳೆ ವಿದರ್ಭದೇಶಮತಿರಮಣೀಯಂ ೧೮

ನೀತಿಯ ಕಲಿಯೇ ಆಕಾರವನ್ನು ತಳೆದಂತೆ ಕಾಣಿಸುತ್ತಿದ್ದನು. ವ॥ ಅವರಿಬ್ಬರನ್ನೂ ನೋಡಿ ನಾನು ಭಾವಿಯ ದಡಕ್ಕೆ ಹೋದೆನು— ೧೬. ರಾಜವಾಹನ ಮಹಾರಾಜನೇ ! ಕಣ್ಣುಗಳಿಂದಲೇ ಕುಡಿದು ಬಿಡುವಂತೆ ಬಾವಿಯ ದಡದಲ್ಲಿ ನಿಂತು ಬಗ್ಗಿ ನೀರನ್ನು ನೋಡಿದೆನು. ನೀರನ್ನು ಪಡೆಯುವ ಉಪಾಯವನ್ನು ಆಲೋಚಿಸಿದೆನು. ಪಕ್ಕದಲ್ಲಿಯೇ ಇದ್ದ ಒಂದು ಬಳ್ಳಿಯ ತುದಿಗೆ ಒಂದು ಬಿದಿರಿನ ನಾಳವನ್ನು ಕಟ್ಟಿ ಮೆಲ್ಲಗೆ ಕೆಳಕ್ಕೆ ಇಳಿಸಿ ಭಾವಿಯಲ್ಲಿದ್ದ ಸಿಹಿ ನೀರನ್ನು ಮೇಲಕ್ಕೆ ಸೇದಿದೆನು. ವ॥ ಹಾಗೆ ಸೇದಿ- ೧೭. ರಾಜಶ್ರೇಷ್ಠನೇ ! ಆ ನೀರಿನಿಂದ ಮೊದಲು ಕೈಕಾಲುಗಳೇ ಮೊದಲಾದ ಅವಯವಗಳನ್ನೆಲ್ಲ ಚೆನ್ನಾಗಿ ತೊಳೆದುಕೊಂಡನು. ಬಳಿಕ ಉಳಿದ ತಣ್ಣೀರನ್ನು ಕುಡಿದೆನು. ಅನಂತರ ದಾರಿ ನಡೆದ ಆಯಾಸವನ್ನು ಹೋಗಲಾಡಿಸಿಕೊಂಡೆನು. ವ॥ ಆಯಾಸಪರಿಹಾರ ಮಾಡಿಕೊಂಡು ಆ ಕುಮಾರನ ಪಕ್ಕದಲ್ಲಿದ್ದವನ ಮುಖವನ್ನು ನೋಡಿ 'ನೀನೆಲ್ಲಿಯವನು? ಎಂದು ಕೇಳಿದೆನು. ಅವನು ಹೀಗೆ ಉತ್ತರಿಸಿದನು. ೧೮. "ಜೀವದಯಾಪರನೇ ! ಕೇಳು, ಅತಿರಮಣೀಯವಾದ ವಿದರ್ಭವೆಂಬ ದೇಶವೊಂದಿದೆ. ಅದು ಭೂಲೋಕದ ವಿಲಾಸ. ಅಖಿಳವಿದ್ಯೆಗಳಿಗೆ ವಾಸಸ್ಥಾನ. ಶ್ರೀಲಲನೆಯ

ದೇಶಂ ಸೌಖ್ಯಪ್ರದೇಶಂ ಸಕಲಸುಕೃತಕೋಶಂ ಪವಿತ್ರೈಕಪಂಚ
ಕ್ರೋಶಂ ನಿತ್ಯಪ್ರಕಾಶಂ ದುರಿತನಿಕರಪಾಶಂ ವಿಶಾಲಪ್ರಬುದ್ಧಾ
ಕಾಶಂ ಸ್ತೋತ್ರಪ್ರದೇಶಂ ಮದನಕದನದೇಶಂ ಜಗನ್ಮಾತೃಕಾಸ
ದ್ವಾಸಂ ತಾನೆಂಬ ಪೆಂಪಂ ತಳೆದು ಮೆಱೆವುದಾನೇವೊಗಟ್ವೆಂ ನಿತಾಂತಂ ೧೯

ಅಂತಾವಿದರ್ಭದೊಳ್ ಜನ
ಸಂತತಿಗಾನಂದಮಂ ನಿರಂತರಮೀಯಲ್
ಕಂತುವಿನ ನಗರಿಯಂತೆ ನಿ
ತಾಂತಂ ರಂಜಿಪುದು ನೋಡೆ ಧಾರಾನಗರಂ ೨೦

ನರರೆಲ್ಲರ್ ಚದುರರ್ ವಿಳಾಸಿನಿಯರೆಲ್ಲರ್ ಪ್ರೌಢೆಯರ್ ವಾಕ್ಯದ
ಚ್ಚರಿಯೆಲ್ಲಂ ಸ್ಮರಶಾಸ್ತ್ರದೋಜೆ ದಿನಮೆಲ್ಲಂ ಕಾಮಪರ್ವಂ ಸರೋ
ವರಮೆಲ್ಲಂ ಜಲಕೇಳಿಯಿಕ್ಕೆ ವನಮೆಲ್ಲಂ ಕಂತುಗೇಹಂ ಫಲೋ
ತ್ಕರಮೆಲ್ಲಂ ರಸವತ್ಫಲಂ ನಿಜಮೆನಲ್ ತತ್ಪತ್ತನಂ ರಂಜಿಕುಂ ೨೧

ಹುಟ್ಟಿದಮನೆ ೧೯. ಆ ದೇಶವು ಸೌಖ್ಯಪ್ರದೇಶವು. ಅದು ಸಕಲ ಪುಣ್ಯಗಳ ಭಂಡಾರ. ಪವಿತ್ರವಾದದ್ದು. ಇಲ್ಲಿಗೆ ಐದು ಹರದಾರಿ ದೂರದಲ್ಲಿದೆ. ನಿತ್ಯವೂ ಪ್ರಕಾಶಿಸುವುದು. ಪಾಪ ಸಮೂಹವನ್ನು ನಾಶಮಾಡುವುದು. ಅಲ್ಲಿಯ ಆಕಾಶವು ವಿಶಾಲವೂ ಪ್ರಕಾಶಮಾನವೂ ಆಗಿದೆ. ಹೊಗಳುವಂಥ ಪ್ರದೇಶ. (ಅಲ್ಲಿ ಯಾವಾಗಲೂ ಮದನ ಕಲಹವಿರುತ್ತದೆ.) ಪ್ರಣಯಿಗಳು ಆನಂದದಿಂದ ಮದನಕಲಹವನ್ನು ಜರುಗಿಸುತ್ತಾರೆ. ಅದು ಜಗನ್ಮಾತೆಯ ವಾಸಸ್ಥಾನವಾಗಿದೆ. ಇಂಥ ಒಂದು ಮಹಿಮೆಯಿಂದ ಆ ದೇಶವು ಮೆರೆಯುತ್ತದೆ. ಅದನ್ನು ನಾನು ಪೂರ್ಣವಾಗಿ ಹೊಗಳಲಾರೆನು. ೨೦. ಆ ವಿದರ್ಭ ದೇಶದಲ್ಲಿ ಧಾರಾನಗರವೆಂಬ ನಗರಿಯೊಂದು ರಂಜಿಸುತ್ತದೆ. ಅದು ಎಡೆಬಿಡದೆ ಜನ ಸಮೂಹಕ್ಕೆ ಆನಂದವನ್ನುಂಟುಮಾಡುತ್ತದೆ. ಅದು ಮನ್ಮಥನ ನಗರಿಯಂತೆ ಪ್ರಕಾಶಿಸುತ್ತದೆ. ೨೧. ಆಧಾರಾನಗರದ ಜನರೆಲ್ಲರೂ ಚದುರರು. ನಾರಿಯರೆಲ್ಲರೂ ಪ್ರೌಢೆಯರು. ಆಶ್ಚರ್ಯಕರವಾದ ಮಾತುಗಳಲ್ಲೆಲ್ಲಾ ಕಾಮಶಾಸ್ತ್ರದ ಪ್ರೌಢಿಮೆಯನ್ನು ಕಾಣಬಹುದು. ಇಡೀ ದಿವಸ ಅಲ್ಲಿ ಕಾಮನ ಹಬ್ಬ ಜರುಗುತ್ತದೆ. ಅಲ್ಲಿನ ಸರೋವರಗಳಲ್ಲೆಲ್ಲ ಯಾವಾಗಲೂ ಜಲಕ್ರೀಡೆಯು ನಡೆಯುತ್ತಿರುತ್ತದೆ. ಅಲ್ಲಿನ ವನವೆಲ್ಲ ಕಾಮ ಮಂದಿರ. ವನದಲ್ಲಿ ಯಾವಾಗಲೂ ಪ್ರಣಯಿಗಳು ಕಾಮಸುಖವನ್ನು ಅನುಭವಿಸುತ್ತಾರೆ. ಅಲ್ಲಿರುವ ಹಣ್ಣುಗಳಲ್ಲ ರಸತುಂಬಿದ ಹಣ್ಣುಗಳೇ ಆಗಿವೆ. ಇದು ನಿಜ–

ಪುರಮವನಿದೇವಿಯಾನೂ
ಪುರಮಖಿಳ ಜಗನ್ನಿವಾಸದಿದಿರ್ಗೊಪ್ಪುವ ಗೋ
ಪುರಮೆಸೆವ ವಿಟರ ಮೆಯ್ಗೊಂ
ಪು ರತೀಶನ ಪೆಂಪು ಸುಜನರಂಪು ನಿತಾಂತಂ ೨೨

ಆ ಪುರದರಸಂ ಸಕಳಕ
ಳಾಪತಿ ಪೆಸರ್ವೆತ್ತ ಭೋಜವಂಶಂ ನಿಖಿಳಾ
ಶಾಪರಿ ಪೂರಿತ ಕೀರ್ತಿಧ
ರಾಪಾಲಂ ಪುಣ್ಯವರ್ಮನೆಂಬ ನರೇಂದ್ರಂ ೨೩

ವ|| ಆ ಪುಣ್ಯವರ್ಮಂಗೆ

ನೀತಿಗಳೊಜೆಯುಂ ಸಕಳಧರ್ಮರಹಸ್ಯಮನೊಪ್ಪುವಾಗಮ
ಖ್ಯಾತಿಯನುದ್ಧಶಾಸ್ತ್ರದಱಿವಂ ಪರಮಾರ್ಥನಿಧಾನಮುಂ ಪರ
ಪ್ರೀತಿಯನೊಂದು ಗೂಡಿ ಪಡೆದಂ ಕಮಳೋದ್ಭವನೆಂಬ ಮಾಟ್ಕೆಯಿಂ
ಭೂತಳವಲ್ಲಭಂಗೆ ವಸುರಕ್ಷಿತನೆಂಬನಮಾತ್ಯಶೇಖರಂ ೨೪

ವ|| ಬಱಿಕ್ಕಾ ಪುಣ್ಯವರ್ಮಂ ಕೆಲವುಕಾಲದಿಂ ಮೇಲೆ ಕಾಲಮಂದಿರಮನೆಯ್ದೆ

ಜನವಿನುತ ಪುಣ್ಯವರ್ಮನ
ತನಯಂ ಪೆಸರ್ವೆತ್ತನಂತವರ್ಮಂ ನವಯೌ
ವನ ಮದದಿಂ ವ್ಯಸನೋನ್ಮ
ತ್ತನಾಗಿ ದುರ್ವೃತ್ತಸಂಗದಿಂದಿರ್ಪಿನೆಗಂ ೨೫

ಎಂಬಂತೆ ಆ ನಗರವು ರಂಜಿಸುತ್ತದೆ. ೨೨. ಆ ಪುರವು ಭೂದೇವಿಯ ಕಾಲಂದಿಗೆಯಾಗಿದೆ. ಅಖಿಳಜಗನ್ನಿವಾಸನ ಎದುರಿನಲ್ಲಿ ಅಂದವಾಗಿ ಕಾಣಿಸುವ ಗೋಪುರ ಹೆಸರುವಾಸಿಯಾದ ವಿಟಪುರುಷರ ಮೈಯಿಗೆ ಹರ್ಷದಾಯಕವಾದುದು. ಮನ್ಮಥನ ಒಲಿಮೆಗೆ ಕಾರಣವಾಗಿದೆ. ಸುಜನರಿಗೆ ಸದಾ ಆಹ್ಲಾದಕರವಾದುದು. ೨೩. ಪುಣ್ಯವರ್ಮನೆಂಬ ಮಹಾರಾಜನು ಆ ಪುರದ ಅರಸನು. ಅವನು ಸಕಲಕಲೆಗಳನ್ನರಿತವನು. ಹೆಸರುವಾಸಿಯಾದ ಭೋಜರಾಜನ ವಂಶದವನು. ಎಲ್ಲ ದಿಕ್ಕುಗಳಲ್ಲೂ ಅವನ ಕೀರ್ತಿ ತುಂಬಿ ಹರಡಿದೆ. ವ|| ಆ ಪುಣ್ಯವರ್ಮನಿಗೆ— ೨೪. ವಸುರಕ್ಷಿತನೆಂಬ ಮಂತ್ರಿ ಶ್ರೇಷ್ಠನಿದ್ದನು. ನೀತಿಶಾಸ್ತ್ರಗಳ ಪ್ರೌಢಿಮೆ, ಸಕಲಧರ್ಮಗಳ ರಹಸ್ಯ, ಪ್ರಸಿದ್ಧವಾದ ವೇದಗಳ ಖ್ಯಾತಿ, ಶ್ರೇಷ್ಠವಾದ ಶಾಸ್ತ್ರಜ್ಞಾನ, ಪರಮಾರ್ಥದ ಭಂಡಾರ, ಪರರಿಗೆ ತೃಪ್ತಿಯನ್ನುಂಟುಮಾಡುವುದು. ಈ ಉತ್ತಮಗುಣಗಳನ್ನೆಲ್ಲ ಒಟ್ಟಿಗೆ ಸೇರಿಸಿ ಬ್ರಹ್ಮನು ಸೃಷ್ಟಿಸಿದನೋ ಎಂಬಂತೆ ಅವನು ಪ್ರಖ್ಯಾತನಾದ ಮಂತ್ರಿಯಾಗಿದ್ದನು. ವ|| ಬಳಿಕ ಆ ಪುಣ್ಯವರ್ಮನು ಕೆಲವು ಕಾಲವಾದ ಮೇಲೆ ಮೃತನಾದನು. ೨೫. ಜನರ ಹೊಗಳಿಕೆಗೆ ಪಾತ್ರನಾದ ಪುಣ್ಯವರ್ಮನ ಮಗನು ಹೆಸರುವಾಸಿಯಾದ ಅನಂತವರ್ಮನು ರಾಜನಾದನು. ಆದರೆ ಅವನು ನವಯೌವನದ ಮದದಿಂದ ಕೆಟ್ಟ

ವ॥ ಅದಂ ಕಂಡು ವಸುರಕ್ಷಿತಂ ಬುದ್ಧಿವೇೞಲೆಂದನಂತವರ್ಮಂಗಿಂತೆಂದಂ

ಅಷ್ಟಮದಂಗಳಂ ತೊಱೆದು ಸಾತ್ವಿಕ ಭಾವದೊಳಿರ್ದು ಧರ್ಮದೊಳ್
ಚೇಷ್ಟಿಸಿ ಶಾಸ್ತ್ರದೊಳ್ ತಿಳಿದು ಸಜ್ಜನಗೋಷ್ಠಿಯೊಳಿರ್ದು ಸಂತತಂ
ಶಿಷ್ಟರನೊಲ್ಮೆಯಿಂ ಪೊರೆದು ದುಷ್ಟರನೋವದೆ ತೀರ್ಚಿ ಸರ್ವಸಂ
ತುಷ್ಟಮೆನಲ್ಕೆ ಜೀವಿಪುದು ನೀತಿಯಿದಲ್ತೆ ಧರಾಧಿನಾಯಕಾ ೨೬

ನವವಿಧದೇವತಾರ್ಚನೆಗಳಿಂ ದ್ವಿಜಪಾಲನೆಯಿಂ ಸಮಸ್ತಜೀ
ವವನೊಸೆದಾತ್ಮಮೆಂಬ ಬಗೆಯಿಂ ಮನವೊಲ್ದು ಗುರೂಪದೇಶಮಾ
ರ್ಗವನೊಳಕೊಂಡು ಸಚ್ಚರಿತ್ರದಿಂ ವ್ಯಸನಕ್ಕೊಳಗಾಗದೋಜೆಯಿಂ
ತವೆಯದ ಪಾಪಪುಣ್ಯದಱಿವಿಂದಿರದಾತನ ಬಾೞ್ಕೆ ನಿಷ್ಫಲಂ ೨೭

ಕನಸಿನ ರಾಜ್ಯದಂತೆ ಮುಗಿಲೊಡ್ಡಿನರೂಪುಗಳಂತೆ ವಾರ್ಧಿಯೊ
ಗ್ಗಿನ ತೆರೆಯಂತೆ ಗಾಳಿಗಿದಿರೊಡ್ಡಿದ ಕೆಂಜೊಡರಂತೆ ಪುಲ್ಲ ಕಿ
ರ್ಚಿನ ಸಿರಿಯಂತೆ ಜೋಡೆಯರ ಮೆಚ್ಚಿನ ಮೋಹನದಂತೆ
. . . ರಂದಮೆಂದಱಿದು ಪೋಪುದು ಸತ್ಪಥದೊಳ್ ಕಳಾವಿದಂ ೨೮

ಚಾಳಿಗಳಿಗೆ ಸಿಕ್ಕಿದನು. ಮತ್ತು ದುಷ್ಟರ ಸಹವಾಸದಲ್ಲಿ ಕಾಲಕಳೆಯುತ್ತಿದ್ದನು. ವ॥ ಅದನ್ನು ನೋಡಿ ವಸುರಕ್ಷಿತನು ಬುದ್ಧಿ ಹೇಳಬೇಕೆಂದು ಅನಂತವರ್ಮನನ್ನು ಕರೆಯಿಸಿ ಹೀಗೆ ಹೇಳಿದನು. ೨೬. "ರಾಜನೇ! ಎಂಟು ವಿಧವಾದ ಮದಗಳನ್ನು ತೊರೆಯಬೇಕು. ಸಾತ್ವಿಕ ಸ್ವಭಾವವನ್ನು ಹೊಂದಿರಬೇಕು. ಧರ್ಮವನ್ನನುಸರಿಸಿ ಕೆಲಸ ಮಾಡಬೇಕು. ಶಾಸ್ತ್ರಗಳಲ್ಲಿ ಒಳ್ಳೆಯ ತಿಳಿವಳಿಕೆಯನ್ನು ಸಂಪಾದಿಸಬೇಕು. ಸಜ್ಜನರ ಸಮೂಹದಲ್ಲಿ ವಾಸಮಾಡಬೇಕು. ಸರ್ವದಾ ಶಿಷ್ಟಜನರನ್ನು ಪ್ರೀತಿಯಿಂದ ರಕ್ಷಿಸಬೇಕು. ಕರುಣೆದೋರದೆ ದುಷ್ಟರನ್ನು ನಿಗ್ರಹಿಸಬೇಕು. ಸರ್ವರಿಗೂ ಸಂತೋಷವಾಗುವಂತೆ ಬಾಳಬೇಕು. ಇದು ಸರಿಯಾದ ರಾಜನೀತಿಯ ಮಾರ್ಗವಷ್ಟೆ!" ೨೭. ಒಂಭತ್ತು ವಿಧವಾದ ದೇವತಾರ್ಚನೆಗಳನ್ನು ಮಾಡಬೇಕು. ದ್ವಿಜರನ್ನು ಪಾಲಿಸಬೇಕು. ಸಮಸ್ತಜೀವಗಳನ್ನೂ ತನ್ನ ಆತ್ಮನಿಗೆ ಸಮನಾಗಿ ಭಾವಿಸಬೇಕು. ಗುರುವು ಉಪದೇಶಿಸಿದ ಮಾರ್ಗದಲ್ಲಿ ನಡೆಯಬೇಕು. ಸದಾಚಾರಿಯಾಗಿರಬೇಕು. ಕೆಟ್ಟಚಾಳಿಗಳಿಗೆ ವಶನಾಗಬಾರದು. ಕೇವಲ ಪೌರುಷದಿಂದ ಪಾಪಪುಣ್ಯಗಳು ಕೊನೆಗೊಳ್ಳುವುದಿಲ್ಲ ಎಂಬ ಜ್ಞಾನವಿರಬೇಕು. ಇವುಗಳಿಲ್ಲದವನ ಬಾಳು ವ್ಯರ್ಥ. ೨೮. ವಿದ್ಯಾವಂತನು ಇಹಲೋಕದ ಸುಖವನ್ನು ಕನಸಿನಲ್ಲಿ ಕಂಡ ರಾಜ್ಯದ ಹಾಗೆ, ಗುಂಪಾದ ಮೋಡಗಳ ಕ್ಷಣಕ್ಷಣಕ್ಕೂ ವ್ಯತ್ಯಾಸವಾಗುವ ರೂಪದಂತೆ, ಸಮುದ್ರದ ಗುಂಪು ಗುಂಪಾಗಿ ಎದ್ದು ಮುರಿದು ಬೀಳುವ ಅಲೆಗಳಂತೆ, ಗಾಳಿಗೆ ಎದುರಾಗಿ ಇಟ್ಟ ದೀಪದಂತೆ, ಹುಲ್ಲಿಗೆ ಹಚ್ಚಿದ ಬೆಂಕಿಯ ವೈಭವದ ಹಾಗೆ, ಸೂಳೆಯರ ಪ್ರೀತಿಯಂತೆ, ಅಸ್ಥಿರ ಮತ್ತು ಕ್ಷಣಿಕ ಎಂದು ತಿಳಿಯಬೇಕು. ಮತ್ತು ಸನ್ಮಾರ್ಗದಲ್ಲಿ ನಡೆಯಬೇಕು.

ಮದಮುಖಿಗಳ್ಗೆ ದುರ್ವ್ಯಸನಿಗಳ್ಗೆ ನಿರಂತರ ಪಾಪಕರ್ಮಿಗ
ಳ್ಗೊದಗಿದ ನಾಸ್ತಿಕರ್ಗೆ ಪುಸಿಕರ್ಗೆ ಕರಂ ಪಿಶುನಪ್ರಿಯರ್ಗೆ ಧ
ರ್ಮದ ರುಚಿಯಿಲ್ಲದರ್ಗಖಿಳ ನೀತಿಗಳಂ ಮಿಗೆ ಪೇೞಲೇಕೆ ಬ
ರ್ಪುದೆ ಹೃದಯಕ್ಕೆ ಪುಣ್ಯಗತಿ ಸಜ್ಜನಸಂಗಮದಿಲ್ಲದಿರ್ಪರೊಳ್ ೨೯

ಗದ್ಯ [ಇಲ್ಲಿಂದ ಮುಂದಕ್ಕೆ ಗ್ರಂಥಪಾತ]

**ಇದು ನಿಖಿಲಬುಧಜನಮನೋವನಜವನ ದಿವಾಕರ ಕಿರಣಪ್ರತಿಮಪ್ರಸನ್ನ ಶ್ರೀಮದಭಂಗವಿಟ್ಠಲ ಪದಾಂಭೋಜಮತ್ತಮಧುಕರ ಮಧುಸೂದನ ನಂದನ ಸರಸಕವಿ ಚೌಂಡರಾಜ ವಿರಚಿತಮಪ್ಪ ಅಭಿನವ ದಶಕುಮಾರಚರಿತೆಯೊಳ್ ವಿಶ್ರುತ ಕಥಾವೃತ್ತಾಂತಂ**

## ಚತುರ್ದಶಾಶ್ವಾಸಂ

೨೯. ಕೊಬ್ಬಿದವರಿಗೆ, ಕೆಟ್ಟಚಟಗಳುಳ್ಳವರಿಗೆ, ಒಂದೇ ಸಮನಾಗಿ ಪಾಪಮಾಡುವವರಿಗೆ, ದೇವರನ್ನು ನಂಬದವರಿಗೆ, ಸುಳ್ಳು ಹೇಳುವವರಿಗೆ. ಚಾಡಿಕೋರರಿಗೆ. ಧರ್ಮದಲ್ಲಿ ಆಸಕ್ತಿಯಿಲ್ಲದವರಿಗೆ, ‘ಇವರಿಗೆಲ್ಲ ನೀತಿಗಳನ್ನೆಲ್ಲ ಏಕೆ ಉಪದೇಶಿಸಬೇಕು? ಹೃದಯದಲ್ಲಿ ಪುಣ್ಯಭಾವವಿಲ್ಲದ (ಸದ್ಭಾವ) ಸಜ್ಜನರ ಸಂಗವನ್ನು ಮಾಡದೇ ಇದ್ದವರಿಗೆ ನೀತಿಯ ಉಪದೇಶವು ವ್ಯರ್ಥ. (ಮುಂದಿನ ಗ್ರಂಥಭಾಗವು ದೊರಕಿಲ್ಲ) ಇದು ಸಕಲ ವಿದ್ವಾಂಸರ ಮನಸ್ಸೆಂಬ ಕಮಲವನಕ್ಕೆ ಸೂರ್ಯನ ಕಿರಣಗಳಿಗೆ ಸಮನಾದ ಪ್ರಸನ್ನನಾದ ಶ್ರೀಮದಭಂಗವಿಟ್ಠಲನ ಪದಕಮಲಗಳಲ್ಲಿ ಮದಿಸಿದ ದುಂಬಿಯಾದ ಮಧುಸೂದನನ ಮಗನಾದ ಸರಸಕವಿ ಚೌಂಡರಾಜನು ವಿರಚಿಸಿದ, ಅಭಿನವ ದಶಕುಮಾರ ಚರಿತೆಯಲ್ಲಿ ವಿಶ್ರುತನ ಕಥೆ, ಹದಿನಾಲ್ಕನೆಯ ಆಶ್ವಾಸ.



# ಕಥಾಶೇಷ

(ಅಭಿನವ ದಶಕುಮಾರ ಚರಿತೆಯ ೧೪ ನೆಯ ಆಶ್ವಾಸದಲ್ಲಿ ೨೯ ನೆಯ ಪದ್ಯದ ವರೆಗೆ ಮಾತ್ರ ಗ್ರಂಥವು ಉಪಲಬ್ಧವಾಗಿದ್ದು ಮುಂದಿನ ಗ್ರಂಥಭಾಗವು ದೊರಕಿಲ್ಲ. ಓದುಗರ ಸೌಕರ್ಯಕ್ಕಾಗಿ ಸಂಸ್ಕೃತ ದಶಕುಮಾರ ಚರಿತದಿಂದ ಉಳಿದ ಕಥಾಂಶವನು ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ) ರಂ.

"ಮನುಷ್ಯನು ಶಾಸ್ತ್ರವೆಂಬ ದೀಪದ ಸಹಾಯದಿಂದ ನಡೆದರೆ ಲೋಕಯಾತ್ರೆ ಸುಗಮವಾಗುವುದು. ಶಾಸ್ತ್ರವು ದೂರದ ವಸ್ತುವನ್ನು ಕಾಣಿಸಬಲ್ಲ ಉತ್ತಮವಾದ ನೇತ್ರವೆನಿಸಿದೆ. ನೀತಿಶಾಸ್ತ್ರದ ನೆರವಿಲ್ಲದ ರಾಜನು ಕಣ್ಣಿಲ್ಲದ ಕುರುಡನೇ ಸರಿ. ಆದ್ದರಿಂದ ನೃತ್ತಗೀತಾದಿ ಬಾಹ್ಯ ವಿದ್ಯೆಗಳಲ್ಲಿ ಆಸಕ್ತಿಯನ್ನು ಪರಿಮಿತಗೊಳಿಸಿ ಕುಲವಿದ್ಯೆಯಾದ ದಂಡನೀತಿಯನ್ನು ಅಭ್ಯಾಸಮಾಡು, ಮಹಾರಾಜ, ದಂಡನೀತಿಯ ಬಲದಿಂದ ಅಪ್ರತಿಹತವಾದ ಆಜ್ಞೆ ನಿನಗೆ ಸಿದ್ಧಿಸುವುದು. ಸಮಸ್ತ ಪೃಥ್ವಿಯನ್ನೂ ನಿರಾತಂಕವಾಗಿ ಚಿರಕಾಲ ಆಳುತ್ತಿರಬಹುದು" ಎಂದು ವಸುರಕ್ಷಿತನೆಂಬ ಮಂತ್ರಿವೃದ್ಧನು ಅನಂತವರ್ಮನಿಗೆ ಉಪದೇಶಿಸಿದನು.

ಅದನ್ನು ಕೇಳಿ ಅನಂತವರ್ಮನು "ಗುರುಸ್ಥಾನದಲ್ಲಿರುವ ನೀವು ಉಪದೇಶಿಸಿದ್ದು ಯೋಗ್ಯವಾಗಿದೆ. ಹಾಗೆಯೇ ಮಾಡುವೆನು" ಎಂದು ಹೇಳಿ ಅಂತಃಪುರಕ್ಕೆ ಹೋದನು. ಆದರೆ ಮಂತ್ರಿಯ ಮಾತನ್ನು ನಡೆಸಲಿಲ್ಲ. ಕಾಮತಂತ್ರಕರ್ಣಧಾರನಾದ ವಿಹಾರ ಭದ್ರನೆಂಬ ಧೂರ್ತನ ಮಾತಿಗೆ ಮರುಳಾಗಿ ಸದಾ ಸ್ತ್ರೀಕಾಮುಕನಾಗಿ ವಿಹರಿಸುತ್ತ ರಾಜ್ಯಭಾರವನ್ನು ಅಲಕ್ಷಿಸಿದನು. ವಸುರಕ್ಷಿತನು ಮತ್ತೆ ಮತ್ತೆ ರಾಜನಿಗೆ ಹಿತೋಪ ದೇಶ ಮಾಡಿದರೂ ಎಲ್ಲವೂ ವ್ಯರ್ಥವಾಯಿತು. ಅನಂತವರ್ಮನು ಹಿತಬೋಧೆಯನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆಗ ಆ ಮಂತ್ರಿವೃದ್ಧನು ಖಿನ್ನನಾಗಿ "ನಾನು ಮಾಡುವುದೇನು ? ಒಟ್ಟಿನಲ್ಲಿ ಈ ರಾಜ್ಯವು ಅಶ್ಮಕೇಂದ್ರನೂ ನೀತಿಜ್ಞನೂ ಆದ ವಸಂತಭಾನುವಿನ ಕೈಗೆ ಸಿಕ್ಕಿದಂತೆಯೇ ಸರಿ" ಎಂದುಕೊಂಡನು.

ಹೀಗಿರಲು ಅಶ್ಮಕೇಂದ್ರನಾದ ವಸಂತಭಾನುವಿನ ಮಂತ್ರಿಯಾದ ಇಂದ್ರ ಪಾಲಿತನ ಮಗ ಚಂದ್ರಪಾಲಿತನು ವಿದರ್ಭರಾಜಧಾನಿಗೆ ಬಂದನು. ತಂದೆಯು ತನ್ನನ್ನು ದೇಶಭ್ರಷ್ಟನನ್ನಾಗಿ ಮಾಡಿದ್ದಾನೆಂದು ಹೇಳಿಕೊಳ್ಳುತ್ತ ಅನೇಕ ಗೂಢಚರರೊಡನೆಯೂ ಕುಶಲೆಯರಾದ ಸ್ತ್ರೀಯರೊಡನೆಯೂ ಬಂದು ಮರುಳು ಮಾತುಗಳಿಂದ ಅನಂತವರ್ಮ ನನ್ನು ವಶಪಡಿಸಿಕೊಂಡು ಅವನಿಗೆ ಆಪ್ತ ಮಿತ್ರನೆನಿಸಿದನು. ಅವನು ತನ್ನ ಕೂಟ ನೀತಿಯಿಂದ ರಾಜನ ಸೇನೆಯನ್ನು ದುರ್ಬಲಗೊಳಿಸಿದನು. ಸೈನಿಕರಲ್ಲಿ ಒಡಕು ಹುಟ್ಟಿಸಿ

ದನು. ಕೆಟ್ಟ ಆಹಾರವನ್ನು ಕೊಡಿಸಿ ವಿವಿಧ ರೋಗಗಳನ್ನು ಹುಟ್ಟಿಸಿದನು. ಪ್ರಜೆಗಳಲ್ಲಿ ಭೇದೋಪಾಯವನ್ನು ಕೈಗೊಂಡು ರಾಜನ ವಿಷಯವಾಗಿ ಉಪೇಕ್ಷಾದ್ವೇಷ ಗಳನ್ನು ಉಂಟುಮಾಡಿದನು.

ಹೀಗಿರಲು ವಸಂತಭಾನುವು ವನವಾಸಿಯಾದ ಭಾನುವರ್ಮನನ್ನು ಪ್ರೋತ್ಸಾಹಿಸಿ ಅನಂತವರ್ಮನ ಮೇಲೆ ಯುದ್ಧಕ್ಕೆ ಬರುವಂತೆ ಸಂಚು ಮಾಡಿದನು, ಆ ವಸಂತ ಭಾನುವೇ ತಾನು ರಾಜನಿಗೆ ಆಪ್ತನೆಂದು ನಟಿಸಿ ಆವನಿಗೆ ಸಹಾಯ ಮಾಡಲು ಮುಂದಾ ದನು. ಅನಂತವರ್ಮನ ಸೇನೆ ನರ್ಮದಾ ತೀರಕ್ಕೆ ಬಂದು ಬೀಡು ಬಿಟ್ಟಿತು. ಮುಂದೆ ಅಶ್ಮ ಕೇಂದ್ರನು ಉಳಿದ ಸಾಮಂತರೊಡನೆ ಸಂಚುಹೂಡಿ ಅನಂತವರ್ಮನನ್ನು ಕೊಲ್ಲಿಸಿ ಆವನ ರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಂಡನು.

ಇಷ್ಟರಲ್ಲಿ ಮಂತ್ರಿವೃದ್ಧನಾದ ವಸುರಕ್ಷಿತನು ಕೆಲವು ಸಾಮಂತರ ಸಹಾಯದಿಂದ ಈ ರಾಜಪುತ್ರನಾದ ಭಾಸ್ಕರವರ್ಮನನ್ನೂ ಇವನ ಸೋದರಿ ಹದಿಮೂರುವರ್ಷದ ಮಂಜುವಾದಿನಿಯನ್ನೂ ಇವರ ತಾಯಿ ಮಹಾರಾಣಿ ಮಂಜುವಾದಿನಿಯನ್ನೂ ರಕ್ಷಿಸಿ, ರಾಜಧಾನಿಯಿಂದ ಗುಪ್ತವಾಗಿ ಕರೆದುಕೊಂಡು ಹೊರಟನು. ದುರ್ದೈವದಿಂದ ಆ ಮಂತ್ರಿ ವೃದ್ಧನು ಜ್ವರಪೀಡಿತನಾಗಿ ದಾರಿಯಲ್ಲಿ ಸ್ವರ್ಗಸ್ಥನಾದನು. ನಮ್ಮಂಥ ಕೆಲವು ಮಿತ್ರರು ಎದೆಗುಂದದೆ ಇವರನ್ನು ಮಾಹಿಷ್ಮತೀನಗರಕ್ಕೆ ಕರೆದುಕೊಂಡು ಹೋದೆವು. ಅಲ್ಲಿ ಅನಂತವರ್ಮನ ಮಲತಾಯಿಯ ಮಗನಾದ ಮಿತ್ರವರ್ಮನಿಗೆ ರಾಣಿಯನ್ನೂ ಮಕ್ಕಳನ್ನೂ ಭೇಟಿಮಾಡಿಸಿದೆವು. ಆ ನೀಚನು ಈ ದೇವಿಯ ವಿಷಯದಲ್ಲಿ ಅನ್ಯಥಾ ಭಾವನೆಯನ್ನು ತಳೆದನು. ರಾಣಿಯು ಆಗ ಮಿತ್ರವರ್ಮನನ್ನು ನಿಂದಿಸಿದಳು. ದುಷ್ಟನಾದ ಮಿತ್ರವರ್ಮನು ಈ ಬಾಲಕನನ್ನು ವಧಿಸುವ ಆಲೋಚನೆ ಮಾಡಿದನು. ಆಗ ರಾಣಿಯು ನನ್ನನ್ನು ಕರೆದು ರಹಸ್ಯವಾಗಿ "ನಾಡೀಜಂಘ, ಈ ಬಾಲಕನನ್ನು ಎಲ್ಲಿ ಗಾದರೂ ಕರೆದುಕೊಂಡು ಹೋಗು. ನಾನು ಬದುಕಿದ್ದರೆ ಒಂದು ದಿನ ನಿಮ್ಮನ್ನು ಕಂಡೇನು. ನಿನ್ನ ಕ್ಷೇಮವಾರ್ತೆಯನ್ನು ತಿಳಿಸುತ್ತಿರು" ಎಂದಳು, ಆಮೇಲೆ ನಾನು ಹೇಗೋ ಈ ರಾಜಪುತ್ರನನ್ನು ರಾಜಮಂದಿರದಿಂದ ಹೊರಗೆ ಕರೆತಂದು ವಿಂಧ್ಯಾಟವಿ ಯನ್ನು ಪ್ರವೇಶಿಸಿದೆನು. ಈತನಿಗೆ ಬಾಯಾರಿಕೆಯಾದ್ದರಿಂದ ನೀರನ್ನು ಅರಸುತ್ತ ಈ ಸ್ಥಳಕ್ಕೆ ಬಂದೆನು. ಅಯ್ಯಾ, ಅನಾಥನಾದ ಈ ಹುಡುಗನಿಗೆ ನೀನೆ ರಕ್ಷಕನಾಗು" ಎಂದು ಹೇಳಿ ನನಗೆ ಕೈ ಮುಗಿದನು. ಆಗ ನಾನು (ವಿಶ್ರುತ) "ಈ ಹುಡುಗನ ತಾಯಿ ಯಾರು ?" ಎಂದು ಆತನನ್ನು ಕೇಳಿದೆನು. ಅವನು "ಪಾಟಲಿಪುತ್ರದಲ್ಲಿದ್ದ ವೈಶ್ರವಣ ನೆಂಬ ವಣಿಜನಿಗೆ ಸಾಗರದತ್ತೆಯೆಂಬ ಮಗಳಿದ್ದಳು. ಅವಳಲ್ಲಿ ಕೋಸಲೇಂದ್ರನಾದ ಕುಸುಮಧನ್ವನಿಂದ ಈ ಹುಡುಗನ ತಾಯಿ ಜನಿಸಿದಳು" ಎಂದನು. "ಹಾಗಾದರೆ ಇವನ ತಾಯಿಗೂ ನನ್ನ ತಂದೆಗೂ ಮಾತಾಮಹನು ಒಬ್ಬನೇ" ಎಂದು ಹೇಳಿ ನಾನು ಆ ಬಾಲಕನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡೆನು. ಆ ವೃದ್ಧನು "ಸಿಂಧುದತ್ತನ

ಪುತ್ರರಲ್ಲಿ ನನ್ನ ತಂದೆ ಯಾರು ?" ಎಂದು ಕೇಳಲು. 'ಸುಶ್ರುತ' ಎಂದು ನಾನು ಉತ್ತರಕೊಟ್ಟೆನು. ಅದರಿಂದ ಆ ಪುರುಷನಿಗೆ ಅತ್ಯಾನಂದವಾಯಿತು.

ಅಷ್ಟರಲ್ಲಿ ಒಬ್ಬ ಕಿರಾತನು ಅಲ್ಲಿಗೆ ಬರಲಾಗಿ ಅವನೊಡನೆ ಮಾತಾಡುತ್ತ "ಮಾಹಿಷ್ಮತೀ ವೃತ್ತಾಂತವನ್ನು ಬಲ್ಲೆಯಾ ?" ಎಂದು ಕೇಳಿದೆನು. "ಚಂಡವರ್ಮನ ತಮ್ಮನಾದ ಪ್ರಚಂಡವರ್ಮನಿಗೆ ಮಿತ್ರವರ್ಮನ ಮಗಳಾದ ಮಂಜುವಾದಿನಿಯನ್ನು ಕೊಟ್ಟು ಮದುವೆಯಾಗುವುದಂತೆ" ಎಂದು ಆ ಕಿರಾತನು ಹೇಳಿದನು. "ಓಹೋ ಧೂರ್ತನಾದ ಮಿತ್ರವರ್ಮನು ಮಂಜುವಾದಿನಿಯಲ್ಲಿ ವಾತ್ಸಲ್ಯವನ್ನು ತೋರಿಸಿ ಅವಳ ತಾಯಿಗೆ ತನ್ನ ವಿಷಯದಲ್ಲಿ ನಂಬಿಕೆಯನ್ನು ಹುಟ್ಟಿಸಲು ಈ ಸಂಚು ಹೂಡಿದ್ದಾನೆ. ಆಕೆಯ ಮಗನನ್ನು ಕರೆಸಿ ಕೊಲ್ಲಿಸಬೇಕೆಂಬುದೇ ಅವನ ಉದ್ದೇಶ" ಎಂದು ನಾನು ನಿಶ್ಚಯಿಸಿದೆನು. ತರುವಾಯ ನಾಡೀಜಂಘನನ್ನು ಕುರಿತು "ಅಯ್ಯಾ, ನೀನು ಮಾಹಿಷ್ಮತಿಗೆ ಹೋಗಿ ನನ್ನ ಮತ್ತು ಈ ಬಾಲಕನ ಕುಶಲವನ್ನು ರಹಸ್ಯವಾಗಿ ವಸುಂಧರಾದೇವಿಗೆ ತಿಳಿಸು. ಆ ಮೇಲೆ ಈ ಬಾಲಕನನ್ನು ಹುಲಿ ತಿಂದುಬಿಟ್ಟಿತೆಂದು ಪ್ರಚಾರಮಾಡು. ಆ ದುಷ್ಟನು ಹೊರಗೆ ಶೋಕವನ್ನು ನಟಿಸುತ್ತ ಒಳಗೆ ಸಂತುಷ್ಟನಾಗಿ ದೇವಿಗೆ ಸಮಾಧಾನ ಹೇಳುವನು. ಅವಳು ಮಿತ್ರವರ್ಮನಿಗೆ "ನನ್ನ ಮಗನಿಗೋಸ್ಕರ ನಿನ್ನ ಇಚ್ಛೆಯಂತೆ ನಡೆದುಕೊಳ್ಳಲಿಲ್ಲ. ನನ್ನ ಪಾಪ ಕೃತ್ಯದಿಂದ ಮಗನು ಸ್ವರ್ಗಸ್ಥನಾದನು. ಇನ್ನು ಮೇಲೆ ನಿನ್ನ ಇಚ್ಛೆಯಂತೆ ನಡೆಯುವೆನು" ಎಂದು ಹೇಳಲಿ. ಆತನು ಕಾಮುಕನಾಗಿ ಅವಳ ಬಳಿಗೆ ಬರುವನು. ಆಗ ವಸುಂಧರಾದೇವಿಯು ಹೀಗೆ ಮಾಡಲಿ. ಇದೋ, ಈ ವತ್ಸನಾಭವೆಂಬ ವಿಷವನ್ನು ನೀರಲ್ಲಿ ಕರಗಿಸಿ ಅದರಲ್ಲಿ ಹೂಮಾಲೆಯನ್ನು ಅದ್ದಿ ಇಟ್ಟುಕೊಂಡಿರಲಿ. ಮಿತ್ರವರ್ಮನು ಸಮೀಪಿಸಿದಾಗ ದೇವಿಯು "ನಾನು ಪತಿವ್ರತೆಯಾಗಿರುವುದು ಸತ್ಯವಾದರೆ ಈ ಹೂಮಾಲೆಯೇ ನಿನಗೆ ಖಡ್ಗವಾಗಲಿ !" ಎಂದು ಹೇಳಿ ಆತನ ಮುಖದ ಮೇಲೂ ಎದೆಯ ಮೇಲೂ ಹೂಮಾಲೆಯಿಂದ ಹೊಡೆಯಲಿ ! ಆತನು ವಿಷಜ್ವಾಲೆಯಿಂದ ಸತ್ತುಹೋಗುವನು, ಅನಂತರ, ಈ ಔಷಧವನ್ನು ಸೇರಿಸಿದ ನೀರಲ್ಲಿ ಅದ್ದಿ ಮಂಜುವಾದಿನಿಯ ಕೊರಳಿಗೆ ಹಾಕಲಿ. ಅವಳಿಗೆ ಯಾವ ತೊಂದರೆಯೂ ಆಗುವುದಿಲ್ಲ. ಅದನ್ನು ಕಂಡು ಪ್ರಜೆಗಳೂ ಅಧಿಕಾರಿಗಳೂ ಇವಳು ಮಹಾಪತಿವ್ರತೆಯೇ ಸರಿ. ಪಾತಿವ್ರತ್ಯ ಮಹಿಮೆಯಿಂದಲೇ ಮಿತ್ರವರ್ಮನೆಂದು ತಿಳಿಯುತ್ತಾರೆ. ಆ ಮೇಲೆ ಪ್ರಚಂಡವರ್ಮನಿಗೆ "ಈ ರಾಜ್ಯವು ಅನಾಯಕವಾಗಿದೆ. ಈ ಬಾಲಿಕೆಯೊಡನೆ ರಾಜ್ಯಭಾರವನ್ನೂ ಸ್ವೀಕರಿಸಬೇಕು" ಎಂದು ಹೇಳಿ ಕಳಿಸಲಿ. ಅಷ್ಟರಲ್ಲಿ ನಾನೂ ಈ ರಾಜಪುತ್ರನೂ ಕಪಾಲಿಕ ವೇಷವನ್ನು ಧರಿಸಿ, ದೇವಿಯಿಂದಲೇ ಭಿಕ್ಷೆಯನ್ನು ಸ್ವೀಕರಿಸುತ್ತ, ಪಟ್ಟಣದ ಹೊರಗೆ ಶ್ಮಶಾನದ ಬಳಿ ಇರುತ್ತೇವೆ. ದೇವಿಯು ಪ್ರಜೆಗಳ ಮುಖಂಡರನ್ನು ಮಂತ್ರಿಗಳನ್ನು ಕರೆಸಿ "ಈ ದಿನ ಸ್ವಪ್ನದಲ್ಲಿ ವಿಂಧ್ಯವಾಸಿನೀದೇವಿಯು ಪ್ರತ್ಯಕ್ಷಳಾಗಿ ಅನುಗ್ರಹಿಸಿದಳು. ಅವಳು ಹೀಗೆಂದಳು–

'ಇಂದಿಗೆ ನಾಲ್ಕನೇ ದಿನ ಪ್ರಚಂಡವರ್ಮನು ಸಾಯುವನು. ಐದನೇ ದಿನ ರೇವಾನದೀ ತೀರದಲ್ಲಿರುವ ನನ್ನ ಮಂದಿರಕ್ಕೆ ಪ್ರಜೆಗಳು ಬರಲಿ. ಮಂದಿರವು ನಿರ್ಜನವಾಗಿರುವು ದನ್ನು ಪರೀಕ್ಷಿಸಿ ಹೊರಗೆ ಹೋಗಿ ಬಾಗಿಲನ್ನು ಹಾಕಿಕೊಳ್ಳಲಿ. ಆಗ ಮಂದಿರದೊಳ ಗಿಂದ ಒಬ್ಬ ದ್ವಿಜಕುಮಾರನು ನಿನ್ನ ಪುತ್ರನೊಂದಿಗೆ ಬಂದು ಒಳಗಿಂದ ಬಾಗಿಲನ್ನು ತೆರೆದು ಕಾಣಿಸಿಕೊಳ್ಳುವನು. ಆತನು ಈ ರಾಜ್ಯವನ್ನು ಸಂರಕ್ಷಿಸಿ ನಿನ್ನ ಮಗನನ್ನು ರಾಜ್ಯದಲ್ಲಿ ಸ್ಥಾಪಿಸುವನು. ನಾನೇ ಹುಲಿಯ ರೂಪದಿಂದ ಬಂದು ನಿನ್ನ ಮಗನನ್ನು ಇಷ್ಟು ದಿನ ಅಡಗಿಸಿದ್ದೆ ! ನಿನ್ನ ಮಗಳಾದ ಮಂಜುವಾದಿನಿ ಆ ದ್ವಿಜಾತಿ ಕುಮಾರನನ್ನು ಮದುವೆಯಾಗಲಿ ಎಂದು ಹೇಳಿದಳು. ಎಂಬುದಾಗಿ ತಿಳಿಸಲಿ. ಅಲ್ಲದೆ ಈ ವಿಷಯವು ನಿಮ್ಮಲ್ಲಿಯೇ ರಹಸ್ಯವಾಗಿರಲಿ ಎಂದೂ ತಿಳಿಸಲಿ" ಎಂದು ನುಡಿದೆನು.

ಆಗ ನಾಡೀಜಂಘನು ತುಂಬ ಸಂತುಷ್ಟನಾಗಿ ಅಲ್ಲಿಂದ ಮಾಹಿಷ್ಮತಿಗೆ ಹೋಗಿ ನಾನು ಹೇಳಿದಂತೆಯೇ ಎಲ್ಲವನ್ನೂ ನಡೆಸಿದನು. ನಾನು ಊಹಿಸಿದಂತೆ ಮಿತ್ರವರ್ಮನು ಹೂಮಾಲೆಯ ಪ್ರಹಾರದಿಂದ ಸತ್ತುಹೋದನು. ಪ್ರಜೆಗಳೆಲ್ಲರೂ "ಆಹಾ ! ಪತಿವ್ರತೆಯ ಪ್ರಭಾವವೇ ! ಹೂಮಾಲೆ ರಾಜನಿಗೆ ಖಡ್ಗಪ್ರಹಾರವಾಯಿತು. ಅದೇ ಮಾಲೆ ಮಂಜುವಾದಿನಿಗೆ ಅಲಂಕಾರವಾಯಿತು ! ಈ ಸಾಧ್ವಿಯ ಆಜ್ಞೆಯನ್ನು ಲ್ಲಂಘಿಸಿದರೆ, ಮನುಷ್ಯನು ಸುಟ್ಟು ಬೂದಿಯಾದಾನು !" ಎಂದು ಉದ್ಗರಿಸಿದರು.

ನಾನೂ ಆ ರಾಜಕುಮಾರನೂ ಕಾಪಾಲಿಕ ವೇಷವನ್ನು ಧರಿಸಿ ಮಾಹಿಷ್ಮತಿಗೆ ಹೋದೆವು. ಅರಮನೆಗೆ ಹೋಗಿ ವಸುಂಧರಾ ದೇವಿಯನ್ನು ಕಂಡು ಭಿಕ್ಷೆಯನ್ನು ಯಾಚಿಸಿದೆನು. ಆಕೆ "ಭಗವನ್, ಇದೋ ವಂದನೆಗಳು. ಅನಾಥಳಾದ ನನ್ನನ್ನು ಅನುಗ್ರಹಿಸಿರಿ. ನನಗೆ ಒಂದು ಸ್ವಪ್ನ ಕಾಣಿಸಿತು. ಅದು ಸತ್ಯವಾಗುವುದೋ ಇಲ್ಲವೊ ?" ಎಂದು ಕೇಳಿದಳು. "ಈ ದಿನವೇ ಅದರ ಫಲ ಕಾಣುವುದು !" ಎಂದೆನು. "ಹಾಗಿದ್ದರೆ ಅದು ನನ್ನ ಪುಣ್ಯವೇ ಒಂದು ವೇಳೆ ಅದು ಸುಳ್ಳಾದರೆ ಈ ಕಾಪಾಲಿಕನಾದ ಬಾಲಕನನ್ನು ನಾನು ವಶಪಡಿಸಿಕೊಳ್ಳುವೆನು" ಎಂದಳು. ಹಾಗೆಯೇ ಆಗಲೆಂದು ನಾನು ಹೇಳಿ ಭಿಕ್ಷೆಯನ್ನು ಸ್ವೀಕರಿಸಿ ಹೊರಟೆನು.

ನನ್ನ ಹಿಂದೆ ಬಂದ ನಾಡೀಜಂಘನನ್ನು ಕುರಿತು "ಅಲ್ಪಾಯುವಾದ ಆ ಪ್ರಚಂಡ ವರ್ಮನು ಎಲ್ಲಿದ್ದಾನೆ ?" ಎಂದು ಕೇಳಿದೆನು. "ರಾಜ್ಯವು ನನ್ನದಾಯಿತು—ಎಂದು ಹರ್ಷೋನ್ಮತ್ತವಾದ ಆ ಪ್ರಚಂಡವರ್ಮನು ಸಂಗೀತಗೋಷ್ಠಿಯಲ್ಲಿದ್ದಾನೆ" ಎಂದು ತಿಳಿಸಿದನು. "ನೀನು ಉದ್ಯಾನವನದಲ್ಲಿರು" ಎಂದು ಆತನಿಗೆ ತಿಳಿಸಿ ನಾನು ಒಂದು ಮಠಕ್ಕೆ ಹೋಗಿ ಸಾಮಾನುಗಳನ್ನು ಅಲ್ಲಿಟ್ಟು ಅವುಗಳನ್ನು ನೋಡಿಕೊಳ್ಳುವಂತೆ ರಾಜಪುತ್ರನಿಗೆ ತಿಳಿಸಿ, ಅಲ್ಲಿಂದ ಹೊರಟೆನು. ಒಬ್ಬ ನರ್ತಕನ ವೇಷವನ್ನು ಧರಿಸಿ ಪ್ರಚಂಡವರ್ಮನ ಗೋಷ್ಠಿಗೆ ಹೋಗಿ ಅದ್ಭುತವಾದ ನೃತ್ಯ ಪ್ರಕಾರವನ್ನು ಪ್ರದರ್ಶಿಸಿ ದೆನು. ಹಾಗೆಯೇ ನರ್ತಿಸುತ್ತ ಆತನ ಬಳಿಗೆ ಹೋಗಿ, ಅಡಗಿಸಿಕೊಂಡಿದ್ದ ಚೂರಿ

ಯನ್ನು ಒಡನೆಯೇ ಹಿರಿದು ಪ್ರಚಂಡವರ್ಮನ ಎದೆಗೆ ಚುಚ್ಚಿ ಸಾಯಿಸಿದೆನು, "ವಸಂತಭಾನುವಿಗೆ ಜಯವಾಗಲಿ !" ಎಂದು ಉದ್ಘೋಷಿಸುತ್ತ ಯಾರ ಕೈಗೂ ಸಿಗದೆ ತಪ್ಪಿಸಿಕೊಂಡು ನಾನು ಇಳಿದುಕೊಂಡಿದ್ದ ಮನೆಕ್ಕೆ ಹೋಗಿ ನರ್ತಕವೇಷವನ್ನು ತ್ಯಜಿಸಿ ಮತ್ತೆ ಕಾಪಾಲಿಕವೇಷವನ್ನು ಧರಿಸಿದೆನು. ಅನಂತರ ಶ್ಮಶಾನಕ್ಕೆ ಹೋದೆನು.

ರೇವಾತೀರದಲ್ಲಿದ್ದ ದುರ್ಗಾಮಂದಿರದಲ್ಲಿ ಮೊದಲೇ ರಹಸ್ಯವಾಗಿ ಪ್ರತಿಮೆಯ ಬುಡದಲ್ಲಿ ಒಂದು ಬಿಲವನ್ನು ತೋಡಿಸಿ ಬಂಡೆಯಿಂದ ಮುಚ್ಚಿಸಿಟ್ಟಿದ್ದೆನು. ಅರಮನೆಯಿಂದ ಬಂದ ದಿವ್ಯ ವಸ್ತ್ರಾಲಂಕಾರಗಳನ್ನು ನಾನೂ ರಾಜಪುತ್ರನೂ ಧರಿಸಿ ಆ ಬಿಲದಲ್ಲಿ ಅಡಗಿ ಕುಳಿತೆವು. ನಾನು ಹಿಂದೆ ತಿಳಿಸಿದ ಪ್ರಕಾರ ಪ್ರಚಂಡವರ್ಮನಿಗೆ ರಾಣಿಯು ಉತ್ತರಕ್ರಿಯೆಯನ್ನು ಮಾಡಿಸಿ, ಅಶ್ಮಕ ರಾಜನ ಮೋಸದಿಂದ ಆತನಿಗೆ ದುರಂತ ಸಂಭವಿಸಿತೆಂದು ಚಂಡವರ್ಮನಿಗೆ ವಾರ್ತೆಯನ್ನು ಕಳಿಸಿದಳು. ಮಾರನೆಯ ದಿನ ಅವಳು ಪ್ರಾತಃಕಾಲವೇ ಮಂತ್ರಿಗಳಿಂದಲೂ ಪೌರವೃದ್ಧರಿಂದಲೂ ಕೂಡಿ ದುರ್ಗಾಮಂದಿರಕ್ಕೆ ಬಂದು ದೇವಿಯನ್ನು ಪೂಜಿಸಿ, ಸ್ವಪ್ನವೃತ್ತಾಂತವನ್ನು ಪ್ರಕಟಿಸಿ, ಎಲ್ಲರಿಗೆ ಮಂದಿರದ ಒಳಭಾಗವನ್ನು ತೋರಿಸಿ, ಹೊರಗೆ ಕಳಿಸಿ ದ್ವಾರವನ್ನು ಮುಚ್ಚಿಸಿದಳು. ಅನಂತರ ನಗಾರಿಯನ್ನು ಹೊಡೆಸಿದಳು, ಧ್ವನಿಯ ಸಂಕೇತವು ಬಂದೊಡನೆ ನಾನು ಬಂಡೆಯನ್ನು ತಳ್ಳಿ ಬಿಲದಿಂದ ಹೊರಗೆ ಬಂದೆನು. ರಾಜಕುಮಾರನನ್ನು ಮೇಲಕ್ಕೆ ಎತ್ತಿಕೊಂಡೆನು. ದೇವಿಯನ್ನು ಪೂಜಿಸಿ ದ್ವಾರವನ್ನು ತೆರೆದು ನಾವಿಬ್ಬರೂ ನೆರೆದ ಜನಸಂದಣಿಗೆ ಕಾಣಿಸಿಕೊಂಡೆವು. ಅವರೆಲ್ಲರನ್ನೂ ಸಂಬೋಧಿಸಿ ನಾನು ಗಂಭೀರ ವಾಣಿಯಿಂದ ಹೀಗೆಂದೆನು "ಎಲೈ ಪೌರಜಾನಪದರೆ ನನ್ನ ಮುಖದಿಂದ ದುರ್ಗಾದೇವಿಯೇ ಆಜ್ಞಾಪಿಸುತ್ತಿದ್ದಾಳೆ : 'ಈ ರಾಜಪುತ್ರನನ್ನು ನಾನೇ ವ್ಯಾಘ್ರರೂಪದಿಂದ ಬಂದು ಅಡಗಿಸಿ ಇಟ್ಟಿದ್ದೆನು. ಇಂದು ಈತನನ್ನು ನಿಮಗೆ ಅರ್ಪಿಸುತ್ತಿದ್ದೇನೆ. ಇವನು ನನ್ನ ಮಗನೆಂದೇ ತಿಳಿದು ಗೌರವದಿಂದ ಕಾಣಿರಿ' ಎಂದು. ಅಲ್ಲದೆ ಅಶ್ಮಕರಾಜನನ್ನು ಸಂಹರಿಸಿ ಈ ಬಾಲಕನನ್ನು ನಾನು ರಕ್ಷಿಸಬೇಕೆಂದೂ ಈತನ ಸೋದರಿಯನ್ನು ನಾನು ಮದುವೆಯಾಗಬೇಕೆಂದೂ ದೇವಿಯು ಆಜ್ಞಾಪಿಸಿದ್ದಾಳೆ."

ಪ್ರಜೆಗಳೆಲ್ಲರೂ ಆನಂದದಿಂದ ಕರತಾಡನ ಮಾಡಿದರು. ಆ ದಿನವೇ ನಾನು ಮಂಜುವಾದಿನಿಯನ್ನು ಮದುವೆಯಾದೆನು. ನನ್ನ ಅತ್ತೆಯಾದ ರಾಣಿಗೆ ಆದ ಸಂತೋಷವನ್ನು ವರ್ಣಿಸುವುದು ಅಸಾಧ್ಯವೇ ಸರಿ. ಅನಂತರ ಆ ರಾಜ್ಯದ ಆಡಳಿತವನ್ನು ನಾನು ಕೈಗೆ ತೆಗೆದುಕೊಂಡೆನು, ಮಿತ್ರವರ್ಮನ ಮಂತ್ರಿಯಾದ ಆರ್ಯಕೇತುವೆಂಬನನ್ನು ನಾನಾ ಉಪಾಯಗಳಿಂದ ಪರೀಕ್ಷಿಸಿ, ಅವನು ಉತ್ತಮನಾದ ರಾಜಭಕ್ತನೂ ವಿಶ್ವಾಸಾರ್ಹನೂ ಎಂದು ನಿಶ್ಚಯಿಸಿಕೊಂಡೆನು. ಅವನ ನೆರವಿನಿಂದ ರಾಜಸೇನೆಯನ್ನು ಬಲಪಡಿಸಿ ಅಶ್ಮಕೇಂದ್ರನಾದ ವಸಂತಭಾನುವಿನೊಡನೆ ಯುದ್ಧವನ್ನು ಹೂಡಿ, ಅವನನ್ನು ವಧಿಸಿ, ಆ ರಾಜ್ಯವನ್ನು ವಶಪಡಿಸಿಕೊಂಡೆನು. ಅನಂತರ ವಿದರ್ಭದೇಶಕ್ಕೆ ಬಂದು

ಭಾಸ್ಕರವರ್ಮನಿಗೆ ಆ ರಾಜ್ಯವನ್ನು ಕೊಟ್ಟು ಅವನನ್ನು ಅವನ ತಂದೆಯ ಸಿಂಹಾಸನದ ಮೇಲೆ ಕುಳ್ಳಿರಿಸಿದೆನು.

ಅಲ್ಲಿ ಕೆಲವು ದಿನಗಳಿದ್ದು ಭಾಸ್ಕರವರ್ಮನಿಗೆ, ನನ್ನ ಕಾರ್ಯಭಾರವನ್ನು ತಿಳಿಸಿ ರಾಜವಾಹನನೆ, ನಿನ್ನ ಅನ್ವೇಷಣೆಗಾಗಿ ಹೊರಟೆನು. ಅಷ್ಟರಲ್ಲಿ ಅಂಗರಾಜನಾದ ಸಿಂಹವರ್ಮನ ಆಹ್ವಾನದಂತೆ ಇಲ್ಲಿಗೆ ಬಂದೆನು. ಪುಣ್ಯವಶದಿಂದ ನನಗೆ ನಿನ್ನ ದರ್ಶನವಾಯಿತು" ಎಂದು ವಿಶ್ರುತನು ಹೇಳಿದನು.

ಈ ರೀತಿಯಲ್ಲಿ ಆ ಕುಮಾರರು ತಮ್ಮ ತಮ್ಮ ವೃತ್ತಾಂತಗಳನ್ನು ಹೇಳಲಾಗಿ ರಾಜಕುಮಾರನಾದ ರಾಜವಾಹನನು ಆನಂದಿಸಿದನು. ಅವರೆಲ್ಲರೂ ಸಂತೋಷದಿಂದ ಸಂಭಾಷಿಸುತ್ತಿರುವಾಗ ಮಹಾರಾಜನಾದ ರಾಜಹಂಸನ ದೂತನೊಬ್ಬನು ಬಂದು ರಾಜವಾಹನನಿಗೆ ಒಂದು ಪತ್ರವನ್ನು ಕೊಟ್ಟನು. "ವಾಮದೇವ ಮುನಿಯಿಂದ ನೀವೆಲ್ಲರೂ ಸುಖವಾಗಿ ಚಂಪಾನಗರದಲ್ಲಿದ್ದೀರೆಂದು ತಿಳಿದು ಬಂದಿತು. ನೀವು ನಮ್ಮನ್ನಗಲಿ ಹದಿನಾರು ವರ್ಷಗಳಾದವು. ಕೂಡಲೇ ಬಂದು ನಮಗೆ ಆನಂದವನ್ನುಂಟುಮಾಡಬೇಕು" ಎಂದು ಆ ಪತ್ರದ ಸಾರಾಂಶವಾಗಿತ್ತು. ಅದರಂತೆ ರಾಜವಾಹನನು ತನ್ನ ಮಿತ್ರರಾದ ಕುಮಾರರೊಡನೆ ಪುಷ್ಪಪುರಿಗೆ ಹೋಗಿ ತನ್ನ ತಂದೆತಾಯಿಗಳನ್ನು ಕಂಡನು. ಎಲ್ಲರಿಗೂ ಪರಮಾನಂದವಾಯಿತು.

# ಅನುಬಂಧ

## ಸುಭಾಷಿತಗಳು

೧ ಅತಿದುಷ್ಟ ಶಾಸ್ತಿಶಿಷ್ಟ
ಪ್ರತಿಪಾಲನೆಯಿಲ್ಲದರಸನರಸುತನಂ ಹಾ
ಸ್ಯತೆವಡೆದು ಹಗರಣಿಗರರ
ಸುತನಂ ತನಗಕ್ಕುದಲ್ತೆ ಕಜ್ಜದ ಕೊನೆಯೊಳ್ ೧೧–೯೫

೨ ಆಯುಃ ಕರ್ಮಂ ವಿತ್ತಾ
ದಾಯಂ ವಿದ್ಯಾದಿಲಾಭಮೆಂಬಿವು ಮೊದಲೊಳ್
ತಾಯುಬಸಿಜಲ್ಲಿಪುಟ್ಟುವ
ಕಾಯಕ್ಕಾಗಿರ್ದುವಱಿಯಲುಱಿದವರಳವೇ ೯–೨೦

೩ ಇದುಶಾವಿದು ಶಾವಲ್ತಿಂ
ತಿದು ಸೌಮ್ಯಮಸೌಮ್ಯಪದಗುಣಂ ದುರ್ಗುಣ ಮ
ಪ್ಪುದಿದಾಗದಿದೆಂಬ ವಿವೇ
ಕದ ಬಗೆಯುಂ ಬಗೆಯುರಲ್ತೆ ಕಾಮುಕರಿಳೆಯೊಳ್ ೪–೧೦೬

೪ ಏನಂ ಮಾಡದೊಸನ್ಮುನಿಪಸಂಗಮಾಪದ್ಭಂಗಂ ೪–೭೬

೫ ಏಕಾಕಿನಿಪತಿವಿರಹಿಣಿ
ಯೇಕಾಂತಸ್ಥಾನಮೊರ್ವ ಪುರುಷಸಮೀಪಂ
ಪ್ರಾಕೃತಸತಿ ತಾನಾಗಿರ
ಲಾಕೆಯ ನಿಜ ಬುದ್ಧಿ ಚಲಿಸದಿರ್ಪುದೆ ಸತತಂ ೧೧–೭೭

೬ ಒಂದೆಡೆಗೆಜಗಿದ ಚಿತ್ತಮ
ನೊಂದೆಡೆಗೆಟಿದುಯ್ವೆನೆಂದು ಬಯಸುವ ಮನುಜಂ
ಬಂದ ತೊಱೆಯುದಕಮಂ ಬ
ಲ್ಪಿಂದಂ ಶೈಲಾಗ್ರಮಕ್ಕೆ ತಿರ್ದದೆ ಮಾಣಂ ೪–೯೬

೭ ಕುಡುವನೋ ಕುಡನೋ ಎನುತುಂ
ನಡುನಡುಗುತ್ತುಂಜಿಬಂದು ಬೇಱ್ಪವನಿಂದಂ
ಕುಡದಿರ್ಪವನತಿ ಕಷ್ಟಂ
ಪೊಡವಿಯೊಳ್ . . . . ೫–೨೧

೮ ಕುಲಮುಂ ನೋಡದಪಾಯಮುಂ ಬಿಡದು ನಿಂದಾಭೀತಿಯುಂ ಪೊರ್ದದು
ಜ್ಜ್ವಲಮಪ್ಪಾಪ್ತರ ವಾಕ್ಯಮುಂ ಬಗೆಯದಾರೇನೆಂದೊಡಂ ಲಜ್ಜೆಯಿಂ
ತಲೆಯುಂ ಬಾಗದು ದೇಶ ವಿಭ್ರಮಣದಿಂ ಬೆಂಡಾಗದೊಳ್ವಿತ್ತ ಮೆ
ಯ್ವಲಮುಂ ಪೀರ್ವುದು ಕಾಮಮೆಂದೊಡದನಿನ್ನೇವಣ್ಣಿಪಂಬಣ್ಣಿಪಂ
೯–೩೬

೯ ಕೃಪೆಯಿನಗಲ್ದ ಭೂಪತಿಯ ಪಟ್ಟಣದಿಂ ವನವಾಸವಗ್ಗಳಂ
ಕಪಟಿಯ ಸಂಗದಿಂ ಪುಲಿಯ ಸಂಗಮತೀವ ಸುಖಂದರಿದ್ರದಿಂ
ಕ್ಷಪಿಪುದಱಿಂದೆ ಲೇಸು ಮರಣಂ ಸುತರಿಲ್ಲದ ಬಾಟಿಕೆಯಿಂ ಮಹಾ
ತಪದೊಳನಾರತಂ ತಪವನಾಂಪುದು ಸೌಖ್ಯಮಿದಲ್ತೆ ಸತ್ಪಥಂ ೫–೬೬

೧೦ ಕೋಪಂ ಸಮನಲ್ತೆ ಜೀವರಾಶಿಯೊಳೆಲ್ಲಂ ೪–೧೭

೧೧ ಜಗದೊಳ್ ಪುತ್ರವಿಹೀನರ
ಮೊಗಮುಂ ನೋಡಲ್ಕೆ ದೋಷಮಕ್ಕು . . . . . ೫–೭೫

೧೨ ತರುಲತೆಗಳಖಿಲಪುಷ್ಪಂ
ಪರೋಪಕಾರಕ್ಕೆ ಸಲ್ವುದಂ ಕಂಡುನರರ್
ಪರಹಿತಮನೆಸಗದಿರ್ದೊಡೆ
ಮರದಿಂದತಿಕಷ್ಟರಲ್ತೆ ಧರಣೀತಳದೊಳ್ ೩–೩೧

೧೩ ನೆಲೆದಪ್ಪಿದೆಡೆಗಮತಿ ಸಂ
ಚಲಿಸಿರ್ದೆಡೆಗನ್ಯದೇಶಮಾದೆಡೆಗೆ ಖಳರ್
ಮುಳಿದೆಡೆಗೆ ಬುದ್ಧಿವೇಟಲ್
ಕುಲವಧುವೇ ಕಾರಣಂ ಪರೀಕ್ಷೆಯಿದಲ್ತೆ ೧೨–೧೬೧

೧೪ ಪತಿಹಿತಕಾರ್ಯಮುಂ ವಿನಯಭಾಷಿಣಿಯುಂ ಕಮನೀಯಲಕ್ಷಣಾ
ನ್ವಿತೆಯುನತೀವ ಶೀಲವತಿಯುಂ ಗೃಹಕಾರ್ಯ ನಿಮಗ್ನಚಿತ್ತೆಯುಂ
ಸತತವಿಕಾಸವಕ್ತ್ರೆಯುನಸಾರ ಗುಣಾಧಿಕೆಯುಂ ಕಳತ್ರಮುಂ
ದತಿಶಯದಿಂದೆ ಪಾಲಿಸುವುದಲ್ಲದ ಪೆಂಡಿರನಿಕ್ಕು ಕಿಚ್ಚಿನೊಳ್ ೧೨–೧೦೭

೧೫ ಭಂದಣದೊಳ್ ಜಯಾಪಜಯುಮೆಂಬುದು ಸಿದ್ಧಂ ೨–೩೪

೧೬ ಭಾವಿಸೆ ದರಿದ್ರನನಿಶಂ
ಸೇವಕನತಿಮೂರ್ಖನತಿ ಪ್ರವಾಸಿಮಹಾ ರೋ
ಗಾವಿಷ್ಟನೆಂಬಮನುಜಂ
ಜೀವನ್ಮೃತನಲ್ತೆ . . . . ೮–೧೩೮

ಮದಮುಖಿಗಳ್ಗೆ ದುರ್ವ್ಯಸನಿಗಳ್ಗೆ ನಿರಂತರ ಪಾಪಕರ್ಮಿಗ
ಳ್ಗೊಗದಿದನಾಸ್ತಿಕರ್ಗೆ ಪುಸಿಕರ್ಗೆಕರಂ ಪಿಶುನಪ್ರಿಯರ್ಗೆ ಧ
ರ್ಮದರುಚಿಯಿಲ್ಲದರ್ಗಖಿಳ ನೀತಿಗಳಂ ಮಿಗಪೇಟಲೇಕೆ ಬ
ರ್ಪುದೆ ಹೃದಯಕ್ಕೆ ಪುಣ್ಯಗತಿ ಸಜ್ಜನಸಂಗಮದಿಲ್ಲದಿರ್ಪರೊಳ್ ೧೪–೨೯

೧೮ ಮನಮೆಳಸಲ್ ಜಠರವಹ್ನಿಯೇಂ ಕೇವಲಮೋ ೧೨–೭೦

೧೯ ಮನೋಜನ ಜಾಣ್ಮೆಯನಾರೋ ಮೀಱುವರ್ ೮–೨೧೨

೨೦ ಮಟಿಕೊಳ್ಳದು ಕಾಲದೊಳೆಳೆ
ಫಲವಾಗದು ಧಾನ್ಯವಸ್ತುವಾಹನ ನಿಚಯಂ
ನೆಲಸದು ಪತಿವ್ರತಾವಾ
ಕ್ಯಲಂಘನಂ ಗೈಯ್ಯಲರಸ ಕೇಳಿದು ಸತ್ಯಂ ೧೨–೯೬

೨೧ ಮಟಿಯುದಕದಬರವಿಂಗಂ
ಕೊಳದುದಕಮನೆಯ್ದೆ ತುಟುಕಿದೆಗ್ಗ ನತೆಜದಿಂ ೮–೨೦೧

೨೨ ಮಾಡಿತ್ತಂ ಪರಲೋಕದೊ
ಳಾಡುತ್ತನುಭವಿಪರೆಂಬುದು ಪುಸಿಯಿಹದೊಳ್
ನೋಡಲನುಭವಿಪುದದುದಿಟಂ ೧೨–೫೯

೨೩ ಯುವತಿಯುರಂ ಕವಿತೆಯುಮು
ತ್ಸವದಿಂ ಸ್ವೇಚ್ಛೆಗಳನೆಯ್ದಲತಿಸುಖಮಕ್ಕುಂ
ತವಕದ ಬಲ್ಪಿಂದೆಟಿಯಲ್
ಭುವನದೊಳತಿವಿರಸಮಾಗದಿರ್ಪುದೆ ಕೆಳೆಯಾ ೪–೯೪

೨೪ ವಿಧಾತ್ರಕಲ್ಪನೆಯನಾವನೊ ಮೀಱುವಂ ೪–೪೧

# ಕಠಿಣ ಪದಗಳ ಅರ್ಥ

ಅಗುರ್ವು-ಭಯ
ಅಡರ್-ಹತ್ತು
ಅಣಕ—ಹಾಸ್ಯ, ಅನುಕರಣ
ಅಣಲೆ—ಅಳಲೇಕಾಯಿ
ಅಣ್ಕೆ—ಅನುಲೇಪನ, ಗಂಧಹಚ್ಚುವುದು
ಅನೋಕಹ—ಮರ
ಅಲಂಪು—ಹರ್ಷ, ವೈಭವ, ಸೊಗಸು
ಅವ್ವಳಿಸು-ಹಾರು, ವ್ಯಾಪಿಸು
ಅಸವಸ-ಬೇಗ, ತ್ವರೆ
ಅಳಂಕೆ—ವಶ, ಸ್ವಾಧೀನ
ಅಳುರ್ವ-ಹತ್ತಿಉರಿಯುವ, ವ್ಯಾಪಿಸುವ
ಅಟ್ಕಜ—ಮತ್ಸರ, ಪ್ರೀತಿ
ಆಟಿಸು—ಆಶಿಸು, ತಿರುಗಿಸು
ಆಸುರ—ಆವೇಶ, ದರ್ಪ, ಅತಿಶಯ, ಆಧಿಕ್ಯ
ಆಳ್ವೇರಿ—ಕೋಟೆಯ ಮೇಲಿನ ಸುತ್ತುಗೋಡೆ
ಇಕ್ಕೆ-ವಾಸಸ್ಥಾನ
ಇಡುಂಕುಱ್—ಪೊದರು, ಬಳ್ಳಿಗಳ ಗುಂಪು
ಇಟ್ಕುಳಿ—ವಶಪಡಿಸುವುದು
ಉಗ್ಗಡಿಸು—ಪ್ರಕಾಶಪಡಿಸು, ಹೊರಬರು, ಘೋಷಿಸು
ಉರ್ಚುವ-ಕಳಚುವ
ಉದಂಚಿತ—ವ್ಯಾಪಿಸಿದ, ಮೇಲಕ್ಕೆತ್ತಿದ
ಉಮ್ಮಳಿಸು—ದುಃಖಿಸು
ಉಬ್ಬೆಗ-ಉದ್ವೇಗ
ಏರಣಿಗರ್—ಅಕ್ಕಸಾಲಿಗರು
ಏವ-ಅಸೂಯೆ, ಲಜ್ಜೆ
ಓವರಿ-ಬಟ್ಟದ ಓರೆ, ಅಂತರ್ಗೃಹ

ಓಸರಿಸದೆ-ಅನುಮಾನಿಸದೆ
ಅಂಡಲೆ—ಕಾಡು
ಅಂತರ್ವತ್ನಿ-ಗರ್ಭಿಣಿ
ಕರ್ಚು-ತೊಳೆ
ಕಟಕಂ—ಸೇನಾ ಸಮೂಹ
ಕಡುಪು-ಪರಾಕ್ರಮ, ವೇಗ
ಕಣ್ಗೆಡ್ಡಂ—ಮನೋಹರ
ಕಣಿಶ-ತೆನೆ
ಕರ್ಣಿಕೆ-ಬೀಜಕೋಶ
ಕದಿರ್—ಕಿರಣ
ಕರ್ದುಂಕೆ—ಕುಕ್ಕಲು
ಕರುಮಾಡ-ಉಪ್ಪರಿಗೆ
ಕರೋಟಿ—ತಲೆಬುರುಡೆ
ಕವರ್ದು—ಕಸಿದುಕೊಂಡು
ಕವಿಲ್ತು—ಹರಡಿಕೊಂಡು, ಗುಂಪಾಗಿ ನೀಡಿಕೊಂಡು ಹೊಂಬಣ್ಣಕ್ಕೆ ತಿರುಗಿ
ಕಾಗು—ಕಪ್ಪು, ನೀಲಿ
ಕಿಱಪು ಶಬ್ದ, ಕಿರುಗುಟ್ಟಿಸುವುದು
ಕುಧರ—ಬೆಟ್ಟ
ಕುಱುವ—ದ್ವೀಪ
ಕೂಣಿತ—ಕಡೆಗಣ್ಣೋಟ, ಓರೆನೋಟ
ಕೆತ್ತುವ—ಅದುರುವ
ಕೆಪ್ಪು—ಕಿವುಡು
ಕೇವಣಿಸು-ಪೋಣಿಸು
ಕೇಣಂ-ಮತ್ಸರ
ಕೌಕ್ಷೇಯ—ಕತ್ತಿ
ಕಾಱು—ವಾಸನೆ, ನಾತ

ಖಗ–ಸೂರ್ಯ, ಹಕ್ಕಿ
ಗಾವರ–ಆರ್ಭಟ, ಬೊಬ್ಬೆ
ಗುಱಿ–ಗುಂಡಿ
ಗೂಳಯ–ಗುಂಪು, ಗೂಡಾರ
ಗೆಂಟು–ದೂರ, ಹತ್ತಿರ
ಘಟ್ಟಿವಳ–ಗಂಧತೇಯುವವ
ಚಿಕುರ–ಮುಂಗುರುಳು
ಚೂಣಿ–ಸೇನೆಯ ಮುಂಭಾಗ
ಚೊಲ್ಲೆಯ–ತುರುಬಿನ ಕೊನೆ
ಜಗುಟ್ದ–ಜಾರಿ
ಜೋಡೆ–ಹಾದರಗಿತ್ತಿ
ಡಿಳ್ಳ–ಹೆದರಿಕೆ, ದಿಗಿಲು
ಡೆಂಕಣಿ–ಧ್ವಜಸ್ತಂಭ
ಡೋರೆ–ಡೊಗರು
ತಱಿಸಂದು–ನಿಶ್ಚಯಿಸಿ
ತವೆ–ಪೂರ್ಣವಾಗಿ, ನಿಃಶೇಷವಾಗಿ
ತಿಣ್ಣ–ಭಾರ, ದಪ್ಪ
ತಿಂತಿಣಿ–ಗುಂಪು, ಹುಣಿಸೇಮರ
ತಿಱಿ–ಹೂಕೊಯ್ಯುವುದು, ಕೂಡಿ ಹಾಕುವುದು
ತೂಪಿಱಿ–ಉಗಿಯುವುದು, ಊದಿಹಾರಿಸು, ತುಂತುರು ಹನಿ ಹರಡು
ತೆನೆ–ಕೋಟೆ ಗೋಡೆಯ ಎತ್ತರವಾದ ಭಾಗ
ತೇರೈಸು–ಒಟ್ಟಾಗು
ತೊಂಗಲ್–ಗುಚ್ಛ
ತೊಡಂಬೆ–ಗೊಂಚಲು
ತೊದಳ್–ಸುಳ್ಳು
ದೇಸಿಗ–ಅನಾಥ
ನಾಡೆ–ಹೆಚ್ಚಾಗಿ, ಚೆನ್ನಾಗಿ
ನಿಷಂಗ–ಬತ್ತಳಿಕೆ
ನಿಸದ–ನಿಶ್ಚಯ
ನಿರಾಕುಳ–ತಡೆಯಿಲ್ಲದ, ತೊಂದರೆಯಿಲ್ಲದ
ನಿಸ್ತುಲ–ಅನುಪಮ
ನೆಗಟ್ದ–ಪ್ರಸಿದ್ಧವಾದ
ಪಡಲ್ವಡಿಸು–ಹೆದರಿಸಿ ಹಿಮ್ಮೆಟ್ಟಿಸು
ಪದೆಪು–ಆಸೆ, ಪ್ರೀತಿ
ಪಸದನಂ–ಅಲಂಕಾರ
ಪಱಮೆ–ದುಂಬಿ
ಪೞಂಚಿದರ್–ಬಡಿದಾಡಿದರು
ಪೞವರ–ಕೋಳ, ಬೇಡಿ
ಪೞಿ–ನಿಂದೆ, ವಸ್ತ್ರ
ಪಿಚುಮಂದ–ಬೇವಿನಮರ
ಪಿಂಜರಿತ–ಹೊಂಬಣ್ಣವಾದ, ನಸುಗೆಂಪಾದ
ಪೀಲಿ–ನವಿಲುಗರಿ
ಪುಷ್ಕರ–ಸೊಂಡಲತುದಿ, ನೀರು, ತಾವರೆ
ಪೊಗರು–ಕಾಂತಿ, ದರ್ಪ
ಪೊಣ್ಮೆ–ಹೊಮ್ಮುವುದು
ಪೊಣರ್ಚು–ಹೋರಾಡು
ಪೊದಟ್ದ–ಹರಡಿ
ಪೋತಕ–ಶಿಶು, ಮರಿ
ಪ್ರತಿಮಾನ–ದಂತಗಳ ನಡುವಿನ ಭಾಗ
ಬಗ್ಗಿಪ–ಕೂಗುವ
ಬಟ್ಟೆ–ದಾರಿ, ದಿಕ್ಕು
ಬಂಡು–ಜೇನು
ಬಣಂಬೆ–ರಾಶಿ, ಮೆದೆ
ಬಹಿತ್ರ–ಹಡಗು
ಬಾಸಣಿಸಿ–ಮುಚ್ಚಿ
ಬಿದ್ದು–ಔತಣ
ಬಿಸವಂದಂ–ಆಶ್ಚರ್ಯಕರ್ಮ
ಬೆಸಲೆ–ಪ್ರಸವಿಸುವುದು
ಬೆಟ್ಕುಱಿ–ಹೆದರಿಕೆ
ಬೇರ–ವೈರ

ಬೇವಸ-ದುಃಖ, ಚಿಂತೆ
ಬೇಟ್ಕ-ಹೋಮಮಾಡುವ
ಭಂಡಣ-ಯುದ್ಧ
ಮಡ-ಹಿಮ್ಮಡಿ
ಮಸಗು-ಬೀಸು, ಹರಡು
ಮಂತಣಂ-ಮಂತ್ರಾಲೋಚನೆ-ಕಡೆಗೋಲು
ಮಾಕಂದಂ-ಸೀಮಾವಿನಮರ
ಮಾರ್ಗಣಂ-ಬಾಣ
ಮಾಣಿಕ-ಹೊರಗಾಗುವುದು
ಮಾರಾಂಕ-ಶತ್ರು, ಎದುರಾಳಿ
ಮಿಟ್ಟೆ-ದಿಣ್ಣೆ
ಮಿಂಡು-ಹರಯ, ಯೌವನದ ಬಲುಹು
ಮುಯ್ವು-ಹೆಗಲು
ಮೂಡಿಗೆ-ಬತ್ತಳಿಕೆ
ಮೂರಿ-ಗುಂಪು
ಮೊಗ್ಗರ-ಗುಂಪು
ಮೋಘ ವ್ಯರ್ಥ
ರುಕ್-ಕಾಂತಿ
ಱಚ್ಚೆ-ಹರಟು, ಬಯ್ಯು
ಱೋಡಿಸಿ-ಕಾಡಿಸಿ
ಲಗ್ಗೆ-ಧಾಳಿ
ಲಾಕುಳ-ಯೋಗದಂಡ
ಲೌಡಿಗಾಱ ಶೂರ, ಸೂಳೆಗಾರ
ವಡ್ಡ-ವೃದ್ಧ, ಮುದುಕ, ಹಿರಿಯ
ಶಫರ-ಮೀನು
ಶರಾರು-ದೃಷ್ಟಮೃಗ
ಶಿಲೀಮುಖ-ದುಂಬಿ, ಬಾಣ
ಶುಂಡಾ-ಸೊಂಡಿಲು
ಸಮವರ್ತಿ-ಯಮ
ಸಸಿನಂ-ಸರಿಯಾಗಿ, ಹತ್ತಿರ
ಸಱು-ಸರಿಯಾಗಿ, ಕಾಡಿನಲ್ಲಿ ಮೃಗಗಳು ಹೋದ ಜಾಡು
ಸಿಱುಂಬುಳ್
ಸುಬ್ಬಡದ್ದು-ಕೂದಲು ನಿಗರಿಸಿಕೊಂಡು
ಸೂೞಂ-ಸಲ
ಸೃಣಿ-ಅಂಕುಶ
ಸೆಣಸು-ಸ್ಪರ್ಧಿಸು, ಯುದ್ಧಮಾಡು
ಸೆರೆ-ನರಗಳು, ಬಂಧನ
ಸೈಪು-ಪುಣ್ಯ
ಸೈವೆರಗಾಗಿ-ಆಶ್ಚರ್ಯಗೊಂಡು
ಸೋಗೆ-ನವಿಲು
ಸ್ತೋಭ-ಸ್ತಂಭಿಸು, ತಡೆಕಟ್ಟು
ಸಂರಂಭ-ಉದ್ರೇಕ, ಉತ್ಸಾಹ
ಹಗರಣಿಗರ್-ಒಣಜಂಭದವರು, ಸಾರಹೀನರು
ಹದಿಱು-ಅಣಕದ ಮಾತು
ಹರಿಗೆ-ಕತ್ತಿ-ಗುರಾಣಿ
ಹಾವುಗೆ-ಪಾದುಕೆ
ಹಾಹೆ-ಬೆದರುಬೊಂಬೆ
ಹೂತಿ-ಕರೆ

